# ಹರಿವಂಶ ಪುರಾಣಂ

## ಭಾಗ 02



ಸಂಗ್ರಹ-ಸಂಪಾದನೆ - ಚತುರ್ವೇದಿ ವಿದ್ವಾನ್. ಎಸ್. ವೇದವ್ಯಾಸಾಚಾರ್ಯ

ಚತುರ್ವೇದಿ ಸೇವಾ ಟ್ರಸ್ಟ್



# हरिवंश पुराणम्

# ಹರಿವಂಶ ಪುರಾಣಂ

## ಭಾಗ 2

ಸಂಗ್ರಹ–ಸಂಪಾದನೆ :

**ಡಾ ॥ ಚತುರ್ವೇದಿ ವಿದ್ವಾನ್ ಎಸ್. ವೇದವ್ಯಾಸಾಚಾರ್ಯ,**

ಎಂ. ಎ., ಬಿ.ಎಡ್., ಪಿಹೆಚ್‌ಡಿ

**ಚತುರ್ವೇದಿ ಸೇವಾ ಟ್ರಸ್ಟ್**



184, 22ನೇ ಮುಖ್ಯ ರಸ್ತೆ,

12ನೇ 'ಎ' ಅಡ್ಡ ರಸ್ತೆ, ರಾಘವೇಂದ್ರ ಲೇ ಔಟ್,

ಪದ್ಮನಾಭನಗರ, ಬೆಂಗಳೂರು – 70.

ಫೋನ್ : 080–2639 3950, 94492 13797



**Harivamsha Puranam Part-2 by -**
**Chaturvedi Vidwan S. VEDAVYASACHARYA, M.A., B.Ed., Phd.,**



**Edition : First Edition 2021**

**Price : Rs. 500**

*Type Setting by -*

S.N. RAMESHA
Mob.: 90356 36847
rameshasn02@gmail.com

Cover Page Design :
SHESHGIRI .K.M.

*Printing by -*

SRI YANTHRODHARAKA PRINTERS & PUBLISHERS
K.B. Nagar, Rudrappa Garden
Bangalore 560 026.
Mob. : 94487 95121, 98860 71144
sypp2019@gmail.com

# ಪರಮಪೂಜ್ಯ ಶ್ರೀ 108 ಶ್ರೀ ವಿಶ್ವೇಶ್ವತೀರ್ಥರ

# ಅನುಗ್ರಹ ವಾಣಿ



*ಶ್ರೀ ಶ್ರೀ 108 ಶ್ರೀ ವಿಶ್ವೇಶತೀರ್ಥರು*
ಪಂಚಮಪರ್ಯಾಯ ಶ್ರೀಕೃಷ್ಣ ಮಠ
[ಪೇಜಾವರ ಅಧೋಕ್ಷಜ ಮಠ]
ಉಡುಪಿ, ದಕ್ಷಿಣ ಕನ್ನಡ

ವಿಷ್ಣುವಿನ ಮಹಿಮೆಯನ್ನು ಸ್ಪಷ್ಟ ಭಾಷೆಯಲ್ಲಿ ಪ್ರತಿಪಾದಿಸಿ ಅವರವರ ಅಧಿಕಾರಕ್ಕನುಗುಣವಾಗಿ ಮಾಡಬೇಕಾದ ಕರ್ತವ್ಯಗಳ ವಿವರಣೆಯನ್ನು ನೀಡುವ ಹರಿವಂಶವು ಮಾಧ್ವವೈಷ್ಣವರ ಕೈಪಿಡಿಯೆಂದೆ ಹೇಳಬಹುದು.

ಶ್ರೀಮದಾಚಾರ್ಯರು ಪ್ರತಿಪಾದಿಸಿದ ಸಿದ್ಧಾಂತದ ಪ್ರಮೇಯಗಳಗೆಲ್ಲ ಸ್ಪಷ್ಟ ಸಮರ್ಥನೆಯನ್ನು ಈ ಗ್ರಂಥದಲ್ಲಿ ಕಾಣಬಹುದಾಗಿದೆ.

ಇದನ್ನು ಸರಿಯಾಗಿ ತಿಳಯುವುದರಿಂದ ನಮ್ಮ ಮುಂದಿರುವ ಅನೇಕ ಪ್ರಶ್ನೆ ಸಮಸ್ಯೆಗಳಗೆ ಸೂಕ್ತ ಪರಿಹಾರವು ಲಭಿಸುತ್ತದೆ. ವಿವಿಧ ಅಕೃತ್ಯ ನಮ್ಮಿಂದ ನಡೆದರೂ ನಿರಾಶರಾಗದೆ ಹೇಗೆ ಆತ್ಮೋನ್ನತಿಯನ್ನು ಸಾಧಿಸಿ ಭಗವದನುಗ್ರಹ ಹೊಂದಬಹುದೆನ್ನುವ ಬಗ್ಗೆ ಸಮರ್ಥ ಮಾರ್ಗದರ್ಶನವನ್ನು ಈ ಗ್ರಂಥದಿಂದ ಕಾಣಬಹುದಾಗಿದೆ. ಹೀಗೆ ಸಜ್ಜನರಿಗೆ ಅತ್ಯಂತ ಉಪಕಾರವಾದ ವೈಷ್ಣವ ಗ್ರಂಥವಾಗಿದೆ. ಭಗವಂತನಿಗೆ ಸೃಷ್ಟಿಯಿಂದಾಗಿ ತನಗೆ ಯಾವ ಪ್ರಯೋಜನ-ವಿಲ್ಲದಿದ್ದರೂ ಯಾವ ಸ್ವಾರ್ಥವೂ ಇಲ್ಲದೆ ಪ್ರತಿಕ್ಷಣವೂ ಅಖಂಡ ಕಾರ್ಯತತ್ಪರನಾಗಿರುವನು. ಇದಕ್ಕೆಲ್ಲ ಅವನ ಸ್ವಾಭಾವಿಕ ದಯಾಗುಣವೆ ಕಾರಣವಾಗಿದೆ. **'ಇತಿ ತೇಷಾಂ ತು ಕಾರುಣ್ಯಾತ್ ದಯಾಲುರ್ಭಗವಾನಿದಂ । ಸೃಷ್ಟ್ವಾ್ಯದಿ ಕುರುತೇ ಸರ್ವಂ ।'**

ಭಗವಂತನು ಕಾರುಣ್ಯಮೂರ್ತಿಯಾದರೂ ಜಗತ್ತಿನ ಶ್ರೇಯಸ್ಸಿಗಾಗಿ ಸತ್ಯಸಂಕಲ್ಪನಾದ್ದರಿಂದ ತಮ್ಮ ಶಾಸನಗಳನ್ನು ಅಲಕ್ಷಿಸಿ ಅತಿಕ್ರಮಣಕಾರಿಗಳನ್ನು ಶಿಕ್ಷಿಸುತ್ತಾನೆ. ಭಗವಂತನ ಆದೇಶ ಉಲ್ಲಂಘಿಸಿ ಸ್ವಚ್ಛಂದ ಪಾಪಜೀವನ ನಡೆಸುವವರನ್ನು ಶಿಕ್ಷಿಸುವುದೂ ಅನಿವಾರ್ಯವೇ ಆಗಿದೆ.

ದೇವರ ಕಾರುಣ್ಯ ಕೊಡುಗೆಯಾದ ಈ ಮಾನವ ಶರೀರವನ್ನು ದೇವರ

ಕಾರ್ಯಗಳಿಗಾಗಿ ಮೀಸಲಾಗಿಡಬೇಕು. ಲೌಕಿಕ ಭೋಗಭಾಗ್ಯಗಳಿಗಾಗಿ ಈ ವೈಷ್ಣವ ಜನ್ಮ ಬಂದಿದ್ದಲ್ಲ. ಇದನ್ನು ಸಾರ್ಥಕಗೊಳಿಸಬೇಕು. ಈ ತತ್ವಕ್ಕೆ ನಮ್ಮ ವಿದ್ಯಾಪೀಠದಲ್ಲಿಯೇ ಹನ್ನೆರಡು ವರ್ಷ ವೇದಾಂತಾದಿ ಶಾಸ್ತ್ರಾಧ್ಯಯನ ನಡೆಸಿ ಮನೆಯಲ್ಲಿ ಹಾಗೂ ರಾಜ್ಯದ ವಿವಿಧ ಸಂಘಸಂಸ್ಥೆಗಳಲ್ಲಿ ಪಾಠಪ್ರವಚನಾದಿಗಳನ್ನು ನಡೆಸುತ್ತಾ, ಕಷ್ಟದಲ್ಲಿರುವವರಿಗೆ ಸಹಾಯಹಸ್ತ ಚಾಚುತ್ತಾ ತಮ್ಮ ಜೀವನ ಸಾರ್ಥಕಗೊಳಿಸುತ್ತಿರುವ ನಮ್ಮ ವೇದವ್ಯಾಸಾಚಾರ್ಯರು ದೃಷ್ಟಾಂತರಾಗಿದ್ದಾರೆ.

ಅವರ ಈ ಹರಿವಂಶದ ಎರಡನೇ ಭಾಗವು ವಾಚಕರ ಹಸ್ತ ತಲುಪಿರುವುದು ಸಂತೋಷ ಸಂಗತಿ.

ಹೀಗೆ ವೇದವ್ಯಾಸಚಾರ್ಯರು ಧಾರ್ಮಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾ, ಅನೇಕ ಪುಸ್ತಕಗಳನ್ನು ಬರೆದಿರುವರು. ಇದೇ ರೀತಿ ಅನೇಕ ಪುಸ್ತಕಗಳು ಹೊರಬರಲೆಂದು ನಮ್ಮ ಉಪಾಸ್ಯಮೂರ್ತಿಯನ್ನು ಪ್ರಾರ್ಥಿಸುವೆವು.

ಇತಿ ನಾರಾಯಣಸ್ಮರಣೆಗಳು

ಶ್ರೀಶ್ರೀ ವಿಶ್ವೇಶ್ವತೀರ್ಥ ಶ್ರೀಪಾದಂಗಳವರು

# – : ಕೃತಜ್ಞತೆಗಳು : –

ಪೇಜಾವರ ಶ್ರೀಗಳವರು ಮಾಧ್ವ ಸಮಾಜದಲ್ಲಿಯೇ ಜ್ಞಾನವೃದ್ಧರೂ, ವಯೋವೃದ್ಧರೂ, ಸಾಧನವೃದ್ಧರೂ, ಭಕ್ತಿವೃದ್ಧರೂ, ತ್ಯಾಗವೃದ್ಧರೂ ಆಗಿರುವರು.

ಮಾಧ್ವ ಸಮಾಜಕ್ಕಾಗಿ, ಬ್ರಾಹ್ಮಣರಿಗಾಗಿ, ಹಿಂದುಗಳಿಗಾಗಿ, ಭಾರತೀಯರಿಗಾಗಿ ತಮ್ಮನ್ನೇ ತಾವು ಅರ್ಪಿಸಿಕೊಂಡ ಅದ್ಭುತ ವ್ಯಕ್ತಿತ್ವವುಳ್ಳವರು.

ಯಾರೇ ವ್ಯಕ್ತಿ ದುಃಖದಲ್ಲಿದ್ದರೂ ಅವರನ್ನು ನೋಡಿ ಕನಿಕರಗೊಂಡು ಅವರಿಗೆ ಅವಶ್ಯಕ ವಸ್ತು ನೀಡುವ ದಯಾಮಯ ಗುಣ. ಪ್ರತಿಯೊಬ್ಬರೂ ತಮ್ಮ ಕಷ್ಟ ಅವರ ಮುಂದೆ ಹೇಳಿ ಸೂಕ್ತ ಪರಿಹಾರ ಪಡೆಯಬಹುದು.

ತನ್ನದೆಲ್ಲ ತನಗಾಗಿಯೆನ್ನದೆ, ತನ್ನವರಿಗಾಗಿ ಎನ್ನದೆ, ಸರ್ವರಿಗೂ ಎನ್ನುವ ಭಾವ ಬೇರೆಲ್ಲೂ ಸಿಗದ ಮಹಾಗುಣ. ಜಿತೇಂದ್ರಿಯರಾಗಿದ್ದವರಿಗೆ ಮಾತ್ರ ಇಂತಹ ಗುಣ ರಕ್ತಗತವಾಗಿರುತ್ತದೆ. ವಿಶ್ವಮಾನ್ಯರಿಂದ ವಿಶ್ವಮಾನ್ಯತೆ ಇವರಿಗೆ ಲಭಿಸಿದರೆ, ವಿದ್ಯಾಮಾನ್ಯರಿಂದ ವಿದ್ಯಾಮಾನ್ಯತೆ ಲಭಿಸಿ 'ಒಂದರಲ್ಲಿ ಎರಡು' [Two in one] ಎಂಬ ತತ್ವಕ್ಕೆ ದೃಷ್ಟಾಂತವೆನಿಸಿರುವರು. ತಮ್ಮದೇ ಆದ ಅನುಭವದಿಂದ ಎಲ್ಲವೂ ಒಂದರಲ್ಲಿ [All in one] ಎಂಬ ತತ್ವ ಮೈಗೂಡಿಸಿಕೊಂಡವರು.

ಇದೆಲ್ಲ ಸಮಾಜದ ಸೇವೆ ಮಾಡಿದ ವಿಶ್ವೇಶರಿಗೆ ವಿಶ್ವ ಹಾಗೂ ತೀರ್ಥರು ಪಂಚಮ ಪರ್ಯಾಯವೆಂಬ ವಿಸ್ತೃತ ಪರ್ಯಾಯ ಭಾಗ್ಯ ದೊರಕಿಸಿದೆ. ಸುಮಾರು 37 ಗ್ರಂಥಗಳನ್ನು ನೀಡಿದ ಶ್ರೀಮದ್ವರಿಗೆ 37 ಸುಧಾ ಮಂಗಳ ಮಾಡಿ ಜ್ಞಾನಿಗಳಿಗೆ ಮಹಾಕಾಣಿಕೆಯನ್ನು ಗುರುದಕ್ಷಿಣೆ ನೀಡಿರುವ ವಿಶ್ವಗುರುಗಳು.

ಈ ಪುಸ್ತಕಕ್ಕೆ ಪರಮಪೂಜ್ಯ ಶ್ರೀ 108 ಶ್ರೀ ವಿಶ್ವೇಶತೀರ್ಥರು ಸುಂದರವಾದ ಅನುಗ್ರಹ ನೀಡಿ ಪರಮಾನುಗ್ರಹ ಮಾಡಿರುವರು. ತಮ್ಮ ಅಮೂಲ್ಯ ಸಮಯವನ್ನು ನಮಗಾಗಿ–ಓದುಗರಿಗಾಗಿ ಮೀಸಲಾಗಿಟ್ಟು ಅನುಗ್ರಹಿಸಿದ್ದಾರೆ. ಅವರಿಗೆ ನನ್ನ ಭಕ್ತ್ಯಾದರ ಪೂರ್ವಕ ನಮಸ್ಕಾರಗಳನ್ನು ಅರ್ಪಿಸುವೆ.

ಈ 'ಹರಿವಂಶ ಪುರಾಣ' ಪುಸ್ತಕವನ್ನು ಸುಂದರವಾಗಿ ಅಕ್ಷರ ಸಂಯೋಜನೆ ಮಾಡಿ ಸಕಾಲಕ್ಕೆ ಒದಗಿಸಿದ ಮಹಾಲಕ್ಷ್ಮೀಲೇಔಟ್‌ನ ಎಸ್. ಎನ್. ರಮೇಶ್‌ರವರಿಗೂ ಕೃತಜ್ಞತೆ ಸಲ್ಲಿಸುವೆ.

ಮುಖಪುಟ ವಿನ್ಯಾಸವನ್ನು ಸುಂದರವಾಗಿ ಮಾಡಿಕೊಟ್ಟ ಕೆ. ಎಂ. ಶೇಷಗಿರಿಯವರಿಗೆ ನನ್ನ ಆಶೀರ್ವಾದ ಹಾಗೂ ಕೃತಜ್ಞತೆಗಳು.

ಈ ಪುಸ್ತಕವನ್ನು ಸುಂದರವಾಗಿ ಸಕಾಲಕ್ಕೆ ಮುದ್ರಿಸಿಕೊಟ್ಟ ಶ್ರೀ ಯಂತ್ರೋದ್ಧಾರಕ ಪ್ರಿಂಟಿಂಗ್ ಮತ್ತು ಪಬ್ಲೀಷರ್ಸ್‌ನ ಮಾಲೀಕರಾದ ಶ್ರೀಯುತ ಅನಿಲ್‌ಕುಮಾರ್‌ವರಿಗೂ, ಕೃತಜ್ಞತೆ ಸಲ್ಲಿಸುವೆ.

ಇತಿ ಸಜ್ಜನ ವಿಧೇಯ

**ಡಾ|| [illegible] ವಿದ್ವಾನ್ ಎಚ್. ವೇದವ್ಯಾಸಾಚಾರ್ಯ**

## ಅನುಕ್ರಮಣಿಕೆ



# ಹರಿವಂಶ ಪುರಾಣಂ ಭಾಗ–2

# ೨. ವಿಷ್ಣು ಪರ್ವ

* * * *

# 3. ಭವಿಷ್ಯ ಪರ್ವ

* * * *

# ಅಥ ಅಷ್ಟಷಷ್ಠಿತಮೋಽಧ್ಯಾಯಃ

**ಶ್ರೀಕೃಷ್ಣನು ಪಾರಿಜಾತ ವೃಕ್ಷ ತನಗೆ ನೀಡಲು ನಾರದರ ಮೂಲಕ ಇಂದ್ರನಿಗೆ ಸಂದೇಶ ಕಳಿಸುವುದು.**

*ವೈಶಂಪಾಯನ ಉವಾಚ –*

ತತೋ ಜಿಗಮಿಷುಂ ತತ್ರ ನಾರದಂ ಮುನಿಸತ್ತಮಂ ।
ಪ್ರೋವಾಚ ಭಗವಾನ್ ವಿಷ್ಣುಃ ಅಪ್ರಮೇಯ ಪರಾಕ್ರಮಃ ॥ 1 ॥

ಮಹರ್ಷೇ ಧರ್ಮತತ್ವಜ್ಞ ಸ್ವರ್ಗಂ ಗತ್ವಾ ತ್ವಯಾನಘ ।
ದೃಷ್ಟ್ವಾ ಸದಸ್ಯಾನ್ ದೇವಸ್ಯ ತ್ರಿಪುರಘ್ನಸ್ಯ ಧೀಮತಃ ॥ 2 ॥

ಅನಾಜ್ಞಯಾ ಮದ್ವಚನಾತ್ ವಿಜ್ಞಾಪ್ಯಃ ಪಾಕಶಾಸನಃ ।
ಸಂಭಾವಯಿತ್ವಾ ಭ್ರಾತೃತ್ವಂ ಪೌರಾಣಂ ವೇತ್ಸಿ ಯನ್ ಮುನೇ ॥ 3 ॥

ಯಮ್ ಅಸ್ರಾಕ್ಷೀನ್ ಮುನಿಶ್ರೇಷ್ಠೋ ಭಗವಾನ್ ಕಶ್ಯಪಸ್ತರುಂ ।
ಪಾರಿಜಾತಂ ಪುರಾದಿತ್ಯಾಃ ಸುಖಾರ್ಥಂ ಧರ್ಮಸತ್ತಮಃ ॥ 4 ॥

ಸ ಪುಣ್ಯಮತಿಸೌಭಾಗ್ಯಂ ದದಾತಿ ತರುಸತ್ತಮಃ ।
ತವ ದತ್ತಂ ಪುರಾದಾನಂ ವ್ರತೇನ ತರುಮುತ್ತಮಮ್ ॥ 5 ॥

ಪುಣ್ಯಾರ್ಥಂ ದಾನಧರ್ಮಾರ್ಥಂ ಮನುಪ್ರೀತ್ಯರ್ಥಮೇವ ಚ ।
ಆನಾಯಯದ್ ದ್ವಾರವತೀಂ ಪಾರಿಜಾತ ಮಹಾದ್ರುಮಂ ।
ದತ್ತೇ ದಾನೇ ಪುನಃ ಸ್ವರ್ಗಂ ತರುಂ ತ್ವಂ ನೇತುಮರ್ಹಸಿ ॥ 6 ॥

ವೈಶಂಪಾಯನರು ಜನಮೇಜಯನಿಗೆ ಹೇಳುವರು.

ಜನಮೇಜಯ ರಾಜನೇ ! ನಂತರ ಅಪ್ರಮೇಯ ಪರಾಕ್ರಮಶಾಲಿಯಾದ ಷಡ್ಗುಣ ಸಂಪನ್ನನೂ ಆದ ಶ್ರೀಕೃಷ್ಣನು – ಇಂದ್ರದೇವನನ್ನು ನೋಡಲು ಹೊರಡಲಿದ್ದ ನಾರದರಿಗೆ ಹೀಗೆ ಹೇಳಿದನು.

"ನಾರದರೇ! ಧರ್ಮದ ಸಾರವನ್ನು ಬಲ್ಲ ಜ್ಞಾನಿಗಳಾದ ನೀವು ಇಂದ್ರದೇವನ ಸ್ವರ್ಗಲೋಕಕ್ಕೆ ಹೋಗಬೇಕು. ಇಂದ್ರ ದೇವರ ಉತ್ಸವ ನೋಡಲು ಧೀಮಂತ ರುದ್ರದೇವನ ಅನುಚರರೆಲ್ಲರೂ ಸೇರಿರುವರು. ಅವರ ಸಂಮ್ಮುಖದಲ್ಲಿಯೆ ಈ ನನ್ನ ಮಾತನ್ನು ಹೇಳಬೇಕು.

ಇಂದ್ರದೇವನು ನನ್ನ ಸೋದರನಷ್ಟೆ. ನಾನು ಉಪೇಂದ್ರ ಅವನು ದೇವೇಂದ್ರ. ಇದು ನಿಮಗೂ ತಿಳಿದ ವೃತ್ತಾಂತವಾಗಿದೆ. ಈ ನಮ್ಮಿಬ್ಬರ ಭ್ರಾತೃಭಾವನನ್ನು ಸ್ಮರಣೆಗೆ ತರಬೇಕು. ಹಾಗೂ ಈ ನಾನು ಹೇಳುವ ಆಜ್ಞಾರೂಪವೆಂದು ಅವನಿಗೆ ಹೇಳಬಾರದು.

ದೇವೇಂದ್ರನೇ ! ಹಿಂದೆ ಧರ್ಮಿಷ್ಠರಲ್ಲಿ ಅಗ್ರಗಣ್ಯನಾದ ಕಶ್ಯಪನು ದೇವತಾಮಾತೆಯಾದ ಅದಿತಿದೇವಿಗೆ ಸಂತೋಷವುಂಟು ಮಾಡಲು ಪಾರಿಜಾತ ವೃಕ್ಷವನ್ನು ಸೃಷ್ಟಿಸಿದನು. ಈ ಪಾರಿಜಾತ ವೃಕ್ಷವಾದರೂ ಸಕಲ ವೃಕ್ಷಗಳಿಗೂ ಶ್ರೇಷ್ಠವಾಗಿದ್ದು, ಆ ವೃಕ್ಷವನ್ನು ದಾನ ಮಾಡಿದ್ದೆ ಆದರೆ ಪರಮಸೌಭಾಗ್ಯವನ್ನು ಹಾಗೂ ಮಹಾಪುಣ್ಯವನ್ನು ನೀಡುತ್ತದೆ. ಈ ವೃಕ್ಷರಾಜನನ್ನು ಈ ಹಿಂದೆ ಧರ್ಮದಲ್ಲಿಯೇ ಅತ್ಯಾಸಕ್ತಳಾದ ಅದಿತಿಯೇ ಮೊದಲಾದ ಕಶ್ಯಪನ ಭಾರ್ಯೆಯರು, ಧರ್ಮಕ್ಕಾಗಿ ನಿನಗೆ ದಾನ ನೀಡಿರುವರು. ನಾರದರಾದರೂ ಆ ವೃಕ್ಷವನ್ನು ಮರಳಿ ನಿನಗೆ ನೀಡಿದರೆಂಬ ವಿಷಯವನ್ನು ನಾವು ಕೇಳಿದ್ದೇವೆ.

ಈ ಪ್ರಸ್ತುತ ಈಗ ನನ್ನ ಪತ್ನಿಯರು ಪುಣ್ಯ ಸಂಪಾದನೆ ಹಾಗೂ ನಿನಗೆ ಪ್ರೀತಿಯನ್ನುಂಟು ಮಾಡಲೆಂದೇ ಆ ಪಾರಿಜಾತವನ್ನು ದಾನ ಮಾಡಲು ಇಚ್ಛಿಸುತ್ತಿದ್ದಾರೆ. ಆದ್ದರಿಂದ ನಿನ್ನ ತಮ್ಮನಾದ ನಾನು ನಿನ್ನನ್ನು ಹೀಗೆ ಪ್ರಾರ್ಥಿಸುತ್ತಿದ್ದೇನೆ. "ಆ ಪಾರಿಜಾತ ವೃಕ್ಷವನ್ನು ದ್ವಾರಕೆಗೆ ಕಳುಹಿಸಿಕೊಡು. ದಾನವಾದ ಕೂಡಲೇ ಆ ವೃಕ್ಷ ಶ್ರೇಷ್ಠವನ್ನು ನೀನು ಮರಳಿ ನಿನ್ನ ಸ್ವರ್ಗಕ್ಕೆ ಒಯ್ಯಬಹುದಾಗಿದೆ" ಎಂದು.

'ಪೂಜ್ಯರೇ! ಬಲಾಸುರನನ್ನು ಸಂಹರಿಸಿ ಲೋಕೋಪಕಾರ ಮಾಡಿದ ಶಚೀಪತಿಗೆ ನೀವು ಈ ನನ್ನ ಸಂದೇಶವನ್ನು ಮುಟ್ಟಿಸಿರೆಂದು ಪ್ರಾರ್ಥಿಸುವೆ.'

**ಯಥಾ ತರುವರಂ ದದ್ಯಾತ್ ಪಾರಿಜಾತಂ ಸುರೇಶ್ವರಃ ।**
**ತತ್ರ ದೂತಗಣಂ ತಾವತ್ ಪಶ್ಯಾಮಸ್ತೇ ತಪೋಧನ ॥ 7 ॥**

**ಸಂಭಾವ್ಯಾ ಸರ್ವಕೃತ್ಯಾನಾಂ ಸಂಪದ್ಧಿ ತ್ವಯಿ ಮೇ ಸ್ಥಿತಾ ।**

ನಾರದರೆ ! ವೃಕ್ಷವಾದ ಪಾರಿಜಾತವನ್ನು ನನಗೆ ತಂದು ಕೊಡಲು ಬೇಕಾಗಿರುವ ಸದುಪಾಯಗಳನ್ನೆಲ್ಲ ಅವುಗಳನ್ನೆಲ್ಲಾ ಮಾಡಿರಿ.

ತಪೋದನರೇ! ದೂತನಾದವನಲ್ಲಿರಬಹುದಾದ ಸಕಲ ಗುಣಗಳೂ ನಿಮ್ಮಲ್ಲಿರುವುದನ್ನು ನಾನು ಕಾಣುತ್ತಿದ್ದೇನೆ! ಇದರಿಂದಾಗಿ ನಾನು ನಿಮಗೆ ವಹಿಸಿಕೊಡುತ್ತಿರುವ ಕಾರ್ಯಗಳೆಲ್ಲ ಸಿದ್ಧಿಸುವುದೆಂದು ನಿಶ್ಚಿತವಾಗಿ ಭರವಸೆ ಹೊಂದಿರುವೆನು.

ಸಾಕ್ಷಾನ್ನಾರಾಯಣ ಸ್ವರೂಪಿ ಶ್ರೀಕೃಷ್ಣನು ಹೀಗೆಂದು ಹೇಳುತ್ತಿರಲು ಪೂಜ್ಯ ನಾರದರು ನಸುನಗುತ್ತಾ ಹೀಗೆಂದರು.

**ಬಾಢಮೇವಂ ಪ್ರವಕ್ಷ್ಯಾಮಿ ಯದುಮುಖ್ಯ! ಸುರೇಶ್ವರಂ ।**
**ನ ತು ದಾಸ್ಯತಿ ದೇವೇಂದ್ರಃ ಪಾರಿಜಾತಂ ಕಥಂಚನ ॥ 8 ॥**

ಯಾದವಶ್ರೇಷ್ಠನೆ! ನೀನು ಹೇಳಿದಂತೆ ಆಗಲಿ! ನೀನು ಹೇಳಿದ್ದೆಲ್ಲವನ್ನೂ ಇಂದ್ರದೇವರಿಗೆ ಹೇಳುವೆ.

ಆದರೆ ಇಂದ್ರನು ಮಾತ್ರ ಯಾವುದೇ ಕಾರಣಕ್ಕೂ ಪಾರಿಜಾತ ವೃಕ್ಷವನ್ನು ಕೊಡಲಾರನೆಂದೆ ನನ್ನ ಭಾವನೆ.

**ಮಂದರಂ ಪರ್ವತ ಶ್ರೇಷ್ಠಂ ದಾನವೈಃ ತ್ರಿದಶೈಸ್ತಥಾ ।**
**ನಿಕ್ಷಿಪ್ಯ ತೋಯಧೌ ಪೂರ್ವಂ ಪಾರಿಜಾತಃ ಸಮಾಹೃತಃ ॥ 9 ॥**

**ಮಂದರಾತ್ ಪರ್ವತಶ್ರೇಷ್ಠಾತ್ ನಯಿತುಂ ಪ್ರೇಷಿತುಂ ಪುರಾ ।**
**ಪಾರಿಜಾತಂ ಹರೇಣಾಪಿ ಲೋಕಕರ್ತ್ರಾ ಜನಾರ್ದನ ॥ 10 ॥**

**ಸ್ವಯಂ ವಿಜ್ಞಾಪಿತೋ ಗತ್ವಾ ತತಃ ಶಕ್ರೇಣ ಶಂಕರಃ ।**
**ಆಕ್ರೀಡದ್ರುಮ ಉದ್ಯಾನೇ ಶಚ್ಯಾಃ ಸ್ಯಾದಿತಿ ಯಾಚಿತಃ ॥ 11 ॥**

**ಕಥಾಸ್ತೀತಿ ವರೋ ದತ್ತಃ ಮಹಾದೇವೇನ ಚಾನಘ ।**
**ನ ಚ ನೀತಃ ಪಾರಿಜಾತಃ ಮಂದರಂ ಚಿತ್ರಕಂದರಮ್ ॥ 12 ॥**

**ಕ್ರೀಡಾವೃಕ್ಷಃ ಸ ಶಚ್ಯೇತಿ ವ್ಯಪದೇಶೇನ ಮೋಕ್ಷಿತಃ ।**
**ಮಹೇಂದ್ರೇಣ ಮಹಾಬಾಹೋ ಪಾರಿಜಾತಸ್ತತಃ ಪುರಾ ॥ 13 ॥**

ಶ್ರೀಕೃಷ್ಣನೇ ! ಹಿಂದೆ ದೇವ ದಾನವರೆಲ್ಲರೂ ಮಂದರಪರ್ವತವನ್ನೂ ಕ್ಷೀರ ಸಾಗರದಲ್ಲಿರಿಸಿ, ಬಹುಕಾಲ ಮಂಥನ ನಡೆಸಿದರು. ಆಗಲೇ ಹದಿನಾಲ್ಕು ವಸ್ತುಗಳು ಮೇಲೆ ಬಂದವು. ಪಾರಿಜಾತ ವೃಕ್ಷವೂ ಮೇಲೆದ್ದಿತು. ಇಂದ್ರದೇವನು ಈ ಮಂದಾರವನ್ನು ತನ್ನಲ್ಲಿರಿಸಿಕೊಂಡನು. ಅದು ಶಚೀದೇವಿಯ ಉದ್ಯಾನವನದಲ್ಲಿ ಕ್ರೀಡಾವೃಕ್ಷವಾಗಿ ನಿಂತಿತು.

ಒಂದು ಬಾರಿ ಲೋಕಸಂಹಾರಕ ಪರಮಶಿವನು ಆ ವೃಕ್ಷವನ್ನು ತಾನು ಪಡೆಯಲೋಸುಗ ಇಂದ್ರನ ಬಳಿಗೆ ನನ್ನನ್ನು ಕಳಿಸಿದ್ದನು. ಇಂದ್ರನಿಗೆ ಕೊಡಲು ಮನಸ್ಸಿರಲಿಲ್ಲ. ಆದ್ದರಿಂದ ಇಂದ್ರನೇ ಸ್ವಯಂ ಶಿವನನ್ನು ಭೇಟಿ ಮಾಡಿ "ಶಂಕರನೇ! ಆ ದಿವ್ಯವೃಕ್ಷವು ಶಚೀದೇವಿಯ ಉದ್ಯಾನವನದಲ್ಲಿಯೆ ಕ್ರೀಡಾವೃಕ್ಷವಾಗಿರುವಂತೆ ನಮ್ಮನ್ನು ಅನುಗ್ರಹಿಸಬೇಕೆಂದನು."

ಉದಾರ ಹೃದಯ ರುದ್ರದೇವನು 'ಹಾಗೆ ಅಗಲಿ' ಎಂದು ವರವನ್ನಿತ್ತನು. ಶಿವನ ವರದಿಂದಾಗಿ ಮಂದಾರವೃಕ್ಷವನ್ನು ಪುನಃ ವಿಚಿತ್ರ ಕಂದರಗಳಿಂದ ಶೋಭಿಸುವಂತಹ ಮಂದರಪರ್ವತಕ್ಕೆ ತೆಗೆದುಕೊಂಡು ಹೋಗಲಾಗಲಿಲ್ಲ. ಅದಾದರೂ ಶಚೀದೇವಿಯ ಉದ್ಯಾನದ ಆಟದ ವೃಕ್ಷವಾಗಿ ಅಲ್ಲಿಯೇ ಇದೆ. ಇದರಿಂದಾಗಿ ಇಂದ್ರದೇವನು ಕೊಡಲಾರನೆಂದು ಹೇಳದೆಯಷ್ಟೆ!

**ಪ್ರಿಯಾರ್ಥಮುಮಯಾ ಸಾಕ್ಷಾತ್ ಪಾರಿಜಾತವನಂ ಹರಃ ।**
**ಗವ್ಯೂತಿಶತವಿಸ್ತೀರ್ಣಂ ಮಂದರಸ್ಯೈವ ಕಂದರಮ್ ॥ 14 ॥**

**ನ ತತ್ರ ಸೂರ್ಯಭಾಃ ಕೃಷ್ಣ ಪ್ರವಿಶಂತಿ ನಗೋತ್ತಮೇ ।**
**ನ ಚ ಚಂದ್ರಪ್ರಭಾ ಶೀತಾರ್ನೈವಕೃಷ್ಣ ಸದಾಗತಿಃ ॥ 15 ॥**

**ಶೀತೋಷ್ಣೇ ಛಂದತಸ್ತತ್ರ ಶೈಲಪುತ್ರ್ಯಾ ಭವಂತಿ ಹಿ ।**
**ಸ್ವಯಂಪ್ರಭಂ ವನಂ ತದ್ಧಿ ಮಹಾದೇವಸ್ಯ ತೇಜಸಾ ॥ 16 ॥**

**ವರ್ಜಯಿತ್ವಾ ಮಹಾದೇವೌ ಸಗಣೌ ಯದುನಂದನ ।**
**ಮಾಂ ಚಾನ್ಯಃ ತದ್ವನಂ ದಿವ್ಯಂ ನ ಪ್ರಯಾತಿ ಕಥಂಚನ ॥ 17 ॥**

**ಸ್ರವಂತಿ ತತ್ರ ವಾರ್ಷ್ಣೇಯ ಪಾರಿಜಾತಾಃ ಸಮಂತತಃ ।**
**ಸರ್ವರತ್ನಾನಿ ಮುಖ್ಯಾನಿ ಮನಸಾ ಕಾಂಕ್ಷಿತಾನಿ ವೈ ॥ 18 ॥**

ಶ್ರೀಕೃಷ್ಣನೇ! ಇಂದ್ರದೇವನು ಪಾರಿಜಾತವೃಕ್ಷವು ಶಚೀದೇವಿಯ ಕ್ರೀಡಾವೃಕ್ಷವಾಗಿದೆಯೆಂಬ ನೆಪವೊಡ್ಡಿ ಶಂಕರನಿಗೆ ಪಾರಿಜಾತ ವೃಕ್ಷದ ಅಧಿಕಾರವನ್ನು ತಪ್ಪಿಸಿದನು.

ಉಮಾದೇವಿಗೆ ಪ್ರೀತಿವುಂಟು ಮಾಡುವ ಸಲುವಾಗಿ ಚಂದ್ರಶೇಖರನೇ ಮಂದರಪರ್ವತದಲ್ಲಿ ಎರಡು ಯೋಜನಗಳಷ್ಟು ವಿಸ್ತಾರವಾದ ಕಂದರದಲ್ಲಿ ಪಾರಿಜಾತ ವೃಕ್ಷಗಳನ್ನು ಸೃಷ್ಟಿಸಿದನು.

ಪಾರಿಜಾತವೃಕ್ಷಗಳು ದಟ್ಟವಾಗಿದ್ದರಿಂದ ಸೂರ್ಯನ ಕಿರಣಗಳಾಗಲೀ, ಚಂದ್ರನ ತಂಪಾದ ಕಿರಣಗಳಾಗಲಿ ಮಂದರಪರ್ವತ ಮೇಲೆ ಬೀಳುವುದಿಲ್ಲ. ವಾಯುವಿನ ಸಂಚಾರವು ಅಲ್ಲಿರುವುದಿಲ್ಲ. ಆದರೆ ಪರ್ವತ ರಾಜ ನಂದಿನಿಯಾದ ಪಾರ್ವತಿಯ ಇಚ್ಛೆಯನುಸಾರವಾಗಿ ಶೀತೋಷ್ಣವು ಸಮವಾಗಿರುತ್ತದೆ. ಮಹಾದೇವನ ಸಾಮರ್ಥ್ಯದಿಂದಾಗಿ ಪಾರಿಜಾತ ವನವು ಸ್ವಯಂಪ್ರಕಾಶವಾಗಿರುತ್ತದೆ. ಮಹಾದೇವ ಶಿವ, ಅವನ ಪತ್ನಿ ಪಾರ್ವತಿ, ಅವರ ಅನುಚರರು ಹಾಗೂ ನಾನು ಇಷ್ಟು ಜನರನ್ನು ಹೊರತುಪಡಿಸಿ ಉಳಿದವರಿಗೆ ಆ ವನ ಪ್ರವೇಶಿಸಲೂ ಸಹ ಸಾಧ್ಯವಾಗದ ಮಾತು. ಯಾದವ ಕೃಷ್ಣನೇ! ಅಲ್ಲಿರುವ ಪಾರಿಜಾತ ವೃಕ್ಷಗಳೆಲ್ಲವೂ ಸರ್ವದಿಕ್ಕಿನಿಂದಲೂ ಮನೋವಾಂಛಿತವನ್ನು ಪೂರೈಸುವುದಲ್ಲದೆ ಶ್ರೇಷ್ಠ ರತ್ನಗಳನ್ನೂ ನಿರಂತರವಾಗಿ ಸುರಿಸುತ್ತಿರುತ್ತದೆ. ಇಂತಹ ರತ್ನಗಳನ್ನು ಮಹಾತ್ಮರಾದ ರುದ್ರನ ಅನುಚರರು ಯಥೇಚ್ಛವಾಗಿ ಉಪಯೋಗಿಸುತ್ತಿದ್ದರು.

ಸ್ವರ್ಗದಲ್ಲಿರುವ ಪಾರಿಜಾತಕ್ಕಿಂತಲೂ ಮಂದರಪರ್ವತದ ಕಂದರದಲ್ಲಿದ್ದ ಪಾರಿಜಾತ ವೃಕ್ಷಗಳ ವನ ಹಾಗೂ ಅವುಗಳ ಫಲಗಳು ವಿಶಿಷ್ಟತೆ ಪಡೆದಿದ್ದವು.

**ಪಾರಿಜಾತಾದ್ ಬಹುಗುಣಂ ಫಲಂ ತೇಷಾಂ ಯಥಾವನಂ ।**
**ಅಭಿಮಾನಂ ಪ್ರಭಾಶ್ಚೈವ ಗುಣಾಃ ಭೂರಿಗುಣಾಸ್ತಥಾ ॥ 19 ॥**
**ಮೂರ್ತಿಮಂತಶ್ಚ ತೇ ವೃಕ್ಷಾಃ ಸೋಮಂ ದೇವಂ ವೃಷಧ್ವಜಂ ।**
**ಉಪತಿಷ್ಠಂತಿ ಸತತಂ ಪ್ರವರೈಸ್ಸಹ ಕೇಶವ ॥ 20 ॥**

**ರೌದ್ರೇಣ ತೇಜಸಾ ಜುಷ್ಟಾಃ ದುಃಖೈ ಹೀನಾಃ ಸುಖಾನ್ವಿತಾಃ ।**
**ತರವೋ ಮಂದರೇ ತೇ ಹಿ ದಯಿತಾಃ ಶೈಲ ಕನ್ಯಯಾ ॥ 21 ॥**

ಮಂದರಪರ್ವತದ ಕಂದರದಲ್ಲಿದ್ದ ಪಾರಿಜಾತವೃಕ್ಷಾಭಿಮಾನಿ ದೇವತೆಗಳು ಮಹಾದೇವನನ್ನು ಮೂರ್ತಿಮತ್ತಾಗಿ ಬಂದು ಸೇವಿಸುತ್ತಿದ್ದವು. ಈ ವೃಕ್ಷಗಳೆಲ್ಲವೂ ರುದ್ರನ ತೇಜಸ್ಸಿನಿಂದ ಯುಕ್ತವಾಗಿದ್ದು ದುಃಖದಲೇಶರಹಿತವೂ ಆನಂದಯುಕ್ತವೂ ಆಗಿರುತ್ತವೆ. ಈ ಕಾರಣಗಳಿಂದಾಗಿ ಈ ಪಾರಿಜಾತ ವೃಕ್ಷಗಳು ಪಾರ್ವತಿಗೆ ಅತ್ಯಂತ ಪ್ರೀತಿಪಾತ್ರಗಳಾಗಿದ್ದವು.

**ಪ್ರವಿವೇಶಾಂಧಕೋ ನಾಮ ಘೋರಸ್ತತ್ರ ಮಹಾಬಲಃ ।**
**ದೈತೇಯೋ ವರದಾನೇನ ದರ್ಪಿತಃ ಪಾಪನಿಶ್ಚಯಃ ॥ 22 ॥**

**ಸ ಹತೋ ದೇವದೇವೇನ ಹರೇಣಾಮಿತ್ರ ಘಾತಿನಾ ।**
**ಅವಧ್ಯಃ ಸರ್ವಭೂತಾನಾಂ ವೃತ್ರಾದ್ ದಶಗುಣಂ ಬಲೀ ॥ 23 ॥**

ಒಂದು ದಿನ ಮಹಾಪಾಪಿಯೂ ವರದಾನದಿಂದ ದರ್ಪಿಷ್ಟನೂ, ಮಹಘೋರನಾದ ಅಂಧಕಾಸುರನೆಂಬ ಅಸುರನು ಪಾರಿಜಾತ ವೃಕ್ಷಗಳಿದ್ದ ವನಕ್ಕೆ ನುಗ್ಗಿದನು. ಅಂಧಕಾಸುರನಾದರೂ ವೃತ್ರಾಸುರನಿಗಿಂತಲೂ ಹತ್ತುಪಟ್ಟು ಪರಾಕ್ರಮಿಯಾಗಿದ್ದು ಸಮಸ್ತ ಪ್ರಾಣಿಗಳಿಂದಲೂ ಅವಧ್ಯನಾಗಿದ್ದನು. ಇಂತಹ ಘೋರರೂಪಿಯನ್ನು ರುದ್ರದೇವನು ಸಂಹರಿಸಿದನು.

**ಏವಂ ದುಃಖಂ ನ ತೇ ದೇವ ಪಾರಿಜಾತಂ ಪ್ರದಾಸ್ಯತಿ ।**
**ಸತತಂ ಸಹಿತೋ ದೇವ್ಯಾ ಶಚ್ಯಾ ಸ ಹಿ ವರದ್ರುಮಃ ॥ 24 ॥**

**ಸರ್ವಕಾಮಪ್ರದಃ ಕೃಷ್ಣ ತಥೇಂದ್ರಾಯ ಮಹೌಜಸೇ ॥ 25 ॥**

**ಪುಷ್ಕರಾಕ್ಷ! ಸಹಸ್ರಾಕ್ಷಃ ಸತ್ಯಮೇತತ್ ಬ್ರವೀಮಿ ತೇ ॥ 26 ॥**

ದೇವದೇವನೇ ! ಕಮಲನೇತ್ರ ! ನನಗೆ ಈ ಮಾತನ್ನು ಹೇಳಲು ಬಹಳ ದುಃಖವಾಗುತ್ತಿದೆ. ಸಹಸ್ರಾಕ್ಷನು ನಿಶ್ಚಿತವಾಗಲೂ ಪಾರಿಜಾತವನ್ನು ನಿನಗೆ ಕೊಡಲಾರನೆಂದೆ ನನ್ನ ಭಾವನೆ. ಈ ಮಾತು ಸತ್ಯವೆಂದು ತಿಳಿ.

ಈ ಶ್ರೇಷ್ಠ ವೃಕ್ಷವು ಸಕಲ ಇಷ್ಟಾರ್ಥವನ್ನುಂಟು ಮಾಡುವ ಶಕ್ತಿ ಸಂಪನ್ನವಾಗಿದ್ದು ಶಚೀದೇವಿ ಹಾಗೂ ದೇವೇಂದ್ರನಿಗೆ ನಿರಂತರ ಸರ್ವಹಿತವನ್ನುಂಟು ಮಾಡುತ್ತಿರುವ ಈ ವೃಕ್ಷವನ್ನು ನೀನು ಕೇಳಿದರೂ ನೀಡಲಾರನು" ಇದು ನಿಶ್ಚಿತವು.

*ಭಗವಾನುವಾಚ –*

**ಮುನೇ ತದ್ ಯುಜ್ಯತೇ ಸಾಧು ಮಹಾದೇವೇನ ಧೀಮ ತಾ ।**
**ಯಚ್ಛಚೀ ಕಾರಣಂ ಕೃತ್ವಾ ನ ನೀತಃ ಸ ತರುಃ ಪುರಾ ॥ 27 ॥**
**ಸ ಜ್ಯೇಷ್ಠಃ ಸರ್ವಭೂತಾನಾಂ ಲೋಕಕೃತ್ ಪ್ರಭವೋಽವ್ಯಯಃ ।**
**ಪಾರಾವರ್ಯಸ್ಯ ಸದೃಶಂ ಕೃತವಾನಿತಿ ಮೇ ಮತಿಃ ॥ 28 ॥**
**ಅಹಂ ಯವೀಯಾನ್ ದೇವಸ್ಯ ಸರ್ವಸ್ಯ ಬಲಘಾತಿನಃ ।**
**ಲಾಲನೀಯಶ್ಚ ಭಗವನ್! ಜಯಂತ ಇವ ಸತ್ತಮ ॥ 29 ॥**
**ಸರ್ವಥಾ ಭಗವಾಂಸ್ತಾವದ್ ಉಪಾಯೈಃ ಬಹುವಿಸ್ತರೈಃ ।**
**ಕರೋತು ಯತ್ನಂ ಪ್ರೀತ್ಯರ್ಥಂ ಶಕ್ರೋ ಹ್ಯಸಿ ತಪೋಧನಃ ॥ 30 ॥**

ಮಹಾಮುನಿ ನಾರದರೇ ! ಮಹಾದೇವನಾದರೂ ಶಚೀದೇವಿಗಾಗಿ ಪಾರಿಜಾತ ವೃಕ್ಷವನ್ನು ಮಂದರಪರ್ವತಕ್ಕೆ ತರದೆ ಇದ್ದದ್ದು ಯುಕ್ತವೆ ಆಗಿದೆ. ಇಂದ್ರಾದಿ ಸಮಸ್ತ ದೇವತೆಗಳಿಗೂ ಗುಣಜ್ಯೇಷ್ಠನಾದ ಮಹಾದೇವನು ಕರುಣಾರ್ದ್ರನೂ, ಜಗತ್ತಿನ ನಾಶ ಕಾರಣನೂ, ಉತ್ಪತ್ತಿ ಕಾರಣನೂ ಆಗಿದ್ದು ಅವನು ಮಾತ್ರ ಅವಿನಾಶಿಯಾಗಿರುವನು. ಅವನು ಶ್ರೇಷ್ಠರಿಗೂ, ಕನಿಷ್ಠರಿಗೂ ಇರುವ ಅಂತರ ತಿಳಿದು ಅದಕ್ಕನುಸಾರವಾಗಿ ವರ್ತಿಸಿರುತ್ತಾನೆ. ಈಗ ಇಂದ್ರದೇವನೂ ಹಾಗೆಯೇ ಮಾಡಬೇಕಿದೆ.

ನಾರದರೇ ! ಬಲಾಸುರ ಹಂತಕನಾದ ದೇವೇಂದ್ರನು ನನಗೆ ಜ್ಯೇಷ್ಠನಾಗಿದ್ದು ನಾನು ಅವನಿಗಿಂತ ಚಿಕ್ಕ ತಮ್ಮನಾಗಿದ್ದೇನೆ. ಜ್ಯೇಷ್ಠಭ್ರಾತೃವಾದ ಅವನು ತಂದೆಯ ಸ್ಥಾನದಲ್ಲಿದ್ದು ಅವನ ಮಗ ಜಯಂತನಂತೆ ನನ್ನನ್ನು ಲಾಲನೆ-ಪಾಲನೆ ಮಾಡಿ ಪೋಷಿಸುವುದು ಧರ್ಮವಲ್ಲವೆ? ಆದ್ದರಿಂದ ತಾವು ಮಹಾಪ್ರಯತ್ನ ಉಪಾಯಗಳನ್ನು ಮಾಡಿ ನಮ್ಮಿಬ್ಬರಲ್ಲಿ ಸ್ನೇಹ ಸೌಹಾರ್ದ ಬೆಳೆಯುವಂತೆ ಪ್ರಯತ್ನ ಮಾಡಿರಿ. ಸರ್ವಸಮರ್ಥರಾದ ತಮಗೆ ಈ ಕಾರ್ಯ ಅಸಾಧ್ಯವೇನಲ್ಲ, ಅಸಾಧುವೂ ಅಲ್ಲ.

**ಮಯಾ ಮುನೇ ಪ್ರತಿಜ್ಞಾತಂ ಪುಣ್ಯಾರ್ಥಂ ಸತ್ಯಭಾಮಯಾ ।**
**ಸ್ವರ್ಗಾದಿಹಾನಯಿಷ್ಯಾಮಿ ಪಾರಿಜಾತಮಿತಿ ಪ್ರಭು ॥ 31 ॥**

ಸತ್ಯಭಾಮೆಯು ಪುಣ್ಯವನ್ನು ಸಂಪಾದಿಸಲೆಂದು ಪಾರಿಜಾತವೃಕ್ಷವನ್ನು

ದೇವಲೋಕದಿಂದ ತಂದು ಕೊಡುತ್ತೇನೆಂದು ಮಾತು ಕೊಟ್ಟಿರುವೆ. ಈ ಪ್ರತಿಜ್ಞೆ ಮಿಥ್ಯಪ್ರತಿಜ್ಞೆಯಾಗಬಾರದಷ್ಟೆ!

**ಮಯಾ ತದನೃತಂ ಕರ್ತುಂ ಕಥಂ ಶಕ್ಯಂ ತಪೋಧನ ।**
**ನಾನೃತಂ ಹಿ ವಚೋ ವಿಪ್ರ! ಪ್ರೋಕ್ತಂ ಪೂರ್ವಂ ಮಯಾನಘ ॥ 32 ॥**
**ಮಯಿ ಭಗ್ನಪ್ರತಿಜ್ಞೇ ವೈ ಲೋಕಾನಾಂ ವಿಪ್ಲವೋ ಭವೇತ್ ॥ 33 ॥**
**ಯನ್ಮಯಾ ಹಿ ಮುನಿಶ್ರೇಷ್ಠ! ಲೋಕಧರ್ಮಾಃ ಗುಣಾನ್ವಿತಾಃ ।**
**ಪರಿಧಾರ್ಯಾಃ ಸ್ಥಿತೌ ಸರ್ವೇ ಸ ಕಥಂ ಹ್ಯನೃತಂ ವದೇತ್ ॥ 34 ॥**

ನಾರದರೇ ! ನಾನು ಈ ಹಿಂದೆ ಎಂದೂ ಅನೃತವನ್ನಾಡಿದವನಲ್ಲ. ನಾನೇನಾದರೂ ಮಿಥ್ಯಾಪ್ರತಿಜ್ಞನಾದದ್ದಾದರೆ ಲೋಕದಲ್ಲಿ ಉಲ್ಲೋಲ-ಕಲ್ಲೋಲವಾಗದೆ ! ದೇಶದಲ್ಲಿ ವಿಪ್ಲವವುಂಟಾದೀತು. ಶ್ರೀಕೃಷ್ಣನೇ ಸುಳ್ಳು ಹೇಳಿರುವಾಗ ನಾವು ಹೇಳುವುದೇನು ದೋಷವಾಗಲಾರದೆಂದು ತಿಳಿದು ಸುಳ್ಳು ಹೇಳುವುದನ್ನು ದೋಷವೆಂದು ತಿಳಿಯಲಾರರು.

ನಾನು ಲೋಕಗಳ ಉಳಿವಿಗಾಗಿ ಉತ್ತಮ ಗುಣಗಳಿಂದ ಕೂಡಿದ ಸಮಸ್ತಲೋಕ ಧರ್ಮಗಳನ್ನೂ ನನ್ನಲ್ಲಿ ಮೈಗೂಡಿಸಿಕೊಂಡಿದ್ದೇನೆ. ಲೋಕಶಿಕ್ಷಣಕ್ಕಾಗಿ ಮೈತಳೆದಿರುವ ನಾನೇ ಸುಳ್ಳು ಹೇಳಲು ಹೇಗೆ ಸಾಧ್ಯ?

ಮಹಾಮುನಿಗಳೇ ! ನನ್ನ ನಿಶ್ಚಿತ ಮಾತುಗಳನ್ನು ಕೇಳಿರಿ. ದೇವತೆಗಳಾಗಲೀ, ಅಸುರ-ರಾಕ್ಷಸರಾಗಲೀ, ಗಂಧರ್ವ ಯಕ್ಷರಾಗಲೀ - ಸರ್ಪಗಳಾಗಲೀ ಮತ್ತ್ಯಾರೇ ಆಗಲಿ, ನಾನು ಮಾಡಿರುವ ಪ್ರತಿಜ್ಞೆಯನ್ನು ಭಂಗವುಂಟು ಮಾಡಲು ಸಮರ್ಥರಲ್ಲ.

**ಸ ಪಾರಿಜಾತಂ ಯದಿ ನ ಪ್ರದಾಸ್ಯತಿ ಪ್ರಯಾಚ್ಯಮಾನೋ ಭವತಾಮರೇಶ್ವರಃ।**
**ತತಃ ಶಚೀವ್ಯಾಮೃದಿತಾನುಲೇಪನೇ ಗದಾಂ ವಿಮೋಕ್ಷ್ಯಾಮಿ ಪುರಂದರೋರಸಿ ॥ 35 ॥**

**ಇತಿ ಪ್ರವಾಚ್ಯೋ ಯದಿ ಸಮಪೂರ್ವಕಂ ಪ್ರಯಾಚ್ಯಮಾನೋ ನ ತರುಂ ಪ್ರಯಚ್ಛತಿ ।**
**ಸುನಿಶ್ಚಯಂ ಮದ್ ಗಮನಾಯ ಸರ್ವಥಾ ತ್ವಯಾಪಿ ಕಾರ್ಯಃ ಖಲು ತತ್ರ ನಿಶ್ಚಯಃ ॥ 36 ॥**

"ನಾರದರೇ ! ನೀವು ಯಾಚಿಸಿದ ಮೇಲೂ ಸಹಸ್ರಾಕ್ಷನು ಪಾರಿಜಾತ ವೃಕ್ಷವನ್ನು ನೀಡದಿದ್ದರೆ, ಶಚೀದೇವಿಯ ಆಲಿಂಗನದಿಂದ ಲೇಪಿಸಲ್ಪಟ್ಟ ಗಂಧದಿಂದ ಯುಕ್ತವಾದ ಇಂದ್ರದೇವನ ವಕ್ಷಸ್ಥಲದಲ್ಲಿ ನನ್ನ ಗದಾಪ್ರಹಾರ ಮಾಡುವುದು ನಿಶ್ಚಿತ.

ಶಾಂತಿಸಂಧಾನದಿಂದ ಯಾಚಿಸಿದರೂ ಪಾರಿಜಾತವನ್ನು ನೀಡದಿದ್ದರೆ ಶ್ರೀಕೃಷ್ಣನು ಗದಾಪ್ರಹಾರ ಮಾಡುವನೆಂದು ನೀವು ಇಂದ್ರನಿಗೆ ತಿಳಿಸಿ ಹೇಳಬೇಕು.

ಇಂದ್ರನು ಸಂಧಾನಕ್ಕೆ ಒಪ್ಪದೆ ಇದ್ದನಾದರೆ ಪಾರಿಜಾತಕ್ಕಾಗಿ ನಾನು ಇಂದ್ರಲೋಕವನ್ನು ಆಕ್ರಮಿಸಿ ಯುದ್ಧ ಮಾಡಿಯಾದರೂ ಪಡೆದೇ ತೀರುವೆ" ಎಂದನು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ**
**ಪಾರಿಜಾತಾಪಹರಣವೆಂಬಲ್ಲಿ ಶ್ರೀಕೃಷ್ಣ-ನಾರದ ಸಂವಾದದಲ್ಲಿ**
**ಅರವತ್ತೆಂಟನೆಯ ಅಧ್ಯಾಯ ಸಮಾಪ್ತಿ**

# ಅಥ ಏಕೋನಸಪ್ತತಿತಮೋಽಧ್ಯಾಯಃ

## ನಾರದರು ಇಂದ್ರನನ್ನು ಸಂದರ್ಶಿಸಿದುದು

*ವೈಶಂಪಾಯನ ಉವಾಚ –*

**ನಾರದೋಽಥ ಮುನಿರ್ಗತ್ವಾ ಮಹೇಂದ್ರಸದನಂ ಪ್ರತಿ ।**
**ತಾಂ ರಾತ್ರಿಮವಸತ್ ತತ್ರ ದದೃಶೇ ಚ ಮಹೋತ್ಸವಂ ॥ 1 ॥**

ಶ್ರೀಕೃಷ್ಣನ ಆದೇಶಾನುಸಾರ ನಾರದರು ಇಂದ್ರದೇವನ ಸಭೆಗೆ ಐತಂದರು. ಅಂದು ರಾತ್ರಿ ಅಲ್ಲಿಯೇ ಕಳೆದರು. ಶಿವನ ಗಣಗಳಿಗಾಗಿ ಏರ್ಪಡಿಸಿದ್ದ ಮಹೋತ್ಸವವನ್ನು ನೋಡಿದರು.

ಈ ಉತ್ಸವಕ್ಕೆ ಮಹಾನುಭಾವರಾದ ಆದಿತ್ಯರು, ಅಷ್ಟವಸುಗಳು, ರಾಜರ್ಷಿಗಳು, ನಾಗರು, ಯಕ್ಷರು, ಸಿದ್ಧ–ಚಾರಣರು, ತಪೋಧನರಾದ ಬ್ರಹ್ಮರ್ಷಿಗಳು. ಮನುಗಳು, ಗರುಡ ಮೊದಲಾದ ಪಕ್ಷಿಗಳು, 49 ಮರುತ್ತುಗಳು, ನೂರಾರು ದೇವತಾ ಪಂಗಡದವರು ಆ ಮಹೋತ್ಸವಕ್ಕಾಗಿ ಬಂದಿದ್ದರು.

**ಉಪರ್ಯುಪರಿ ಸರ್ವೇಷಾಂ ಸೋಮೋದೇವೋ ಮಹೇಶ್ವರಃ ।**
**ತಸ್ಥಾವಮಿತವಿಕ್ರಾಂತಃ ಸ್ವೈಃ ಗಣೈಃ ಪರಿವಾರಿತಃ ॥ 2 ॥**
**ದೇವರ್ಷಿಭಿಃ ಮುನಿಶ್ರೇಷ್ಠೈಃ ಸಂವೃತಃ ಸರ್ವಭಾವನಃ ।**
**ಕಲ್ಪಾಂತರ ಸಹಸ್ರೇಷು ಕ್ಷಯೋಯೇಷಾಂ ನ ವಿದ್ಯತೇ ॥ 3 ॥**
**ಯಾನರ್ಚಯಂತಿ ಸತತಂ ದೇವಾಃ ದೇವೇಶ್ವರೋಪಮಾಃ ॥ 4 ॥**

ಇಲ್ಲಿ ಸೇರಿರುವ ದೇವತಾಗಣಗಳಿಗೆಲ್ಲಾ ಉನ್ನತ ಸ್ಥಾನದಲ್ಲಿ ಉಮಾಸಹಿತ

ರುದ್ರದೇವನು ತನ್ನ ಪ್ರಮಥಗಳಿಂದ ಸಮಾವೃತನಾಗಿ ಆಸೀನನಾಗಿದ್ದನು. ಶಿವನಾದರೂ ಸಾವಿರಾರು ಕಲ್ಪಗಳು ಕಳೆದರೂ ಯಾರಿಗೆ ನಾಶವಿಲ್ಲವೋ ಅಂತಹ ಸಾವಿರಾರು ದೇವರ್ಷಿಗಳಿಂದ ಸುತ್ತುವರೆಯಲ್ಪಟ್ಟಿದ್ದನು. ಹಾಗೆಯೇ ದೇವೇಶ್ವರರಂತೆ ಪ್ರಭಾವಶಾಲಿಗಳೂ, ಭಗವಂತನ ಜ್ಞಾನಿಗಳೂ, ಅಹಂಕಾರದಿಂದ ಎಂದೂ ಕುರುಡರಾಗದವರೂ, ಧರ್ಮಮಾರ್ಗದಲ್ಲಿಯೇ ಸುಪ್ರತಿಷ್ಠಿತರೂ ಆಗಿರುವ ದೇವಾನುದೇವತೆಗಳೂ ಶಿವನನ್ನು ಆರಾಧಿಸುತ್ತಿದ್ದರು.

ರುದ್ರನ ಕೈಂಕರ್ಯಕ್ಕಾಗಿ ಕಟಿಬದ್ಧರಾಗಿ ನಿಂತಿರುವ ರುದ್ರಗಣಗಳು, ಕಶ್ಯಪನ ಪುತ್ರರು, ಸ್ಕಂಧದೇವ, ಅಗ್ನಿದೇವ, ನದೀ ಶ್ರೇಷ್ಠಳಾದ ಗಂಗಾದೇವಿ, ಅರ್ಚಿಷ್ಮಂತ, ತುಂಬುರು, ಮಹಾವಾಗ್ಮಿಯಾದ ಭಾರಿಯೆಂಬ ಮೂವರು ಗಂಧರ್ವರು ರುದ್ರನ ಬಳಿ ನಿಂತಿದ್ದರು.

ತಪೋಬಲದಿಂದ ಕೂಡಿದ್ದ ಅವರು ದೇವತೆಗಳಿಗೂ ನಾಯಕರಾಗುವ ಯೋಗ್ಯತೆ ಪಡೆದಿದ್ದರು.

ನಿತ್ಯ ಧರ್ಮ, ತಪಸ್ಸುಗಳಿಂದ ಸಜ್ಜನರ ಮಾರ್ಗದಲ್ಲಿಯೇ ನಡೆಯುವ ಸಮಸ್ತದೇವತಾ ವೃಂದವು ಶಿವನ ಆದೇಶ ಪರಿಪಾಲನ ಮಾಡುತ್ತಿದ್ದರು.

**ಯೇ ತ್ವಿಮೇ ಮಾನುಷಾ ದೇವಾನರ್ಚಯಂತಿ ಶುಭಾರ್ಥಿನಃ ।**
**ತಾನರ್ಚಯಂತಿ ಹ್ಯಮರಾಃ ತಥಾ ರಾಜನ್ ಶುಭಾರ್ಥಿನಃ ॥ 5 ॥**

**ಪಿತೃಕೃತ್ಯೇಷು ದೇವಾನಾಂ ಸನ್ಯಾಸಂ ತೇ ತ್ವನುಷ್ಠಿತಾಃ ।**
**ಸ್ವಾಧ್ಯಾಯವಂತಃ ಕೌರವ್ಯ! ಸದಾ ನಿಯಮಚಾರಿಣಃ ॥ 6 ॥**

ಯಾವ ಮಾನವರು ಶುಭವನ್ನು ಕೋರುತ್ತಾ ದೇವತೆಗಳನ್ನು ಅರ್ಚಿಸುವರೋ ಅಂತಹ ಮಾನವರಿಗೆ ದೇವತೆಗಳು ಇಷ್ಟಾರ್ಥ ಪೂರೈಸಿ ರಕ್ಷಿಸುತ್ತಾರೆ.

ಕುರುಕುಲನಂದನನೇ ! ಯಾರು ದೇವಕಾರ್ಯ-ಪಿತೃಕಾರ್ಯಗಳಲ್ಲಿ ಶ್ರದ್ಧಾವಂತರೋ, ಸನ್ಯಾಸ ಧರ್ಮವನ್ನು ಪಾಲನೆ ಮಾಡುವರೋ, ಸ್ವಾಧ್ಯಾಯಶೀಲರೋ, ವ್ರತಗಳನ್ನಾಚರಿಸುವರೋ ಅಂತಹವರಿಗೆ ದೇವತೆಗಳು ಸಕಲಾಭೀಷ್ಟಗಳನ್ನು ಪೂರೈಸಿ ಸತ್ಕರಿಸುತ್ತಾರೆ.

ಈ ಉತ್ಸವದಲ್ಲಿ ಗಂಧರ್ವರಾಜ ಚಿತ್ರರಥನು ತನ್ನ ಪುತ್ರನೊಂದಿಗೆ

ಸಂತುಷ್ಟಮನಸ್ಕನಾಗಿ ದೇವ ವಾದ್ಯಗಳನ್ನು ಬಾರಿಸುತ್ತಿದ್ದನು. ಇವರಲ್ಲದೆ ಊರ್ಣಾಯು. ಚಿತ್ರಸೇನ. ಹಾಹಾ. ಹೂಹೂ. ಡುಂಬರ. ತುಂಬುರು ಮೊದಲಾದ ಗಂಧರ್ವರು ವಿಕ್ರಮ. ಸ್ನಿಗ್ಧ. ಮಧುರ. ಲಾಸ್ಯ. ವಿಭಕ್ತ. ಅವಬದ್ಧಗಳೆಂಬ ಆರು ಗುಣಗಳಿಂದ ಕೂಡಿದ ಗೀತೆಗಳನ್ನು ಹಾಡುತ್ತಿದ್ದರು.

ಊರ್ವಶೀ ವಿಪ್ರಚಿತ್ತಿ. ಹೇಮಾ. ರಂಭಾ. ಹೇಮವಂತ. ಘೃತಾಚೀ. ಸಹಜನ್ಯಾ ಎಂಬ ಅಪ್ಸರಾ ಸ್ತ್ರೀಯರು ತಾವು ತರಬೇತಿ ಹೊಂದಿದ್ದ ನೃತ್ಯ ಗೀತೆಗಳನ್ನು ಹಾಡುತ್ತಿದ್ದರು.

### ನಾರದರು ಇಂದ್ರನ ಬಳಿ ಹೋದದ್ದು

**ಜಾಜೋಷ ಭಗವಾನ್ ದೇವಃ ತದುಪಸ್ಥಾನಮಾತ್ಮವಾನ್ ।**
**ವೃತ್ತೇನ ತುಷ್ಟೋ ಶಕ್ರಸ್ಯ ಜಗಾಮ ಜಗತೋ ಗತಿಃ ॥ 7 ॥**

**ಗತೇ ಭೂತಪತೌ ಸರ್ವೇ ನೃಪಾ ಜಗ್ಮುಃ ಯಥಾಗತಂ ।**
**ಮಹೇಂದ್ರೇಣಾರ್ಚಿತಾಃ ದೇವಾಃ ಸ್ವಾನೇವ ನಿಲಯಾನ್ ಗತಾಃ ॥ 8 ॥**

**ತತಃ ಸರ್ವೇಷು ಯಾತೇಷು ಸುಖಾಸೀನಂ ಪುರಂದರಮ್ ।**
**ಸದಸ್ಯೈಃ ಸ್ವೈಃ ಸಹಾಸೀನಂ ನಾರದೋಽಭಿಯಯೌ ಮುನಿಃ ॥ 9 ॥**

ಹೀಗೆ ಬಂದ ದೇವತೆಗಳೆಲ್ಲ ತಮ್ಮ ತಮ್ಮ ನೆಲೆಗಳಿಗೆ ಹೊರಟು ಹೋದ ನಂತರ. ತನ್ನ ಸಭಾಸದರಿಂದ ಸುಖಾಸೀನನಾಗಿದ್ದ ಇಂದ್ರನ ಬಳಿಗೆ ನಾರದರು ಹೋದರು. ನಾರದರು ಆಗಮಿಸಿದ್ದನ್ನು ಕಂಡ ಸಹಸ್ರಾಕ್ಷನು ತನ್ನ ಸಿಂಹಾಸದಿಂದೆದ್ದು ಅವರಿಗೆ ಸ್ವಾಗತ ಹೇಳಿ. ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿ. ತನ್ನ ಸಿಂಹಾಸನಕ್ಕೆ ಅನುರೂಪವಾಗಿದ್ದ ದರ್ಭೆಗಳಿಂದ ಯುಕ್ತವಾಗಿದ್ದ ಆಸನವನ್ನು ನೀಡಿ ಗೌರವಿಸಿದನು.

**ನಾರದೋಽಥ ಮಹಾತೇಜಾ ಮಹೇಂದ್ರಮಿದಮಬ್ರವೀತ್ ।**
**ದೂತೋಽಹಮಮರಶ್ರೇಷ್ಠ ವಿಷ್ಣೋರತುಲತೇಜಸಃ ॥ 10 ॥**

**ಕಿಂಚಿತ್ ಕಾರ್ಯಂ ಪುರಸ್ಕೃತ್ಯ ಪ್ರೇಷಿತೋಽಸ್ಮಿ ಮಹಾತ್ಮನಾ ।**
**ಆನರ್ತಾದಾರ್ತಿಹರಣಂ ತಸ್ಯೈವಾನಘಚೇತಸಃ ॥ 11 ॥**

ಅಮರಶ್ರೇಷ್ಠನೇ! ಮಹಾತೇಜಸ್ವಿಯಾದ ಅಪರಿಮಿತ ಪರಾಕ್ರಮಿಯಾದ ವಿಷ್ಣುವಿನಿಂದ ಕಳುಹಿಸಲ್ಪಟ್ಟ ದೂತನಾಗಿ ನಿನ್ನಲ್ಲಿಗೆ ಬಂದಿರುವೆನು.

ಮಹಾನುಭಾವನಾದ ಶ್ರೀಕೃಷ್ಣನು ಒಂದು ಮಹತ್ತಾದ ಕಾರ್ಯದ ನಿಮಿತ್ತವಾಗಿ ನನ್ನನ್ನು ನಿನ್ನಲ್ಲಿಗೆ ಕಳುಹಿಸಿರುವನು. ಶ್ರೀಕೃಷ್ಣನನ್ನು ನೀನೊಂದು ಸಂಕಟದಿಂದ ಪಾರು ಮಾಡಬೇಕಾಗಿದೆ. ಅದಕ್ಕಾಗಿಯೇ ಈ ನನ್ನ ಆಗಮನವಾಗಿದೆ ಎಂದರು.

**ತತಃ ಪ್ರಹೃಷ್ಟೋ ಭಗವಾನ್ ಅಬ್ರವೀತ್ ಪಾಕಶಾಸನಃ ॥ 12 ॥**

**ಕಿಮಾಹ ಪುರುಷಶ್ರೇಷ್ಠಃ ಶೀಘ್ರ ಮಾಚಕ್ಷ್ವಮೇ ಮುನೇ ।**
**ಚಿರಸ್ಯ ಖಲು ಕೃಷ್ಣೇನ ಸಂಸ್ಮೃತೋಽಸ್ಮಿ ಮಹಾತ್ಮನಾ ॥ 13 ॥**

ಸಂತುಷ್ಟನಾಗಿದ್ದ ದೇವೇಂದ್ರನು ಮನೋಜ್ಞ ಮಾತುಗಳನ್ನಾಡುತ್ತಾ – ಮುನಿಗಳೇ! – ಪುರುಷೋತ್ತಮನು ಶ್ರೀಕೃಷ್ಣನು ನನಗೆ ಯಾವ ಸಂದೇಶ ಕಳುಹಿಸಿರುವನೆಂದು ಶೀಘ್ರವಾಗಿ ಹೇಳಿರಿ.

ಬಹಳ ಕಾಲದ ಮೇಲೆ ಶ್ರೀಕೃಷ್ಣನು ನನ್ನನ್ನು ಸ್ಮರಿಸಿ ಕೊಂಡಿರುವನು.

*ನಾರದ ಉವಾಚ–*

**ಮಹೇಂದ್ರೇಂದ್ರಾನುಜಂ ದ್ರಷ್ಟುಂ ಗತೋಽಹಂ ಭ್ರಾತರಂ ತವ ।**
**ಕಥಂಚಿದ್ ದ್ವಾರಕಾಂ ತತ್ರ ಕಾಶ್ಯಪಾನಾಂ ಯಶಸ್ಕರಮ್ ॥ 14 ॥**

**ತಂ ತು ರೈವತಕೇಽದ್ರಾಕ್ಷಂ ತದಾಸೀನಮರಿಂದಮಂ ।**
**ರುಗ್ಮಿಣ್ಯಾ ಸಹಿತಂ ವೀರಮುಮಯೇವ ವೃಷಧ್ವಜಮ್ ॥ 15 ॥**

**ಪಾರಿಜಾತ ತರೋಃ ಪುಷ್ಪಂ ತಸ್ಯದತ್ತಂ ಮಯಾನಘ ।**
**ವಿಸ್ಮಾಪನಾರ್ಥಂ ದೇವೇಶ ಪತ್ನೀ ನಾಮುರುತೇಜಸಃ ॥ 16 ॥**

**ತದ್ ದೃಷ್ಟ್ವಾ ತಸ್ಯ ಪತ್ನ್ಯಸ್ತು ವಿಸ್ಮಯಂ ಪರಮಂ ಯಯುಃ ।**
**ಬಹುಕಾಮಪ್ರದಂ ಪುಷ್ಪಂ ವೃಕ್ಷರಾಜ ಸಮುದ್ಭವಮ್ ॥ 17 ॥**

ಮಹೇಂದ್ರನೇ ! ನಿನ್ನ ಸಹೋದರನೂ ಕಾಶ್ಯಪ ವಂಶಯಸ್ಕರನೂ ಆದ ಶ್ರೀಕೃಷ್ಣನನ್ನು ನೋಡಲು ನಾನು ದ್ವಾರಾವತಿಗೆ ಹೋಗಿದ್ದೆ. ಅಲ್ಲಿ ಶ್ರೀಕೃಷ್ಣನು ಉಮೆಯೊಂದಿಗೆ ಪರಮೇಶ್ವರನು ಕೈಲಾಸದಲ್ಲಿರುವಂತೆ ರುಗ್ಮಿಣೀದೇವಿ–ಯೊಂದಿಗೆ ದ್ವಾರಕೆಯ ಸಮೀಪದ ರೈವತಕಗಿರಿಯಲ್ಲಿದ್ದನು. ಶ್ರೀಕೃಷ್ಣನಿಗೆ ಅಚ್ಚರಿವುಂಟು ಮಾಡಲೆಂದು ನಾನು ಒಂದು ಪಾರಿಜಾತ ಪುಷ್ಪವನ್ನು ಅವನಿಗೆ ನೀಡಿದೆನು.

ಪಾರಿಜಾತ ವೃಕ್ಷದಲ್ಲಿ ಬೆಳೆದ, ಪ್ರಾರ್ಥಿಸುವವರ ಬಹಳ ಅಭೀಷ್ಟ ಪೂರೈಸುವ ಆ ಪಾರಿಜಾತ ಪುಷ್ಪವನ್ನು ನೋಡಿದ ಶ್ರೀಕೃಷ್ಣನ ಮಡದಿಯರು ಬಹಳವಾಗಿ ಆಶ್ಚರ್ಯಗೊಂಡರು.

**ಸೃಷ್ಟಶ್ಚ ಪಾರಿಜಾತಸ್ಯ ಕಶ್ಯಪೇನ ಮಹಾತ್ಮನಾ ।**
**ಅದಿತ್ಯಾ ಕಶ್ಯಪೋ ದತ್ತಃ ಪುಣ್ಯಾರ್ಥಂ ಚ ಯಥಾ ಮಮಃ**
**ಪುಷ್ಪದಾಮ್ನಾ ವೇಷ್ಟಯಿತ್ವಾ ಕಂಠೇ ಪುಣ್ಯಾರ್ಥಮಾತ್ಮವಾನ್ ॥ 18 ॥**

ನಾನಾದರೂ ಶ್ರೀಕೃಷ್ಣ ಹಾಗೂ ಅವನ ಪತ್ನಿಯರಿಗೆ ಪಾರಿಜಾತದ ಮಹಿಮೆಗಳೆಲ್ಲವನ್ನೂ ವಿವರಿಸಿ ಹೇಳಿದೆನು. ಮಹಾತ್ಮನಾದ ಕಶ್ಯಪನು ಯಾವ ಕಾರಣದಿಂದ ಇದನ್ನು ಸೃಷ್ಟಿಸಿದನು.

ಅದಿತಿಯು ಯಾವ ಪುಣ್ಯಪ್ರಾಪ್ತಿಗಾಗಿ ಪಾರಿಜಾತಗಳ ಮಾಲೆಯನ್ನು ಕಶ್ಯಪನ ಕಂಠಕ್ಕೆ ಅಲಂಕರಿಸಿ, ಅವನನ್ನು ನನಗೆ ದಾನ ನೀಡಿದಳು. ಪುಣ್ಯಪ್ರಾಪ್ತಿಗಾಗಿ ಹೀಗೆ ಅವಳು ನನಗೆ ನೀಡಿದ್ದಳು.

**ತ್ವಂ ಚ ದತ್ತೋ ಯಥಾ ಶಚ್ಯಾ ದೇವಾಶ್ಚಾನ್ಯೇ ಸುರೇಶ್ವರ ।**
**ನಿಷ್ಕ್ರಯಶ್ಚ ಯಥಾ ದತ್ತಃ ಕಾಶ್ಯಪಾದ್ಯೈಃ ಮಹರ್ಷಿಭಿಃ ॥ 19 ॥**
**ತಚ್ಛ್ರುತ್ವಾ ತಸ್ಯ ಪತ್ನ್ಯೇಕಾ ಸತ್ಯಭಾಮೇತಿ ವಿಶ್ರುತಾ ।**
**ಪುಣ್ಯಕಾರ್ಯಂ ಮನಶ್ಚಕ್ರೇ ದಯಿತಾ ತೇ ಯವೀಯಸಃ ॥ 20 ॥**
**ತಯಾಭ್ಯರ್ಥಿತೋ ಭರ್ತಾ ದೇವ ದೇವ್ಯಾ ಗಣೇಶ್ವರಃ ।**
**ಪ್ರತಿಜಜ್ಞೇ ಸ ಧರ್ಮಾರ್ಥಂ ಯವೀಯಾಂಸ್ತವ ಮಾನದ ॥ 21 ॥**

**ಪುಣ್ಯಕ ವ್ರತ**

ಇದರಂತೆಯೇ ಶಚೀದೇವಿಯೂ ಸಹ ನಿನ್ನನ್ನು ದಾನರೂಪದಲ್ಲಿ ಕೊಟ್ಟಿದ್ದಳು. ಇದೇ ರೀತಿ ಇತರ ದೇವತಾ ಸ್ತ್ರೀಯರೂ ಸಹ ಪುಣ್ಯ ಸಂಪಾದನೆಗಾಗಿ ತಮ್ಮ ತಮ್ಮ ಪತಿಗಳನ್ನು ದಾನವಿತ್ತದ್ದು ಪ್ರಸಿದ್ಧವೆ. ದಾನ ಮಾಡಿದ ಮೇಲೆ ಅವರ ತೂಕದ ಧನಾದಿಗಳನ್ನು ನೀಡಿ, ನನ್ನಿಂದ ಕೊಡಲ್ಪಟ್ಟು ಸ್ವತಂತ್ರರಾದರು.

ಈ ಎಲ್ಲಾ ವಿಷಯಗಳನ್ನು ನಾನು ಶ್ರೀಕೃಷ್ಣನ ಪತ್ನಿಯರಿಗೆ ಹೇಳಿದೆನು. ನನ್ನ ಮಾತನ್ನು ಆಲಿಸಿದ 'ಸತ್ಯಭಾಮಾ' ಎಂಬ ಹೆಸರಿನಿಂದ ಪ್ರಖ್ಯಾತಳಾದ

ನಿನ್ನ ತಮ್ಮನ ಪ್ರೇಯಸಿಯು ಪುಣ್ಯಪ್ರಾಪ್ತಿಗಾಗಿ ಪತಿದಾನ ರೂಪವಾದ ಪುಣ್ಯಕವ್ರತ ಮಾಡಬೇಕೆಂದು ಯೋಚಿಸಿದಳು. ಮಹೇಂದ್ರನೇ ! ಪಾರ್ವತಿಯು ಶಿವನನ್ನು ಪ್ರಾರ್ಥಿಸುವಂತೆ– ಸತ್ಯಭಾಮೆಯು ತನ್ನ ಪತಿಯನ್ನು ಪಾರಿಜಾತ ವೃಕ್ಷವನ್ನು ತಂದು ನೀಡುವಂತೆ ಪ್ರಾರ್ಥಿಸಿದಳು. ಈ ಸಮಯದಲ್ಲಿಯೇ ನಿನ್ನ ಸೋದರ ಉಪೇಂದ್ರನು ತನ್ನ ಭಾಮೆಗೆ ಪಾರಿಜಾತ ವೃಕ್ಷವನ್ನು ತಂದು ನೀಡುವೆನೆಂದು ಪ್ರತಿಜ್ಞೆ ಮಾಡಿದನು.

ದೇವೇಂದ್ರನೇ! ನಂತರ ಬಲಿಷ್ಠರಲ್ಲಿ ಅಗ್ರಗಣ್ಯನಾದ ಶ್ರೀಕೃಷ್ಣನು ನಿನಗೆ ತಿಳಿಸಲು ಹೇಳಿದನೋ, ಆ ಮಾತನ್ನು ನಿನಗೆ ಯಥಾವತ್ತಾಗಿ ತಿಳಿಸುವೆನು, ಅದನ್ನು ಮನಸ್ಸಿನಲ್ಲಿಟ್ಟು ಕೇಳು.

**ಲಾಲನೀಯೋ ಯವೀಯಾಂಸ್ತು ಪ್ರಣಿಪತ್ಯಾಚ್ಯುತೋಽಬ್ರವೀತ್ ।**
**ಆನಮೇಯಂ ಸುರಶ್ರೇಷ್ಠ! ಪಾರಿಜಾತಂ ಸುರದ್ರುಮಮ್ ॥ 22 ॥**

**ಮನೋರಥೋಽಸ್ತು ಸಫಲೋ ವಧ್ವಾಸ್ತೇಽಸುರಸೂದನ ।**
**ಧರ್ಮಕೃತ್ಯೇ ವಿಶೇಷೇಣ ವಧ್ವಾಸ್ತೇ ಸುರಸತ್ತಮ ॥ 23 ॥**

**ಅಯಂ ದರ್ಶಿತ ಕಲ್ಯಾಣೋ ಲೋಕೋ ಲೋಕಗಣೇಶ್ವರ ।**
**ಪಶ್ಯಂತ್ವಮರಕಲ್ಯಾಣಂ ಮತ್ ಪ್ರಭಾವಾಚ್ಚ ಮಾನವಾಃ ॥ 24 ॥**

ದೇವೇಂದ್ರನೇ! ನಿನ್ನ ಕನಿಷ್ಠ ತಮ್ಮನು ನಿನ್ನ ಲಾಲನೆ ಪಾಲನೆಗಳಿಗೆ ಅರ್ಹನಾಗಿದ್ದಾನೆ. ಅಲ್ಲವೆ! ಅಣ್ಣನಿಗೆ ನಮಸ್ಕರಿಸುತ್ತಾ ಶ್ರೀಕೃಷ್ಣನು ಹೀಗೆ ಹೇಳಿರುವನು.

ಸುರಶ್ರೇಷ್ಠ ದೇವೇಂದ್ರನೇ! ನಾನು ಶ್ರೇಷ್ಠ ವೃಕ್ಷವಾದ ಪಾರಿಜಾತ ವೃಕ್ಷವನ್ನು ಸ್ವರ್ಗದಿಂದ ಭೂಮಿಗೆ ತರಲು ಇಚ್ಛಿಸಿದ್ದೇನೆ. ಅಸುರಾರಿಯೇ! ನಿನ್ನ ಸೊಸೆಯಂತಿರುವ ಸತ್ಯಭಾಮೆಯ ಮನೋರಥವು ಧರ್ಮ ಕಾರ್ಯಕ್ಕಾಗಿ ಸಫಲವಾಗುವಂತಾಗಲಿ.

ಮಾನವವೃಂದವೂ ಸಹ ದೇವತಾ ವೃಂದಕ್ಕೆ ಆನಂದವುಂಟು ಮಾಡುವ ಪಾರಿಜಾತವೃಕ್ಷವನ್ನು ನನ್ನ ಪ್ರಭಾವದಿಂದಾಗಿ ಭೂಮಿಗೆ ಬಂದದ್ದನ್ನು ನೋಡಿ ಆನಂದಪಡಲಿ. ಹೀಗೆ ಭಾಮೆಯ ಮನೋರಥ ಸಫಲಗೊಳ್ಳಲು, ಹಾಗೆಯೆ ಮನುಷ್ಯಲೋಕವು ಕಲ್ಯಾಣಮಯವಾದ ವೃಕ್ಷದ ದರ್ಶನ ಮಾಡುವಂತೆ ಕೃಪೆ ಮಾಡಿರಿ ಎಂದು.

ವೈಶಂಪಾಯನರು ರಾಜನಿಗೆ 'ರಾಜನೇ ! ಇಂದ್ರದೇವನು ಶ್ರೀಕೃಷ್ಣನ ಸಂದೇಶ ಕೇಳಿದ ನಂತರ ನಾರದರಿಗೆ ಹೀಗೆಂದನು.'

**ಧಚಾಸನಂ ದ್ವಿಜಶ್ರೇಷ್ಠ ಯುಕ್ತಮುಕ್ತಂ ತ್ವಯಾ ದ್ವಿಜ ।**
**ಸಂದೇಶಂ ಪ್ರತಿಪದಾಸ್ಯಾಮಿ ವಿಷ್ಣೋರತುಲತೇಜಸಃ ॥ 25 ॥**

ಬ್ರಾಹ್ಮಣ ಶ್ರೇಷ್ಠರೇ! ಮೊದಲು ತಾವು ಈ ಸಿಂಹಾಸನದಲ್ಲಿ ಅಲಂಕೃತರಾಗಿರಿ. ಅನುಪಮ ತೇಜಸ್ವಿಯಾದ ವಿಷ್ಣುವಿನ ಸಂದೇಶಕ್ಕೆ ಪ್ರತಿ ಸಂದೇಶ ತಿಳಿಸುವೆನು ಎಂದನು.

ರಾಜನೇ! ದೇವೇಂದ್ರನ ಮಾತಿನಂತೆ ನಾರದ ಮಹರ್ಷಿಗಳು ಸುಖಾಸೀನದಲ್ಲಿ ಆಸೀನರಾದರು. ನಾರದರ ಅನುಮತಿ ಪಡೆದು ದೇವೇಂದ್ರನೂ ತನ್ನ ಆಸನದಲ್ಲಿ ಕುಳಿತನು. ನಂತರ ವೃತ್ರ ಹಂತಕ ಇಂದ್ರದೇವನು ನಾರದರಿಗೆ ಹೀಗೆಂದನು.

*ಶಕ ಉವಾಚ –*

**ಮಹರ್ಷೇ ಕುಶಲಂ ಪೃಷ್ಟ್ವಾ ವಕ್ತವ್ಯಸ್ತೇ ಜನಾರ್ದನಃ ।**
**ವಚನಾನ್ ಮಮ ಧರ್ಮಜ್ಞ ಸರ್ವಭೂತ ಸುಖಾವಹಃ ॥ 26 ॥**

ಧರ್ಮಜ್ಞರೇ ! ಮೊದಲು ಶ್ರೀಕೃಷ್ಣನ ಕುಶಲ ಪ್ರಶ್ನೆ ಮಾಡಿದ ನಂತರ ಸರ್ವಪ್ರಾಣಿಗಳಿಗೂ ಸುಖವನ್ನೀಯುವ ಕೃಷ್ಣನಿಗೆ ಸಂದೇಶ ತಿಳಿಸಬೇಕು.

**ಮದನಂತರ ಮೀಶಸ್ತ್ವಂ ಜಗತೋ ನಾತ್ರ ಸಂಶಯಃ ।**
**ತ್ವದೀಯಃ ಪಾರಿಜಾತಶ್ಚ ರತ್ನಾನ್ಯನ್ಯಾನಿ ಚಾಚ್ಯುತ ॥ 27 ॥**

**ತ್ವಂ ತು ಭಾರಾವತರಣಂ ಕರ್ತುಂ ದೇವ ಮಹೀಂ ಗತಃ ।**
**ಮಾನುಷ್ಯಂ ಸರ್ವವೃತ್ತಾನಾಂ ಸ್ಥಿತಃ ಕಾರ್ಯಸ್ಯ ಸಿದ್ಧಯೇ ॥ 28 ॥**

**ತ್ವಯಿ ತೀರ್ಣ ಪ್ರತಿಜ್ಞೇ ಹಿ ಪುನಃ ಪ್ರಾಪ್ತೇ ತ್ರಿವಿಷ್ಟಪಮ್ ।**
**ಪೂರಯಿಷ್ಯಾಮಿ ವಧ್ವಾಸ್ತೇ ಇಷ್ಟಾನ್ ಕಾಮನಧೋಕ್ಷಜಃ ॥ 29 ॥**

**ಸ್ವರ್ಗೀಯಾನಿ ಚ ರತ್ನಾನಿ ನ ನೇತವ್ಯಾನಿ ಕೇಶವ ।**
**ಸ್ವಲ್ಪಾರ್ಥೇ ಮಾನುಷಂ ಲೋಕಮಿತಿ ಪೂರ್ವಕೃತಾ ಸ್ಥಿತಿಃ ॥ 30 ॥**

**ಉತ್ಕ್ರಮ್ಯ ಹಿ ಸ್ಥಿತಿಂ ದೈವೀಂ ಪ್ರವರ್ತಾಮಿ ಮಹಾಬಲ ।**
**ಯದ್ಯಹಂ ಕಿಂ ಪ್ರವಕ್ಷ್ಯಂತಿ ಪ್ರಜಾಪತಿ ಗಣಾಃ ಪ್ರಭೋ ॥ 31 ॥**

**ಪ್ರಜಾಪತಿಕೃತಂ ಮಾರ್ಗಮಪಾಸ್ಯ ವ್ರಜತೋ ಮಮ ।**
**ಶ್ರುತ್ವಾ ಪ್ರಜಾಪತಿರ್ಧೀಮಾನ್ ಶಾಪ ಮಪ್ಯುತ್ಸಜೇತ್ ಪ್ರಭುಃ ॥ 32 ॥**

ಅಚ್ಯುತನೇ, ನನ್ನ ಅನಂತರ ನೀನೇ ಈ ಜಗತ್ತಿಗೆ ಪ್ರಭುವಾಗಿರುವೆ. ಇದು ಲೋಕದೃಷ್ಟಿಯಲ್ಲಿ ಮಾತ್ರ - ಇದರಲ್ಲಿ ಸಂಶಯವಿಲ್ಲ. ಈ ದೃಷ್ಟಿಯಲ್ಲಿ ನೋಡಿದಾಗ ಸ್ವರ್ಗೀಯ ವಸ್ತುಗಳಾದ ಪಾರಿಜಾತವೃಕ್ಷ, ವಿವಿಧ ರತ್ನಗಳೆಲ್ಲವೂ ನಿನ್ನ ಅಧೀನವೇ ಆಗಿವೆ. ನೀನಾದರೂ ಭೂಭಾರವನ್ನು ಇಳುಹಲು ಅವತರಿಸಿರುವ ಸಾಕ್ಷಾತ್ ಶ್ರೀಮನ್ನಾರಾಯಣನೇ ಆಗಿರುವಿ. ಭೂಭಾಹರಣಕ್ಕಾಗಿ ಹಾಗೂ ಭೂಮಿಯ ಜನರಿಗೆ ಶಿಕ್ಷಣ ನೀಡುವ ಸಲುವಾಗಿ ಮನುಷ್ಯರಂತೆ ವರ್ತಿಸುತ್ತಿರುವೆ.

ನೀನು ಭೂಭಾರಹರಣ ಮಹಾಕಾರ್ಯ ಮುಗಿಸಿ ಪುನಃ ಸ್ವರ್ಗಲೋಕಕ್ಕೆ ಆಗಮಿಸಿದಾಗ ನಿನ್ನ ಪ್ರೇಯಸಿಯಾದ ಸತ್ಯಭಾಮೆಯ ಸಕಲಾಭೀಷ್ಟಗಳನ್ನು ನೆರವೇರಿಸಿಕೊಡುವೆನು.

ಆದರೆ ಸಣ್ಣಪುಟ್ಟ ಕಾಮನೆಗಳಿಗಾಗಿ ಸ್ವರ್ಗ ವಸ್ತುಗಳಾದ ಪಾರಿಜಾತ-ರತ್ನಗಳನ್ನು ಭೂಲೋಕಕ್ಕೆ ಒಯ್ಯಬಾರದು. ಇದು ಹಿಂದಿನಿಂದಲೂ ಅನುಚಾನವಾಗಿ ಬಂದಿರುವ ನಿಯಮವಾಗಿದೆ.

ಶ್ರೀಕೃಷ್ಣನೇ ! ಒಂದು ವೇಳೆ ನಾನು ಈ ದೇವಲೋಕದ ನೀತಿಸಂಹಿತೆಯನ್ನು ತಿರಸ್ಕರಿಸಿ ನಿನಗೆ ಸ್ವರ್ಗೀಯ ರತ್ನಾದಿಗಳನ್ನು ನೀಡಿದ್ದಾದರೆ, ಪ್ರಜಾಪತಿ ವೃಂದಗಳು ನನ್ನ ಬಗ್ಗೆ ಏನು ಹೇಳ ಯಾರು? ಇದಲ್ಲದೆ ಪುತ್ರ ಪೌತ್ರರಿಂದ ಸಹಿತನಾದ ಬ್ರಹ್ಮದೇವನು ಪ್ರಪಂಚದ ಸಕಲ ಕಾರ್ಯಗಳಿಗೂ ಶಾಶ್ವತ ನಿಯಮಾವಳಿಗಳನ್ನು ಗೊತ್ತು ಪಡಿಸಿರುವನು. ಈ ಮಾರ್ಗವನ್ನು ತ್ಯಜಿಸಿ ನಾನೇನಾದರೂ ವ್ಯವಹರಿಸಿದರೆ ಬ್ರಹ್ಮದೇವನು ಕೋಪಗೊಂಡು ನನಗೆ ಶಾಪವನ್ನೂ ನೀಡಬಹುದಲ್ಲವೆ?

ಹೀಗೆ ಅನುಚಾನವಾಗಿ ಬಂದಿರುವ ನಿಯಮ ಸಂಹಿತೆಯನ್ನು ನಾವು ತೊಡೆದು ಹಾಕಿದರೆ ದೈತ್ಯರು, ದೈತ್ಯಕೂಟದವರು ಇನ್ನು ಮುಂದೆ ಸ್ವಲ್ಪವೂ ಶಂಕೆಯಿಲ್ಲದೆ ಪ್ರಜಾಪತಿ ಮಾರ್ಗವನ್ನು ಉಲ್ಲಂಘಿಸದೆ ಬಿಡುವರೆ!

**ಸ್ತ್ರೀ ನಿಮಿತ್ತಮಿತೋ ನೀತೇ ಪಾರಿಜಾತೇ ದ್ರುಮೇಶ್ವರೇ ।**
**ಸ್ವರ್ಗೌಕಸೋ ಭವಿಷ್ಯಂತಿ ವಿಮನಸ್ಕಾಶ್ಚ ಮಾನದ ॥ 33 ॥**

**ಉಪಭೋಗಾ ಮನುಷ್ಯಾಣಾಂ ವಿಹಿತಾ ಯೇ ಸ್ವಯಂಭುವಾ ।**
**ತೈಸ್ತು ತುಷ್ಯತು ಮೇ ಭ್ರಾತಾ ಸಂಪಶ್ಯನ್ ಕಾಲಪರ್ಯಯಮ್ ॥ 34 ॥**

**ಇಹಾಪಿ ತಾತ ತ್ರಿದಿವೇ ಮಮ ಯಃ ಸ್ಯಾತ್ ಪರಿಗ್ರಹಃ ।**
**ತ್ರಿದಿವಸ್ಥೋಽಪಿ ತಂ ಕೃಷ್ಣಃ ಸರ್ವಂ ಭೋಕ್ತುಮಿಹಾರ್ಹತಿ ॥ 35 ॥**

ಮಾನದನೇ! ಒಬ್ಬ ಸ್ತ್ರೀಯನ್ನು ಸಂತೋಷಪಡಿಸಲು ಈ ಸ್ವರ್ಗೀಯ ದೇವದ್ರುಮವನ್ನು ಭೂಲೋಕಕ್ಕೆ ಒಯ್ಯಲ್ಪಟ್ಟದ್ದಾದರೆ ಸ್ವರ್ಗೀಯ ದೇವತೆಗಳೂ ಸಹ ನನ್ನಲ್ಲಿ ಉದಾಸೀನಭಾವ ತಾಳಬಹುದು. ಇದಲ್ಲದೆ ಬ್ರಹ್ಮದೇವನು ಮಾನವರ ಭೋಗಕ್ಕಾಗಿ ಹಲವು ವಸ್ತುಗಳನ್ನು ನಿರ್ಮಿಸಿರುವನು. ಅವುಗಳನ್ನು ಭೋಗಿಸುತ್ತಲೇ, ನನ್ನ ತಮ್ಮ ಉಪೇಂದ್ರನು ತೃಪ್ತನಾಗಲಿ. ಈ ಸ್ವರ್ಗದಲ್ಲಿ ನನಗೆ ಸೇರಿದಂತೆ ಯಾವ ಯಾವ ಭೋಗ್ಯ ವಸ್ತುಗಳಿವೆಯೋ ಅವೆಲ್ಲವನ್ನೂ ಶ್ರೀಕೃಷ್ಣನು ಇಲ್ಲಿಗೆ ಬಂದಾಗ ಯಥೇಚ್ಛವಾಗಿ ಅನುಭವಿಸಲಿ. ಮರ್ತ್ಯಲೋಕದ ಭೋಗ್ಯವಸ್ತುಗಳ ಸೇವನೆಯಿಂದ ಹೃಷ್ಟಪುಷ್ಟನಾಗಿರುವ ಕಾರಣ ಜನಾರ್ದನನ ಈ ಅಭಿಮಾನವು ಏರ್ಪಟ್ಟಿದೆ. ಇಂತಹ ಅಭಿಮಾನದಿಂದಾಗಿಯೇ ಧರ್ಮಮಾರ್ಗವನ್ನು ಬಿಟ್ಟು ಅಧರ್ಮ ಮಾರ್ಗವನ್ನು ಅವಲಂಬಿಸುತ್ತಿರುವನು.

**ಸ್ತ್ರೀವಶ್ಯತಾ ಖ್ಯಾಪ್ಯಮಾನಾ ಕೃಷ್ಣಸ್ಯ ಹಿ ಮಹಾತ್ಮನಃ ।**
**ಜಗತ್ಯಯಶಸಾ ಯೋಗಂ ಜನಯೇದಿತಿ ಮೇ ಮತಿಃ ॥ 36 ॥**

**ಮಾನುಷ್ಯಂ ಮಾನುಷೇ ಲೋಕೇ ಪ್ರಾಪ್ತೋ ಯದೇತನ್ ಮಧುಸೂದನಃ।**
**ಕುರ್ಯಾನ್ನಿರ್ಬಂಧನೀಯಂ ಯದ್ ಭ್ರಾತ್ರಾ ಜ್ಯೇಷ್ಠೇನ ನಾರದ ॥ 37 ॥**

ಮಹಾನುಭಾವನಾದ ಶ್ರೀಕೃಷ್ಣನು ಸ್ತ್ರೀಗೆ ವಶನಾಗಿದ್ದಾನೆಂಬ ವಿಷಯ ಸರ್ವತ್ರ ಹರಡಿದರೆ, ಇದರಿಂದ ಅವನಿಗೆ ಅಪಕೀರ್ತಿಯೂ ಉಂಟಾಗುವುದೆಂಬುದು ನನ್ನ ಅನಿಸಿಕೆ.

ಇದೂ ಅಲ್ಲದೆ ಮಾನವಲೋಕದಲ್ಲಿದ್ದು ಮಾನವ ಶರೀರವನ್ನೇ ಹೊಂದಿರುವ ನನ್ನ ತಮ್ಮನು, ಅವನ ಅಣ್ಣನೊಂದಿಗೆ ದುರಾಗ್ರಹ ಪೂರ್ವಕ ವ್ಯವಹಾರ ನಡೆಸುವುದು ಅವನಿಗೆ ಉಚಿತವಲ್ಲ.

ನಾರದರೇ! ಸ್ವರ್ಗೀಯ ರತ್ನದ ಅಪಹರಣದ ಸಲುವಾಗಿ ನನ್ನ ಮೇಲೆ ಆಕ್ರಮಣ, ವಿಶೇಷವಾಗಿ ಅಣ್ಣನೊಂದಿಗೆ ಘರ್ಷಣೆ ಇವೆಲ್ಲವೂ ಲೋಕ ನಿಂದಿತ

ವ್ಯವಹಾರವಾಗಿವೆ. ಮಧುಸೂದನನು ಕ್ರಮವಾಗಿ ಧರ್ಮ ಅರ್ಥ ಕಾಮಗಳನ್ನು ಸೇವಿಸಲಿ. ಹಾಗೆಯೇ ಚತುರ್ಮುಖನಿಂದ ಸ್ಥಾಪಿಸಲ್ಪಟ್ಟಿರುವ ಸಜ್ಜನರ ಧರ್ಮಗಳನ್ನೂ ಆಶ್ರಯಿಸಲಿ.

## ಪಾರಿಜಾತ ಭೂಮಿಗೆ ಹೋದರೆ ಆಗುವ ಅನರ್ಥಗಳು

**ಮಹೀತಲಂ ಪಾರಿಜಾತಮರ್ಪಯಿಷ್ಯಾಮ್ಯಹಂ ಯದಿ ।**
**ಪೌಲೋಮೀಮಾದಿತಃ ಕೃತ್ವಾ ಕೋ ನುಮಾಂಬಹುಮಂಸ್ಯತೇ ॥ 38 ॥**
**ಪಾರಿಜಾತಂ ಮಹೀಪೃಷ್ಠೇ ದೃಷ್ಟ್ವಾ ಸ್ಪೃಷ್ಟ್ವಾಚ ಮಾನುಷಾಃ ।**
**ಸ್ವರ್ಗಾರ್ಥಂ ನೋದ್ಯಮಿಷ್ಯಂತಿ ದೃಷ್ಟ್ವಾ ಸ್ವರ್ಗಫಲಂ ಕ್ಷಿತೌ ॥ 39 ॥**
**ಪಾರಿಜಾತಗುಣಾನ್ ಮರ್ತ್ಯಾ ಜುಷಂತಿ ಯದಿ ನಾರದ ।**
**ದೇವತಾನಾಂ ಮನುಷ್ಯಾಣಾಂ ನ ವಿಶೇಷೋ ಭವಿಷ್ಯತಿ ॥ 40 ॥**
**ಯಜ್ಞೈಃ ಮರ್ತ್ಯಾಃ ನ ಯಕ್ಷಂತಿ ಲಬ್ಧಸ್ವರ್ಗಫಲಾ ಭುವಿ ।**
**ನ ಪೂರ್ತಾನಿ ಪ್ರದಾಸ್ಯಂತಿ ತುಲ್ಯತ್ವಮಮರೈಃ ಗತಾಃ ॥ 41 ॥**

ಒಂದು ವೇಳೆ ನಾನೇನಾದರೂ ಪಾರಿಜಾತ ವೃಕ್ಷವನ್ನು ಭೂಲೋಕಕ್ಕೆ ಕಳುಹಿಸಿದ್ದಾದರೆ ಶಚೀದೇವಿಯೇ ಮೊದಲಾದ ಸ್ವರ್ಗದಲ್ಲಿರುವವರು ಯಾರು ತಾನೇ ನನ್ನನ್ನು ಗೌರವದಿಂದ ನೋಡುತ್ತಾರೆ?

ಭೂಲೋಕದಲ್ಲಿ ಪಾರಿಜಾತ ವೃಕ್ಷವನ್ನು ನೋಡಿದ ಹಾಗೂ ಅದನ್ನು ಸ್ಪರ್ಶಿಸಿದ ಮಾನವರು ಅದರ ಪ್ರಭಾವದಿಂದಾಗಿ ಭೂಮಿಯಲ್ಲಿಯೇ ಸ್ವರ್ಗ ಸುಖವನ್ನು ಅನುಭವಿಸುವರು. ಭೂಮಿಯಲ್ಲಿಯೇ ಸ್ವರ್ಗಸುಖ ಕಂಡ ಮಾನವರು ಸ್ವರ್ಗಕ್ಕಾಗಿ ಯಾವುದೇ ಪ್ರಯತ್ನವನ್ನು ಮಾಡಲಾರರು.

ಪಾರಿಜಾತವೃಕ್ಷದ ಗುಣಗಳನ್ನು, ಅದರಿಂದ ಪಡೆಯಬಹುದಾದ ಭೋಗ್ಯ ವಸ್ತುಗಳನ್ನು ಮನುಷ್ಯರು ಸೇವಿಸಿದ್ದೆ ಆದರೆ ಇನ್ನು ದೇವತೆಗಳಗೂ, ಮನುಷ್ಯರಿಗೂ ಇರುವ ಅಂತರವಾದರೂ ಏನಿದೆ ಹೇಳ.

ಮಾನವರು ಭೂಲೋಕದಲ್ಲಿ ಯಾವ ಪುಣ್ಯ ಕಾರ್ಯವನ್ನು ಮಾಡುವರೋ ಅದರ ಫಲವನ್ನು ಸ್ವರ್ಗದಲ್ಲಿ ಅನುಭವಿಸುವರು. ಪಾರಿಜಾತವೃಕ್ಷವನ್ನು ಅವರು ಭೂಮಿಯಲ್ಲಿಯೇ ಪಡೆದದ್ದಾದರೆ ಅವರು ಸ್ವರ್ಗಕ್ಕೆ ಬರಬೇಕಾದದ್ದೇನಿದೆ?

ಪಾರಿಜಾತವೃಕ್ಷವು ಸ್ವರ್ಗದಲ್ಲಿರುವ ರತ್ನಗಳಿಗಿಂತಲೂ ಉತ್ತಮೋತ್ತಮ ರತ್ನವಾಗಿದೆ. ಇದು ಭೂಮಿಗೆ ಹೋದರೆ ಮಾನವರೂ ದೇವತೆಗಳಂತೆಯೆ ಅಲ್ಲವೆ? ಸಕಲ ಜಗತ್ತೆಲ್ಲವೂ ಸ್ವರ್ಗವೆ ಆಗುತ್ತದೆಯಷ್ಟೆ.

ಪಾರಿಜಾತ ಪ್ರಭಾವದಿಂದಾಗಿ ಮಾನವರು ದೇವತಾ ಸಮಾನರಾದರೆ, ಸ್ವರ್ಗವನ್ನು ಹೊಂದುವ ಯಜ್ಞ ಯಾಗಾದಿಗಳನ್ನೇಕೆ ಮಾಡುವರು?

ಜನರೋಪಯೋಗಕ್ಕಾಗಿ ಮಾಡಬಹುದಾದ ಕೆರೆ, ಬಾವಿ ತೋಡಿಸುವುದು ಮೊದಲಾದ ಧರ್ಮ ಕಾರ್ಯಗಳನ್ನು ಬಿಡುವರು. ಯಾಚಕರಿಗೆ ಅನ್ನಪಾನಾದಿಗಳನ್ನು ನೀಡಲಾರರು. ಇಂತಹ ಅನರ್ಥಗಳವೆ. ಸ್ವರ್ಗಕ್ಕಾಗಿ ಮಾಡಬಹುದಾದ ಯಜ್ಞ, ದಾನ, ತಪಸ್ಸು ಮೊದಲಾದ ನಿತ್ಯ ನೈಮಿತ್ತಿಕ ಕರ್ಮ ಮಾಡದೆ ಭ್ರಷ್ಟರಾಗುವರು. ಇದರಿಂದಾಗಿ ನಾವು ಮಾತ್ರ ಪುಷ್ಟಿ ನೀಡುವ ಯಜ್ಞಯಾಗಾದಿಗಳಿಂದ ವಂಚಿತರಾಗಿ ತೇಜೋಹೀನರಾಗಬೇಕಾಗುತ್ತದೆ.

ಸ್ವರ್ಗದಿಂದ ಭೂಮಿಯಲ್ಲಿ ಸುವೃಷ್ಟಿಯಾದರೆ ಭೂಮಿಯಲ್ಲಿ ಬೆಳೆಯುವ ಧಾನ್ಯಗಳಿಂದ ಜನರು ಜೀವಿಸುತ್ತಾರೆ. ಇದರಿಂದಾಗಿ ಮಾನವರು ದಾನ ಯಜ್ಞಗಳನ್ನು ಮಾಡುತ್ತಾ ನಮ್ಮ ಪೋಷಣೆ ಮಾಡುತ್ತಾರೆ. ಹೀಗೆ ಮಳೆಯಿಂದಾಗಿ ಸುವೃಷ್ಟಿ, ಸುವೃಷ್ಟಿಯಿಂದಾಗಿ ಧಾನ್ಯಗಳ ಸಮೃದ್ಧಿ– ಇದರಿಂದಾಗಿ ಸುವೃಷ್ಟಿ ಹೀಗೆ ಬ್ರಹ್ಮದೇವನಿಂದ ಪ್ರವರ್ತಿತವಾದ ಚಕ್ರ ನಡೆಯಲು ಅವಕಾಶವಿರುತ್ತದೆ. ಪಾರಿಜಾತದಿಂದಾಗಿ ಇದಾವುದೂ ನಡೆಯಲಾರದು.

ನ ಬುಭುಕ್ಷಾ ಪಿಪಾಸಾ ವಾ ಬಾಧತೇ ಯದಿ ಮಾನುಷಾನ್ ।
ರೋಗೋ ಜರಾ ವಾ ಮೃತ್ಯುರ್ವಾ ಧರ್ಮಜ್ಞಾರತಿರೇವ ಚ ॥ 42 ॥

ದೌರ್ಗಂಧ್ಯಂ ವಾ ಸುಘೋರಾ ವ ಈತಯಃ ಕರ್ಮಸಂಭವಾಃ
ಕಿಮುದ್ಯೋಗಂ ಕರಿಷ್ಯಂತಿ ಪಾರಿಜಾತ ಗುಣಾನ್ವಿತಾಃ ॥ 43 ॥

ಧರ್ಮಜ್ಞ ನಾರದರೇ! ಪಾರಿಜಾತದ ಗುಣಲಾಭವನ್ನು ಪಡೆದ ಮಾನವರಿಗೆ ಹಸಿವು, ಬಾಯಾರಿಕೆವುಂಟಾಗದು. ರೋಗರುಜಿನ ಬಾದಿಸವು, ವೃದ್ಧಾಪ್ಯವಾಗಲಿ, ಮೃತ್ಯುವಾಗಲಿ, ಅಸಂತೋಷವಾಗಲಿ, ದುಃಖಶೋಕ– ಗಳಾಗಲೀ ಇರುವುದಿಲ್ಲ.

ಶರೀರದಲ್ಲಿ ದುರ್ಗಂಧ ಇರುವುದಿಲ್ಲ. ಆಧ್ಯಾತ್ಮಿಕ, ಆದಿದೈವಿಕ ಆದಿಭೌತಿಕ

ತಾಪತ್ರಯ ರಹಿತರಾಗುವರು. ಪಾರಿಜಾತದ ಪ್ರಾಪ್ತಿಯಿಂದಾಗಿ ಬಹುಲಾಭ ಪಡೆದ ಮಾನವರು ಧರ್ಮ ಕರ್ಮಗಳಿಂದ ದೂರವಾಗುವರು.

**ಸರ್ವಥಾ ನಯನಂ ತತ್ರ ಪಾರಿಜಾತಸ್ಯ ನ ಕ್ಷಮಮ್ ।**
**ಇತಿ ವಾಚ್ಯಸ್ತ್ವಯಾ ವಿಪ್ರ ವಿಷ್ಣುರಕ್ಲಿಷ್ಟಕರ್ಮಕೃತ್ ॥ 44 ॥**
**ಹಾರಶ್ಚ ಮಣಯಶ್ಚೈವ ಚಂದನಾನ್ಯಗರೂಣಿ ಚ ।**
**ವಸ್ತ್ರಾಣಿ ಚ ವಿಚಿತ್ರಾಣಿ ವಧ್ವಾಸ್ತ್ವಂ ದ್ವಾರಕಾಂ ನಯ ॥ 45 ॥**

ಇವೆಲ್ಲ ದುಷ್ಪರಿಣಾಮದಿಂದಾಗಿ ಪಾರಿಜಾತವನ್ನು ಭೂಲೋಕಕ್ಕೆ ತೆಗೆದುಕೊಂಡು ಹೋಗುವುದು ಉಚಿತವಲ್ಲವೆಂದು ನನ್ನಣ್ಣನಿಗೆ ಮನವೊಲಿಸಿ ಹೇಳು.

ನಾರದರೇ! ನೀವು ನನ್ನ ಹಿತೈಷಿಗಳಾಗಿರುವಿರಿ ನಾನು ಹೇಳಿದ ಇವೆಲ್ಲವನ್ನು ವಿಚಾರ ಮಾಡಿ, ನನ್ನ ತಮ್ಮನು ಯಾವ ರೀತಿಯಲ್ಲಿ ಸಂತೋಷಿಸುವನೋ ಆ ರೀತಿಯಲ್ಲಿ ನನ್ನ ಸಂದೇಶ ಅರುಹಿರಿ.

ನಾನು ಹೇಳಿದ ಮಾತುಗಳು ಯುಕ್ತಿಯುಕ್ತವಾಗಿವೆಯೆಂದು ಅವನೂ ಭಾವಿಸುವಂತೆ ವ್ಯವಹರಿಸಿರಿ.

ನಾರದರೇ! ನೀವು ನನ್ನ ಸೊಸೆಯಾದ ಸತ್ಯಭಾಮೆಗೆ ಇಲ್ಲಿಂದಲೇ ನವರತ್ನಹಾರಗಳನ್ನು, ವಜ್ರವೈಡೂರ್ಯಮಣಿಗಳನ್ನು, ಚಂದನ, ಅಗರು ಮೊದಲಾದ ಸುವಾಸಿತ ದ್ರವ್ಯಗಳನ್ನೂ ಚಿತ್ರವಿಚಿತ್ರ ವಸ್ತ್ರಗಳನ್ನೂ ದ್ವಾರಕೆಗೆ ತೆಗೆದುಕೊಂಡು ಹೋಗಿರಿ.

ಇವಲ್ಲದೆ ಮನುಷ್ಯರ ಉಪಭೋಗಕ್ಕೆ ಯಾವ ಯಾವ ವಸ್ತುಗಳು ಅವಶ್ಯವಾಗಿರುವುವೋ ಅವೆಲ್ಲವನ್ನೂ ಯಥೇಚ್ಛವಾಗಿ ಕೇಶವನು ಕೊಂಡು ಹೋಗಲಿ. ಆದರೆ ಪಾರಿಜಾತವನ್ನು ಒಯ್ಯುವುದನ್ನು ಮಾತ್ರ ಕೈಬಿಡುವಂತೆ ತಿಳಿಸಿರಿ.

**ದದಾಮಿ ರತ್ನಾನಿ ಯಥೇಪ್ಸಿತಾನ್ಯಹಂ ಬಹೂನಿ ಚಿತ್ರಾಣಿ ವಿಭೂಷಣಾನಿ ಚ ।**
**ನ ಪಾರಿಜಾತಂ ಚ ಕಥಂಚ ನ ದ್ರುಮಂ ಮುನೇ! ಪ್ರದಾಸ್ಯಾಮಿ ದಿವೌಕಸಾಂ ಪ್ರಿಯಮ್ ॥ 46 ॥**

ನಾರದಮುನಿಗಳೇ! ಶ್ರೀಕೃಷ್ಣನು ಮೆಚ್ಚುವುದಾದರೆ ಅವನ ಅಪೇಕ್ಷೆಯಂತೆ ಬಹುವಾದ ರತ್ನಗಳನ್ನೂ ಚಿತ್ರವಿಚಿತ್ರ ಆಭರಣಗಳನ್ನೂ ನೀಡುವೆನು. ಆದರೆ ಸ್ವರ್ಗೀಯ ದೇವತೆಗಳಿಗೆ ಅತ್ಯಂತ ಪ್ರಿಯವಾದ ಪಾರಿಜಾತವೃಕ್ಷವನ್ನು ಮಾತ್ರ ನಾನು ಯಾವುದೇ ಕಾರಣವಿದ್ದರೂ ನೀಡಲಾರೆನೆಂಬುದು ನಿಶ್ಚಿತ.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಇಂದ್ರನ ಪ್ರತಿ ಸಂದೇಶದಲ್ಲಿ ಪಾರಿಜಾತ ನೀಡಲಾರನೆಂಬಲ್ಲಿ
ಅರವತ್ತೊಂಬತ್ತನೆಯ ಅಧ್ಯಾಯ ಸಮಾಪ್ತಿ

# ಅಥ ಸಪ್ತತಿತಮೋಽಧ್ಯಾಯಃ

*ಶ್ರೀಕೃಷ್ಣನ ಇಂದ್ರನ ಮೇಲಿನ ಕೋಪ– ಗದಾಪ್ರಹಾರ ಮಾಡುವ ಬೆದರಿಕೆ – ಇಂದ್ರನ ಕೋಪ – ಯುದ್ಧೋದ್ಯೋಗ*

*ವೈಶಂಪಾಯನ ಉವಾಚ –*

**ದೇವರಾಜವಚಃ ಶ್ರುತ್ವಾ ನಾರದಃ ಕುರುನಂದನ ।**
**ಪ್ರೋವಾಚ ವಾಕ್ಯಂ ವಾಕ್ಯಜ್ಞೋ ಧರ್ಮಾತ್ಮಾ ಧರ್ಮವಿತ್ತಮಃ ॥ 1 ॥**

ಜನಮೇಜಯನೇ ಕೇಳು ! ಇಂದ್ರದೇವನ ಮಾತನ್ನು ಕೇಳಿದ ವಾಕ್ಯವನ್ನಾಡುವ ಕಲೆಯಲ್ಲಿ ನಿಪುಣರಾದ ನಾರದರು ಇಂದ್ರದೇವನಿಗೆ ಹೀಗೆಂದರು.

**ಅವಶ್ಯಮೇವ ವಕ್ತವ್ಯಂ ಹಿತಂ ಬಲ ನಿಷೂದನ ।**
**ಮಯಾ ತವ ಮಹಾಬಾಹೋ ಬಹುಮಾನೋಽಸ್ತಿ ಮೇ ತ್ವಯಿ ॥ 2 ॥**

**ಉಕ್ತೋ ಮಯಾ ವಾಸುದೇವೋ ಜಾನತಾ ಭವತೋ ಮತಂ ।**
**ನದತ್ತಃ ಪಾರಿಜಾತೋಽಯಂ ಹರಸ್ಯಾಪಿ ತ್ವಯಾ ಪುರಾ ॥ 3 ॥**

**ಹೇತವಶ್ಚ ಮಯಾ ತಸ್ಯ ದರ್ಶಿತಾಸ್ತೇ ಸಮಾಸತಃ ।**
**ನ ಚಾವಗತವಾನ್ ದೇವಃ ಸತ್ಯಮೇತದ್ ಬ್ರವೀಮಿ ತೇ ॥ 4 ॥**

ಮಹೇಂದ್ರನೇ ! ನನಗೆ ನಿನ್ನ ಮೇಲೆ ವಿಶೇಷ ಅಭಿಮಾನವಿದೆ. ಅದರಿಂದಾಗಿ ಹಿತೈಷಿಯಾದ ನಾನು ನಿನಗೆ ಹಿತವಾದದ್ದನ್ನು ಹೇಳುತ್ತೇನೆ ಕೇಳು.

ಬಲಸೂದನನೇ! ನನಗೆ ನಿನ್ನ ಅಭಿಪ್ರಾಯವೇನೆಂದು ತಿಳಿದಿರುವುದು, ನೀನು

ರುದ್ರದೇವನಿಗೂ ಪಾರಿಜಾತವನ್ನು ನೀಡಿಲ್ಲ. ಇದು ಯಾಕೆಂದು ನನಗೆ ತಿಳಿದಿದೆ. ಈ ಅಂಶವನ್ನು ಶ್ರೀಕೃಷ್ಣನಿಗೆ ಕಾರಣಸಹಿತವಾಗಿಯೇ ತಿಳಿಸಿದೆನು.

ಶ್ರೀಕೃಷ್ಣನು ಇದಾವುದನ್ನೂ ಕೇಳಲಿಲ್ಲ. ಇದು ಸತ್ಯವಾದ ಸಂಗತಿ. ನಾನು ಏನೇ ಹೇಳಿದರೂ ಶ್ರೀಕೃಷ್ಣನು ಕೊಡುತ್ತಿದ್ದ ಉತ್ತರ ಇದೊಂದೆ. ಅದೇನೆಂದರೆ,

**ಉಪೇಂದ್ರೋಽಹಂ ಮಹೇಂದ್ರೇಣ ಲಾಲನೀಯಃ ಸದೇತಿ ಮಾಮ್ ।**
**ಉವಾಚ ಪುಂಡರೀಕಾಕ್ಷೋ ದತ್ತಮುತ್ತರಮೇವ ಚ ॥ 5 ॥**

ದೇವೇಂದ್ರನು ಇಂದ್ರನಾದರೆ, ನಾನಾದರೂ ಉಪೇಂದ್ರನಾಗಿರುವೆನು. ಆದ್ದರಿಂದ ಅಣ್ಣನಾದ ಇಂದ್ರನು, ತಮ್ಮನಾದ ನನ್ನನ್ನು ಲಾಲನೆ ಪೋಷಣೆ ಮಾಡುವುದು ಅವನ ಕರ್ತವ್ಯ.

**ಪುನಃ ಪುನರ್ಮಯಾ ವಾಸ್ಯ ಹೇತವೋ ದೇವ ದರ್ಶಿತಾಃ ।**
**ತತೋ ನ ಬುದ್ಧಿರ್ವ್ಯಾವೃತ್ತಾ ವೃತ್ರನಾಶನ ತಸ್ಯ ವೈ ॥ 6 ॥**

ವೃತ್ರಾರಿಯೇ, ನಾನು ಶ್ರೀಕೃಷ್ಣನಿಗೆ ನೀನು ಪಾರಿಜಾತ ವೃಕ್ಷವನ್ನು ಕೊಡದಿರಲು ಅನೇಕ ಕಾರಣಗಳನ್ನು ಹೇಳುತ್ತಿದ್ದರೂ ಅವನು ತನ್ನ ಮನಸ್ಸನ್ನು ಬದಲಾಯಿಸಿಕೊಳ್ಳದೆ, ಕೋಪಗೊಂಡ ಅವನು ಹೀಗೆಂದನು.

**ನ ದೇವಗಂಧರ್ವ ಗಣಾ ನ ರಾಕ್ಷಸಾಃ ನ ಚಾಸುರಾ ನೈವ ಚ ಯಕ್ಷಪನ್ನಗಾಃ।**
**ಮಮ ಪ್ರತಿಜ್ಞಾಮಪಹಂತು ಮುದ್ಯತಾ ಮುನೇ ಸಮರ್ಥಾ ಖಲು ಭದ್ರಮಸ್ತು ತೇ ॥ 7 ॥**

**ಸ ಪಾರಿಜಾತಂ ಯದಿ ನ ಪ್ರದಾಸ್ಯತಿ ಪ್ರಯಾಚ್ಯಮಾನೋ ಭವತಾಮರೇಶ್ವರಃ।**
**ತತಃ ಶಚೀವ್ಯಾಮೃದಿತಾನುಲೇಪನೇ ಗದಾಂ ವಿಮೋಕ್ಷ್ಯಾಮಿ ಪುರಂದರೋರಸಿ ॥ 8 ॥**

ನಾರದರೇ ! ಕೇಳಿರಿ, ನಿಮಗೆ ಭದ್ರವಾಗಲಿ, ನಾನು ಮಾಡಿರುವ ಪ್ರತಿಜ್ಞೆಯನ್ನು ಭಂಗಗೊಳಿಸಲು ದೇವ ಗಂಧರ್ವರಾಗಲೀ, ಯಕ್ಷ-ರಾಕ್ಷಸ -ಪನ್ನಗ- ಅಸುರರಾಗಲೀ - ಸಮರ್ಥರಾಗುವುದಿಲ್ಲ. ಇದು ಖಂಡಿತ.

ನನ್ನ ಪರವಾಗಿ ತಾವು ದೇವೇಂದ್ರನಲ್ಲಿ ಯಾಚಿಸಿದರೂ ದೇವೇಂದ್ರನು ಪಾರಿಜಾತ ವೃಕ್ಷವನ್ನು ಕೊಡದೇ ಹೋದಲ್ಲಿ - ಶಚೀದೇವಿಯ

ಆಲಿಂಗನದಿಂದ ಕದಡಿ ಹೋದ ಗಂಧಾದಿ ಲೇಪನವುಳ್ಳ ಇಂದ್ರದೇವನ ವಕ್ಷಃಸ್ಥಳವನ್ನು ನನ್ನ ಕೌಮೋದಿಕೀ ಗದೆಯಿಂದ ಅಪ್ಪಳಿಸುತ್ತೇನೆ.

ಮಹೇಂದ್ರನೇ ಇದು ನಿನ್ನ ತಮ್ಮನಾದ ಉಪೇಂದ್ರನ ಕಡೆಯ ನಿಶ್ಚಯವಾಗಿದೆ.

ಹೀಗಿರುವಾಗ ನೀನು ಯಾವುದು ನಿನಗೆ ಉಚಿತವೆಂದು ಭಾವಿಸುವೆಯೋ ಅದನ್ನು ಮಾಡು ಎಂದು ಹೇಳಿದರು.

ಆದರೂ ನಿನಗೆ ತತ್ತ್ವವೂ ಹಾಗೂ ಹಿತವೂ ಆಗಿರುವ ಮಾತನ್ನು ಹೇಳುವೆ ಕೇಳು.

**ತತ್ತ್ವಂ ಹಿತಂ ಚ ದೇವೇಶ ಶ್ರೂಯತಾಂ ವದತೋ ಮಮ ।**
**ನಯನಂ ಪಾರಿಜಾತಸ್ಯ ದ್ವಾರಕಾಂ ಮಮ ರೋಚತೇ ॥ 9 ॥**

ಇಂದ್ರನೇ! ಪಾರಿಜಾತವೃಕ್ಷವನ್ನು ದ್ವಾರಕೆಗೆ ಕಳುಹಿಸುವುದು ಉಚಿತವೆಂದೆ ನನ್ನ ಅನಿಸಿಕೆ.

ಜನಮೇಜಯ! ನಾರದರು ಸ್ಪಷ್ಟವಾಗಿ ಹೀಗೆ ಹೇಳಿದರೂ, ಸಹಸ್ರಾಕ್ಷನು ಕೋಪೋದ್ರಿಕ್ತನಾಗಿ ಹೀಗೆಂದನು.

**ಅನಾಗಸಿ ಮಯಿ ಜ್ಯೇಷ್ಠೇ ಸೋದರೇ ಯದಿ ಕೇಶವಃ ।**
**ಏವಂ ಪ್ರವೃತ್ತಃ ಕಿಂ ಶಕ್ಯಂ ಕರ್ತುಮದ್ಯ ತಪೋಧನ ॥ 10 ॥**
**ಬಹೂನಿ ಪ್ರತಿಲೋಮಾನಿ ಪುರಾ ಸ ಕೃತವಾನ್ ಮಯಿ ।**
**ಕೃಷ್ಣೋ ನಾರದ ಸೋಢಾನಿ ಭ್ರಾತೇತಿ ಸರ್ವಂ ಮಯಾ ಸದಾ ॥ 11 ॥**

ಶ್ರೀಕೃಷ್ಣನು ಈ ಹಿಂದೆಯೂ ಬಹುಬಾರಿ ಯಾವ ತಪ್ಪನ್ನೂ ಮಾಡದಿರುವ ಜ್ಯೇಷ್ಠನಾದ ನನ್ನಲ್ಲಿ ಅಪಕಾರಗಳನ್ನೇ ಮಾಡಿರುವನು. ಅವೆಲ್ಲವನ್ನೂ ನಾನು ಸೋದರನೆಂಬ ಕಾರಣದಿಂದ ಸಹಿಸಿಕೊಂಡೇ ಬಂದಿರುವೆನು.

ಅವನು ಮಾಡಿದ ಅಪಚಾರವನ್ನು ಹೇಳುವೆ ಕೇಳಿರಿ.

**ಖಾಂಡವೇ ಚಾರ್ಜುನರಥಂ ಪುರಾ ವಾಹಯತಾ ಸತಾ ।**
**ಮದೀಯಾ ವಾರಿತಾ ಮೇಘಾಃ ಶಮಯಂತೋಽಗ್ನಿಮುದ್ಧತಮ್ ॥ 12 ॥**
**ಗೋವರ್ಧನಂ ಧಾರಯತಾ ವಿಪ್ರಿಯಂ ಚ ಕೃತಂ ಮಮ ।**
**ತಥಾ ವೃತ್ರವಧೇ ಪ್ರಾಪ್ತೇ ಸಾಹಾಯ್ಯಾರ್ಥಂ ವೃತೋ ಮಯಾ ॥ 13 ॥**

**ಸಮೋಽಹಮಿತಿ ಸರ್ವೇಷಾಂ ಭೂತಾನಾಮಿತಿ ಚೋಕ್ತವಾನ್ ॥ 14 ॥**

ಖಾಂಡವ ವನ ದಹನ ಕಾಲದಲ್ಲಿ ಅರ್ಜುನನ ಸಾರಥಿಯಾಗಿ ಶ್ರೀಕೃಷ್ಣನು ಬಂದಿದ್ದನು. ಅಗ್ನಿದೇವನು ಅರ್ಜುನ ಹಾಗೂ ಶ್ರೀಕೃಷ್ಣರ ಬೆಂಬಲದಿಂದಾಗಿ ಆ ವನವನ್ನು ಭಕ್ಷಿಸಲು ಪ್ರಾರಂಭಿಸಿದ್ದನು. ಖಾಂಡವ ವನವನ್ನು ರಕ್ಷಿಸಲೆಂದು ನಾನು ಬೆಂಕಿ ಆರಿಸಲು ಮಹಾಮೇಘಗಳನ್ನು ಕಳುಹಿಸಿದೆನು.

ನಾನು ಕಳುಹಿಸಿದ್ದ ಮೇಘಗಳನ್ನು ಅರ್ಜುನನ ಸಹಾಯದಿಂದ ದೂರ ಓಡಿಸಿದ.

ಹಾಗೆಯೇ ಗೋವರ್ಧನ ಪರ್ವತ ಎತ್ತುವಾಗಲೂ ನನಗೆ ದ್ರೋಹ ಬಗೆದಿರುವನು.

ವೃತ್ರಾಸುರನನ್ನು ನಾನು ಕೊಲ್ಲಲ್ಯುದ್ಯುಕ್ತನಾದಾಗ ನಾನು ಉಪೇಂದ್ರನ ಸಹಾಯವನ್ನು ಬೇಡಿದೆನು. ಆದರೆ ಅವನು ಏನು ಹೇಳಿದ ಗೊತ್ತೆ? ನಾನು ಸಮಸ್ತ ಪ್ರಾಣಿಗಳಲ್ಲಿಯೂ ಸಮಭಾವದಿಂದ ಇರುತ್ತೇನೆ. ಇಂದ್ರನಲ್ಲಾಗಲೀ, ವೃತ್ರನಲ್ಲಾಗಲೀ ರಾಗ–ದ್ವೇಷಗಳಿಲ್ಲ ಎಂದಿರುವನು.

ಆ ಸಮಯದಲ್ಲಿ ನಾನಾದರೂ ನನ್ನ ಭುಜಬಲ ಪರಾಕ್ರಮದಿಂದಲೇ ವೃತ್ರಾಸುರನನ್ನು ಕೊಂದು ಹಾಕಿದನು.

*ನಾರದರೇ!*

**ದೇವಾಸುರೇಷು ಪ್ರಾಪ್ತೇಷು ಸಂಗ್ರಾಮೇಷು ಚ ನಾರದ ।**
**ಯುದ್ಧಸ್ಯಾತ್ಮೇಚ್ಛಯಾ ಕೃಷ್ಣೋ ಮುನೇ ಸುವಿದಿತಂ ಮಯಾ ॥ 15 ॥**
**ಬಹುನಾತ್ರ ಕಿಮುಕ್ತೇನ ತಸ್ಮಾದ್ ದಿಷ್ಟ್ಯಾ ಪ್ರವರ್ತತಾಮ್ ।**
**ಜ್ಞಾತಿಭೇದೋ ನ ನಃ ಕಾರ್ಯ ಸಾಕ್ಷೀ ತ್ವಂ ಮಮ ನಾರದ ॥ 16 ॥**

ನಾರದರೇ ! ದೇವಾಸುರ ಸಂಗ್ರಾಮದಲ್ಲಿ ಆ ವಿಷ್ಣುವಿಗೆ ಮನಸ್ಸು ಬಂದರೆ ನಮ್ಮ ಪಕ್ಷವಹಿಸಿ ಯುದ್ಧ ಮಾಡುವನು. ಮನಸ್ಸಿಲ್ಲವಾದರೆ ಯುದ್ಧಕ್ಕೆ ಬರುವುದೇ ಇಲ್ಲ. ಹೆಚ್ಚು ಹೇಳುವುದೇನಿದೆ!

ಒಂದು ವೇಳೆ ನನಗೂ, ನನ್ನ ತಮ್ಮನಿಗೂ ಪಾರಿಜಾತಕ್ಕಾಗಿ ಯುದ್ಧ ವಿಧಿ ನಿಯಮವಿರುವುದಾದರೆ ಅದನ್ನು ತಪ್ಪಿಸುವವರಾರು? ಆದರೆ ಅಣ್ಣ–ತಮ್ಮಂದಿರಲ್ಲಿ ಯುದ್ಧವಾಗುವುದಂತೂ ನನಗೆ ಸ್ವಲ್ಪವೂ ಇಷ್ಟವಿಲ್ಲ. ಇದಕ್ಕೆಲ್ಲ ನೀನೇ ಸಾಕ್ಷಿಯಾಗಿರುವಿ.

ಉಪೇಂದ್ರನು ನನ್ನ ಮೇಲೆ ಗದಾಪ್ರಹಾರ ಮಾಡುವೆನೆಂದನಷ್ಟೆ. ಗದಾಪ್ರಹಾರ ನನ್ನ ಮೇಲೆ ಮಾಡಲಿ. ಈ ಮಧ್ಯದಲ್ಲಿ ಪೌಲೋಮಿಯಾದ ಶಚಿಯ ವಿಷಯ ಪ್ರಸ್ತಾಪವೇಕೆ ಬೇಕು?

**ಉದವಾಸಗತೋ ಧೀಮಾನ್ ಪಿತಾ ನಃ ಕಶ್ಯಪಃ ಪ್ರಭುಃ ।**
**ಅದಿತ್ಯಾ ಸಹ ಮೇ ಮಾತ್ರಾ ತಯೋರ್ವಾಕ್ಯಮಿದಂ ಭವೇತ್ ॥ 17 ॥**

**ಅಜಿತಾತ್ಮಾ ಮಮ ಭ್ರಾತಾ ರಜಸಾ ತಮಸಾ ವೃತಃ ।**
**ಕಾಮೇನ ಚ ಸ್ತ್ರಿಯೋ ವಾಕ್ಯಾದೇವಂ ಮಾಮುಕ್ತವಾನ್ ಗುರುಮ್॥ 18 ॥**

ನನ್ನ ತಂದೆ ತಾಯಿಗಳಾದ ಕಶ್ಯಪ-ಅದಿತಿಯರು ಪ್ರಸ್ತುತ ಈಗ ನೀರಿನಲ್ಲಿದ್ದು ತಪಸ್ಸನ್ನಾಚರಿಸಲು ಅನ್ಯತ್ರ ಹೋಗಿರುವನು. ನಾನು ದಾರಿತಪ್ಪಿದಾಗ ನನ್ನ ತಂದೆ ತಾಯಿಯರು ತಿದ್ದಲು ಅರ್ಹರಾಗಿರುವರು. ಅಂತಹ ಅಧಿಕಾರ ಅವರಿಗಿದೆ. ಆದರೆ ಗುರುವಿನಂತಿರುವ ನನ್ನ ಮೇಲೆ ತಮ್ಮನಿಗೆ ಈ ಅಧಿಕಾರವಿರುವುದಿಲ್ಲ. ನನ್ನ ತಮ್ಮನಾದರೂ ಸಾತ್ವಿಕಗುಣೋಪೇತನಲ್ಲ. ಅವನು ರಜೋಗುಣ ತಮೋಗುಣಗಳಂದ ಆವೃತನಾಗಿದ್ದಾನೆ. ಅವನಿಗೆ ಅವರ ಮನಸ್ಸು ನಿಯಂತ್ರಣದಲ್ಲಿಲ್ಲ. ಹೀಗಾಗಿ ಕಾಮ ವಶನಾಗಿ ಒಬ್ಬ ಸ್ತ್ರೀಯ ಮಾತನ್ನು ನಡೆಸಲು ಈ ದುರಂತ ಕಾರ್ಯಕ್ಕೆ ಕೈ ಹಾಕಿರುವನು.

**ಧಿಕ್ ಸ್ತ್ರಿಯಃ ಸರ್ವಥಾ ವಿಪ್ರ! ಧಿಗ್ ರಾಜಸಮಿತಿಂ ತಥಾ ।**
**ಯತ್ರಾಧಿಕ್ಷಿಪ್ತವಾನ್ ವಿಷ್ಣುಃ ಏವಂ ಮಾಂ ಸ್ತ್ರೀಜಿತೋ ದ್ವಿಜ ॥ 19 ॥**

ವಿಪ್ರನೇ ! ರಾಜರ ಸಭೆಯಲ್ಲಿ ಹಾಗೂ ಸ್ತ್ರೀಯರ ಮುಂದೇನೆ ಸ್ತ್ರೀಜಿತನಾದ ಶ್ರೀಕೃಷ್ಣನು ನನ್ನನ್ನು ನಿಂದಿಸಿರುವನಲ್ಲವೆ? ಇಂತಹ ಸ್ತ್ರೀಜಾತಿಗೂ ಹಾಗೂ ಇದನ್ನು ಅನುಮೋದಿಸಿದ ರಾಜಸಭೆಗೂ ಧಿಕ್ಕಾರವಿರಲಿ.

**ನ ದೃಷ್ಟಂ ಕಾಶ್ಯಪಕುಲೇ ವ್ಯಪದೇಶ್ಯಂ ಮಹಾಮುನೇ ।**
**ನೈವ ದಕ್ಷಕುಲೇ ದೃಷ್ಟಂ ಮಾತುರ್ಮೇ ಯತ್ರ ಸಂಭವಃ ॥ 20 ॥**

**ನ ಜ್ಯೇಷ್ಠತಾ ನ ರಾಜತ್ವಂ ದೇವಾನಾಂ ಪ್ರತಿಮಾನಿತಮ್ ।**
**ಕಾಮರಾಗಾಭಿಭೂತೇನ ಕೃಷ್ಣೇನ ಖಲು ನಾರದ ॥ 21 ॥**

ಮಹಾಮುನಿ ನಾರದರೇ! ನನ್ನ ತಂದೆಯ ಕುಲದಲ್ಲಾಗಲೀ ನನ್ನ ತಾಯಿಯ ಕುಲದಲ್ಲಾಗಲೀ ಇದುವರೆಗೂ ಯಾವುದೇ ಇಂತಹ ನಿಂದನೀಯ ಕಾರ್ಯ ನಡೆದಿರುವುದಿಲ್ಲ.

ನಾರದರೇ ! ಕಾಮ ರಾಗಗಳಿಂದ ಯುಕ್ತನಾದ ಕೃಷ್ಣನು ನಾನು ಅವನಿಗಿಂತಲೂ ಜ್ಯೇಷ್ಠನೆಂದಾಗಲೀ ಸಮಸ್ತ ದೇವತೆಗಳಿಗೆ ರಾಜನೆಂದಾಗಲೀ ಪರಿಗಣಿಸುತ್ತಿಲ್ಲ.

**ಪುತ್ರದಾರ ಸಹಸ್ರೈಃ ಹಿ ಭ್ರಾತಾನಘ ವಿಶಿಷ್ಯತೇ ।**
**ಸದ್‌ವೃತ್ತೋ ಜ್ಞಾನಸಂಪನ್ನ ಇತಿ ಬ್ರಹ್ಮಾ ಪುರಾಬ್ರವೀತ್ ॥ 22 ॥**

ದೋಷರಹಿತ ನಾರದರೇ! ಸದಾಚಾರಿಯೂ ಜ್ಞಾನಸಂಪನ್ನನೂ ಆದ ಜ್ಯೇಷ್ಠ ಭ್ರಾತ್ರನು ಸಾವಿರ ಪುತ್ರರಿಗಿಂತಲೂ, ಸಾವಿರ ಪತ್ನಿಯರಿಗಿಂತಲೂ ಅಧಿಕನೆಂದು ಬ್ರಹ್ಮದೇವನೇ ಹೇಳಿರುವನು.

**ನಾಸ್ತಿ ಭ್ರಾತೃಸಮೋ ಬಂಧುರಾಹಾರ್ಯ ಇತರೋ ಜನಃ ।**
**ಇತಿ ಮಾಮಬ್ರವೀನ್ ಮಾತಾ ಪಿತಾ ಚೈವ ಪ್ರಜಾಪತಿಃ ॥ 23 ॥**

ಅಣ್ಣನಿಗೆ ಸದೃಶನಾದ ಬಂಧುವೆ ಇಲ್ಲ. ಇತರ ಬಂಧುಗಳೆಲ್ಲರೂ ಕೇವಲ ಭೋಜನಾದಿಗಳನ್ನು ಮಾಡಿ ಹೋಗುವವರು. ಈ ವಿಷಯವನ್ನು ನನ್ನ ತಾಯಿ ಅದಿತಿ ಹಾಗೂ ತಂದೆ ಕಶ್ಯಪರೂ ಹೇಳಿರುವರು.

ಕಶ್ಯಪರು - ಸಹೋದರರಲ್ಲಿ ವಿಶೇಷವಾದ ಬಂಧುತ್ವವಿರುವುದು. ಆದ್ದರಿಂದ ಅವರೊಂದಿಗೆ ವಿಶೇಷ ಪ್ರೀತಿ ಮಾಡಬೇಕು. ದೈತ್ಯರು, ದಾನವರೂ ನನ್ನ ಸಹೋದರರೇ ಆದರೂ ದೃಪ್ತರೂ ಪಾಪನಿಶ್ಚಿತರೂ ಆಗಿರುವುದರಿಂದ ಯಾವಾಗಲೂ ಅವರು ನನ್ನನ್ನು ದ್ವೇಷಿಸುತ್ತಿರುವರು.

ನಾರದರೇ ! ನಾನು ಆತ್ಮಪ್ರಶಂಸೆ ಮಾಡಿಕೊಳ್ಳುತ್ತಿರುವೆನೆಂದು ತಿಳಿಯ-ಬಾರದು. ಆದರೂ ಕೆಲವು ಕಾಲದಲ್ಲಿ ಆತ್ಮಪ್ರಶಂಸೆ ಮಾಡಿಕೊಳ್ಳಬೇಕಾಗುತ್ತದೆ. ಅದಕ್ಕಾಗಿ ಈ ಮಾತುಗಳನ್ನು ಹೇಳುತ್ತಿರುವೆ.

ಧನುರ್ಜ್ಯಾಯಾಂ ಮುನಿಶ್ರೇಷ್ಠಂ ಛಿನ್ನಾಯಾಂ ಹಿ ಪುರಾನಘ ।
ಧನ್ವೀಭಿ ರಮರಾಣಾಂ ಚ ವರದಾನಾನ್ ಮಹಾಮತೇ ॥ 24 ॥

ಉತ್ಕೃತ್ತ ಶಿರಸೋ ವಿಷ್ಣೋಃ ಪುರಾ ದೇಹೋ ಧೃತೋಮಯಾ ।
ಸಂಧಿತಂ ಚ ಶಿರೋ ಯತ್ನಾತ್ ಛಿನ್ನಂ ರೌದ್ರೇಣ ತೇಜಸಾ ॥ 25 ॥

ಅಹಂ ವಿಶಿಷ್ಟೋದೇವನಾ ಮಿತ್ಯುಕ್ತ್ವಾ ಪುನರಚ್ಯುತಃ ।
ಧನುರಾರೋಪ್ಯ ದರ್ಪೇಣ ಸ್ಥಿತೋ ನಾರದ ಕೇಶವಃ ॥ 26 ॥

ಒಂದು ಬಾರಿ ಹಯಗ್ರೀವಾಸುರನ ಉಪಟಳದಿಂದಾಗಿ ಖತಿಗೊಂಡ ದೇವತೆಗಳು ವಿಷ್ಣುವಿನ ಬಳಿಗೆ ಬಂದರು. ವಿಷ್ಣುವು ನಿದ್ರಾ ನಾಟಕದಲ್ಲಿದ್ದ. ಅವನನ್ನು ಎಬ್ಬಿಸಲೆಂದು ದೇವತೆಗಳು ಪ್ರಯತ್ನಿಸಿದರು. ವಿಷ್ಣುವು ತನ್ನ ಶಾರ್ಙ್ಗವೆಂಬ ಧನಸ್ಸನ್ನು ತಲೆದಿಂಬಾಗಿಟ್ಟುಕೊಂಡು ಮಲಗಿದ್ದನು. ದೇವತೆಗಳು ಗೆದ್ದಲನ್ನು ಸೃಷ್ಟಿಸಿ ಬುಡ ಕತ್ತರಿಸಲು ಹೇಳಿದರು. ಗೆದ್ದಲು ಬುಡವನ್ನು ತಿಂದಿತು. ಬಿಲ್ಲಿಗೆ ಬಿಗಿದಿದ್ದ ಹೆದೆ ಸಡಿಲವಾಯಿತು. ಬಿಲ್ಲಿನ ತುದಿ ಸಿಡಿದು ಕುತ್ತಿಗೆ ಹಾರಿತು. ಚಿಂತಾಕ್ರಾಂತರಾದರು ದೇವತೆಗಳು. ಲಕ್ಷ್ಮೀದೇವಿಯ ಆದೇಶದಂತೆ ಕುದುರೆಯ ಕುತ್ತಿಗೆ ಜೋಡಿಸಿದರು. ವಿಷ್ಣುವಿನ ಮುಂಡವನ್ನು (ಮಂಡೆಯನ್ನು) ಜೋಡಿಸುವ ಕಾರ್ಯದಲ್ಲಿ ನಾನೇ ಪ್ರಧಾನಪಾತ್ರ ವಹಿಸಿರುವನು. ನಾನು ಮುಂಡವನ್ನು ಜೋಡಿಸಿದ ಕೂಡಲೇ ವಿಷ್ಣುವು ಎದ್ದು ನಿಂತ ವಿಷ್ಣುವು ದರ್ಪದಿಂದ ಧನಸ್ಸನೆತ್ತಿಕೊಂಡು "ದೇವತೆಗಳೆಲ್ಲರಿಗೂ ನಾನೇ ವಿಶಿಷ್ಟನಾದ-ವನೆಂದು ಘೋಷಿಸಿದ."

ಈ ಸಮಯದಲ್ಲಿ ನಾನು ನನ್ನ ತಂದೆ ತಾಯಿಗಳು ನನ್ನನ್ನು ನಿಂದಿಸಿಯಾರು ಹಾಗೂ ಆಕ್ಷೇಪಿಸಬಹುದು ಎಂದು ಅವನ ಮೇಲಿನ ಪ್ರೀತಿಯಿಂದಲೇ ಅವನ ತಲೆಯನ್ನು ಕುತ್ತಿಗೆಗೆ ಜೋಡಿಸಿದೆನು.

ಇಷ್ಟೆ ಅಲ್ಲದೆ – ಚಾತುರ್ಮಾಸ್ಯ ಕಾಲದಲ್ಲಿ ವಿಷ್ಣುವು ನಿದ್ರಿಸಿರುತ್ತಾನೆ. ಆಗ ಯಜ್ಞಾದಿಗಳಲ್ಲಿ ನೀಡಿದ ಹವ್ಯಕವ್ಯಗಳೆಲ್ಲವು ನನಗೆ ಬಂದು ಸೇರುತ್ತವೆ. ಅವೆಲ್ಲವನ್ನೂ ವಿಷ್ಣುವಿಗೆ ಅರ್ಪಿಸುತ್ತೇನೆ.

ಹೀಗೆ ನಾನು ನನ್ನ ತಮ್ಮನಾದ ಶ್ರೀಕೃಷ್ಣನನ್ನು ಯಾವಾಗಲೂ ಪ್ರೀತಿಯುಕ್ತವಾದ ಅಂತಃಕರಣದಿಂದಲೇ ನೋಡುತ್ತಿರುವೆನು.

**ಸಂಗ್ರಾಮೇಷು ಪ್ರಹರ್ತವ್ಯಂ ತೇನ ಪೂರ್ವಂ ತಪೋಧನ ।**
**ರಾಜಾ ಕಿಲಾಹಂ ಸಮರೇ ಪ್ರಹರಾಮ್ಯಗ್ರತೋ ಧ್ರುವಮ್ ॥ 27 ॥**

**ಪ್ರಾದುರ್ಭಾವೇಷು ಸರ್ವೇಷು ಸ್ವಶರೀರಮಿವಾನಘ ।**
**ಯತ್ನಾದ್ ರಕ್ಷಾಮಿ ಧರ್ಮಜ್ಞ ಕೇಶವಂ ಭಕ್ತಿಮಾಶ್ರಿತಮ್ ॥ 28 ॥**

ನಾರದರೇ ! ಶ್ರೀಕೃಷ್ಣನು ಪಾರಿಜಾತಕ್ಕಾಗಿ ಅವನು ಯುದ್ಧಕ್ಕೆ ಬಂದದ್ದಾದರೆ ಅವನೇ ಮೊದಲು ನನ್ನನ್ನು ಹೊಡೆಯಬೇಕೇ ಹೊರತು ಬೇರೆಡೆ ಯುದ್ಧದಲ್ಲಿ ರಾಜನಾದ್ದರಿಂದ, ನಾನು ಮೊದಲು ಹೊಡೆಯುವಂತೆ ಇವನನ್ನು ಹೊಡೆಯುವುದಿಲ್ಲ.

ಇಷ್ಟೆ ಅಲ್ಲ. ಯಾವುದೇ ಅವತಾರದಲ್ಲಾಗಲೀ ನನ್ನಲ್ಲಿ ಭಕ್ತಿಯಿರುವ ಕಾರಣದಿಂದಾಗಿ ಶ್ರೀಕೃಷ್ಣನನ್ನು ನಾನು ನನ್ನ ಶರೀರವೂ ಎಂಬಂತೆ ರಕ್ಷಿಸುತ್ತೇನೆ. ಹೀಗೆ ನಾನು ಇಷ್ಟು ಸೌಹಾರ್ದಕ್ಕೆ ಪ್ರತಿಯಾಗಿ ವಿಷ್ಣುವಾದರೂ ನನ್ನ ಸ್ವರ್ಗಕ್ಕಿಂತಲೂ ಎತ್ತರ ಸ್ಥಾನದಲ್ಲಿರುವ ವೈಕುಂಠದಲ್ಲಿ ಮನೆ ಮಾಡಿದ್ದಾನೆ.

ಹೀಗೆ ನನ್ನ ಸ್ವರ್ಗಲೋಕದ ಮರ್ಯಾದೆಯನ್ನೂ ಅತಿಕ್ರಮಿಸಿ ತನ್ನ ವೈಕುಂಠಕ್ಕೆ ಸಕಲ ಲೋಕಗಳಿಗಿಂತಲೂ ಅಧಿಕವಾಗಿ ಮಹತ್ವವನ್ನು ನೀಡಿಕೊಂಡಿದ್ದಾನೆ. ಹೀಗೆ ನನಗೆ ಮಾಡಿದ ಅವಮಾನವನ್ನು ಸಹಿಸಿಕೊಂಡಿರುವೆನು. ಆ ಅವಮಾನವನ್ನೂ ಸಹ ನಾನು ಸ್ಮರಿಸುತ್ತಿಲ್ಲ. ಏಕೆಂದರೆ ನಾನು ಜ್ಯೇಷ್ಠಭ್ರಾತೃವು. ಅವನು ಮಾಡಿದರೂ ಅವನಿನ್ನೂ ಬಾಲಕನೆ. ಆದ್ದರಿಂದಲೇ ತಿಳಿಯದೆ ಬಾಲಕನು ಮಾಡಿದ ತಪ್ಪನ್ನು ನಾವು ಕ್ಷಮಿಸಬೇಕಲ್ಲವೆ.

**ಬಾಲೋऽಯಂ ಮಮ ಪುತ್ರೇತಿ ಯವೀಯಾನಿತಿ ನಾರದ ।**
**ಪಿತ್ರಾ ಮಾತ್ರಾ ಚ ಗೋವಿಂದೋ ಮಾನೀ ಚ ಪರಿಭಾಷಿತಃ ॥ 29 ॥**

**ಇಷ್ಟಸ್ತತ್ರ ಜನಾನಾಂ ಚ ಕೇಶವಃ ಸುವಿಶೇಷತಃ ।**
**ವಯಂ ದ್ವೇಷ್ಯಾ ನ ಸಂದೇಹಸ್ತತ್ರ ಸ್ನೇಹೋऽತಿರಿಚ್ಯತೇ ॥ 30 ॥**

**ಸರ್ವಜ್ಞೋ ಬಲವಾನ್ ಶೂರಃ ಪಾತ್ರಂ ಮಾನಯಿತಾ ತಥಾ ।**
**ಕೇಶವೇತ್ಯೇವ ಚ ಧ್ಯಾನಂ ಯತ್ತದ್ ವಿತಥತಾಂ ಗತಮ್ ॥ 31 ॥**

ಶ್ರೀಕೃಷ್ಣನು ಬಾಲಕನೆಂದೂ, ತಮ್ಮನೆಂದೂ, ಮಗನಂತೆ ಲಾಲಿಸಿ ಪೋಷಿಸಬೇಕೆಂದು ನಾನು ಭಾವಿಸಿರುವೆ. ನಮ್ಮ ತಾಯಿ ತಂದೆಗಳೂ ಸಹ ಶ್ರೀಕೃಷ್ಣನು ಮಾನೀಯಾಗಿರುವನು. ಪೂಜ್ಯನಾಗಿರುವನೆಂದು ಹೇಳಿರುವರು.

ಮನುಷ್ಯಲೋಕದ ಜನತೆಗೆ ಶ್ರೀಕೃಷ್ಣನು ಅತ್ಯಂತ ಪ್ರಿಯನಾಗಿದ್ದಾನೆ. ನಾವಾದರೂ ಅವನ ದ್ವೇಷಕ್ಕೆ ಪಾತ್ರರಾಗಿದ್ದೇವೆ. ಮನುಷ್ಯರ ವಿಷಯದಲ್ಲಿ ಅವನು ಹೆಚ್ಚು ಸ್ನೇಹ ಮಾಡುತ್ತಿರುವುದೇ ಇದಕ್ಕೆ ಕಾರಣವಾಗಿದೆ.

ನಾರದರೇ! ಇದುವರೆಗೂ ಶ್ರೀಕೃಷ್ಣನು ಸರ್ವಜ್ಞನೆಂದೂ, ಪರಾಕ್ರಮಿಯೆಂದೂ, ಸುಪಾತ್ರನೆಂದು ಇತರರಿಗೂ ಗೌರವ ನೀಡುವವನೆಂದೂ ತಿಳಿದುಕೊಂಡಿದ್ದೆವು. ಈಗ ನಮ್ಮ ಭಾವನೆ ಸುಳ್ಳಾಗಿದೆ.

**ಗಚ್ಛ ನಾರದ ವಕ್ತವ್ಯಃ ಕೇಶವೋ ವಚನಾನ್ಮಮ ।**
**ಆಹುತೋ ನ ನಿವರ್ತೇಯಂ ಸಮರಂ ಪ್ರತಿ ಶತ್ರುಭಿಃ ॥ 32 ॥**

ನಾರದರೇ ! ನೀವಿನ್ನು ಹೋಗಿಬನ್ನಿರಿ. ನಾನು ಹೇಳಿದ ಮಾತನ್ನು ಶ್ರೀಕೃಷ್ಣನಿಗೆ ಹೇಳಿರಿ. ಶತ್ರುಗಳೇನಾದರೂ ಯುದ್ಧಕ್ಕೆ ಆಹ್ವಾನಿಸಿದರೆ ನಾನು ಹಿಂಜರಿಯುವುದಿಲ್ಲ.

**ಯದೀಚ್ಛಸಿ ತದಾಗಚ್ಛ ಸಹ್ಯಂ ತೇ ಯತ್ತ್ವಮಿಚ್ಛಸಿ ।**
**ಪ್ರಹರಸ್ವ ಚ ಪೂರ್ವಂ ತ್ವಂ ಭಾರ್ಯಾಜಿತ! ಯಥೇಚ್ಛಸಿ ॥ 33 ॥**

**ರಥಾಂಗೇನಾಥ ಶಾಂರ್ಗೇಣ ಗದಯಾ ನಂದಕೇಣ ಚ ।**
**ಪ್ರಹರಾರುಹ್ಯ ಗರುಡಂ ದೃಢೋ ಭೂತ್ವ ಜನಾರ್ದನ ॥ 34 ॥**

**ಪ್ರಹೃತೇ ಪ್ರಹರಿಷ್ಯಾಮಿ ಯಥಾಶಕ್ತ್ಯಾ ಚ ಕೇಶವ ।**
**ಅಹೋ ಧಿಗ್ ಯದಿ ಮಾಂ ಸ್ನೇಹೋ ವಿಕ್ಲವಂ ನ ಕರಿಷ್ಯತಿ ॥ 35 ॥**

ಸ್ತ್ರೀಜಿತನಾದ ಕೃಷ್ಣನೇ! (ಭಾರ್ಯಾಜಿತ) ನಿನಗೆ ನನ್ನೊಂದಿಗೆ ಸ್ನೇಹ ಬಯಸಬೇಕೆಂದಿದ್ದರೆ ಅದಕ್ಕೂ ನನ್ನ ಬಳಿ ಬರಬಹುದು. ಅಥವಾ ನನ್ನ ಮೇಲೆ ಗದಾಪ್ರಹಾರ ಮಾಡಬೇಕೆಂಬ ಹಂಬಲವಿದ್ದರೆ ಹಾಗೂ ಮಾಡಬಹುದು. ಆದರೆ ನಾನು ಮಾತ್ರ ಮೊದಲು ನಿನಗೆ ಪ್ರಹರಿಸುವುದಿಲ್ಲ. ನೀನು ಪ್ರಹರಿಸಿದ ಮೇಲೆಯೇ ನಾನು ಪ್ರಹರಿಸುತ್ತೇನೆ.

ಜನಾರ್ದನನೇ ! ನೀನು ಗರುಡನ ಮೇಲೆ ದೃಢವಾಗಿ ಕುಳಿತುಕೊಂಡು ನನ್ನಲ್ಲಿಗೆ ಬಂದು ಸುದರ್ಶನ ಚಕ್ರದಿಂದಲೂ ಶಾಂರ್ಗ ಧನುಸ್ಸಿನಿಂದಲೋ, ಕೌಮೋದಕಿಯಿಂದಲೋ, ನಂದಕ ಖಡ್ಗದಿಂದಲಾದರೂ ನನ್ನನ್ನು ಹೊಡೆದು ಹಾಕು. ಭ್ರಾತೃ ಸ್ನೇಹವು ನನ್ನನ್ನು ವ್ಯಾಕುಲಗೊಳಿಸದಿದ್ದರೆ ನೀನು ಹೊಡೆದ ನಂತರವೇ ನಾನು ನಿನ್ನನ್ನು ಯಥಾಶಕ್ತಿ ಹೊಡೆಯುವನು. ಇಂತಹ ದುಃಸ್ಥಿತಿ ಬಂದದ್ದಕ್ಕೆ ನಮಗೆ ಧಿಕ್ಕಾರವು.

**ಯಾವನ್ನ ಸಂಗ್ರಾಮಗತೋ ಜಿತೋಽಹಂ ಚಕ್ರಪಾಣಿನಾ ।**
**ಪಾರಿಜಾತಂ ನ ದಾಸ್ಯಾಮಿ ತಾವದ್ ಭೋಮುನಿಸತ್ತಮ ॥ 36 ॥**

**ಮಾಂ ಸಮಾಹ್ವಯತೇ ಜ್ಯೇಷ್ಠಂ ಯವೀಯಾನ್ ಸ ತಪೋಧನ ।**
**ಅಹೋ ತಂ ಮರ್ಷಯಿಷ್ಯಾಮಿ ಕಿಮರ್ಥಂ ಸ್ತ್ರೀಜಿತಂ ಹರಿಮ್ ॥ 37 ॥**

**ಅದ್ಯೈವ ಗಚ್ಛ ಭಗವನ್ ದ್ವಾರಕಾಂ ಕೃಷ್ಣ ಪಾಲಿತಾಮ್ ।**
**ವಿವಾದೇ ಸಂಸ್ಥಿತಃ ಸೋಽಜ್ಞ ಇತಿ ವಾಚ್ಯಃ ತ್ವಯಾಚ್ಯುತಃ ॥ 38 ॥**

ಮುನಿವರ್ಯನೇ ! ಯುದ್ಧಭೂಮಿಗೆ ಹೋಗಿ ಶ್ರೀಕೃಷ್ಣನಿಂದ ಸೋಲು-ವವರೆಗೂ ನಾನು ಪಾರಿಜಾತ ವೃಕ್ಷವನ್ನು ಖಂಡಿತಾ ನೀಡುವುದಿಲ್ಲ.

ಶ್ರೀಕೃಷ್ಣನು ತಾನು ಚಿಕ್ಕವನಾದರೂ ಜ್ಯೇಷ್ಠನಾದ ನನ್ನನ್ನು ಯುದ್ಧಕ್ಕೆ ಆಹ್ವಾನಿಸುತ್ತಿರುವನು. ಹೆಂಡತಿಗೆ ದಾಸನಾಗಿರುವ ಕೃಷ್ಣನ ಈ ಕೆಟ್ಟ ವರ್ತನೆಯನ್ನು ನಾವೇಕೆ ಸಹಿಸಬೇಕು?

ನಾರದರೇ ! ತಾವು ದ್ವಾರಕೆಗೆ ಹೋಗಿರಿ. ಯುದ್ಧಕ್ಕೆ ಸಜ್ಜಾಗಿರುವ ಆ ಅಜ್ಞಾನಿ-ಯಾದ ಶ್ರೀಕೃಷ್ಣನಿಗೆ ನನ್ನ ಈ ಮಾತುಗಳನ್ನು ಹೇಳಿರಿ.

**ಪಲಾಶಪತ್ರಾರ್ಧಮಪಿ ತ್ವಯಾಜಿತೋ ನ ಪಾರಿಜಾತಸ್ಯ ತವ ಪ್ರದಾಸ್ಯತಿ ।**
**ಇತಿ ಪ್ರವಾಚ್ಯೋ ಮಧುಸೂದನಸ್ತ್ವಯಾ ವಚೋ ಮದೀಯಂ ಸ್ಮರತಾ ತಪೋಧನ ॥ 39 ॥**

ಶ್ರೀಕೃಷ್ಣನೇ ! ನೀನು ಯುದ್ಧದಲ್ಲಿ ನನ್ನನ್ನು ಸೋಲಿಸುವವರೆಗೂ ಪಾರಿಜಾತ ವೃಕ್ಷವನ್ನಲ್ಲ. ವೃಕ್ಷದ ಎಲೆಯ ಅರ್ಧಭಾಗವನ್ನೂ ಕೊಡಲು ಇಂದ್ರನು ಸಿದ್ಧನಾಗಿಲ್ಲ. ಈ ರೀತಿಯಾಗಿ ನಾರದರೇ ! ಮಧುಸೂದನನಿಗೆ ಯಥಾವತ್ತಾಗಿ ಹೇಳಬೇಕು.

**ನ ಮಾಯಯಾ ಹರ್ತುಮಿಹಾರ್ಹಸಿ ದ್ರುಮಂ ।**
**ಸುಯುದ್ಧಮೇವಾಸ್ತು ಧಿಗಸ್ತು ಜಿಹ್ಮತಾಮ್ ॥ 40 ॥**

ಶ್ರೀಕೃಷ್ಣನೇ ! ನೀನು ಮಾಯಾವಿದ್ಯೆಯಿಂದಾಗಿ ಕಪಟವನ್ನಾಚರಿಸಿ ವೃಕ್ಷವನ್ನು ಅಪಹರಿಸಿಕೊಂಡು ಹೋಗುವುದು ನಿನ್ನಂತಹವನಿಗೆ ಉಚಿತವಲ್ಲ. ನಮ್ಮಿಬ್ಬರ ಮಧ್ಯೆ ಆಯುಧಗಳ ಮೂಲಕ ಧರ್ಮಯುದ್ಧವೆ ನಡೆಯಲಿ ಕಪಟದಿಂದ ಯುದ್ಧ ಮಾಡುವವರಿಗೆ ಧಿಕ್ಕಾರವಿರಲಿ.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಇಂದ್ರನು ನಾರದರಿಗೆ ತಿಳಿಸಲು ಹೇಳಿದ ಸಂದೇಶವೆಂಬಲ್ಲಿ
ಎಪ್ಪತ್ತನೆಯ ಅಧ್ಯಾಯ ಸಮಾಪ್ತಿ

# ಅಥ ಏಕಸಪ್ತತಿತಮೋಽಧ್ಯಾಯಃ

*ನಾರದರಿಂದ ಶ್ರೀಕೃಷ್ಣ ಮಹಿಮೆ ವರ್ಣನೆ*

*ವೈಶಂಪಾಯನ ಉವಾಚ –*

**ಮಹೇಂದ್ರ ವಚನಂ ಶ್ರುತ್ವಾ ನಾರದೋ ವದತಾಂ ವರಃ ।**
**ವಿವಿಕ್ತೇ ದೇವರಾಜಾನಮಿದಂ ವಚನಮಬ್ರವೀತ್ ॥ 1 ॥**

**ಕಾಮಂ ಪ್ರಿಯಾಣಿ ರಾಜನೋ ವಕ್ತವ್ಯಾ ನಾತ್ರ ಸಂಶಯಃ ।**
**ಪ್ರಾಪ್ತಕಾಲಂ ತು ವಕ್ತವ್ಯಂ ಹಿತಮಪ್ರಿಯಮಪ್ಯುತ ॥ 2 ॥**

ವೈಶಂಪಾಯನರು ಹೇಳುವರು – ರಾಜನೇ! ಇಂದ್ರದೇವನ ಮಾತುಗಳನ್ನು ನಾರದರು ಆಲಿಸಿದರು. ವಾಗ್ಮಿಗಳಾದ ಅವರು ಏಕಾಂತದಲ್ಲಿ ಹೀಗೆಂದರು.

ದೇವೇಂದ್ರನೇ! ರಾಜರ ಜೊತೆಗೆ ಮಾತನಾಡುವಾಗ ಅವರಿಗೆ ಪ್ರಿಯವಾಗು–ವಂತೆಯೇ ಮಾತನಾಡಬೇಕು. ಇದರಲ್ಲಿ ಸಂಶಯವಿಲ್ಲ. ಆದರೆ ಆಪತ್ಕಾಲವಾಗಿದ್ದರೆ ಅವರಿಗೆ ಕೇಳಲು ಅಪ್ರಿಯವಾರ್ತೆಯಾದರೂ ಅವರ ಹಿತಕ್ಕೆ ಸಾಧನವಾದ್ದರಿಂದ ಹಿತವನ್ನೇ ಹೇಳಬೇಕು.

ನೀತಿಕೋವಿದರು ಹೇಳದೆ ಕೇಳದೆ ತಾವೇ ಮುಂದಳಾಗಿ ಯಾವ ಕಾರ್ಯವನ್ನು ಮಾಡಬಾರದೆಂದು ಹೇಳುವರು.

ಇಂದ್ರನೇ ! ನೀನಾದರೂ ಯಾವುದು ಮಾಡಬೇಕು, ಯಾವುದನ್ನು ಮಾಡಬಾರದೆಂಬ ಸಮಸ್ಯೆ ಎದುರಾದಾಗ ನನ್ನನ್ನೆ ಸಲಹೆ ಕೇಳುವೆ. ಈ ಕಾರಣದಿಂದಾಗಿಯೇ ಈ ಸಮಯದಲ್ಲಿ ನಿನಗೆ ನಾನು ಕೆಲವು ಸಲಹೆ ಹೇಳುವೆನು. ನಿನಗೆ ಉಚಿತವಾಗಿದೆ ಎಂದೆನಿಸಿದರೆ ಅದನ್ನು ಸ್ವೀಕರಿಸಬಹುದು.

**ಅನುಕ್ತೇನಾಪಿ ಸುಹೃದಾ ವಕ್ತವ್ಯಂ ಜಾನತಾ ಹಿತಮ್ ।**
**ನ್ಯಾಯ್ಯಂ ಚ ಪ್ರಾಪ್ತಕಾಲಂ ಚ ಪರಾಭವಮನಿಚ್ಛತಾ ॥ 3 ॥**
**ವಕ್ತವ್ಯಂ ಸರ್ವಥಾ ಸದ್ಭಿಃ ಅಪ್ರಿಯಂ ಚಾಪಿ ಯದ್ಧಿತಮ್ ।**
**ಆನೃಣ್ಯಮೇತತ್ ಸ್ನೇಹಸ್ಯ ಸದ್ಭಿರೇವಾದೃತಂ ಪುರಾ ॥ 4 ॥**
**ಅನೃತೇ ಧರ್ಮಭಗ್ನೇ ಚ ನ ಶುಶ್ರೂಷತಿ ಚಾಪ್ರಿಯೇ ।**
**ನ ಪ್ರಿಯಂ ನ ಹಿತಂ ವಾಚ್ಯಂ ಸದ್ಭಿರೇವೇತಿ ನಿಂದಿತಾಃ ॥ 5 ॥**

ರಾಜನು ಪರಾಭವ ಹೊಂದಬಾರದೆಂಬ ಬಯಕೆವುಳ್ಳವನು ರಾಜನಿಗೆ ಹಿತವಾವುದೆಂದು ತಿಳಿದಿರುವ ಮಿತ್ರನು, ಒಂದು ವೇಳೆ ರಾಜನು ಕೇಳದೆ ಇದ್ದರೂ ಸಮಯೋಚಿತ ಹಾಗೂ ನ್ಯಾಯಯುಕ್ತವಾದ ಮಾತನ್ನು ತಿಳಿ ಹೇಳಬೇಕು. ಸಜ್ಜನರು ಯಾವಾಗಲೂ ತಮ್ಮ ಮಿತ್ರನಿಗೆ ಕೇಳಲು ಅಪ್ರಿಯವಾದರೂ ಹಿತಕರವಾದ ಮಾತನ್ನೇ ಹೇಳಬೇಕು. ಹೀಗೆ ಮಾಡಿದರೇನೆ ಸ್ನೇಹದ ಋಣವನ್ನು ತೀರಿಸಿಕೊಳ್ಳಬಹುದಾಗಿದೆ. ಇದೇ ಸಜ್ಜನರ ಮಾರ್ಗವಾಗಿದೆ.

ಸಜ್ಜನರು ಯಾವಾಗಲೂ – ಸುಳ್ಳನ್ನು ಹೇಳುವವನೂ, ಧರ್ಮದ ಮರ್ಯಾದೆ ಮೀರಿದವನು, ಯಾವುದೇ ಉಪದೇಶವನ್ನು ಕೇಳಲೂ ಇಚ್ಛೆ ಇಲ್ಲದವನು, ಸರ್ವರ ದ್ವೇಷಕ್ಕೆ ಪಾತ್ರನಾದವನಿಗೆ ಹಿತವಾದ ಹಾಗೂ ಪ್ರಿಯವಾದ ಮಾತನ್ನಾಡಬಾರದು.

ಇಂದ್ರದೇವನೇ! ನಾನು ನಿನ್ನ ಹಿತೈಷಿಯಾದ್ದರಿಂದ ನಿನಗೆ ಹಿತವಾದದ್ದನ್ನು ಹೇಳಲೇಬೇಕು. ನನ್ನ ಮಾತನ್ನು ಕೇಳಿದ ನಂತರ ಶ್ರೇಯಸ್ಕರವಾದ ನನ್ನ ಮಾತಿನಂತೆ ಆಚರಿಸು.

**ಅನ್ಯೋನ್ಯಭೇದೋ ಭ್ರಾತೄಣಾಂ ಸುಹೃದಾಂ ವಾ ಬಲಾಂತಕ ।**
**ಭವತ್ಯಾನಂದ ಕೃದ್ ದೇವ ದ್ವಿಷತಾಂ ನಾತ್ರ ಸಂಶಯಃ ॥ 6 ॥**
**ಹಿತಾನುಬಂಧ ಸಹಿತಂ ಕಾರ್ಯಂ ಜ್ಞೇಯಂ ಸುರೇಶ್ವರ ।**
**ವಿಪರೀತಂ ಚ ತದ್ ಬುಧ್ವಾ ನಿತ್ಯಂ ಬುದ್ಧಿವತಾಂ ವರ ॥ 7 ॥**
**ಯಶ್ ಸ್ಯಾತ್ ತಾಪಕರಂ ಪಶ್ಚಾದ್ ಆರಬ್ಧಂ ಕಾರ್ಯಮಿದೃಶಂ ।**
**ಆರಭೇನ್ ನೈವ ತದ್ ವಿದ್ವಾನೇಷ ಬುದ್ಧಿಮತಾಂ ನಯಃ ॥ 8 ॥**

ದೇವೇಂದ್ರನೇ! ಮನುಷ್ಯನು ಯಾವಾಗಲೂ ತನ್ನ ಹಿತಕ್ಕೆ ಸಂಬಂಧಿಸಿದ ಕಾರ್ಯವು ಯಾವುದೆಂಬುದನ್ನು ತಿಳಿದುಕೊಳ್ಳಬೇಕು. ಈ ಕಾರ್ಯದಿಂದ ತನಗೇನು ಕೇಡಾಗುವುದೆಂದೂ ತಿಳಿಯಬೇಕು. ಒಂದು ಕಾರ್ಯ ಪ್ರಾರಂಭಿಸಿದಾಗ ಮುಂದೆ ಆಪತ್ತು ಬರುವುದಾದರೆ ಆ ಕಾರ್ಯವನ್ನು ಆರಂಭಿಸಲೇಬಾರದು.

ಇಂದ್ರನೇ! ಈ ಕಾರ್ಯದ ಪರಿಣಾಮದಲ್ಲಿ ಮಂಗಳದಾಯಕವಾಗುವುದಿಲ್ಲ. ಏಕೆಂದರೆ,

**ಯ ಏಕೋ ವಿಶ್ವಮಧ್ಯಾಸ್ತೇ ಪ್ರಧಾನಂ ಜಗತೋ ಹರಿಃ ।**
**ಪ್ರಕೃತ್ಯಾ ಯಂ ಪರಂ ಸರ್ವೇ ಕ್ಷೇತ್ರಜ್ಞಂ ವೈ ವಿದುರ್ಬುಧಾಃ ॥ 9 ॥**
**ತಸ್ಯಾವ್ಯಕ್ತಸ್ಯ ಯೋ ವ್ಯಕ್ತೋ ಭಾಗಃ ಸರ್ವಭವೋದ್ಭವಃ ।**
**ತಸ್ಯಾತ್ಮಾ ಪರಮೋ ದೇವೋ ವಿಷ್ಣುಃ ಸರ್ವಸ್ಯ ಧೀಮತಃ ॥ 10 ॥**

ಯಾವನೊಬ್ಬನೇ ಕಾರ್ಯ ಪ್ರಪಂಚಕ್ಕೂ, ಅವ್ಯಕ್ತಾದಿ ಕಾರಣ ಪ್ರಪಂಚಕ್ಕೂ ನಿಯಾಮಕನಾಗಿರುವನೋ ಅವನೇ ಶ್ರೀಕೃಷ್ಣ ಅಂದರೆ ನಿನ್ನ ತಮ್ಮನು. ಈ ಭಗವಂತನಾದರೂ ಪ್ರಕೃತಿತತ್ವಕ್ಕೂ ಸಿಗದೆ ಅದಕ್ಕಿಂತಲೂ ಸಾವಿರಾರು ಅಂಗುಲ ಮೀರಿ ನಿಂತವನು (**ಅತ್ಯತಿಷ್ಠದ್ ದಶಾಂಗುಲಂ**) ಕ್ಷೇತ್ರವೆಂದರೆ ಅವ್ಯಕ್ತ, ಮಹತ್ತತ್ವ ಅಹಂಕಾರ ತತ್ವ ಇತ್ಯಾದಿಗಳು. ಈ ಕ್ಷೇತ್ರ ತಿಳಿದವನು ಭಗವಂತ ಮಾತ್ರ. ಆದ್ದರಿಂದ ಅವನೇ ಕ್ಷೇತ್ರಜ್ಞ.[1]

**ತಸ್ಯಾವ್ಯಕ್ತಸ್ಯ ಯೋ ವ್ಯಕ್ತೋ ಭಾಗಃ ಸರ್ವಭವೋದ್ಭವಃ ।**
**ತಸ್ಯಾತ್ಮಾ ಪರಮೋದೇವೋ ವಿಷ್ಣುಃ ಸರ್ವಸ್ಯ ಧೀಮತಃ ॥ 11 ॥**

ಅವ್ಯಕ್ತತತ್ವದಿಂದಲೇ ವ್ಯಕ್ತವಾದ ಮಹತತ್ವ ವ್ಯಕ್ತವಾಗಿದೆ. ಅದಕ್ಕೆ ಸಕಲ

---

1. 1) ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತ ಮೇವ ಚ ।
ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯ ಗೋಚರಾಃ ॥

2) ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿ ಸಂಭವಾನ್ ॥

ಪಂಚಭೂತಾದಿ ಇಪ್ಪತ್ತೈದು ತತ್ವಗಳು, ಜೀವ, ಪ್ರಕೃತಿಗಳೆರಡು, ಜೀವ-ಪರಮಾತ್ಮ ಇವೆಲ್ಲವೂ ಅನಾದಿಯಾಗಿದ್ದು ಸತ್ವಾದಿ ಗುಣಗಳನ್ನು ಇಚ್ಛಾದಿ ಕಾರ್ಯಗಳನ್ನೂ, ಪ್ರಕೃತಿ ಕಾರ್ಯವೆನ್ನುವರು.

ಚರಾಚರ ಪ್ರಾಣಿಪ್ರಪಂಚಕ್ಕೆ ಕಾರಣನಾದ ಬ್ರಹ್ಮದೇವನು ವ್ಯಕ್ತನಾದನು. ಈ ಬ್ರಹ್ಮನಿಗೂ ಸ್ವಾಮಿಯಾದವನು ದೇವದೇವನಾದ ವಿಷ್ಣುವೆ. ಪ್ರಕೃತಿಯ ಮುಖ್ಯವಾದ ಭಾಗವೆಂದರೆ ದುರ್ಗೆಯೇ. ಇದರಿಂದ ವ್ಯಕ್ತವಾದ ಸಮಸ್ತ ಪ್ರಪಂಚವೂ ಭೋಗ್ಯ ವಸ್ತುವಾಗಿದೆ.

ರುಗ್ಮಿಣೀ ಮೊದಲಾದವರೂ ಸಹ ಪ್ರಕೃತಿ ಅಭಿಮಾನಿನಿಯಾದ ಲಕ್ಷ್ಮೀ-ದೇವಿಯ ಮುಖ್ಯಭಾಗವಾಗಿದ್ದು ವ್ಯಕ್ತರಾಗಿರುವರು. ಅನಾದಿನಿತ್ಯಳಾದರೂ ಪ್ರಕೃತಿ ಮಾತೆಯಾಗಿರುವಳು. ಸತ್ವಾದಿಗುಣ ರೂಪಳೂ ಆಗಿರುವಳು. ಇಂತಹ ಗುಣಾಭಿಮಾನಿನಿಯಾದ ಪ್ರಕೃತಿಯ ಪತಿಯಾದರೂ ಶ್ರೀವಿಷ್ಣುವೆ ಆಗಿರುವನು.

**ನ ವಿಶೇಷೋಽಸ್ಯ ರುದ್ರಸ್ಯ ವಿಷ್ಣೋಶ್ಚಾಮರಸತ್ತಮ ।**
**ಗುಣೇನಶ್ಚಾವ್ಯಯಃ ಶಾಸ್ತಾ ಸದಾ ಚ ಪ್ರಥಮೋಽಗುಣಃ ॥ 12 ॥**
**ನಾರಾಯಣಃ ಮಹಾತೇಜಾಃ ಸರ್ವಕೃಲ್ಲೋಕಭಾವನಃ ।**
**ಭೋಕ್ತಾ ಮಹೇಶ್ವರೋದೇವಿಃ ಕರ್ತಾ ವಿಷ್ಣು ರಧೋಕ್ಷಜಃ ॥ 13 ॥**

ರೋಗನಾಶಕನಾಗಿದ್ದು ರುದ್ರನೆನಿಸುವ ರುದ್ರನಿಗೂ ವಿಷ್ಣುವು ಬೇರೇ ಬೇರೆ ಅಲ್ಲ. ಅಹಂಕಾರಾತ್ಮಕ ರುದ್ರದೇವನನ್ನು ಶಾಸನ ಮಾಡುವ ಶ್ರೀಹರಿಯು ಅನಾದಿ ನಿತ್ಯನು ಹಾಗೂ ಪ್ರಾಕೃತಾದಿ ಗುಣಶೂನ್ಯನು.

ನಾರಾಯಣನಾದರೂ ಮಹಾಸಮರ್ಥಶಾಲಿಯೂ ಸರ್ವಜಗತ್ತನ್ನೂ ರುದ್ರನಲ್ಲದ್ದು ಸಂಹರಿಸುವನು. ಬ್ರಹ್ಮನಲ್ಲದ್ದು ಜಗತ್ತನ್ನು ಸೃಷ್ಟಿಸುವನು. ಜಗತ್ತನ್ನು ತಿನ್ನುವವನು ರುದ್ರನಾಮಕನಾದರೆ ಸೃಷ್ಟಿಸುವನು ವಿಷ್ಣುವೆ.

ಈ ನಾರಾಯಣನಿಂದಲೇ ಭೋಕ್ತೃವಾದ ರುದ್ರನೂ, ಸೃಷ್ಟಿಕರ್ತನಾದ ಬ್ರಹ್ಮದೇವನೂ, ಇತರ ಇಂದ್ರಾದಿ ದೇವತೆಗಳೂ ಪ್ರಜಾಪತಿಗಣದವರೂ ಹುಟ್ಟಿರುವರು.

ಹೀಗೆ ಶ್ರೀಮನ್ನಾರಾಯಣನು ಪುರಾಣ ಪುರುಷನೂ ಆದ ವಿಷ್ಣುವು ದೇವತಾಗಣದಲ್ಲಿ ಅಚಿಂತ್ಯನೆಂದೂ ಅತರ್ಕ್ಯನೆಂದೂ ಪರಿಗಣಿಸಲ್ಪಟ್ಟಿದ್ದಾನೆ.

**ಅದಿತ್ಯಾ ತಪಸಾ ವಿಷ್ಣುಃ ಮಹಾತ್ಮಾಽಽರಾಧಿತಃ ಪುರಾ ।**
**ವರೇಣ ಛಂದಿತಾ ತೇನ ಪರಿತುಷ್ಟೇನ ಚಾದಿತಿಃ ॥ 14 ॥**

ತಯೋಕ್ತಃ ತ್ವತ್ಸಮಂ ಪುತ್ರಮಿಚ್ಛಾಮೀತಿ ಸುರೋತ್ತಮ ।
ಪ್ರಣಿಪತ್ಯ ಚ ವಿಜ್ಞಾಯ ನಾರಾಯಣಮಧೋಕ್ಷಜಮ್ ॥ 15 ॥

ತೇನೋಕ್ತಂ ಭುವನೇ ನಾಸ್ತಿ ಮತ್ಸಮಃ ಪುರುಷೋಽಪರಃ ।
ಅಂಶೇನ ತು ಭವಿಷ್ಯಾಮಿ ಪುತ್ರಃ ಖಲ್ವಹಮೇವ ತೇ ॥ 16 ॥

ಸ ಜಾತಃ ಸರ್ವಕೃದ್ ದೇವಃ ಭ್ರಾತಾ ತವ ಸುರೇಶ್ವರ ।
ನಾರಾಯಣೋ ಮಹಾತೇಜಾಃ ಯಮುಪೇಂದ್ರಂ ಪ್ರಚಕ್ಷತೇ ॥ 17 ॥

ಹಿಂದೊಮ್ಮೆ ದೇವಮಾತೆಯಾದ ಅದಿತೀದೇವಿಯು ವಿಷ್ಣುವನ್ನುದ್ದೇಶಿಸಿ ಉಗ್ರತಪ್ಪಸ್ಸನ್ನಾಚರಿಸಿದಳು. ಇದರಿಂದ ಸಂತುಷ್ಟ ವಿಷ್ಣುವು – 'ನಿನಗೆ ಬೇಕಾದ ವರ ಕೇಳು' ಎಂದನು.

ಅದಿತಿಯಾದರೂ ಇಂದ್ರಿಯಗಳಿಗೆ ಗೋಚರನಾಗದ ಶ್ರೀವಿಷ್ಣುವೆ ಬಂದಿರುವನೆಂದು ತಿಳದು – ಅವನಿಗೆ ನಮಸ್ಕರಿಸಿ ಹೀಗೆ ಪ್ರಾರ್ಥಿಸಿದಳು.

'ನನಗೆ, ನಿನಗೆ ಸದೃಶನಾದ ಪುತ್ರನನ್ನು ಕರುಣಿಸು' ಎಂದು.

ಇದಕ್ಕೆ ಉತ್ತರವಾಗಿ 'ದೇವಿಯೆ, ಈ ಹದಿನಾಲ್ಕು ಲೋಕಗಳನ್ನೂ ಹುಡುಕಾಡಿದರೂ ನನಗೆ ಸದೃಶ ಸಿಗಲಾರ.

ನನಗೆ ನಾನೇ ಸದೃಶನು. ನಿನ್ನ ತಪಸ್ಸು ವ್ಯರ್ಥವಾಗಬಾರದು. ಅದಕ್ಕಾಗಿ ನಾನೇ ಒಂದು ಅಂಶದಿಂದ ನಿನ್ನ ಪುತ್ರನಾಗಿ ನಿನ್ನಲ್ಲಿ ಅವತರಿಸುವೆನು' ಎಂದನು.

ಸುರೇಶ್ವರನೇ! ಹೀಗೆ ತಾಯಿ ಅದಿತಿಗೆ ನೀಡಿದ ವರದಂತೆ ಅವಳಲ್ಲಿ ಅವತರಿಸಿದವನೇ ವಿಷ್ಣು. ಅವನೇ ನಿನ್ನ ತಮ್ಮ ಉಪೇಂದ್ರನೆಂದು ತಿಳಿ.

ಪ್ರಾದುರ್ಭಾವಂ ಗತೋದೇವೋ ಜಗತೋಹಿತಕಾಮ್ಯಯಾ ।
ಮಾಥುರಂ ಜಗತೋ ನಾಥಃ ಕರ್ತಾ ಹರ್ತಾ ಚ ಕೇಶವಃ ॥ 18 ॥

ಬ್ರಹ್ಮಣ್ಯದೇವಃ ಸರ್ವಾತ್ಮಾ ತೈಸ್ತೈರ್ಭಾವೈಃ ವಿಕುರ್ವತಿ ।
ಅತಃ ಸಮಸ್ತ ದೇವಾನಾಂ ಪೂಜ್ಯ ಏವ ಚ ಕೇಶವಃ ॥ 19 ॥

ಅನಂತೋ ಧಾರಣಾರ್ಥಂ ಚ ಬಿಭರ್ತಿ ಚ ಮಹದ್ಯಶಃ ।
ಯಜ್ಞ ಇತ್ಯಪಿ ಸದ್ಭಿಶ್ಚ ಕಥ್ಯತೇ ವೇದವಾದಿಭಿಃ ॥ 20 ॥

ಶ್ರೀಹರಿಯು ಭೂತಭವಿಷ್ಯದ್ ವರ್ತಮಾನ ಜಗತ್ತಿನ ಉತ್ಪತ್ತಿ ಲಯಗಳಿಗೆ ಮೂಲ ಕಾರಣನಾಗಿರುವನು. ಇವನು ತನ್ನ ಸ್ವಂತ ಇಚ್ಛೆಯಿಂದಲೇ ಕಶ್ಯಪನ ಮಗನಾಗಿ ತೋರಿಸಿರುವನು. ಅನೇಕ ರೂಪಗಳಿಂದ ಆಗಾಗ್ಗೆ ಅವತರಿಸುತ್ತಲೇ ಇರುವನು.

ಇಂತಹ ಜಗತ್ ಸೃಷ್ಟಿಕರ್ತನೂ ಸಂಹಾರಕರ್ತನೂ ಆಗಿರುವ ಶ್ರೀಹರಿಯೇ ಜಗತ್ತಿನ ಹಿತಕ್ಕಾಗಿ ಧರ್ಮಸಂಸ್ಥಾಪನೆಯ ಸಲುವಾಗಿ ಮಥುರೆಯಲ್ಲಿ ಅವತರಿಸಿರುವನೆಂದು ತಿಳಿ.

ಶ್ರೀಹರಿಯು ಮಾಂಸಪಿಂಡವು ಮೇದಿಸ್ಸಿನಿಂದ ವ್ಯಾಪಿಸಿರುವಂತೆ ಹಾಗೂ ವಸ್ತ್ರದಲ್ಲಿ ದಾರವು ಓತಪ್ರೋತವಾಗಿ ಶ್ರೀಹರಿಯು ಸರ್ವತ್ರ ಪ್ರಪಂಚದಲ್ಲಿ ವ್ಯಾಪಿಸಿರುವನು. ಅಣುರೇಣುತೃಣಕಾಷ್ಟಗಳಲ್ಲಿಯೂ ತುಂಬಿರುವನು.

**ಶ್ವೇತಃ ಕೃತಯುಗೇ ದೇವೋ ರಕ್ತಃ ತ್ರೇತಾಯುಗೇ ತಥಾ ।**
**ದ್ವಾಪರೇ ಚ ತಥಾ ಪೀತಃ ಕೃಷ್ಣಃ ಕಲಿಯುಗೇ ಪ್ರಭುಃ ॥ 21 ॥**

**ಅವಧೀತ್ ಸ ಹಿರಣ್ಯಾಕ್ಷಂ ದಿವ್ಯರೂಪಧರೋ ಹರಿಃ ।**
**ದಧಾರಾಪ್ಸು ನಿಮಜ್ಜಂತೀಮೇಷ ದೇವೋ ವಸುಂಧರಾಂ ॥ 22 ॥**

**ವಾರಾಹಂ ವಪುರಾಶ್ರಿತ್ಯ ಜಗತೋ ಹಿತಕಾಮ್ಯಯಾ ।**
**ಜಘ್ನೇ ಹಿರಣ್ಯಕಶಿಪುಂ ನಾರಸಿಂಹವಪುರ್ಹರಿಃ ॥ 23 ॥**

ಸರ್ವತ್ರ ವ್ಯಾಪ್ತನಾದ ಭಗವಂತನು ಕೃತಯುಗದಲ್ಲಿ ಶ್ವೇತವರ್ಣದಿಂದ ಬೆಳಗುತ್ತಾನೆ.

ತ್ರೇತಾಯುಗದಲ್ಲಿ ಕೆಂಪು ಬಣ್ಣದಿಂದ ಕೂಡಿರುತ್ತಾನೆ. ದ್ವಾಪರದಲ್ಲಿ ಹಳದಿ ಬಣ್ಣವುಳ್ಳವನೂ, ಕಲಿಯುಗದಲ್ಲಿ ಅವನ ಬಣ್ಣ ಕಪ್ಪು.

ಶ್ರೀಹರಿಯು ಲೋಕಕಂಟಕನಾದ ಹಿರಣ್ಯಾಕ್ಷನನ್ನು ದಿವ್ಯ ವರಾಹರೂಪ ಧರಿಸಿ ಕೊಂದು ಹಾಕಿದನು. ಜಗತ್ತಿಗೆ ಹಿತವುಂಟು ಮಾಡುವ ಸಲುವಾಗಿ ನೀರಿನಲ್ಲಿ ಮುಳುಗಿ ಹೋಗುತ್ತಿದ್ದ ಭೂಮಿಯನ್ನು ವರಾಹ ರೂಪದಿಂದ ಮೇಲೆ ತಂದಿರಿಸಿದನು. ನಂತರ ನರಸಿಂಹ ರೂಪ ಧರಿಸಿ ಹಿರಣ್ಯಾಕ್ಷನ ಅಣ್ಣನಾದ ಹಿರಣ್ಯಕಶಿಪುವನ್ನು ಸಂಹರಿಸಿದನು.

ನಂತರ ವಾಮನನಾಗಿ ಅವತರಿಸಿ ವಿಷ್ಣುವು ಮೂರು ಹೆಜ್ಜೆಗಳನ್ನು ಅಳೆಯುವ ವ್ಯಾಜದಿಂದ ಬಲಿಚಕ್ರವರ್ತಿಯನ್ನು ನಾಗಪಾಶಗಳಿಂದ ಬಂಧಿಸಿದನು.

ದೇವ ದಾನವರ ಉದ್ಯೋಗದಿಂದಾಗಿ ರಾಜಲಕ್ಷ್ಮಿಯು ಪ್ರಕಟಳಾದಳು. ದೇವ-ದಾನವರಿಬ್ಬರೂ ರಾಜಲಕ್ಷ್ಮಿಯನ್ನು ಉಪಯೋಗಿಸಲು ಅರ್ಹರಾಗಿದ್ದರೂ ಭಗವಂತನು ವಿರೂಡ್ರೂಪ ತಾಳಿ ಮೂರು ಲೋಕಗಳನ್ನು ಆಕ್ರಮಿಸಿದನು. ಹೀಗೆ ಪಡೆದ ರಾಜ್ಯಶ್ರೀಯನ್ನು ನಿನಗೆ ಒಪ್ಪಿಸಿರುವನು.

ಯಾರು ತಪಸ್ಸನ್ನಾಚರಿಸದೆ, ದುರ್ವ್ಯವಹಾರಗಳಲ್ಲಿ ಆಸಕ್ತನಾದವನನ್ನು ಶ್ರೀಹರಿಯು ಕೊಂದು ಹಾಕುವನು. ದುರಾಚಾರಿಗಳನ್ನು ಅಂತ್ಯ-ಗೊಳಿಸುವುದೇ ಶ್ರೀಕೃಷ್ಣ ವ್ರತವಾಗಿದೆ.

**ಜಘ್ನೇ ಚ ದಾನವಾನ್ ಮುಖ್ಯಾನ್ ದೇವಾನಾಂ ಯೇ ಚ ಶತ್ರವಃ ।**
**ತವ ಪ್ರಿಯಾರ್ಥಂ ಗೋವಿಂದಃ ಧರ್ಮನಿತ್ಯಃ ಸತಾಂ ಗತಿಃ ॥ 24 ॥**

ಧರ್ಮರಕ್ಷಕನು ಸತ್ಪುರುಷರಿಗೆ ಆಶ್ರಯನಾದ ಗೋವಿಂದನು ನಿನ್ನ ಪ್ರೀತಿಗಾಗಿಯೇ ದೇವ ಶತ್ರುಗಳನ್ನು ಬಹುದಾನವರನ್ನು ಸಂಹರಿಸಿರುವನು. ಇದೇ ವಿಷ್ಣುವು ಶ್ರೀರಾಮನಾಮಕನಾಗಿ ದುಷ್ಟರಾವಣನನ್ನೂ ಸಂಹರಿಸಿದನು. ಹೀಗೆಯೇ ಬೇರೆ ಬೇರೆ ಅವತಾರಗಳನ್ನು ಹೊಂದಿ ತನ್ನಿಚ್ಛೆಯಂತೆ ಕಾರ್ಯಾದಿಯುಕ್ತಗಳಿಂದ ದೃಪ್ತರಾದ ದಾನವ-ಅಸುರರನ್ನು ಸಿಂಹವು ಆನೆಯನ್ನು ಸಂಹರಿಸುವಂತೆ ಸಂಹಾರ ಮಾಡಿದನು.

**ಹಿತಾಯ ಜಗತೋಽದ್ಯಾಪಿ ಲೋಕೇ ವಸತಿ ಮಾನುಷೇ ।**
**ಉಪೇಂದ್ರೋ ಜಗತಾಂನಾಥಃ ಸರ್ವಭೂತೋತ್ತಮೋತ್ತಮಃ ॥ 25 ॥**

ನಿನ್ನ ತಮ್ಮ ಉಪೇಂದ್ರನೇ ಸರ್ವಭೂತಗಳಲ್ಲಿ ಉತ್ತಮೋತ್ತಮನಾದ ಶ್ರೀಹರಿಯು. ಅವನು ಈ ಯುಗದಲ್ಲಿಯೂ ಜಗತ್ತಿನ ಸುಖಕ್ಕಾಗಿ ಶ್ರೀಕೃಷ್ಣನಾಗಿ ಅವತರಿಸಿರುವನು.

ನಾನು ಈ ಹಿಂದೆ ಶ್ರೀಹರಿಯು ಜಟಧಾರಿಯಾಗಿ ಕೃಷ್ಣಾಜಿನ ಧರಿಸಿ, ದಂಡಧಾರಿಯಾಗಿ ಬಲ್ಯಾದಿ ದೈತ್ಯರ ಸಮೂಹದಲ್ಲಿ – ಹುಲ್ಲು ಪೊದೆ-ಯಲ್ಲಿರುವ ಅಗ್ನಿಯಂತೆ – ಜಾಜ್ವಲ್ಯಮಾನನಾಗಿ ವಾಮನ ರೂಪದಿಂದ ಸಂಚರಿಸುತ್ತಿದ್ದದ್ದನ್ನು ನಾನು ಕಂಡಿದ್ದೇನೆ.

ಹಿಂದೊಂದು ಕಾಲದಲ್ಲಿ ಇಡೀ ವಿಶ್ವವೆಲ್ಲವೂ ದಾನದ ರೂಪವಾದ ಸಮುದ್ರದಲ್ಲಿ ಮುಳುಗಿ ಹೋಗಿತ್ತು. ಸರ್ವಜಗತ್ತೂ ದಾನವ ಮಯವಾಗಿದ್ದಿತು.

ಶ್ರೀಹರಿಯು ಜಗತ್ತಿನ ಹಿತಕ್ಕಾಗಿ ಜಗತ್ತಿನಲ್ಲಿ ತುಂಬಿ ಹೋಗಿರುವ ದೈತ್ಯ ದಾನವರನ್ನು ಸಂಹಾರ ಮಾಡಿದನು.

**ಅವಶ್ಯಂ ಪಾರಿಜಾತಂ ತೇ ನಯಿಷ್ಯತಿ ಜನಾರ್ದನಃ ।**
**ದ್ವಾರಕಾಮಮರಶ್ರೇಷ್ಠ! ನಾನ್ಯತಂ ಚ ಬ್ರವೀಮ್ಯಹಮ್ ॥ 26 ॥**

**ಭ್ರಾತೃ ಸ್ನೇಹಾಭಿಭೂತಸ್ತ್ವಂ ನ ಕೃಷ್ಣೇ ಪ್ರಹರಿಷ್ಯತಿ ।**
**ನಾಪಿ ಕೃಷ್ಣಃ ತ್ವಯಿ ಜ್ಯೇಷ್ಠೇ ಪ್ರಹರಿಷ್ಯತಿ ವಾಸವ ॥ 27 ॥**

**ನೈವ ಚೇತ್ ಶ್ರೋಷ್ಯತಿ ಪ್ರೋಕ್ತಂ ಮಯಾ ದೇವ ಕಥಂಚನ ।**
**ಪೃಚ್ಛತ್ವಂ ನಯಧರ್ಮಜ್ಞಾನ್ ಯೇ ಹಿತಾಸ್ತವ ಮಂತ್ರಿಣಃ ॥ 28 ॥**

ಅಮರಮದ್ಯನೇ! ನಾನೇನು ಸುಳ್ಳು ಹೇಳುತ್ತಿಲ್ಲ. ಶ್ರೀಕೃಷ್ಣನು ಪಾರಿಜಾತ ವೃಕ್ಷವನ್ನು ಇಲ್ಲಿಂದ ದ್ವಾರಕೆಗೆ ಕೊಂಡೊಯ್ಯುವುದು ಖಂಡಿತ.

ವಾಸವನೇ! ಭ್ರಾತೃ ಸ್ನೇಹದಿಂದ ಕೂಡಿರುವ ನೀನಾದರೂ ಶ್ರೀಕೃಷ್ಣನನ್ನು ಹೊಡೆಯಲಾರೆ. ಉಪೇಂದ್ರನೂ ಕೂಡ ಜ್ಯೇಷ್ಠನಾದ ನಿನ್ನ ಮೇಲೆ ಕೈಯೆತ್ತುವುದಿಲ್ಲ.

ದೇವೇಂದ್ರನೇ ! ನನ್ನ ಮಾತುಗಳನ್ನು ಕೇಳು. ನನ್ನ ಮಾತು ಕೇಳಲು ನಿನಗೆ ಇಷ್ಟವಾಗಿಲ್ಲವಾದರೆ ಈ ವಿಷಯದಲ್ಲಿ ನೀತಿಕೋವಿದರಾದ ನಿನ್ನ ಮಂತ್ರಿಗಳನ್ನಾದರೂ ಕೇಳಿ ಅದರಂತೆ ನಡೆ.

*ವೈಶಂಪಾಯನ ಉವಾಚ–*

**ನಾರದೇನೈವಮುಕ್ತಸ್ತು ಮಹೇಂದ್ರೋ ಜನಮೇಜಯ ।**
**ಇದಮುತ್ತರ ಮೀಶೋಽಥ ಪ್ರತ್ಯುವಾಚ ಜಗದ್ಗುರುಮ್ ॥ 29 ॥**

ನಾರದರು ಹೀಗೆ ಹೇಳಿದಾಗ ದೇವೇಂದ್ರನು ಜಗದ್ಗುರು ನಾರದರಿಗೆ ಹೀಗೆಂದನು.

ನಾರದರೇ! ತಾವು ಶ್ರೀಕೃಷ್ಣನ ಪ್ರಭಾವವನ್ನು ಮನಮುಟ್ಟುವಂತೆ ತಿಳಿಸಿದ್ದೀರಿ.

ಅವನ ಪ್ರಭಾವವವನ್ನೊಳಗೊಂಡ ಅನೇಕ ಮಹಿಮೆಗಳನ್ನು ನಾನೂ ಸಹ ಬಹುಬಾರಿ ಕೇಳಿದ್ದೇನೆ. ಶ್ರೀಕೃಷ್ಣನು ತಾವು ಹೇಳಿದಂತೆ ಮಹಾನುಭಾವ–ನಾಗಿದ್ದು ಅವನಿಗೆ ಪಾರಿಜಾತ ವೃಕ್ಷವನ್ನು ಕೊಡಬಹುದಾಗಿದ್ದರೂ ಸಜ್ಜನರ ಧರ್ಮವನ್ನು ಸ್ಮರಿಸುತ್ತಾ ಪಾರಿಜಾತವನ್ನು ಅವನಿಗೆ ನೀಡುವುದಿಲ್ಲ.

**ಮಹಾಪ್ರಭಾವೋ ನಾಲ್ಪಾರ್ಥೇ ರುಷ್ಯೇದಿತಿ ವಿಚಿಂತಯನ್ ।**
**ವ್ಯವಸ್ಥಿತೋಽಹಂ ಭದ್ರಂತೇ ಮುನೇ ಸರ್ವಗುಣಾದಿತಿ ॥ 30 ॥**
**ಮಹಾಪ್ರಭಾವಾಃ ಸತತಂ ಭವಂತಿ ಹಿ ಸಹಿಷ್ಣವಃ ।**
**ಶ್ರೋತಾರಶ್ಚೈವ ಸತತಂ ವೃದ್ಧಾನಾಂ ಜ್ಞಾನಚಕ್ಷುಷಾಮ್ ॥ 31 ॥**

ನಾರದರೇ ! ನಿಮಗೆ ಮಂಗಳವಾಗಲಿ ! ತಾವು ಚಿತ್ರರಿಸಿದಂತೆ ಶ್ರೀಕೃಷ್ಣನು ಮಹಾಮಹಿಮನೆ ನಿಜ. ಯಾವಾಗಲೂ ಪ್ರಭಾವಶಾಲಿಗಳಾದವರೂ ಎಂದು ಅಲ್ಪವಸ್ತುವಿಗಾಗಿ ಅಸೆಪಡಲಾರರು.

ಅತ್ಯಂತ ಪ್ರಭಾವಶಾಲಿಗಳಾದ ವ್ಯಕ್ತಿಗಳು ಸ್ವಾಭಾವಿಕವಾಗಿಯೇ ಸಹನಾಗುಣ ಹೊಂದಿರುತ್ತಾರೆ. ಅಂತಹವರು ಯಾವುದೇ ಕಾರ್ಯ ಮಾಡಬೇಕಾಗಿ ಬಂದಾಗ ಜ್ಞಾನಿಗಳ ಮಾತನ್ನು ಕೇಳುತ್ತಾರೆ.

**ಮಹಾತ್ಮಾಕಾರಣೇ ನಾಲ್ಪೇ ಕೃಷ್ಣೋ ಧರ್ಮಭೃತಾಂ ವರಃ ।**
**ಭ್ರಾತ್ರಾ ಜ್ಯೇಷ್ಠೇನ ಸರ್ವಜ್ಞೋ ವಿರೋಧಂ ಗಂತು ಮರ್ಹತಿ ॥ 32 ॥**
**ಯಥೈವಂ ಮಮ ಮಾತುಃ ಸ ವರಂ ಪ್ರಾದಾದ್ ಅಧೋಕ್ಷಜಃ ।**
**ತಥೈವ ತಸ್ಯಾಃ ಪುತ್ರಾಣಾಂ ಜ್ಯೇಷ್ಠಾನಾಂ ಸೋಢುಮರ್ಹತಿ ॥ 33 ॥**

ಶ್ರೀಕೃಷ್ಣನಾದರೂ ಮಹಾನುಭಾವನೂ ಧರ್ಮನಿಷ್ಠನೂ ಆಗಿರುವನು. ಹೀಗಿರುವಾಗ ಅಲ್ಪ ಕಾರಣಕ್ಕಾಗಿ ತನ್ನ ಸೋದರನಿಂದ ವಿರೋಧವನ್ನು ಕಟ್ಟಿಕೊಳ್ಳಲಾರನು. ನನ್ನ ತಾಯಿಗೆ ವರವನ್ನು ನೀಡಿ ತಾನು ಕಿರಿಯಪುತ್ರನಾಗಿ ಅವತರಿಸಿದಂತೆ, ಅವಳ ಜ್ಯೇಷ್ಠಪುತ್ರಂದಿರಾದ ನಮ್ಮಲ್ಲಿ ಅಧೋಕ್ಷಜನು ಸಹನೆಯಿಂದ ಸಹಿಸಿಕೊಳ್ಳುವುದು ಉಚಿತವಾಗಿದೆ.

ವಿಷ್ಣುವು ಉಪೇಂದ್ರನಾಗಿ ತನ್ನಿಚ್ಛೆಯಂತೆ ಅವತರಿಸಿದನು. ಉಪೇಂದ್ರನಾದ ನಂತರ ಅಣ್ಣನಾದ ನನ್ನನ್ನು ಗೌರವಿಸುವುದು ಅವನಿಗೆ ಯೋಗ್ಯವಾಗಿದೆ.

ವಾಮನಾವತಾರದಲ್ಲಿ ವಿಷ್ಣುವು ನಾನು ಜ್ಯೇಷ್ಠನೆಂದೆ ಒಪ್ಪಿಕೊಳ್ಳದಿದ್ದರೆ, ಅವನು

ಇಂದ್ರನ ತಮ್ಮ ಉಪೇಂದ್ರನೆಂಬ ಹೆಸರು ಇಲ್ಲವಾದರೆ ಈಗಲೇ ಅವನು ನನಗೆ ಜ್ಯೇಷ್ಠನೇ ಆಗಲಿ.

ಧೈರ್ಯಶಾಲಿಗಳೂ ಧರ್ಮಾತ್ಮರೂ ಆದ ನಾರದರು ಇಂದ್ರನು ತನ್ನ ನಿಶ್ಚಯವನ್ನು ಬದಲಾಯಿಸಲಾರನೆಂಬುವುದನ್ನು ತಿಳಿದರು. ಅವನ ಅನುಮತಿ ಹೊಂದಿದ ಅವರು ದ್ವಾರಕೆಗೆ ಹೊರಟರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಪಾರಿಜಾತಾಪಹರಣವೆಂಬಲ್ಲಿ
ಎಪ್ಪತ್ತೊಂದನೆಯ ಅಧ್ಯಾಯ ಸಮಾಪ್ತಿ

## ಅಥ ದ್ವಿಸಪ್ತತಿತಮೋಽಧ್ಯಾಯಃ

*ಶ್ರೀಕೃಷ್ಣನು ಇಂದ್ರನ ಮೇಲೆ ಯುದ್ಧ ಮಾಡಲು ನಿಶ್ಚಯಿಸಿದ್ದು*

*ವೈಶಂಪಾಯನ ಉವಾಚ –*

**ಅಥೈತ್ಯ ದ್ವಾರಕಾಂ ರಮ್ಯಾಂ ನಾರದೋ ಮುನಿಸತ್ತಮಃ ।**
**ದದರ್ಶ ಪುರುಷಶ್ರೇಷ್ಠಂ ನಾರಾಯಣಮರಿಂದಮಮ್ ॥ 1 ॥**

**ಸ್ವವೇಶ್ಮನಿ ಸುಖಾಸೀನಂ ಸಹಿತಂ ಸತ್ಯಭಾಮಯಾ ।**
**ವಿರಾಜಮಾನಂ ವಪುಷಾ ಸರ್ವತೇಜೋತಿಗಾಮಿನಾ ॥ 2 ॥**

**ತಮೇವಾರ್ಥಂ ಮಹಾತ್ಮಾನಂ ಚಿಂತಯಂತಂ ದೃಢವ್ರತಂ ।**
**ಕೇವಲಂ ಯೋಜಯಂತಂ ಚ ವಾಕ್ಯಮಾತ್ರೇಣ ಭಾಮಿನೀಂ ॥ 3 ॥**

ಮುನಿವರ್ಯರಾದ ನಾರದರು ಸುಂದರ ದ್ವಾರಕೆಯನ್ನು ಹೊಂದಿ ಅಲ್ಲಿರುವ ಶತ್ರುನಾಶಕನಾದ ಶ್ರೀಕೃಷ್ಣನನ್ನು ಕಂಡರು. ಶ್ರೀಕೃಷ್ಣನಾದರೂ ಈ ಸಮಯದಲ್ಲಿ ಸತ್ಯಭಾಮೆಯೊಡನೆ ಇದ್ದನು. ಅವನ ಶರೀರ ಕಾಂತಿಯು ಸಕಲ ಸೂರ್ಯಾದಿಗಳಿಗಿಂತ ಮಿರಿಮಿರಿ ಮಿಂಚುತ್ತಿತ್ತು. ಅವನಾದರೂ ಪಾರಿಜಾತ ವೃಕ್ಷದ ಬಗ್ಗೆ ವಿಚಾರಿಸುತ್ತಿದ್ದು, ಅದನ್ನು ಬೇಕೆಂದಿದ್ದ ಸತ್ಯಭಾಮೆಯನ್ನು ಮಧುರ ಮಾತುಗಳಿಂದ ಸಾಂತ್ವನಗೊಳಿಸುತ್ತಿದ್ದನು. ಇಂತಹ ಕೃಷ್ಣನನ್ನು ನಾರದರು ಭೇಟಿ ಮಾಡಿದರು.

**ಸುಖೋಪವಿಷ್ಟಂ ವಿಶ್ರಾಂತಂ ಪ್ರಹಸ್ಯ ಮಧುಸೂದನಃ ।**
**ವೃತ್ತಾಂತಂ ಪರಿಪಪ್ರಚ್ಛ ಪಾರಿಜಾತತರುಂ ಪ್ರತಿ ॥ 4 ॥**

**ಅಥಾಚಷ್ಟ ಮುನಿಃ ಸರ್ವಂ ವಿಸ್ತರೇಣ ಮಹಾಮುನಿಃ ।**
**ಇಂದ್ರಾನುಜಾಯೇಂದ್ರವಾಕ್ಯಂ ನಿಖಿಲಂ ಜನಮೇಜಯ ॥ 5 ॥**

**ಶ್ರುತ್ವಾ ಕೃಷ್ಣಸ್ತು ತತ್ ಸರ್ವಂ ನಾರದಂ ವಾಕ್ಯಮಬ್ರವೀತ್ ।**
**ಅಮರಾವತೀಂ ಪುರೀಂ ಯಾಸ್ಯೇ ಶ್ವೋಽಹಂ ಧರ್ಮಭೃತಾಂ ವರ ॥6 ॥**

ನಾರದರನ್ನು ನೋಡಿದ ಶ್ರೀಕೃಷ್ಣನು ಆಸನದಿಂದ ಮೇಲೆದ್ದು ಶಾಸ್ತ್ರೋಕ್ತ ವಿಧಿಯಿಂದ ಸತ್ಕರಿಸಿದನು. ಆಸನದಲ್ಲಿ ಆಸೀನರಾದ ಮೇಲೆ ಕೃಷ್ಣನು ನಗು ನಗುತ್ತಲೆ ಪಾರಿಜಾತ ವೃಕ್ಷದ ಬಗ್ಗೆ ಹೋದ ಕೆಲಸವೇನಾಯಿತು? ಎಂದು ಪ್ರಶ್ನಿಸಿದನು.

ತಪೋಧನ ನಾರದರು ಇಂದ್ರಾನುಜನಿಗೆ ಇಂದ್ರನು ಹೇಳಿದ ಮಾತುಗಳನ್ನೆಲ್ಲ ವಿಸ್ತರಿಸಿ ಹೇಳಿದರು. ಈ ವಿಷಯವನ್ನು ಕೇಳಿದ ಶ್ರೀಕೃಷ್ಣನು ಹೀಗೆಂದನು.

ನಾರದರೇ! ನಾನು ನಾಳೆಯೇ ಅಮರಾವತಿಗೆ ಹೊರಡಲು ತೀರ್ಮಾನಿಸಿದ್ದೇನೆ. ಹೀಗೆ ಹೇಳಿ ನಾರದರೊಂದಿಗೆ ಸಮುದ್ರ ತೀರಕ್ಕೆ ಹೋಗಿ ಏಕಾಂತ ಪ್ರದೇಶದಲ್ಲಿ ಹೀಗೆಂದನು.

ನಾರದರೇ! ತಾವು ಇಂದೇ ಪುನಃ ಮಹೇಂದ್ರ ಭವನಕ್ಕೆ ಹೋಗಿ ಇಂದ್ರದೇವನಿಗೆ ನನ್ನ ನಮಸ್ಕಾರ ಮಾಡಿ ಹೀಗೆ ಹೇಳಿರಿ.

**ನ ಯುದ್ಧೇ ಪ್ರಮುಖೇ ಶಕ್ರ ಸ್ಥಾತುಮರ್ಹಸಿ ಮೇ ಪ್ರಭೋ ।**
**ಪಾರಿಜಾತಸ್ಯ ನಯನೇ ನಿಶ್ಚಿತಂ ತ್ವಮವೇಹಿ ಮಾಮ್ ॥ 7 ॥**

ಇಂದ್ರದೇವನೇ! ನನಗೆ ವಿರುದ್ಧವಾಗಿ ಯುದ್ಧಕ್ಕೆ ನಿಲ್ಲುವುದು ನಿನಗೆ ಯೋಗ್ಯವಲ್ಲ. ನಾನಾದರೂ ನನ್ನ ಪ್ರಿಯೆಗಾಗಿ ಪಾರಿಜಾತವನ್ನು ತಂದು ಕೊಡಲೇಬೇಕೆಂದು ನಿಶ್ಚೈಸಿರುವೆನು. ಆದ್ದರಿಂದ ಈ ವಿಚಾರವನ್ನು ಪುನಃ ವಿಮರ್ಶಿಸು.

ಶ್ರೀಕೃಷ್ಣನು ನೀಡಿದ ಸಂದೇಶ ಹೊತ್ತ ನಾರದರು ದೇವಲೋಕಕ್ಕೆ ಹೋದರು. ಇಂದ್ರನಿಗೆ ಉಪೇಂದ್ರನ ಸಂದೇಶವನ್ನು ಚಾಚೂತಪ್ಪದೆ ಹೇಳಿದರು.

ಈ ಮಧ್ಯದಲ್ಲಿ ಇಂದ್ರದೇವನು ತನ್ನ ಗುರುವಾದ ಬೃಹಸ್ಪತ್ಯಾಚಾರ್ಯರಿಗೆ ಹೇಳಿದನು. ಇಂದ್ರದೇವನ ಮಾತನು ಕೇಳಿದ ಬೃಹಸ್ಪತಿಗಳು ಹೀಗೆ ಹೇಳಿದರು.

**ಅಹೋ ಧಿಗ್ ಬ್ರಹ್ಮಸದನಂ ಮಯಿ ಯಾತೇ ಶತಕ್ರತೋ ।**
**ದುರ್ನೀತಮಿದಮಾರಬ್ಧ ಮತ್ರ ಭೇದೋ ಹಿ ದಾರುಣಃ ॥ 8 ॥**
**ಅನಾಖ್ಯಾತ್ವಾ ಕಥಂ ನಾಮ ಭವತಾ ಭುವನೇಶ್ವರ ।**
**ಮಮೈತತ್ ಕೃತ್ಯಮಾರಬ್ಧಂ ದೇವ ಕೇನಾಪಿ ಹೇತುನಾ ॥ 9 ॥**
**ಅಥವಾ ಭವಿತವ್ಯೇನ ಕರ್ಮಜೇನ ಪ್ರಯುಜ್ಯತೇ ।**
**ಜಗದ್ ವೃತ್ರಘ್ನ ನ ವಿಧಿಃ ಶಕ್ಯಃ ಸಮತಿವರ್ತಿತುಮ್ ॥ 10 ॥**

ಶತಕ್ರತುವೆ! ನಾನು ಬ್ರಹ್ಮ ಸದನಕ್ಕೆ ಹೋಗುವವನಿದ್ದೆ. ನಿನ್ನ ಈ ವರ್ತನೆಗೆ ಧಿಕ್ಕಾರವಿರಲಿ. ಈ ಸಮಯದಲ್ಲಿಯೆ ನೀನು ಇಂತಹ ದುರ್ನೀತಿಯನ್ನು ಪ್ರಾರಂಭಿಸಿರುವೆ. ಈ ನಿನ್ನ ಅವಿಮರ್ಶ ವ್ಯಾಪಾರದಿಂದ ಬಾರಿ ಕಲಹ-ವಾಗಲಿದೆಯೆಂದು ನನ್ನ ಅನಿಸಿಕೆ. ಇಂದ್ರದೇವನೇ, ನನ್ನ ಗಮನಕ್ಕೆ ತಾರದೇನೆ ನೀನು ಇಂತಹ ಕೆಟ್ಟ ಕಾರ್ಯವನ್ನು ನಿಶ್ಚಯ ಮಾಡಿರುವೆ. ನನಗೂ ತಿಳಿಸದೆ ಮಾಡಬೇಕಾದ ಅಂತಹ ಕಾರ್ಯ ಮಾಡಲು ಏನು ಕಾರಣ.

ಅಥವಾ ಸಕಲ ಜಗತ್ತೂ ಮುಂದೆ ನಡೆಯುವ ಕರ್ಮಫಲ ಪ್ರೇರಿತವಾಗಿದ್ದು ಸಕಲ ಪ್ರಾಣಿಗಳೂ ಸಹ ತಮ್ಮ ಕರ್ಮದಂತೆ ವ್ಯವಹರಿಸುತ್ತವೆ.

ಆದ್ದರಿಂದಲೇ ನೀನು ನನಗೆ ಹೇಳದೇನೆ ಇಂತಹ ದುರ್ವ್ಯವಹಾರಕ್ಕೆ ಕೈ ಹಾಕಿರುವಿ.

**ಸಹಸೈವ ತು ಕಾರ್ಯಾಣಾಮಾರಂಭೋ ನ ಪ್ರಶಸ್ಯ ತೇ ।**
**ತದೇತತ್ ಸಹಸಾರಬ್ಧಂ ಕಾರ್ಯಂ ದಾಸ್ಯತಿ ಲಾಘವಮ್ ॥ 11 ॥**

ಯಾವುದೇ ವ್ಯಕ್ತಿಯಾಗಲಿ ತನ್ನ ಮನಸ್ಸಿಗೆ ಬಂದೊಡನೆಯೇ ವಿಚಾರ ಮಾಡದೆ ಕಾರ್ಯವನ್ನು ಮಾಡುವುದು ಯೋಗ್ಯವಲ್ಲ. ನೀನಾದರೂ ಪೂರ್ವಾಪರ ವಿವೇಚನೆಯಿಲ್ಲದೆ ಮಾಡಿರುವ ಈ ಅವಿವೇಕ ಕಾರ್ಯದಿಂದಾಗಿ ಲಾಘವವನ್ನು ಹೊಂದುವೆ ಎಂದರು.

**ಬೃಹಸ್ಪತಿಂ ಮಹಾತ್ಮಾನಂ ಮಹೇಂದ್ರಃ ತ್ವಬ್ರವೀದ್ ವಚಃ ।**
**ಏವಂಗತೇಽದ್ಯ ಯತ್ ಕಾರ್ಯಂ ಯದ್ ಭವಾನ್ ವಕ್ತುಮರ್ಹತಿ ॥ 12॥**

ಇಂದ್ರದೇವನಾದರೂ ಗುರುಗಳೇ ಆದ್ದದ್ದಾಯಿತು ಇಂತಹ ಪರಿಸ್ಥಿತಿಯಲ್ಲಿ ನಾನೇನು ಮಾಡಬೇಕೆಂದು ನನಗೆ ತಿಳಿಸಿರಿ.

ಇಂದ್ರನ ಮಾತನ್ನು ಕೇಳಿದ ಭೂತಭವ್ಯರಹಸ್ಯಗಳನ್ನು ತಿಳಿದಿರುವ ಉದಾರಬುದ್ಧಿಯ ಬೃಹಸ್ಪತಿಯು ತಲೆತಗ್ಗಿಸಿ ಸ್ವಲ್ಪಕಾಲ ಆಲೋಚಿಸಿ ಹೀಗೆಂದರು.

ಯತಸ್ವ ಸಹ ಪುತ್ರೇಣ ಯೋಧಯಸ್ವ ಜನಾರ್ದನಮ್ ।
ತಥಾ ಶಕ್ರ ಕರಿಷ್ಯಾಮಿ ಯಥಾ ನ್ಯಾಯ್ಯಂ ಭವಿಷ್ಯತಿ ॥ 13 ॥

ದೇವೇಂದ್ರನೇ, ನಿನ್ನ ಪುತ್ರನಾದ ಜಯಂತನೊಂದಿಗೆ ಸೇರಿ ಜನಾರ್ದನ-ನೊಂದಿಗೆ ಯುದ್ಧ ಮಾಡು. ಯುದ್ಧದಲ್ಲಿ ಅವನನ್ನು ಗೆಲ್ಲಲು ಪ್ರಯತ್ನಿಸು. ಈ ಮಧ್ಯೆ ನಾನೂ ಸಹ ನ್ಯಾಯ ಮಾರ್ಗದಲ್ಲಿ ಈ ಸಮಸ್ಯೆ ಸುಖಾಂತ-ವಾಗುವ ಮಾರ್ಗ ಆಲೋಚಿಸುತ್ತೇನೆ.

ಬೃಹಸ್ಪತ್ಯಾಚಾರ್ಯರು ಹೀಗೆ ಇಂದ್ರನಿಗೆ ಹೇಳಿ ಕ್ಷೀರಸಾಗರದ ದಂಡೆಯಲ್ಲಿರುವ ಕಶ್ಯಪರಿಗೆ ಈ ವಿಷಯಗಳನ್ನೆಲ್ಲ ಹೇಳಿದರು.

ಈ ಮಾತನ್ನು ಕೇಳಿದ ಕಶ್ಯಪರು ಕೋಪಗೊಂಡು ಬೃಹಸ್ಪತಿಗಳಿಗೆ ಹೀಗೆಂದರು.

ತಚ್ಛ್ರುತ್ವಾ ಕಶ್ಯಪಃ ಕ್ರುದ್ಧೋ ಬೃಹಸ್ಪತಿಮಭಾಷತ ।
ಅವಶ್ಯಂ ಭಾವ್ಯ ಮೇತದ್ ಭೋಃ ಸರ್ವಥಾ ನಾತ್ರ ಸಂಶಯಃ ॥ 14 ॥
ಇಚ್ಛತಃ ಸದೃಶೀಂ ಭಾರ್ಯಾಂ ಮಹರ್ಷೇಃ ದೇವಶರ್ಮಣ ।
ಅಪಧ್ಯಾನ ಕೃತೋ ದೋಷಃ ಪತತ್ಯೇಷ ಶತಕ್ರತೋಃ ॥ 15 ॥
ತಸ್ಯ ದೋಷಸ್ಯ ಶಾಂತ್ಯರ್ಥಮಾರಬ್ಧಶ್ಚ ಮುನೇ ಮಯಾ ।
ಉದವಾಸಃ ಸ ದೋಷಶ್ಚ ಪ್ರಾಪ್ತ ಏವ ಸುದಾರುಣಃ ॥ 16 ॥
ತದ್ ಗಮಿಷ್ಯಾಮಿ ಮಧ್ಯೇಽಸ್ಯ ಸಹಾದಿತ್ಯಾ ತಪೋಧನ ।
ಉಭೌ ತೌ ವಾರಯಿಷ್ಯಾಮಿ ದೈವಂ ಸಂಪದತೇ ಮಯಾ ॥ 17 ॥

ಬೃಹಸ್ಪತಿಯೇ! ಈ ಇಂದ್ರೋಪೇಂದ್ರರಲ್ಲಿ ಯುದ್ಧ ಅವಶ್ಯ ನಡೆಯುತ್ತದೆ. ಇದು ಅವಶ್ಯ ನಡೆಯಲೇ ಬೇಕಷ್ಟೇ! ಯಾಕೆಂದರೆ - ಹಿಂದೊಮ್ಮೆ ಮಹರ್ಷಿಯಾದ ದೇವಶರ್ಮನ ಪತ್ನಿ ರುಚಿಯು ಪತಿಯಂತೆಯೆ ಶುದ್ಧ ಆಚಾರ ವ್ಯವಹಾರವುಳ್ಳವಳಾಗಿದ್ದಳು. ಸುಂದರಿಯಾದ ರುಚಿಯನ್ನು ಇಂದ್ರನು

ಉಪಭೋಗಿಸಲು ಇಷ್ಟಪಟ್ಟನು. ಇದರಿಂದ ಕೋಪಗೊಂಡ ದೇವಶರ್ಮನು ನಿನಗೆ ಪ್ರತೀಕಾರ ಮಾಡದೆ ಬಿಡುವುದಿಲ್ಲ ಎಂದು ಪ್ರತಿಜ್ಞೆಗೈದನು. ಅದರ ಪ್ರಭಾವವೇ ಈ ಯುದ್ಧೋದ್ಯೋಗ. ಇಂದ್ರನಿಗೆ ಪ್ರಾಪ್ತವಾಗಿರುವ ದೋಷ ಪರಿಹರಿಸಲೆಂದೇ ನಾನು ಇಲ್ಲಿ ನೀರಿನಲ್ಲಿ ಮುಳುಗಿ ತಪಸ್ಸನ್ನಾಚರಿಸುತ್ತಿರುವೆ. ಆದರೂ ಅದು ಕಡಮೆ ಆಗಬಹುದೇ ಹೊರತು ಪೂರ್ಣ ಇಲ್ಲದಂತಾ-ಗುವುದಿಲ್ಲ. ಬ್ರಾಹ್ಮಣನಿಗೆ ಬೇಸರ ಬಂದರೆ ಅದರ ತೀವ್ರತೆ ಯಾರನ್ನೂ ಬಿಡದು ತಾನೆ?

ನಾನೂ ಕೂಡ ಅದಿತಿಯೊಂದಿಗೆ ಈ ಯುದ್ಧೋದ್ಯೋಗವನ್ನು ಮಧ್ಯಸ್ತಿಕೆ ವಹಿಸಿ ಹೋಗುತ್ತಿರುವೆ. ದೈವವು ನನಗೆ ಅನುಕೂಲಿಸಿದರೆ ಯುದ್ಧವನ್ನು ತಡೆಯುವೆನು.

ಕಶ್ಯಪರ ಮಾತನ್ನು ಕೇಳಿದ ಬೃಹಸ್ಪತಿಯು,

**ಪ್ರಾಪ್ತಕಾಲಂ ತ್ವಯಾ ತತ್ರ ಭವಿತವ್ಯಂ ತಪೋಧನ ।**
**ತಥೇತಿ ಕಶ್ಯಪಶ್ಚೋಕ್ತ್ವಾ ಸಂಪ್ರಸ್ಥಾಪ್ಯ ಬೃಹಸ್ಪತಿಮ್ ॥ 18 ॥**
**ಜಗಾಮಾರ್ಚಯಿತುಂ ದೇವಂ ರುದ್ರಂ ಭೂತಗಣೇಶ್ವರಂ ।**

ತಪೋಧನರೇ, ಯುದ್ಧವಾಗುವುದು ಖಚಿತವಾಗಿದೆ. ಆದ್ದರಿಂದ ತಾವು ಈ ಸಮಯದಲ್ಲಿ ಅಲ್ಲಿರಲೇಬೇಕು ಎಂದು ಬೃಹಸ್ಪತಿಗಳು ಹೇಳಿದಾಗ ಕಶ್ಯಪರು ಹಾಗೆ ಆಗಲೀ ಎಂದು ಹೇಳಿ ಬೃಹಸ್ಪತಿಯನ್ನು ಬೀಳ್ಕೊಟ್ಟು ಕಶ್ಯಪರು ಭೂತಾಧಿನಾಥನಾದ ರುದ್ರದೇವನನ್ನು ಆರಾಧಿಸಲು ಹೊರಟರು. ಕಶ್ಯಪರಾದರೂ ಅದಿತಿಯೊಂದಿಗೆ ಕೂಡಿಕೊಂಡು ಕೈಲಾಸದಲ್ಲಿರುವ ರುದ್ರದೇವನಿಂದ ವರ ಪಡೆಯಲು ವೃಷಭಧ್ವಜವನ್ನು ಭಕ್ತ್ಯಾದರದಿಂದ ಆರಾಧಿಸಿದರು.

ಆ ಸಮಯದಲ್ಲಿ ವೇದೋಕ್ತ ಮಂತ್ರಗಳಿಂದಲೂ ತಾನೇ ರಚಿಸಿದ್ದ ಸ್ತೋತ್ರ ಪುಂಜದಿಂದ ಶಿವನನ್ನು ಸ್ತುತಿಸಿದರು. ಇದೊಂದು ಮಿಶ್ರಸ್ತುತಿಯಾಗಿದೆ.

**ಉರುಕ್ರಮಂ ವಿಶ್ವಕರ್ಮಾಣಮೀಶಂ ಜಗತ್ ಸ್ರಷ್ಟಾರಂ ಧರ್ಮದೃಶ್ಯಂ ವರೇಶಮ್ ।**
**ತಂ ಸರ್ವಂ ತ್ವಾಂ ಧೃತಿಮದ್ಧಾಮ ದಿವ್ಯಂ ವಿಶ್ವೇಶ್ವರಂ ಭಗವಂತಂ ನಮಸ್ಯೇ ॥ 19 ॥**

**ಯೋ ದೇವಾನಾಮಧಿಪಃ ಪಾಪಹರ್ತಾ ತತಂ ವಿಶ್ವಂ ಯೇನ ಜಗನ್ಮಯತ್ವಾತ್ ।**
**ಆಪೋಗರ್ಭಂ ಯಸ್ಯ ಶುಭಾ ಧರಿತ್ರ್ಯೀ ವಿಶ್ವೇಶ್ವರಂ ಶರಣಂ ಯಾಮಿ ಮೂರ್ಧ್ನಾ ॥ 20 ॥**

ಭಗವಂತನು ವಾಮನನಾಗಿ ಬಂದು ತ್ರಿವಿಕ್ರಮನಾಗಿ ರೂಪಧರಿಸಿ ಮೂರು ಲೋಕಗಳನ್ನೂ ಅಳೆದನು.

ಜಗತ್ತೆಲ್ಲವನ್ನೂ ಇವನೇ ನಿರ್ಮಿಸಿದವನು. ಲಕ್ಷ್ಮೀದೇವಿಗೂ ಸುಖ ನೀಡುವವನು (**ಈಶಂ**) ಅವ್ಯಕ್ತನಾದರೂ ಧರ್ಮದಿಂದ ನೋಡಲು ಸಾಧ್ಯನು. ವರ ನೀಡುವ ಬ್ರಹ್ಮಾದಿಗಳಿಗೂ ವರಪ್ರದಂ (**ವರದೇಶ ವರಪ್ರದಂ**).

ಸರ್ವ ವಸ್ತುಗಳಲ್ಲಿಯೂ ಅಂತರ್ಯಾಮಿಯಾದ್ದರಿಂದ ಸರ್ವನೆನಿಸುವನು. ಷಡ್ಗುಣ ಸಂಪೂರ್ಣನನ್ನು ನಮಸ್ಕಾರ ಮಾಡುವನು. ಯಾರು ದೇವತಾಧಿಪನೊ (**ದೇವಂ ದೇವತ್ರಾ**).

ಸ್ಮರಿಸಿದವರ ಪರಿಹಾರಕನೂ (ಹರಿಃ) ಅಣುರೇಣು ತೃಣಕಾಷ್ಠಗಳಲ್ಲಿ ವಸ್ತ್ರದ ತಂತುವಿನೋಲ್ ಓತಪ್ರೋತನಾಗಿರುವನು. ಯಾರ ಉದರದಲ್ಲಿ ಜಲಾದಿಗಳು ಆಶ್ರಯ ಪಡೆದಿರುವುದು, ಅಂತಹ ಹರಿಯನ್ನು ಶರಣು ಹೊಂದುವೆ.

ಯಾವ ಶ್ರೀಹರಿಯು ನರ-ನಾರಾಯಣ ರೂಪಧರಿಸಿ ಯತಿಯಂತೆ ಹತ್ತು ಸಾವಿರ ವರ್ಷ ಜಿತೇಂದ್ರಿಯನಾಗಿ ತಪಸ್ಸನ್ನಾಚರಿಸಿದನು. ಇವನ ತಪಸ್ಸು ಅದ್ಭುತವೆಂದು ಜಗತ್ತಿಗೆ ತೋರಲು ಇಂದ್ರನು ಅನೇಕ ಅಪ್ಸರಾಸ್ತ್ರೀಯರನ್ನು ಕಳುಹಿಸಿದನು. ಇವರು ತೋಳಗಳಂತೆ ಸುತ್ತುವರಿದರು. ನರ್ತನ ಮಾಡಿ ಹಾವಭಾವ ತೋರಿದರೂ ಕಣ್ಣು ಬಿಡಲಿಲ್ಲ. ಇಂತಹ ಸ್ತ್ರೀಯರೆಂಬ ತೋಳಗಳನ್ನು ಜಿತೇಂದ್ರಿಯನಾಗಿ ಸಂಹರಿಸಿದನು (ದೂರ ಮಾಡಿದರು).

ಯಾವ ರುದ್ರಾಂತರ್ಯಾಮಿಯು ಈ ಜಗತ್ತಿಗೆ ಪ್ರಧಾನಸ್ವಾಮಿಯೋ, ಪ್ರಲಯ ಕಾಲದಲ್ಲಿ ಇಡೀ ವಿಶ್ವವನ್ನೇ ಭಕ್ಷಿಸುವವನೋ, ಸೋಮರಸ ಪಾನಾರ್ಹರಾದ ಶತದೇವತೆಗಳಲ್ಲಿಯೂ ಶ್ರೇಷ್ಠನೋ ಅಥರ್ವಣಾದಿ ನಾಲ್ಕು ವೇದ ಪ್ರತಿಪಾದ್ಯನೋ, ಸುಮಂಗಲ ಶಿರಸ್ಸುಳ್ಳವನೋ ದೈತ್ಯರ ಅಂತಕನೋ ಸರ್ವಯಜ್ಞ ಭೋಕ್ತೃವೋ ಯಾವನಲ್ಲಿ ಸಕಲ ಜಗತ್ತು ಆಶ್ರಯ ಪಡೆದಿವೆಯೋ, ವಿಶ್ವನಿಯಾಮಕನೋ, ಯಾರು ವೈಕುಂಠಗಳಲ್ಲಿ

ಸಂಚರಿಸುವನೋ, ಪ್ರತಿಯೊಬ್ಬರೊಳಗಿದ್ದು ನಿಯಾರ್ಮನೂ, ಸೂರ್ಯಾದಿ-ಭಾಸಕನೋ ವೇದ ಶಾಖೆಗಳನ್ನು ವಿಂಗಡಿಸಿದನೋ ಅನಂತಾನಂತ ನೇತ್ರಾದಿ ಅವಯವಗಳುಳ್ಳವನೋ ಪವಿತ್ರನೋ, ಮೋಕ್ಷೋಪಾಯನೋ ಸ್ತುತಿಸಿದವರ ಪಾಪ ಶಾಂತಿಗೊಳಸುವನೋ, ಭಕ್ತರಿಗೆ ಸುಖ ನೀಡುವವನೂ ರುದ್ರಾದಿಗಳಗೂ ನಾಥನಾಗಿದ್ದು ಮಹಾಭೂತ-ನೆನಿಸಿರುವನೋ, ಅಂತಹ ಹೃಷಿಕೇಶನನ್ನು ಶರಣು ಹೊಂದು.

ಶೀಘ್ರಫಲದಾತೃವೂ, ಭಕ್ತರಾಭೀಷ್ಟ ಸೇಚಕನೂ, ವೇದಗಳನ್ನು ನಿರಂತರ ಕಂಠದಿಂದ ಉದ್ಗೀರ್ಯಮಾಣನೂ, ಯಾರು ಪುರುಷತ್ವ ಸೂಚಕ ಲಿಂಗ ರೂಪಿಯಾದ ಅನಂತೇಶ್ವರನೋ, ಮೂರು ಕಣ್ಣುಗಳುಳ್ಳ ನೃಸಿಂಹನೋ, ಯಾರ ಪತ್ನಿಯು ಸ್ತ್ರೀಯರಿಗೆಲ್ಲ ನಿಯಾಮಕಳೋ ಇಂತಹ ರುದ್ರಾಂತರ್ಗತ ನಾರಸಿಂಹನಿಗೆ ನಮಸ್ಕಾರ.

**ಇತಿ ಸಂಸ್ತೂಯಮಾನಸ್ತು ಭಗವಾನ್ ವೃಷಭಧ್ವಜಃ ।**
**ದರ್ಶಯಾಮಾಸ ಧರ್ಮಾತ್ಮಾ ಕಶ್ಯಪಂ ಧರ್ಮದೃಗ್ ವರಮ್ ॥ 21 ॥**

**ಯೇನ ಸಂಸ್ತೌಷಿ ಕಾರ್ಯೇಣ ತ್ವಂ ತಜ್ಜಾನೇ ಪ್ರಜಾಪತೇ ।**
**ಇಂದ್ರೋಪೇಂದ್ರೌ ಮಹಾತ್ಮಾನೌ ದೇವೌ ಪ್ರಕೃತಿಮೇಷ್ಯತಃ ॥ 22 ॥**

**ಪಾರಿಜಾತಂ ಚ ಧರ್ಮಾತ್ಮಾ ನಯಿಷ್ಯತಿ ಜನಾರ್ದನಃ ।**
**ಅಪಧ್ಯಾತೋಽಮರೇಂದ್ರೋಹಿ ಮುನಿನಾ ದೇವಶರ್ಮಣಾ ॥ 23 ॥**

**ಅಸ್ಯಾಕಾಂಕ್ಷತ್ ಪುರಾಭಾರ್ಯಾ ತಪೋದೀಪ್ತಸ್ಯ ಕಶ್ಯಪ ।**
**ಗಮ್ಯತಾಂ ತತ್ರ ಧರ್ಮಜ್ಞ ದಾಕ್ಷಾಯಣ್ಯಾ ಸಹ ತ್ವಯಾ ।**
**ಅದಿತ್ಯಾ ಶಕ್ರಸದನಂ ಶ್ರೇಯಸ್ತೇ ಪುತ್ರಯೋರ್ಧ್ರುವಮ್ ॥ 24 ॥**

ಜನಮೇಜಯನೇ! ಹೀಗೆ ಧರ್ಮಾತ್ಮನಾದ ಕಶ್ಯಪರು ಸ್ತುತಿಗೈದಾಗ ವೃಷಭಧ್ವಜನು ಸಂಪ್ರೀತನಾಗಿ ಹೀಗೆಂದನು.

ಪ್ರಜಾಪತಿಯೇ ನೀನು ಯಾವ ಉದ್ದೇಶದಿಂದ ನನ್ನನ್ನು ಸ್ತೋತ್ರ ಮಾಡುತ್ತಿರುವೆಯೆಂಬ ವಿಷಯ ನನಗೆ ತಿಳದಿದೆ. ಇಂದ್ರ ಉಪೇಂದ್ರರಿಬ್ಬರೂ ದೇವತೆಗಳಾಗಿದ್ದು ಮಹಾತ್ಮರಾಗಿರುವರು. ಅವರು ತಮ್ಮ ಸ್ವಭಾವದಂತೆ ವ್ಯವಹರಿಸುವರು. ಈ ಯುದ್ಧದ ಫಲವಾಗಿ ಜನಾರ್ದನನು ಪಾರಿಜಾತವನ್ನು ಭೂಮಿಗೆ ಒಯ್ಯುವುದು ನಿಶ್ಚಿತ.

ಈ ರೀತಿ ಪಾರಿಜಾತ ಭೂಮಿಗೆ ಹೋಗಲು ಕಾರಣವೂ ಇದೆ. ಹಿಂದೆ ದೇವಶರ್ಮನೆಂಬ ಮುನಿಯ ಪತ್ನಿಯನ್ನು ಆಕಾಂಕ್ಷೆಪಟ್ಟದ್ದರಿಂದ ದೇವಶರ್ಮನು ಇಂದ್ರನೇ! ನಿನಗೆ ಆಪತ್ತು ಬರಲಿದೆ ಎಂದು ಮಹಾತಪಸ್ವಿಯಾದ ದೇವಶರ್ಮನು ಇಂದ್ರನ ಬಗ್ಗೆ ಅಸಮಾಧಾನ ಪಟ್ಟಿದ್ದೆ ಈ ಯುದ್ಧಕ್ಕೆ ಕಾರಣವಾಗಿದೆ.

ಶಾಪದ ಫಲವಾಗಿ ಇಂದ್ರನಿಗೆ ಪರಾಜಯ ತಪ್ಪುವುದಿಲ್ಲ. ಧರ್ಮಾತ್ಮ ಕಶ್ಯಪನೇ!

ಈಗ ನೀನು ಅದಿತಿಯೊಂದಿಗೆ ಇಂದ್ರಭವನಕ್ಕೆ ಹೋಗು. ಅದಿತಿಯ ಇಬ್ಬರೂ ಪುತ್ರರಿಗೂ ಈ ಪ್ರಸಂಗದಿಂದ ಶ್ರೇಯಸ್ಸೆ ಆಗುವುದು.

ಹೀಗೆ ರುದ್ರದೇವನ ಮಾತನ್ನು ಕೇಳಿದ ಬ್ರಹ್ಮಪುತ್ರ ಕಶ್ಯಪರೂ ರುದ್ರದೇವನಿಗೆ ನಮಸ್ಕರಿಸಿ ಪ್ರಸನ್ನಾತ್ಮನಾಗಿ ಇಂದ್ರಭವನಕ್ಕೆ ಪ್ರಯಾಣ ಬೆಳೆಸಿದರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಪಾರಿಜಾತಾಪಹರಣವೆಂಬಲ್ಲಿ
ಎಪ್ಪತ್ತೆರಡನೆಯ ಅಧ್ಯಾಯ ಸಮಾಪ್ತಿ

# ಅಥ ತ್ರಿಸಪ್ತತಿತಮೋಽಧ್ಯಾಯಃ

## *ಇಂದ್ರೋಪೇಂದ್ರ ಯುದ್ಧ*

*ವೈಶಂಪಾಯನ ಉವಾಚ –*

**ಅಥ ವಿಷ್ಣುಃ ಮಹಾತೇಜಾಃ ಮುಹೂರ್ತಾಭ್ಯುದಿತೇ ರವೌ ।**
**ಮೃಗಯಾವ್ಯಪದೇಶೇನ ಯಯೌ ರೈವತಕಂ ಗಿರಿಮ್ ॥ 1 ॥**
**ಆರೋಪ್ಯೈಕರಥೇ ದೇವಃ ಸಾತ್ಯಕಿಂ ನರಪುಂಗವಂ ।**
**ಪ್ರದ್ಯುಮ್ನಮನುಗಚ್ಛೇತಿ ಪ್ರೋಕ್ತ್ವಾ ಕುರುಕುಲೋದ್ಭವ ॥ 2 ॥**
**ರೈವತಂ ಚ ಗಿರಿಂ ದೇವೋ ಗತ್ವಾ ದಾರುಕಮಬ್ರವೀತ್ ।**
**ಪ್ರತಿಪಾಲಯ ಮಾಂ ಸೌಮ್ಯ ದಿನಾರ್ಧಂ ವಾರಯನ್ ಹರೀನ್**
**ರಥೇನೈವ ಪ್ರವೇಷ್ಟಾಹಂ ದ್ವಾರಕಾಂ ಸೂತಸತ್ತಮ ॥ 3 ॥**

ಜನಮೇಜಯನೇ ಕೇಳು, ಶ್ರೀಕೃಷ್ಣನು ಸೂರ್ಯೋದಯವಾಗಿ ಮುಹೂರ್ತ ಕಾಲ ಕಳೆದ ಮೇಲೆ ಮೃಗಯಾ ನೆಪದಿಂದ ರೈವತಕ ಗಿರಿಗೆ ಹೋದನು. ಶ್ರೀಕೃಷ್ಣನು ತನ್ನ ರಥದಲ್ಲಿ ನರವರನಾದ ಸಾತ್ಯಕಿಯನ್ನು ಕೂಡಿಸಿಕೊಂಡು ತನ್ನನ್ನು ಅನುಸರಿಸಿ ಬರುವಂತೆ ಪ್ರದ್ಯುಮ್ನನಿಗೆ ಹೇಳಿ ರೈವತಕ್ಕೆ ಹೋಗಿ ಸಾರಥಿಯಾದ ದಾರುಕನಿಗೆ ಹೀಗೆಂದನು.

ಸೌಮ್ಯದಾರುಕ! ನೀನು ಈ ರಥವನ್ನು ಇಲ್ಲಿಯೆ ಇರಿಸಿಕೊಂಡು ಕುದುರೆಗಳನ್ನು ನಿಯಂತ್ರಣದಲ್ಲಿಟ್ಟುಕೊಂಡು ಅರ್ಧ ದಿನ ಕಳೆಯುವವರೆಗೂ ನಿರೀಕ್ಷಿಸುತ್ತಾ ಇಲ್ಲಿಯೇ ನಿಂತಿರು. ನಾನು ಈ ರಥದಲ್ಲಿಯೇ ಪುನಃ ದ್ವಾರಕೆಗೆ ಹೋಗುವೆನು.

ಹೀಗೆ ಹೇಳಿ ಶ್ರೀಕೃಷ್ಣನು ಸಾತ್ಯಕಿಯೊಂದಿಗೆ ಗರುಡನ ಮೇಲೇರಿ ಕುಳಿತನು.

**ಪೃಥಗ್ ರಥೇನ ಕೌರವ್ಯ ಪ್ರದ್ಯುಮ್ನಃ ಶತ್ರುಸೂದನಃ ।**
**ಆಕಾಶಗಾಮಿನಾ ರಾಜನ್ ಪೃಷ್ಠತಃ ಕೃಷ್ಣಮನ್ವಯಾತ್ ॥ 4 ॥**
**ನಿಮೇಷಾಂತರಮಾತ್ರೇಣ ನಂದನಂ ಕಾನನಂ ಹರಿಃ ।**
**ದೇವೋದ್ಯಾನಂ ಯಯೌ ಧೀಮಾನ್ ಪಾರಿಜಾತ ಜಿಹೀರ್ಷಯಾ ॥5॥**
**ದದರ್ಶ ತತ್ರ ಭಗವಾನ್ ದೇವಯೋಧಾನ್ ದುರಾಸದಾನ್ ।**
**ನಾನಾಯುಧಧರಾನ್ ವೀರಾನ್ ನಂದನಸ್ಥಾನಧೋಕ್ಷಜಃ ॥ 6 ॥**
**ತೇಷಾಂ ಸಂಪಶ್ಯತಾಮೇವ ಪಾರಿಜಾತಂ ಮಹಾಬಲಃ ।**
**ಉತ್ಪಾಟ್ಯಾರೋಪಯಾಮಾಸ ಪಾರಿಜಾತಂ ಸತಾಂಗತಿಃ ॥ 7 ॥**
**ಸಾಂತ್ವಿತೋ ವಾಸುದೇವೇನ ಪಾರಿಜಾತಶ್ಚ ಭಾರತ ।**
**ಉಕ್ತಶ್ಚ ವೃಕ್ಷ ಮಾ ಭೈಸ್ತ್ವಂ ಕೇಶವೇನ ಮಹಾತ್ಮನಾ ॥ 8 ॥**

ಪ್ರದ್ಯುಮ್ನನಾದರೂ ಆಕಾಶ ಸಂಚಾರಿಯಾದ ಬೇರೊಂದು ರಥದಲ್ಲಿ ಕುಳಿತು ಕೃಷ್ಣನನ್ನು ಅನುಸರಿಸಿ ಹೋದನು. ಕಣ್ಣುರೆಪ್ಪೆ ಹೊಡೆಯುವುದರಲ್ಲಿ ಇಂದ್ರದೇವನ ನಂದನವನದಲ್ಲಿದ್ದ ಪಾರಿಜಾತ ವೃಕ್ಷವನ್ನು ಕಿತ್ತು ತರಬೇಕೆಂದೇ ಅಲ್ಲಿಗೆ ಹೊರಟಿದ್ದ. ನಂದನವನದಲ್ಲಾದರೂ ನಾನಾ ವಿಧ ಆಯುಧಧಾರಿ–ಗಳಾದವರೂ ಯುದ್ಧ ದುರ್ಮದರಾದ ದೇವಸೈನ್ಯವನ್ನು ಶ್ರೀಕೃಷ್ಣನು ನೋಡಿದನು.

ಆ ದೇವಸೈನ್ಯ ನೋಡುತ್ತಿರುವಂತೆಯೇ ಅನಾಯಾಸವಾಗಿ ಪಾರಿಜಾತ ವೃಕ್ಷವನ್ನು ಕಿತ್ತು ಗರುಡನ ಮೇಲಿರಿಸಿದನು.

ಪಾರಿಜಾತವೃಕ್ಷವಾದರೂ ಶ್ರೀಕೃಷ್ಣನ ಸೇವೆಗೆ ಮೂರ್ತಿಮತ್ತಾಗಿ ನಿಂತಿತು. ಅದನ್ನು ಕುರಿತು ಪಾರಿಜಾತವೇ ನೀನು ಭಯಪಡಬೇಡ, ನಾನಿರುವೆನು ಎಂದು ಸಮಾಧಾನಿಸಿದನು.

**ತಂ ಪ್ರಸ್ಥಿತಂ ತರುಂ ದೃಷ್ಟ್ವಾ ಪಾರಿಜಾತ ಮಧೋಕ್ಷಜ ।**
**ಅಮರಾವತೀಂ ಪುರೀಂ ಶ್ರೇಷ್ಠಾಂ ತತಶ್ಚಕ್ರೇ ಪ್ರದಕ್ಷಿಣಾಮ್ ॥ 9 ॥**

ಪಾರಿಜಾತವೃಕ್ಷವು ತನ್ನ ಜೊತೆಯಲ್ಲಿ ಹೊರಟು ಬಂದದ್ದನ್ನು ಕಂಡು ಶ್ರೀಕೃಷ್ಣನು ಶ್ರೇಷ್ಠವಾದ ಅಮರಾವತಿಯನ್ನೂ ಪ್ರದಕ್ಷಿಣೆ ಹಾಕಿದನು. ಇದೇ

ಸಂದರ್ಭದಲ್ಲಿ ಪಾರಿಜಾತ ವೃಕ್ಷವನ್ನು ರಕ್ಷಿಸುತ್ತಿದ್ದ ದೇವಸೇನೆ ಕೂಡಲೇ ಇಂದ್ರನ ಬಳಿ ಹೋಗಿ, ಶ್ರೀಕೃಷ್ಣನು ಪಾರಿಜಾತವನ್ನು ಅಪಹರಿಸಿದ ವಿಷಯವನ್ನು ತಿಳಿಸಿದರು.

**ಅಥೈರಾವತಮಾರುಹ್ಯ ನಿರ್ಯಯೌ ಪಾಕಶಾಸನಃ ।**
**ಜಯಂತೇನ ರಥಸ್ಥೇನ ಪೃಷ್ಠತೋಽನುಗತೋ ಪ್ರಭುಃ ॥ 10 ॥**

**ದೃಷ್ಟ್ವೋವಾಚ ಪ್ರವೃತ್ತಂ ಭೋಃ ಕಿಮಿದಂ ಮಧುಸೂದನ ।**
**ಪ್ರಣಮ್ಯ ಗರುಡಸ್ಥೋಽಥ ಕೇಶವಃ ಶಕ್ರಮಬ್ರವೀತ್ ॥ 11 ॥**

ಈ ವಾರ್ತೆಯನ್ನು ಕೇಳಿದ ಕೂಡಲೇ ಇಂದ್ರದೇವನು ಐರಾವತವನ್ನೇರಿ ಹೊರಟು ಬಿಟ್ಟನು. ಅವನ ಹಿಂದೆ ಅವನ ಪುತ್ರನಾದ ಜಯಂತನೂ ರಥದಲ್ಲಿ ಕುಳಿತು ಇಂದ್ರದೇವನನ್ನು ಅನುಸರಿಸಿ ಹೋದನು.

ಇಂದ್ರದೇವನು - ಅಮರಾವತಿ ಪ್ರದಕ್ಷಿಣೆ ಬಂದು ಅಮರಾವತಿಯ ಪೂರ್ವದ್ವಾರದಲ್ಲಿ ಬಂದು ನಿಂತಿದ್ದ ಶ್ರೀಕೃಷ್ಣನನ್ನು ನೋಡಿ ದೇವೇಂದ್ರನು ಹೀಗೆಂದನು.

ಮಧುಸೂದನ ನೀನೇನು – ಮಾಡುತ್ತಿರುವೆ! ಎಂದನು, ಶ್ರೀಕೃಷ್ಣನು ಇಂದ್ರನಿಗೆ ಪ್ರಣಾಮ ಮಾಡಿ ಹೀಗೆಂದನು.

**ವಧ್ವಾಸ್ತೇ ಪ್ರಣ್ಯಕಾರ್ಯಾಯ ನೀಯತೇಽಯಂ ವರದ್ರುಮಃ ।**
**ತಮುವಾಚ ತತಃ ಶಕ್ರೋ ಮಾ ಮೈವಂ ಪುಷ್ಕರೇಕ್ಷಣ ।**
**ಅಯೋಧಯಿತ್ವಾ ನ ತರುಃ ನಯಿತವ್ಯಃ ತ್ವಯಾಚ್ಯುತ ॥ 12 ॥**

**ಪ್ರಹರಸ್ವ ಮಹಾಬಾಹೋ ಪ್ರಥಮಂ ಮಯಿ ಕೇಶವ ।**
**ಪ್ರತಿಜ್ಞಾ ಸಫಲಾ ತೇಽಸ್ತು ಮುಕ್ತ್ವಾ ಕೌಮೋದಕೀಂ ಮಯಿ ॥ 13 ॥**

ದೇವೇಂದ್ರ ನಿನ್ನ ಸೊಸೆಯು ತಾನು ಮಾಡಬೇಕಾಗಿರುವ ಪುಣ್ಯ ಕಾರ್ಯಕ್ಕಾಗಿ ಈ ಪಾರಿಜಾತ ವೃಕ್ಷವನ್ನು ನಾನು ತೆಗೆದುಕೊಂಡು ಹೋಗುತ್ತಿದ್ದೇನೆ ಎಂದನು.

ಇದಕ್ಕುತ್ತರವಾಗಿ ಇಂದ್ರನು – ಶ್ರೀಕೃಷ್ಣನೆ ನನ್ನೊಂದಿಗೆ ಯುದ್ಧ ಮಾಡದೇ ಪಾರಿಜಾತವನ್ನು ತೆಗೆದುಕೊಂಡು ಹೋಗಲಾಗದು. ನೀನು ಮೊದಲು ಪ್ರತಿಜ್ಞೆ ಮಾಡಿದಂತೆ ಮೊದಲು ನನ್ನ ಮೇಲೆ ಕೌಮೋದಕೀ ಗದೆಯನ್ನು ಪ್ರಯೋಗಿಸು. ನೀನು ಮಾಡಿದ ಪ್ರತಿಜ್ಞೆ ಪೂರ್ಣವಾಗಲಿ ಎಂದನು.

ಇಂದ್ರನು ಹೀಗೆ ಹೇಳಿದ ಕೂಡಲೇ ಶ್ರೀಕೃಷ್ಣನು ಮಂದಹಾಸಬೀರಿ ವಜ್ರಾಯುಧ ಸಮಾನವಾದ ಬಾಣಗಳಿಂದ ಇಂದ್ರನ ವಾಹನ ಐರಾವತವನ್ನು ಹೊಡೆದ.

ಅದಕ್ಕುತ್ತರವೆಂಬಂತೆ ಇಂದ್ರನೂ ಸಹ ಹರಿಯು ಬಿಟ್ಟ ಬಾಣಗಳನ್ನು ತನ್ನ ಬಾಣಗಳಿಂದ ಕತ್ತರಿಸಿ ಹಾಕಿದನು ಹಾಗೂ ಹರಿಯ ವಾಹನ ಗರುಡನನ್ನು ಬಾಣಗಳಿಂದ ಪ್ರಹರಿಸಿದನು.

ಶ್ರೀಕೃಷ್ಣನು ಇಂದ್ರನು ಪ್ರಯೋಗಿಸುತ್ತಿದ್ದ ಬಾಣಗಳನ್ನು ಕ್ಷಣ ಮಾತ್ರದಲ್ಲಿಯೇ ಕತ್ತರಿಸಿ ಹಾಕುತ್ತಿದ್ದನು.

ಇವರಿಬ್ಬರ ಯುದ್ಧದಲ್ಲಿ ಇಂದ್ರದೇವನ ಧನುಸ್ಸಿನ ಠೇಕಾರದಿಂದಲೂ, ಕೃಷ್ಣನ ಶಾರ್ಙ್ಗ ಧನುಸ್ಸಿನ ಶಬ್ಧದಿಂದಲೂ ಸ್ವರ್ಗದಲ್ಲಿರುವ ದೇವತೆಗಳು ಮೋಹ-ಗೊಂಡರು.

**ತಯೋರ್ವರ್ತತಿ ಸಂಗ್ರಾಮೇ ಗರುಡಸ್ಥಂ ಮಹಾಬಲಃ ।**
**ಪಾರಿಜಾತಂ ಜಯಂತೋಽಥ ಹರ್ತುಮಭ್ಯುದ್ಯತೋ ಬಲೀ ॥ 14 ॥**

**ಪ್ರದ್ಯುಮ್ನಮಥ ಕಂಸಘ್ನೋ ವಾರಯೇತಿ ತದಾಬ್ರವೀತ್ ।**
**ತತಸ್ತಂ ವಾರಯಾಮಾಸ ರೌಕ್ಮಿಣೇಯಃ ಪ್ರತಾಪವಾನ್ ॥ 15 ॥**

ಹೀಗೆ ಇಂದ್ರೋಪೇಂದ್ರರು ಯುದ್ಧದಲ್ಲಿ ತೊಡಗಿರುವಾಗ ಬಲಿಷ್ಠವಾದ ಇಂದ್ರನ ಪುತ್ರ ಜಯಂತನು ಗರುಡನ ಮೇಲಿರಿಸಿದ್ದ ಪಾರಿಜಾತವನ್ನು ಅಪಹರಿಸಲು ಪ್ರಯತ್ನಿಸಿದನು. ಅದನ್ನು ಕೃಷ್ಣನು ನೋಡಿ ತನ್ನ ಪುತ್ರ ಪ್ರದ್ಯುಮ್ನನಿಗೆ ಜಯಂತನನ್ನು ತಡೆಯುವಂತೆ ಹೇಳಿದನು.

ಜಯಂತನಾದರೂ ಪ್ರದ್ಯುಮ್ನನನ್ನು ಬಾಣಗಳಿಂದ ಸರ್ವಗಾತ್ರಗಳಲ್ಲಿ ಪ್ರಹರಿಸಿ ಗಾಯಗೊಳಿಸಿದನು. ಆಗ ಕಾಮಾವತಾರಿ ಪ್ರದ್ಯುಮ್ನನು ರಥದಲ್ಲಿಯೇ ಕುಳಿತು ಜಯಂತನನ್ನು ಉರಗಸದೃಶವಾದ ಬಾಣಗಳಿಂದ ಹೊಡೆದನು.

ಹೀಗೆ ಜಯಂತ-ಪ್ರದ್ಯುಮ್ನನಿಗೂ ಭಯಂಕರ ಯುದ್ಧವು ಪ್ರಾರಂಭವಾಯಿತು. ಇಬ್ಬರೂ ಪರಸ್ಪರವಾಗಿ ಹೋರಾಡಿದರು.

ದೇವತೆಗಳು ಮುನಿ ಸಿದ್ಧ ಚಾರಣರು ಇವರೆಲ್ಲರೂ ಈ ಯುದ್ಧವನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದರು. ಈ ಮಧ್ಯದಲ್ಲಿ ಮಹಾಬಲಿಷ್ಠನಾದ 'ಪ್ರವರ'ನೆಂಬ ದೇವದೂತನೊಬ್ಬನು ಗರುಡನ ಮೇಲಿದ್ದ ಪಾರಿಜಾತ ವೃಕ್ಷವನ್ನು ಹಿಂದಕ್ಕೆ ತರಲು ಇಚ್ಛಿಸಿದನು.

ಇವನು ಮಹಾಸ್ತ್ರವೇತ್ತನಾಗಿದ್ದು ಇಂದ್ರನ ಮಿತ್ರನಾಗಿದ್ದು ಬ್ರಹ್ಮದೇವನ ವರದಿಂದ ಇತರರಿಂದ ಅವಧ್ಯನೂ ಆಗಿದ್ದನು.

ಪ್ರವರನಾದರೂ ಬ್ರಾಹ್ಮಣನಾಗಿದ್ದು ತಪಃಸಿದ್ಧಿ ಹೊಂದಿ ಜಂಬೂದ್ವೀಪದಿಂದ ಸ್ವರ್ಗಕ್ಕೆ ಹೋಗಿದ್ದು ಅಲ್ಲಿ ತನ್ನ ತಪಃಸಿದ್ಧಿಯ ಪ್ರಭಾವದಿಂದಾಗಿ ಇಂದ್ರದೇವನ ಮಿತ್ರನಾದ ಪ್ರವರನು ಪಾರಿಜಾತಕ್ಕಾಗಿ ಮುನ್ನುಗ್ಗಿ ಬರುತ್ತಿದ್ದಾಗ ಇದನ್ನು ನೋಡಿ ಶ್ರೀಕೃಷ್ಣನು ಸಾತ್ಯಕಿಗೆ ಹೇಳಿದನು.

ಸಾತ್ಯಕಿಯೇ ! ನೀನು ಇಲ್ಲಿಯೇ ಇದ್ದುಕೊಂಡು ಬಾಣಗಳಿಂದ ಪ್ರವರನನ್ನು ಪಾರಿಜಾತದ ಕಡೆಗೆ ಹೋಗದಂತೆ ತಡೆ. ಆದರೆ ಆ ಬ್ರಾಹ್ಮಣನ ಮೇಲೆ ಬಾಣವನ್ನು ಪ್ರಯೋಗಿಸಬೇಡ. ತಡೆಯುವಷ್ಟು ಮಾತ್ರ ಬಾಣ ಪ್ರಯೋಗ ಮಾಡು. ಬ್ರಾಹ್ಮಣನ ಯುದ್ಧ ಚಾಪಲ್ಯತೆಯನ್ನು ನಾವು ಸಹಿಸಬೇಕಾಗಿದೆ.

ನಂತರ ಪ್ರವರನು ಅರವತ್ತು ಬಾಣಗಳಿಂದ ಗರುಡನ ಮೇಲಿದ್ದ ಸಾತ್ಯಕಿಯನ್ನು ಪ್ರಹರಿಸಿ ಗಾಯಗೊಳಿಸಿದನು. ಆಗ ಸಾತ್ಯಕಿಯು,

**ಬ್ರಾಹ್ಮಣೋ ನಾಭಿಹಂತವ್ಯಃ ತಿಷ್ಠ ತಿಷ್ಠ ಸ್ವವರ್ತ್ಮನಿ ।**
**ಅವಧ್ಯಾ ಯಾದವನಾಂ ಹಿ ಸಾಪರಾಧೇಽಪಿ ಹಿ ದ್ವಿಜಾಃ ॥ 16 ॥**

ಬ್ರಾಹ್ಮಣನಾದವನು ಯಾದವರಾದ ನಮ್ಮಿಂದ ಹೊಡೆಯಲ್ಪಡಬಾರದು ಎಂಬ ನಿಯಮವಿದೆ. ಆದ್ದರಿಂದ ನಿನ್ನ ಧರ್ಮದಲ್ಲಿ ಸ್ಥಿರನಾಗು ಅಥವಾ ನೀನು ನಮಗೆ ಅಪರಾಧವೆಸಗಿದರೂ ಯಾದವರು ಬ್ರಾಹ್ಮಣರನ್ನು ಕೊಲ್ಲುವುದಿಲ್ಲ.

**ಜಾಮದಗ್ನ್ಯಸ್ಯ ರಾಮಸ್ಯ ಶಿಷ್ಯೋಽಹಮಪಿ ಯಾದವ ।**
**ನಾಮತಃ ಪ್ರವರೋ ನಾಮ ಸಖಾ ಶಕ್ರಸ್ಯ ಧೀಮತಃ ॥ 17 ॥**

**ನ ದೇವಾ ಯೋದ್ಧುಮಿಚ್ಛಂತಿ ಮನ್ಯಂತೇ ಮಧುಸೂದನಂ ।**
**ಆನೃಣ್ಯಂ ಸೌಹೃದಸ್ಯಾಹಮಧಿಗಂತಾಸ್ಮಿ ಮಾಧವ ॥ 18 ॥**

**ಅಲಂ ಕ್ಷಾಂತ್ಯಾ ನೃಣಾಂ ಶೂರ ಯುಧ್ಯ ಸರ್ವಾತ್ಮನಾ ರಣೇ ।**

ಮನುಷ್ಯರಲ್ಲಿ ಶೂರ ಸಾತ್ಯಕಿಯೆ!

ನಾನು ಪರಶುರಾಮದೇವನ ಶಿಷ್ಯನಾಗಿದ್ದೇನೆ. ಪ್ರವರ ನಾಮಧೇಯನಾದ ನಾನು ದೇವೇಂದ್ರನಿಗೆ ಮಿತ್ರನಾಗಿದ್ದೇನೆ. ರಣಭೂಮಿಯಲ್ಲಿ ನೀನು ಸಂಪೂರ್ಣ ಶಕ್ತಿಯನ್ನೇ ವಿನಿಯೋಗಿಸಿ ಯುದ್ಧ ಮಾಡು ನಾನು ಬ್ರಾಹ್ಮಣನೆಂಬ ಕಾರಣದಿಂದ ನನ್ನಲ್ಲಿ ಕ್ಷಮೆ ತೋರಬೇಡ.

ಶ್ರೀಕೃಷ್ಣನು ದೇವತೆಗಳು ನಿನ್ನ ಮೇಲೆ ಅಪಾರ ಗೌರವ ಹೊಂದಿದ್ದು ನಿನ್ನೊಂದಿಗೆ ಯುದ್ಧ ಮಾಡುವುದಿಲ್ಲ. ಇಂತಹ ಸಮಯದಲ್ಲಿ ನಾನು ಇಂದ್ರನ ಪರವಾಗಿ ಯುದ್ಧ ಮಾಡಿ ಮಿತ್ರನ ಋಣ ತೀರಿಸುತ್ತೇನೆ ಎಂದನು.

ನಂತರ ಸಾತ್ಯಕಿಗೂ ಪ್ರವರನಿಗೂ ದಿವ್ಯಾಸ್ತ್ರಗಳ ಮೂಲಕ ಭಯಂಕರವಾದ ಯುದ್ಧವು ಪ್ರಾರಂಭವಾಯಿತು.

ಸಾತ್ಯಕಿ-ಪ್ರವರರ ಮಧ್ಯ ಯುದ್ಧ ನಡೆಯುತ್ತಿದ್ದಾಗ ಸ್ವರ್ಗಲೋಕದವರು ನಡುಗಿದರು. ಆಗಸದಲ್ಲಿ ಹಾರಾಡುತ್ತಿದ್ದ ಸಾವಿರಾರು ಪಕ್ಷಿಗಳು ಭಯದಿಂದ ಕಂಪಿಸಿದವು.

ಇತ್ತ ಪ್ರದ್ಯುಮ್ನನು ಅಸ್ತ್ರ ಪ್ರವೀಣ ಜಯಂತನನ್ನು ಮೀರಿ ಹೋಗಲಾಗಲಿಲ್ಲ. ಹಾಗೆಯೇ ಜಯಂತನಿಗೂ ಪ್ರದ್ಯುಮ್ನನನ್ನು ಅತಿಕ್ರಮಿಸಲು ಸಾಧ್ಯವಾಗಲಿಲ್ಲ. ಪ್ರತಿಯೊಬ್ಬರು ಈ ನಿನ್ನ ಅಸ್ತ್ರಕ್ಕೆ ಇದೇ ಪ್ರತ್ಯಸ್ತ್ರವೆಂದು ಹೇಳುತ್ತ ಅಸ್ತ್ರ-ಪ್ರತ್ಯಸ್ತ್ರ ಬಿಡುತ್ತಿದ್ದರು.

ಹೀಗೆಯೇ ಯುದ್ಧ ಮಾಡುತ್ತಾ ಆ ಶಚೀಪುತ್ರನು ಪ್ರದ್ಯುಮ್ನನೇ ! ಎಂದು ಸಂಬೋಧಿಸಿ ಅತ್ಯಂತ ವೇಗದಿಂದ ದಿವ್ಯಾಸ್ತ್ರದ ಮೂಲಕ ಅವನಿಗೆ ಹೊಡೆದನು.

ಪ್ರದ್ಯುಮ್ನನಾದರೂ ಚೂಪಾದ ಬಾಣದಿಂದ ಆ ಅಸ್ತ್ರವನ್ನು ತಡೆದನು. ಆದರೂ ಆ ದಿವ್ಯಾಸ್ತ್ರವು ಪ್ರದ್ಯುಮ್ನನ ರಥದಲ್ಲಿ ಬಿದ್ದಿತು. ಕೂಡಲೇ ಆ ಅಸ್ತ್ರಾಗ್ನಿಯಿಂದ ರಥವು ಸುಟ್ಟು ಭಸ್ಮವಾಯಿತು. ಹೀಗಿದ್ದರೂ ಪ್ರದ್ಯುಮ್ನನನ್ನು ಏನು ಮಾಡಲಿಲ್ಲ.

ಅಗ್ನಿಯು ಎಷ್ಟೇ ಭಯಂಕರಾಗ್ನಿಯಾಗಿದ್ದರೂ ಇನ್ನೊಂದು ಅಗ್ನಿಯನ್ನು ಸುಡುವುದೆ?

**ಅಥ ನಾರಾಯಣಸುತೋ ವಿರಥೋರಥಿನಾಂ ವರಃ ॥ 19 ॥**

**ಸ್ಥಿತೋ ಧನುಷ್ಮಾನಾಕಾಶೇ ಜಯಂತ ಮಿದಮಬ್ರವೀತ್ ।**

**ನಾಹಮೀದೃಶರೂಪಾಣಾಂ ಶಕ್ಯೋ ಹಂತುಂ ಶತೈರಪಿ ॥ 20 ॥**

ಮಹೇಂದ್ರಪುತ್ರನೇ! ನೀನು ಯಾವ ಮಹಾಸ್ತ್ರವನ್ನು ಪ್ರಯೋಗಿಸಿರುವಿಯೋ ಇಂತಹ ನೂರಾರು ಅಸ್ತ್ರಗಳಿಂದಲೂ ನನ್ನನ್ನು ಸಂಹರಿಸಲು ಸಾಧ್ಯವಿಲ್ಲ. ಶಚೀಪುತ್ರನೇ! ನಿನ್ನ ಅಭ್ಯಾಸಕ್ಕೆ ಅನುಸಾರವಾಗಿ ನೀನು ಯುದ್ಧ ಮಾಡು.

ನಿನ್ನ ಬಲವೇಷ್ಟಿದೆಯೆಂದು ತೋರಿಸು. ಮೊದಲು ನೀನು ಆಯುಧ–ಪಾಣಿಯಾಗಿ ಬಂದ ನಿನ್ನನ್ನು ಕಂಡ ನನಗೆ ಭಯವಾಯಿತು. ನಿನ್ನ ಬಲಾಬಲವನ್ನು ತಿಳಿದುಕೊಂಡ ನಂತರ ನಿನ್ನ ವಿಷಯದಲ್ಲಿ ನನಗೇನು ಭಯವಿರುವುದಿಲ್ಲ.

ನೀನು ನನ್ನ ಮಾಯೆಯ ರಥವನ್ನು ಸುಟ್ಟು ಹಾಕಿರಬಹುದು. ಇಂತಹುದೇ ಆದ ನೂರಾರು ರಥಗಳನ್ನು ಸೃಜಿಸಬಲ್ಲೆನು.

ಹೀಗೆ ಹೇಳಿದಾಗ ಜಯಂತನು ಒಂದು ಮಹಾಸ್ತ್ರವನ್ನು ಪ್ರದ್ಯುಮ್ನನ ಮೇಲೆ ಬಿಟ್ಟನು. ಅದನ್ನು ಬಾಣಗಳಿಂದ ತಡೆದು ಹಾಕಿದನು.

ಪ್ರದ್ಯುಮ್ನನ ಮೇಲೆ ಐದೂ ಕಡೆಗಳಿಂದ ಐದು ಬಾಣಗಳನ್ನು ಬಿಟ್ಟನು. ಅವುಗಳನ್ನು ಬಾಣ ಸಮೂಹದಿಂದ ತಡೆದು ಹಾಕಿದನು.

ಆಗ ಪ್ರವರನು – ಇಂದ್ರದೇವನು ನೀಡಿದ್ದ ಮಹಾಧನಸ್ಸನ್ನು ತೆಗೆದುಕೊಂಡು ಸಾತ್ಯಕಿಯ ಮೇಲೆ ಪ್ರಯೋಗಿಸಿದನು. ಹಾಗೂ ಅವನ ಧನುಸ್ಸನ್ನು ಕತ್ತರಿಸಿದನು. ಸಾತ್ಯಕಿಯೂ ಅವನಿಗೆ ಬಾಣಗಳಿಂದ ಕವಚಗಳನ್ನು ಭೇದಿಸಿದರು. ದೇಹದ ಮಾಂಸವನ್ನು ಭೇದಿಸಿದರು.

ನಂತರ ಎಂಟು ಅಲಗುಗಳುಳ್ಳ ಬಾಣಗಳಿಂದ ಸಾತ್ಯಕಿಯೆ ಧನುಸ್ಸನ್ನು ಕತ್ತರಿಸಿ ಗಾಯಗೊಳಿಸಿದನು. ಸಾತ್ಯಕಿಯು ಬೇರೆ ಧನುಷನ್ನು ತೆಗೆದು–ಕೊಳ್ಳುವುದರೊಳಗೆ ಪ್ರಹರನು ಗದೆಯನ್ನು ಸಾತ್ಯಕಿಯ ಮೇಲೆ ಪ್ರಯೋಗಿಸಿದನು. ಅದರ ಪ್ರಹಾರದಿಂದ ಗಾಯಗೊಂಡ ಸಾತ್ಯಕಿಯು ಬಿಲ್ಲನ್ನು ಪುನಃ ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲ.

ಆ ಸಮಯದಲ್ಲಿ ಪ್ರದ್ಯುಮ್ನನು ಚೂಪಾದ ಒಂದು ಕತ್ತಿಯನ್ನು ನೀಡಿದನು. ಅದನ್ನು ಸಹ ಪ್ರವರನು ಭಲ್ಲಾಯುಧದಿಂದ ಕತ್ತರಿಸಿದನು. ಪ್ರವರನಾದರೂ ತಾನು ನಗುತ್ತಿರುವನೋ ಎಂಬಂತೆ ಅವನ ಕತ್ತಿಯ ಹಿಡಿಯನ್ನು ಕತ್ತರಿಸಿ ಬೀಳಿಸಿದನು. ಹಾಗೆಯೇ ಸಾತ್ಯಕಿಯು ಹಿಡಿದಿದ್ದ ಗುರಾಣಿಯನ್ನೂ ಕೂಡ ನೂರು ಬಾಣಗಳಿಂದ ಹೊಡೆದು ಕತ್ತರಿಸಿ ಹಾಕಿದನು.

**ಆಜಘಾನ ಚ ಶಕ್ತ್ಯೈನಂ ಹೃದಿ ವಿಪ್ರೋ ನನದಾ ಚ ।**

ಪ್ರವರನು ಶಕ್ತ್ಯಾಯುಧವನ್ನು ಸಾತ್ಯಕಿಯ ಹೃದಯಕ್ಕೆ ಹೊಡೆದು ಸಿಂಹನಾದ ಮಾಡಿದನು. ಸಾತ್ಯಕಿಯು ಇದರಿಂದ ಬಳಲಿರುವನೆಂದು ತಿಳಿದ, ಪ್ರವರನು

ಪಾರಿಜಾತವನ್ನು ತರುವ ಇಚ್ಛೆಯಿಂದ ರಥದಲ್ಲಿಯೆ ಕುಳಿತೇ ಗರುಡನ ಸಮೀಪ ಹೊರಟನು.

ತಂ ಪಕ್ಷಪುಟವೇಗೇನ ಚಿಕ್ಷೇಪ ಗರುಡಸ್ತಥಾ ।
ಗವ್ಯೂತಿಮೇಕಾಂ ಸರಥಃ ಸ ಪಪಾತ ಮುಮೋಹ ಚ ॥ 21 ॥

ಈ ಸಮಯದಲ್ಲಿ ಗರುಡನಾದರೂ ತನ್ನ ರೆಕ್ಕೆಗಳನ್ನು ವೇಗವಾಗಿ ಹೊಡೆದನು. ಅದರ ಗಾಳಿಯಿಂದಲೇ ಪ್ರವರನು ರಥಸಹಿತ ಒಂದು ಗಾವುದ ದೂರ ಹೋಗಿ ಬಿದ್ದನು. ಅದನ್ನು ನೋಡಿದ ಜಯಂತನು ಕೂಡಲೇ ಪ್ರವರನ ಹತ್ತಿರ ಹೋಗಿ ಬಿದ್ದಿದ್ದ ಪ್ರವರನನ್ನು ಮೇಲೆತ್ತಿ ಸಂತೈಸುತ್ತಾ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡನು. ಇದೇ ಸಂದರ್ಭದಲ್ಲಿ ಪ್ರದ್ಯುಮ್ನನು ಪ್ರವರನಿಂದ ಏಟು ತಿಂದು ಬಳಲಿರುವಾಗ ಪಿತೃವ್ಯನಂತಿರುವ ಸಾತ್ಯಕಿಯನ್ನು ಸಮಾಧಾನ ಮಾಡಿ ಗಾಢವಾಗಿ ಆಲಿಂಗಿಸಿಕೊಂಡನು.

ತಂ ಚ ಪಸ್ಪರ್ಶ ಹಸ್ತೇನ ಸವ್ಯೇನ ಮಧುಸೂದನಃ ।
ವಿರುಜಃ ಸ್ಪರ್ಶ ಮಾತ್ರೇಣ ಸಾತ್ಯಕಿಃ ಸಮಪದ್ಯತ ॥ 22 ॥

ಆಗ ಶ್ರೀಕೃಷ್ಣನು ಬಳಲಿದ್ದ ಸಾತ್ಯಕಿಯನ್ನು ತನ್ನ ಸವ್ಯಹಸ್ತದಿಂದ ಸ್ಪರ್ಶಿಸಿದನು. ಆ ಸ್ಪರ್ಶ ಮಾತ್ರದಿಂದಲೇ ಸಾತ್ಯಕಿಯ ಬಳಲಿಕೆ ದೂರವಾಯಿತು, ಎದ್ದು ಕುಳಿತುಕೊಂಡನು. ನಂತರ ಸಾತ್ಯಕಿ – ಪ್ರದ್ಯುಮ್ನರು ಪಾರಿಜಾತ ವೃಕ್ಷದ ಎರಡು ಭಾಗಗಳಲ್ಲಿ ರಕ್ಷಕರಾಗಿ ನಿಂತರು.

ಜಯಂತಃ ಪ್ರವರಶ್ಚೈವ ರಥೇನೈಕೇನ ಭಾರತ ।
ಸಂಪತಂತೌ ಮಹೇಂದ್ರೇಣ ಪ್ರಹಸೋಕ್ತೌ ಮಹಾತ್ಮನಾ ॥ 23 ॥

ಇದೇ ಸಮಯದಲ್ಲಿ ಜಯಂತ–ಪ್ರವರರು ಇಬ್ಬರೂ ಒಂದೇ ರಥದಲ್ಲಿ ಕುಳಿತು ಅಲ್ಲಿಗೆ ಬಂದರು. ಇಂದ್ರದೇವನೂ ಅಲ್ಲಿಗೆ ಆಗಮಿಸಿದನು. ಮಹಾತ್ಮ ಮಹೇಂದ್ರನು ನಸುನಗುತ್ತಾ ಹೀಗೆಂದನು.

ನಾಸನ್ನಮಭಿಗಂತವ್ಯಂ ಗರುಡಸ್ಯ ಕಥಂಚನ ।
ಬಲವಾನೇಷ ಪತತಾಂ ರಾಜಾ ಚ ವಿನತಾಸುತಃ ॥ 24 ॥

ನೀವಿಬ್ಬರೂ ಯಾವುದೇ ಕಾರಣದಿಂದಲೂ ಗರುಡನ ಮೇಲೆ ಯುದ್ಧಕ್ಕೆ ಹೋಗಬೇಡಿರಿ. ವಿನತಾ ಪುತ್ರನಾದ ಗರುಡನು ಮಹಾಬಲಿಷ್ಠನಾಗಿರುವನು.

ನೀವಿಬ್ಬರೂ ನನ್ನ ಎರಡೂ ಪಾರ್ಶ್ವಗಳಲ್ಲಿ ಆಯುಧ ಹಿಡಿದು ಯುದ್ಧ ಮಾಡುವ ನನ್ನನ್ನೆ ನಿರೀಕ್ಷಿಸಿರಿ.

ಜನಮೇಜಯ! ಜಯಂತ–ಪ್ರವರರು ಇಂದ್ರನ ಎಡ–ಬಲಗಳಲ್ಲಿ ಆಯುಧ ಹಿಡಿದು ನಿಂತರು. ಇಂದ್ರೋಪೇಂದ್ರರ ಯುದ್ಧ ಪ್ರಾರಂಭವಾಯಿತು. ಯುದ್ಧದಲ್ಲಿ ಇಂದ್ರದೇವನು ವಜ್ರಾಯುಧಕ್ಕೆ ಸಮಾನವಾದ ಮಹಾಸ್ತ್ರಗಳಿಂದ ಬಾಣಗಳಿಂದಲೂ ಗರುಡನನ್ನು ಹೊಡೆದು ಗಾಯಗೊಳಿಸಿದನು.

ಗರುಡನಾದರೂ ಇಂದ್ರನ ಬಾಣಗಳನ್ನು ಲೆಕ್ಕಿಸದೆ ಇಂದ್ರನ ವಾಹನವಾದ ಐರಾವತಕ್ಕೆ ಎದುರಾಗಿ ವೇಗವಾಗಿ ಹೋದನು. ಐರಾವತ–ಗರುಡರ ಯುದ್ಧ ಪ್ರಾರಂಭವಾಯಿತು. ಅತ್ಯಂತ ಬಲಿಷ್ಠರಾದ ಇವರಿಬ್ಬರೂ ಪರಸ್ಪರ ಯುದ್ಧ ಮಾಡಿಕೊಂಡರು. ಐರಾವತವಾದರೂ ಘೀಳಿಸುತ್ತಾ ಗರುಡನ ಮೇಲೇರಿ ಬಂದು ತನ್ನ ದಂತಗಳಿಂದ, ತಲೆಯಿಂದಲೂ ಗರುಡನನ್ನು ಹೊಡೆದು ಗಾಯಗೊಳಿಸಿದನು.

ಗರುಡನೂ ಕೂಡ ಅಂಕುಶದಂತಿರುವ ತನ್ನ ಹತ್ತೂ ಉಗುರುಗಳಿಂದಲೂ, ರೆಕ್ಕೆಗಳಿಂದಲೂ ಇಂದ್ರನ ಐರಾವತವನ್ನು ಹೊಡೆದನು. ಮುಹೂರ್ತ ಕಾಲ ಇವರಿಬ್ಬರ ವಾಹನಗಳ ಯುದ್ಧರೋಚಕವಾಗಿತ್ತು. ಪ್ರೇಕ್ಷಕರಿಗೆ ಭಯವುಂಟು ಮಾಡುವುದಾಗಿತ್ತು. ಗರುಡನು ಐರಾವತವನ್ನು ಚೂಪಾದ ಉಗುರುಗಳಿಂದ ಬಲವಾಗಿ ಪ್ರಹಾರ ಮಾಡಿದನು.

ಈ ಏಟಿನಿಂದ ಖಿನ್ನವಾದ ಐರಾವತವು ಸ್ವರ್ಗದಿಂದ ಜಂಬೂದ್ವೀಪದಲ್ಲಿದ್ದ ಪಾರಿಯಾತ್ರದ ಮೇಲೆ ಬಿದ್ದಿತು. ಇದನ್ನು ನೋಡಿದ ಇಂದ್ರದೇವನು ಐರಾವತದ ಮೇಲಿನ ಪ್ರೀತಿಯಿಂದಲೂ ಕಾರುಣ್ಯದಿಂದಲೂ ಬೀಳುತ್ತಿದ್ದ ಆನೆಯನ್ನು ಬೀಳಲು ಬಿಡಲಿಲ್ಲ. ಅದರೊಂದಿಗೆ ಅವನೂ ಜೊತೆಯಲ್ಲಿಯೆ ಪಾರಿಯಾತ್ರ ಪರ್ವತದವರೆಗೂ ಹಿಂಬಾಲಿಸಿದರು.

**ಕೃಷ್ಣೋऽಪ್ಯನ್ವಗಮಚ್ಚೈನಂ ಪೃಷ್ಠತಃ ಪ್ರಭವೋऽವ್ಯಯಃ ।**
**ಪಾರಿಜಾತವತಾ ಧೀಮಾನ್ ಗರುಡೇನ ಮಹಾಬಲಃ ॥ 25 ॥**

ಜಗನ್ನಾಥನೂ ಸಹ ಪಾರಿಜಾತ ವೃಕ್ಷವನ್ನು ಹೊತ್ತುಕೊಂಡಿದ್ದ ಗರುಡನ ಮೇಲೆ ಕುಳಿತು ಇಂದ್ರನ ಹಿಂದೆ ಹೋದನು.

**ಸ ತಸ್ಥೌ ಪರ್ವತಶ್ರೇಷ್ಠೆ ಪಾರಿಯಾತ್ರೇ ತು ವೃತ್ರಹಾ ।**
**ಐರಾವತೇ ಸಮಾಶ್ವಸ್ತೇ ಸಂಗ್ರಾಮೋ ವವೃಧೇ ಪುನಃ ॥ 26 ॥**

**ಶರೈರಾಶೀವಿಷಪ್ರಖ್ಯೈಃ ರತ್ನಯುಕ್ತೈಃ ಸುತೇಜಿತೈಃ ।**
**ಅನ್ಯೋನ್ಯಂ ಕುರುಶಾರ್ದೂಲ ಶಕ್ರ ಕೇಶವಯೋರ್ಮಹಾನ್ ॥ 27 ॥**

ವೃತ್ತಾರಿಯು ಪಾರಿಯಾತ್ರ ಶಿಖರದಲ್ಲಿದ್ದ ಐರಾವತದ ಬಳಿ ನಿಂತನು. ಐರಾವತವು ಸ್ವಲ್ಪ ಕಾಲದ ನಂತರ ಚೇತರಿಸಿಕೊಂಡಿತು. ನಂತರ ಇಂದ್ರೋಪೇಂದ್ರರಲ್ಲಿ ಯುದ್ಧ ಪ್ರಾರಂಭವಾಯಿತು.

ರತ್ನಯುಕ್ತವೂ, ವಿಷಸರ್ಪಗಳಂತೆ ತೀಕ್ಷ್ಣವಾಗಿದ್ದ ಹಾಗೂ ಚೆನ್ನಾಗಿ ಸಾಣೆ ಹಿಡಿದು ಚೂಪುಗೊಳಿಸಿದ್ದ ಬಾಣಗಳಿಂದ ಹರಿ–ಹರಿಯರು ಪರಸ್ಪರವಾಗಿ ಹೊಡೆಯತೊಡಗಿದರು.

**ತತೋ ವಜ್ರಾಯುಧೋ ವಜ್ರಮಶನಿಂ ಚ ಪುನಃ ಪುನಃ ।**
**ಮುಮೋಚ ಗರುಡೇ ರಾಜನ್ ಐರಾವತರಿಪೌ ನೃಪ ॥ 28 ॥**

**ವಜ್ರಾಶನಿ ನಿಪಾತಾಂಸ್ತಾನ್ ಸೇಹೇ ಶಕ್ರಸ್ಯ ಪಕ್ಷಿರಾಟ್ ।**
**ಅವಧ್ಯೋ ಬಲಿನಾಂ ಶ್ರೇಷ್ಠೋ ನಿಸರ್ಗೇಣ ತಪೋ ಬಲಾತ್ ॥ 29 ॥**

ನಂತರ ವಜ್ರಧಾರಿ ಇಂದ್ರನು ಐರಾವತದ ಶತ್ರುವಾದ ಗರುಡನ ಮೇಲೆ ವಜ್ರಾಯುಧ ಹಾಗೂ ಸಿಡಿಲುಗಳನ್ನು ಪ್ರಯೋಗಿಸಿದನು. ಮಹಾಬಲಿಷ್ಠನಾದ ಗರುಡನು ತನ್ನ ಸ್ವಾಭಾವಿಕವಾಗಿದ್ದ ಶಕ್ತಿಯಿಂದಲೂ ತಪೋಬಲದಿಂದಲೂ ಇಂದ್ರದೇವನ ವಜ್ರಾಯುಧದ ಪೆಟ್ಟನ್ನು ಸಹಿಸಿಕೊಂಡನು. ಇಂದ್ರನು ಪುನಃ ಪುನಃ ಪ್ರಹಾರ ಮಾಡುತ್ತಿದ್ದನು. ವಜ್ರಾಯುಧವಾದರೂ ಭಗವಂತನ ವಿಭೂತಿರೂಪವುಳ್ಳದೆಂದು ತಿಳಿದು ಅದಕ್ಕೆ ಅವಮಾನವಾಗದಂತೆ ಒಂದೇ ಒಂದು ಪುಕ್ಕವನ್ನು ತಾನೇ ಬೀಳುಸುತ್ತಿದ್ದನು.

ನಂತರ ಗರುಡನು ಪ್ರತಿಕಾರ ಮಾಡುವ ಸಲುವಾಗಿ ಉಗ್ರವಾದ ರೂಪವನ್ನು ಧರಿಸಿ ಇಂದ್ರನ ಮೇಲೆ ಬಿದ್ದನು. ಇವನ ವೇಗಕ್ಕೆ ಪಾರಿಯಾತ್ರ ಪರ್ವತವೇ ಕುಸಿಯಿತು. ಪರ್ವತದಲ್ಲಿ ಬಿರುಕು ಕಾಣಿಸಿತು. ಶ್ರೀಕೃಷ್ಣನ ಭಾರದಿಂದಲೂ ಪರ್ವತವು ಆರ್ತನಾದ ಮಾಡಿದಂತಿತ್ತು.

ಹೀಗೆ ಬಿರುಕು ಬಿಟ್ಟ ಪರ್ವತವನ್ನೊಮ್ಮೆ ಶ್ರೀಕೃಷ್ಣನು ನೋಡಿದನು. ಕೃಪಾಕಟಾಕ್ಷ ಬಿದ್ದಂತೆ ಒಂದು ಭಾಗ ಮಾತ್ರ ಭೂಮಿಯ ಮೇಲೆ ಉಳಿದುಕೊಂಡಿತು.

**ಚುಕೂಜ ಬಹುಮಾನೇನ ಕೃಷ್ಣಸ್ಯ ಸ ತು ಪರ್ವತಃ ।**
**ತಂ ಚಾದ್ರಾಕ್ಷೀತ್ ತತಃ ಕೃಷ್ಣಃ ಕಿಂಚಿಚ್ಛೇಷಮಧೋಕ್ಷಜಃ ॥ 30 ॥**
**ತಂ ಮುಕ್ತ್ವಾ ಗರುಡೇನಾಥ ತಸ್ಥೌ ದೇವೋ ವಿಹಾಯಸಿ ।**
**ಶ್ವೋ ಜಿತ್ವೇಂದ್ರಂ ತ್ವಾಗಮಿಷ್ಯೇ ದ್ವಾರಕಾಮಿತಿ ಮಾನದ ॥ 31 ॥**

ನಂತರ ಶ್ರೀಕೃಷ್ಣನು ಆ ಪರ್ವತದಿಂದ ಹಾರಿ ಗರುಡನ ಮೇಲೆ ಕುಳಿತು ಆಕಾಶಕ್ಕೆ ಹಾರಿ ನಿಂತು ಪ್ರದ್ಯುಮ್ನಿಗೆ ಹೇಳಿದನು.

ಮಹಾಬಾಹು ಪ್ರದ್ಯುಮ್ನನೇ ನೀನು ದ್ವಾರಕೆಗೆ ಹೋಗಿ ತೇಜಸ್ಸನ್ನೂ ಬಲವನ್ನೂ ಆಶ್ರಯಿಸಿ ದಾರುಕನಿಂದ ಸಹಿತವಾದ ಇಲ್ಲಿಗೆ ತೆಗೆದುಕೊಂಡು ಬರುವವನಾಗು. ಹಾಗೆಯೇ ದ್ವಾರಕೆಯಲ್ಲಿರುವ ನನ್ನ ಅಣ್ಣ ಬಲರಾಮನಿಗೂ ಉಗ್ರಸೇನನಿಗೂ "ಶ್ರೀಕೃಷ್ಣನು ಇಂದ್ರನನ್ನು ಜಯಿಸಿ ನಾಳೆ ದ್ವಾರಕೆಗೆ ಬರುವನೆಂದು ಹೇಳಿ ಬರುವವನಾಗು."

**ತಥೇತ್ಯುಕ್ತ್ವಾ ತು ಧರ್ಮಾತ್ಮಾ ಪ್ರದ್ಯುಮ್ನಃ ಪಿತರಂ ವಿಭುಃ ।**
**ಗತ್ವಾ ಯಥೋಕ್ತ ಮುಕ್ತ್ವಾ ಚ ಯಾದವೇಂದ್ರ ಬಲಾವುಭೌ ॥ 32 ॥**
**ನಾಡಿಕಾಂತರ ಮಾತ್ರೇಣ ಪುನಸ್ತಂ ದೇಶಮಾಯಯೌ ।**
**ದಾರುಕೇಣ ಸಮಾಯುಕ್ತಂ ರಥಮಾಸ್ಥಾಯ ಭಾರತ ॥ 33**

ಧರ್ಮಾತ್ಮನಾದ ಪ್ರದ್ಯುಮ್ನನಾದರೂ ತಂದೆಯಾದ ಶ್ರೀಕೃಷ್ಣನಿಗೆ ಹಾಗೇ ಆಗಲಿ ಎಂದು ಹೇಳಿ ದ್ವಾರಕೆಗೆ ಹೋಗಿ ಬಲರಾಮ ಹಾಗೂ ಉಗ್ರಸೇನನಿಗೂ ಶ್ರೀಕೃಷ್ಣನ ಸಂದೇಶವನ್ನು ತಿಳಿಸಿ, ನಂತರ ದಾರುಕನ ಸಾರಥ್ಯವುಳ್ಳ ರಥದಲ್ಲಿ ಕುಳಿತು ಒಂದೇ ಘಳಿಗೆಯೊಳಗೆ ಶ್ರೀಕೃಷ್ಣನ ಸಮೀಪ ಬಂದು ಸೇರಿದ.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ದೇವೇಂದ್ರ-ಉಪೇಂದ್ರ ಯುದ್ಧವೆಂಬಲ್ಲಿ
ಎಪ್ಪತ್ತಮೂರನೆಯ ಅಧ್ಯಾಯ ಸಮಾಪ್ತಿ

# ಅಥ ಚತುಸ್ಸಪ್ತತಿತಮೋಽಧ್ಯಾಯಃ

*ಶ್ರೀಕೃಷ್ಣನು ರಾತ್ರಿ ಯುದ್ಧ ವಿರಾಮ ಹೇಳಿದುದು*

**ತಮಾರುಹ್ಯ ರಥಂ ಕೃಷ್ಣಃ ಪಾರಿಯಾತ್ರಂ ಗಿರಿಂ ಯಯೌ ।**
**ಯತ್ರ ಐರಾವತ ಮಾಸ್ಥಾಯ ಸ್ಥಿತಃ ಸುರಪತಿಃ ಪ್ರಭುಃ ॥ 1 ॥**

**ಪಾರಿಯಾತ್ರೋ ಗಿರಿಶ್ರೇಷ್ಠೋ ದೃಷ್ಟ್ವಾ ಯಂತಾ ಜನಾರ್ದನಮ್ ।**
**ಶಾಣಪಾದಸಮೋ ಭೂತ್ವಾ ಪ್ರವಿವೇಶ ವಸುಂಧರಾಮ್ ॥ 2 ॥**

ಶ್ರೀಕೃಷ್ಣನು ದಾರುಕನು ತಂದ ರಥದಲ್ಲಿ ಕುಳಿತು ಪಾರಿಯಾತ್ರ ಪರ್ವತಕ್ಕೆ ಪುನಃ ಹೋದನು. ಅಲ್ಲಿ ಇಂದ್ರನು ಐರಾವತವನ್ನೇರಿ ಯುದ್ಧಕ್ಕೆ ಸನ್ನದ್ಧನಾಗಿದನು.

ಶ್ರೀಕೃಷ್ಣನು ಬರುತ್ತಿರುವುದನ್ನು ನೋಡಿದ ಪಾರಿಯಾತ್ರ ಪರ್ವತವು ಮೃದುವಾದದ್ದಾಗಿ ಭೂಮಿಯೊಳಗೆ ಪ್ರವೇಶಿಸಿತು. ಇದರಿಂದಾಗಿ ಶ್ರೀಕೃಷ್ಣನಿಗೆ ಸಂತೋಷವಾಯಿತು. ಇಂದ್ರನೊಡನೆ ಯುದ್ಧ ಮಾಡಲು ಹೊರಟ ಶ್ರೀಕೃಷ್ಣನನ್ನು ಪಾರಿಜಾತವನ್ನು ಹೊತ್ತಿದ್ದ ಗರುಡನನ್ನು ಅನುಸರಿಸಿ ಹೋದನು. ಪಾರಿಜಾತ ರಕ್ಷಣೆಗಾಗಿ ಕಟಿಬದ್ಧರಾಗಿದ್ದ ಸಾತ್ಯಕಿ-ಪ್ರದ್ಯುಮ್ನರೂ ಹಿಂದೆ ಅನುಸರಿಸಿದರು.

**ತತಸ್ತ್ವಸ್ತಂ ಗತಃ ಸೂರ್ಯಃ ಪ್ರವೃತ್ತಾ ರಜನೀ ನೃಪ ।**
**ಉಪಸ್ಥಿತಂ ಪುನರ್ಯುದ್ಧಂ ಶಕ್ರ-ಕೇಶವಯೋರಿಹ ॥ 3 ॥**

**ಸುಪರ್ಣಾಹತಂ ದೃಷ್ಟ್ವಾ ವಿಷ್ಣುರೈರಾವತಂ ಗಜಮ್ ।**
**ನಾತಿ ಕಲ್ಪಂ ಮಹಾತೇಜಾಃ ದೇವರಾಜಾನಮಬ್ರವೀತ್ ॥ 4 ॥**

ಈ ಸಮಯದಲ್ಲಿಯೇ ಸೂರ್ಯನು ಅಸ್ತಂಗತನಾದನು. ಸರ್ವತ್ರ ಅಂಧಕಾರ ವ್ಯಾಪಿಸಿತು. ಆದರೂ ಯುದ್ಧ ನಿಲ್ಲದೆ ಮುಂದುವರೆದಿತ್ತು. ಗರುಡನ ಏಟಿನಿಂದ ಇಂದ್ರವಾಹನ ಐರಾವತವೂ ಬಹಳ ಬಳಲಿತ್ತು. ಇನ್ನು ಮುಂದೆ ಯುದ್ಧ ಮಾಡಲು ಅಸಮರ್ಥವಾಗಿತ್ತು. ಇದನ್ನು ನೋಡಿದ ಶ್ರೀಕೃಷ್ಣನು ಇಂದ್ರನಿಗೆ ಹೇಳಿದನು.

**ಗರುಡಾಭಿಹತಃ ಪೂರ್ವಂ ನಾತಿಕಲ್ಪೋ ಗಜೋತ್ತಮಃ ।**
**ಐರಾವತೋ ಮಹಾಬಾಹೋ ರಾತ್ರಿಶ್ಚ ಸಮುಪೋಹ್ಯತೇ ।**
**ಶ್ವಃ ಪ್ರಭಾತೇ ಯಥಾಕಾಮಂ ಪ್ರವರ್ತಸ್ವ ಯಥೇಚ್ಛಸಿ ॥ 5 ॥**

ಇಂದ್ರನೇ! ಈ ಹಿಂದೆ ಗರುಡನು ಹೊಡೆದ ಏಟಿನಿಂದ ಬಹಳ ಬಳಲಿದೆ, ಯುದ್ಧ ಮಾಡಲು ಅಶಕ್ತವಾಗಿದೆ ಹಾಗೂ ರಾತ್ರಿಯೂ ಆಗಿದೆ, ಆದ್ದರಿಂದ ನೀನು ನಾಳೆ ಬೆಳಗಾದ ಮೇಲೆ ಯಥೇಚ್ಛವಾಗಿ ಯುದ್ಧ ಮಾಡುವಿಯಂತೆ ಎಂದಾಗ ಇಂದ್ರನು ಹೀಗೆಂದನು.

**ಉವಾಸ ಪುಷ್ಕರಾಭ್ಯಾಸೇ ದೇವರಾಜಃ ಪುರಂದರಃ ।**
**ವ್ರಜಂ ಗಿರಿಮಯಂ ಕೃತ್ವಾ ಧರ್ಮಾತ್ಮಾ ನೃಪಸತ್ತಮ ॥ 6 ॥**
**ಬ್ರಹ್ಮಾತತೋ ಜಗಾಮಾಥ ಕಶ್ಯಪಶ್ಚ ಮಹಾನೃಷಿಃ ।**
**ಅದಿತಿಶ್ಚೈವ ರುದ್ರಾಶ್ಚ ವಸವಶ್ಚ ಜನೇಶ್ವರ ॥ 7 ॥**
**ನಾರಾಯಣಶ್ಚ ಪುತ್ರೇಣ ಸಾತ್ಯಕೇನ ಚ ಭಾರತ ।**
**ಸಹೋವಾಚ ಗಿರೌ ರಮ್ಯೇ ಪಾರಿಯಾತ್ರೆ ಪ್ರಹೃಷ್ಟವತ್ ॥ 8 ॥**

## ಪಾರಿಯಾತ್ರಕ್ಕೆ ಕೃಷ್ಣನ ವರ

ಜನಮೇಜಯ! ಶ್ರೀಕೃಷ್ಣನ ಮಾತನ್ನು ಕೇಳಿ ಇಂದ್ರದೇವನು ತಥಾಸ್ತು ಎಂದನು. ನಂತರ ದೇವೇಂದ್ರನು ಪುಷ್ಕರದ ಸಮೀಪದ ಪರ್ವತಮಯ ಆವರಣವನ್ನು ನಿರ್ಮಿಸಿ ಅಲ್ಲಿಯೇ ವಾಸ ಮಾಡಿದನು.

ನಂತರ ಬ್ರಹ್ಮದೇವರು, ಮಹರ್ಷಿ ಕಶ್ಯಪರು, ಅದಿತಿ, ಸಕಲ ದೇವತೆಗಳು, ಮುನಿಗಳು, ಸಾಧ್ಯರು, ವಿಶ್ವೇದೇವತೆಗಳು, ಅಶ್ವಿನೀ ದೇವತೆಗಳು, ಆದಿತ್ಯರು, ರುದ್ರರು, ವಸುಗಳು ಇವರೆಲ್ಲರೂ ಪಾರಿಯಾತ್ರ ಪರ್ವತಕ್ಕೆ ಆಗಮಿಸಿದರು.

**ಶಾಣಪಾದ ಇತಿಖ್ಯಾತೋ ಭವಿಷ್ಯಸಿ ಮಹಾಗಿರೇ ।**
**ಪುಣ್ಯೇನಾರ್ಥೇನ ತುಲ್ಯೋ ಹಿ ಪುಣ್ಯೋ ಹಿಮವತಃ ಶುಭಃ ॥ 9 ॥**
**ಮೇರುಣಾ ಸ್ಪರ್ಧಮಾನೋ ಹಿ ಬಹು ಚಿತ್ರಮೃಗೈರ್ಯುತಃ ।**
**ರಮೇ ತ್ವಾಂ ಪಶ್ಯಮನೋಽಹಂ ಬಹುಚಿತ್ರನಗಾಯುತಮ್ ॥ 10 ॥**

ಪರ್ವತರಾಜನಾದ ಪಾರಿಯಾತ್ರನು ಶ್ರೀಕೃಷ್ಣನ ಮೇಲಿನ ಪ್ರೀತಿಯಿಂದಾಗಿ ತನ್ನ ಕಠಿಣಭಾವ ತೊರೆದು ಶಾಣಸೂತ್ರ ನಿರ್ಮಿತ ದಾರರಾಶಿಗಳಂತೆ ಮೃದುವಾದದ್ದನ್ನು ನೋಡಿ ಪ್ರಸನ್ನನಾಗಿ ವರವನ್ನಿತ್ತನು.

ಗಿರಿಕೂಟನೇ! ಮೃದುವಾದ ಸೆಣಬಿನ ರಾಶಿಯಂತಾದ ನೀನು ಇನ್ನು ಮುಂದೆ 'ಶಾಣಪದ' ಎಂಬ ಹೆಸರನ್ನೆ ಹೊಂದುವೆ. ಹಿಮಾಲಯ ಪರ್ವತದಂತೆ ನೀನೂ ಸಹ ಪುಣ್ಯದಿಂದಾಗಿ ಅತ್ಯಂತ ಪವಿತ್ರವೆನಿಸುವೆ.

ಹೀಗೆ ನಿರಂತರ ಅಭಿವೃದ್ಧಿ ಹೊಂದುತ್ತಾ ಎತ್ತರ ಎತ್ತರ ಪರ್ವತಗಳೊಂದಿಗೆ ಸ್ಪರ್ಧಿಸುತ್ತಿರು. ನಿನ್ನಲ್ಲಿ ಚಿತ್ರವಿಚಿತ್ರ ಮೃಗಗಳೂ, ಅನೇಕ ವಿಚಿತ್ರ ಔಷಧಿ ಯುಕ್ತ ಗಿಡ ಮರಗಳಿಂದ ಸಂಪನ್ನನಾಗಿರು. ಇದನ್ನು ನೋಡಿ ನಾನೂ ಸಂತೋಷಿಸುವೆ ಎಂದನು.

## ಗಂಗೆಯ ಆಗಮನ

**ದಧ್ಯೌಗಂಗಾಂ ಸರಿಚ್ಛ್ರೇಷ್ಠಾಂ ನಮಸ್ಕೃತ್ವಾ ವೃಷಧ್ವಜಮ್ ।**
**ಅಥಾಽಯಯೌ ವಿಷ್ಣುಪದೀ ಸ್ಮೃತಾ ಕೃಷ್ಣೇನ ಭಾರತ ॥ 11 ॥**
**ಸಂಪೂಜ್ಯ ತಾಂ ತತಃ ಕೃಷ್ಣಃ ಕೃತ್ವಾ ಸ್ನಾನ ಮಧೋಕ್ಷಜಃ ॥ 12 ॥**

ಹೀಗೆ ಶ್ರೀಕೃಷ್ಣನು ಪರ್ವತಕ್ಕೆ ವರ ನೀಡಿದ ಮೇಲೆ ಸ್ನಾನಕ್ಕಾಗಿ ಗಂಗೆಯನ್ನು ನೆನೆದನು. ಕೂಡಲೇ ವಿಷ್ಣುಪಾದೋತ್ಥವಾದ'[1] ಪುಣ್ಯನದಿ ಗಂಗೆಯು ಅಲ್ಲಿಗೆ ಧಾವಿಸಿ ಬಂದಳು. ಗಂಗೆಯನ್ನು ವಿಧಿವತ್ತಾಗಿ ಪೂಜಿಸಿ, ಸ್ನಾನ ಮಾಡಿದನು.

**ಉದಕಂ ಚ ಗೃಹೀತ್ವಾಥ ಬಿಲ್ವಂ ಚ ಹರಿರವ್ಯಯಃ ।**
**ದೇವಮಾವಾಹಯಾಮಾಸ ರುದ್ರಂ ಸರ್ವೇಶ್ವರೇಶ್ವರಮ್ ॥ 13 ॥**

---

1. ಆಯಯೌ ವಿಷ್ಣುಪದೀ – ನೆನೆದ ಕೂಡಲೇ ಗಂಗೆಯು ಬಂದಳೆಂದರೆ – ಭಕ್ತರು ಸ್ನಾನ ಕಾಲದಲ್ಲಿ ನೆನೆದ ಕೂಡಲೇ ನೂರಾರು ಯೋಜನ ದೂರಪಿದ್ದರೂ ಧಾವಿಸಿ ಬರುವಳೆಂದು ಭಾವ. ಬೇರೆ ನದಿಗಳಲ್ಲಿ ಸ್ನಾನ ಮಾಡಿದರೆ ಪಾಪ ಪರಿಹಾರ. ಗಂಗೆಯಾದರೂ ಸ್ಮರಿಸಿದರೂ ಅಲ್ಲಿ ಸನ್ನಿಹಿತಳಾಗುವಳು.

**ತತಃ ಪ್ರಾಪ್ತೋ ಮಹಾದೇವಃ ಸೋಮಃ ಸಪ್ತವರೋ ವಿಭುಃ ।**
**ತಸ್ಥಾವುಪರಿ ಬಿಲ್ವಸ್ಯ ತಥಾ ಗಂಗೋದಕಸ್ಯ ಚ ॥ 14 ॥**

ನಂತರ ಶ್ರೀಕೃಷ್ಣನು ಒಂದು ಬಿಲ್ವ ಫಲವನ್ನು, ಪಾತ್ರೆಯಲ್ಲಿ ಗಂಗಾಜಲವನ್ನು ತುಂಬಿಸಿಕೊಂಡು ರುದ್ರದೇವನನ್ನು[2] ಹೀಗೆ ಪೂಜಿಸಿರೆಂದು ಶಿಕ್ಷಣಕ್ಕಾಗಿ ತಾನೂ ಪೂಜಿಸುತ್ತಾ ತನ್ನನ್ನು ತಾನೆ ಪೂಜಿಸಿಕೊಂಡನು.

ಈ ಸಮಯದಲ್ಲಿ ರುದ್ರದೇವನಾದರೂ ಕೂಡಲೇ ಉಮೆಯಿಂದ ಸಹಿತನಾಗಿ (ಸೋಮಃ) ಪ್ರಮತಗಣಗಳೊಂದಿಗೆ ಆಗಮಿಸಿ, ಬಿಲ್ವಫಲ ಹಾಗೂ ಗಂಗಾಜಲದಲ್ಲಿ ಸನ್ನಿಹಿತನಾದನು. ಶ್ರೀಹರಿಯು ಪಾರಿಜಾತ ಪುಷ್ಪಗಳಿಂದ ಅರ್ಚಿಸಿದನು. ಹಾಗೂ ಸ್ತುತಿಸತೊಡಗಿದನು.

## ರುದ್ರಸ್ತುತಿ

**ರುದ್ರೋದೇವ ತ್ವಂ ರೋದನಾದ್ ದ್ರಾವಣಾಚ್ಚ ।**
**ರೋರೂಯಮಾಣೋ ದ್ರಾವಣಾಚ್ಚಂತಿ ದೇವಃ ॥ 15 ॥**

**ಭಕ್ತಂ ಭಕ್ತಾನಾಂ ವತ್ಸಲಂ ವತ್ಸಲಾನಾಂ ।**
**ಕೀರ್ತ್ಯಾ ಯುಂಕ್ಷ್ವೇಶಾದ್ಯ ಪ್ರಪದ್ಯೇ ಶರಣ್ಯಮ್ ॥ 16 ॥**

ಹೇ ರುದ್ರದೇವನೇ! ಹುಟ್ಟುವಾಗಲೇ ಬಾಲಕನಂತೆ ರೋದನ ಮಾಡುತ್ತಲೇ ಹುಟ್ಟಿರುವಿಯಾದ್ದರಿಂದಲೂ ಹಾಗೆಯೇ ಹರಿವಾಯು ಭಕ್ತರಿಗೆ ಇರುವ ಜನ್ಮ-

---

2. 1) ಗುಹಾಶಯಾಯ್ಯೈವ ನ ದೇಹ ಮಾನಿನೇ ।
   2) ಕುಮಾರಶ್ಚಿತ್ ಪಿತರಂ ವಂದಮಾನಂ ।
   ಪ್ರತಿನಾನಾಮ ರುದ್ರೋ ಉಪಯಂತಂ ॥

ರುದ್ರ : **'ನಾಮಾನಿ ಸರ್ವಾಣಿ ಯಮಾವಿಶಂತಿ'** ಎಂಬಂತೆ **'ರುದ್ರೋ ಬಹುಶಿರಾಬಭ್ರು'** ಎಂಬ ಸಹಸ್ರನಾಮದಂತೆಯೂ ರುದ್ರ ಶಬ್ದ ವಾಚ್ಯ ಶ್ರೀಹರಿಯೇ.

ರುದ್ರದೇವನಾದರೂ **'ರೋದನಾತ್ ರುದ್ರ ಉಚ್ಯತೇ'** ಎಂಬಂತೆ ಹುಟ್ಟುವಾಗಲೇ ಅತ್ತವನು. ಇದರಿಂದಾಗಿ ಪಶುಪತ್ಯಾದಿಗಳು ಜಗಜ್ಜನ್ಮಸ್ಥೇಮಗಳಿಗೆ ಕಾರಣರಾಗಲಾರರು ಎಂದು **'ಪತ್ಯುಃ ಅಸಾಮಂಜಸ್ಯಾತ್'** ಎಂಬಲ್ಲಿ ನಿರ್ಧರಿಸಲಾಗಿದೆ. ಹರಿಯಾದರೂ **'ರುಜಂ ದ್ರಾವಯತೆ ಯ ಸ್ಮಾತ್'** ಎಂಬಂತೆ ಸಂಸಾರ ರೋಗವನ್ನೂ ಪರಿಹರಿಸುವವನೆ ಜನಾರ್ದನನೆ. ಶ್ರೀಹರಿಯು ಮೂಲರೂಪದಲ್ಲಿ ರುದ್ರನನ್ನು ಪೂಜಿಸಿರುವುದಿಲ್ಲ. ಅವತಾರದಲ್ಲಿ ಮಾತ್ರ. ಇದೊಂದು ಮರ್ತ್ಯಶಿಕ್ಷಣವೆಂದು ಭಾವಿಸಬೇಕು. ಇಲ್ಲಿರುವ ವಿಶೇಷಣಗಳೆಲ್ಲವೂ ರುದ್ರಾಂತರ್ಯಾಮಿ ಶ್ರೀಕೃಷ್ಣನದೆ.

ಮರಣ ರೂಪ ಸಂಸಾರವನ್ನು ತೊಲಗಿಸುವಿಯಾದ್ದರಿಂದ 'ರುದ್ರ' ಎನ್ನುವರು. ಇಂದ್ರಾದಿ ದೇವತೆಗಳನ್ನು ಜ್ಞಾನಾದಿಗಳಲ್ಲಿ ಮೀರಿ ನಿಂತಿರುವೆ (ಅತಿದೇವಃ) ಪ್ರೀತಿವುಳ್ಳವರಲ್ಲಿ ಅತಿ ಪ್ರೀತಿವುಳ್ಳವನೂ, ಶರಣಾಗತ ವತ್ಸಲನಾದ ನಿನಗೆ ನಾನು ಶರಣು ಹೊಂದಿರುವೆನು.

**ಗ್ರಾಮ್ಯಾರಣ್ಯಾನಾಂ ತ್ವಂ ಪತಿಸ್ತ್ವಂ ಪಶೂನಾಂ ಖ್ಯಾತೋ ದೇವಃ ಪಶುಪತಿಃ ಸರ್ವಕರ್ಮಾ ।**
**ನಾನ್ಯಃ ತ್ವತ್ತಃ ಪರಮೋ ದೇವದೇವಃ ಜಗತ್ಪತಿಃ ಸುರವೀರಾರಿಹಂತಾ॥ 17॥**

ನಮಕದಲ್ಲಿ ಹೇಳಿದಂತೆ ಗ್ರಾಮ್ಯ ಆರಣ್ಯ ಪ್ರಾಣಿಗಳಿಗೆ ನೀನು ಪತಿಯಾಗಿರುವೆ. *(ಆರಣ್ಯಾನಾಂ ಪತಯೇ ನಮೋ)* ವಸ್ತುತಃ **'ಆರಣ್ಯಾನ್ ಗ್ರಾಮ್ಯಾಶ್ಚಯೇ'** ಎಂಬಂತೆ ಶ್ರೀಹರಿಯೇ ಗ್ರಾಮ್ಯಾರಣ್ಯಗಳಿಗೆ ಪತಿಯಾಗಿರುವನು. **'ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತಿ ಓದನಃ'** ಎಂಬಂತೆ ಬ್ರಹ್ಮಾದಿ ಸಕಲ ಜೀವರೂ ಶ್ರೀಹರಿಗೆ ಪಶುಗಳು, ಅವರನ್ನು ಭಕ್ಷಿಸುವುದರಿಂದ ನೃಸಿಂಹನೆ ಪಶುಪತಿಯು. **'ನಾಸ್ತಿ ನಾರಾಯಣ ಸಮಂ ನ ಭೂತಂ ನ ಭವಿಷ್ಯತಿ'** **'ನ ತೇ ಮಹಿತ್ವಮನ್ವಶ್ನುವಂತಿ'** ಎಂಬಂತೆ ಪರಮೋತ್ಕೃಷ್ಟ ದೇವ ಶ್ರೀಹರಿ–ಯಾಗಿರುವೆ. ಜಗನ್ನಾಥನಾದ ನೀನೇ ಸುರವೀರರನ್ನು ಕೊಂದಿರುವ ಶತ್ರುಗಳನ್ನು ಸಂಹರಿಸುವವನು.

ಮಹಾಮಹಾನುಭಾವರಾದ ಬ್ರಹ್ಮಾದಿಗಳಿಗೂ ನೀನು ಈಶ್ವರನಾಗಿರುವೆ. *(ಪ್ರಾಣಸ್ಯ ಪ್ರಾಣಃ)*

**ವಾಸುದೇವೋ ವಾ ಇದಮಗ್ರ ಆಸೀತ್** ಎಂಬಂತೆ ಪ್ರಲಯದಲ್ಲಿಯೂ ಇದ್ದವನು. ಪ್ರೀತಿಯನ್ನೂ ಪ್ರಾಣವನ್ನು ನೀಡುವವನು.

ಮೃತ್ಯುವಿಗೂ ಮೃತ್ಯುವೆನಿಸಿದ ನಿನ್ನನ್ನು ಅಕ್ಷರನೆಂದೂ, ಜಗತ್ತನ್ನೆಲ್ಲ ಉತ್ಪತ್ತಿ ಮಾಡುವುದರಿಂದ ಭವನೆಂದೂ, ನಿನ್ನಂತ ಪರಾಕ್ರಮಿ ಬೇರೊಬ್ಬರಿಲ್ಲದೆ ನಿನ್ನನ್ನೆ ಮಹೇಶ್ವರ ಪದವಿಯಲ್ಲಿರಿಸಿದ್ದಾರೆ. **'ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದು ತದೇವ ಭೂತಂ ತದು ಭ್ಯವಮಾ ಇದಂ'** ಎಂಬಂತೆ ಭೂತನಾಥ ನೀನೆ. ನೀನು **'ದೇವಾನಾಂ ದೇವತ್ರಾ'** ಎಂಬಂತೆ ದೇವದೇವನು. ಲೋಕಗಳನ್ನು ಸೃಜಿಸಿ ಅದರಲ್ಲಿ ಪ್ರವೇಶಿಸಿರುವೆ. ತ್ರಿಲೋಕಗಳಿಗೂ ನೀನು ಆಶ್ರಯನು. ಇದಕ್ಕಾಗಿ **'ತ್ರ್ಯಂಬಕ'**ನೆನ್ನುವರು. ತ್ರಿದಶವೆಂಬ ಹೆಸರುಳ್ಳ ದೇವತೆ. ಅಧೀಶ್ವರನಾಗಿದ್ದ **'ತ್ರಿದಶೇಶನಾಥ'** ಎನಿಸಿರುವೆ.

**'ಶರ್ವಸರ್ವಶಿವಸ್ಥಾಣು'** ಎಂಬಂತೆ ಶತ್ರು ಭಯಂಕರನು ಸರ್ವತ್ರವ್ಯಾಪ್ತನೂ ಸರ್ವರಿಗೂ ಸುಖಕಾರಿಯೂ ಆಗಿದ್ದು **'ಶಂಕರ'**. ಸಮಸ್ತ ವೇದಗಳಗೂ ಈಶಾನನು ನೀನೆ.

**ದತ್ತಃ ಪ್ರಹಾರಃ ಕುಲಿಶೇನ ಪೂರ್ವಂ ತವೇಶಾನ ಸುರ ರಾಜ್ಞಾತಿವೀರ್ಯ। ಕಂಠೇ ನೈಲ್ಯಂ ತೇನತೇ ಯತ್ ಪ್ರವೃತ್ತಂ ತಸ್ಮಾತ್ ಖ್ಯಾತಸ್ತ್ವಂ ನೀಲಕಂಠೇತಿ ಕಲ್ಪಃ ॥ 18 ॥**

ಈ ಹಿಂದೆ ವಜ್ರಾಯುಧಧಾರಿಯಾದ ಇಂದ್ರದೇವನು ನಿನ್ನ ಕುತ್ತಿಗೆಯ ಮೇಲೆ ವಜ್ರಾಯುಧದಿಂದ ಪ್ರಹರಿಸಿದನು. ಇದು ನಿನ್ನನ್ನು ಏನೂ ಮಾಡಲಿಲ್ಲ. ಕಂಠದ ನೈಲ್ಯವನ್ನು ಅಭಿವ್ಯಕ್ತಗೊಳಸಿತು. ಇದರಿಂದ ಸರ್ವರೂ ನಿನ್ನನ್ನು **'ನೀಲಕಂಠ'** ಎಂದು ಗುರುತಿಸುವಂತಾಯಿತು.

ಈ ಜಗತ್ತಿನಲ್ಲಿ ಸಕಲ ಪ್ರಾಣಿಗಳೂ ಪುರುಷಲಿಂಗ ಹಾಗೂ ಭಗದ ಚಿಹ್ನೆಗಳಿಂದ ಕೂಡಿರುವುದು. ಇದರಿಂದಾಗಿ ಸಮಸ್ತ ಪ್ರಪಂಚವೂ ನಿಮ್ಮಿಬ್ಬರ ಪ್ರತಿಬಿಂಬವಾಗಿದೆ. ಜ್ಞಾನಿವರ್ಯರು ನಿಮ್ಮಿಬ್ಬರನ್ನೂ ಭಕ್ತ್ಯಾತಿ ಗುಣವುಳ್ಳ-ವನೆಂದು ನಿನ್ನನ್ನು ಸತ್ವಾದಿಗುಣಗಳಿಗೆ ಅವಾಂತರಾಭಿಮಾನಿಯೆಂದು, ನಿನ್ನ ಪತ್ನಿ ಉಮಾದೇವಿಯನ್ನು ಹೇಳುತ್ತಾರೆ.

ಲೋಕಜನನಿ ಮಹಾಮಾತೆಯಾದರೂ ಶ್ರೀಸೂಕ್ತಾದಿ ಹರಿಯನ್ನು ಬಿಟ್ಟು ಇತರ ವೇದಗಳಿಂದ ಪ್ರತಿಪಾದ್ಯಳಾಗಿರುವಳು. ಮಹತತ್ತ್ವಾಭಿಮಾನಿ ಬ್ರಹ್ಮದೇವನನ್ನು ಸೃಷ್ಟಿಸಿರುವಳು. *(ಅಹಂ ಸುವೇ ಪಿತರಮಸ್ಯಮಾರ್ಧನ್)* ಯಜ್ಞ ಮಾಡಲು ಕಟಿಬದ್ಧರಾದ ಯಜಮಾನರಿಗೆ ದ್ರವ್ಯಾದಿ ಸಂಪತ್ತನ್ನು ಕರುಣಿಸುವವಳು *(ಅಹಂ ದದಾಮಿ ದ್ರವಿಣಂ ಹವಿಷ್ಮತೇ ಯಜಮಾನಾ-ಯಸುನ್ವತೇ).*

ನೀನಾದರೂ ಭಗವಂತನೇ ! ಯೋಗಿಗಳಿಗೆ ಉಪಾಯ ರೂಪನೂ, ನಿನಗೆ ಸದೃಶನಾದ ವ್ಯಕ್ತಿ ಚತುರ್ದಶ ಭುವನಗಳಲ್ಲಿರಲಾರನು. ಬ್ರಹ್ಮಾದಿಗಳೆಲ್ಲರೂ ಕೇವಲ ಭೂತಗಳೆನಿಸಿದರೆ ನೀನಾದರೂ ಮಹದ್ಭೂತ ಎನಿಸಿರುವಿ. ನಿನ್ನಂತಹ ಮಹದ್ಭೂತ *(ಮಹದ್ಭೂತಂ ವಾಯಸಂ ದೇವತಾನಾಮ್)*ಕ್ಕೆ ಸದೃಶ ಹಿಂದಾಗಲಿ, ಮುಂದಾಗಲಿ, ಈಗಾಗಲಿ ಇಲ್ಲ.

**ಅಹಂಬ್ರಹ್ಮಾ ಕಪಿಲೋ ಯೋಽಪ್ಯನನ್ತಃ ಪುತ್ರಾಃ ಸರ್ವೇ ಬ್ರಹ್ಮಣಶ್ಚಾತಿ ವೀರಾಃ ।**
**ತ್ವತ್ತಃ ಸರ್ವೇ ದೇವದೇವ ಪ್ರಸೂತಾಃ ಏವಂ ಸರ್ವೇಶಃ ಕಾರಣಾತ್ಮಾ ತ್ವಮೀಡ್ಯಃ ॥ 19 ॥**

ಗುಣಗಳಿಂದ ಅಹೇಯನಾದ ಬ್ರಹ್ಮದೇವನು, ಕಪಿಲ ಋಷಿಯು, ಶೇಷ ಗರುಡಾದಿಗಳು, ಬ್ರಹ್ಮದೇವನ ಪುತ್ರ ಸನಕಾದಿಗಳು ಇವರೆಲ್ಲರೂ ನಿನ್ನ ಅಂತರ್ಯಾಮಿಯಾಗಿರುವ ಅನಂತಪದ್ಮನಾಭನಿಂದಲೇ ಜನಿಸಿರುವರು. ಹೀಗೆ ನಿನ್ನಂತರ್ಯಾಮಿ ಶ್ರೀಹರಿಯೇ ಜಗಜ್ಜನ್ಮಾದಿ ಕಾರಣನಾಗಿರುವನು.

**ಮನೀಷಿ ತಾನಾಮರ್ಥಾನಾಂ ಪ್ರಾಪ್ತಿಸ್ತೇ ಸುರಸತ್ತಮ ।**
**ಪಾರಿಜಾತಂ ಚ ಹರ್ತಾಸಿ ಮಾ ಭೂತ್ತೇ ಮನಸೋ ವ್ಯಥಾ ॥ 20 ॥**

**ಯಥಾ ಮೈನಾಕಮಾಶ್ರಿತ್ಯ ತಪಸ್ತ್ವಯಕರೋಃ ಪ್ರಭೋ ।**
**ತಥಾಯಮದರಂ ಕೃಷ್ಣ ಸಂಸ್ಮೃತ್ಯ ಸ್ಥೈರ್ಯಮಾಪ್ನುಹಿ ॥ 21 ॥**

ಹೀಗೆ ಶ್ರೀಕೃಷ್ಣನು ಸ್ತುತಿಸುತ್ತಿರುವಾಗಲೇ ರುದ್ರದೇವನು ತನ್ನ ಬಲಗೈಯನ್ನು ಚಾಚಿ ಸಮಾಧಾನಿಸುತ್ತಾ ಹೀಗೆಂದರೆ – ಸುರಶ್ರೇಷ್ಠನೇ! ನಿನ್ನ ಮನೋರಥವು ಕೈಗೂಡುವುದು. ನೀನು ಪಾರಿಜಾತ ವೃಕ್ಷವನ್ನು ಭೂಮಿಗೆ ಕೊಂಡೊಯ್ಯುವಿ. ಸಂಶಯವಿಲ್ಲ. ಇದಕ್ಕಾಗಿ ಚಿಂತೆಬೇಡ. ಇದಲ್ಲದೆ, ಹಿಂದೆ ನೀನು ಮೈನಾಕ ಪರ್ವತದಲ್ಲಿ ಒಂದು ಬಾರಿ ನನ್ನ ನ್ನುದ್ಧೇಶಿಸಿ ತಪಸ್ಸನ್ನಾಚರಿಸಿದೆ. ಆಗ ನಾನು ನೀಡಿದ ವರವನ್ನು ಸ್ಮರಿಸಿಕೊ.[3]

**ಅವಧ್ಯಸ್ತ್ವಮಜೇಯಶ್ಚ ಮತ್ತಃ ಶೂರತರ ಸ್ತಥಾ ।**
**ಭವಿತಾಸೀತ್ಯಪೋಚಂ ಯತ್ತತ್ ತಥಾ ನ ತದನ್ಯಥಾ ॥ 22 ॥**

### ಬಿಲ್ವೋದಕೇಶ್ವರನ ವರ

ನಾನು ಹಿಂದೆ ಹೇಳಿದಂತೆ ನೀನು ಅವಧ್ಯನೂ, ಸರ್ವರಿಂದಲೂ ಅಜೇಯನೂ

---

3. ಕ್ವಚಿಚ್ಛಿವಂ ಕ್ವಚಿದೃಷೀನ್ ಕ್ವಚಿದ್ ದೇವಾನ್ ಕ್ವಚಿನ್ನರಾನ್ ।
ಸಮತ್ಯರ್ಚಯತಿ ಸ್ತೌತಿ ಪರಾನರ್ಥಯತೇಽಪಿ ಚ ॥ *–ತಾ.ನಿ.–1/133*
ಸರ್ವಜ್ಞೋಽಪಿ ವಿಮೋಹಾಯ ಜನಾನಾಂ ಪುರುಷೋತ್ತಮಃ ।

ಹರಿವಂಶದ ಕೈಲಾಸಯಾತ್ರೆ, ಪುತ್ರವರ ಯಾಚನೆ ಇವೆಲ್ಲ ಅಸುರ ಮೋಹಕ್ಕಾಗಿ ನಟನೆ ಅಥವಾ ನೀವೂ ಪುತ್ರಾದಿಗಳಿಗಾಗಿ ಶಿವನನ್ನು ಒಲಿಸಿರಿ ಎಂಬ ಶಿಕ್ಷಣ.

ಆಗುವೆ ಎಂದು ವರ ನೀಡಿದ್ದೆ. ಅದರಂತೆ ನೀನು ಅವಧ್ಯನಾಗಿದ್ದು ನನಗಿಂತಲೂ ಶೂರನೆನಿಸುವೆ. ನನ್ನ ವರ ಸತ್ಯವಾಗುತ್ತದೆ.

ಯಾರು ಈ ಸ್ತೋತ್ರದಿಂದ ನನ್ನನ್ನು ನನ್ನ ಅಂತರ್ಯಾಮಿಯನ್ನು ಸ್ತುತಿಸುವರೋ ಅಂತಹವರು ಯುದ್ಧಾದಿಗಳಲ್ಲಿ ವಿಜಯಗಳಿಸುತ್ತಾರೆ. ಮಹಾ ಪುಣ್ಯಕ್ಕೆ ಭಾಗಿಯಾಗುತ್ತಾರೆ.

ನೀನು ಈ ಸ್ಥಳದಲ್ಲಿ ನನ್ನನ್ನು ಸ್ಥಾಪಿಸಿರುವೆ. ಇನ್ನು ಮುಂದೆ 'ಬಿಲ್ವೋದಕೇಶ್ವರ' ನೆಂಬ ಹೆಸರಿನಿಂದ ಪ್ರಸಿದ್ಧಿ ಹೊಂದುವೆನು. ಭಕ್ತರು ಮಾಡುವ ನನ್ನ ಪೂಜೆಯಿಂದಾಗಿ ಅವರ ಮನೋರಥ ಸಿದ್ಧಿಸುತ್ತದೆ.

ಮೂರು ರಾತ್ರಿ ಉಪವಾಸವಿದ್ದು ನನ್ನನ್ನು ಪೂಜಿಸಿದರೆ ಉತ್ತಮ ಲೋಕಪ್ರಾಪ್ತಿ. ಇಲ್ಲಿರುವ ಗಂಗೆಯಲ್ಲಿ ಸ್ನಾನ ಮಾಡಿದರೆ ಗಂಗೆಯಲ್ಲಿ ಮಿಂದ ಫಲವೆ ಲಭಿಸುವುದು. ಇನ್ನೊಂದು ವಿಷಯ ಹೇಳುವೆ ಕೇಳು.

**ಷಟ್ಪುರಂ ನಾಮ ನಗರಂ ದಾನಾವಾನಾಂ ಜನಾರ್ದನ ।**
**ಅತ್ರಾಂತರ್ಧರ್ರಣೀದೇಶೇ ಪರಾಕ್ರಮ್ಯ ಮಹಾಬಲಾಃ ॥ 23 ॥**

**ಏತೇ ದೈತ್ಯಾಃ ದುರಾತ್ಮಾನಃ ಜಗತೋ ದೇವ ಕಂಟಕಾಃ ।**
**ಭಿನ್ನಾ ವಸಂತಿ ಗೋವಿಂದ ಸಾನಾವಸ್ಯ ಮಹಾಗಿರೇಃ ॥ 24 ॥**

ಜನಾರ್ದನನೇ! ಈ ಭೂಮಿಯಲ್ಲಿ ಭಯಂಕರವಾದ ದಾನವರು ವಾಸಿಸುವ 'ಷಟ್ಪುರ'ವೆಂಬ ನಗರವಿದೆ. ಈ ನಗರದಲ್ಲಿ ಮಹಾಪರಾಕ್ರಮಿಗಳಾದ ದಾನವರು ವಾಸಿಸುತ್ತಿರುವರು.

ದೇವನೇ! ಈ ದಾನವರು ಮಹಾದುರಾತ್ಮರಿದ್ದು ಜಗತ್ತಿಗೆ ಕಂಟಕರಾಗಿರುವರು. ಗೋವಿಂದನೇ! ದೇವತೆಗಳಿಗೂ ಇವರು ಪೀಡಾಕಾರಕಾಗಿರುವರು. ಇವರೆಲ್ಲರೂ ಈ ಮಹಾಪರ್ವತದ ಸಾನುಪ್ರದೇಶದಲ್ಲಿ ರಹಸ್ಯವಾಗಿ ವಾಸಿಸುತ್ತಿರುವರು.

**ಅವಧ್ಯಾ ದೇವದೇವಾನಾಂ ವರೇಣ ಬ್ರಹ್ಮಣೋऽನಘಃ ।**
**ಮಾನುಷಾಂತರಿತಃ ತಸ್ಮಾತ್ ತ್ವಮೇತಾನ್ ಜಹಿ ಕೇಶವ ॥**

ಇವರೆಲ್ಲರಿಗೂ ಬ್ರಹ್ಮದೇವನ ಅವಧ್ಯತ್ವ ವರವಿರುತ್ತದೆ. ಇದರಿಂದಾಗಿ ದೇವಾನುದೇವರಿಂದಲೂ ನಾಶ ಹೊಂದಲು ಅಸಾಧ್ಯರಾಗಿರುವರು.

ಅನಘನೇ! ನೀನು ದೇವದೇವನಾದರೂ ಮಾನವನ ವೇಷಧರಿಸಿ ಇಳಿದು ಬಂದಿರುವೆ. ಮನುಷ್ಯರಿಂದ ಅವಧ್ಯತ್ವವನ್ನು ಪಡೆಯದಿರುವುದರಿಂದ ನೀನು ಅವರೆಲ್ಲರನ್ನೂ ಕೊಲ್ಲಬಹುದಾಗಿದೆ. ಆದ್ದರಿಂದ ಅವರೆಲ್ಲರನ್ನೂ ನೀನು ಸಂಹರಿಸು.

ಏವಮುಕ್ತ್ವಾ ಮಹಾದೇವಃ ತತ್ರೈವಾಂತರಧೀಯತ ।
ಪರಿಷ್ವಜ್ಯ ಮಹಾತ್ಮಾನಂ ವಾಸುದೇವಂ ಜನಾಧಿಪ ॥

ಮಹಾದೇವನು ಹೀಗೆ ಹೇಳಿ -

ಜನಮೇಜಯನೇ! ಮಹಾದೇವನು ಶ್ರೀಕೃಷ್ಣನಿಗೆ ಹೀಗೆ ಹೇಳುತ್ತಾ ಅವನನ್ನು ಆಲಂಗಿಸಿ, ಅಲ್ಲಿಯೇ ಮರೆಯಾದನು.

ತತೋಯಾತೇ ಮಹಾದೇವೇ ಪ್ರಭಾತಾಯಾಂ ನರಾಧಿಪ ।
ತಸ್ಯಾಂ ನಿಶಾಯಾಂ ಗೋವಿಂದಃ ಭೂಯಃ ಪರ್ವತಮಬ್ರವೀತ್ ॥
ತವಾಧಃ ಪರ್ವತಶ್ರೇಷ್ಠ ನಿವಸಂತಿ ಮಹಾಸುರಾಃ ।
ಅವಧ್ಯಾ ದೇವದೇವಾನಾಂ ವರೇಣ ಬ್ರಹ್ಮಣಃ ಪುರಾ ॥

ನರಶ್ರೇಷ್ಠನೇ! ರುದ್ರದೇವನು ವಿಜ್ಞಾಪಿಸಿ ಅದೃಶ್ಯನಾದಂತೆ, ರಾತ್ರಿ ಕಳೆದು ಹಗಲಾಯಿತು. ಶ್ರೀಕೃಷ್ಣನಾದರೂ ಪರ್ವತರಾಜನನ್ನು ಕುರಿತು ಹೀಗೆಂದನು.

ಪರ್ವತಶ್ರೇಷ್ಠನೇ! ನಿನ್ನ ಕೆಳಗಡೆ ಬಹುಸಂಖ್ಯಾಕರಾದ ಮಹಾದೈತ್ಯರು ವಾಸಿಸುತ್ತಿರುವರು. ಇವರೆಲ್ಲರೂ ಬ್ರಹ್ಮದೇವನ ವರದಿಂದಾಗಿ ದೇವತೆಗಳಿಗೂ ಅವಧ್ಯರಾಗಿರುವರು.

ನಾನಾದರೂ ಈ ಮಹಾಬಲಿಷ್ಠ ದೈತ್ಯರು ಗುಹೆಯಿಂದ ಹೊರಗೆ ಬಾರದಂತೆ ಅವರ ಗುಹೆಯ ದ್ವಾರವನ್ನು ಬಂಧಿಸುವೆನು. ಇದರಿಂದಾಗಿ ಅವರು ಹೊರಗೆ ಬರಲಾರರು. ದ್ವಾರವನ್ನು ಬಲವಾಗಿ ಬಂಧಿಸಿದರೆ ಅವರು ಹೊರಗೆ ಬರಲಾರದೆ ಅಲ್ಲಿಯೇ ನಾಶ ಹೊಂದುವರು.

ನಾನಾದರೂ ಪರ್ವತನಾದ ನಿನ್ನಲ್ಲಿ ಸನ್ನಿಹಿತನಾಗಿದ್ದು ಇಲ್ಲಿಯೇ ವಾಸಿಸುವೆನು. ಇದರಿಂದಾಗಿ ಅವರು ಎಷ್ಟೇ ಬಲಿಷ್ಠರಾದರೂ ದ್ವಾರವನ್ನು ಭೇದಿಸಿ ಬರಲಾರರು.

**ಆರುಹ್ಯ ಮೂರ್ಧ್ನಿ ಮದ್ರೂಪಂ ದೃಷ್ಟ್ವಾ ಪರ್ವತಸತ್ತಮ ।**
**ಗೋಸಹಸ್ರಪ್ರದಾನಸ್ಯ ಫಲಂ ಪ್ರಾಪ್ಸ್ಯತಿ ಶಾಶ್ವತಮ್ ॥**

**ತ್ವತ್ತೋಽಶ್ಮಭಿಶ್ಚ ಪ್ರತಿಮಾಂ ಕಾರಯಿತ್ವಾ ಹಿ ಭಕ್ತಿತಃ ।**
**ಶುಶ್ರೂಷಯಂತಿ ಯೇ ನಿತ್ಯಂ ಮಮ ಯಾಸ್ಯಂತಿ ತಿ ತೇ ಗತಿಂ ॥**

ಯಾರು ಈ ಪರ್ವತವನ್ನೇರಿ ನನ್ನ ಪ್ರತಿಮೆಯನ್ನು ಸಂದರ್ಶಿಸುವರೋ ಅವರು ಸಾವಿರ ಗೋದಾನ ಫಲವನ್ನು ಹೊಂದುವರು.

ಪರ್ವತರಾಜನೇ! ಯಾರು ನಿನ್ನ ಪರ್ವತದ ಶಿಲೆಯಿಂದ ನನ್ನ ಅರ್ಚಾವಿಗ್ರಹವನ್ನು ಮಾಡಿಸಿ ತನ್ಮೂಲಕ ಭಕ್ತಿಯಿಂದ ನನ್ನನ್ನು ಅರ್ಚಿಸುವನೋ ಅವರು ನನ್ನನ್ನು ಹೊಂದುವರು.

ಈ ರೀತಿ ಶ್ರೀಕೃಷ್ಣನು ವರವನ್ನು ನೀಡಿ ಪರ್ವತವನ್ನು ಅನುಗ್ರಹಿಸಿದನು.

ಅಂದಿನಿಂದ ಶ್ರೀಕೃಷ್ಣನು ಆ ಪರ್ವತದಲ್ಲಿಯೇ ಸನ್ನಿಹಿತನಾದನು.

**ಪಾಷಾಣೈಃ ಪ್ರತಿಮಾಂ ತಾತ ಕಾಯಿತ್ವಾ ಚ ಕೌರವ ।**
**ಶುಶ್ರೂಷಂತಿ ಕೃತಾತ್ಮಾನಃ ವಿಷ್ಣುಲೋಕಾಭಿಕಾಂಕ್ಷಿಣಃ ॥**

ತಾತ ಜನಮೇಜಯನೇ ! ಶುದ್ಧಾಂತಃಕರಣನಾದ ಪುರುಷನು ವಿಷ್ಣುಲೋಕ ಹೊಂದಬೇಕೆಂಬ ಇಚ್ಛೆಯಿಂದಾಗಿ ಪಾರಿಯಾತ್ರ ಪರ್ವತದ ಶಿಲೆಗಳಿಂದ ಶ್ರೀಕೃಷ್ಣಾದಿ ಪ್ರತಿಮೆಗಳನ್ನು ಕೆತ್ತಿಸಿ, ಭಕ್ತಿಯಿಂದ ಅರ್ಚಿಸಿದವರು ಧನ್ಯರೇ ಸರಿ.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ**
**ಶ್ರೀಕೃಷ್ಣಕೃತ ಶಿವಸ್ತುತಿ ಹಾಗೂ ಪಾರಿಯಾತ್ರ ಪರ್ವತಕ್ಕೆ ವರದಾನವೆಂಬಲ್ಲಿ**
**ಎಪ್ಪತ್ತನಾಲ್ಕನೆಯ ಅಧ್ಯಾಯ ಸಮಾಪ್ತಿ[4]**

---

4. ಅವತಾರದಲ್ಲಿ ಮಾಡಿದ ಶಿವನ ಸ್ತೋತ್ರಾದಿಗಳು ಮಾನವರಿಗೆ ಶಿಕ್ಷಣ, ದುಷ್ಟದೈತ್ಯರಿಗೆ ಅನ್ಯಥಾಜ್ಞಾನದಿಂದ ಮೋಹಗೊಳಿಸುವುದು ಹೊರತು ವಿಷ್ಣುವಿಗೆ ದೋಷವಾವುದೂ ಇರುವುದಿಲ್ಲ.
**ಅವತಾರೇಷು ಯತ್ಕಿಂಚಿತ್ ದರ್ಶಯೇನ್ನರವದ್ ಹರಿಃ ।**
**ತಚ್ಚಾಸುರಾಣಾಂ ಮೋಹಾಯ ದೋಷ್ಣಾಃ ವಿಷ್ಣೋರ್ನಹಿಕ್ವಚಿತ್ ॥**
*–ಮ.ಭಾ.ತಾ.ನಿ.1/37*

# ಅಥ ಪಂಚಸಪ್ತತಿತಮೋಽಧ್ಯಾಯಃ

## *ಇಂದ್ರೋಪೇಂದ್ರರ ಪುನರ್ಯುದ್ಧ*

*ವೈಶಂಪಾಯನ ಉವಾಚ–*

**ತತೋ ರಥವರಂ ಕೃಷ್ಣಃ ಸಮಾರುಹ್ಯ ಮಹಾಮನಾಃ ।**
**ಬಿಲ್ವೋದಕೇಶ್ವರಂ ದೇವಂ ನಮಸ್ಕೃತ್ಯ ಯಯೌ ನೃಪಃ ॥ 1 ॥**
**ಮಹೇಂದ್ರ ಮಾಹ್ವಯಾಮಾಸ ರಥಸ್ಥೋ ಮಧುಸೂದನಃ ।**
**ಸತ್ಕೃತಂ ಪುಷ್ಕರಾಭ್ಯಾಶೇ ಸರ್ವೈಃ ದೇವಗಣೈಃ ಸಹ ॥ 2 ॥**

ವೈಶಂಪಾಯನರು ಜನಮೇಜಯನಿಗೆ ಹೇಳುವರು. ರಾಜನೇ ! ನಂತರ ಮಹಾಮನಸ್ವಿಯಾದ ಶ್ರೀಕೃಷ್ಣನು ಬಿಲ್ವೋದಕೇಶ್ವರದೇವನಿಗೆ ಲೋಕಶಿಕ್ಷಣಕ್ಕಾಗಿ ನಮಸ್ಕರಿಸಿ, ತನ್ನ ರಥದಲ್ಲಿ ಕುಳಿತು ಯುದ್ಧಕ್ಕಾಗಿ ಹೊರಟನು.

ರಥದಲ್ಲಿ ಕುಳಿತುಕೊಂಡೆ ಮಧುನಿಘಾತಿಯು ಪುಷ್ಕರದ ಸಮೀಪ ಸಮಸ್ತ ದೇವತಾವೃಂದದಿಂದ ಕೂಡಿ, ಅವರಿಂದ ಸತ್ಕೃತನಾಗಿದ್ದ ದೇವೇಂದ್ರನನ್ನು ಯುದ್ಧಕ್ಕೆ ಆಹ್ವಾನಿಸಿದನು.

## ಪಾರಿಜಾತಕ್ಕಾಗಿ ದೇವೇಂದ್ರರ ಯುದ್ಧ

**ತತಃ ಶಕ್ರಃ ಜಯಂತೋಽಥ ಹರಿಭಿರ್ಯುಕ್ತಮುತ್ತಮಂ ।**
**ಆರುರೋಹ ರಥಂ ದೇವಃ ಸರ್ವಕಾಮಪ್ರದಃ ಸತಾಂ ॥ 3 ॥**

**ತತೋ ರಥಸ್ಥಯೋಃ ಯುದ್ಧಮಭವತ್ ಕುರುನಂದನ ।**
**ದೇವಯೋಃ ದೈವಯೋಗೇನ ಪಾರಿಜಾತಕೃತೇ ತದಾ ॥ 4 ॥**

ನಂತರ ಇಂದ್ರ ಹಾಗೂ ಅವನ ಪುತ್ರ ಜಯಂತರು ಶ್ರೇಷ್ಠ ಕುದುರೆಗಳಿಂದ ಯುಕ್ತವಾಗಿದ್ದ ಉತ್ತಮ ರಥವನ್ನೇರಿದರು. ಇಂದ್ರನಾದರೂ ಸಾಧುಗಳಿಗೆ ಹರಿಭಕ್ತರಿಗೆ ಬೇಡಿದ ಇಷ್ಟಾರ್ಥ ನೀಡುವ ವಿಷ್ಣುಭಕ್ತನಾದರೂ ಅಸುರಾವೇಶಕ್ಕೊಳಗಾಗಿ ಶ್ರೀಕೃಷ್ಣನೊಂದಿಗೆ ಯುದ್ಧಕ್ಕೆ ನಿಂತನು.[1]

ನಂತರ ರಥದಲ್ಲಿ ಕುಳಿತಿರುವ ಇಂದ್ರೋಪೇಂದ್ರರಿಗೆ ದೈವವಶಾತ್ ಪಾರಿಜಾತಕ್ಕಾಗಿ ಮಹಾನ್ ಯುದ್ಧವೇರ್ಪಟ್ಟಿತು.

**ತತೋಽಹನದ್ ರಣೇ ವಿಷ್ಣುಃ ಬಾಣೈಃ ಶತ್ರುಬಲಾರ್ದನಃ ।**
**ಸೈನ್ಯಾನಿ ದೇವರಾಜಸ್ಯ ಬಾಣಜಾಲೈರಜಿಹ್ಮಗೈಃ ॥ 5 ॥**
**ಉಪೇಂದ್ರಂ ನ ಮಹೇಂದ್ರೋಽಥ ನೈವ ವಿಷ್ಣುಃ ಸುರೇಶ್ವರಂ ।**
**ತಾಡಯಾಮಾಸತುಃ ವೀರೌ ಶಸ್ತ್ರೈಃ ಶಕ್ತಾವಪಿ ಪ್ರಭೋ ॥ 6 ॥**

ರಣರಂಗದಲ್ಲಿ ಶತ್ರು ಪೀಡಕನಾದ ಶ್ರೀಕೃಷ್ಣನು ನೇರವಾಗಿ ಶತ್ರುಗಳ ಮೇಲೆಯೇ ಬೀಳುವ *[ಅಜಿಹ್ಮಗೈಃ]* ಬಾಣಸಮೂಹಗಳಿಂದ ಇಂದ್ರದೇವನ ಸೇನಾವಾಹಿನಿಯನ್ನು ಹೊಡೆದನು.

ರಾಜನ್, ಇಂದ್ರ–ಉಪೇಂದ್ರರು ಮಹಾಸಾಮರ್ಥ್ಯದಿಂದ ಕೂಡಿದ್ದರೂ ಇಂದ್ರನು ಉಪೇಂದ್ರನನ್ನಾಗಲೀ, ಉಪೇಂದ್ರನು ಇಂದ್ರನನ್ನಾಗಲಿ ಶಸ್ತ್ರಗಳಿಂದ ಹೊಡೆಯದಾದರು.

ಸ್ವಲ್ಪಕಾಲಾನಂತರ ಶ್ರೀಕೃಷ್ಣನು ದೇವೇಂದ್ರನ ಕುದುರೆಗಳ ಮೇಲೆ ಹತ್ತು ಬಾಣಗಳಿಂದ ಪ್ರಹರಿಸಿದನು.

**ಶೈಬ್ಯಾದ್ಯಾನ್ಪಿ ದೇವೇಂದ್ರಃ ಶರೈಃ ಅಮರಸತ್ತಮಃ ।**

ಇಂದ್ರನೂ ಸಹ ದಿವ್ಯಾಸ್ತ್ರಗಳಿಂದ ಅಭಿಮಂತ್ರಿತ ಹತ್ತು ಹತ್ತು ಬಾಣಗಳನ್ನು

---

1. **ಶ್ರುತ್ವಾ ಚ ತ್ಯಾಹಯಾಮಾಸ ಶಚೀ ಶಕ್ರಂ ಸುರಾಧಿಪಂ ॥** –*ವಿ.5/30/52*

ದೇವತೆಗಳು ಶ್ರೀಹರಿಯಿಂದ ಯುದ್ಧಾದಿಗಳನ್ನೆಸಗಿದರೆ ಹರಿಯ ಆಜ್ಞೆಯಿಂದಾಗಲೀ, ಅಸುರಾವೇಶದಿಂದಾಗಲೀ ಮಾಡಿರುತ್ತಾರೆ.

**ಸ್ಪರ್ಧಂತ ಇವ ದೇವಾಸ್ತು ಹರಿಣಾ ಯತ್ರ ಕುತ್ರಚಿತ್ ।**
**ಹರೇರೇವಾಜ್ಞಯಾ ಕ್ವಾಪಿ ದೈತ್ಯಾವೇಶಾದಥಾಪಿ ವಾ ॥** – *ಭಾ.ತಾ. 5/18/27*

ಶ್ರೀಕೃಷ್ಣನ ಶೈಬ್ಯ–ಸುಗ್ರೀವ – ಬಲಾಹಕ – ಮೇಘ ಪುಷ್ಪಗಳೆಂಬ ಕುದುರೆಗಳನ್ನು ಮುಚ್ಚಿದನು.

ಶ್ರೀಕೃಷ್ಣನಾದರೂ ಇಂದ್ರನ ಐರಾವತ ಆನೆಯ ಮೇಲೆ ಸಾವಿರ ಬಾಣಗಳನ್ನು ಸುರಿಸಿದನು. ಬಲಶತ್ರುವನ್ನು ನಿಗ್ರಹಿಸಿದ ಇಂದ್ರನೂ ಸಹ ವಿಷ್ಣುವಾಹನ ಗರುಡನ ಮೇಲೆ ಸಹಸ್ರಬಾಣಗಳ ಪ್ರಯೋಗ ಮಾಡಿದನು.

ಶತ್ರು ನಾಶ ಮಾಡಲಚ್ಛಿಸಿದ ಶ್ರೀಕೃಷ್ಣ–ದೇವೇಂದ್ರರು ಮಹತ್ತಾದ ರಥಗಳ ದ್ವಾರಾ/ಲತೆಗಳಂತಿರುವ ಬಾಣಗಳಿಂದ ಹೊಡೆದುಕೊಂಡು ಯುದ್ಧ ಮಾಡಿದರು.

**ಚಕಂಪೇ ವಸುಧಾ ಕೃತ್ಸ್ನಾ ನೌಃ ಜಲಸ್ಥೇವ ಭಾರತ ।**
**ಏತಾಂ ದಾಹೇಣ ದಿಗ್ದೇಶಃ ಸಂವೃತಾಶ್ಚ ಸಮಂತತಃ ॥ 7 ॥**

ಜನಮೇಜಯನೇ! ಇವರಿಬ್ಬರ ಯುದ್ಧದಿಂದಾಗಿ ಸಮಸ್ತ ಭೂಮಂಡಲವು ಬಿರುಗಾಳಿಯ ಹೊಡೆತಕ್ಕೆ ಸಿಕ್ಕ ದೋಣಿಯು ಸಂಪೂರ್ಣ ಕಂಪಿಸುವಂತೆ ಕಂಪಿಸಿತು. ಸಮಸ್ತ ಭೂಮಿಯು ಬೆಂಕಿಯಿಂದ ಉರಿಯುತ್ತಿರುವಂತೆ ತೋರುತ್ತಿತ್ತು.

**ಚೇಲುಃ ಗಿರಿವರಾಶ್ಚೈವ ಪೇತುಶ್ಚ ಶತಶೋ ದ್ರುಮಾಃ ।**
**ಪೇತುಶ್ಚ ಧರಿಣೀಪೃಷ್ಠೇ ಮರ್ತ್ಯಾಃ ಧರ್ಮಗುಣಾನ್ವಿತಾಃ ॥ 8 ॥**

ಮಹಾಪರ್ವತಗಳೆಲ್ಲವೂ ಕಂಪಿಸಿದವು. ನೂರಾರು ಗಿಡಮರಗಳು ಭೂಮಿಗೆ ಉರುಳಿದವು. ಧರ್ಮಶೀಲ ಮನುಷ್ಯರೂ ಭೂಮಿಯಲ್ಲಿ ಬಿದ್ದರು.

ಪದೇ ಪದೇ ನೂರಾರು ಸಿಡಿಲುಗಳು ಸಿಡಿದವು. ನದಿಗಳೆಲ್ಲವೂ ವಿರುದ್ಧ ದಿಕ್ಕಿಗೆ ಹರಿಯಲಾರಂಭಿಸಿದವು.

ಭಯಂಕರ ಚಂಡಮಾರುತ ಸುತ್ತಲೂ ಬೀಸಿದವು. ಪ್ರಭೆಯನ್ನು ಕಳೆದುಕೊಂಡು ಉಲ್ಕೆಗಳು ಆಗಸದಿಂದ ಭೂಮಿಗೆ ಬಿದ್ದವು. ಸಮಸ್ತ ಚರಾಚರ ಪ್ರಾಣಿಗಳು ರಥದ ಶಬ್ಧದಿಂದ ಮೋಹಗೊಂಡರು.

ಜನಪದೇಶ್ವರನೇ! ಯುದ್ಧದ ತೀವ್ರತೆಯೆಂದರೆ ನೀರಿನಲ್ಲಿಯೂ ಬೆಂಕಿಹೊತ್ತಿ ಉರಿಯುತ್ತಿತ್ತು.

ಗ್ರಹಗಳು ಒಂದಕ್ಕೊಂದು ಪರಸ್ಪರ ಯುದ್ಧ ಮಾಡಿಕೊಂಡವು.

ಸ್ವರ್ಗದಿಂದ ಅನೇಕ ಬೆಳಕಿನ ಪುಂಜಗಳು ಭೂಮಿಗೆ ಬಿದ್ದವು. ದಿಗ್ಗಜಗಳು ಹಾಗೂ ಪಾತಾಳದಲ್ಲಿರುವ ಸರ್ಪಗಳು ಕೋಪಗೊಂಡವು.

**ಗರ್ದಭಾರುಣಸಂಸ್ಥಾನೈಃ ಛಿನ್ನಾಭ್ರೈಶ್ಚಾವೃತಂ ನಭಃ ।**
**ವಿನದದ್ಭಿಃ ಮಹಾರಾವೈಃ ಉಲ್ಕಾಶೋಣಿತವರ್ಷಿಭಿಃ ॥ 9 ॥**

ಗರ್ದಭದ ಬಣ್ಣದಂತೆ ಬೂದಿಬಣ್ಣದ ಮತ್ತು ಅರುಣವರ್ಣ ಮಿಶ್ರಿತವಾಗಿದ್ದ ಖಂಡಖಂಡಗಳಾದ ಮೇಘಗಳು ಗಗನದಲ್ಲಿ ಆವರಿಸಿದವು. ಆ ಮೇಘಗಳು ಭಯಂಕರವಾಗಿ ಗರ್ಜಿಸುತ್ತಿದ್ದು ಉಲ್ಕೆಗಳನ್ನು ಹಾಗೂ ರಕ್ತವನ್ನು ಸುರಿಸುತ್ತಿದ್ದವು.

ರಾಜನೇ! ದೇವಶ್ರೇಷ್ಠರಿಬ್ಬರೂ ಸಂಗ್ರಾಮ ನಿರತರಾಗಿದ್ದನ್ನು ನೋಡಿ ಭೂಮಿ ಅಂತರಿಕ್ಷ ಆಕಾಶಗಳಲ್ಲಿರುವ ಯಾವ ಪ್ರಾಣಿಗೂ ಸ್ವಾಸ್ಥ್ಯವಿದ್ದಂತೆ ತೋರಲಿಲ್ಲ. ಜಗತ್ತಿಗೆ ಹಿತೈಷಿಗಳಾದ ಋಷಿಮುನಿಗಳು ಜಗತ್ತಿನ ಹಿತ ಕೋರಿ *'ಸ್ವಸ್ತಿ ನೊ ಮಿಮೀತ'* ಮೊದಲಾದ ಮಂತ್ರಗಳನ್ನು ಜಪಿಸಲುಪಕ್ರಮಿಸಿದರು.

**ಜೇಪ್ರುಃ ಮುನಿಗಣಾಃ ಮಂತ್ರಾನ್ ಜಗತೋ ಹಿತಕಾಮ್ಯಯಾ ।**

ಹಾಗೆಯೆ ಮಹಾತ್ಮರಾದ ಬ್ರಾಹ್ಮಣರೂ ಸಹ ಕೂಡಲೇ ಅವಸರದಿಂದ ಮಂತ್ರ ಜಪಾಸಕ್ತರಾದರು.

ಈ ಸಮಯದಲ್ಲಿ ಬ್ರಹ್ಮದೇವರು ಮಹಾತೇಜಸ್ವಿಯಾದ ಕಶ್ಯಪರಿಗೆ ಹೀಗೆ ಹೇಳಿದರು.

ಸುವ್ರತನೇ! ನೀನು ಈ ಕೂಡಲೇ ನನ್ನ ಸೊಸೆಯಾದ ಅದಿತಿಯೊಂದಿಗೆ ಹೋಗಿ ನಿಮ್ಮ ಪುತ್ರರಿಬ್ಬರಲ್ಲಿ ನಡೆಯುತ್ತಿರುವ ಯುದ್ಧವನ್ನು ನಿಲ್ಲಿಸು.

**ಗಚ್ಛ ವಧ್ವಾ ಸಹಾದಿತ್ಯಾ ಪುತ್ರೌ ವಾರಯ ಸುವ್ರತ ॥ 10 ॥**

ಬ್ರಹ್ಮದೇವನ ಮಾತನ್ನು ಅಂಗೀಕರಿಸಿ ತಥಾಸ್ತುಯೆಂದು ಕಶ್ಯಪನು ತನ್ನ ಪತ್ನಿ ಅದಿತಿಯೊಂದಿಗೆ ರಥದಲ್ಲಿ ಕುಳಿತು ಇಂದ್ರ-ಉಪೇಂದ್ರರ ಸಂಗ್ರಾಮ ಭೂಮಿಗೆ ಬಂದಿಳಿದನು.

ತಮ್ಮಿಬ್ಬರ ರಥಗಳ ಮಧ್ಯದಲ್ಲಿ ಕಶ್ಯಪ ಹಾಗೂ ತಾಯಿ ಅದಿತಿಯರ ರಥವು ನಿಂತಿರುವುದನ್ನು ನೋಡಿದ ಇಂದ್ರೋಪೇಂದ್ರರು ತಮ್ಮ ರಥಗಳಿಂದ ಕೆಳಗಿಳಿದು ಬಂದರು.

ಶ್ರೀಕೃಷ್ಣನ ಶೈಬ್ಯ-ಸುಗ್ರೀವ – ಬಲಾಹಕ – ಮೇಘ ಪುಷ್ಪಗಳೆಂಬ ಕುದುರೆಗಳನ್ನು ಮುಚ್ಚಿದನು.

ಶ್ರೀಕೃಷ್ಣನಾದರೂ ಇಂದ್ರನ ಐರಾವತ ಆನೆಯ ಮೇಲೆ ಸಾವಿರ ಬಾಣಗಳನ್ನು ಸುರಿಸಿದನು. ಬಲಶತ್ರುವನ್ನು ನಿಗ್ರಹಿಸಿದ ಇಂದ್ರನೂ ಸಹ ವಿಷ್ಣುವಾಹನ ಗರುಡನ ಮೇಲೆ ಸಹಸ್ರಬಾಣಗಳ ಪ್ರಯೋಗ ಮಾಡಿದನು.

ಶತ್ರು ನಾಶ ಮಾಡಬಯಸಿದ ಶ್ರೀಕೃಷ್ಣ-ದೇವೇಂದ್ರರು ಮಹತ್ತಾದ ರಥಗಳ ದ್ವಾರಾ/ಲತೆಗಳಂತಿರುವ ಬಾಣಗಳಿಂದ ಹೊಡೆದುಕೊಂಡು ಯುದ್ಧ ಮಾಡಿದರು.

**ಚಕಂಪೇ ವಸುಧಾ ಕೃತ್ಸ್ನಾ ನೌಃ ಜಲಸ್ಥೇವ ಭಾರತ ।**
**ಏತಾಂ ದಾಹೇನ ದಿಗ್ದೇಶಃ ಸಂವೃತಾಶ್ಚ ಸಮಂತತಃ ॥ 7 ॥**

ಜನಮೇಜಯನೇ! ಇವರಿಬ್ಬರ ಯುದ್ಧದಿಂದಾಗಿ ಸಮಸ್ತ ಭೂಮಂಡಲವು ಬಿರುಗಾಳಿಯ ಹೊಡೆತಕ್ಕೆ ಸಿಕ್ಕ ದೋಣಿಯು ಸಂಪೂರ್ಣ ಕಂಪಿಸುವಂತೆ ಕಂಪಿಸಿತು. ಸಮಸ್ತ ಭೂಮಿಯು ಬೆಂಕಿಯಿಂದ ಉರಿಯುತ್ತಿರುವಂತೆ ತೋರುತ್ತಿತ್ತು.

**ಚೇಲುಃ ಗಿರಿವರಾಶ್ಚೈವ ಪೇತುಶ್ಚ ಶತಶೋ ದ್ರುಮಾಃ ।**
**ಪೇತುಶ್ಚ ಧರಣೀಪೃಷ್ಠೇ ಮರ್ತ್ಯಾಃ ಧರ್ಮಗುಣಾನ್ವಿತಾಃ ॥ 8 ॥**

ಮಹಾಪರ್ವತಗಳೆಲ್ಲವೂ ಕಂಪಿಸಿದವು. ನೂರಾರು ಗಿಡಮರಗಳು ಭೂಮಿಗೆ ಉರುಳಿದವು. ಧರ್ಮಶೀಲ ಮನುಷ್ಯರೂ ಭೂಮಿಯಲ್ಲಿ ಬಿದ್ದರು.

ಪದೇ ಪದೇ ನೂರಾರು ಸಿಡಿಲುಗಳು ಸಿಡಿದವು. ನದಿಗಳೆಲ್ಲವೂ ವಿರುದ್ಧ ದಿಕ್ಕಿಗೆ ಹರಿಯಲಾರಂಭಿಸಿದವು.

ಭಯಂಕರ ಚಂಡಮಾರುತ ಸುತ್ತಲೂ ಬೀಸಿದವು. ಪ್ರಭೆಯನ್ನು ಕಳೆದುಕೊಂಡು ಉಲ್ಕೆಗಳು ಆಗಸದಿಂದ ಭೂಮಿಗೆ ಬಿದ್ದವು. ಸಮಸ್ತ ಚರಾಚರ ಪ್ರಾಣಿಗಳು ರಥದ ಶಬ್ದದಿಂದ ಮೋಹಗೊಂಡರು.

ಜನಪದೇಶ್ವರನೇ! ಯುದ್ಧದ ತೀವ್ರತೆಯೆಂದರೆ ನೀರಿನಲ್ಲಿಯೂ ಬೆಂಕಿಹೊತ್ತಿ ಉರಿಯುತ್ತಿತ್ತು.

ಗ್ರಹಗಳು ಒಂದಕ್ಕೊಂದು ಪರಸ್ಪರ ಯುದ್ಧ ಮಾಡಿಕೊಂಡವು.

ಸ್ವರ್ಗದಿಂದ ಅನೇಕ ಬೆಳಕಿನ ಪುಂಜಗಳು ಭೂಮಿಗೆ ಬಿದ್ದವು. ದಿಗ್ಗಜಗಳು ಹಾಗೂ ಪಾತಾಳದಲ್ಲಿರುವ ಸರ್ಪಗಳು ಕೋಪಗೊಂಡವು.

**ಗರ್ದಭಾರುಣಸಂಸ್ಥಾನೈಃ ಛಿನ್ನಾಭ್ರೈಶ್ಚಾವೃತಂ ನಭಃ ।**
**ವಿನದದ್ಭಿಃ ಮಹಾರಾವೈಃ ಉಲ್ಕಾಶೋಣಿತವರ್ಷಿಭಿಃ ॥ 9 ॥**

ಗರ್ದಭದ ಬಣ್ಣದಂತೆ ಬೂದಿಬಣ್ಣದ ಮತ್ತು ಅರುಣವರ್ಣ ಮಿಶ್ರಿತವಾಗಿದ್ದ ಖಂಡಖಂಡಗಳಾದ ಮೇಘಗಳು ಗಗನದಲ್ಲಿ ಆವರಿಸಿದವು. ಆ ಮೇಘಗಳು ಭಯಂಕರವಾಗಿ ಗರ್ಜಿಸುತ್ತಿದ್ದು ಉಲ್ಕೆಗಳನ್ನು ಹಾಗೂ ರಕ್ತವನ್ನು ಸುರಿಸುತ್ತಿದ್ದವು.

ರಾಜನೇ! ದೇವಶ್ರೇಷ್ಠರಿಬ್ಬರೂ ಸಂಗ್ರಾಮ ನಿರತರಾಗಿದ್ದನ್ನು ನೋಡಿ ಭೂಮಿ ಅಂತರಿಕ್ಷ ಆಕಾಶಗಳಲ್ಲಿರುವ ಯಾವ ಪ್ರಾಣಿಗೂ ಸ್ವಾಸ್ಥ್ಯವಿದ್ದಂತೆ ತೋರಲಿಲ್ಲ. ಜಗತ್ತಿಗೆ ಹಿತೈಷಿಗಳಾದ ಋಷಿಮುನಿಗಳು ಜಗತ್ತಿನ ಹಿತ ಕೋರಿ *'ಸ್ವಸ್ತಿ ನೊ ಮಿಮೀತ'* ಮೊದಲಾದ ಮಂತ್ರಗಳನ್ನು ಜಪಿಸಲುಪಕ್ರಮಿಸಿದರು.

**ಜೇಪುಃ ಮುನಿಗಣಾಃ ಮುಂತ್ರಾನ್ ಜಗತೋ ಹಿತಕಾಮ್ಯಯಾ ।**

ಹಾಗೆಯೆ ಮಹಾತ್ಮರಾದ ಬ್ರಾಹ್ಮಣರೂ ಸಹ ಕೂಡಲೇ ಅವಸರದಿಂದ ಮಂತ್ರ ಜಪಾಸಕ್ತರಾದರು.

ಈ ಸಮಯದಲ್ಲಿ ಬ್ರಹ್ಮದೇವರು ಮಹಾತೇಜಸ್ವಿಯಾದ ಕಶ್ಯಪರಿಗೆ ಹೀಗೆ ಹೇಳಿದರು.

ಸುವ್ರತನೇ! ನೀನು ಈ ಕೂಡಲೇ ನನ್ನ ಸೊಸೆಯಾದ ಅದಿತಿಯೊಂದಿಗೆ ಹೋಗಿ ನಿಮ್ಮ ಪುತ್ರರಿಬ್ಬರಲ್ಲಿ ನಡೆಯುತ್ತಿರುವ ಯುದ್ಧವನ್ನು ನಿಲ್ಲಿಸು.

**ಗಚ್ಛ ವಧ್ವಾ ಸಹಾದಿತ್ಯಾ ಪುತ್ರೌ ವಾರಯ ಸುವ್ರತ ॥ 10 ॥**

ಬ್ರಹ್ಮದೇವನ ಮಾತನ್ನು ಅಂಗೀಕರಿಸಿ ತಥಾಸ್ತುಯೆಂದು ಕಶ್ಯಪನು ತನ್ನ ಪತ್ನಿ ಅದಿತಿಯೊಂದಿಗೆ ರಥದಲ್ಲಿ ಕುಳಿತು ಇಂದ್ರ-ಉಪೇಂದ್ರರ ಸಂಗ್ರಾಮ ಭೂಮಿಗೆ ಬಂದಿಳಿದನು.

ತಮ್ಮಿಬ್ಬರ ರಥಗಳ ಮಧ್ಯದಲ್ಲಿ ಕಶ್ಯಪ ಹಾಗೂ ತಾಯಿ ಅದಿತಿಯರ ರಥವು ನಿಂತಿರುವುದನ್ನು ನೋಡಿದ ಇಂದ್ರೋಪೇಂದ್ರರು ತಮ್ಮ ರಥಗಳಿಂದ ಕೆಳಗಿಳಿದು ಬಂದರು.

ಸ್ಥಿತಂ ತು ಕಶ್ಯಪಂ ದೃಷ್ಟ್ವಾ ಸಹಾದಿತ್ಯಾ ತದಂತರಾ ।
ಉಭೌ ರಥಾಭ್ಯಾಂ ಧರಣೀಮವತೀರ್ಣೌ ಮಹಾಬಲೌ ॥ 11 ॥

ಶತ್ರು ಭಯಂಕರರಾದ ಅವರಿಬ್ಬ ಸೋದರರೂ ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ತಂದೆತಾಯಿಗಳಿಗೆ ನಮಸ್ಕರಿಸಿದರು.

ನ್ಯಸ್ತಶಸ್ತ್ರೌ ಚ ತೌ ವೀರೌ ವವಂದತುರರಿಂದಮ್ ॥ 12 ॥

ಅದಿತಿಯಾದರೂ ತಮ್ಮ ಇಬ್ಬರೂ ಮಕ್ಕಳನ್ನೂ ತನ್ನ ಎರಡೂ ಕೈಗಳಿಂದಲೂ ಹಿಡಿದುಕೊಂಡು ಹೀಗೆಂದಳು.

"ನೀವಿಬ್ಬರೂ ತನ್ನ ಉದರದಲ್ಲಿ ಜನಿಸಿದ ಅಣ್ಣತಮ್ಮಂದಿರು. ಹೀಗಿದ್ದರೂ ಶತ್ರುಗಳಂತೆ ಪರಸ್ಪರ ಹೊಡೆದಾಡಲು ಏಕೆ ಪ್ರಯತ್ನಿಸುತ್ತಿರುವಿರಿ?"

ಅಸೋದರಾವಿವ್ಯೆವಂ ಕಿಮನ್ಯೋನ್ಯಂ ಹಂತುಮಿಚ್ಛತಃ ।

ನಿಮ್ಮ ಈ ಯುದ್ಧ ಅತ್ಯಲ್ಪ ಪ್ರಯೋಜನದ ಉದ್ದೇಶವಾಗಿಯೇ ಇದ್ದೀತು. ಆದರೆ ಯುದ್ಧ ಮಾತ್ರ ಅತೀ ದಾರುಣವಾಗಿದೆ. ನನ್ನ ಮಕ್ಕಳು ಹೀಗೆ ಅತ್ಯಲ್ಪ ಕಾರಣಕ್ಕಾಗಿ ಯುದ್ಧ ಹೂಡುವುದು ನಿಶ್ಚಿತವಾಗಿಯೂ ಯೋಗ್ಯ-ವಾಗಿರುವುದಿಲ್ಲ.

ಸ್ವಲ್ಪಮರ್ಥಂ ಪುರಸ್ಕೃತ್ಯ ಪ್ರವೃತ್ತಮತಿದಾರುಣಮ್ ।
ಸದೃಶಂ ನೇತಿ ಪಶ್ಯಾಮಿ ಸರ್ವಥಾ ಮಮ ಪುತ್ರಯೋಃ ॥ 13 ॥

ನೀವೇನಾದರೂ ಚತುರ್ಮುಖ ಬ್ರಹ್ಮದೇವರು, ತಂದೆಯಾದ ಕಶ್ಯಪರು ಹಾಗೂ ತಾಯಿಯಾದ ನನ್ನ ಮಾತನ್ನು ಅಂಗೀಕರಿಸುವುದಾದರೆ ಆಯುಧಗಳನ್ನು ಕೆಳಗಿಟ್ಟು ನಾನು ಹೇಳುವ ಮಾತುಗಳನ್ನು ಕೇಳಿರಿ.

ಶ್ರೋತವ್ಯಂ ಯದಿ ಮಾತುಶ್ಚ ಪಿತುಶ್ಚೈವ ಪ್ರಜಾಪತೇಃ ।
ನ್ಯಸ್ತ ಶಸ್ತ್ರೌ ಸ್ಥಿತೌ ಭೂತ್ವಾ ಕುರುತಂ ವಚನಂ ಮಮ ॥ 14 ॥

ಅದಿತಿಯ ಮಾತುಗಳನ್ನು ಕೇಳಿದ ಇಂದ್ರೋಪೇಂದ್ರರು ಅನ್ಯೋನ್ಯವಾಗಿ ಮಾತನಾಡಿಕೊಳ್ಳುತ್ತಾ ಸ್ನಾನ ಮಾಡುವ ಇಚ್ಛೆಯಿಂದ ಗಂಗೆಯ ಬಳಿ ಹೋದರು. ಇಂದ್ರನು ಹೇಳುವನು.

ಶ್ರೀಕೃಷ್ಣನೇ ನೀನು ಸಕಲ ಪ್ರಪಂಚಕ್ಕೂ ನಾಥನಾಗಿರುವಿ ಹಾಗೂ ಹದಿನಾಲ್ಕು ಲೋಕಗಳನ್ನು ಸೃಷ್ಟಿಸಿ ಪಾಲಿಸಿ ಸಂಹರಿಸುವ ಜಗಜ್ಜನ್ಮಾದಿಕಾರಣನಾಗಿರುವೆ.

ನನ್ನನ್ನು ಸ್ವರ್ಗಾಧಿಪತಿಯನ್ನಾಗಿ ಮಾಡಿರುವುದೂ ಸಹ ನೀನೇ ಅಲ್ಲವೇ? ಹೀಗಿದ್ದೂ ನೀನು ನನ್ನನ್ನು ಮುಖಭಂಗ ಮಾಡುವುದುಚಿತವೆ?

ನೀನು ನನ್ನ ತಮ್ಮನಲ್ಲವೆ? ತಮ್ಮನು ಅಣ್ಣನಾದ ನನ್ನನ್ನು ತಿರಸ್ಕರಿಸಿ, ನನ್ನ ಕೊಲ್ಲಲು ಪ್ರಯತ್ನ ಮಾಡುವುದು ಸರಿಯೇ?

**ಭ್ರಾತೃತ್ವ ಮುಪಗಮ್ಯೈವ ಜ್ಯೇಷ್ಠತ್ವಂ ಚಾಪಪೋಹ್ಯ ಚ ।**
**ಕಥಂ ಕಮಲಪತ್ರಾಕ್ಷ ನಿರ್ವಾಣಂ ಕರ್ತುಮರ್ಹಸಿ ॥ 15 ॥**

ಶ್ರೀಕೃಷ್ಣನು ನಿನಗಿರುವ ಅಸುರಾವೇಶ ತೊಲಗಿಸಲು ಹೀಗೆ ಮಾಡಿದೆ, ಎಂದು ಹೇಳುವುದನ್ನು ಬಿಟ್ಟು ಏನನ್ನೂ ಉತ್ತರಿಸದೇ ಇದ್ದನು.

ಮಹಾತ್ಮರೂ, ದೃಢವ್ರತರೂ ಆದ ಶ್ರೀಕೃಷ್ಣ–ಇಂದ್ರರು ಗಂಗಾಸ್ನಾನ ಮಾಡಿ ಅದಿತಿ, ಕಶ್ಯಪರಿದ್ದ ಸ್ಥಳಕ್ಕೆ ಹಿಂತಿರುಗಿದರು.

**ಪ್ರಿಯಸಂಗಮನಂ ನಾಮ ತಂ ದೇಶಂ ಮುನಯೋಽವದನ್ ।**

ಪುಂಡರೀಕಾಕ್ಷರಾದ ಉಪೇಂದ್ರೇಂದ್ರರು ಅದಿತಿ–ಕಶ್ಯಪರನ್ನು ಹೊಂದಿದ ಆ ಪವಿತ್ರ ಸ್ಥಳವನ್ನು ಮುನಿವರ್ಯರು 'ಪ್ರಿಯಸಂಗಮನ' ಎಂದು ಕರೆದರು.

## ಇಂದ್ರನಿಗೆ ಶ್ರೀಕೃಷ್ಣನ ಅಭಯವಾಕ್

ಶ್ರೀಕೃಷ್ಣನು ಇಂದ್ರನು ಹೇಳದ ಮಾತಿಗೆ ನಿನಗೆ ಯವುದೇ ಭಯಬೇಡ ಎಂದು ವಾಚಾ ಅಭಯವನ್ನಿತ್ತನು.

**ತತಃ ಶಕ್ರಸ್ಯ ಕೌರವ್ಯ ದತ್ವಾ ವಾಚಾಭಯಂ ತದಾ ॥ 16 ॥**

ನಂತರ ಮಹಾತೇಜಸ್ಕರೂ ಮಹಾಧರ್ಮಚಾರಿಗಳೂ ಆದ ದೇವತೆಗಳೆಲ್ಲರೂ ತಮ್ಮ ವಿಮಾನದಿಂದ ಸ್ವರ್ಗಸ್ಥಾನವನ್ನು ಸೇರಿದರು.

ಕಶ್ಯಪ ಹಾಗೂ ಅದಿತಿಯರು ಹಾಗೂ ಇಂದ್ರೋಪೇಂದ್ರರೂ ಒಂದೇ ವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ ತೆರಳಿದರು.

**ಕಶ್ಯಪಾಶ್ಚಾದಿತಿಶ್ಚೈವ ತಥಾ ಶಕ್ರಜನಾರ್ದನೌ ।**
**ವಿಮಾನಮೇಕಮಾರುಹ್ಯ ಗತಾ ರಾಜನ್ ತ್ರಿವಿಷ್ಟಪಮ್ ॥ 17 ॥**

ಸ್ವರ್ಗಲೋಕವಾದರೂ ರಮ್ಯವೂ ಸರ್ವಸಂಪತ್ ಸಮೃದ್ಧವೂ ಆಗಿತ್ತು. ಇಂತಹ ಇಂದ್ರಭವನದಲ್ಲಿ ಧರ್ಮಚಾರಿಗಳಾದ ಕಶ್ಯಪಾದಿಗಳು ಆನಂದದಿಂದ ಒಂದೆಡೆ ವಾಸಿಸಿದರು.

**ತೇ ಶಕ್ರ ಸದನಂ ಪ್ರಾಪ್ತಾಃರಮ್ಯಂ ಸರ್ವಗುಣಾನ್ವಿತಂ ।**
**ಊಷುರೇಕತ್ರ ಕೌರವ್ಯ ಮುದಿತಾ ಧರ್ಮಚಾರಿಣಃ ॥ 18 ॥**

ಧರ್ಮವತ್ಸಲೆಯಾದ ಇಂದ್ರಾಣಿದೇವಿಯು ಸಮಸ್ತ ಪ್ರಾಣಿಗಳಿಗೂ ಹಿತಬಯಸುವ ಕಶ್ಯಪರನ್ನು ಹಾಗೂ ಅದಿತಿಯನ್ನೂ ಯಥಾವತ್ತಾಗಿ ಉಪಾಸಿಸಿದರು.

**ತತೋ ತು ಕಶ್ಯಪಂ ಪತ್ನ್ಯಾ ಸಹಿತಂ ಧರ್ಮವತ್ಸಲಾ ।**
**ಉಪಾಚರತ್ ಮಹಾತ್ಮಾನಂ ಸರ್ವಭೂತಹೀತೇ ರತಮ್ ॥ 19 ॥**

ರಾತ್ರಿಯು ಗತಿಸಿ ಪ್ರಾತಃಕಾಲವಾದಾಗ ಧರ್ಮದ ಮರ್ಮಗಳನ್ನು ಬಲ್ಲ ಅದಿತಿಯು ಸರ್ವಪ್ರಾಣಿಗಳಿಗೂ ಹಿತವಾದ ಮಾತನ್ನು ಶ್ರೀಕೃಷ್ಣನಿಗೆ ಹೇಳಿದಳು.

**ಉಪೇಂದ್ರ ದ್ವಾರಕಾಂ ಗಚ್ಛ ಪಾರಿಜಾತಂ ನಯಸ್ವ ಚ ।**
**ವಧ್ವಾ ಸಂಪ್ರಾಪಯಸ್ವೇಶ ಪುಣ್ಯಕಂ ಹೃದಯೇ ಸ್ಥಿತಂ ॥ 20 ॥**
**ಪುಣ್ಯಕೇ ಸತ್ಯಯಾ ಪ್ರಾಪ್ತೇ ಪುನರೇಷು ತ್ವಯಾ ತರುಃ ।**
**ನಂದನೇ ಪುರುಷಶ್ರೇಷ್ಠ ಸ್ಥಾಪ್ಯಃ ಸ್ಥಾನೇ ಯಥೋಚಿತೇ ॥ 21 ॥**

ಅದಿತಿಯು ಕೃಷ್ಣನನ್ನು ಕುರಿತು – ಉಪೇಂದ್ರನೇ! ನೀನು ಈ ಪಾರಿಜಾತ ತರುವನ್ನು ದ್ವಾರಕೆಗೆ ತೆಗೆದುಕೊಂಡು ಹೋಗು. ನನ್ನ ಸೊಸೆಯಾದ ಸತ್ಯಭಾಮೆಯ ಮನಸ್ಸಿನಲ್ಲಿ ಬಹುಕಾಲದಿಂದಲೂ ಮಾಡಬೇಕೆಂದಿರುವ ಇಚ್ಛೆಯು ಇದರಿಂದ ಪೂರ್ಣವಾಗಲಿ. ಪುರುಷಶ್ರೇಷ್ಠ ಶ್ರೀಕೃಷ್ಣನೇ ಸತ್ಯಭಾಮೆಯು ತನ್ನ ಪುಣ್ಯಕವ್ರತವನ್ನು ಮುಗಿಸಿದ ನಂತರ ಪುನಃ ಈ ಪಾರಿಜಾತವನ್ನು ಇಲ್ಲಿಯೇ ನಂದನವನದಲ್ಲಿ ಪ್ರತಿಷ್ಠಾಪಿಸು ಎಂದು ಹೇಳಿದಾಗ ಶ್ರೀಕೃಷ್ಣನು ಹಾಗೇ ಆಗಲಿ ಎಂದನು.

**ತತೋಽಭಿವಾದ್ಯ ಪಿತರಂ ಮಾತರಂ ಚ ಜನಾರ್ದನಃ ।**
**ಮಹೇಂದ್ರಂ ಸಹ ಶಚ್ಯಾ ಚ ಪ್ರತಸ್ಥೇ ದ್ವಾರಕಾಂ ಪ್ರತಿ ॥ 22 ॥**

ನಂತರ ತಂದೆ–ತಾಯಿಗಳಾದ ಅದಿತಿ–ಕಶ್ಯಪರಿಗೂ ಇಂದ್ರೇಂದ್ರಾಣಿಗಳಿಗೂ ಅಭಿವಾದನ ಮಾಡಿ ದ್ವಾರಕೆಗೆ ಪ್ರಯಾಣ ಬೆಳೆಸಿದನು.

## ಶಚಿಯ ಉಡುಗೊರೆ

ನಂತರ ಶಚಿಯು ಶ್ರೀಕೃಷ್ಣನ ಎಲ್ಲ ಪತ್ನಿಯರಿಗೂ ಬಹುಮಾನಗಳನ್ನು ತನ್ನ ಕಾಣಿಕೆಯಾಗಿ ನೀಡಿದಳು. ಅಷ್ಟಮಹಿಷಿಯರಿಗೆ ಮಾತ್ರವಲ್ಲದೆ ಹದಿನಾರು ಸಾವಿರದ ನೂರು ಪತ್ನಿಯರಿಗೂ ದಿವ್ಯವಾದ ರತ್ನಗಳನ್ನೂ ವಿಚಿತ್ರಾನೇಕ ವರ್ಣರಂಜಿತವೂ ಎಂದೂ ಮಲಿನವೇ ಆಗದ ದಿವ್ಯ ವಸ್ತ್ರಗಳನ್ನು ತನ್ನ ಕೊಡುಗೆಯಾಗಿ ನೀಡಿದಳು.

**ದದೌ ಕೃಷ್ಣಾಯ ಪೌಲೋಮೀ ನಿಯೋಗಾನ್ ಕುರುನಂದನ ।**
**ಸರ್ವಾಸಾಮೇವ ಭಾರ್ಯಾಣಾಂ ಕೃಷ್ಣಸ್ಯ ಧರ್ಮಚಾರಿಣೀ ॥ 23 ॥**
**ನಾನಾರಾಗ ವಿರಕ್ತಾನಾಂ ಸದೈವಾರಜಸಾಮಪಿ ।**
**ಭಾರ್ಯಾಣಾಂ ಚ ಯಾನಿ ಷೋಡಶ ಸಹಸ್ರಾಣಿ ಮಾಧವೇ ॥ 24 ॥**

ಶ್ರೀಕೃಷ್ಣನು ಶಚಿಯು ನೀಡಿದ ಪಾರಿತೋಷಕಗಳನ್ನು ಸ್ವೀಕರಿಸಿ ದ್ವಾರಕೆಗೆ ಬಂದನು. ಮಾರ್ಗಮಧ್ಯದಲ್ಲಿ ಗಗನಚಾರಿಯಕ್ಷಾದಿಗಳಿಂದ ಪೂಜಿಸಲ್ಪಡುತ್ತಾ ಪ್ರದ್ಯುಮ್ನ ಸಾತ್ಯಕಿಯಿಂದೊಡಗೂಡಿ ರೈವತಕ[2] ಪರ್ವತಕ್ಕೆ ಬಂದನು. ರೈವತಕ ಗಿರಿಯಲ್ಲಿಯೆ ಪಾರಿಜಾತ ವೃಕ್ಷವನ್ನು ಸ್ಥಾಪಿಸಿ ದ್ವಾರಕೆಗೆ ಸಾತ್ಯಕಿಯನ್ನು ಕಳುಹಿಸಿಕೊಟ್ಟನು.

**ಸಸಾತ್ಯಕಿಃ ಸಪುತ್ರಶ್ಚ ಪ್ರಾಪ್ತೋ ರೈವತಕಂ ಗಿರಿಮ್ ।**
**ಸತತ್ರ ಸ್ಥಾಪಯಿತ್ವಾ ಚ ಪಾರಿಜಾತಂ ವರದ್ರುಮಮ್ ॥ 25 ॥**
**ಸಾತ್ಯಕೀಂ ಪ್ರೇಷಯಾಮಾಸ ದ್ವಾರಕಾಂ ದ್ವಾರಶಾಲಿನೀಂ ॥ 26 ॥**

---

2. **ರೈವತಕ :** ಗುಜರಾತಿನಲ್ಲಿರುವ ಜುನಾಗರ್ ಎಂಬ ನಗರದ ಹತ್ತಿರವಿದ್ದು, 'ಗಿರ್‌ನಾರ್' ಎಂದು ಹೆಸರನ್ನು ಹೊಂದಿದೆ. ಇನ್ನೊಂದು ದ್ವಾರಕೆಯ ಬಳಿಯಿದೆ. ಅರ್ಜುನನು ಸುಭದ್ರೆಯನ್ನು ವಿವಾಹ ಮಾಡಿಕೊಳ್ಳಲೆಂದು ತ್ರಿದಂಡಿ ಸನ್ಯಾಸಿ ವೇಷಧರಿಸಿ ಇಲ್ಲಿಯೆ ಇದ್ದ. ಬಲರಾಮ ಮುಂದೆ ಅರಮನೆಗೆ ಕರೆದೊಯ್ದ.
ಈ ಮಧ್ಯದಲ್ಲಿ ಇಂದ್ರದೇವನೂ ಸಹ ಶ್ರೀಕೃಷ್ಣನಲ್ಲಿ ಕ್ಷಮೆ ಕೋರಿ ಮಣಿ ಪರ್ವತ ಶಿಖರವನ್ನು ಕಾಣಿಕೆಯನ್ನಾಗಿ ನೀಡಿ, ಸತ್ಯಭಾಮ-ಶ್ರೀಕೃಷ್ಣರನ್ನು ವಂದಿಸಿದನು.
**ಶೃಂಗಂಚದತ್ವಾ ಮಣಿಪರ್ವತಸ್ಯ ಪ್ರಣಮ್ಯ ದೇವ್ಯಾಸಹಿತಂ ಜಗದ್ಗುರುಮ್ ॥**
–ತಾ.ನಿ. *20/133*
ಇಂದ್ರನು ತನ್ನ ಪುತ್ರ ಅರ್ಜುನನನ್ನು ರಕ್ಷಿಸಬೇಕೆಂದು ವರ ಕೇಳಿಕೊಂಡಾಗ ನಾನು ಭೂಮಿಯಲ್ಲಿರುವವರೆಗೂ ಅರ್ಜುನನನ್ನು ಯಾರು ಸೋಲಿಸಲಾರರು.
**ಧರಾತಲೇ ಸ್ಥಿತೇ ನ ಮಯ್ಯಮುಂ ಕಶ್ಚನ ಜೇಷ್ಯತೀತಿ ।**

ಶ್ರೀಕೃಷ್ಣ ಉವಾಚ -

**ಪಾರಿಜಾತಮಿಹಾನೀತಂ ಮಹೇಂದ್ರ ಸದನಾತ್ ಮಯಾ ।**
**ನಿವೇದಯ ಮಹಾಬಾಹೋ ಭೈಮಾನಾಂ ಭೈಮವರ್ಧನ ॥ 27 ॥**
**ಪ್ರವೇಶಯಿಷ್ಯೇ ನಗರೇ ಶೋಭಾ ಪ್ರಕ್ರಿಯತಾಂ ಶುಭಾ ॥ 28 ॥**

ಸಾತ್ಯಕಿಯೇ! ನೀನೀಗಲೇ ದ್ವಾರಕೆಗೆ ಹೋಗು. ಇಂದ್ರದೇವನ ಭವನದಿಂದ ಪಾರಿಜಾತ ತರುವನ್ನು ತಂದಿರುವ ವಿಷಯವನ್ನು ಯಾದವರಿಗೆಲ್ಲ ತಿಳಿಸಿ, ಅದನ್ನು ನಾನು ದ್ವಾರಕೆಗೆ ತರುತ್ತೇನೆ. ಅದಕ್ಕಾಗಿ ದ್ವಾರಕೆಯು ಅಲಂಕೃತವಾಗಲಿ ಎಂದು ಹೇಳು ಎಂದಾಗ ಸಾತ್ಯಕಿಯು ದ್ವಾರಕೆಗೆ ಪ್ರವೇಶಿಸಿ ಹಾಗೆಯೆ ಹೇಳಿ, ಸಾಂಬನೆ ಮೊದಲಾದವರಿಂದ ಕೂಡಿ ಶ್ರೀಕೃಷ್ಣನಿರುವ ತಾಣಕ್ಕೆ ಹಿಂತಿರುಗಿದನು.

ನಂತರ ಪ್ರದ್ಯುಮ್ನನು ಪಾರಿಜಾತ ವೃಕ್ಷವನ್ನು ಗರುಡನ ಮೇಲಿರಿಸಿಕೊಂಡು ವೈಭವದಿಂದ ದ್ವಾರಕೆಗೆ ಪ್ರವೇಶಿಸಿದನು. ಶ್ರೀಕೃಷ್ಣನು ಸಹ ತನ್ನ ಶೈಬ್ಯಾದಿ ಅಶ್ವಗಳಿಂದ ಯೋಜಿತವಾಗಿದ್ದ ರಥವನ್ನೇರಿಕೊಂಡು ಅವನನ್ನು ಅನುಸರಿಸಿದನು. ಅವನ ರಥದಲ್ಲಿ ಸಾಂಬ, ಸಾತ್ಯಕಿಯರೂ ಕುಳಿತರು. ಇತರರು ತಮ್ಮ ವಾಹನಗಳಲ್ಲಿ ಕುಳಿತು ಶ್ರೀಕೃಷ್ಣನ ಪಾರಿಜಾತಾಪಹರಣ ಮಹಿಮೆಯನ್ನು ಕೊಂಡಾಡುತ್ತಾ ಹಿಂಬಾಲಿಸಿದರು.

ಶ್ರೀಕೃಷ್ಣನು ತಂದ ದಿವ್ಯ ಕುಸುಮಗಳಿಂದ ಯುಕ್ತವಾದ ಪಾರಿಜಾತ ವೃಕ್ಷವನ್ನು ನೋಡಿ ದ್ವಾರಕಾವಾಸಿಗಳಿಗೆ ಎಷ್ಟು ನೋಡಿದರೂ ತೃಪ್ತಿ ಹೊಂದಲಾಗಲಿಲ್ಲ.

**ತಂ ದಿವ್ಯಕುಸುಮಂ ವೃಕ್ಷಂ ದೃಷ್ಟ್ವಾಽನರ್ತಪುರವಾಸಿನಃ ।**
**ರಾಜನ್ ನ ತತೃಪುಃ ಹೃಷ್ಟಾಃ ಪಶ್ಯಮಾನಾ ಮಹೋದಯಂ ॥ 29 ॥**

ಪರಮಾದ್ಭುತವೂ ಅಚಿಂತ್ಯವೂ, ಮದಗೊಂಡ ನಾನಾ ವಿಧ ಪಕ್ಷಿಗಳಿಗೆ ಆಶ್ರಯವೂ ಆದ ಪಾರಿಜಾತ ವೃಕ್ಷವನ್ನು ನೋಡುತ್ತಿದ್ದಂತೆ ವಯೋವೃದ್ಧರಾಗಿದ್ದ ಜರಾಜರ್ಝರಿತವಾದ ದೇಹವುಳ್ಳ ವೃದ್ಧರು ತಮ್ಮ ಮುಪ್ಪನ್ನು ಕಳೆದುಕೊಂಡು ನವತಾರುಣ್ಯ ಹೊಂದಿದರು.

**ವೃಕ್ಷೋತ್ತಮಂ ಪಶ್ಯತಾಂ ವೈ ವೃದ್ಧಾನಾಮಗದ್ ಜರಾ ।**

ಹಾಗೆಯೇ ಆ ಸ್ವರ್ಗೀಯ ವೃಕ್ಷದ ಗಂಧವನ್ನು ಆಘ್ರಾಣಿಸಿದ ಕೂಡಲೇ

ಅಂಧರೆಲ್ಲರೂ ದಿವ್ಯ ದೃಷ್ಟಿಗಳನ್ನು ಹೊಂದಿದರು. ರೋಗಿಗಳೆಲ್ಲರೂ ನಿರೋಗಿಗಳಾದರು.

**ಯೇ ತ್ವಂಧ ಚಕ್ಷುಷಃ ಸರ್ವೇ ತೇಽಭವನ್ ದಿವ್ಯಚಕ್ಷುಷಃ ।**
**ವಿರೋಗಾ ರೋಗಿಣಶ್ಚಾಸನ್ ಘ್ರಾತ್ವಾ ಗಂಧಂ ವನಸ್ಪತೇಃ ॥ 30 ॥**

ಪಾರಿಜಾತವೃಕ್ಷವನ್ನಾಶ್ರಯಿಸಿದ್ದ ಬಿಳಿ ಕೋಗಿಲೆಗಳ ಇಂಪಾದ ಪಂಚಮ ಸ್ವರವನ್ನು ಕೇಳಿದ ದ್ವಾರಕಾ ವಾಸಿಗಳು ಪ್ರಸನ್ನಚಿತ್ತರಾಗಿ ಶ್ರೀಕೃಷ್ಣನನ್ನು ಅಭಿನಂದಿಸಿದರು.

ಆ ವೃಕ್ಷದ ಸಮೀಪ ನಿಂತವರಿಗೆ ನಾನಾ ವಿಧ ಮಂಗಳ ವಾದ್ಯ ತೂರ್ಯಗಳ ಧ್ವನಿ ಕೇಳಿಬರುತ್ತಿತ್ತು.

**ಸುಶ್ರುವುಃ ತಸ್ಯ ವೃಕ್ಷಸ್ಯ ನಾತಿದೂರಂ ಗತಾಃ ನರಾಃ ।**

ಪಾರಿಜಾತದ ಬಳಿ ನಿಂತು ಯಾವ ಮರ್ತ್ಯನು ಮಲ್ಲಿಗೆ, ಸಂಪಿಗೆ, ಕೇದಿಗೆ ಮೊದಲಾದ ಸುಗಂಧವನ್ನು ಬಯಸುವನೋ ಆ ಸುಗಂಧವು ಕೂಡಲೇ ಪಾರಿಜಾತದಿಂದ ಹೊರಸೂಸಿ ಮೂಗಿಗೆ ಬಡಿಯುತ್ತಿತ್ತು.

**ಯೋಽಯಂ ಸಂಕಲ್ಪಯಾಮಾಸ ಗಂಧಂ ಹೃದ್ಯಂ ನರಸ್ತಥಾ ।**
**ಸತದೈವ ತಮಾಜಘ್ರೇ ಪಾರಿಜಾತ ಸಮುದ್ಭವಮ್ ॥ 31 ॥**

ನಂತರ ಶ್ರೀಕೃಷ್ಣನು ರಮ್ಯವಾದ ದ್ವಾರಕೆಯನ್ನು ಪ್ರವೇಶಿಸಿ ತನ್ನ ತಂದೆತಾಯಿಯರಾದ ವಸುದೇವ-ದೇವಕಿಯರನ್ನು ಸಂದರ್ಶಿಸಿದನು.

ಹಾಗೆಯೇ ಕುಕುರ ದೇಶಾಧಿಪತಿಯಾದ ಉಗ್ರಸೇನನನ್ನು ಅಣ್ಣ ಬಲರಾಮನನ್ನು ಹಾಗೂ ವಯೋವೃದ್ಧರಾದ ಯದುನಾಯಕರನ್ನೂ ಸಂದರ್ಶಿಸಿ ಅವರೆಲ್ಲರನ್ನು ಗೌರವಿಸಿ ಅವರನ್ನು ಕಳುಹಿಸಿಕೊಟ್ಟು ಸತ್ಯಭಾಮೆಯೊಂದಿಗೆ ತನ್ನ ಅರಮನೆಗೆ ಪ್ರವೇಶಿಸಿದನು.

ಗದಾಗ್ರಜನಾದ ಶ್ರೀಕೃಷ್ಣನು ಪಾರಿಜಾತ ವೃಕ್ಷವನ್ನೂ ಸತ್ಯಭಾಮೆಗೆ ನೀಡಿದನು.

ಸತ್ಯಭಾಮೆಯು ಉಪೇಂದ್ರನನ್ನು ಅಭಿನಂದಿಸಿದಳು.

**ಮನೀಷಿತೇನ ಸ ತರುರಲ್ಪೋ ಭವತಿ ಭಾರತ ।**
**ಮಹಾಂಶ್ಚ ವಾಸುದೇವಸ್ಯ ತದದ್ಭುತಮಭೂನ್ ಮಹತ್ ॥ 32 ॥**

ಪಾರಿಜಾತ ವೃಕ್ಷವು ಶ್ರೀಕೃಷ್ಣನ ಇಚ್ಛೆಯಂತೆ ಕೆಲವು ವೇಳೆ ಚಿಕ್ಕದಾಗುತ್ತಿತ್ತು. ಕೆಲವೊಮ್ಮೆ ದೊಡ್ಡದಾಗಿಯೂ ಆಗುತ್ತಿತ್ತು. ಇದೊಂದು ಪರಮಾದ್ಭುತವಾಗಿತ್ತು.

ಪಾರಿಜಾತವೃಕ್ಷವು ಕೃಷ್ಣೇಚ್ಛೆಯಂತೆ ಮಹಾವೃಕ್ಷವಾಗಿ ಬೆಳೆದು ದ್ವಾರಕೆಯನ್ನೇ ಆವರಿಸಿ ಬಿಡುತ್ತಿತ್ತು. ಕೆಲವೊಮ್ಮೆ ಆ ಮಹಾವೃಕ್ಷವು ಅಂಗೈಯಲ್ಲಿ ಇಟ್ಟುಕೊಳ್ಳುವಷ್ಟು ಪರಿಮಾಣವಾಗುತ್ತಿತ್ತು.

**ಕದಾಚಿದ್ ದ್ವಾರಕಾಂ ಸರ್ವಾಂ ಪ್ರಚ್ಛಾದಯತಿ ಭಾರತ ।**
**ಕದಾಚಿದ್ ಹಸ್ತಧಾರ್ಯಸ್ತು ಭವತಿ ಅಂಗುಷ್ಠ ಸನ್ನಿಭಃ ॥ 33 ॥**

ಇಂತಹ ಮಹಾದ್ಭುತವಾದ ಪಾರಿಜಾತವನ್ನು ಹೊಂದಿದ ಸತ್ಯಭಾಮೆಯು ಮಹಾನಂದ ಹೊಂದಿದಳು.

## ಪುಣ್ಯಕವ್ರತಾರಂಭ

**ಪುಣ್ಯಕಾರ್ಥಂ ತು ಸಂಭಾರಾನ್ ಸಂಭರ್ತು ಮುಪಚಕ್ರಮೇ ॥ 34 ॥**

ಪಾರಿಜಾತ ಪಡೆದ ನಂತರ ಪುಣ್ಯಕವ್ರತವನ್ನು ಮಾಡಲು ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸಿಸಲಾರಂಭಿಸಿದಳು.

ಶ್ರೀಕೃಷ್ಣನೂ ಸಹ ಪುಣ್ಯಕವ್ರತವನ್ನಾಚರಿಸಲು ಯಾವಯಾವ ಉತ್ತಮ ವಸ್ತುಗಳು ಜಂಬೂದ್ವೀಪದ ಯಾವ ಪ್ರದೇಶದಲ್ಲಿ ಲಭ್ಯವಾಗುತ್ತಿದ್ದವೋ ಆ ವಸ್ತುಗಳನ್ನೆಲ್ಲ ಆಯಾಯ ಭಾಗಗಳಿಂದ ಶ್ರೀಕೃಷ್ಣನು ಸತ್ಯಭಾಮೆಗೆ ತರಿಸಿಕೊಟ್ಟನು.

**ಮುನಿಂ ತದಾ ಸಂಸ್ಮೃತವಾನ್ ಸ ನಾರದಂ ಜನಾರ್ದನಃ ।**
**ಪ್ರತಿಗ್ರಹಾರ್ಥಂ ವ್ರತಕಸ್ಯ ಸತ್ಯಯಾ ಯಥೋಪದಿಷ್ಟಸ್ಯ ಪುರಂದರಾನುಜಃ ॥ 35 ॥**

ಶ್ರೀಕೃಷ್ಣನು ಇಂದ್ರದೇವನ ತಮ್ಮನಾದ ಶ್ರೀಕೃಷ್ಣನು ಸತ್ಯಭಾಮೆಯ ಇಷ್ಟದಂತೆ ಪುಣ್ಯಕವ್ರತದಲ್ಲಿ ನೀಡಬೇಕಾದ ದಾನವನ್ನು ಪ್ರತಿಗ್ರಹಿಸಲು ನಾರದರನ್ನು ಸ್ಮರಿಸಿದನು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಪಾರಿಜಾತ ಆನಯನವೆಂಬಲ್ಲಿ
ಎಪ್ಪತ್ತೈದನೆಯ ಅಧ್ಯಾಯ ಸಮಾಪ್ತಿ

# ಅಥ ಷಟ್‌ಸಪ್ತತಿತಮೋಽಧ್ಯಾಯಃ

*ವೈಶಂಪಾಯನ ಉವಾಚ–*

**ಅಥ ಕೃಷ್ಣಸ್ಯ ಕೌರವ್ಯ ಧ್ಯಾತಮಾತ್ರಃ ತಪೋಧನಃ ।**
**ಆಜಗಾಮ ಮುನಿಶ್ರೇಷ್ಠೋ ನಾರದೋ ವದತಾಂ ವರಃ ॥ 1 ॥**

**ಸಂಪೂಜಯಿತ್ವಾ ವಿಧಿವದ್ ವಾಸುದೇವೋ ವಿಶಾಂಪತೇ ।**
**ಪ್ರತಿಗ್ರಹಾರ್ಥಂ ವಿಧಿವಚ್ಛ್ರೀಮಾನ್ ಭಕ್ತ್ಯಾ ನ್ಯಮಂತ್ರಯತ್ ॥ 2 ॥**

ವೈಶಂಪಾಯನರು ರಾಜನ್! ಪುಣ್ಯಕವ್ರತದಲ್ಲಿ ಪತಿಯನ್ನು ದಾನ ಮಾಡಬೇಕು. ದಾನಕ್ಕೆ ಯೋಗ್ಯ ಬ್ರಾಹ್ಮಣನು ಅವಶ್ಯಕ. ಅದಕ್ಕಾಗಿ ಶ್ರೀಕೃಷ್ಣನು ನಾರದರನ್ನೇ ಸ್ಮರಿಸಿದಾಗ ಸ್ಮರಿಸುತ್ತಲೇ ಮುನಿಶ್ರೇಷ್ಠರಾದ ನಾರದಮುನಿಗಳು ಆಗಮಿಸಿದರು.

**ತತಃ ಕಾಲೇ ಚ ಸಂಪ್ರಾಪ್ತೇ ಸ್ನಾತಂ ದೇವೋ ಮಹಾಮುನಿಮ್ ।**
**ಸಂಪೂಜ್ಯ ಮಾಲ್ಯೈಃ ಗಂಧೈಶ್ಚ ಭೋಜಯಾಮಾಸ ಭಾರತ ॥ 3 ॥**

**ಸಾರ್ವಕಾಮಿಕಮನ್ನಾದ್ಯಂ ಸರ್ವಭೂತಕೃದನ್ವಯಃ ।**
**ಸತ್ಯಯಾ ಪ್ರಿಯಯಾ ಸಾರ್ಧಂ ಪ್ರಹೃಷ್ಟೇನಾಂತರಾತ್ಮನಾ ॥ 4 ॥**

**ಪುಷ್ಪದಾಮಾವಸಜ್ಯಾಥ ಕಂಠೇ ಕೃಷ್ಣಸ್ಯ ಭಾಮಿನೀ ।**
**ಬಬಂಧ ಕೃಷ್ಣಂ ಸುಭಗಾ ಪಾರಿಜಾತೇ ವನಸ್ಪತೌ ॥ 5 ॥**

ಹೀಗೆ ಆಗಮಿಸಿದ ನಾರದರನ್ನೂ ಯಥಾವಿಧಿ ಪೂಜಿಸಿ ಸತ್ಕರಿಸಿದನು.

ಮೃಷ್ಟಾನ್ನ ಭೋಜನ ನೀಡಿದನು. ಸರ್ವಪ್ರಾಣಿ ಸೃಷ್ಟಿಕರ್ತನೂ ಸರ್ವವ್ಯಾಪಿಯೂ ಆದ ಶ್ರೀಕೃಷ್ಣನು ತನ್ನ ಪ್ರಿಯಭಾಮೆ ಸತ್ಯಭಾಮೆಯೊಂದಿಗೆ ಪ್ರಸನ್ನಚಿತ್ತನಾಗಿ ಸಕಲವಿಧ ಕಾಮನಾ ಭಕ್ಷ್ಯಗಳಿಂದಲೂ ಕೂಡಿದ್ದ ಭೋಜನ ನಾರದರಿಗೆ ಮಾಡಿಸಿದನು.

ಹೀಗೆ ನಾರದರಿಗೆ ದಿವಾನ್ನ ಭೋಜನ ನೀಡಿ, ಅಮೂಲ್ಯ ವಸ್ತುಗಳನ್ನು ದಾನ ಮಾಡಿದ ಮೇಲೆ ಸೌಭಾಗ್ಯಶಾಲಿನಿಯೂ, ಕೋಪಿನಿಯೂ ಆದ ಸತ್ಯಾದೇವಿಯು ಶ್ರೀಕೃಷ್ಣನ ಕೊರಳಿಗೆ ಪುಷ್ಪಮಾಲಿಕೆಯನ್ನು ಹಾಕಿ ಅವನನ್ನು ಪುಷ್ಪಮಾಲಿಕೆಯಿಂದ ಪಾರಿಜಾತವೃಕ್ಷಕ್ಕೆ ಕಟ್ಟಿ ಹಾಕಿದಳು.

ನಂತರ ಸತ್ಯೆಯು ಶ್ರೀಕೃಷ್ಣನ ಅನುಜ್ಞೆ ಪಡೆದು ಅವನನ್ನು ನಾರದರಿಗೆ ಜಲಧಾರಾ ಪೂರ್ವಕ ದಾನ ಮಾಡಿದಳು.

ಬಬಂಧ ಕೃಷ್ಣಂ ಸುಭಗಾ ಪಾರಿಜಾತೇ ವನಸ್ಪತೌ ।
ಅದ್ಭಿಃ ದದೌ ನಾರದಾಯ ತತೋಽನುಜ್ಞಾಪ್ಯ ಕೇಶವಮ್ ॥ 6 ॥
ದೇವೀ ಧೇನುಸಹಸ್ರಂ ಚ ಕಾಂಚನಸ್ಯ ಚ ಪರ್ವತಮ್ ।
ಹಿರಣ್ಯ ರೂಪ್ಯಮಿಶ್ರಂ ಚ ಮಣಿರತ್ನ ಪ್ರಭಸ್ಯ ಚ ॥ 7 ॥
ಭೋಃ ಕೇಶವ ಮದೀಯಸ್ತ್ವಂ ಅದ್ಭಿರ್ದತ್ತೋಽಸಿ ಸತ್ಯಯಾ ।
ಸ ತ್ವಂ ಮಾಮನುಗಚ್ಛಸ್ವ ಕುರು ಯದ್ಯದ್ ಬ್ರವೀಮ್ಯಹಮ್ ॥ 8 ॥

ಸತ್ಯೆಯು ಸಾವಿರ ಗೋವುಗಳನ್ನೂ, ಬಂಗಾರ, ಬೆಳ್ಳಿಯ ಪಾತ್ರೆಗಳನ್ನು, ಮಣಿ ಪ್ರಭೆವುಳ್ಳ ಸುವರ್ಣ ಮುತ್ತುಗಳನ್ನೂ ತಿಲ, ಯವ, ಗೋಧೂಮಗಳನ್ನು ದಾನ ಮಾಡಿದಳು.

ಈ ಭೋಜನ ಅಮೂಲ್ಯ ವಸ್ತುಗಳ ದಾನ ವಿಶೇಷವಾಗಿ ಶ್ರೀಕೃಷ್ಣನ ದಾನದಿಂದ ಪರಮಹೃಷ್ಟರಾದರು. ಶ್ರೀಕೃಷ್ಣನನ್ನು ಕುರಿತು ಹೀಗೆಂದನು.

ಕೇಶವನೇ ! ನೀನೀಗ ನನ್ನ ಅಧೀನವಾಗಿರುವಿ. ಸತ್ಯೆಯು ನಿನ್ನನ್ನು ನನಗೆ ಜಲಧಾರ ಪೂರ್ವಕವಾಗಿ ದಾನ ಮಾಡಿರುವಳಷ್ಟೇ! ಇನ್ನೂ ನೀನು ನನ್ನ ಹಿಂದೆಯೇ ಬರಬೇಕು. ನಾನು ಹೇಳಿದಂತೆಯೇ ಮಾಡಬೇಕು.

ಶ್ರೀಕೃಷ್ಣನಾದರೂ ನಾನು ನೀವು ಹೇಳಿದಂತೆಯೇ ತಪ್ಪದೆ ಮಾಡುವೆ.

**ಪ್ರಥಮಃ ಪಕ್ಷ ಇತ್ಯೇವ ಮಬ್ರವೀನ್ ಮಧುಸೂದನಃ ।**

ನಾರದರು ಹೊರಟರೆ ಅವರ ಹಿಂದೆಯೇ ಅನುಸರಿಸಿ ಹೋದ *[ವ್ರಜಂತಂ ಅನುವವ್ರಾಜ]* ಪರಿಹಾಸ ಚತುರನಾದ ನಾರದನು ಭಕ್ತವಶನಾದ ಪುರುಷೋತ್ತಮನನ್ನು ಕುಳಿತುಕೋ 'ಏದ್ದು ನಿಲ್ಲು', 'ನನ್ನ ಹಿಂದೆ ಬಾ' 'ನಾನು ಹೋಗುತ್ತೇನೆ ನೀನಿಲ್ಲಿಯೇ ಇರು' ಎಂದು ಅಲ್ಲಂದಿಲ್ಲಿಗೆ ಓಡಾಡಿಸಿ ನನ್ನ ಪಾದುಕೆ ವೀಣೆ ಹಿಡಿದುಕೋ ಇತ್ಯಾದಿಗಳಿಂದ ಸರ್ವರನ್ನು ನಗೆಗಡಲಿನಲ್ಲಿ ಮುಳುಗಿಸಿದರು.

ನಂತರ ಕೃಷ್ಣನ ಕೊರಳಿಗೆ ಹಾಕಿದ್ದ ಪುಷ್ಪಮಾಲೆಯನ್ನು ತೆಗೆದುಹಾಕಿ *[ಅಪನೀಯ ಪುಷ್ಪದಾಮಂ]* ಹೀಗೆಂದರು.

ಶ್ರೀಕೃಷ್ಣನು ಈಗ ನನ್ನ ವಸ್ತು. ಇದನ್ನು ಮರಳಿ ಹಿಂದಕ್ಕೆ ಪಡೆಯಬೇಕಾದರೆ ಕೊಡಬೇಕಾದ ಮೂಲ್ಯ ಹೇಳುವೆ ಎಂದರು.

**ಕಪಿಲಾಂ ಗಾಂ ಸವತ್ಸಾಂ ಭೋ ನಿಷ್ಕ್ರಯಾರ್ಥಂ ಪ್ರಯಚ್ಛ ಮೇ ॥ 9 ॥**

ಸತ್ಯಭಾಮೆಯೇ! ನನ್ನವನಾದ ಶ್ರೀಕೃಷ್ಣನು ನಿನ್ನವನಾಗಲು ಕರುವಿನೊಂದಿಗೆ ಒಡಗೂಡಿದ ಕಪಿಲಾಧೇನುವನ್ನು ನನಗೆ ನಿಷ್ಕ್ರಯವಾಗಿ ಕೊಡು.

ಹಸುವಿನೊಂದಿಗೆ, ಎಳ್ಳಿನೊಂದಿಗೆ ಕೃಷ್ಣಾಜಿನವನ್ನೂ, ಸುವರ್ಣ ದಕ್ಷಿಣೆಯನ್ನೂ ಕೊಡಬೇಕು. ಈ ಬೆಲೆಯನ್ನು ರುದ್ರದೇವನಿಂದ ಅನುಮೋದಿತವಾಗಿದೆ.

**ಏಷೋಽತ್ರ ನಿಷ್ಕ್ರಯಃ ಕೃಷ್ಣ ವಿಹಿತೋ ವೃಷಕೇತುನಾ ॥ 10 ॥**

ಶ್ರೀಹರಿಯು ಹಾಗೆಯೇ ಆಗಲಿ ಎಂದು ಹೇಳಿ ನಾರದರು ಹೇಳಿದಂತೆ ಕರುವಿನೊಂದಿಗೆ ಕಪಿಲಾಧೇನುವನ್ನು, ಎಳ್ಳು ಕೃಷ್ಣಾಜಿನವನ್ನೂ ಸುವರ್ಣದೊಂದಿಗೆ ನಾರದರಿಗೆ ನೀಡಿದನು.

ನಂತರ ಶ್ರೀಕೃಷ್ಣನು ಮುನಿಯನ್ನು ನೋಡಿ ನಸುನಗುತ್ತ ಹೀಗೆಂದನು.

**ವರಂ ವರಯ ಭದ್ರಂ ತೇ ಯಸ್ತೇ ನಾರದ ಕಾಂಕ್ಷಿತಃ ।**

ನಾರದನೇ ನಾನು ನಿನ್ನಲ್ಲಿ ಪರಮ ಸಂತುಷ್ಟನಾಗಿರುವೆ. ನೀನಗಾವ ವರ ಬೇಕೋ ಕೇಳು. ಅದನ್ನು ನೀಡುವೆ ಎಂದನು.

ನಾರದರಾದರೂ ನಿಷ್ಕಾಮಭಕ್ತರಾಗಿದ್ದು – ಶ್ರೀಕೃಷ್ಣನೇ ! ಬ್ರಹ್ಮರುದ್ರಾದಿ-ವಂದ್ಯನಾದ ನಿನ್ನನ್ನು ಪಡೆದದ್ದೆ ಸಾಕು. ನೀನು ನನ್ನಲ್ಲಿ ಯಾವಾಗಲೂ

ಪ್ರಸನ್ನನಾಗಿರು. ನಿನ್ನ ಅನುಗ್ರಹವಿದ್ದರೆ ಸಾಕು. ಸಾಯುಜ್ಯ ಸಾಮೀಪ್ಯಾದಿ ಮೋಕ್ಷ ಸುಖಗಳು ತಾವಾಗಿಯೇ ಲಭಿಸುವುವು. *[ತ್ವತ್ ಪ್ರಸಾದಾತ್ತು ಸಾಲೋಕ್ಯಂ]*

ಭಗವನ್ ! ನಾನು ಶುಕ್ರಶೋಣಿತ ದೇಹದಲ್ಲಿ ಬರದಂತೆಯೂ ಹಾಗೂ ಬ್ರಾಹ್ಮಣನಾಗಿಯೆ ಅವತರಿಸುವಂತೆಯೂ ಅನುಗ್ರಹಿಸು.

*[ಅಯೋನಿಜೋ ಭವೇಯಂ] [ಭವೇಯಂ ಬ್ರಾಹ್ಮಣಶ್ಚೈವ]*

ಎಂದರು. ಶ್ರೀಕೃಷ್ಣನು ಹಾಗೆ ಆಗಲಿ ಎಂದನು. ನಾರದರು ತಮ್ಮ ಬೇಡಿಕೆಗೆ ಶ್ರೀಕೃಷ್ಣನು ಅಸ್ತು ಎಂದಾಗ ಬಹಳ ಸಂತೋಷ ಹೊಂದಿದರು.

ಶ್ರೀಕೃಷ್ಣ ಪ್ರಿಯಭಾರ್ಯೆಯಾದ ಸತ್ಯಭಾಮೆಯು ಮಹಾಮಹಿಮನಾದ ಶ್ರೀಕೃಷ್ಣನ ಹದಿನಾರು ಸಾವಿರ ಪತ್ನಿಯರನ್ನೂ ಕರೆಸಿದಳು. ಶಚೀದೇವಿಯು ತನಗೆ ನೀಡಿದ್ದ ಪಾರಿತೋಷಕ ರೂಪದಲ್ಲಿ ಬಂದಿದ್ದ ದಿವ್ಯ ವಸ್ತ್ರಾ-ಭರಣಾದಿಗಳನ್ನು *[ಸನ್ನಿಯೋಗಾಂ]* ವಿಭಾಗಿಸಿ ನೀಡಿದಳು.

**ಪಾರಿಜಾತೋ ವಸಂಸ್ತತ್ರ ತತಃ ಪ್ರವವೃತೇ ತದಾ ॥ 11 ॥**

ಪಾರಿಜಾತ ವೃಕ್ಷವಾದರೂ ದ್ವಾರಕೆಯಲ್ಲಿಡಲ್ಪಟ್ಟು ತನ್ನ ದೇವಲೋಕದ ಕಾಂತಿಯಿಂದ ಅಪಾರ ಗುಣಗಳನ್ನು ಪ್ರದರ್ಶಿಸುತ್ತಿತ್ತು.

ಶ್ರೀಕೃಷ್ಣನ ಅಣತಿ ಹೊಂದಿದ್ದ ನಾರದರು ಪಾರಿಜಾತ ವೃಕ್ಷದ ಮಹಿಮೆಯನ್ನು ನೋಡಲೆಂದು ಕೃಷ್ಣ ಸುಹೃದಬಾಂಧವರನ್ನೆಲ್ಲ ಆಹ್ವಾನಿಸಿದ್ದರು. ಅವರೆಲ್ಲರೂ ಪಾರಿಜಾತದ ವೈಭೋವೋಪೇತವಾದ ಮಹಿಮೆಯನ್ನು ಕಂಡರು. *[ವಿಭೂತಿಂ ಪಾರಿಜಾತಸ್ಯ ದದೃಶುಃ]*

ಈ ಸಂದರ್ಭದಲ್ಲಿ ಶ್ರೀಕೃಷ್ಣನಿಂದ ಆಹ್ವಾನಿತರಾದ ಪಂಚಪಾಂಡವರೂ ಸಹ ಕುಂತೀ, ಸುಭದ್ರಾ, ದ್ರೌಪದಿಯೊಂದಿಗೆ ಆಗಮಿಸಿದರು. ಇವರೊಂದಿಗೆ ಶ್ರೀಕೃಷ್ಣ ಸೋದರತ್ತೆ ಶ್ರುತಶ್ರವೆಯು ಪುತ್ರ ಶಿಶುಪಾಲನೊಂದಿಗೆ ಬಂದಳು. ಭೀಷ್ಮಕನು ರುಗ್ಮಿ ಸಹಿತ ಬಂದಿದ್ದನು. ಇತರ ಮಿತ್ರ ಬಾಂಧವರೂ ಸೇರಿದ್ದರೂ. ಅವರೆಲ್ಲರೂ ಪಾರಿಜಾತದ ಮಹಾದ್ಭುತ ವೈಭವವನ್ನು ನೋಡಿ ಆನಂದಿಸಿದರು.

ಮಹಾತೇಜಸ್ವಿ ಶ್ರೀಕೃಷ್ಣನು ಸಕಲ ಸಂಪತ್ತುಗಳಿಂದ ಕೂಡಿದವನಾಗಿ ಭೀಮ ಪ್ರಾಣಮಿತ್ರ ಅರ್ಜುನರಿಂದ ಕೂಡಿ ರಾಣಿವಾಸದವರೊಂದಿಗೆ ಕ್ರೀಡಾ-

ವಿನೋದಗಳಿಂದ ಕಾಲವನ್ನು ಕಳೆಯುತ್ತಿದ್ದನು. ದ್ರೌಪದ್ಯಾದಿಗಳು ಜಾಂಬವತ್ಯಾದಿಗಳೂ ಸಹ ಈ ವೃಕ್ಷದ ಮೂಲಕ ಪುಣ್ಯಕ ಮಾಡಿ ಬ್ರಾಹ್ಮಣರಿತ್ತ ಪತಿಯನ್ನು ಪ್ರತಿಫಲವನ್ನು ನೀಡಿ ತಿರುಗಿ ಪಡೆದು ಸೌಭಾಗ್ಯ ಹೊಂದಿದರು.

**ಸಂವತ್ಸರೇ ತತೋ ಯಾತೇ ಕೇಶಿಹಾऽಮರಸತ್ತಮಃ ।**
**ಪಾರಿಜಾತಂ ಪುನಃ ಸ್ವರ್ಗಮಾನಯತ್ ಸರ್ವಭಾವನಃ ॥ 12 ॥**

ಪಾರಿಜಾತವೃಕ್ಷದ ಕಾರ್ಯ ಪುಣ್ಯಕ ವ್ರತ ಮುಗಿದಿತ್ತು. ಅದು ಬಂದು ಒಂದು ವರ್ಷವಾಗಿತ್ತು. ಕೇಶೀಸೂದನ ಮಧುಸೂದನನು ಪಾರಿಜಾತ ವೃಕ್ಷವನ್ನು ಸ್ವರ್ಗಕ್ಕೆ ತೆಗೆದುಕೊಂಡು ಹೋದನು.

ಸ್ವರ್ಗದಲ್ಲಿದ್ದ ತನ್ನ ತಾಯಿ ಅದಿತಿ ಹಾಗೂ ಕಶ್ಯಪರನ್ನು ಸಂದರ್ಶಿಸಿ, ಅಭಿವಾದನ ಪೂರ್ವಕ ನಮಸ್ಕರಿಸಿದನು. ತಾಯಿ ಅದಿತಿಯು ಹೀಗೆಂದಳು.

ಶ್ರೀಕೃಷ್ಣನೇ ! ಇಂದ್ರ ಹಾಗೂ ನಿನ್ನಲ್ಲಿ ಇದೇ ರೀತಿಯಾದ ಭ್ರಾತೃಭಾವವು ನಿರಂತರವಾಗಿರಲಿ ಇದನ್ನು ನೀನು ಪೂರ್ತಿ ಮಾಡು.

**ಮನೋರಥಂ ಮಮ ಪೂರಯಸ್ವ ಜನಾರ್ದನ ।**

ತಾಯಿಯ ಮಾತನ್ನು ಶ್ರೀಕೃಷ್ಣನು ಅನುಮೋದಿಸಿದನು. ತಂದೆ ತಾಯಿಗಳ ಅನುಮತಿ ಹೊಂದಿ ದೇವರಾಜನೊಡನೇ ಹೀಗೆ ಹೇಳಿದನು. ಈ ಮಾತು ಕಾಲೋಚಿತವಾಗಿತ್ತು.

ಇಂದ್ರದೇವನೇ ! ಹಿಂದೆ ರುದ್ರದೇವನು ಕೇಳಿದಂತೆ ದೇವತೆಗಳಿಂದ ಅವಧ್ಯರಾದ ಷಟ್‌ಪೂರರೆಂಬ ದಾನವರನ್ನು ಸಂಹರಿಸಬೇಕಿದೆ. ಅವರೆಲ್ಲರೂ ಭೂಮಿಯ ಅಡಿಯಲ್ಲಿರುವರು. ಇನ್ನು ಹತ್ತು ದಿನಗಳಲ್ಲಿ ಅವರೆಲ್ಲರನ್ನೂ ಸಂಹರಿಸುವೆನು *[ದಶರಾತ್ರೇಣ ಹಂತಾಹಂ]*

ಈ ದಾನವರನ್ನು ಸಂಹರಿಸಲು ಮಾನುಷ ವೀರನಾದ ಪ್ರವರನೂ, ದೇವ ವೀರನಾದ ನಿನ್ನ ಪುತ್ರ ಜಯಂತನನ್ನು ನನ್ನೊಂದಿಗೆ ಕಳುಹಿಸು.

ಬ್ರಹ್ಮದೇವರ ವರದಿಂದ ಅವಧ್ಯರಾದ ಈ ದಾನವರನ್ನು ಕೊಲ್ಲಲು ದೇವತೆಗಳಿಂದ ಅಸಾಧ್ಯವು. ಮಾನವರಿಂದ ಅವಧ್ಯತ್ವ ವರವನ್ನು ಬೇಡಿಲ್ಲವಾದ್ದರಿಂದ ಮಾನವವೀರನಾದ ಪ್ರವರ ಹಾಗೂ ನಾನು

ಮಾನವಾಹಾರನಾಗಿದ್ದೇನೆ. ದೇವತೆಗಳಿಂದ ಅವಧ್ಯರಾದದವರೂ ಸಹ ಮನುಜರಾದ ನಮ್ಮಿಂದ ವಧ್ಯರಾಗುವರು.

**ಅಸ್ಮಾಭಿಃ ಕಿಲ ಹಂತವ್ಯಾಃ ಮಾನುಷತ್ವ ಮುಪಾಗತೈಃ ॥ 13 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! ಶ್ರೀಕೃಷ್ಣನು ಹೀಗೆ ಹೇಳಿದಾಗ ಇಂದ್ರನು ಸಂತುಷ್ಟನಾಗಿ ತಥಾಸ್ತು ಎಂದು ಹೇಳಿದನು. ಅವರಿಬ್ಬರೂ ಪರಸ್ಪರಾಲಿಂಗನದಿಂದ ತಮ್ಮ ಸೋದರತ್ವವನ್ನು ದೃಢಪಡಿಸಿದರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಪಾರಿಜಾತಹರಣ ಹಾಗೂ ಪುನಸ್ಥಾಪನವೆಂಬಲ್ಲಿ
ಎಪ್ಪತ್ತಾರನೆಯ ಅಧ್ಯಾಯ ಸಮಾಪ್ತಿ

# ಅಥ ಸಪ್ತಸಪ್ತತಿತಮೋಽಧ್ಯಾಯಃ

*ಜನಮೇಜಯ –*

**ಪುಣ್ಯಕಾನಾಂ ಮಮೋತ್ಪತ್ತಿಂ ಕಥಯಸ್ವ ದ್ವಿಜೋತ್ತಮ ॥ 1 ॥**

ವೈಶಂಪಾಯನರೇ ! ತಾವು ವೇದವ್ಯಾಸರ ಅನುಗ್ರಹದಿಂದಾಗಿ ಸರ್ವ ವಿಷಯಗಳಲ್ಲಿಯೂ ಪರಿಣತಿ ಹೊಂದಿರುವಿರಿ. ನನಗೆ ಸತ್ಯಭಾಮೆಯು ಮಾಡಿದ ಪುಣ್ಯಕವ್ರತದ ಉತ್ಪತ್ತಿ ಹೇಗಾಯಿತೆಂದು ಅದರ ವಿಧಿವಿಧಾನಗಳನ್ನು ನನಗೆ ತಿಳಿಸಿಕೊಡಿ ಎಂದು ಜನಮೇಜಯನು ಪ್ರಾರ್ಥಿಸಿದನು.

*ವೈಶಂಪಾಯನಃ –*

**ಉಮಯಾ ಪುಣ್ಯಕವಿಧಿಃ ನರೇಂದ್ರೋತ್ಪಾದಿತಃ ಪುರಾ ।**
**ಶೃಣು ಯೇನ ವಿಧಾನೇನ ಲೋಕೇ ಧರ್ಮಭೃತಾಂ ವರ ॥ 2 ॥**

ಧರ್ಮಾತ್ಮ ಜನಮೇಜಯನೇ ಕೇಳು! ಹಿಂದೆ ಪಾರ್ವತೀದೇವಿಯು ಈ ಪುಣ್ಯಕವ್ರತದ ವಿಧಿವಿಧಾನಗಳನ್ನು ಸಿದ್ಧಪಡಿಸಿದಳು. ಅದರ ವಿವರಗಳನ್ನು ತಿಳಿಸುವೆನು.

ಶ್ರೀಕೃಷ್ಣನು ಸ್ವರ್ಗದಿಂದ ಪಾರಿಜಾತವೃಕ್ಷವನ್ನು ದ್ವಾರಕೆಗೆ ತಂದಾಗ ಧೀಮಂತರಾದ ಶ್ರೀ ನಾರದಮುನಿಗಳೂ ಅಲ್ಲಿಗೆ ಬಂದಿದ್ದರು. ಹಿಂದೆ ರುದ್ರದೇವನ ಆದೇಶದಂತೆ ದೇವ–ದಾನವರಿಗೆ ಘೋರಯುದ್ಧ ನಡೆಯುತ್ತಿತ್ತು. ಘೋರವಾದ ಷಟ್ಪುರರ ವಧೆಯಾಗುವ ಸಂದರ್ಭವಿತ್ತು. ಆ ಸಮಯದಲ್ಲಿ ನಾರದರು ಕೃಷ್ಣನೊಂದಿಗೆ ಸಮಾವಿಷ್ಟರಾಗಿದ್ದರು. ಈ ಸಂದರ್ಭದಲ್ಲಿಯೇ

ಭೀಷ್ಮಕಪುತ್ರಿಯಾದ ರುಕ್ಮಿಣಿಯು ನಾರದರನ್ನು ಪ್ರಶ್ನಿಸಿದಳು. ರುಗ್ಮಿಣಿಯೊಂದಿಗೆ ಜಾಂಬವತೀ, ಸತ್ಯಭಾಮೆ, ಗಾಂಧಾರ ದೇಶ ರಾಜಪುತ್ರಿ ಯೋಗಯುಕ್ತಳೂ ಬಂದಿದ್ದರು.

ಇವರಲ್ಲದೆ ಧರ್ಮಶೀಲೆಯರೂ ಪತಿವ್ರತೆಯರೂ ಆದ ಶ್ರೀಕೃಷ್ಣನ ಮಹಿಷಿಯರೆಲ್ಲರೂ ಬಂದಿದ್ದರು. ರುಗ್ಮಿಣಿಯು ಹೀಗೆ ಪ್ರಶ್ನಿಸಿದಳು.

**ಮುನೇ ಧರ್ಮಭೃತಾಂ ಶ್ರೇಷ್ಠ ಧರ್ಮಜ್ಞಾನಭೃತಾಂ ವರ ।**
**ಉತ್ಪತ್ತಿಂ ಪುಣ್ಯಕಾನಾಂ ತ್ವಂ ವಕ್ತು ಮರ್ಹಸ್ಯಶೇಷತಃ ॥ 3 ॥**

ಧರ್ಮಾತ್ಮರೂ ಜ್ಞಾನಿಶ್ರೇಷ್ಠರೂ ಆದ ನಾರದರೇ, ತಾವು ಪುಣ್ಯಕವ್ರತಗಳ ಉತ್ಪತ್ತಿಯನ್ನು ಆಮೂಲಾಗ್ರವಾಗಿ ಹೇಳಬೇಕು. ಪುಣ್ಯಕವ್ರತದ ವಿಧಿ, ಫಲ, ಯೋಗ, ದಾನ ಮಾಡುವ ಕಾಲ ಇವೇ ಮೊದಲಾದ ವಿಷಯಗಳನ್ನು ತಿಳಿಸಿಕೊಡಬೇಕು. ಪುಣ್ಯಕವ್ರತದ ವಿಧಿವಿಧಾನಗಳನ್ನು ತಿಳಿಯುವ ಹಂಬಲವುಳ್ಳ ನಮಗೆ ತಿಳಿಸಿಕೊಡಿ ಎಂದಳು.

*ನಾರದ ಉವಾಚ –*

**ಶೃಣು ವೈದರ್ಭಿ ಧರ್ಮಜ್ಞೆ ಸಪತ್ನೀಭಿಃ ಸಹಾನಘೇ ।**
**ಪುಣ್ಯಕಾನಾಂ ವಿಧಿಃ ಪ್ರೋಕ್ತೋ ಯಥಾದೇವಿ ಪುರಾ ಮಯಾ ॥ 4 ॥**

ಧರ್ಮಜ್ಞೆ ವೈದರ್ಭಿ! ಹಿಂದೆ ಉಮಾದೇವಿಯು ಹೇಳಿದ ಪುಣ್ಯಕವ್ರತ ವಿಧಿವಿಧಾನಗಳನ್ನು ವಿಸ್ತರಿಸುವೆ.

**ಚಚಾರೋಮಾ ವ್ರತಂ ದೇವೀ ಪುಣ್ಯಕಾನಾಂ ಶುಚಿವ್ರತಾ ।**
**ವ್ರತಾವಸಾನೇಽಥ ತಯಾ ಸಂಪ್ರೋಕ್ತಾ ದೇವಿ ನಿಮಂತ್ರಿತಾಃ ॥ 5 ॥**

**ಅದಿತ್ಯಾದ್ಯಾಃ ಸುತಾಃ ಸರ್ವಾ ದಕ್ಷಸ್ಯಾಕ್ಲಿಷ್ಟಕರ್ಮಣಃ ।**
**ಪೌಲೋಮೀ ಚ ಶಚೀ ದೇವೀ ಖ್ಯಾತಾ ಲೋಕೇ ಪತಿವ್ರತಾ ॥ 6 ॥**

**ರೋಹಿಣೀ ಚ ಮಹಾಭಾಗಾ ಸೋಮಸ್ಯ ದಯಿತಾ ಸತೀ ।**
**ಫಾಲ್ಗುನೀ ಚ ತಥಾ ಪೂರ್ವಾ ರೇವತೀ ಚ ವಿಶಾಂ ಪತೇ ॥ 7 ॥**

ಉಮಾದೇವಿಯು ಪವಿತ್ರವಾದ ಪುಣ್ಯಕವ್ರತವನ್ನಾರಂಭಿಸಿದ್ದಳು. ವ್ರತವು ಸಾಂಗೋಪಾಂಗವಾಗಿ ನೆರವೇರಿತ್ತು. ವ್ರತದ ಕಡೆಯಲ್ಲಿ ಉಮೆಯು ತನ್ನ

ಸಖಿಯರನ್ನೆಲ್ಲ ಆಹ್ವಾನ ಮಾಡಿದ್ದಳು. ಅನಾಯಾಸವಾಗಿ ಸೃಷ್ಟಿಸುವ *[ಅಕ್ಲಿಷ್ಟಕರ್ಮಣಃ]* ದಕ್ಷಪ್ರಜಾಪತಿಯ ಅದಿತಿ ಮೊದಲಾದ ಪುತ್ರಿಯರೂ, ಪತಿವ್ರತೆಯಾದ ಪುಲೋಮ ಪುತ್ರಿ ಶಚೀದೇವಿಯು, ಸೋಮನ ಪ್ರಿಯ ಪತಿ ರೋಹಿಣಿಯೂ, ಅವನ ಇತರ ಪತ್ನಿಯರಾದ ಪೂರ್ವಫಲ್ಗುನೀ, ರೇವತೀ, ಶತಭಿಷಾ, ಮಘಾ ಮೊದಲಾದ ನಕ್ಷತ್ರಾಭಿಮಾನಿಗಳೂ ಆಮಂತ್ರಣದ ಮೇರೆಗೆ ಅಲ್ಲಿಗೆ ಬಂದಿದ್ದರು.

ಗಂಗೆ, ಸರಸ್ವತೀ ವೇಣೀ, ಗೋದೆ, ವೈತರಣೀ, ಗಂಡಕೀ ಮೊದಲಾದ ನದ್ಯಭಿಮಾನಿಗಳೂ ಮೂರ್ತಿಮತ್ತಾಗಿ ಬಂದಿದ್ದರು. ಅಗಸ್ತ್ಯ ಪತ್ನಿಯಾದ ಲೋಪಾಮುದ್ರೆಯೂ ಇತರ ದೇವತೆಯರೂ ಪತಿವ್ರತೆಯರೂ ಆಗಮಿಸಿದ್ದರು. ಇವರಲ್ಲದೆ ಸುಂದರಿಯರಾದ *[ಶುಭಾಃ]* ಗಿರಿಕನ್ಯೆಯರೂ, ಸುವ್ರತೆಯರಾದ ಅಗ್ನಿಕನ್ಯೆಯರೂ, ಅಗ್ನಿದೇವನ ಪ್ರೇಯಸಿಯಾದ ಸ್ವಾಹಾದೇವಿಯೂ, ಯಶೋವತಿಯಾದ ಸಾವಿತ್ರೀದೇವಿಯೂ, ಕುಬೇರನ ಪತ್ನಿಯಾದ ಋದ್ಧಿಯು, ಸಮುದ್ರರಾಜನ ಪತ್ನಿ ಋದ್ಧಿ ಹಾಗೂ ವಾರುಣಿಯರು, ಯಮಭಾರ್ಯೆಯಾದ ಶ್ಯಾಮಲಾ, ವಸುಗಳ ಪತ್ನಿಯರೂ, ಇವರೆಲ್ಲರೂ ಉಮಾದೇವಿಯ ಪೂಜಾಮಂಟಪದಲ್ಲಿ ಕುಳಿತಿದ್ದರು.

ಇವರಲ್ಲದೆ, ವ್ರತವನ್ನು ಪರಿಪಾಲಿಸುವ ಹ್ರೀದೇವಿ, ಶ್ರೀದೇವೀ, ಧೃತಿ, ಕೀರ್ತಿ, ಆಶಾ, ಮೇಧಾ, ಪ್ರೀತಿ, ಮತಿ, ಸನ್ನೀತಿ ಇವರೂ ಅಲ್ಲಿಗೆ ಬಂದಿದ್ದರು. ಸಮಸ್ತ ಪ್ರಾಣಿ ಹಿತೈಷಿ ದೇವತೆಗಳೆಲ್ಲ ಉಪಸ್ಥಿತರಿದ್ದರು.

ಪಾರ್ವತಿಯು ಪುಣ್ಯಕವ್ರತದ ಕಡೆಯಲ್ಲಿ ಅಲ್ಲಿಗೆ ಬಂದಿದ್ದವರೆಲ್ಲರನ್ನೂ ಯಥವತ್ತಾಗಿ ಪೂಜಿಸಿ ಗೌರವಿಸಿದಳು.

ನಂತರ ಪಾರ್ವತಿಯು ತಿಲಪರ್ವತ ದಾನವನ್ನೂ ಧಾನ್ಯಪರ್ವತ ದಾನವನ್ನೂ ಮಾಡಿ ಅನೇಕ ವರ್ಣರಂಜಿತ ವಸ್ತ್ರಾಲಂಕಾರಗಳಿಂದಲೂ, ಆಭರಣ-ಗಳಿಂದಲೂ ಸತ್ಕರಿಸಿದಳು. ಅವರೆಲ್ಲರೂ ಪಾರ್ವತಿ ನೀಡಿದ ಗೌರವ ಪಾರಿತೋಷಕಗಳನ್ನು ಸ್ವೀಕರಿಸಿದ ಪತಿದೈವತರಾದ ಆ ಸ್ತ್ರೀಯರೆಲ್ಲರೂ *[ಭರ್ತೃದೇವತೇ]* ಅಲ್ಲಿಯೇ ಕುಳಿತು ಹರಿಮಹಿಮೆಯನ್ನು ಹರಿಭಕ್ತನಾದ ಶಿವನ ಮಹಿಮೆಯನ್ನು ತಮ್ಮತಮ್ಮಲ್ಲಿಯೇ ಹೇಳಲಾರಂಭಿಸಿದರು.

ಉಪವಿಷ್ಟಾಃ ಕಥಾಶ್ಚಿತ್ರಾಃ ಕುರ್ವಂತ್ಯೋ ಭರ್ತೃದೇವತಾಃ ॥ 8 ॥

ನಾರದರು ರುಗ್ಮಿಣಿಯನ್ನು ಕುರಿತು – ಪತಿಯಲ್ಲಿಯೇ ದೇವರನ್ನು ಕಾಣುವ ರುಗ್ಮಿಣಿಯೇ – ಅಲ್ಲಿ ನೆರೆದಿದ್ದವರ ಕಥೆಗಳೆಲ್ಲವೂ ಪುಣ್ಯವಂತನಾದ ಶ್ರೀಹರಿಯ ಹಾಗೂ ಪುಣ್ಯಕದ ವಿಷಯದ್ದೆ ಆಗಿತ್ತು. ಆ ವಿಷಯದಲ್ಲಿಯೇ ವಿಚಾರ ವಿನಿಮಯ ನಡೆದಿತ್ತು. ಆ ಸಮಯದಲ್ಲಿ ಉಮಾದೇವಿಯು ಪುಣ್ಯಕವ್ರತದ ಮಹತ್ವ ವಿಧಿ–ವಿಧಾನಗಳನ್ನು ತಿಳಿಸುತ್ತಿದ್ದಳು.

ಸೋಮನ ಪುತ್ರಿಯಾದ ಅರುಂಧತಿಯು ತನ್ನ ಸಮಕ್ಷಮದಲ್ಲಿಯೇ ಪುಣ್ಯ ವಿಧಿ ವಿಧಾನಗಳನ್ನು ಹೇಳಲಾರಂಭಿಸಿದಳು. ಅಂದೇ ಉಮಾದೇವಿಯು ನನಗೆ ರತ್ನಪರ್ವತವನ್ನೂ ದಾನ ಮಾಡಿದ್ದಳು. ನಾನಾದರೂ ಅದನ್ನು ಬ್ರಾಹ್ಮಣರಿಗೆ ಕೊಟ್ಟೆನು. ಆಗ ಅರುಂಧತಿಯನ್ನು ಸಂಬೋಧಿಸಿ ಉಮೆಯು ಹೇಳಿದ ವಿಷಯವನ್ನು ನಾನು ನಿನಗೂ ಹೇಳುವೆನು ಕೇಳು.

ಉಮಾ ತ್ವರುಂಧತೀಂ ಸಾಧ್ವೀಮಾಮಂತ್ರ್ಯ ಯದಭಾಷತ ।
ಶೃಣು ಕಲ್ಯಾಣಿ ವಕ್ಷ್ಯಾಮಿ ಸರ್ವಾಭಿಃ ಸಹಿತಾ ಶುಭೇ ॥ 9 ॥

ಪುಣ್ಯಕಾನಾಂ ವಿಧಿ ಕೃತ್ಸ್ನಂ ಯಥಾವದನುಪೂರ್ವಶಃ ।
ಯಥಾ ಚೈವ ಮಯಾ ದೃಷ್ಟಸ್ತತ ಏಷವಿಧಿಃ ಶುಭೇ ॥ 10 ॥

ಪುಣ್ಯಕವ್ರತಗಳ ಸಮಗ್ರವಾದ ವಿಧಿ–ವಿಧಾನಗಳನ್ನು ನಾನು ಹೇಗೆ ಕೇಳಿರುವೆನೋ ಮತ್ತು ಅಂತಹ ವಿಧಿವಿಧಾನಗಳಿಂದಲೇ ಮಾಡಿರುವ ಪುಣ್ಯಕವ್ರತವನ್ನು ನಾನು ಹೇಗೆ ಕಂಡಿರುವೆನೋ ಹಾಗೆಯೇ ವಿಧಿವತ್ತಾಗಿ ಎಲ್ಲವನ್ನೂ ಹೇಳುವೆನು. ಏಕಾಗ್ರ ಮನಸ್ಸಿನಿಂದ ಕೇಳು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಪುಣ್ಯಕವ್ರತ ವಿಧಿವಿಧಾನ ಕಥನವೆಂಬಲ್ಲಿ
ಎಪ್ಪತ್ತೇಳನೆಯ ಅಧ್ಯಾಯ ಸಮಾಪ್ತಿ

## ಅಥ ಅಷ್ಟಸಪ್ತತಿತಮೋಽಧ್ಯಾಯಃ

*ಉಮೋವಾಚ-*

**ಸರ್ವಜ್ಞಾಹಂ ಯದಾ ಭರ್ತುಃ ಪ್ರಸಾದೇನ ಶುಚಿಸ್ಮಿತೇ ।**

**ತದಾ ಪುರಾ ಮಮಾದಿಷ್ಟೋ ದೃಷ್ಟಃ ಪುಣ್ಯವಿಧಿಃ ಶುಭಃ ॥ 1 ॥**

ಉಮಾದೇವಿಯು ಹೇಳುವಳು - ಮಂಗಳಕರ ಮುಗುಳ್ನಗೆವುಳ್ಳ ಅರುಂಧುತಿಯೇ ! ನಾನು ನನ್ನ ಪತಿಯಾದ ಪರಮಶಿವನ ಅನುಗ್ರಹದಿಂದಾಗಿ ಸರ್ವಜ್ಞಳೆನಿಸಿದ್ದೇನೆ. ಈ ಹಿಂದೆ ನನ್ನ ಈ ಪತಿಯೇ ನನಗೆ ಈ ಪುಣ್ಯವುಂಟು ಮಾಡುವ ಪುಣ್ಯಕವ್ರತವನ್ನು ಉಪದೇಶಿಸಿದನು. ಇದರ ಸಿದ್ಧಿಯನ್ನು ನಾನು ಹೊಂದಿರುವೆನು.

ಇದೊಂದು ಸನಾತನವಾದ ವಿಧಿಯೆಂದು ತಿಳಿ. ಮಹೇಶ್ವರನ ಅನುಗ್ರಹ-ದಿಂದಾಗಿಯೇ ನನಗೆ ಸಿದ್ಧಿಯಾಗಿದ್ದು - ಆ ನನ್ನ ಪತಿಯ ಅನುಜ್ಞೆಯನ್ನು ಪಡೆದು ನಾನು ಸಮಸ್ತ ಪುಣ್ಯಕ ವಿಧಿಗಳನ್ನಾಚರಿಸಿರುವೆನು.

**ಅನುಜ್ಞಯಾ ಭಗವತೋ ಭರ್ತುಃ ಶರ್ವಸ್ಯ ಧೀಮತಃ ।**

**ಪುಣ್ಯಕಾನಿ ಚ ಸರ್ವಾಣಿ ಚೀರ್ಣವತ್ಯಸ್ಮ್ಯನಿಂದಿತೇ ॥ 2 ॥**

ಯಾವ ಸ್ತ್ರೀಯು ಪಾತಿವ್ರತ್ಯವನ್ನೂ, ಧರ್ಮಾಚರಣೆಯನ್ನು ಸ್ಥಿರವಾಗಿರ-ಬೇಕೆಂದು ಬಯಸುವಳೋ ಅಂತಹವಳಿಗೆ ನಮ್ಮ ಪರಮಹರ್ಷಿಗಳು ಪುಣ್ಯಕವ್ರತದ ವಿಧಿಯನ್ನು ಸಿದ್ಧ ಮಾಡಿಕೊಟ್ಟಿದ್ದಾರೆ.

ಅರುಂಧತಿಯೇ, ಪಾತಿವ್ರತ್ಯವಿಲ್ಲದೆ ಭ್ರಷ್ಟಳಾದ ನಾರಿಯು ಮಾಡುವ ದಾನಾದಿ ಪುಣ್ಯಕರ್ಮಗಳೆಲ್ಲವೂ ನಿಷ್ಫಲವೆನಿಸುವುವು.

**ದಾನೋಪವಾಸಪುಣ್ಯಾನಿ ಸುಕೃತಾನ್ಯಪ್ಯರುಂಧತಿ ।**
**ನಿಷ್ಫಲಾನ್ಯಸತೀನಾಂ ಹಿ ಪುಣ್ಯಕಾನಿ ತಥಾ ಶುಭೇ ॥ 3 ॥**

ಯಾವ ಸ್ತ್ರೀಯರು ಗಂಡನಿಗೆ ದ್ರೋಹ ಬಗೆಯುವರೊ ಹಾಗೂ ವ್ಯಭಿಚಾರಿಣಿಯಾಗಿ ಪರಪುರುಷರ ಸಹವಾಸದಿಂದಾಗಿ ಯೋನಿಯು ದೂಷಿತವಾಗಿರುವುದೋ ಅಂತಹ ದುರ್ಯೋನಿ ಸ್ತ್ರೀಯರು ಯಾವುದೇ ವ್ರತಾಚರಣೆಯಿಂದ ಪುಣ್ಯಫಲ ಭಾಗಿಗಳಾಗುವುದಿಲ್ಲ. ಹೊರತಾಗಿ ನರಕಕ್ಕೆ ಬೀಳುವರು.

**ಯಾ ವಂಚಯಂತಿ ಭರ್ತಾರಂ ಯೋನಿದುಷ್ಟಾಶ್ಚ ಯಾಃ ಸ್ತ್ರಿಯಃ ।**
**ಯೋನಿದೋಷಾತ್ ಪುಣ್ಯಫಲಂ ನಾಶ್ನಂತಿ ನಿರಯಂಗಮಾಃ ॥ 4 ॥**

ಯಾವ ಸ್ತ್ರೀಯರು ತಮ್ಮ ಆಚಾರ–ವಿಚಾರಗಳಲ್ಲಿ[1] ಶುದ್ಧರಾಗಿರುವರೋ ಪತಿಯಲ್ಲಿ ಪರಮಾತ್ಮನಿರುವನೆಂಬ ಭಾವನೆಯಿಂದ ಕೂಡಿದ್ದು ಪತಿಯಲ್ಲಿ ಅನುರಕ್ತರಾಗಿರುವರೋ, ಸಾವಿತ್ರೀ, ಅರುಂಧತಿ ಮೊದಲಾದ ಪತಿವ್ರತೆಯರ ಹಾದಿಯಲ್ಲಿಯೇ ನಡೆಯುವರೋ ಅಂತಹ ಸಾಧ್ವೀಶಿರೋಮಣಿಗಳೇ ಈ ಜಗತ್ತನ್ನು ಧರಿಸಿರುವರು.

**ಸಾಧ್ವೋ ಜಗದ್ಧಾರಯಂತಿ ಸುಶೀಲಾಃ ಪತಿದೇವತಾಃ ॥ 5 ॥**

ಯಾವ ಸಾಧ್ವಿಯರ ಮಾತುಗಳು ಪರನಿಂದೆಯಿಂದಾಗಲಿ, ಅನೃತದಿಂದಾಗಲೀ

---

1. 1) ಯಾ ಪತಿಂ ಹರಿಭಾವೇನ ಭಜೇತ್ ಶ್ರೀರಿವ ತತ್ಪರಾ ।
ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ ॥ – *ಭಾಗ–7*

2) ನಾಸ್ತಿ ಸ್ತ್ರೀಣಾಂ ಪೃಥಗ್ ಯಜ್ಞೋ ನ ವ್ರತಂ ನಾಪ್ಯುಪೋಷಣಮ್ ।
ಪತಿಂ ಶುಶ್ರೂಷತೇ ಯೇ ನ ತೇನ ಸ್ವರ್ಗೇ ಮಹೀಯತೇ ॥ –ಮನು

3) ತೀರ್ಥ ಸ್ನಾನಾರ್ಥಿನೀ ನಾರೀ ಪತಿಪಾದೋದಕಂ ಪಿಬೇತ್ ।
ಪತಿಃ ಸ್ತ್ರೀಭಿಃ ನ ಹಾತವ್ಯೋ ಲೋಕೇಪ್ಸುಭಿರಪಾತಕೀ ॥

4) ಅಸ್ವರ್ಗ್ಯಂ ಅಯಶಸ್ಯಂ ಚ ಫಲ್ಗು ಕೃಚ್ಛ್ರಂ ಭಯಾವಹಂ ।
ಜುಗುಪ್ಸಿತಂ ಚ ಸರ್ವತ್ರ ಔಪಪತ್ಯಂ ಕುಲಸ್ತ್ರಿಯಃ ॥ – *ಭಾಗ*

5) ವ್ಯಭಿಚಾರಾತ್ತು ಭರ್ತುಃ ಸ್ತ್ರೀ ಲೋಕೇ ಪ್ರಾಪ್ನೋತಿ ನಿಂದ್ಯತಾಮ್ ।
ಶೃಗಾಲಯೋನಿಮಾಪ್ನೋತಿ ಪಾಪರೋಗೈಶ್ಚ ಪೀಡ್ಯತೇ ॥

ದುಷ್ಟವಾಗಿಲ್ಲವೋ, ಅಂತರಂಗಶುದ್ಧಿ-ಬಹಿರಂಗಶುದ್ಧಿವುಳ್ಳವರೋ, ಧೈರ್ಯವುಳ್ಳ ಅವರು ಶುಭವ್ರತಗಳನ್ನೂ ಆಚರಿಸುವರೋ ಸರ್ವಕಾಲ ದೇಶಗಳಲ್ಲಿಯೂ ಸೂನೃತ ಮಾತುಗಳನ್ನೇ ಆಡುವರೋ ಅಂತಹ ಸಾಧ್ವೀ ನಾರೀಗಳು ಜಗತ್ತನ್ನು ಧರಿಸಿರುವರು.

ಪತಿವ್ರತೆಯಾದರೂ ತನ್ನ ಪತಿಯು ರೋಗದಿಂದ ಪೀಡಿತನಾಗಿದ್ದರೂ ಪತಿತನಾಗಿದ್ದರೂ, ದರಿದ್ರನಾಗಿದ್ದರೂ ಅವನನ್ನು ಬಿಡಬಾರದು. ಇದೇ ಸನಾತನ ಧರ್ಮ.

**ವ್ಯಾಧಿತಃ ಪತಿತೋ ವಾಪಿ ದೀನೋ ವಾಪಿ ಕಥಂಚನ ।**
**ನ ತ್ಯಕ್ತವ್ಯ ಸ್ತ್ರಿಯಾ ಭರ್ತಾ ಏಷ ಧರ್ಮಃ ಸನಾತನಃ ॥ 6 ॥**

ಅರುಂಧತಿಯೇ ! ಸಾಧ್ವಿಯು ಶಾಸ್ತ್ರನಿಷಿದ್ಧ ಕರ್ಮ ಮಾಡಿದ, ಪತಿತನಾದವನೂ ಗುಣಹೀನನಾದರೂ ಪತಿಯನ್ನು ಉದ್ಧಾರ ಮಾಡಿ ತಾನೂ ಉದ್ಧಾರವಾಗುವಳು.

ಯೋನಿದುಷ್ಟರಾದ ಸ್ತ್ರೀಯರಿಗೆ ಪ್ರಾಯಶ್ಚಿತ್ತವೆ ಇರುವುದಿಲ್ಲ. ಅವಳು ಬದುಕಿದ್ದರೂ ಸತ್ತಂತೆಯೇ. *[ಹತ್ಯೈವ ಸಾ]* ಪತಿಯನ್ನು ಕೆಟ್ಟ ಮಾತುಗಳಿಂದ ದೂಷಿಸಿದರೆ ಅದಕ್ಕೆ ಪ್ರಾಯಶ್ಚಿತ್ತವನ್ನು ಶಾಸ್ತ್ರ ತಿಳಸಿದೆ.

**ವಾಗ್ದುಷ್ಟೇ ವಿಹಿತಂ ಸದ್ಭಿಃ ಪ್ರಾಯಶ್ಚಿತ್ತಂ ಪುರಾತನೇ ॥ 7 ॥**

ಅರುಂಧತಿಯೇ! ಸತ್ಪುರುಷರಿಗೆ ಲಭಿಸುವ ಸದ್ಗತಿಯು ತನಗೂ ಆಗಬೇಕೆಂಬ ಹಂಬಲಿಸುವ ಸ್ತ್ರೀಯರು, ತನ್ನ ಪತಿಯ ಇಚ್ಛೆಯಂತೆ ಅವನ ಅನುಮತಿ ಪಡೆದು ಏಕದಶ್ಯಾದಿ ವ್ರತವನ್ನಾಚರಿಸಬೇಕು.[2]

ಯಾವ ಸ್ತ್ರೀಯು ಪತಿಯನ್ನು ಉಲ್ಲಂಘಿಸಿ ಅವನ ಇಚ್ಛೆಗೆ ವಿರುದ್ಧವಾಗಿ ವ್ರತೋಪವಾಸಾದಿಗಳನ್ನು ನಡೆಸುವಳೋ ಅವಳು ಸಿದ್ಧಿ ಹೊಂದಲಾರಳು. ವ್ಯಭಿಚಾರಿಣಿಯೂ ಪಶುಯೋನಿ, ಪಕ್ಷಿಯೋನಿ, ಮೊದಲಾದ ಸಾವಿರಾರು ಹೀನಾಯೋನಿಗಳಲ್ಲಿ ಹುಟ್ಟಿ ಸಾವಿರಾರು ಕಲ್ಪಗಳು ಕಳೆದರೂ ಸದ್ಗತಿಯು ದೊರೆಯಲಾರದು.

ಒಂದು ವೇಳೆ ಜಾರಿಣಿಯು ಮಾನವಜಾತಿಯಲ್ಲಿ ಹುಟ್ಟಿದರೂ ಚಂಡಾಲ

2. 1) ಕಾಮಂ ಭರ್ತುರನುಜ್ಞಯಾ ವ್ರತೋಪವಾಸಾದೀನ್ಯಾಚರೇತ್ ॥ – *ಶಂಖ*
   2) ಶೀಲಮೇವತು ನಾರೀಣಾಂ ಪ್ರಧಾನಂ ಧರ್ಮ ಉಚ್ಯತೇ ॥ – *ವಸಿಷ್ಠರು*

ಯೋನಿಯಲ್ಲಿಯೇ ಹುಟ್ಟಿ ಚಂಡಾಲರಂತೆ ಶ್ವಪಾಕಿಯಾಗಿ ಶ್ವಮಾಂಸ ತಿನ್ನುವಳು.

**ಚಂಡಲಯೋನೌ ದುರ್ಮೇಧಾಃ ಜಾಯತೇ ಕುಕ್ಕುರಾಶನಾ ॥ 8 ॥**

ಸ್ತ್ರೀಯರಿಗೆ ಯಾವಾಗಲೂ ಪತಿಯೇ ಪರದೈವವೆಂದು ಪೂಜಿಸಬೇಕು. *[ಭರ್ತಾದೇವಃ ಸದಾದೇವಃ]*

ಯಾವ ಸ್ತ್ರೀಯ ಗುಣಶೀಲಗಳಿಂದ ಪತಿಯು ಸಂತುಷ್ಟನಾಗುವನೋ ಅವಳೆ ಪತಿವ್ರತೆಯು.

**ಯಸ್ಯಾ ಹಿ ತುಷ್ಯತೇ ಭರ್ತಾ ಸಾ ಸತೀ ಧರ್ಮಚಾರಿಣೀ ॥ 9 ॥**

ಸ್ತ್ರೀಯರಿಗೆ ಮಲವೆಂದರೆ ಕುತೂಹಲವೆ ಆಗಿರುತ್ತದೆ *[ಕುತೂಹಲಮಲಾ ಸಾಧ್ವೀ]* ಪರಪುರುಷರ ಬಗ್ಗೆ ಅವರ ಸಂಗದ ಮೇಲೆ ಸಂಗವನ್ನು ಮಾಡುವ ಸ್ತ್ರೀಯು ಉತ್ತಮಲೋಕಗಳನ್ನು ಹೊಂದಲಾರರು.

**ಕೌತೂಹಲಹತಾನಾಂ ತು ಸ್ತ್ರೀಣಾಂ ಲೋಕೋ ನ ಶೋಭನಃ ॥ 10 ॥**

ಯಾವ ಸ್ತ್ರೀಯ ಮನಸ್ಸು ಸದ್ಭಾವನಾಪೂರ್ವಕವಾಗಿ ಪತಿಯಲ್ಲಿಯೇ ನೆಲೆಸಿರುವುದೋ ಅಂತಹವಳಿಗೆ ಉತ್ತಮ ಲೋಕವು ಲಭಿಸುತ್ತದೆ.

ಸೌಮ್ಯ ಅರುಂಧತಿಯೇ ! ಯಾವ ಸ್ತ್ರೀಯರು ಕಾಯಾ ಮನಸಾ ವಾಚಾ ಹೀಗೆ ತ್ರಿಕರಣಗಳಿಂದ ಪತಿಯನ್ನು ಅತಿಕ್ರಮಿಸಲಾರರೋ ಅವರಿಗೆ ಮಾತ್ರ ಪುಣ್ಯಕವ್ರತದ ಫಲ ಪ್ರಾಪ್ತವಾಗುತ್ತದೆ.

**ಕರ್ಮಣಾ ಮನಸಾ ವಾಚಾ ಪತಿಂ ನಾತಿಚರಂತಿ ಯಾಃ ।**
**ತಾಸಾ ಪುಣ್ಯಫಲಂ ಸೌಮ್ಯೇ ಪುಣ್ಯಕೈಃ ಸಮುದಾಹೃತಮ್ ॥ 11 ॥**

ಕಾಂತಿಯಿಂದ ಸ್ವರ್ಗಲೋಕವನ್ನೇ ಶೋಭಿಸುವಂತೆ ಮಾಡುವ ಅರುಂಧತಿಯೇ! ನಾನು ತಪಸ್ಸಿನಿಂದ ಯಾವ ಪುಣ್ಯವ್ರತಗಳ ವಿಧಿ-ವಿಧಾನಗಳನ್ನೂ ಸಾಕ್ಷಾತ್ಕಾರ ಮಾಡಿಕೊಂಡಿರುವೆನೋ ಅದನ್ನು ನಿನಗೆ ತಿಳಿಸುತ್ತೇನೆ.

**ಸ್ನಾತ್ವಾ ಸ್ತ್ರೀ ಪ್ರಾತರುತ್ಥಾಯ ಪತಿಂ ವಿಜ್ಞಾಪಯೇತ್ ಸತೀ ।**
**ಉಪವಾಸಾರ್ಥಮಥ ವಾ ವ್ರತಕಾರ್ಥಂ ಧೃತವ್ರತೇ ॥ 12 ॥**

ಧೃತವ್ರತಳೇ, ಪತಿವ್ರತೆಯು ಪ್ರಾತಃಕಾಲದಲ್ಲಿ ಎದ್ದ ಕೂಡಲೇ ಸ್ನಾನ ಮಾಡಿ

ಶುಚಿಯಾಗಬೇಕು. ಪತಿಯ ಬಳಿ ಬಂದು ನಾನು ಪುಣ್ಯಕವ್ರತ ಮಾಡಲಿಚ್ಛಿಸಿರುವೆನು. ಅದಕ್ಕಾಗಿ ಉಪವಾಸಾದಿಗಳನ್ನು ಮಾಡಲಿರುವೆನು. ತಾವು ಅನುಮತಿ ನೀಡಿರಿ ಎಂದು ವಿಜ್ಞಾಪಿಸಿಕೊಳ್ಳಬೇಕು.

ಪತಿಯ ಅನುಮತಿಯ ನಂತರ ಅತ್ತೆ-ಮಾವಂದಿರ ಹಾಗೂ ಸತ್ಪುರುಷರ ಪಾದಗಳಲ್ಲಿ ನಮಸ್ಕರಿಸಿ ಆಶೀರ್ವಾದ ಪಡೆಯಬೇಕು. ಇವರನ್ನು ನಿಂದಿಸಬಾರದು.[3]

ನಂತರ ದರ್ಭೆ, ಅಕ್ಷತೆಗಳಿಂದ ಯುಕ್ತವಾದ ನೀರನ್ನು ಔದುಂಬರ ಪತ್ರೆಯಲ್ಲಿ ತೆಗೆದುಕೊಂಡು ಗೋವಿನ ಬಲಕೊಂಬಿನ ಮೇಲೆ ಅಭಿಷೇಕವನ್ನು ಮಾಡಬೇಕು. ಆ ತೀರ್ಥ ಜಲವು ಕೆಳಗೆ ಬೀಳದಂತೆ ಮತ್ತೊಂದು ಪಾತ್ರೆಯಲ್ಲಿ ಅದನ್ನು ಸಂಗ್ರಹಿಸಬೇಕು. ಆ ತೀರ್ಥದಲ್ಲಿ ಅರ್ಧಭಾಗ ನೀರನ್ನು ಪತಿಯ ಸ್ನಾನಕ್ಕಾಗಿ ನೀಡಬೇಕು. ನಂತರ ಉಳಿದರ್ಧ ತೀರ್ಥೋದಕವನ್ನು ಸತಿಯು ತನ್ನ ತಲೆಯ ಮೇಲೆ ಹಾಕಿಕೊಳ್ಳಬೇಕು. ಈ ತೀರ್ಥೋದಕ ಸ್ನಾನವು ತ್ರೈಲೋಕ್ಯದಲ್ಲಿರುವ ಸಮಸ್ತತೀರ್ಥ ಸ್ನಾನ ಮಾಡಿದಂತಾಗುತ್ತದೆ. *[ತ್ರೈಲೋಕ್ಯ ಸರ್ವತೀರ್ಥೇಷು ಸ್ನಾನಮೇತತ್]*

ಈ ಗೋಶೃಂಗತೀರ್ಥ ಸ್ನಾನವು ಪುಣ್ಯಕವ್ರತವನ್ನಾಚರಿಸುವಾಗಲೂ ಇತರ ಉಪವಾಸಾದಿ ವ್ರತಾಚರಣೆಗಳಲ್ಲಿಯೂ ಪತಿಪತ್ನಿಯರಿಗೆ ಅವಶ್ಯಕವಾಗಿದೆ. *[ಏತದ್ಧಿ ಸ್ನಾನಂ ಸ್ತ್ರೀ ಪುಂಸಾಂ ಸಾಮಾನ್ಯ ವ್ರತಕೇಷು]*

---

3. 1) ನಾರೀ ಪತ್ಯನನುಜ್ಞಾತಾ ಯಾ ವ್ರತಾದಿ ಸಮಾಚರೇತ್ ।
ಜೀವಂತೀ ದುಃಖಿನೀ ಸಾ ಸ್ಯಾತ್ ಮೃತಾ ನಿರಯಮೃಚ್ಛತಿ ॥
–ಸ್ಕಾ.ಕಾಶೀ. 82/139

ಅಪೃಷ್ಟ್ವಾ ಯತ್ ಕೃತಂ ದರ್ಮ್ಯಂ ಭರ್ತಾರಂ ತತ್ಕ್ಷಯಂ ನಯೇತ್ ॥

2) ಶ್ವಶ್ರ್ವೋಃ ಗಾಲಿಪ್ರದಾ ನಾರೀ ನಿತ್ಯಂ ಕಲಹಕಾರಿಣೀ ।
ಸಾ ಜಲೌಕಾ ಚ ಯೂಕಾ ಸ್ಯಾದ್ ಭರ್ತಾರಂ ಭರ್ತ್ಸತೇ ಚ ಯಾ ॥
–ಗ.ಪು. 5/26

ಸ್ತ್ರೀಯು ಪತಿಯು ಮಾತಿಗೆ ಕೋಪದಿಂದ ಉತ್ತರ ನೀಡಿದರೆ ಊರ ನಾಯಿ ಕಾಡಿನಲ್ಲಿ ನರಿ, ಪತಿಯನ್ನು ಬಿಟ್ಟು ತಾನೊಬ್ಬಳೇ ಬೇರೆ ಇದ್ದರೆ ಗೂಬೆ. ಗಂಡನಿಗೆ 'ನೀನು' ಎಂದವಳು ಕಿವುಡಿಯಾಗುವಳು. ಗಂಡನಿಗೆ ನೀಡದೆ ತಾನೇ ತಿಂದರೆ ಹೊಲಸುಹಂದಿ. ಯಾರಿಗೂ ಕೊಡದೆ ತಾನೊಬ್ಬಳೆ ತಿಂದರೆ ತನ್ನ ಮರಿಯನ್ನೇ ನುಂಗುವ ಬೆಕ್ಕು. ತನ್ನ ತಪ್ಪನ್ನು ಗಂಡನ ಮೇಲೆ ಹಾಕಿದರೆ ಪಿಶಾಚಿಯು.

ಈ ಸಮಯದಲ್ಲಿ ವ್ರತಸ್ಥಳಾದ ಸ್ತ್ರೀಯು ಶರೀರಕ್ಕೆ ತೊಂದರೆ ಕೊಡುವ ಚುಚ್ಚು ಹಾಸಿಗೆ, ಆಸನವನ್ನಾಗಲೀ ಉಪಯೋಗಿಸಬಾರದು.

ವ್ರತೋಪವಾಸಗಳಲ್ಲಿ ತನ್ನ ಕಾಲುಗಳನ್ನು ತಾನೇ ತೊಳೆದುಕೊಳ್ಳಬೇಕು. ಬೇರೊಬ್ಬರಿಂದ ತೊಳಸಿಕೊಳ್ಳಬಾರದು *[ಸ್ವಯಂ ಪ್ರಕ್ಷಾಲನಂ ಪಾದಯೋಃ]*

ವ್ರತಾಚರಣೆಯ ಕಾಲದಲ್ಲಿ ವ್ರತಸ್ಥಳು ಕಣ್ಣೀರನ್ನು ಸುರಿಸಬಾರದು. ಕೋಪ-ದಿಂದಾಗಿ ಕಲಹದಲ್ಲಿ ತೊಡಗುವುದು ನಿಷಿದ್ಧವಾಗಿದೆ. ಕೋಪತಾಪಾದಿಗಳಿಂದ ಕೂಡಲೇ ವ್ರತದಿಂದ ಭ್ರಷ್ಟಳಾಗುವಳು.

**ಅಶ್ರುಪ್ರಪಾತೋ ರೋಷಶ್ಚ ಕಲಹಶ್ಚ ಕೃತಃ ಸತಿ ।**
**ಉಪವಾಸಾದ್ ವ್ರತಾದ್ವಾಽಪಿ ಸದ್ಯೋ ಭ್ರಂಶ್ಯಂತಿ ಹಿ ಸ್ತ್ರಿಯಃ ॥ 13 ॥**

ವ್ರತಕಾಲದಲ್ಲಿ ಸತ್ವಗುಣ ದ್ಯೋತಕವಾದ ಬಿಳಿಸೀರೆಯನ್ನುಡಬೇಕು ಕಂಚುಕವನ್ನು ಧರಿಸಬೇಕು. *[ಅಂತರ್ವಾಸೋಽಪರಂ]*

ಚರ್ಮದಿಂದ ತಯಾರಾದ ಪಾದರಕ್ಷೆ ನಿಷಿದ್ಧ, ಬದಲಾಗಿ ತೃಣಾದಿಕೃತ ಪಾದರಕ್ಷೆ ಧರಿಸಬೇಕು. ಬೆತ್ತದಿಂದ ತಯಾರಾದ ಪಾದುಕೆಯಾದರೂ ಪರವಾಗಿಲ್ಲ, ವ್ರತೋಪವಾಸಗಳ ವಿಧಿಯಿದು.

ವ್ರತಸ್ಥಳಾದ ಸಾಧ್ವಿಯು ಅಂಜನ, ಲೇಪನ, ಪರಿಮಳಾದಿ ದ್ರವ್ಯವನ್ನು ಬಿಡಬೇಕು. ಮೃತ್ತಿಕಾಶೌಚವಿರಬೇಕು. ಬಿಲ್ವೋದಕ, ಬಿಲ್ವಫಲ, ನೆಲ್ಲಿಕಾಯಿಗಳ ಪುಡಿಯನ್ನು ತಲೆಗೆ ಹಚ್ಚಿ ಸ್ನಾನ ಮಾಡಬೇಕು.

**ಬಿಲ್ವಾಮೃತಫಲೈಃ ನಿತ್ಯಂ ಶ್ರೀಫಲೈಶ್ಚ ಸಮಾಚರೇತ್ ।**
**ಪ್ರಕ್ಷಾಲನಂ ವೈ ಶಿರಸಃ ಸದಾಽಮ್ಯೆನ್ ಮಿಶ್ರಿತೈಃ ಜಲೈಃ ॥ 14 ॥**

ಅಭ್ಯಂಜನವನ್ನು ಪರಿತ್ಯಜಿಸಬೇಕು. *[ಶಿರಸೋಽಭ್ಯಂಜನಂ ನೈವ]*. ಶರೀರ ಪಾದಗಳಿಗೆ ಎಣ್ಣೆಯನ್ನು ಹಚ್ಚಬಾರದು *[ನ ಸ್ನೇಹೇನ ಪಾದಯೋಃ ಗಾತ್ರಸ್ಯ]* ಉಪವಾಸಾದಿ ವ್ರತಸ್ಥನಾರಿಯು ಎತ್ತಿನಗಾಡಿ, ಕತ್ತೆಗಳನ್ನು ಹೂಡಿರುವ ಗಾಡಿಯಲ್ಲಿಯಾಗಲೀ ಪ್ರಯಾಣ ಮಾಡಬಾರದು. ವಸ್ತ್ರವಿಲ್ಲದೆ ನಗ್ನಳಾಗಿ ಸ್ನಾನ ಮಾಡಬಾರದು *[ನ ನಗ್ನಃ ಸ್ನಾನ ಮಾಚರೇತ್]*.

ನದೀ ಸರೋವರ ತಟಾಕ ಪುಷ್ಕರಿಣಿ ತೀರ್ಥಗಳಲ್ಲಿ ಸ್ನಾನ ಮಾಡಬೇಕು. ಹೊರಗೆ ಹೋಗಲು ಅಶಕ್ಯಳಾದ ಸ್ತ್ರೀಯು ವ್ರತಕಾಲಗಳಲ್ಲಿ ನೂತನ

ಮಡಿಕೆಗಳಲ್ಲಿ ತುಂಬಿರುವ ಜಲದಿಂದ ಸ್ನಾನ ಮಾಡಬಹುದು *[ಅಲಾಭೇ ಸ್ತ್ರೀ ಘಟಸ್ನಾನಂ ಸಮಾಚರೇತ್]*.

ವ್ರತಸ್ಥಳಾದವಳು ತಲೆಯ ಮೇಲೆ ಸ್ನಾನ ಮಾಡಬೇಕು. ಶಿರಃ ಸ್ನಾನದಿಂದಾಗಿ ತಪಸ್ಸಿನ ಫಲವೆ ಬಂದಂತಾಗುತ್ತದೆ.[4]

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ**
**ಪುಣ್ಯಕವಿಧಿವರ್ಣನವೆಂಬಲ್ಲಿ**
**ಎಪ್ಪತ್ತೆಂಟನೆಯ ಅಧ್ಯಾಯ ಸಮಾಪ್ತಿ**

---

4. ಸ್ತ್ರೀಯರಿಗೆ ದಿನನಿತ್ಯ ಸ್ನಾದಲ್ಲಿ ಕಂಠ ಮಾತ್ರ ಸ್ನಾನ ವಿಹಿತ.
**ಸ್ನಾನಮಾಕಂಠಮೇವ ಸ್ಯಾದ್ ಅಜಸ್ರಂ ಶಿರಸೋ ನ ತು ।**
**ವಿಶೇಷದಿವಸೇಷ್ವೇವಾವಗಾಹಃ ಪ್ರತಿಪಾದಿತಃ ।** *–ಲೌಗಾಕ್ಷಿ*
ವ್ರತಸ್ಥಳಿಗೆ ಬಿಳಿ ವಸ್ತ್ರ ಶ್ರೇಷ್ಠ. ಇದರಿಂದ ಸೌಭಾಗ್ಯ ಅಭಿವೃದ್ಧಿಯಾಗುತ್ತದೆ.
**ಸುಭಾಗಾ ಶ್ವೇತವಸ್ತ್ರಾ ಸ್ಯಾದ್ ।**
ನೀಲಿವಸ್ತ್ರ, ಕಪ್ಪು ವಸ್ತ್ರ ವೈಧವ್ಯವನ್ನೂ, ಕೆಂಪುವಸ್ತ್ರ ರೋಗವನ್ನೂ, ಮಲಿನವಸ್ತ್ರ ದಾರಿದ್ರ್ಯವನ್ನೂ ನೀಡುತ್ತದೆ.
ಕುಪ್ಪಸ ಧರಿಸದೆ ಮಾಡಿದ ಕಾರ್ಯಗಳ ಫಲವನ್ನು ಇಲ್ವಲನು ಅಪಹರಿಸುವನು.
**ಅಕಂಚುಕ್ಯಾ ಕೃತಂ ಸರ್ವಂ ಇಲ್ವಲೋಽತ್ತೀತಿ ಗೌತಮಃ ।**

# ಅಥ ಏಕೋನಾಶೀತಿತಮೋಽಧ್ಯಾಯಃ

*ಉಮೋವಾಚ–*

**ವಿಧಿನೈತೇನ ಕೃತ್ಸ್ನೇನ ಸ್ತ್ರೀ ಸದಾ ಭರ್ತೃದೇವತಾ ।**
**ಚರೇತ್ ಸಂವತ್ಸರಂ ದಾಂತಾ ಷಣ್ಮಾಸಾನ್ ಮಾಸಮೇವ ಚ ॥ 1 ॥**

ಉಮೆಯು ಅರುಂಧತಿಗೆ ಮತ್ತು ನಿಯಮಗಳನ್ನು ಹೇಳುವಳು–

ತನ್ನ ಪತಿಯಲ್ಲಿಯೆ ಪರಮಾತ್ಮನನ್ನು ಕಾಣುವ ಪತಿದೇವತಳು. ಈ ವ್ರತವನ್ನು ಒಂದು ವರ್ಷ ಪರ್ಯಂತವಾಗಲೀ, ಆರು ತಿಂಗಳು ಅಥವಾ ಒಂದೇ ತಿಂಗಳಾಗಲಿ ಈ ವಿಧಿ ವಿಧಾನವನ್ನು ಆಚರಿಸಬೇಕು.

ವ್ರತ ಸಮಾಪ್ತಿಯಾದಾಗ ಹನ್ನೊಂದು ಮಂದಿ ಮುತ್ತೈದೆಯರನ್ನು ಆಹ್ವಾನಿಸಬೇಕು.

ವ್ರತಸ್ಥಳು ಹನ್ನೊಂದು ಮಂದಿ ಸಾಧ್ವಿಯರನ್ನು ಆಚಾರ್ಯನಿಗೆ ಜಲಧಾರಾಪೂರ್ವಕ ದಾನ ಮಾಡಬೇಕು. ದಾನಕ್ಕಿಂತ ಮೊದಲು ಹನ್ನೊಂದು ಮುತ್ತೈದೆಯರನ್ನು ಕ್ರಯ ನೀಡಿ ಅವರ ಗಂಡಂದರಿಂದ ಪಡೆಯಬೇಕು. ನಂತರ ಅವರನ್ನು ಆಚಾರ್ಯರಿಗೆ ದಾನ ಮಾಡಬೇಕು. ನಂತರ ಆಚಾರ್ಯನಿಗೂ ಧನಾದಿಗಳನ್ನೂ ನೀಡಿ ಅವರನ್ನು ಬಿಡಿಸಿಕೊಂಡು ಅವರವರ ಪತಿಗಳಿಗೆ ನೀಡಬೇಕು.

ನಂತರ ವ್ರತದ ಸಂಪೂರ್ಣ ಫಲಪ್ರಾಪ್ತಿಗಾಗಿ ಉದ್ಯಾಪನವನ್ನು ಮಾಡಬೇಕು. *[ಉತ್–ಉತ್ಕೃಷ್ಟತಯಾ ಯಾಪನಮ್]* ವ್ರತೋದ್ದೇಶ್ಯವಾಗಿ ಪ್ರಾರಂಭದಲ್ಲಿ ಹಗಲು ವ್ರತಾಂತ್ಯದಲ್ಲಿಯೂ ರಾತ್ರಿಯಲ್ಲಿಯೂ ಉಪವಾಸವಿರಬೇಕು.

ವ್ರತ ಮುಗಿದ ಮೇಲೆ ವ್ರತಸ್ಥಳ ಪತಿ ಹಾಗೂ ವ್ರತಸ್ಥಳಿಗೂ ಕ್ಷುರಕರ್ಮ ವಿಹಿತವಾಗಿದೆ. ಸ್ತ್ರೀಯರಿಗೆ ಕ್ಷುರಕರ್ಮ ನಿಷಿದ್ಧವಾದ್ದರಿಂದ ವೇಣೀದಾನವನ್ನು ಮಾಡುವುದು ಅಥವಾ ಉಗುರುಗಳನ್ನು ಕತ್ತರಿಸುವುದು.[1]

[ಈ ಶ್ಲೋಕದಲ್ಲಿ ಅದನ್ನು ಹೇಳಿಲ್ಲ. *ಆತ್ಮನಃ ಭರ್ತುಶ್ಚೈವ ಕ್ಷುರಕರ್ಮಕಾರಯೇತ್* ಎಂದನ್ವಯ.]

ಅಂದು ಸ್ನಾನಾನಂತರ ಉತ್ಸರ್ಜನವನ್ನು *[ಉದ್ಯಾಪನೆ]* ಮಾಡಬೇಕು. ಪುಣ್ಯಕದಲ್ಲಿ ವಿವಾಹದಂತೆ ವಿಧಿವತ್ತಾಗಿ ಸ್ನಾನಾದಿಗಳು, ಪುಷ್ಪಮಾಲಾಧಾರಣ ಅಲಂಕಾರಗಳು ವಿಹಿತವಾಗಿವೆ. ಕುಂಭೋದಕದಿಂದ ಸ್ನಾನ ಮಾಡಲಿರುವ ಸಾಧ್ವೀಮಣಿಯಾದರೂ ಪತಿಯ ಪಾದಕ್ಕೆರಗಿ ವೇದವಿದ್ಯಾಧಿಕಾರವಿರುವ ನನ್ನಂತಹ *[ಉಮೆಯಂತಹ]* ಸ್ತ್ರೀಯಾದರೆ ಈ ಮುಂದೆ ಹೇಳುವ ಅಬ್‌ಲಿಂಗ ಮಂತ್ರಗಳನ್ನು ಪಠಿಸಬೇಕು. ಅಥವಾ ಆಚಾರ್ಯ, ತನ್ನ ಪತಿಯಾಗಲಿ ಮಂತ್ರವನ್ನು ಹೇಳುತ್ತಿರುವಾಗ ಮನಸ್ಸಿನಲ್ಲಿ ಗಂಗಾದಿ ಸರ್ವತೀರ್ಥಾಭಿ-ಮಾನಿಗಳನ್ನು ಚಿಂತಿಸುವುದು.

ಜಲಕ್ಕೆ ಅಭಿಮಾನಿ ದೇವತೆಗಳು ಋಷಿಗಳ ತಾಯಿಂದಿರೆನಿಸಿರುವರು. ಋಷಿಗಳಿಗೆ ಮಾತ್ರವಲ್ಲ ವಿಶ್ವಕ್ಕೆ ಜನನಿಯರು *[ವಿಶ್ವಧಾತ್ರ್ಯಃ]* ಅವರು ಅಂತರಿಕ್ಷದಲ್ಲಿ ಪ್ರಕಟರಾಗಿ ಸ್ಥಾವರಜಂಗಮಾತ್ಮಕ ಪ್ರಪಂಚಕ್ಕೆ ಹರ್ಷವುಂಟು ಮಾಡುತ್ತಾರೆ *[ಮದಂತ್ಯಃ]*. ಧರ್ಮದ ರಕ್ಷಣೆಯಲ್ಲಿ ಇವರ ಪಾತ್ರ ಪ್ರಧಾನವೆನಿಸದೆ *[ಧರ್ಮಸ್ಯ ಧಾತ್ರ್ಯಃ]*.

ಸುವರ್ಣ ವರ್ಣದವರಾದ ಇವರು ಶಿವತಮವಾದ ರಸದ ಮೂಲಕ ಶ್ರೇಯಸ್ಸನ್ನುಂಟು ಮಾಡಲಿ.

---

1. 1) ನ ಸ್ತ್ರೀಣಾಂ ವಪನಂ ಕಾರ್ಯಂ ಶಿರಸೋ ಮುಂಡನಂ ತಥಾ ।
ಸರ್ವಾನ್ ಕೇಶಾನ್ ಸಮುದ್ಧೃತ್ಯ ಛೇದಯೇದಂಗುಲಿದ್ವಯಮ್ । -ಸ್ಕಾಂದ
ಏವಮೇವ ತು ನಾರೀಣಾಂ ಶಿರಸೋ ಮುಂಡನಂ ಭವೇತ್ । -ಮನು

2) ಸ್ತ್ರೀಣಾಂ ತು ಸಧವಾನಾಂ ವಪನಂ ನ ಕ್ವಾಪಿ ಪ್ರಾಯಶ್ಚಿತ್ತೇ ।
ಕಿಂತು ಸರ್ವಾನ್ ಕೇಶಾನ್ ಸಮುದ್ಧೃತ್ಯ ದ್ವ್ಯಂಗುಲಿಚ್ಛೇದನಮಾತ್ರಂ ಕಾರ್ಯಂ ।
- ಪ್ರಾಯಶ್ಚಿತ್ತೇಂದು ಶೇಖರ

**ಆಪೋ ದೇವ್ಯಃ ಋಷೀಣಾಂ ಹಿ ವಿಶ್ವಧಾತ್ರ್ಯಃ ದಿವ್ಯಾಮದಂತ್ಯೋ**
**ಯಾಃ ಶಂಖರಾಃಧರ್ಮಧಾತ್ರ್ಯಃ ।**
**ಹಿರಣ್ಯವರ್ಣಾಃ ಪಾವಕಾಃ ಶಿವತಮೇನ ರಸೇನ ಶ್ರೇಯಸೋಮಾಂ**
**ಜುಷಂತು ॥ 2 ॥**

ಈ ಮಂತ್ರವಲ್ಲದೆ ಪುರಾಣೋಕ್ತವಾದ ಮಂತ್ರಗಳೂ ಇವೆ.

ನಾನು ನನ್ನ ಪತಿಗೆ ಮಂಗಳಕಾರಿಯಾಗಿ ಇರುವಂತಾಗಲಿ ಸದ್ಗುಣಗಳ ಖಣಿಯಾಗಿಯೂ, ಧರ್ಮಿಷ್ಠಳೂ ಆಗಿದ್ದು ಪತಿಯೊಂದಿಗೆ ಅವನ ಸೇವೆ ಮಾಡುತ್ತಿರುವಂತಾಗಲಿ. ನಾನು ಮನಸ್ಸಿನಿಂದಲೂ, ಮಾತಿನಿಂದಲೂ ಕಾರ್ಯದಿಂದಾಗಲಿ ಪತಿಯ ಮೇಲೆ ಕೋಪಗೊಳ್ಳದಂತಾಗಲಿ. ಯಾವಾಗಲೂ ಅವನಿಗೆ ಅಧೀನಳಾಗಿಯೆ ಇರುವಂತಾಗಲಿ.

**ಶುಭಾವ್ಯಯಾ ಗುಣಿನೀ ಯುಕ್ತಧರ್ಮಾ ಭರ್ತ್ರಾ ಸಾಕಂ ಮಮ**
**ದಾಸ್ಯಾ ವರೇಣ ।**
**ಮಾ ಕರ್ಮಣಾ ಮನಸಾ ವಾಪಿ ವಾಚ ಭರ್ತುಃ ಭವೇಯಂ**
**ರುಷತೀಂ ಸ್ಯಾಂ ವಶಾಂಗಾ ॥ 3 ॥**

ಭರ್ತುಃ ಮಮ ಕಲ್ಯಾಣಕರೀ ಭವೇಯಂ, **ಅವ್ಯಯಾಃ ಅಕ್ಷೀಣಾಧನಾದಿಭಿಃ ವರೇಣ** = ವರಕ್ಕಾಗಿ ದಾಸಿಯಂತೆ ದುಡಿಯುವವಳು. *ಕಾರ್ಯೇಷು ದಾಸೀ ಭವೇಯಂ ಅನ್ಯತ್ರ ರುಷತೀ–ಕ್ಷುದ್ಧಾಽಸಿ ಭರ್ತುಃ ವಶಂಗಾ ಭವೇಯಂ.*

ಇತರ ಸವತಿಯರಿದ್ದರೆ ನಾನು ಸವತಿಯರಿಗಿಂತಲೂ ನನ್ನ ಸ್ಥಾನ ಅಧಿಕವಾಗಿರಲಿ, *[ಸಪತ್ನೀನಾಂ ಅಧಿ ಭವೇಯಂ]* ಪುತ್ರವತಿಯೂ ಸೌಭಾಗ್ಯವಂತಳೂ, ಸುಂದರರೂಪಳೂ ಆಗುವಂತಾಗಲೀ *[ಸಪುತ್ರಾ ಸುಭಗಾ ಸ್ಯಾಂ]* ಅನ್ನದಾನಾದಿಗಳಲ್ಲಿ ಕೊಡಗೈ ಹಸ್ತಳಾಗಲಿ *[ಸಂಪನ್ನ ಹಸ್ತಾ]* ನನಗೆ ಯಾವಾಗಲೂ ಮತ್ತೊಬ್ಬರ ದೋಷಗಳನ್ನು ಎಣಿಸದಿರುವ ಬುದ್ಧಿ ಇರುವಂತಾಗಲಿ, ನನಗೆ ದಾರಿದ್ರ್ಯವು ಬರುವುದೇ ಬೇಡ.

ನನ್ನ ಪತಿಯು ಯಾವಾಗಲೂ ನನ್ನ ವಿಷಯದಲ್ಲಿ ಸುಮುಖನಾಗಿರಲಿ. ನನ್ನನ್ನು ಎದುರು ನೋಡುತ್ತಿರುವನಂತಾಗಲಿ. ನನ್ನ ಮೇಲೆ ಅನುರಕ್ತನಾಗಿರಲಿ. ಅವನ ಮತಿ ಹಾಗೂ ಗತಿ ನನ್ನ ಕಡೆಗೆ ವಾಲಿರಲಿ.

**ಪತಿಶ್ಚ ಮೇ ಸ್ಯಾತ್ ಸುಮುಖೋ ಮತ್ಪ್ರತೀಕ್ಷೋ ನಿತ್ಯಂ**
**ಮದ್ಭಕ್ತಃ ಸ್ಯಾನ್ ಮನ್ಮತಿರ್ಮದ್ಗತಿಶ್ಚ ॥ 4 ॥**

ನಾವಿಬ್ಬರೂ ಗೇಣಿವಕ್ಕಿಗಳಂತೆ ಪರಸ್ಪರ ಅನುರಾಗವಿರುವಂತಾಗಲೀ ನಮ್ಮಿಬ್ಬರಲ್ಲಿ ಎಂದೂ ವಿರಸವುಂಟಾಗದಿರಲಿ *[ಮನೋವಿರಾಗಃ ನ ಸ್ಯಾತ್]*. ಸಾಧು ಸಜ್ಜನರ ವ್ಯವಹಾರದಂತೆ ನಾವಿರುವಂತಾಗಲಿ.

ಉತ್ತಮ ಸ್ತ್ರೀಯರು ಪತಿಸೇವಾ ಪ್ರಭಾವದಿಂದಾಗಿ ಹುಟ್ಟಿದಮನೆ – ಮೆಟ್ಟಿದ ಮನೆ ಉಭಯಕುಲವನ್ನೂ ಬೆಳಗುವರೋ *[ಕನ್ಯೋದಿತಾ ಬಿತಕುಲದ್ವ-ಯತಾರಿಣೀತಿ]*. ಪಾತಿವ್ರತ್ಯದಿಂದಾಗಿ ವಿಶ್ವವನ್ನೇ ಧಾರಣ ಮಾಡಿರುವರೋ ಅಂತಹ ಸಾಧ್ವಿಗಳು ಹೊಂದುವ ಉತ್ತಮ ಲೋಕ ನನಗೂ ಸಿಗುವಂತಾಗಲಿ *[ಉತ್ತಮಾನಾಂ ಲೋಕಾನ್ ವ್ರಜೇಯಂ]*.

ಭೂಮಿ ವಾಯುರಾಕಾಶ ಪೃಥಿವೀ ಅಪ್ ವಾಯು ಆಕಾಶ ಅಗ್ನಿಗಳು, ಕ್ಷೇತ್ರಜ್ಞನಾದ ಹರಿಯು, ಪ್ರಕೃತಿ ಮಹತ್ತತ್ವ-ಅಹಂಕಾರಾಭಿಮಾನಿಗಳೆಲ್ಲರೂ ನನಗೆ ಸಾಕ್ಷೀಭೂತರಾಗಿದ್ದಾರೆ. ಇವರೆಲ್ಲರೂ ನಾನು ಮಾಡಿದ ವ್ರತವನ್ನೂ ನನ್ನ ನಿಶ್ಚಯವನ್ನೂ ಖಂಡಿತಾ ಸ್ಮರಿಸದೆ ಇರಲಾರರು.

ಯಾವ ದೇವತೆಗಳಿಂದಲೇ ದೇಹಿಗಳಿಗೆ ಸತ್ವಾದಿ ಗುಣಗಳು, ಕರ್ಮಬೀಜ-ಗಳಿಂದ ಸಹಿತವಾಗಿ ಈ ಭೌತಿಕ ಶರೀರವನ್ನು ನಿರ್ಮಿಸಿದ್ದಾರೆಯೋ ಆ ಅಭಿಮಾನಿಗಳು ನಾನು ಮಾಡಿರುವ ವ್ರತಕ್ಕೆ ಸಾಕ್ಷಿಯೆನಿಸಿರುವರು.

**ಚಂದ್ರಾದಿತ್ಯೌ ಪುಣ್ಯಸಾಕ್ಷೀ ಯಮಶ್ಚ ದಿಶಃ ಸರ್ವಾಃ ದಶಚಾತ್ಮಾ**
**ಚ ಮೇಽಯಂ ।**
**ಸಂತ್ವೇತೇ ವೈ ಸಾಕ್ಷಿಣಃ ಸರ್ವಸಂಸ್ಥಾ ವ್ರತೇ ಚಾಸ್ಮಿನ್**
**ನಿಶ್ಚಯೇ ಚಾಪಿ ನಿತ್ಯಂ ॥ 5 ॥**

ನಾನು ಮಾಡಿದ ವ್ರತಕ್ಕೆ ಸಾಕ್ಷೀಭೂತರಾಗಿ ಆದಿತ್ಯ ಚಂದ್ರರು ದಶದಿಗ್ದೇವತೆಗಳು ಯಮಧರ್ಮರಾಯನೂ, ನನ್ನ ಸಾಕ್ಷಿಂದ್ರಿಯವೂ ನಿಂತಿರುವುವು.

ಪುರಾಣದಲ್ಲಿ ಹೇಳದ ಈ ಮಂತ್ರಗಳನ್ನು ವ್ರತ ಪ್ರಾರಂಭವಾದ ದಿನದಿಂದಾರಂಭಿಸಿ ಪಠಿಸುತ್ತಾ ಸಮಸ್ತ ವಸ್ತುಗಳನ್ನು ಅಭಿಮಂತ್ರಿಸಬೇಕು.

ಸ್ನಾನ ಮಾಡಿದ ನಂತರ ತನ್ನ ಪತಿಗೆ ತಾನೇ ಕತ್ತರಿಸಿ ಸಿದ್ಧಪಡಿಸಿದ *[ಕರ್ತ್ಯಂ]* ಎರಡು ವಸ್ತ್ರಗಳನ್ನು ಕೊಡಬೇಕು. ತಾನು ತಯಾರಿಸಲಾಗದಿದ್ದಲ್ಲಿ ಬೇರೆಯವರು ತಯಾರಿಸಿದ ವಸ್ತ್ರಗಳನ್ನಾದರೂ ಕೊಡಬಹುದು.

ವಸ್ತ್ರಗಳಾದರೂ ಶುಭ್ರವಾಗಿದ್ದು, ಶ್ವೇತಬಣ್ಣದ್ದು ಆಗಿರಬೇಕು. ಆ ವಸ್ತ್ರಕ್ಕೆ ತಾನು ತೆಗೆದ ದಾರದೊಡನೆ ಸೇರಿಸಿ ಕೊಡಬೇಕು.

**ತತೋದ್ವಿಜಂ ಶುಚಿಂ ದಾಂತಂ ಜ್ಞಾನ ವಿಜ್ಞಾನ ಕೋವಿದಮ್ ।**
**ಭೋಜಯೇಚ್ಚ ಯಥಾಶಕ್ತ್ಯಾ ಸಹಭರ್ತ್ರಾ ಸುಮಧ್ಯಮೇ ॥ 6 ॥**

ನಂತರ ಜ್ಞಾನ–ವಿಜ್ಞಾನ ಕೋವಿದನೂ ಇಂದ್ರಿಯ ನಿಗ್ರಹವುಳ್ಳವನೂ ಅಂತರಂಗ ಬಹಿರಂಗ ಶುಚಿವುಳ್ಳ ಬ್ರಾಹ್ಮಣನನ್ನು ತನ್ನ ಪತಿಯಿಂದ ಕೂಡಿಸಿ ಭೋಜನ ಮಾಡಿಸಬೇಕು.

ಭೋಜನಾನಂತರ ಆ ದ್ವಿಜನಿಗೂ ವಸ್ತ್ರವನ್ನು, ಹಾಸಿಗೆಯನ್ನೂ, ಮಣೆಯನ್ನೂ, ಗೃಹವನ್ನೂ, ಧ್ಯಾನವನ್ನೂ, ಆಭರಣಾದಿಗಳನ್ನು ನೀಡಬೇಕು. ತಿಲಮಿಶ್ರಿತ ರತ್ನಮಯ ಪರ್ವತವನ್ನು ದಾನವಾಗಿ ನೀಡಬೇಕು.

ಒಂದು ಗೋವನ್ನಾದರೂ ದಾನ ಮಾಡಬೇಕು. ಲವಣ, ಬೆಣ್ಣೆ, ಬೆಲ್ಲ, ಜೇನುತುಪ್ಪಗಳಲ್ಲಿಟ್ಟು, ಲಕ್ಷ್ಮೀನಾರಾಯಣ ಸುವರ್ಣ ಪ್ರತಿಮೆಗಳನ್ನು ದಾನ ಮಾಡಬೇಕು. ಹೀಗೆ ದಾನ ಮಾಡಿದವರಿಗೂ ಎಂದೂ ಯಾವ ಜನಮದಲ್ಲಿಯೂ ಪತಿವಿಯೋಗವುಂಟಾಗುವುದಿಲ್ಲ.

ದಾನವು ದೇಶ ಕಾಲ ಯೋಗ್ಯತೆಯನ್ನು ನೋಡಿ ನೀಡಬೇಕಾಗುತ್ತದೆ. ಕೃಷ್ಣಾಜಿನ, ಎಳ್ಳು, ಗೋವು, ವಸ್ತ್ರ ಇವುಗಳು ಇರಲೇಬೇಕು.

ಆದರೆ ದಾನ ಮಾಡುವಾಗ ಪತಿಯ ಅನುಮತಿಯನ್ನು ಅವಶ್ಯ ಪಡೆಯಬೇಕು. ಪತಿಯ ಅನುಮತಿಯಂತೆ ಕಪಿಲ ಗೋವನ್ನು ಕಂಚಿನ ಪಾತ್ರೆ ಸಹಿತ ದಾನ ಮಾಡಬೇಕು. ಕನ್ನಡಿ, ದರ್ಭಾಸನ ಕೊಡಬೇಕು.

ಪುಣ್ಯಕವ್ರತ ಮಾಡಿದವಳು ತನ್ನವರಲ್ಲಿಯೆ ಶ್ರೇಷ್ಠಳೆನಿಸುವಳು. ಈ ವ್ರತ ಮಾಡಿ ವಸ್ತುಗಳನ್ನು ದಾನ ಮಾಡಿದವಳು ಸರ್ವಕಾಮನೆಗಳನ್ನೂ ಹೊಂದುವಳು.

**ಏತದ್ ದತ್ವಾ ಸರ್ವಕಾಮಾನಾಪ್ನೋತಿ ವರವರ್ಣಿನಿ ॥ 7 ॥**

ಪುತ್ರವತಿಯೂ ಭಾಗ್ಯವಂತಳೂ ರೂಪವತಿಯೂ, ಶುದ್ಧಹಸ್ತಳೂ ಅರುಂಧತಿಯೇ! ಈ ವ್ರತವು ನನ್ನಿಂದಲೇ ಮೊಟ್ಟ ಮೊದಲು ಮಾಡಲ್ಪಟ್ಟಿತು. ಇದರಿಂದಾಗಿ 'ಉಮಾವ್ರತ'ವೆಂದೆ ಭೂಮಿಯಲ್ಲಿ ಪ್ರಖ್ಯಾತವಾಗಿದೆ.

ಈ ವ್ರತದಿಂದಾಗಿಯೆ ಪರಮೇಶ್ವರನು ನನ್ನನ್ನು ಪಟ್ಟಮಹಿಷಿಯನ್ನಾಗಿ ಮಾಡಿಕೊಂಡನು. ದೇಶಕಾಲಾನುಸಾರ ಸ್ತ್ರೀಯರಿಗೂ ದಾನಾದಿಗಳನ್ನು ಮಾಡಬೇಕು. ವ್ರತ ಮುಗಿದ ಮೇಲೆ ತಂದ ವಸ್ತುಗಳನ್ನು ಸಮವಾಗಿ ವಿಭಾಗಿಸಿ ಬ್ರಾಹ್ಮಣರಿಗೆ ಕೊಡಬೇಕು. ಬ್ರಾಹ್ಮಣರಿಗೆ ಪಾಯಸದಾನ ವಿಶೇಷ ಫಲ. ವ್ರತಾಂಗ ಪ್ರಾಣಿ ವಧೆ ನಿಷಿದ್ಧವು.

ಈ ವ್ರತದಿಂದಾಗಿ ಪುತ್ರರನ್ನು ಬೇಡಿದ ಯುವತಿಯು ಜ್ಯೇಷ್ಠ ಆಷಾಢಗಳ ಪೂರ್ಣಿಮಾ ದಿನದಲ್ಲಿ ಕರಕವನ್ನು ದಾನ ಮಾಡಬೇಕು. ನೀರು ಬರುವ ಹೂಜಿಯಂತಹ ಪಾತ್ರೆಯು ಕರಕವೆನಿಸುತ್ತದೆ. ಶರ್ಕರಾಪಾನಕವನ್ನೂ ತುಂಬಿಸಿ ದಾನ ಮಾಡಬಹುದು. ತುಪ್ಪ, ಹಾಲು, ಮೊಸರು ಅಥವಾ ಜಲವನ್ನಾಗಲಿ ಈ ಗಿಂಡಿಗಳಲ್ಲಿ ತುಂಬಿ ದಾನ ಮಾಡಬಹುದು. ಇದರಿಂದ ಪುತ್ರ ಲಾಭ. ಮನಸ್ಸಿಗೆ ಎಷ್ಟು ಗಿಂಡಿಗಳನ್ನು ಕೊಡಬೇಕೆನಿಸುವುದೊ ಅಷ್ಟನ್ನೂ ದಾನ ಕೊಡಬಹುದು. ಹೆಣ್ಣು ಮಗು ಬೇಕೆಂಬ ಹಂಬಲವುಳ್ಳವರು. ಇವೆಲ್ಲ ದಾನವನ್ನು ಬ್ರಾಹ್ಮಣ ಸ್ತ್ರೀಯರಿಗೆ ಗಿಂಡಿಗಳನ್ನು ದಾನ ಮಾಡಬೇಕು.

ದಾನದಲ್ಲಿ ಗೋವು, ಸುವರ್ಣಗಳಲ್ಲದೆ ಯಜ್ಞೋಪವೀತಗಳು ಪ್ರಶಸ್ತವು. ಪುಂನಕ್ಷತ್ರವಿರುವ ದಿನಗಳಲ್ಲಿ ದಾನ ಮಾಡಿದ ಗಿಂಡಿಯು ಪುತ್ರನನ್ನೆ ನೀಡುತ್ತದೆ. ರೋಹಿಣ್ಯಾದಿ ಸ್ತ್ರೀ ನಕ್ಷತ್ರದಲ್ಲಿ ಗಿಂಡಿಯನ್ನು ದಾನ ಮಾಡಿದರೆ ಹೆಣ್ಣು ಮಗುವೆ ಹುಟ್ಟುತ್ತದೆ.

ಈ ವ್ರತವನ್ನು ಮಾಡುವವಳು ವ್ರತವು ಮುಗಿಯುವವರೆಗೂ ನೂತನ ಧಾನ್ಯ ಹಾಗೂ ನೂತನ ಫಲಗಳನ್ನು ಭಕ್ಷಿಸಬಾರದು. ಒಂದೇ ಹೊತ್ತು ಭುಂಜಿಸಬೇಕು. ಸೋರೆಕಾಯಿ, ಕಲ್ಲಂಗಡಿ ಮೊದಲಾದವು ಒಂದು ವರ್ಷ ನಿಷಿದ್ಧ *[ಅಲಾಬುಂ ವರ್ಜಯೆನ್ನಾರೀ].*

ವ್ರತಸ್ಥಳಿಗೆ ಬಳಸೇಸೊಪ್ಪು ನಿಷಿದ್ಧ ಹಾಗೂ ಏಕಭುಕ್ತದಿಂದ ದಿನ ಕಳೆಯಬೇಕು. ರಾತ್ರಿ ಚಂದ್ರ ನಕ್ಷತ್ರಗಳು ದರ್ಶನವಾದ ಮೇಲೆ ಭೋಜನ ವಿಹಿತ. ಹಗಲು

ಉಪವಾಸ. ಹೀಗೆ ಒಂದು ಹೊತ್ತು ಹಗಲು ಬಿಸಿಲಿನಲ್ಲಿ ಮಾತ್ರ ಮಾಗಿದ ಹಣ್ಣುಗಳನ್ನು ಸ್ವೀಕರಿಸುವುದು ಐಚ್ಛಿಕ. ಒಂದು ವರ್ಷಾನಂತರ ತರಕಾರಿಗಳನ್ನು ದಾನ ಮಾಡುವುದು. ಇದರಿಂದ ಸುಪುತ್ರವತೀಯಾಗುವಳು. ವ್ರತಾನಂತರ ಸೂರ್ಯಚಂದ್ರ ಗ್ರಹಗಳ ಪ್ರತಿಮೆಗಳನ್ನು ಸದಕ್ಷಿಣಾಕ ದಾನ ಮಾಡುವುದು.

ಮಂಗಳಮಯಿಯಾದ ಸ್ತ್ರೀಯು ಪೂರ್ಣಿಮೆಯಂದು ಚಂದ್ರೋದಯಾನಂತರ ಅಕ್ಷತೆ ದರ್ಭೆಯೊಂದಿಗೆ ದೇವತೆಗಳಿಗೆ ಅರ್ಘ್ಯ ಪ್ರದಾನ ಮಾಡಬೇಕು.

**ಪೌರ್ಣಮಾಸ್ಯಾಂ ತು ಸತತಂ ಪ್ರಾಪ್ತೇ ಸೋಮೋದಯೇಽಂಗನಾ ।**
**ಅರ್ಘ್ಯಂ ದದ್ಯಾತ್ ಸುಮನಸಾಂ ಸಾಕ್ಷತಂ ಸಕುಶಂ ತಥಾ ॥ 8 ॥**

ಮೊಸರಿನಿಂದ ಮಿಶ್ರಿತವಾದ ಜವೆಗೋಧಿ ಅನ್ನವನ್ನು ನಿವೇದಿಸಬೇಕು. ಹೀಗೆ ನಿಯಮದಿಂದ ಅಚರಿಸುವ ಸ್ತ್ರೀಯು ಸಕಲೇಷ್ಟಗಳನ್ನೂ ಹೊಂದುವಳು. ವ್ರತಸ್ಥಳು ಬ್ರಾಹ್ಮಣನಿಗೆ ಸುವರ್ಣದಾನವನ್ನು ಮಾಡಬೇಕು. ಇದರಿಂದಾಗಿ ಅವಳು ಸೌಭಾಗ್ಯವಂತಳೂ, ಸುಂದರತಮಳೂ ಕಾಂತಿಯಿಂದ ಶೋಭಿಸುವಳು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಪುಣ್ಯಕವಿಧಿ ನಿರೂಪಣೆಯೆಂಬಲ್ಲಿ
ಎಪ್ಪತ್ತೊಂಬತ್ತನೆಯ ಅಧ್ಯಾಯ ಸಮಾಪ್ತಿ

## ಅಥ ಅಶೀತಿತಮೋಽಧ್ಯಾಯಃ

ನಿರ್ವೇಷ್ಟವ್ಯಂ ಶರೀರಂ ಯೈಃ ವ್ರತಕೈಃ ಪುಣ್ಯಕೈರಪಿ ।
ಅರುಂಧತಿ! ಪ್ರವಕ್ಷ್ಯಾಮಿ ಸಹೈತಾಭಿಃ ವರೇಣ ತು ॥ 1 ॥

ಅರುಂಧತಿಯೇ ಯಾವ ಪುಣ್ಯಕವ್ರತಾಚರಣೆಯಿಂದಾಗಿ ಶರೀರವನ್ನು ಸುಖವಾಗಿಟ್ಟುಕೊಳ್ಳಬಹುದೋ ಹಾಗೂ ಅವುಗಳನ್ನು ಆಚರಿಸಬೇಕಾದ ತಿಥಿಗಳನ್ನು, ಅವುಗಳ ಫಲವನ್ನು ಹೇಳುವೆ. ಕೇಳು.

ಕೃಷ್ಣಾಷ್ಟಮೀಂ ಯಾ ಕ್ಷಿಪತಿ ಸ್ಯಾದ್ವಾ ಮೂಲಫಲಾಶಿನೀ ।
ಬ್ರಾಹ್ಮಣಾಯೈಕಮಶನಂ ಸ್ವಂ ದತ್ತ್ವಾ ಭರ್ತೃ ದೇವತಾ ॥ 2 ॥

ಶುಕ್ಲವಸ್ತ್ರಾ ಶುಭಾಚಾರಾ ಗುರುದೈವತ ಪೂಜಕಾ ।
ಏವಂ ಸಂವತ್ಸರಂ ಕೃತ್ವಾ ತತೋ ದದ್ಯಾದ್ ದ್ವಿಜಾತಯೇ ॥ 3 ॥

ಗೋವಾಲರಜ್ಜು ಸುಕೃತಂ ಚಾಮರಂ ಚ ಧ್ವಜಂ ತಥಾ ।
ದಕ್ಷಿಣಾ ಪೂರ್ಣಮಿಷ್ಟಾನ್ನಂ ಶಕ್ತ್ಯಾ ವಾಪಿ ಶುಚಿವ್ರತೇ ॥ 4 ॥

ಊರ್ಮಿ ಮಂತಃ ಸ್ವರಾಲಾಗ್ರ್ಯಾಃ ಶ್ರೋಣೀದೇಶಾವಲಂಬಿನಃ ।
ತಸ್ಯಾ ಭವಂತಿ ಕೇಶಾಸ್ತು ಭಕ್ತಿಮತ್ಯಾ ಹಿ ಭರ್ತರಿ ॥ 5 ॥

ಅರುಂಧತಿಯೇ! ಸಾಧ್ವಿಯು ಕೃಷ್ಣಪಕ್ಷದ ಅಷ್ಟಮೀ ದಿನದಂದು ತನ್ನ ಒಂದು ಹೊತ್ತಿನ ಭೋಜನವನ್ನು ಬ್ರಾಹ್ಮಣನಿಗೆ ಸಮರ್ಪಿಸಿ ತಾನು ಮಾತ್ರ ಉಪವಾಸವಿರುವಳೋ *[ಕ್ಷಿಪತಿ = ಉಪೋಷಣೇನ ನಯತಿ]* ಅಥವಾ ಹಣ್ಣು ಹಂಪಲುಗಳಿಂದ ಆ ದಿನ ಕಳೆಯುವಳೋ ಹಾಗೂ ಶ್ವೇತವಸ್ತ್ರಧಾರಿಣಿಯಾಗಿ

ಸದಾಚಾರಿಣಿಯಾಗಿ ಗುರುಗಳ ಹಾಗೂ ದೇವತೆಗಳನ್ನು ಅರ್ಚಿಸುವಳೋ ಅಂತಹವಳು ಒಂದು ವರ್ಷ ಪರ್ಯಂತ ಮಾಡುತ್ತಾ ವರ್ಷಾಂತ್ಯದಲ್ಲಿ ಬ್ರಾಹ್ಮಣನಿಗೆ ಮೃಷ್ಟಾನ್ನ ಭೋಜನದಿಂದ ತೃಪ್ತಿಪಡಿಸಬೇಕು.

ಗೋಬಾಲದಷ್ಟಾದರೂ ಕೂದಲಿರುವ ಚಾಮರವನ್ನು, ಧ್ವಜವನ್ನೂ ಸದಕ್ಷಿಣಾಕವಾಗಿ ದಾನ ಮಾಡಬೇಕು. ಅಂತಹ ಪತಿಭಕ್ತಳಾದ ಸ್ತ್ರೀಯ ತಲೆಗೂದಲು ಕಟಿಪ್ರದೇಶವನ್ನೂ ಮೀರಿ ಕೆಳಗಿನವರೆಗೂ ಹರಡಿರುತ್ತದೆ ಹಾಗೂ ಕಪ್ಪಾದ ಗುಂಗುರು ಕೂದಲಿನಿಂದ ಸುಂದರವಾಗಿರುತ್ತದೆ.

**ಶಿರೋ ನಿರ್ವೇಷ್ಟುಕಾಮಾ ತು ಗೋಮಯೇನ ಶಿರಃ ಸತೀ ।**
**ಪ್ರಕ್ಷಾಲಯೇನ್ ಮಲಂ ಧಾತ್ರ್ಯಾ ಬಿಲ್ವೇನ ಶ್ರೀಫಲೇನ ಚ ॥ 6 ॥**
**ಗೋಮೂತ್ರಂ ಚ ಸದಾ ಪ್ರಾಶ್ಯೇತ್ ಶಿರಃ ಸ್ನಾನಂ ಚ ಮಿಶ್ರಯೇತ್ ।**
**ಕೃಷ್ಣಾಂ ಚತುರ್ದಶೀಂ ತ್ವೇತತ್ ಕರ್ತವ್ಯಂ ವರವರ್ಣಿನಿ ॥ 7 ॥**
**ಭವತ್ಯವಿಧವಾ ಚೈವ ಸುಭಗಾ ವಿಜ್ವರಾ ತಥಾ ।**
**ಶಿರೋರೋಗೈಃ ನೈವ ಚಾಸ್ಯಾಃ ಶರೀರಮಭಿತಪ್ಯತೇ ॥ 8 ॥**

ತನ್ನ ಶಿರಸ್ಸು ಯಾವುದೇ ತೊಂದರೆಗೀಡಾಗಬಾರದೆಂದು ಹಂಬಲಿಸುವವಳು. ಸೆಗಣಿ, ನೆಲ್ಲಿ, ಬಿಲ್ವಫಲ, ಬೇಲ ಇವುಗಳನ್ನು ಸಮವಾಗಿ ಮಿಶ್ರಣ ಮಾಡಿ ಕಲೆಸಿ ತಲೆಗೆ ಹಚ್ಚಿಕೊಂಡು ಸ್ನಾನ ಮಾಡುವುದು.

ಸ್ನಾನದ ನೀರಿಗೆ ಗಂಜಲವನ್ನು ಬೆರೆಸಬೇಕು ಹಾಗೂ ಗೋಮೂತ್ರ ಪಾನವನ್ನು ಮಾಡಬೇಕು. ಹೀಗೆ ಕೃಷ್ಣಪಕ್ಷದ ಚತುರ್ದಶಿಯಂದು ತಪ್ಪಿಸದೆ ಮಾಡಬೇಕು. ಇದರಿಂದಾಗಿ ವೈಧವ್ಯವನ್ನು ಹೊಂದದೆ ಸೌಭಾಗ್ಯಶಾಲಿನಿಯಾಗಿರುತ್ತಾಳೆ. ಇವಳಿಗೆ ಜ್ವರಾದಿ ಉಪತಾಪವಿರುವುದಿಲ್ಲ, ತಲೆನೋವು ಎಂದೂ ಪೀಡಿಸುವುದಿಲ್ಲ.

## ಸುಂದರಲಲಾಟ ಪ್ರಾಪ್ತಿವ್ರತ

**ದರ್ಶನೀಯಂ ಲಲಾಟಂ ಯಾ ಕಾಂಕ್ಷತಿ ಸ್ತ್ರೀ ಶುಚಿಸ್ಮಿತೇ ।**
**ತಿಥಿಂ ಪ್ರತಿಪದಂ ನಿತ್ಯಂ ಸಾಕ್ಷಿದೇಕಭೋಜನಾ ॥ 9 ॥**
**ಪಯಸಾ ಚ ತಥಾಶ್ನೀಯಾದ್ ಯಾವತ್ ಸಂವತ್ಸರೋ ಗತಃ ।**
**ಬ್ರಾಹ್ಮಣಾಯ ತತೋ ದದ್ಯಾತ್ ಪಟಂ ರೂಪ್ಯಮಯಂ ಶುಭಮ್ ॥ 10॥**

**ಲಲಾಟಂ ರೂಪಸಂಪನ್ನ ಮಾಪ್ನೋತಿ ಸ್ತ್ರೀ ಸುಮಧ್ಯಮಾ ॥ 11 ॥**

ಸುಂದರವಾದ ಹಣೆಯನ್ನು ಅಪೇಕ್ಷಿಸುವವಳು ಪ್ರತಿಪಾಡ್ಯದಂದು ಒಪ್ಪತ್ತು ಹಾಲನ್ನು ಮಾತ್ರ ಭೋಜನ ಮಾಡಬೇಕು. ಹೀಗೆ ಒಂದು ಸಂವತ್ಸರ ಮಾಡಿ ಬ್ರಾಹ್ಮಣನಿಗೆ ಸುವರ್ಣ ಅಥವಾ ಬೆಳ್ಳಿಯ ಮುಂದಲೆಗೆ ತೊಡಿಸುವ ಆಭರಣವನ್ನು ದಾನ ಮಾಡಬೇಕು. ಸುಂದರವಾದ ಹಣೆಯನ್ನು ಹೊಂದುವಳು.

## ಸುಂದರಹುಬ್ಬಿಗಾಗಿ ವ್ರತ

**ಸತತಂ ಸ್ತ್ರೀ ದ್ವಿತೀಯಾಯಾಂ ಭ್ರುವೋರಿಚ್ಛೇತ್ ಸುರೂಪತಾಮ್ ।**
**ಅನಂತರೋಪವಾಸೇನ ಶಾಕಭಕ್ತಾಶನಾ ಸತೀ ॥ 12 ॥**

ಸುಂದರವಾದ ಹುಬ್ಬುಗಳಿಗಾಗಿ ಇಚ್ಛಿಸುವ ಸ್ತ್ರೀಯು ಬಿದಿಗೆಯಂದು ಒಪ್ಪೊತ್ತು ಉಪವಾಸವಿದ್ದು ರಾತ್ರಿಯಲ್ಲಿ ತರಕಾರಿಸಹಿತ ಭೋಜನ ಮಾಡಬೇಕು. ಒಂದು ವರ್ಷ ಹೀಗೆ ಮಾಡಿ, ಹಣ್ಣುಗಳನ್ನು ಉದ್ದಿನಕಾಳನಷ್ಟು ಚಿನ್ನವನ್ನು ಲವಣವನ್ನೂ, ಘೃತಪೂರ್ಣ ಕಂಚಿನ ಪಾತ್ರೆಯನ್ನೂ ವಿಪ್ರನಿಗೆ ದಾನ ಮಾಡಬೇಕು.

## ಸುಂದರ ಕರ್ಣಗಳಿಗಾಗಿ

**ಆತ್ಮನಃ ಶೋಭನೌ ಕರ್ಣೌ ಇಚ್ಛತೀ ಸ್ತ್ರೀ ಸುಮಧ್ಯಮಾ ।**
**ನಕ್ಷತ್ರೇ ಶ್ರವಣೇ ಪ್ರಾಪ್ತೇ ಧ್ರುವಂ ಭುಂಜೀತ ಯಾವಕಮ್ ॥ 13 ॥**

ಸಾಧ್ವಿಯು ಸುಂದರವಾದ ಕಿವಿಗಳನ್ನು ಹೊಂದಲಿಚ್ಛಿಸಿದರೆ ಶ್ರವಣ ನಕ್ಷತ್ರದ ದಿನದಂದು ಜವೆಗೋಧಿಯ ಗಂಜಿಯನ್ನು ಮಾತ್ರ ಸ್ವೀಕರಿಸಬೇಕು. ಒಂದು ವರ್ಷ ಮುಗಿದ ಮೇಲೆ ಎರಡು ಚಿನ್ನದ ಕಿವಿಗಳನ್ನು ಮಾಡಿಸಿ, ತುಪ್ಪದಿಂದ ಮಿಶ್ರಿತ ಕ್ಷೀರದಲ್ಲಿಟ್ಟು, ವಿಪ್ರನಿಗೆ ದಾನ ಮಾಡುವುದು.

## ಸುಂದರನಾಸಿಕಾ ಪಡೆಯಲು

ಯಾವ ಸಾಧ್ವಿಯು ಸುಂದರವಾದ ವಕ್ರವಲ್ಲದ ವ್ಯಾಧಿರಹಿತವಾದ ಹಣೆಗೆ ಅಂಟಿಕೊಂಡಿರುವ ಮೂಗನ್ನು ಅಪೇಕ್ಷಿಸುವಳೋ ಅವಳು ಎಳ್ಳಿನ ಗಿಡಗಳಿಗೆ ನಿತ್ಯವೂ ನೀರೆರೆಯಬೇಕು *[ತಿಲಗುಲ್ಮಂ ಸದಾ ಸಿಂಚೇತ್]*. ಅವುಗಳು ಹೂ ಬಿಡುವವರೆಗೂ ನೀರೆರೆಯುತ್ತಿರಬೇಕು. ನೀರು ಹಾಕಲು ಪ್ರಾರಂಭಿಸುವ ಹಿಂದಿನ ದಿನಪೂರ್ತಿ ಉಪವಾಸವಿರಬೇಕು. ಹೂಬಿಟ್ಟ ಮೇಲೆ ಹೂವು-ಗಳೊಂದಿಗೆ ತುಪ್ಪದ ಪಾತ್ರೆಯಲ್ಲಿಟ್ಟು ಅದನ್ನು ದಾನ ಮಾಡಬೇಕು.

## ಸುನಯನಕ್ಕಾಗಿ

ಚಂದ್ರನ ಪುತ್ರಿ ಅರುಂಧತಿಯೇ! ಯಾವ ಸ್ತ್ರೀಯು ಸುಂದರ ಆಕರ್ಷಕ ನೇತ್ರಗಳನ್ನು ಪಡೆಯುವ ಇಚ್ಛೆವುಳ್ಳವಳೋ ಅವಳು ಒಂದು ವರ್ಷ ಪೂರ್ತಿ ಕೇವಲ ಹಾಲನ್ನ ಅಥವಾ ಘೃತಾನ್ನವನ್ನೂ ಮಾಡಿಕೊಂಡಿರಬೇಕು.

*[ಭುಂಜಾನಾ ವೈ ಪಯಸಾಥ ಘೃತೇನ ವಾ]* ಹೀಗೆ ವರ್ಷ ಪೂರ್ತಿಯಾದಾಗ ಅಲಂಕೃತ ಸಾಧ್ವಿಯು ಕಮಲದ ಹಾಗೂ ಕನ್ನೈದಿಲೆಗಳ ಎಲೆಗಳನ್ನು ಹಾಲಿನಲ್ಲಿ ಹಾಕಿ, ಎಲೆಗಳು ತೇಲುತ್ತಿರುವಂತಿರಬೇಕು. ಆ ಹಾಲನ್ನು ವಿಪ್ರನಿಗೆ ದಕ್ಷಿಣೆಯೊಂದಿಗೆ ದಾನ ಮಾಡಬೇಕು. ಇದರಿಂದ ಸಾರಂಗಾಕ್ಷಿಯಾಗುವಳು.

**ಪ್ಲವಮಾನಾನಿ ವಿಪ್ರಾಯ ತತೋ ದದ್ಯಾತ್ ಸತೀಸತೀ ।**
**ಕೃಷ್ಣಸಾರ ಸಮಾನಾಕ್ಷೀ ತದ್ ದತ್ವಾ ಭವತಿ ಸ್ಮ ವೈ ॥ 14 ॥**

## ತುಟಿಗಳ ಸೌಂದರ್ಯಕ್ಕಾಗಿ

ಧರ್ಮಿಷ್ಠಳಾದ ಯಾವ ನಾರೀಮಣಿಯು ತನ್ನ ತುಟಿಗಳು ಸುಂದರವಾಗಿರಬೇಕೆಂದು ಇಚ್ಛಿಸುವಳೋ ಅವಳು ವರ್ಷಪೂರ್ತಿ ಮಣ್ಣಿನ ಮಡಿಕೆಯಲ್ಲಿ ನೀರನ್ನು ಕುಡಿಯುವುದು.

**ಸಾ ಮೃಣ್ಮಯೇನ ತು ಪಿಬೇದುದಕಂ ವತ್ಸರಂ ಸತೀ ।**

ಪ್ರತಿ ನವಮೀಯಂದು ಆಯಾಚಿತವಾಗಿ ತಾನೇ ಲಬ್ಧವಾದ ಯದೃಚ್ಛಾ ಲಾಭದಿಂದ ಭುಂಜಿಸುವುದು *[ಅಯಾಚಿತೇನ ಭುಂಜೀತ ನವಮ್ಯಾಂ]*

ವರ್ಷಾಂತ್ಯ ಹವಳವನ್ನು ವಿಪ್ರನಿಗೆ ದಾನ ನೀಡುವುದು. ಇದರಿಂದಾಗಿ ಅವಳ ತುಟಿಗಳು ತೊಂಡೆಹಣ್ಣಿನಂತೆ ಯಾವಾಗಲೂ ಕೆಂಪಾಗಿರುತ್ತದೆ *[ತೇನ ಬಿಂಬಫಲಾಭೌಷ್ಠೀ]*. ಇದರಿಂದಾಗಿ ಸೌಭಾಗ್ಯ ರೂಪ ಸಂತಾನಾದಿಗಳೂ ಲಭಿಸುತ್ತದೆ.

## ಸುಂದರ ದಂತ ಪಂಕ್ತಿಗಾಗಿ

ಯಾವ ಸ್ತ್ರೀಯು ತನ್ನ ದಂತಪಂಕ್ತಿಯು ಸುಂದರವಾಗಿ ದಾಳಿಂಬೆ ಬೀಜದಂತೆ ಇರಲಿಚ್ಛಿಸುವಳೋ ಅವಳು ಶುಕ್ಲಪಕ್ಷ ಅಷ್ಟಮಿಯಂದು ಹಗಲು-ರಾತ್ರಿ ಎರಡ್ಹೊತ್ತು ಭುಂಜಿಸಬಾರದು *[ಶುಕ್ಲಾಷ್ಟಮೀಂ ನ ಸಾಶ್ನೀಯಾದ್ ಭಕ್ತದ್ವಯಂ]*. ವರ್ಷ ಮುಗಿದ ಮೇಲೆ ಬೆಳ್ಳಿಯ ದಂತಗಳನ್ನು ಮಾಡಿಸಿ ಅಥವಾ ತತ್ಪ್ರತ್ಯಾಮ್ನಾಯ ರೂಪವಾಗಿಯಾಗಲೀ ಹಾಲಿನೊಂದಿಗೆ ದ್ವಿಜನಿಗೆ ದಾನ

ಮಾಡಬೇಕು. ಇದರಿಂದಾಗಿ ಮಲ್ಲಿಗೆ ಮೊಗ್ಗಿನಂತಹ ದಂತ ಪಂಕ್ತಿ ಪಡೆಯುವಳು.

## ಸುಂದರ ಮುಖಕ್ಕಾಗಿ

ಅರುಂಧತಿಯೇ! ಸುಂದರ ಮುಖವನ್ನು ಅಪೇಕ್ಷಿಸುವ ನಾರಿಯು ಪೂರ್ಣಿಮೆಯಂದು ಸಂಜೆ ಸ್ನಾನ ಮಾಡಿ ಹಾಲಿನಿಂದ ತಯಾರಿಸಿದ ಜವೆಗೋಧಿಯ ಪಾಯಸವನ್ನು ಮಾಡಿ ಬ್ರಾಹ್ಮಣನಿಗೆ ವರ್ಷಪೂರ್ತಿ ದಾನ ಮಾಡಬೇಕು *[ಯಾವಕಂ ಪಯಸಾ ಸಿದ್ಧಂ].*

ದಾನಾನಂತರ ವರ್ಷಾಂತ್ಯದಲ್ಲಿ ಚಿನ್ನ/ಬೆಳ್ಳಿಯಿಂದ ತಯಾರಿಸಿದ ಚಂದ್ರಬಿಂಬವನ್ನು ದಾನ ಮಾಡಬೇಕು. ಇದನ್ನು ಪದ್ಮಪತ್ರದ ಮೇಲಿಟ್ಟು ಸ್ವಸ್ತಿವಾಚನಾನಂತರ ದಾನ ಮಾಡಬೇಕು. ಇದರಿಂದಾಗಿ ಸ್ತ್ರೀಯು ಚಂದ್ರಮುಖಿಯಾಗುವಳು.

**ಸ್ತನಾವಿಚ್ಛತಿ ಯಾ ನಾರೀ ತೃಣರಾಜಫಲೋಪಮೌ ।**
**ಅಯಾಚಿತಂ ದಶಮ್ಯಾಂ ಸಾ ನಿತ್ಯಮಶ್ನೀತ ವಾಗ್ಯತಾ ॥ 15 ॥**
**ಸಂವತ್ಸರೇ ತತಃ ಪೂರ್ಣೇ ದ್ವೇ ಬಿಲ್ವೇ ಕಾಂಚನೇ ಶುಭೇ ।**
**ಸದಕ್ಷಿಣೇ ಬ್ರಾಹ್ಮಣಾಯ ಪ್ರಯಚ್ಛತಿ ಧೃತಾತ್ಮನೇ ॥ 16 ॥**
**ಸದೋನ್ನತೌ ಸ್ತನೌ ಸಾ ಸ್ತ್ರೀ ಬಿಭರ್ತ್ಯ ಮರವರ್ಣಿನಿ ।**

## ಸುಂದರ ಪಯೋಜಗಳಿಗಾಗಿ

ಯಾವ ಸ್ತ್ರೀಯು ಸುಂದರ ಹಾಗೂ ತಾಳೆಹಣ್ಣಿನಂತೆ ದುಂಡಾದ ಸ್ತನಗಳನ್ನು ತನಗೆ ಬಯಸುವಳೋ ಅವಳು ಪ್ರತಿ ದಶಮಿಯಲ್ಲಿಯೂ ಮೌನವಾಗಿದ್ದು ಅಯಾಚಿತವಾಗಿ ಲಭಿಸಿದ್ದನ್ನು ಮಾತ್ರ ಭುಂಜಿಸುತ್ತಾ ವರ್ಷಾಂತ್ಯದಲ್ಲಿ ಚಿನ್ನ ಅಥವಾ ಬೆಳ್ಳಿಯಿಂದ ಮಾಡಿದ ಸುಂದರವಾದ ಎರಡು ಬಿಲ್ವಫಲಗಳನ್ನು ದಾನ ಮಾಡಬೇಕು. ಇದರಿಂದ ಉನ್ನತವೂ ಸುಂದರವೂ ಆದ ಸ್ತನಗಳನ್ನು ಪಡೆಯುವಳು.

**ಶಾತೋದರ ತ್ವಮಿಚ್ಛಂತೀ ಕ್ಷಪೇದ್ ಏಕಾಂತಭೋಜಿನೀ ।**
**ಪಂಚಮ್ಯಾಂ ತತ್ರ ಭೋಕ್ತವ್ಯಂ ಅನ್ನಂ ತೋಯೇನ ನಿತ್ಯದಾ ॥ 17 ॥**

## ಕೃಶೋದರಕ್ಕಾಗಿ

ಯಾವ ನಾರಿಯು ತನ್ನ ನಡುಭಾಗ ಸಿಂಹದಂತೆ ಕೃಶವೂ ಸುಂದರವೂ

ಆಗಿರಬೇಕೆಂದಿಚ್ಛಿಸುವಳೋ ಅವಳು. ಒಂದು ವರ್ಷ ಪೂರ್ತಿ ಏಕಾಂತದಲ್ಲಿ ಭೋಜನ ಮಾಡುವುದು ಹಾಗೂ ಪ್ರತಿ ಪಂಚಮೀತಿಥಿಯಂದು ಅನ್ನವನ್ನು ನೀರಿನಲ್ಲಿ ಕಲಸಿಕೊಂಡು ತಿನ್ನಬೇಕು *[ಶಾಂತೋದರತ್ವಂ = ಕೃಶೋದರತ್ವಂ]* ವರ್ಷಾಂತ್ಯದಲ್ಲಿ ದಕ್ಷಿಣೆ ಅಧಿಕ ಮಾಡಿ ಜಾಜಿಯ ಬಳ್ಳಿಯನ್ನು ದಾನ ಮಾಡಬೇಕು.

**ದ್ವಾದಶಿಂ ಸಾಕ್ಷಿಪೇತ್ವೇವಂ ಶಾಕಯಃ ಸರ್ಮ್ಯೈ ರನಿಂದಿತೈಃ ।**
**ಸಂವತ್ಸರೇ ತತಃ ಪ್ರಾಪ್ತೇ ಶಾಕ್ಮೇಪದ್ಮೇ ದದಾತು ಸಾ ॥ 18 ॥**

### ಸುಂದರ ಹಸ್ತಗಳಿಗಾಗಿ

ಈ ಅಪೇಕ್ಷೆಯ ಸ್ತ್ರೀಯ ಪ್ರತಿದ್ವಾದಶೀ ತಿಥಿಯು ಉತ್ತಮವಾದ ತರಕಾರಿಗಳನ್ನು ಮಾತ್ರ ಸ್ವೀಕರಿಸುವುದು. ಹೀಗೆ ವರ್ಷಪೂರ್ತಿ ಶಾಕಾಹಾರಿಯಾಗಿದ್ದು ವರ್ಷಾಂತ್ಯದಲ್ಲಿ ಸುವರ್ಣದಿಂದ ಮಾಡಿದ ಎರಡು ಕಮಲ ಹೂವುಗಳನ್ನು ದಾನ ಮಾಡಬೇಕು. ಅಸಾಧ್ಯವಾದಾಗ ರಜತದ ಕಮಲಗಳು. ಇದೂ ಅಸಾಧ್ಯವಾದಾಗ ಪ್ರತ್ಯಾಮ್ನಾಯ ದಕ್ಷಿಣೆ.

**ತ್ರಯೋದಶೀಮೇಕಭುಕ್ತಮಶ್ನಾತು ಏವಮಯಾಚಿತಮ್ ।**

### ಸುಂದರ ವಿಶಾಲ ನಿತಂಬಕ್ಕಾಗಿ

ನಾರಿಯು ತನಗೆ ಸುಂದರ ಹಾಗೂ ವಿಶಾಲವಾದ ನಿತಂಬ ವನ್ನಿಚ್ಛಿಸುವಳೋ ಅವಳು ಪ್ರತಿ ತ್ರಯೋದಶಿಯಂದು ಅಯಾಚಿತ ಒಂದು ಭೋಜನ ಮಾತ್ರ ಮಾಡುವುದು,.

**ರತ್ನಾನಿ ಚೈವ ಪೂರ್ಣಾನಿ ವಾಸೋ ರಕ್ತಂ ಚ ದಾಪಯೇತ್ ॥ 19 ॥**

ಸಂವತ್ಸರ ಪೂರ್ತಿಯಾದಾಗ ಉಪ್ಪಿನಿಂದ ಬ್ರಹ್ಮದೇವನ ಮುಖದಂತೆ ಆಕಾರ ಮಾಡಿಸಿ ಬ್ರಾಹ್ಮಣನಿಗೆ ದಾನ ಮಾಡುವುದು.

ವಿಪ್ರನ ನೇತ್ರಗಳಗೆ ಅಂಜನ ಹಚ್ಚಿ ರತ್ನಗಳನ್ನೂ ರಕ್ತವಸ್ತ್ರವನ್ನೂ ದಾನ ಮಾಡಬೇಕು.

**ಶುಕವಾಕ್ಯವತ್ ಶತಗುಣಂ ಭವತ್ಯಮರವರ್ಣಿನಿ ॥ 20 ॥**

### ಮಧುರ ಧ್ವನಿಗಾಗಿ

ಮಧುರವಾದ ವಾಣಿಯನ್ನು ಇಚ್ಛಿಸುವ ಸಾಧ್ವಿಯು ಒಂದು ತಿಂಗಳು ಉಪ್ಪನ್ನು ಬಿಡಬೇಕು *[ಮಾಸಂ ವರ್ಜಯೇಲ್ಲವಣಂ ಸತೀ].* ನಂತರ ಲವಣವನ್ನು

ವಿಪ್ರನಿಗೆ ದಾನ ಮಾಡಬೇಕು. ಹೀಗೆ ಮಾಡಿದರೆ ಶುಕದ ಮಾತಿಗಿಂತಲೂ ನೂರುಪಟ್ಟು ಅಧಿಕ ಮಧುರ ನುಡಿಗಳು ಹೊರಬರುತ್ತವೆ.

**ಷಷ್ಠ್ಯಾಂ ಷಷ್ಠ್ಯಾಂ ವರರೋಹೇ ಭೋಕ್ತವ್ಯಂ ಸಲಿಲೌದನಮ್ ।**
**ಅಗ್ನಿರ್ವಾ ಬ್ರಾಹ್ಮಣೋ ವಾಪಿ ನ ಪ್ರಷ್ಟವ್ಯ ಪದಾ ಸದಾ ॥ 21 ॥**

### ಕಾಲಿನ ಗಂಟು ಸುಂದರವಾಗಿರಲು

ಕಾಲಿನ ಗುಲ್ಫ (ಹರಡು)ಗಳು ಹಾಗೂ ಪಾದಗಳು ಸುಂದರವಾಗಿರಬೇಕೆಂದು ಅಪೇಕ್ಷಿಸುವ ಸ್ತ್ರೀಯು ಪ್ರತಿತಿಂಗಳ ಷಷ್ಠಿಯಂದು ನೀರಿನಲ್ಲಿ ಅನ್ನವನ್ನು ಕಲಿಸಿ ತಿನ್ನಬೇಕು. ಈ ವ್ರತಸ್ಥಳು ಪ್ರಮಾದದಿಂದಲು ಬ್ರಾಹ್ಮಣ ಗೋವು ಅಗ್ನಿ ಇವುಗಳನ್ನು ಕಾಲಿನಿಂದ ಒದೆಯಬಾರದು. ಅಕಸ್ಮಾತ್ ಸ್ಪರ್ಶ-ವೇರ್ಪಟ್ಟರೆ ತಕ್ಷಣ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

ವ್ರತಸ್ಥಳು ಒಂದು ಕಾಲಿನಿಂದ ಮತ್ತೊಂದು ಕಾಲನ್ನು ಉಜ್ಜಿ ತೊಳೆದು-ಕೊಳ್ಳಬಾರದು ಮತ್ತು ಬೆಳ್ಳಿಯಿಂದ ತಯಾರಾದ ಆಮೆಗಳನ್ನು ವಿಪ್ರನಿಗೆ ದಾನ ಮಾಡಬೇಕು *[ಕೂರ್ಮೌ ರೂಪ್ಯಮಯೌ ದದ್ಯಾದ್]*. ಕಮಲಗಳನ್ನು ಅಧೋಮುಖವಾಗಿಟ್ಟು ಸದಕ್ಷಿಣಾಕ ದಾನವು ಪ್ರಶಸ್ತ.

**ತ್ರಿರಾತ್ರಂ ಪುಷ್ಪ ಕಾಲೇ ತು ಪರ್ಯಶ್ನಾತು ಪತಿವ್ರತಾ ॥ 22 ॥**

### ಸುಂದರ ಶರೀರಕ್ಕಾಗಿ

ಪತಿವ್ರತೆಯಾದ ಸಾಧ್ವಿಯು ತನ್ನ ಯಾವತ್ತು ಶರೀರ ಸುಂದರವಾಗಿರಬೇಕೆಂಬ ಇಚ್ಛೆ ಹೊಂದಿದ್ದರೆ ಋತುಕಾಲದ ಮೂರೂ ದಿವಸಗಳಲ್ಲಿಯೂ ಭುಂಜಿಸಬಾರದು.

**ಕೌಮುದ್ಯಾಂ ಅಥವಾಽಷಾಢ್ಯಾಂ ಮಾಘ್ಯಾಂ ಚಾಶ್ವಯುಜೇ ತಥಾ ।**
**ಮಾತರಂ ಪಿತರಂ ಚೈವ ಮನ್ಯತೇಽತಿಥಿದೈವತಮ್ ॥ 23 ॥**

ಕಾರ್ತಿಕ ಆಷಾಢ ಮಾಘ ಆಶ್ವಯುಜಗಳ ಪೌರ್ಣಮೆಗಳಲ್ಲಿ ಅತಿಥಿ ಅಭ್ಯಾಗತರ ತಂದೆ ತಾಯಿಗಳನ್ನು ಯಥೋಚಿತವಾಗಿ ಸತ್ಕರಿಸಬೇಕು.

ಪ್ರತಿನಿತ್ಯವೂ ತನ್ನ ಮನೆಯನ್ನು ಗೋಮಯಾದಿಗಳಿಂದ ಸಮ್ಮಾರ್ಜನ ಮಾಡುವುದು ಹಾಗೂ ಉಪ್ಪು-ತುಪ್ಪ ದಾನ ಮಾಡುವುದು.

ಮನೆಯನ್ನು ಗುಡಿಸಿ ಸಾರಿಸಿ ಸ್ವಚ್ಛವಾಗಿಟ್ಟಿರಬೇಕು. ದೇವತೆಗಳಿಗೆ ನೈವೇದ್ಯಾದಿ ಅರ್ಪಣೆ. ಅವಾಚ್ಯ ಶಬ್ದಗಳನ್ನು ಎಂದೂ ಆಡಬಾರದು.

**ಉಪಲೇಪನಂ ಚ ವಾಗ್ಬುಷ್ಟಾ ಬಲಿಕರ್ಮ ಚ ಮಾನಿನಿ ॥ 24 ॥**

ಇಂತಹ ವ್ರತಸ್ಥರು ಯಾವುದೇ ತರಕಾರಿಯನ್ನು ತಿನ್ನಬಾರದು. ಅಥವಾ ತಿನ್ನುವುದಾದರೆ ಒಂದೇ ರೀತಿಯ ತರಕಾರಿಯನ್ನು ಉಪಯೋಗಿಸುವುದು. ಸುಳ್ಳು ವಂಚನೆ ಮೊದಲಾದ ಕುಹಕವು ಇರಬಾರದು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಪಾರಿಜಾತಹರಣದಲ್ಲಿ ವ್ರತಗಳ ವಿಧಿವಿಧಾನವೆಂಬಲ್ಲಿ
ಎಂಬತ್ತನೆಯ ಅಧ್ಯಾಯ ಸಮಾಪ್ತಿ

## ಅಥ ಏಕಾಶೀತಿತಮೋಽಧ್ಯಾಯಃ

ಬಾಂಧವಾನ್ ಸಗುಣಾನ್ ಇಚ್ಛೇದೇಕಭಕ್ತೇನ ನಿತ್ಯದಾ ।
ಸಪ್ತಮೀಂ ಸಪ್ತಮೀಂ ನಿತ್ಯಂ ಕ್ಷಪೇತ್ ಸ್ತ್ರೀ ಪತಿದೇವತಾ ॥ 1 ॥

ಯಾವ ಸ್ತ್ರೀಯು ಗುಣವಂತರಾದ ಬಂಧುಬಾಂಧವರನ್ನು ಪಡೆಯುವ ಇಚ್ಛೆವುಳ್ಳವಳೋ ಅವಳಾದರೂ ಪತಿಯಲ್ಲಿ ಭಕ್ತಿಯಿಟ್ಟು ಅವನನುಜ್ಞೆ ಬೇಡಿ ಪ್ರತಿ ಸಪ್ತಮಿದಿನದಂದು ಒಂದು ಹೊತ್ತು ಭೋಜನ ಮಾಡಬೇಕು.

ಸದಕ್ಷಿಣಂ ಬ್ರಾಹ್ಮಣಾಯ ದದ್ಯಾದ್ ತಸ್ಮೈ ಹಿರಣ್ಮಯಮ್ ॥ 2 ॥

ಹೀಗೆ ಒಂದು ಸಂವತ್ಸರ ವ್ರತವನ್ನಾಚರಿಸಿ ಯಥಾಶಕ್ತಿ ಸುವರ್ಣದಿಂದ ತಯಾರಾದ ವೃಕ್ಷವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.

ಯಾವ ಸಾಧ್ವಿಯು ತಾನು ಸುಂದರವಾಗಿದ್ದು ಪತಿಗೆ ಪ್ರಿಯಳಾಗಬೇಕು ಹಾಗೂ ಪುತ್ರವತಿಯಾಗಬೇಕೆಂದು, ತನ್ನ ಸವತಿಗಿಂತಲೂ ಹೆಚ್ಚಿನ ಸ್ಥಾನ-ಮಾನಗಳನ್ನು ಬಯಸುವವಳೊ ಅವಳು ಪ್ರತಿ ಸಪ್ತಮಿದಿನದಂದು ಹೊಂಗೆ ಮರದ ಬುಡದಲ್ಲಿ ದೀಪದಾನವನ್ನು ದಾನ ಮಾಡಬೇಕು. ವರ್ಷಪೂರ್ತಿ ಹೀಗೆ ಮಾಡಿ ಸುವರ್ಣ ದೀಪದಾನ ಮಾಡಬೇಕು.

ಕಿಂ ತಸ್ಯಾ ವ್ರತಕೈಃ ಕಾರ್ಯಂ ಕಿಂ ವಾ ಸ್ಯಾದುಪವಾಸಕೈಃ ।
ಯಾ ಭರ್ತೃ ದೇವತಾ ನಿತ್ಯಂ ಸತ್ಯಧರ್ಮಗುಣಾನ್ವಿತಾ ॥ 3 ॥

### ಪತಿವ್ರತೆಗೆ ವ್ರತವಾವುದೂ ಬೇಕಿಲ್ಲ

ಯಾವ ನಾರಿಯು ಪ್ರತಿನಿತ್ಯವೂ ಎಲ್ಲರೂ ಭೋಜನ ಮಾಡಿದ ನಂತರ ಉಳಿದ ಅನ್ನವನ್ನು ಪತಿಯ ಹೋಮಶೇಷವೆಂದು ಭುಂಜಿಸುವಳೋ

*[ಶೇಷಭೋಜಿನೀ]* ಅತ್ತೆ ಮಾವ–ನಾದಿನಿ–ಮೈದುನ ಗಂಡ ಯಾರ ಮನಸ್ಸನ್ನೂ ಘಾಸಿ ಪಡಿಸುವುದಿಲ್ಲವೋ, *[ನೈವ ಚ ಸ್ಯಾದ್ ಅರುಂತದಾ]* ಏಕಾದಶ್ಯಾದಿಗಳಲ್ಲಿ ಉಪವಾಸಿಸುವಳೋ ನಿತ್ಯವೂ ಪತಿಯಲ್ಲಿ ದೇವರನ್ನು ಕಾಣುವಳೊ *[ಪತಿದೇವತಾ]* ಶೌಚಾಚಾರಗಳನ್ನು ಪರಿಪಾಲಿಸುವಳೋ *[ಸತತಂ ಶೌಚಾನ್ವಿತಾ]* ಯಾವ ಸಂದರ್ಭದಲ್ಲಿಯೂ ಪತಿ ಮೊದಲಾದವರಿಗೆ ಕಠಿಣವಾದ ಮಾತುಗಳನ್ನು ಆಡುವುದಿಲ್ಲವೋ, ನಿತ್ಯವೂ ಅತ್ತೆ–ಮಾವಂದಿರ ಸೇವೆಯನ್ನೂ ಮಾಡುವಳೋ *[ಶ್ವಶ್ರೂಶ್ವಶುರಯೋಃ ಶುಶ್ರೂಷಾಭಿರತಾ]* ಇಂತಹವಳಿಗೆ ಯಾವ ವ್ರತಗಳ ಅವಶ್ಯಕತೆ ಇಲ್ಲ. ಅಂತಹವಳಿಗೆ ಸಕಲೇಷ್ಟಾರ್ಥಗಳೂ ಕೈಗೂಡುವುವು.

## ವಿಧವೆಯ ಧರ್ಮ

**ವಿಧವಾ ಸ್ತ್ರೀತು ಯಾ ಹಿ ಸ್ಯಾದ್ ದೈವಯೋಗಾತ್ ಸತೀ ಸತಿ ।**
**ತಸ್ಯಾ ವಕ್ಷ್ಯಾಮಿ ಯೋ ಧರ್ಮಃ ಪುರಾಣೋಕ್ತಃ ಸಮಧ್ಯಮೇ ॥ 4 ॥**

ಅರುಂಧತಿಯೇ! ಸಾಧ್ವಿಸ್ತ್ರೀಯ ದುರ್ದೈವದಿಂದಾಗಿ ವಿಧವೆಯಾಗಿದ್ದರೆ ಅಂತಹವಳು ಆಚರಿಸಬೇಕಾದ ಧರ್ಮವನ್ನು ಹೇಳುತ್ತೇನೆ.

**ಪತಿಂ ಸಂಕಲ್ಪಯಿತ್ವಾ ಸಾ ಚಿತ್ರಸ್ಥಂ ವಾಽಥ ಮೃಣ್ಮಯಮ್ ।**
**ತಸ್ಯ ಪೂಜಾಂ ಸದಾ ಕುರ್ಯಾತ್ ಸತಾಂ ಧರ್ಮಮನುಸ್ಮರನ್ ॥ 5 ॥**

ಪತಿಯ ಚಿತ್ರವನ್ನೋ ಅಥವಾ ಮೃತ್‌ನಿಂದ ತಯಾರಾದ ಪತಿಯ ಪ್ರತಿಮೆಯನ್ನೊ ಮುಂದೆ ಇಟ್ಟುಕೊಂಡು ನಿತ್ಯವೂ ಪತಿಯಲ್ಲಿ ಪರಮಾತ್ಮನನ್ನು ಪೂಜಿಸಬೇಕು. ಪತಿವ್ರತೆಯರ ಧರ್ಮಗಳನ್ನು ಸ್ಮರಿಸುತ್ತಾ ಇರಬೇಕು.

ಈ ರೀತಿ ಪತಿಯ ಪ್ರತೀಕದ ಮುಂದೆ ಅದನ್ನು ಪತಿಯನ್ನೆ ಚಿಂತಿಸಿ ಯಥಾವತ್ತಾಗಿ ಅರ್ಚಿಸಬೇಕು. ವ್ರತೋಪವಾಸಾದಿಗಳನ್ನೂ ಕೂಡ ಆ ಪ್ರತೀಕದ ಅನುಜ್ಞೆ ಪಡೆದೆ ಮಾಡಬೇಕು. ಭೋಜನಾದಿಗಳೂ ಸಹ ಅವನ ಅನುಜ್ಞೆ ಪಡೆದೆ ಮಾಡಬೇಕು. *[ಭೋಜನೇ ವ್ರತಕೇ ಚ ಅಭ್ಯನುಜ್ಞಾಂ ವಿಂದೇತ].*

ಪತಿಯ ಮಾತನ್ನು ಉಲ್ಲಂಘಿಸದೆ ಇರುವ ಸಾಧ್ವಿಯು ಪತಿಲೋಕವನ್ನೇ ಹೊಂದುತ್ತಾಳೆ. ಸ್ವರ್ಗದಲ್ಲಿ ಮಹಾಸತಿ ಶಾಂಡಲಿಯಂತೆ ಸೂರ್ಯನಂತೆ ಪ್ರಕಾಶಿಸುತ್ತಾಳೆ.

**ಅದ್ಯಪ್ರಭೃತಿ ಸರ್ವೇಷಾಂ ದೇವಾನಾಂ ಚೈವ ಯೋಷಿತಃ ।**
**ದ್ರಕ್ಷ್ಯಂತಿ ಪುಣ್ಯಕವಿಧಿಂ ಪೌರಾಣೋ ಯಃ ಸನಾತನಃ ॥ 6 ॥**

ಇಲ್ಲಿಂದ ಮುಂದೆ ದೇವತೆಗಳ ಪತ್ನಿಯರೂ ಪುರಾಣ ಹೇಳಿದ ಸನಾತನ ಪುಣ್ಯಕವ್ರತ ವಿಧಿವಿಧಾನಗಳನ್ನು ತಿಳಿದುಕೊಳ್ಳುತ್ತಾರೆ.

ಧರ್ಮಾತ್ಮನಾದ ನಾರದರು – ಉಪವಾಸದ ಹಾಗೂ ಪುಣ್ಯಕವ್ರತಗಳ ಸಮಗ್ರವಾದ ಪುರಾಣೋಕ್ತ ವಿಧಿ ನಿಯಮ ತಿಳಿದುಕೊಳ್ಳುತ್ತಾನೆ.

ಅದಿತಿ, ಶಚೀ, ಸೋಮಪುತ್ರಿ ಅರುಂಧತಿ ನೀನು ಕೂಡ ತಪಸ್ಸಿನ ಮೂಲಕ ಪುಣ್ಯಕ ವಿಧಿವಿಧಾನಗಳನ್ನು ತಿಳಿಯಬಲ್ಲಿರಿ.

ಯಾರೇ ಪುಣ್ಯಕ ವ್ರತ ಮಾಡಲಿ, ಅವರೆಲ್ಲರೂ ಪ್ರಾರಂಭದಲ್ಲಿ ನಿಮ್ಮಗಳ ಪವಿತ್ರನಾಮಗಳನ್ನು ಕೀರ್ತನೆ ಮಾಡುವರು. ಇದೇ ರೀತಿ ಶ್ರೀಕೃಷ್ಣನ ಪತ್ನಿಯಾಗುವರೆಲ್ಲರೂ ಉಪವಾಸವ್ರತ ಮತ್ತು ಪುಣ್ಯಕ ವ್ರತದ ಸನಾತನವಾಗಿ ಬಂದಿರುವ ವಿಧಿ–ವಿಧಾನಗಳನ್ನು ತಿಳಿದವರಾಗಿದ್ದರು.

**ಪತಿಭಕ್ತಿರದುಷ್ಟತ್ವಂ ಆವಾಗ್ದುಷ್ಟತ್ವಮೇವ ಚ ।**
**ಸವಿಶೇಷಂ ಚ ಧರ್ಮಾಣಂ ಸ್ತ್ರೀಧರ್ಮೇಷು ಪ್ರಶಸ್ಯತೇ ॥ 7 ॥**

ಸಮಸ್ತ ಧರ್ಮಗಳಲ್ಲಿಯೂ ಅದರಲ್ಲಿಯೂ ಸ್ತ್ರೀಯರ ಧರ್ಮಗಳಲ್ಲಿ ಪತಿದೇವತೆಯಾಗಿರುವುದು, ದುಷ್ಟತನವಿಲ್ಲದಿರುವುದು. ನಿಷ್ಠುರವಾದ ನುಡಿಗಳನ್ನು ಆಡದಿರುವುದು. ಈ ಮೂರು ಧರ್ಮಗಳೂ ವಿಶೇಷವಾಗಿ ಪ್ರಶಂಸಲ್ಪಟ್ಟಿದೆ.

ನಾರದರು ಹೇಳಿದರು – ದೇವಿ! ಪಾರ್ವತಿಯು ಹೀಗೆ ಹೇಳಿದ ನಂತರ ಬಂದು ನೆರೆದಿದ್ದ ಸಾಧ್ವಿಯರೆಲ್ಲರೂ ತಮ್ಮ ತಮ್ಮ ಸದನಗಳಿಗೆ ಹೊರಟು ಹೋದರು.

ನಂತರ ಅದಿತಿಯೂ ಕೂಡ ಉಮಾದೇವಿ ಬಿತ್ತರಿಸಿದ ವಿಧಿಯಂತೆ ಪುಣ್ಯಕವ್ರತವನ್ನಾಚರಿಸಿದಳು. ಅದಿತಿಯಾದರೂ ತನ್ನ ಪತಿಯಾದ ಕಶ್ಯಪರನ್ನು ಪಾರಿಜಾತಕ್ಕೆ ಕಟ್ಟಿ ನನಗೆ (ನಾರದರಿಗೆ) ದಾನ ಮಾಡಿದಳು.

ಅದಿತಿಯಂತೆಯೇ ಸತ್ಯಭಾಮೆಯೂ ಸಹ ತನ್ನ ಪತಿಯನ್ನು ದಾನ ಮಾಡಿದಳು.

ಸಾವಿತ್ರಿಯೂ ಅದೇ ಪುಣ್ಯಕವ್ರತವನ್ನು ಮಾಡಿ ತನ್ನ ಪತಿಯನ್ನು ದಾನವಾಗಿ ಕೊಟ್ಟಳು. ಸಾವಿತ್ರಿಯನ್ನು ಪೂಜಿಸುವ ಸಂಧ್ಯಾಕಾಲವು ಉತ್ಕೃಷ್ಟವಾಗಿದೆ.

ಸಾಧ್ವಿಯು ಸಾವಿತ್ರಿ ವ್ರತ ಅಥವಾ ಅದಿತಿಯ ವ್ರತವನ್ನಾಗಲೀ ಮಾಡಿದರೆ ಹುಟ್ಟಿದ ಕುಲ, ಮೆಟ್ಟಿದ ಕುಲ ಹೀಗೆ ಉಭಯಕುಲತಾರಿಣಿಯಾಗುವಳು.

ಶಚೀದೇವಿಯು ಉಮಾದೇವಿಯ ವ್ರತವನ್ನು ಆಚರಿಸಿ ಬ್ರಾಹ್ಮಣರಿಗೆ ಕೆಂಪು ವಸ್ತ್ರಗಳನ್ನು ದಾನ ಮಾಡಿದಳು.

ನಾಲ್ಕನೆಯ ದಿವಸವೂ ಪುಣ್ಯಕ ವ್ರತಕ್ಕೆ ಸಂಬಂಧಿಸಿದ ದಾನಧರ್ಮಗಳಿವೆ. ನಾಲ್ಕನೆ ದಿನದಂದು ಹಗಲು–ರಾತ್ರಿ ಉಪವಾಸವಿದ್ದು, ನೂರು ತಂಬಿಗೆಗಳನ್ನು ದಾನ ಮಾಡಬೇಕು *[ದೇಯಂ ಕುಂಭಶತಂ ತಥಾ].*

ಉಮಾದೇವಿಯಿಂದ ಬಂದ ಈ ವ್ರತವನ್ನು ಗಂಗಾದೇವಿಯು ಮಾಡಿ ತತ್ಸಂಬಂಧಿಯಾದ ದಾನಗಳನ್ನು ಮಾಡಿ ಯಶಸ್ಸನ್ನು ಹೊಂದಿರುವಳು.

**ಸ್ನಾನಮಭ್ಯಧಿಕಂ ತ್ವತ್ರ ಪ್ರತ್ಯುಷಸ್ಯಾತನೋ ಜಲೇ ।**
**ಅನ್ಯಸ್ಮಿನ್ ವಾ ಜಲೇ ಮಾಘಶುಕ್ಲಪಕ್ಷೇ ಹರಿಪ್ರಿಯೇ ॥ 8 ॥**
**ಏತದ್ ಗಂಗಾವ್ರತಂ ನಾಮ ಸರ್ವಕಾಮಪ್ರದಂ ಸ್ಮೃತಮ್ ॥ 9 ॥**

ಗಂಗೆಯು ಮಾಘ, ಶುಕ್ಲಪಕ್ಷದಲ್ಲಿ ಪ್ರತಿದಿನವೂ ಬೇರೆ ನದ್ಯಾದಿಗಳಲ್ಲಿ ಸ್ನಾನ ಮಾಡಿ ವ್ರತವನ್ನಾಚರಿಸುತ್ತಿದ್ದಳು. ಗಂಗೆಯಿಂದ ನಡೆಸಲಾದ ಈ ವ್ರತವು 'ಗಂಗಾವ್ರತ'ವೆಂದೆ ಪ್ರಸಿದ್ಧವಾಯಿತು.

**ಸಪ್ತ ಸಪ್ತ ಚ ಸಪ್ತಾಥ ಕುಲಾನಿ ಹರಿವಲ್ಲಭೇ ।**
**ಸ್ತ್ರೀ ತಾರಯತಿ ಧರ್ಮಜ್ಞಾ ಗಂಗಾವ್ರತಕಚಾರಿಣೀ ॥ 10 ॥**

ಈ ಗಂಗಾವ್ರತವನ್ನಾಚರಿಸುವ ಸ್ತ್ರೀಯು ಏಳು ಪಿತೃಕುಲ, ಏಳು ಮಾತೃಕುಲ, ಏಳು ಪತಿಯ ಕುಲವನ್ನು ಒಟ್ಟು 21 ಕುಲವನ್ನು ಉದ್ಧರಿಸುವಳು.

**ತಾರಣಂ ಪಾರಣಂ ಚೈವ ತದ್‌ವ್ರತಂ ಸಾರ್ವಕಾಮಿಕಮ್ ।**

ಈ ಗಂಗಾ ವ್ರತಾಚರಣೆಯ ನಂತರ ಸಾವಿರ ಕುಂಭಗಳನ್ನು ದಾನ ಮಾಡಬೇಕು. ಈ ವ್ರತವು ಸಮಸ್ತ ದುಃಖದಿಂದ ದಾಟಿಸುವುದಲ್ಲದೆ ಸಮಸ್ತ ಅಭೀಪ್ಸಿತಗಳನ್ನೂ ವ್ರತಸ್ಥರಿಗೆ ನೀಡುವುದು.

**ಯಮಭಾರ್ಯಾ ಚಕಾರಾಥ ವ್ರತಂ ಯಾಮರಥಂ ಶುಭಂ ।**
**ಹೇಮಂತೇ ತತ್ತು ಕರ್ತವ್ಯಮಾಕಾಶೇ ಹರಿವಲ್ಲಭೇ ॥ 11 ॥**

## ಯಾಮರಥ

ಯಮನ ಭಾರ್ಯೆಯಾದ ಶ್ಯಾಮಲೆಯು 'ಯಾಮರಥ'ವೆಂಬ ವ್ರತವನ್ನು ಮಾಡಿದಳು. ಹೇಮಂತ ಋತುವಿನಲ್ಲಿ ಆವರಣವಿಲ್ಲದ ಆಕಾಶದ ಅಡಿಯಲ್ಲಿ ಈ ವ್ರತವನ್ನಾಚರಿಸಬೇಕು *[ಆಕಾಶೇ = ಅನಾಚ್ಛಾದಿತೇ ದೇಶೇ]*.

ಪತಿವ್ರತೆಯು ತನ್ನ ಪತಿಗೆ ನಮಸ್ಕರಿಸಿ ಅನುಜ್ಞೆ ಹೊಂದಿ ಬಯಲಿನಲ್ಲಿ ನಿಂತು ಈ ಶ್ಲೋಕ ಹೇಳಬೇಕು.

**ಚರಾಮ್ಯಹಂ ಯಾಮರಥಂ ಹಿಮಂ ಪೃಷ್ಠೇನ ಧಾರಯೇ ।**
**ಪತಿವ್ರತಾ ಜೀವಪುತ್ರ ಭವೇಯಂ ಚ ಪುರೋಧಿಕಾ ॥ 12 ॥**
**ಸಪತ್ನೀರಧಿತಿಷ್ಠೇಯಂ ಪಶ್ಯೇಯಂ ಚೈವ ಮಾ ಯಮಮ್ ॥ 13 ॥**

ದೇವಿಯೇ! ನಾನು ಹಿಮದಿಂದ ತುಂಬಿರುವ ಹೇಮಂತ ಋತುವಿನಲ್ಲಿ ಹಿಮದಿಂದ ಸುತ್ತುವರೆದ ನಾನು ಯಾಮರಥವೆಂಬ ವ್ರತವನ್ನು ಮಾಡುವೆ. ಇದರಿಂದಾಗಿ ನಾನು ಪತಿವ್ರತೆಯೂ, ಪುತ್ರವತಿಯೂ ಇತರ ಸ್ತ್ರೀಯರಿಗಿಂತ ಅಧಿಕಳೂ ಆಗುವಂತೆ ಅನುಗ್ರಹಿಸು ಎಂದು.

ನಾನು ನನ್ನ ಸವತೇರನ್ನೂ ಮೆಟ್ಟಿ ನಿಲ್ಲುವಂತಾಗಲಿ, ಯಮಧರ್ಮನು ಅಕಾಲದಲ್ಲಿ ನನಗೆ ದರ್ಶನ ಕೊಡದಂತಾಗಲಿ, ಪತಿಪುತ್ರರಿಂದ ಬಹುಕಾಲ ಸುಖವಾಗಿರುವಂತಾಗಲಿ.

ಮೃತಳಾದ ಮೇಲೆ ನಾನು ಪತಿಲೋಕವನ್ನು ಸೇರುವಂತಾಗಲಿ. ನನ್ನ ವಂಶದವರಿಗೆಲ್ಲ ನಾನು ಮುದ ನೀಡುವವಳಾಗಬೇಕು.

ಯಾವಾಗಲೂ ದಿವ್ಯವಸ್ತ್ರಗಳನ್ನು ಧರಿಸಿ ಶುದ್ಧವಾದ ಹಸ್ತವುಳ್ಳವಳಾಗಿರಬೇಕು *[ಸುಚೈಲಾ ಮೃಷ್ಟಹಸ್ತಾ ಚ]* = ವಿಶುದ್ಧಕರಾ.

ಹೀಗೆ ಪ್ರಾರ್ಥಿಸಿ ಸ್ನಾನ ಮಾಡಬೇಕು. ವ್ರತವನ್ನು ಶಾಸ್ತ್ರೋಕ್ತ ವಿಧಿಯಿಂದ ಆಚರಿಸಬೇಕು. ಬ್ರಾಹ್ಮಣರಿಂದ ಸ್ವಸ್ತಿವಾಚನ ಪೂರ್ವಕ ಆಶೀರ್ವಾದ ಪಡೆಯಬೇಕು.

**ತಿಲೈರಪಿ ತಥಾ ಕೃಷ್ಣೈಃ ಪಾಯಸೇನ ತು ಭೋಜಯೇತ್ ॥ 14 ॥**

ಕಪ್ಪಾದ ಎಳ್ಳು ಹಾಗೂ ಜೇನುತುಪ್ಪದಿಂದ ಮಿಶ್ರಿತ ಪಾಯಸ ಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

ಸುಗುಣಮಣಿ ರುಕ್ಮಿಣಿ! ಹೀಗೆ ರುದ್ರದೇವನ ಪತ್ನಿಯಾದ ಉಮಾದೇವಿಯಿಂದ ಉಪದೇಶಿಸಲ್ಪಟ್ಟ ಪುಣ್ಯಕವ್ರತವನ್ನು ಅದಿತಿಯೇ ಮೊದಲಾದ ಸಾಧ್ವಿಯರು ಆಚರಿಸಿರುವರು.

**ಅಹಂ ಬ್ರವೀಮಿ ತಪಸಾ ಮದೀಯೇನ ಸಮನ್ವಿತಾ ।**
**ಸರ್ವಾ ದ್ರಕ್ಷ್ಯಥ ಗುಣ್ಯಾನಿ ವ್ರತಕಾನಿ ತಥೈವ ಚ ॥ 15 ॥**

**ಪೌರಾಣಾನ್ಯುಮಯಾ ದೇವ್ಯಾ ಯಾನಿ ದೃಷ್ಟಾನಿ ವೈ ಪುರಾ ।**
**ಕಲ್ಯಾಣಗುಣಯುಕ್ತಾನಿ ಪಾವನಾನಿ ಶುಭಾನಿ ಚ ॥ 16 ॥**

ನಾರದರು ಹೇಳುವರು – ದೇವಿಯರೇ! ಈ ಹಿಂದೆ ಉಮೆಯು ಯಾವ ತನ್ನ ಕಲ್ಯಾಣಗುಣಗಳಿಂದ ಪರಮ ಪಾವನವೂ ಶುಭಪ್ರದವೂ ಆದ ಹಿಂದೆ ಹೇಳಿದ ಪುರಾತನ ವ್ರತಗಳನ್ನೆಲ್ಲವನ್ನೂ ಸಾಕ್ಷಾತ್ಕಾರ ಮಾಡಿಕೊಂಡಿದ್ದಳೂ ಪುಣ್ಯಫಲವನ್ನು ನನ್ನ ತಪಸ್ಸಿನ ಪ್ರಭಾವದಿಂದಲೇ ನಿಮಗೂ ಸಾಕ್ಷಾತ್ಕಾರ ಮಾಡಿಕೊಡುತ್ತೇನೆ. ನೀವೆಲ್ಲ ಆವೆಲ್ಲವನ್ನೂ ಸಾಕ್ಷಾತ್ಕರಿಸಿರಿ ಎಂದರು.

ಹೀಗೆ ಹೇಳಿದ ನಾರದರು ಉಮಾದೇವಿಯಿಂದ ಬಿತ್ತರಿಸಲ್ಪಟ್ಟ ಪುಣ್ಯಕ ವ್ರತಗಳನ್ನು ರುಕ್ಮಿಣಿಯೆ ಮೊದಲಾದವರಿಗೆ ಸಾಕ್ಷಾತ್ಕಾರ ಮಾಡಿಕೊಟ್ಟರು.

*ವೈಶಂಪಾಯನ –*

**ರುಗ್ಮಿಣೀ ವ್ರತಕಂ ಚಕ್ರೇ ದೃಷ್ಟ್ವಾ ವ್ರತಕವಿಸ್ತರಮ್ ।**
**ಉಮಯಾ ವರದಾನೇನ ದೃಷ್ಟ್ವಾ ದಿವ್ಯೇನ ಚಕ್ಷುಷಾ ॥ 17 ॥**

**ಉಮಾವ್ರತೇಷು ಸರ್ವೇಷು ವೃಷದಾನಂ ತಥಾಧಿಕಂ ।**
**ರತ್ನಮಾಲಾ ಪ್ರದಾನಂ ಚ ಯಥಾಽನ್ನಂ ಸಾರ್ವಕಾಮಿಕಮ್ ॥ 18 ॥**

ವೈಶಂಪಾಯನರು ಜನಮೇಜಯನಿಗೆ – ರಾಜನೇ! ರುಕ್ಮಿಣಿಯು ನಾರದರ ವರದಂತೆ ಉಮಾದೇವಿಯ ವಿಸ್ತೃತವಾದ ಪುಣ್ಯಕ ವ್ರತವನ್ನು ದಿವ್ಯದೃಷ್ಟಿಯಿಂದ ಕಂಡು ಆ ವ್ರತವನ್ನು ಆಚರಿಸಿದಳು. ರುಗ್ಮಿಣಿಯು ವ್ರತಾಂಗವಾಗಿ ಅಧಿಕ ವೃಷದಾನವನ್ನೂ, ರತ್ನಮಾಲೆಗಳನ್ನೂ, ಸಮಸ್ತಕಾಮನೆಗಳನ್ನು ಪೂರ್ಣ ಮಾಡುವ ಅನ್ನದಾನವನ್ನೂ ಮಾಡಿದಳು.

**ತಥಾ ಜಾಂಬವತೀ ಚಕ್ರೇ ಪುರೋಮಾವ್ರತಕಂ ಯಥಾ ।**
**ದದಾವಭ್ಯಧಿಕಂ ಸಾ ತು ರತ್ನವೃಕ್ಷಂ ಮನೋಹರಮ್ ॥ 19 ॥**
**ಸತ್ಯ ದದೌ ತಥೈವಾಥ ಪುರೋಮಾವ್ರತಕಂ ತಥಾ ।**
**ಪೀತಮಭ್ಯಧಿಕಂ ವಾಸಸ್ತಯಾ ದತ್ತಮುಮಾವ್ರತೇ ॥ 20 ॥**

ಜಾಂಬವತಿಯೂ ಸಹ ಉಮಾದೇವಿ ಹೇಳಿದ್ದ ವ್ರತವನ್ನಾಚರಿಸಿದಳು. ಅವಳು ವ್ರತದಲ್ಲಿ ಹೇಳದೆ ಇದ್ದ ರತ್ನಮಯವಾದ ವೃಕ್ಷವನ್ನೆ ಮಾಡಿಸಿ ವ್ರತಾಂಗ ದಾನ ಮಾಡಿದಳು.

ನಂತರ ಸತ್ಯಾದೇವಿಯೂ ಉಮಾವ್ರತವನ್ನು ಮಾಡಿದ್ದಲ್ಲದೆ ಉಮಾದೇವಿಯು ಮಾಡಿದ ದಾನಕ್ಕಿಂತ ಅಭ್ಯಧಿಕವಾದ ಪಟ್ಟ-ಪೀತಾಂಬರಗಳನ್ನು ವಿಪ್ರರಿಗೆ ದಾನ ಮಾಡಿದಳು.

ಇವರಲ್ಲದೆ ಅನೇಕರು ಉಮಾವ್ರತವನ್ನು ರೋಹಿಣೀ - ಫಲ್ಗುಣಿ - ಮಘಾನಕ್ಷತ್ರಾಭಿಮಾನಿಗಳೂ ಮಾಡಿ ಅನೇಕ ದಾನಗಳನ್ನು ನೀಡಿರುವರು. ಶತಭಿಷಕ್ ದೇವತೆಯೂ ಪುಣ್ಯಕ ವ್ರತ ಮಾಡಿ ತದಂಗ ದಾನ ಮಾಡಿರುವಳು. ಇದರ ಫಲವಾಗಿಯೇ ನಕ್ಷತ್ರಗಳಲ್ಲಿ ಶತಭಿಷ ನಕ್ಷತ್ರವು ಪ್ರಾಧಾನ್ಯ ಹೊಂದುವಂತಾಯಿತು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಪಾರಿಜಾತಹರಣದಲ್ಲಿ ಪುಣ್ಯಕ ವ್ರತಗಳ ವಿಧಿವಿಧಾನ ನಿರೂಪಣೆವೆಂಬಲ್ಲಿ
ಎಂಬತ್ತೊಂದನೆಯ ಅಧ್ಯಾಯ ಸಮಾಪ್ತಿ
ಪೂರ್ವಾರ್ಧ ಸಮಾಪ್ತ

# ಅಥ ದ್ವ್ಯಶೀತಿತಮೋಽಧ್ಯಾಯಃ

## ಅಥ ಉತ್ತರಾರ್ಧಃ

*ಜನಮೇಜಯ ಉವಾಚ –*

**ವೈಶಂಪಾಯನ ಧರ್ಮಜ್ಞ ವ್ಯಾಸಶಿಷ್ಯ ತಪೋಧನ ।**
**ಪಾರಿಜಾತಸ್ಯ ಹರಣೇ ಷಟ್ಪುರಂ ಪರಿಕೀರ್ತಿತಮ್ ॥ 1 ॥**
**ನಿವಾಸೋಽಸುರ ಮುಖ್ಯಾನಾಂ ದಾರುಣಾನಾಂ ತಪೋಧನ ।**
**ತೇಷಾಂ ವಧಂ ಮುನಿಶ್ರೇಷ್ಠ ಕೀರ್ತಯಸ್ವ ಅಂಧಕಸ್ಯ ಚ ॥ 2 ॥**

ಜನಮೇಜಯನು ವೈಶಂಪಾಯರನ್ನು ಕುರಿತು – ಗುರುಗಳೇ ! ತಾವು ಪಾರಿಜಾತಾಪಹರಣ ಪ್ರಸ್ತಾವನೆಯಲ್ಲಿ ಷಟ್ಪುರ ವಿಷಯವನ್ನು ಪ್ರಸ್ತಾಪ ಮಾಡಿದ್ದಿರಿ. ಅದೊಂದು ದಾರುಣರಾದ ದೈತ್ಯರ ನಿವಾಸವೆಂದೂ ತಿಳಿಸಿದ್ದೀರಿ. ಆ ಷಟ್ಪುರವಾಸಿಗಳ ಅಂತ್ಯ ಹೇಗಾಯಿತೆಂದೂ, ಹಾಗೆಯೇ ಅಂಧಕಾಸುರನ ವಧವನ್ನೂ ಬಿತ್ತರಿಸಿರಿ ಎಂದನು.

*ವೈಶಂಪಾಯನ ಉವಾಚ –*

**ತ್ರಿಪುರೇ ನಿಹತೇ ವೀರೇ ರುದ್ರೇಣಾಕ್ಲಿಷ್ಟ ಕರ್ಮಣಾ ।**
**ತತ್ರ ಪ್ರಧಾನಾ ಬಹುವೋ ಬಭೂವುರಸುರೋತ್ತಮಾಃ ॥ 3 ॥**
**ಶರಾಗ್ನಿನಾ ನ ದಗ್ಧಾಸ್ತೇ ರುದ್ರೇಣ ತ್ರಿಪುರಾಲಯಾಃ ।**
**ಷಷ್ಟಿಃ ಶತಸಹಸ್ರಾಣಿ ನ ನ್ಯೂನಾನ್ಯಧಿಕಾನಿ ಚ ॥ 4 ॥**

ವೈಶಂಪಾಯನರು ವೀರ ಜನಮೇಜಯ! ಅನಾಯಾಸವಾಗಿ

ಅತಿಕಷ್ಟಕಾರ್ಯಗಳನ್ನು ಮಾಡುವ ರುದ್ರದೇವರು ತ್ರಿಪುರರನ್ನು' ನಾಶ ಮಾಡಿದರು. ರುದ್ರದೇವನ ಶರವರ್ಷದಿಂದ ಸಾಯದೇ ಬದುಕು ಉಳಿದವರು ಆರು ಲಕ್ಷ ಮಂದಿ ಮಾತ್ರವೇ.

**ತೇ ಜ್ಞಾತಿವಧಸಂತಪ್ತಾಃ ಚಕ್ರುಃ ವೀರಾಃ ಪುರಾ ತಪಃ ।**
**ಆದಿತ್ಯಭಿಮುಖಾ ವೀರಾಃ ಸಹಸ್ರಾಣಾಂ ಶತಂ ಸಮಾಃ ।**
**ವಾಯುಭಕ್ಷಾಃ ನೃಪಶ್ರೇಷ್ಠ! ಸ್ತುವಂತಃ ಪದ್ಮಸಂಭವಮ್ ॥ 5 ॥**

---

1. **ತ್ರಿಪುರಾಸುರರು :**
ತಾರಕಾಸುರನ ಮಕ್ಕಳು. ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲೀ. ತಾರಕಾಸುರನು ಮೃತನಾದ ಮೇಲೆ ಮಾಯಾಸುರನು ತಾರಕ್ಷ-ವಿದ್ಯುನ್‌ಮಾಲೀಯೊಂದಿಗೆ ಪ್ರಯಾಗದಲ್ಲಿ ತಪಸ್ಸನ್ನಾಚರಿಸಿ ಬ್ರಹ್ಮನನ್ನು ಕಂಡು – ನಾನು ಅವಧ್ಯನಾಗದೇಕೆಂದು ಹಾಗೂ ಯಾವ ದೇವತೆಯಿಂದಲೂ ಭೇಧಿಸಲಾಗದ ಮೂರು ಪುರಗಳನ್ನು ನಿರ್ಮಿಸುವ ವರ ಬೇಡಿದನು. ಅವಧ್ಯತ್ವ ಸಾಧ್ಯವಿಲ್ಲವೆಂದು ತ್ರಿಪುರ ರಚಿಸಿರುವ ವರಕ್ಕೆ ಅಸ್ತು ಎಂದನು. ಮುಂದೆ ಮಯನು ಪುಷ್ಯ ನಕ್ಷತ್ರದಂದು ಕ್ರಮವಾಗಿ ಭೂಮಿ-ಅಂತರಿಕ್ಷ-ದ್ಯುಲೋಕದಲ್ಲಿ ಸಂಚರಿಸುವ ಕಬ್ಬಿಣದ-ಬೆಳ್ಳಿಯ-ಸುವರ್ಣದ ಪುರಗಳನ್ನು ನಿರ್ಮಿಸಿದ. ಇದು ಪುಷ್ಯ ನಕ್ಷತ್ರದ ದಿವಸ ಒಂದೇ ಕಡೆ ಸೇರಿದಾಗ, ಒಂದೇ ಬಾಣದಿಂದ ಪುಡಿ ಮಾಡಿದರೆ ನಾಶ. ಇಲ್ಲವಾದರೆ ಅಭೇದ್ಯವೆನಿಸಿತ್ತು. ತಾರಾಕ್ಷ ಸುವರ್ಣಪುರ, ಕಮಲಾಕ್ಷ ರಜತಪುರ, ವಿದ್ಯುನ್ಮಾಲಿಗೆ ಆಯಸಪುರ ಪಡೆದು ಸಕಲ ಸುಖಭೋಗಗಳನ್ನು ಪಡೆದರು.

ಈ ರಾಕ್ಷಸರು ವಿಧಿಯನ್ನು ಮೀರಿ ನಡೆದರು. ದೇವತೆಗಳೆಲ್ಲರೂ ಪರಮಶಿವನನ್ನು ಪ್ರಾರ್ಥಿಸಿದರು. ಶಿವನಿಗೂ ಕೊಲ್ಲಲಸಾಧ್ಯವಾಗಲು ಮೂರು ಕಾರಣವಿತ್ತು. ತ್ರಿಪುರರ ಹೆಂಡಂದಿರು ಮಹಾಪತಿವ್ರತೆಯರಾಗಿದ್ದರು. ಈ ಪಟ್ಟಣಗಳಲ್ಲಿ ಅಮೃತವಾಪಿ ಇದ್ದು ಇದರ ಪ್ರೋಕ್ಷಣೆಯಿಂದಾಗಿ ಸತ್ತ ದೈತ್ಯರು ಎದ್ದು ಬರುತ್ತಿದ್ದರು. ಈ ಮೂರೂ ಪಟ್ಟಣ ಒಂದೆ ಕಡೆ ಸೇರಿದಾಗ ಮಾತ್ರ ಭೇದಿಸಬಹುದಿತ್ತು. ಶಿವನಿಗೆ ಕೀರ್ತಿ ತರಲು ಭಗವಂತನು ಬ್ರಹ್ಮನೊಂದಿಗೆ ಎತ್ತಾಗಿ ಅಮೃತವಾಪಿ ನೀರನ್ನೆಲ್ಲ ನೆಕ್ಕಿ ಹಾಕಿದ ಹಾಗೂ ತನ್ನ ಕೊಂಬಿನಿಂದ ಆ ಮೂರು ಪಟ್ಟಣಗಳು ಒಂದೇ ಪಂಕ್ತಿಯಲ್ಲಿರುವಂತೆ ಮಾಡಿ, ತ್ರಿಪುರ ಪತ್ನಿಯರ ಮುಂದೆ ನಿರ್ವಾಣ ವೇಷದಲ್ಲಿ ನಿಂತ. 'ನಮ್ಮ ಪತಿ ಹೀಗಿರಬಾರದೆ' ಎಂದು ಮನಸ್ಸಿನ ದೋಷದಿಂದಾಗಿ ತ್ರಿಪುರಾಸುರರು ದುರ್ಬಲರಾದರು. ಬ್ರಹ್ಮದೇವರು ಶಿವನಿಗೆ ವಿಷ್ಣುಪಂಜರ ಸ್ತೋತ್ರವನ್ನುಪದೇಶಿಸಿದರು. ಇದರಿಂದಾಗಿ ಶಿವನು ಭೂಮಿಯನ್ನೆ ರಥವನ್ನಾಗಿಯೂ, ನಾಲ್ಕು ವೇದ ನಾಲ್ಕು ಕುದುರೆಯನ್ನಾಗಿಯೂ, ಬ್ರಹ್ಮನ್ನನ್ನೆ ಸಾರಥಿಯಾಗಿ ಹೂಂದಿ ಮಂದರ ಪರ್ವತವನ್ನೇ ಬಿಲ್ಲಾಗಿಸಿ, ಸಮುದ್ರವನ್ನೇ ಬತ್ತಳಿಕೆ ಮಾಡಿ ಶೇಷನನ್ನೆ ಅದಕ್ಕೆ ಬಿಗಿದು, ವಿಷ್ಣುವನ್ನೇ ಬಾಣವಾಗಲು ಪ್ರಾರ್ಥಿಸಿ ಒಂದೇ ಕಡೇ ಸೇರಿದ್ದ ಮೂರು ಪಟ್ಟಣಗಳನ್ನೂ ಒಂದೇ ಬಾಣದಿಂದಲೇ ಸುಟ್ಟು ಹಾಕಿದ [ಮ.ಭಾ. ದ್ರೋಣ-ಕರ್ಣ] ಇದು ನಡೆದದ್ದು ಕಾರ್ತಿಕ ಪೌರ್ಣಿಮೆ.

**ತೇಷಾ ಮುದಂಬರಂ ರಾಜನ್ ಗಣ ಏಕಃ ಸಮಾಶ್ರಿತಃ ।**
**ಕಪಿತ್ಥ ವೃಕ್ಷ ಮಾಶ್ರಿತ್ಯ ಕೇಚಿತ್ ತತ್ರೋಷಿತಾಃ ಪುರಾ ॥ 6 ॥**

**ಸೃಗಾಲವಾಟೀಸ್ತ್ವಪರೇ ಚೇರುರುಗ್ರಂ ತಥಾ ತಪಃ ।**
**ವಟಮೂಲೇ ತಥಾ ಚೇರುಃ ತಪಃ ಕೌರವನಂದನ ॥ 7 ॥**

ಆ ಲಕ್ಷ ದೈತ್ಯರೆಲ್ಲರೂ – ಜಂಬೂ ಮಾರ್ಗವೆಂಬ ಸಜ್ಜನರಿಗಿಷ್ಟವಾದ ಮಹರ್ಷಿ ಸೇವಿತ ಪ್ರದೇಶದಲ್ಲಿ ಸೂರ್ಯಾಭಿಮುಖರಾಗಿ, ಕೇವಲ ಗಾಳಿಯನ್ನು ಮಾತ್ರ ಸೇವಿಸುತ್ತ ಲಕ್ಷ ವರ್ಷ ತಪಸ್ಸನ್ನಾಚರಿಸಿದರು. ಅವರಲ್ಲಿ ಕೆಲವರು ಔದುಂಬರ ವೃಕ್ಷವನ್ನಾಶ್ರಯಿಸಿ, ಮತ್ತೆ ಕೆಲವರು ಬೇಲದ ವೃಕ್ಷವನ್ನೂ ಆಶ್ರಯಿಸಿ ತಪೋನುಷ್ಠಾನ ಗೈದರು. ಸೃಗಾಲವೆಂಬ ವೃಕ್ಷ ವಿಶೇಷವನ್ನಾಶ್ರಯಿಸಿದವರು ಕೆಲವರಾದರೆ ಮತ್ತೆ ಕೆಲವರು ವಟವೃಕ್ಷವನ್ನಾಶ್ರಯಿಸಿ ಬ್ರಹ್ಮದೇವನನ್ನು ಕುರಿತು ತಪೋನಿರತರಾಗಿದ್ದರು.

ಅವರೆಲ್ಲರೂ ವೇದಪಠನವನ್ನು ಬಿಡದೆ ಮಾಡುತ್ತಿದ್ದ ತಪಸ್ಸಿಗೆ ಮೆಚ್ಚಿ ಬ್ರಹ್ಮದೇವ ಮೈದೋರಿ, ವರದಿಂದ ಸಂತೋಷಗೊಳಿಸಲು ನಿಂತ.

**ತೇಷಾಂ ತುಷ್ಟಃ ಪ್ರಜಾಕರ್ತಾ ನರದೇವ ಪಿತಾಮಹಃ ।**
**ವರಾನ್ ದಾತುಂ ಸುರಶ್ರೇಷ್ಠಃ ಪ್ರಾಪ್ತೋ ಧರ್ಮಭೃತಾಂ ವರಃ ॥ 8 ॥**

ದೈತ್ಯವರ್ಯರೆ! ನಿಮಿಗಿಷವಾದ ವರ ಬೇಡಿರಿ – ವರ ನೀಡಲೆಂದೆ ನಿಮ್ಮ ಮುಂದೆ ನಿಂತಿರುವೆ ಎಂದಾಗ ರುದ್ರದೇವನ ಪರಮವೈರಿಗಳಾದ ಅವರು ಬ್ರಹ್ಮನಿಂದ ಸಾಮಾನ್ಯ ವರವನ್ನು ಬೇಡಲು ಇಚ್ಛಿಸಲಿಲ್ಲ.

ರುದ್ರದೇವನನ್ನೆ ನಿರ್ಮೂಲ ಮಾಡಲಿಚ್ಛಿಸಿದ ಈ ರುದ್ರ ತಾತನು ತಪಸ್ಸಿನ ಫಲವೇನು ನೀಡಬಲ್ಲನೆಂದು ಶಂಕಿಸಿ, ದೂಷಿತಮನಸ್ಕರಾದ ಅವರು ಯಾವುದೇ ವರವನ್ನೂ ಅವನಿಂದ ಬೇಡದೆ ಸುಮ್ಮನಿದ್ದರು.

**ನೇಷುಃ ತದ್ವರದಾನಂ ತು ದ್ವಿಷತಃ ತ್ರ್ಯಂಬಕಂ ವಿಭುಮ್ ।**
**ಇಚ್ಛಂತೋಽಪಚಿತಿಂ ಗಂತು ಜ್ಞಾತೀನಾಂ ಕುರುನಂದನ ॥ 9 ॥**

ತಮ್ಮ ಬಂಧುಗಳನ್ನೆಲ್ಲ ಕೊಂದದಕ್ಕೆ ಪ್ರತೀಕಾರಕ್ಕಾಗಿ ಕಾಯುತ್ತಿದ್ದ ದೈತ್ಯರನ್ನು ಕುರಿತು ಬ್ರಹ್ಮದೇವನು,

**ವಿಶ್ವಸ್ಯ ಜಗತಃ ಕರ್ತುಃ ಸಂಹರ್ತುಶ್ಚ ಮಹಾತ್ಮನಃ ।**
**ಕಃ ಶಕ್ತೋಽಪಚಿತಿಂ ಗಂತುಂ ಮಾಸ್ತು ವೋಽತ್ರ ವೃಥಾ ಶ್ರಮಃ ॥ 10 ॥**

ಅಸುರರೇ, ಸಮಸ್ತ ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣನಾದ ಮಹಾನುಭಾವನಾದ ಶ್ರೀಮನ್ನಾರಾಯಣನ ಪುರುಷನಾದ ಭಕ್ತಾಗ್ರೇಸರ ಶಿವನಿಗೆ ಯಾರು ತಾನೇ ದ್ರೋಹ ಬಗೆಯಲಾದೀತು? ಅವನನ್ನು ಮುಗಿಸುವ ನಿಮ್ಮ ಪ್ರಯತ್ನ ವ್ಯರ್ಥವೆ ಸರಿ.

**ಅನಾದಿ ಮಧ್ಯನಿಧನಃ ಸೋಮೋ ದೇವೋ ಮಹೇಶ್ವರಃ ।**
**ತಮಸೂಯ ಸುಖಂ ಸ್ವರ್ಗೇ ವಸ್ತುಮಿಚ್ಛಂತಿ ಯೇಽಸುರಾಃ ॥ 11 ॥**

ಆದಿಮಧ್ಯಾಂತರಹಿತನಾದ ಉತ್ಕೃಷ್ಟಜ್ಞಾನವಂತನೂ. (ಸೋಮ : ಸ+ಉ+ಮಾ) ಈಶ್ವರನಿಗೂ ಗುರುವೆನಿಸುತಿಹ ಪವಮಾನದೇವನ ಭಕ್ತನಾದ ಶಿವನ ಮೇಲೆ ಅಸೂಯೆಯಿಂದ ಕೂಡಿದ ಯಾವ ವ್ಯಕ್ತಿಯು ತಾನೆ ಸ್ವರ್ಗದಲ್ಲಿ ಸುಖದಿಂದಿರಲು ಸಾಧ್ಯ? ಎಂದು ಹೇಳಿದರು. ಶಿವನ ನಾಶವನ್ನೇ ಬಯಸಿದ್ದ ಅವರು ಬ್ರಹ್ಮನ ವರವನ್ನು ಇಚ್ಛಿಸಿಲಿಲ್ಲ. ಶಿವನ ಮಹಿಮೆ ಅರಿತ ಕೆಲವರು ಬ್ರಹ್ಮನಿಂದ ಸುತಲಾದಿಲೋಕ ಭೋಗಗಳನ್ನು ಬೇಡಿ ಹೊರಟು ಹೋದರು.

**ನೇಷುಸ್ತತ್ರ ಕೇಚಿತ್ತು ದುರಾತ್ಮಾನೋ ಮಹಾಸುರಾಃ ।**
**ಅಥೇಷುರಪರೇ ರಾಜನ್ ಅಸುರಾ ಭವ್ಯಭಾವನಾಃ ॥ 12 ॥**

ಬ್ರಹ್ಮದೇವರು ಈ ದೈತ್ಯರನ್ನುದ್ದೇಶಿಸಿ "ಅಸುರರೇ! ರುದ್ರದೇವನ ಮೇಲೆ ಪ್ರತೀಕಾರ ತೀರಿಸುವಂತಹ ವರ ಹೊರತು ಬೇರೆ ಯಾವುದನ್ನಾದರೂ ವರಬೇಡಿರಿ" ಎಂದಾಗ ದೈತ್ಯರೆಲ್ಲರೂ ಸೇರಿ ಬ್ರಹ್ಮದೇವನೇ. ನಾವೆಲ್ಲರೂ ಸರ್ವದೇವತೆಗಳಿಂದಲೂ ಅವಧ್ಯರಾಗಬೇಕು *[ಸರ್ವದೇವಾನಾಮವಧ್ಯಾಃ ಸ್ಯಾಮ]* ನಮಗೆ ಯಾರಿಂದಲೂ ಭೇದಿಸಲಾಗದ ಆರು ಪಟ್ಟಣಗಳನ್ನು ಭೂ ಭಾಗದಲ್ಲಿ ನಿರ್ಮಾಣವಾಗಲಿ. ಅವು ಸರ್ವಕಾಮಿತ ವಸ್ತು ಪೂರ್ಣ-ವಾಗಿರಬೇಕು. ನಾವೆಲ್ಲರೂ ಅಲ್ಲಿ ಹೋಗಿ ಸುಖವಾಗಿ ವಾಸಿಸಬೇಕು. ನಮ್ಮ ತ್ರಿಪುರಾಸುರರನ್ನೆಲ್ಲ ಸಂಹಾರ ಮಾಡಿದ ರುದ್ರನಿಂದ ಭಯಾತುರರಾಗಿದ್ದೇವೆ. ಅದರಿಂದಾಗಿ ನಮಗೆ ಷಟ್ಪುರಗಳಲ್ಲಾದರೂ ರುದ್ರದೇವನಿಂದ ಭಯವಿಲ್ಲ-ದಿರುವಂತೆ ವರ ನೀಡಿರಿ.

**ರುದ್ರಾದುಗ್ರಂ ಭಯಂ ನ ಸ್ಯಾದ್ ಯೇನಿ ನೋ ಜ್ಞಾತಯೋ ಹತಾಃ ।**
**ನಿಹತಂ ತ್ರಿಪುರಂ ದೃಷ್ಟ್ವಾ ಭೀತಾಃ ಸ್ಮ ತಪಸಾಂ ನಿಧೇ ॥ 13 ॥**

ಬ್ರಹ್ಮದೇವನು ಹೇಳುವನು –

ಅಸುರರೇ! ನಿಮ್ಮ ಇಚ್ಛೆಯಂತೆ ಆಗಲಿ. ನೀವು ದೇವತೆಗಳು ಹಾಗೂ

ರುದ್ರದೇವನಿಂದ ಅವಧ್ಯರೆ ಆಗುವಿರಿ. ಆದರೆ ನೀವು ಉದ್ಧಟರಾಗಿ ಬ್ರಾಹ್ಮಣರಿಗೆ, ಗೋವುಗಳಿಗೆ ದ್ರೋಹವೆಸಗದಿದ್ದರೆ ನಾನಿತ್ತ ವರ ಫಲಿಸುತ್ತದೆ. ಜಗತ್ತಿಗೆ ವಿಪ್ರರೆ ಗತಿಯಾಗಿರುವರು. ಜ್ಞಾನ ಪ್ರಿಯರಾದ ಬ್ರಾಹ್ಮಣರಿಗೆ ಅಪಚಾರವೆಸಗಿದ ಮರುಕ್ಷಣದಲ್ಲಿಯೇ ಬ್ರಾಹ್ಮಣ ಪ್ರಿಯನಾದ ವಿಷ್ಣುವಿನಿಂದ ನೀವು ಸಮೂಲ ನಾಶ ಹೊಂದುವಿರಿ.

**ವಿಪ್ರೋಪಘಾತಂ ಮೇಹಾಚ್ಚೇತ್ ಕರಿಷ್ಯಥ ಕಥಂಚನ ।**
**ನಾಶಂ ಯಾಸ್ಯಥ ವಿಪ್ರಾ ಹಿ ಜಗತಃ ಪರಮಾ ಗತಿಃ ॥ 14 ॥**

**ನಾರಾಯಣಾದ್ ವಿಭೇತವ್ಯಂ ಕುರ್ವದ್ಭಿಃ ಬ್ರಾಹ್ಮಣಾಹಿತಮ್ ।**
**ಸರ್ವಭೂತೇಷು ಭಗವಾನ್ ಹಿತಂ ಧತ್ತೇ ಜನಾರ್ದನಃ ॥ 15 ॥**

ಬ್ರಾಹ್ಮಣರಿಗೆ ದ್ರೋಹವೆಸಗುವ ಪುರುಷರು ನಾರಾಯಣನಿಂದ ಭಯಪಡಲೇಬೇಕು. ಶ್ರೀಮನ್ನಾರಾಯಣನು ಸರ್ವಜಗತ್ತಿನ ಹಿತ ಬಯಸುವವನು. ಹೀಗೆ ಹೇಳಿದ ನಂತರ ಬ್ರಹ್ಮನ ಅನುಜ್ಞೆ ಪಡೆದು ತಮ್ಮ ತಮ್ಮ ವಾಸಸ್ಥಾನಗಳಿಗೆ ತೆರಳಿದರು.

ಧರ್ಮಿಷ್ಟರಾದ ಕೆಲವು ರುದ್ರಭಕ್ತರು ಶಿವನನ್ನು ಸ್ತೋತ್ರ ಮಾಡಿದರು.

ಆಗ ತ್ರಿಪುರ ನಾಶಕನೂ, ಸತ್ಪುರುಷರಿಗೆ ಆಶ್ರಯದಾತನೂ ಆದ ರುದ್ರದೇವನು ಪಾರ್ವತಿಯೊಂದಿಗೆ ದರ್ಶನವಿತ್ತು ಹೀಗೆಂದನು,

**ವೈರಮುತ್ಸೃಜ್ಯ ದಂಭಂ ಚ ಹಿಂಸಾಂ ಚಾಸುರಸತ್ತಮಾಃ ।**
**ಮಾಮೇವ ಚಾಶ್ರಿತಾಃ ತಸ್ಮಾದ್ ವರಂ ಸಾಧು ದದಾಮಿ ವಃ ॥ 16 ॥**

**ಯೈಃ ದೀಕ್ಷಿತಾಃ ಸ್ಥ ಮುನಿಭಿಃ ಸತ್ಕ್ರಿಯಾಪರಮೈಃ ದ್ವಿಜೈಃ ।**
**ಸಹ ತೈಃ ಗಮ್ಯತಾಂ ಸ್ವರ್ಗಂ ಪ್ರೀತೋಹಂ ವಃ ಸುಕರ್ಮಣಾ ॥ 17 ॥**

ಅಸುರರೇ! ನೀವೆಲ್ಲರೂ ದೇವತೆಗಳ ಮೇಲೆ ವೈರವನ್ನೂ ದುರಹಂಕಾರವನ್ನೂ ಪ್ರಾಣಿಗಳ ಹಿಂಸೆಯನ್ನೂ ಪರಿತ್ಯಾಗ ಮಾಡಿ ನನ್ನನ್ನೇ ಆಶ್ರಯಿಸಲು ಬಂದಿರುವಿರಿ. ನಾನು ನಿಮ್ಮಲ್ಲಿ ಪ್ರೀತನಾಗಿ ವರವನ್ನು ನೀಡುತ್ತೇನೆ.

ಸತ್ಕರ್ಮನಿಷ್ಠರಾದ ಯಾವ ಬ್ರಹ್ಮರ್ಷಿಗಳು ನಿಮಗೆ ಶಿವಭಕ್ತಿ ದೀಕ್ಷೆ ನೀಡಿರುವರೋ ಅವರೊಂದಿಗೆ ನೀವು ಸ್ವರ್ಗಕ್ಕೆ ಹೋಗಿರಿ. ನಿಮ್ಮ ಸತ್ಕರ್ಮ ನನಗೆ ಪ್ರಿಯವಾಗಿದೆ.

**ಅಪಿ ಕಾಪಿತ್ಥಿಕಾ ವೃಕ್ಷೇಂತೇ ತೇಷಾಂ ಲೋಕೋ ಯಥಾ ಮಮ ।**
**ಇಹ ಯೇ ಚೈವ ವತ್ಸ್ಯಂತಿ ತಪಸಾ ಬ್ರಹ್ಮವಾದಿನಃ ॥ 18 ॥**

ಬ್ರಹ್ಮವಾದಿಗಳಾದ ಯಾವ ತಾಪಸರು ಕಪಿತ್ಥ ವೃಕ್ಷದಡಿಯಲ್ಲಿದ್ದು ತಪವಗೈದರೋ ಅವರು 'ಕಾಪಿತ್ಥ'ರೆಂಬ ಹೆಸರಿನಿಂದ ಪ್ರಖ್ಯಾತರಾಗಲಿ. ಅವರಿಗೆ ನನ್ನ ಲೋಕ ಪ್ರಾಪ್ತಿಯಾಗುತ್ತದೆ.

**ಶ್ವೇತವಾಹನ ನಾಮಾನಂ ಯಶ್ಚ ಮಾಂ ಪೂಜಯಿಷ್ಯತಿ ।**
**ಸರ್ವತೋ ಭಯಚಿತ್ತೋಽಪಿ ಗತಿಂ ಸ ಮಮ ಯಾಸ್ಯತಿ ॥ 19 ॥**

ತಪಸ್ವಿಗಳೇ! ಯಾರು ಅಮಾವಾಸ್ಯೆ ಮತ್ತು ಪೌರ್ಣಿಮೆಗಳಲ್ಲಿ ವಾನಪ್ರಸ್ಥ ವಿಧಿಯಿಂದ ನನ್ನನ್ನು ಪೂಜಿಸುತ್ತಾ ಇಲ್ಲಿ ವಾಸ ಮಾಡುವರೋ ಅವರು ಸಾವಿರ ವರ್ಷ ತಪಸ್ಸನ್ನಾಚರಿಸಿದ ಫಲವನ್ನು ಪಡೆಯುವರು.

ಇಲ್ಲಿ ಮೂರು ದಿನ ವಾಸಿಸಿದರೂ ಸಾಕು. ಅವರು ಅಭೀಷ್ಟಗಳನ್ನೆಲ್ಲ ಹೊಂದುವರು. ಅರ್ಕ ದ್ವೀಪದಲ್ಲಿ ವಾಸ ಮಾಡಿದವರಿಗೆ ಇಲ್ಲಿಗಿಂತಲೂ ಎರಡು ಪಟ್ಟು ಫಲಾಧಿಕ್ಯವು. ಯಾರು ಶ್ವೇತವಾಹನಯೆಂಬ ಹೆಸರಿನ ನನ್ನನ್ನು ಪೂಜಿಸುವವನು ಸರ್ವ ರೀತಿಯ ಭಯ ಹೊಂದಿದ್ದರೂ ಗತಭೀತನಾಗುವನು.

ಯಾರು ಉದುಂಬರ ವೃಕ್ಷದ ಆಶ್ರಯ ಪಡೆದಿರುವ ಔದುಂಬರ ಬ್ರಾಹ್ಮಣರನ್ನು ಹಾಗೆಯ ವಟವೃಕ್ಷಾಶ್ರಿತ ವಟಮೂಲ ವಿಪ್ರರನ್ನೂ, ಕಪಿತ್ಥವೃಕ್ಷಾಶ್ರಿತ ಸೃಗಾಲವಾಟೀ ಬ್ರಾಹ್ಮಣರನ್ನು ದೃಢವ್ರತಸ್ಥರಾದ ಬ್ರಹ್ಮವಾದಿಗಳನ್ನೂ ವಿಶೇಷವಾಗಿ ಸತ್ಕರಿಸುವರೋ ಅಂತಹವರ ಮನೋರಥ ಶೀಘ್ರವಾಗಿ ನೆರವೇರುವುವು.

**ಜಂಬೂ ಮಾರ್ಗಂ ಗಮಿಷ್ಯಾಮಿ ಜಂಬೂ ಮಾರ್ಗೇ ವಸಾಮ್ಯಹಮ್ ।**
**ಏವಂ ಸಂಕಲ್ಪ್ಯಮಾನೋಽಪಿ ರುದ್ರಲೋಕೇ ಮಹೀಯತೇ ॥ 20 ॥**

ಜಂಬೂಮಾರ್ಗಕ್ಕೆ ಹೋಗುವೆನು. ಅಲ್ಲಿಯೆ ವಾಸ ಮಾಡುವೆನು ಎಂದು ಸಂಕಲ್ಪ ಮಾತ್ರದಿಂದಲೇ ರುದ್ರಲೋಕ ಪ್ರಾಪ್ತಿಯು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಷಟ್ಪುರವಧವೆಂಬಲ್ಲಿ
ಎಂಬತ್ತೆರಡನೆಯ ಅಧ್ಯಾಯ ಸಮಾಪ್ತಿ

# ಅಥ ತ್ರ್ಯಶೀತಿತಮೋಽಧ್ಯಾಯಃ

*ವೈಶಂಪಾಯನ ಉವಾಚ –*

**ಏತಸ್ಮಿನ್ನೇವ ಕಾಲೇ ತು ಚತುರ್ವೇದ ಷಡಂಗವಿತ್ ।**
**ಬ್ರಾಹ್ಮಣೋ ಯಾಜ್ಞವಲ್ಕ್ಯಸ್ಯ ಶಿಷ್ಯೋ ಧರ್ಮಗುಣಾನ್ವಿತಃ ॥ 1 ॥**
**ಬ್ರಹ್ಮದತ್ತೇತಿ ವಿಖ್ಯಾತೋ ವಿಪ್ರೋ ವಾಜಸನೇಯಿವಾನ್ ।**
**ಅಶ್ವಮೇಧಃ ಕೃತಸ್ತೇನ ವಸುದೇವಸ್ಯ ಧೀಮತಃ ॥ 2 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! ಈ ಸಮಯದಲ್ಲಿಯೇ ಆರು ವೇದಾಂಗಸಹಿತ ನಾಲ್ಕೂ ವೇದಗಳಲ್ಲಿ ಪಾರಂಗತನೂ, ಬ್ರಹ್ಮದತ್ತನೆಂಬ ಬ್ರಾಹ್ಮಣನು ಸಂವತ್ಸರ ಪರ್ಯಂತವಾಗಿ ನಡೆಸುವ ಯಾಗಕ್ಕೆ ದೀಕ್ಷೆ ಹೊಂದಿದ್ದನು. ಯಾಜ್ಞವಲ್ಕ್ಯರ ಅಂತೇವಾಸಿಯಾದ ಬ್ರಹ್ಮದತ್ತನು ಧರ್ಮಗಳ ಮರ್ಮವನ್ನರಿತಿದ್ದನು. ಶುಕ್ಲಸಂಹಿತೆಯ ವಾಜಸನೇಯ ಶಾಖೆಯವನಾಗಿದ್ದು ಷಟ್ಪುರದಲ್ಲಿಯೇ ವಾಸವಾಗಿದ್ದನು. ಬ್ರಹ್ಮದತ್ತನು ವಸುದೇವನ ಸಹಾಧ್ಯಾಯಿಯಾಗಿದ್ದು ವಸುದೇವನಿಂದ ಬ್ರಹ್ಮದತ್ತನು ಅಶ್ವಮೇಧಯಾಗ ಮಾಡಿಸಿದ್ದನು. ಈ ಯಜ್ಞವು ಗಂಗಾತೀರದ ಆವರ್ತವೆಂಬ ಕ್ಷೇತ್ರದಲ್ಲಿ ನಡೆದಿತ್ತು.

## ವ್ಯಾಸರ ಉಪಸ್ಥಿತಿ

**ಸಖಾ ಚ ವಸುದೇವಸ್ಯ ಸಹಾಧ್ಯಾಯಿ ದ್ವಿಜೋತ್ತಮಃ ।**
**ಉಪಾಧ್ಯಾಯಶ್ಚ ಕೌರವ್ಯ ಕ್ಷೀರಹೋತಾ ಮಹಾತ್ಮನಃ ॥ 3 ॥**

ಈ ಸಾಂವತ್ಸರಿಕ ಯಾಗದಲ್ಲಿ ಪಾಲ್ಗೊಳ್ಳಲು ವಸುದೇವ – ದೇವಕಿಯೊಂದಿಗೆ

ಹೊರಟಿದ್ದ. ಬೃಹಸ್ಪತಿಯ ಯಜ್ಞಕ್ಕೆ ಇಂದ್ರ ಹೋದಂತ್ತಿತ್ತು. *[ಯಥಾಶಕ್ರೋ ಬೃಹಸ್ಪತಿಮ್]*

**ತತ್ ಸತ್ರಂ ಬ್ರಹ್ಮದತ್ತಸ್ಯ ಬಹ್ವನ್ನಂ ಬಹುದಕ್ಷಿಣಮ್ ।**
**ಉಪಾಸಂತಿ ಮುನಿಶ್ರೇಷ್ಠಾ ಮಹಾತ್ಮಾನೋ ದೃಢವ್ರತಾಃ ॥ 4 ॥**

**ವ್ಯಾಸೋಽಹಂ ಯಾಜ್ಞವಲ್ಕ್ಯಶ್ಚ ಸುಮಂತುಃ ಜೈಮಿನಿಸ್ತಥಾ ।**
**ಧೃತಿಮಾನ್ ಜಾಬಲಿಶ್ಚೈವ ದೇವಲಾದ್ಯಾಶ್ಚ ಭಾರತ ॥ 5 ॥**

ಬಹ್ವನ್ನವೂ ಬಹುದಕ್ಷಿಣಾಕವೂ ಆದ ಈ ಯಜ್ಞದಲ್ಲಿ ಭಾಗವಹಿಸಲು ವೇದವ್ಯಾಸದೇವರು (ವೈಶಂಪಾಯನರು (ಅಹಂ)) ನಾನೂ ಹೋಗಿದ್ದೆನು. ಯಾಜ್ಞವಲ್ಕ್ಯಾದಿಗಳು ಸುಮಂತು ಜೈಮಿನಿ ಪೈಲಾದಿ ಋಷಿಗಳು ಉಪಸ್ಥಿತರಿದ್ದರು.

**ಋದ್ಧ್ಯಾನುರೂಪಯಾ ಯುಕ್ತಂ ವಸುದೇವಸ್ಯ ಧೀಮತಃ ।**
**ಯತ್ರೇಪ್ಸಿತಾನ್ ದದೌ ಕಾಮಾನ್ ದೇವಕೀ ಧರ್ಮಚಾರಿಣೀ ॥ 6 ॥**

ವಸುದೇವನ ಸಂಪತ್ತಿಗೆ ಅನುರೂಪವಾಗಿದ್ದ ಆ ಯಜ್ಞದಲ್ಲಿ ಜಗನ್ನಾಥ ಶ್ರೀಕೃಷ್ಣನ ಪ್ರಭಾವದಿಂದಾಗಿ ಧರ್ಮಿಷ್ಠಳಾದ ದೇವಕೀದೇವಿಯು ಅಲ್ಲಿ ಭಾಗವಹಿಸಿದ್ದವರಿಗೆಲ್ಲ ಅಭೀಷ್ಟ ವಸ್ತುಗಳನ್ನು ದಾನವಾಗಿ ನೀಡಿದ್ದಳು.

## ಷಟ್ಪುರ ವಾಸಿಗಳ ಆಗ್ರಹ

ಹೀಗೆ ಸಾಂವತ್ಸರಿಕ ಯಜ್ಞವು ನಡೆಯುತ್ತಿರುವಾಗ ನಿಕುಂಭನೆ ಮೊದಲಾದ ಷಟ್ಪುರವಾಸಿಗಳು ಅಲ್ಲಿಗೆ ಬಂದು ದರ್ಪದಿಂದ ಹೀಗೆ ಹೇಳಿದರು.

ಎಲೋ ಬ್ರಾಹ್ಮಣನೆ ಕೇಳು! ಈ ನಿನ್ನಿಂದ ಆಚರಿಸಲ್ಪಡುತ್ತಿರುವ ಯಜ್ಞದಲ್ಲಿ ನಮಗೂ ಸೋಮಭಾಗವನ್ನು ಕೊಡು. ಹಾಗೆಯೇ ನಿನಗೆ ಐನೂರು ಸುಂದರಿಯರಾದ ಪುತ್ರಿಯರಿರುವರಂತೆ ಅವರನ್ನೂ ನಮಗೆ ಒಪ್ಪಿಸು. ರತ್ನಗಳನ್ನೂ ಬ್ರಾಹ್ಮಣರಿಗೇಕೆ ಕೊಡುವೆ! ನಮಗೆ ಕೊಡು. ನಾವು ಹೇಳಿದಂತೆ ಮಾಡದಿದ್ದರೆ ಈ ಯಜ್ಞವನ್ನು ಇಲ್ಲಿಗೆ ನಿಲ್ಲಿಸು. ಇದು ನಮ್ಮ ಆಜ್ಞೆ ಎಂದರು.

**ಕಾರ್ಯತಾಂ ಯಜ್ಞಭಾಗೋ ನಃ ಸೋಮಂ ಪಾಸ್ಯಾಮಹೇ ವಯಮ್ ।**
**ಕನ್ಯಾಶ್ಚ ಬ್ರಹ್ಮದತ್ತ! ನೋ ಯಜಮಾನಃ ಪ್ರಯಚ್ಛತು ॥ 7 ॥**

## ಷಟ್ಪುರರ ದುರಾಗ್ರಹ

**ಬಹ್ವ್ಯಃ ಸಂತ್ಯಸ್ಯ ಕನ್ಯಾಶ್ಚ ರೂಪವತ್ಯೋ ಮಹಾತ್ಮನಃ ।**
**ಆಹೂಯ ತಾಃ ಪ್ರದಾತವ್ಯಾ ಸರ್ವಥೈವ ಹಿ ನಃ ಶ್ರುತಮ್ ॥ 8 ॥**

**ರತ್ನಾನಿ ಚ ಬ್ರಹ್ಮದತ್ತೋ ವಿಶಿಷ್ಟಾನಿ ದದಾತು ನಃ ।**
**ಅನ್ಯಥಾ ತು ನ ಯಷ್ಟವ್ಯಂ ವಯಮಾಜ್ಞಾಪಯಾಮಹೇ ॥ 9 ॥**

**ಯಜ್ಞಭಾಗೋ ನ ವಿಹಿತಃ ಪುರಾಣೇಽಸುರಸತ್ತಮಾಃ ।**
**ಕಥಂ ಸತ್ರೇ ಸೋಮಪಾನಂ ಶಕ್ಯಂ ದಾತುಂ ಮಯಾ ಹಿ ವಃ ॥ 10 ॥**

**ಪೃಚ್ಛತೇಹ ಮುನಿಶ್ರೇಷ್ಠಾನ್ ವೇದಭಾಷ್ಯಾರ್ಥಕೋವಿದಾನ್ ।**

ದೈತ್ಯರ ಉದ್ಧಟತನ ಮಾತನ್ನು ಕೇಳಿದ ಬ್ರಹ್ಮದತ್ತನು ಹೀಗೆಂದನು. ಯಜ್ಞದಲ್ಲಿ ಭಾಗವು ದೇವತೆಗಳಿಗೆ ಮಾತ್ರವೆಂದು ವೇದಗಳು ಪುರಾಣಾದಿಗಳು ಸಾರುತ್ತಿರುವಾಗ ಅಸುರರಾದ ನಿಮಗೆ ಯಜ್ಞ ಭಾಗ ಕೊಡಲು ಹೇಗೆ ಬರುತ್ತದೆ. ಭಾಗವೆ ನಿಷಿದ್ಧವಾಗಿರುವಾಗ ಸೋಮಪಾನ ಮಾಡುವ ಅವಕಾಶವೂ ನಿಮಗಿರುವುದಿಲ್ಲ. ಇಲ್ಲಿ ವೇದವೇದಾಂತ ಚತುರರಾದ ವ್ಯಾಸಾದಿ ಮಹಾಮುನಿಗಳಿರುವರು. ಅವರನ್ನೇ ಕೇಳಿ ತಿಳಿಯಬಹುದು.

**ಕನ್ಯಾ ಹಿ ಮಮ ದೇಯಾಸ್ತಾಶ್ಚ ಸಂಕಲ್ಪ್ಯ ತಾಃ ಮಯಾ ।**
**ಅಂತರ್ವೇದ್ಯಾಂ ಪ್ರದಾತವ್ಯಾಃ ಸದೃಶಾನಾಮ ಸಂಶಯಮ್ ॥ 11 ॥**

ಇನ್ನು ನನ್ನ ಪುತ್ರಿಯರನ್ನು ಯಾರಿಗೆ ದಾನ ಮಾಡಬೇಕೆಂದು ಯಜ್ಞ ವೇದಿಕೆಯಲ್ಲಿ ಗುಣಶೀಲ ಸದೃಶ ಜಾತಿಯವರಾದ ಅಂತರ್ವೇದಿ ವಿಪ್ರರಿಗೆ ಕನ್ಯಾದಾನ ಮಾಡಲು ಸಂಕಲ್ಪಿಸಿದ್ದಾಗಿದ್ದು ನಿಮಗೆ ಕೊಡಲು ಬರುವುದಿಲ್ಲ.

**ರತ್ನಾ ನಿ ತು ಪ್ರಯಚ್ಛಾಮಿ ಸಾಂತ್ವೇನಾಹಂ ವಿಚಿಂತ್ಯತಾಮ್ ।**
**ಬಲಾನ್ನೈವ ಪ್ರದಾಸ್ಯಾಮಿ ದೇವಕೀ ಪುತ್ರ ಮಾಶ್ರಿತಃ ॥ 12 ॥**

ರತ್ನಗಳನ್ನು ಬೇಕಾದರೆ ನೀಡುತ್ತೇನೆ. ಆದರೆ ನೀವು ಕೇಳುವ ರೀತಿ ಸರಿಯಾಗಿಲ್ಲ. ಒಳ್ಳೆಯ ಮಾತಿನಿಂದ ಕೇಳಿರಿ ಕೊಡುತ್ತೇನೆ. ಬಲಾತ್ಕಾರ, ಆಗ್ರಹ ಮಾಡಿದ್ದಾದರೆ ಒಂದು ಕಾಸನ್ನೂ ಕೊಡಲಾರೆ. ಇನ್ನು ಶ್ರೀಕೃಷ್ಣನನ್ನು ಆಶ್ರಯಿಸಿ ಅವನ ಬೆಂಬಲ ಪಡೆದಿರುವ ನಾನು ಯಾರಿಗೂ ಭಯಪಡಲಾರೆ.

**ನಿಕುಂಭಾದ್ಯಸ್ತು ರುಷಿತಾಃ ಪಾಪಾಃ ಷಟ್ಪುರವಾಸಿನಃ ।**
**ಯಜ್ಞವಾಟಂ ವಿಲುಲುಪುಃ ಜಹ್ರುಃ ಕನ್ಯಾಶ್ಚ ತಾಸ್ತಥಾ ॥ 13 ॥**

## ಷಟ್ಪುರಾಸುರರ ಕೋಪ

ನಿಕುಂಭಾದ್ಯರು ಕ್ರೋಧದಿಂದ ಮೂರ್ಛಿತರಾಗಿ ಯಜ್ಞ ಮಂಟಪದಲ್ಲಿದ್ದ ಸಕಲ ವಸ್ತುಗಳನ್ನೂ ಅಪಹರಿಸಿ ಯಜ್ಞವಾಟವನ್ನೆ ಕೆಡವಿ ಹಾಕಿ, ಕನ್ಯೆಯರನ್ನು ಅಪಹರಿಸಿ ಕೊಂಡು ಹೋದರು.

**ತದ್ ದೃಷ್ಟ್ವಾ ಸಂಪ್ರವೃತ್ತಂ ತು ದಧ್ಯೌ ಆನಕದುಂದುಭಿಃ ।**
**ವಾಸುದೇವಂ ಮಹಾತ್ಮಾನಂ ಬಲಭದ್ರಂ ಗದಂ ತಥಾ ॥ 14 ॥**

ಹೀಗೆ ದೈತ್ಯರು ಕೊಳ್ಳೆ ಹೊಡೆದುಕೊಂಡು ಹೋದದ್ದನ್ನು ನೋಡಿದ ವಸುದೇವನು ಶ್ರೀಕೃಷ್ಣ–ಬಲರಾಮ–ಗದನನ್ನು ಸ್ಮರಿಸಿಕೊಂಡನು.

ತತ್ಕ್ಷಣವೇ ಸರ್ವಜ್ಞರಾದ ಶ್ರೀಕೃಷ್ಣನು ಷಟ್ಪುರರ ದುರ್ವತನೆಯನ್ನು ಅರಿತವನಾಗಿ ತನ್ನ ಪುತ್ರ ಪ್ರದ್ಯುಮ್ನನನ್ನು ಕರೆದು – ಪುತ್ರನೇ! ಬ್ರಹ್ಮದತ್ತನ ಕನ್ಯೆಯರನ್ನು ದೈತ್ಯರಿಂದ ರಕ್ಷಿಸು. ಮಾಯಾವಿಗಳ ನಿಗ್ರಹಿಸಲು ಮಾಯೆಯನ್ನೆ ಅವಲಂಬಿಸು. ನಾನು ಯಾದವರೊಡನೆ ಷಟ್ಪುರಕ್ಕೆ ಬರುವವರೆಗೂ ಅಲ್ಲಿಯೆ ಇರು.

**ಗಚ್ಛ ಕನ್ಯಾ ಪರಿತ್ರಾಣಂ ಕುರು ಪುತ್ರಾಶು ಮಾಯಯಾ ।**
**ಯಾವದ್ ಯಾದವ ಸೈನ್ಯೇನ ಷಟ್ಪುರಂ ಯಾಮ್ಯಹಂ ಪ್ರಭೋ ॥ 15 ॥**

**ಸ ಯಯೌ ಷಟ್ಪುರಂ ವೀರಃ ಪಿತುರಾಜ್ಞಾಕರಸ್ತದಾ ।**
**ನಿಮೇಷಾಂತರ ಮಾತ್ರೇಣ ಗತ್ವಾ ಕಾಮೋ ಮಹಾಬಲಃ ॥ 16 ॥**

**ಕನ್ಯಾಸ್ತಾ ಮಾಯಯಾ ಧೀಮಾನ್ ಉಪಜಹ್ರೇ ಮಹಾಬಲಃ ।**
**ಮಾಯಾಮಯೀಶ್ಚ ಕೃತ್ವಾಽನ್ಯಾ ನ್ಯಸ್ತವಾನ್ ರುಕ್ಮಿಣೀ ಸುತಃ ॥ 17 ॥**

## ಪ್ರದ್ಯುಮ್ನನಿಂದ ಕನ್ಯೆಯರ ಮೋಚನ

ಪ್ರದ್ಯುಮ್ನನು ಶ್ರೀಕೃಷ್ಣನ ಆದೇಶದಂತೆ ಕ್ಷಣ ಮಾತ್ರದಲ್ಲಿ ಷಟ್ಪುರಕ್ಕೆ ಬಂದನು. ನಿಕುಂಭಾದಿಗಳಿಂದ ಅಪಹೃತರಾಗಿದ್ದ ಬ್ರಹ್ಮದತ್ತನ ಐದುನೂರು ಕನ್ಯೆಯರನ್ನು ಮಾಯೆಯ ಮೂಲಕ ಅಪಹರಿಸಿ, ಶಾಂಬರೀ ಮಾಯೆಯಿಂದಲೇ ಬೇರೆ ಐದು ನೂರು ಕನ್ಯೆಯರನ್ನು ಸೃಷ್ಟಿಸಿ, ಬ್ರಹ್ಮದತ್ತನ ಪುತ್ರಿಯರಿದ್ದ ನಿಗಡದಲ್ಲಿ ಅವರನ್ನಿಟ್ಟು, ನಿಜಪುತ್ರಿಯರನ್ನು ದೇವಕಿಯ ಬಳಿ ಇಟ್ಟನು.

ನಂತರ ಧರ್ಮಾತ್ಮನಾದ ಪ್ರದ್ಯುಮ್ನನು ದೇವಕಿಯನ್ನು ಸಮೀಪಿಸಿ – ಪಿತಾಮಹಿ! ನೀನೇನು ಭಯಪಡುವ ಅವಶ್ಯಕತೆ ಇಲ್ಲ. ಕನ್ಯೆಯರು ಸುರಕ್ಷಿತವಾಗಿರುವರು ಎಂದನು.

## ಷಟ್ಪುರರ ಭ್ರಾಂತಿ

**ಮಾಯಾಮಯೀಃ ತತೋ ಹೃತ್ವಾ ಸುತಾಃ ಹ್ಯಸ್ಯ ದುರಾಸದಾಃ ।**
**ಷಟ್ಪುರಂ ವಿವಿಶುಃ ದೈತ್ಯಾಃ ಪರಿತುಷ್ಟಾ ನರಾಧಿಪ ॥ 18 ॥**

ರಾಜಾ ಜನಮೇಜಯನೇ! ಬ್ರಹ್ಮದತ್ತನ ಕನ್ಯೆಯರನ್ನು ಬಲಾತ್ಕರಿಸಲು ಆ ಕನ್ಯೆಯರು ದುಃಸಾಧ್ಯರಾಗಿದ್ದರು. ನಿಕುಂಭಾದಿ ದೈತ್ಯರಾದರೂ ಪ್ರದ್ಯುಮ್ನನು ಮಾಯೆಯಿಂದ ನಿರ್ಮಿತ ಕನ್ಯೆಯರನ್ನೆ ಬ್ರಹ್ಮದತ್ತನ ಕನ್ಯೆಯರೆಂದು ಭ್ರಮಿಸಿ, ಅವರನ್ನು ಅಪಹರಿಸಿಕೊಂಡು ಸಂತುಷ್ಟರಾಗಿ ತಮ್ಮ ಪುರಕ್ಕೆ ಹೋದರು.

**ಕರ್ಮಚಾಸಾರ್ಯತೇ ತತ್ರ ವಿಧಿದೃಷ್ಟೇನ ಕರ್ಮಣಾ ।**

ಇತ್ತ ಶಾಸ್ತ್ರಾನುಸಾರವಾಗಿ ಯಜ್ಞಕ್ರಿಯೆಗಳು ನಡೆದವು. ದೈತ್ಯರ ಆಕ್ರಮಣದಿಂದ ಯಾವ ಕರ್ಮಗಳು ಪೂರ್ಣವಾಗದೆ ಉಳಿದಿದ್ದವೋ ಆ ಕರ್ಮಗಳೆಲ್ಲವೂ ಬಹುಗುಣಸಂಪನ್ನವಾದವು. ಈ ಮಧ್ಯದಲ್ಲಿ ಸಾಂವತ್ಸರಿಕ ಯಜ್ಞಕ್ಕೆ ಆಹ್ವಾನಿತರಾದ ಜರಾಸಂಧ, ದಂತವಕ್ರ, ಶಿಶುಪಾಲರೂ, ಪಾಂಡವರು, ಧಾರ್ತರಾಷ್ಟ್ರರು ಸನ್ನಿಹಿತರಾದರು.

ಮಾಲವರಾಜ, ರುಗ್ಮೀ, ಆಕ್ಷೃತೀ, ನೀಲ, ಧರ್ಮ, ಅವಂತೀದೇಶದ ವಿಂದಾನುವಿಂದ ಸೋದರರು, ಶಲ್ಯರಾಜ, ಶಕುನಿ ಮೊದಲಾದವರು ತಮ್ಮ ಆಯುಧಗಳೊಂದಿಗೆ ಅಲ್ಲಿಗೆ ಬಂದು ಷಟ್ಪುರದ ಪರಿಸರದಲ್ಲಿಯೇ ಬೀಡುಬಿಟ್ಟಿದ್ದರು.

**ಆವಾಸಿತಾ ನಾತಿದೋರೇ ಷಟ್ಪುರಸ್ಯ ಚ ಭಾರತ ॥ 19 ॥**

ಈ ವೀರರಾದ ರಾಜರನ್ನು ಕಂಡು ನಾರದರಿಗೆ ಹೀಗೆ ಅನಿಸಿತು. ಯುದ್ಧ ಧರ್ಮದರಾದ ಈ ಶಿಶುಪಾಲಾದಿಗಳಿಗೆ ಯಾದವರೊಂದಿಗೆ ಯುದ್ಧವಾದರೆ ಖಂಡಿತ ಇವರೆಲ್ಲರೂ ಸೋಲುತ್ತಾರೆ. ಇದು ಅವರ ದುರಹಂಕಾರ ಅಡಗುತ್ತದೆ ಎಂದಾಲೋಚಿಸಿ, ನಾರದರು ದಾನವ ರಾಜನಾದ ನಿಕುಂಭನ ಬಳಿ ಬಂದು ಅವನಿಂದ ಸತ್ಕೃತನಾಗಿ ಹೀಗೆಂದರು.

**ಕಥಂ ವಿರೋಧಂ ಯದುಭಿಃ ಕೃತ್ವಾ ಸ್ವಸ್ಥೈರಿಹಾಸ್ಯತೇ ।**
**ಯೋ ಬ್ರಹ್ಮದತ್ತೋ ಸ ಹರಿಃ ಸ ಹಿ ತಸ್ಯ ವಿಭುಃ ಸಖಾ ॥ 20 ॥**

**ಆ ನೀತಾ ವಸುದೇವಸ್ಯ ಸುತಸ್ಯ ಪ್ರಿಯಕಾಮ್ಯಯಾ ॥ 21 ॥**

ನಿಕುಂಭ ಮೊದಲಾದವರೇ ! ಯಾದವರೊಂದಿಗೆ ವಿರೋಧ ಕಟ್ಟಿಕೊಂಡಿರುವ ನೀವು ಅದಕ್ಕೆ ಪ್ರತಿಕ್ರಿಯಿಸಿದೆ ನಿಶ್ಚಿಂತರಾಗಿರುವುದು ಸರಿಯಲ್ಲ. ನೀವು ಯಾರನ್ನು ಬ್ರಹ್ಮದತ್ತನೆಂದು ಭಾವಿಸಿರುವಿರೋ ಅವನೇ ಶ್ರೀಕೃಷ್ಣನು. ಬ್ರಹ್ಮದತ್ತ –ಕೃಷ್ಣರಲ್ಲಿ ಭೇದವೇನೂ ಇಲ್ಲ. ಬ್ರಹ್ಮದತ್ತನು ಕೃಷ್ಣನ ಜನಕನಾದ ವಸುದೇವನ ಆಪ್ತಮಿತ್ರನು. ಬ್ರಹ್ಮದತ್ತನಿಗೆ ಐನೂರು ಪತ್ನಿಯರಿರುವರು. ಅವರೆಲ್ಲರನ್ನೂ ಬ್ರಹ್ಮದತ್ತನು ಶ್ರೀಕೃಷ್ಣನನ್ನು ಸತ್ಕರಿಸಲು ನಿಯಮಿಸಿರುವನು.

**ಶತದ್ವಯಂ ಬ್ರಾಹ್ಮಣಾನಾಂ ರಾಜನ್ಯಾನಾಂ ಶತಂ ತಥಾ ।**
**ವೈಶ್ಯಾನಾಂ ಶತಮೇಕಂ ಚ ಶೂದ್ರಾಣಾಂ ಶತಮೇವ ಚ ॥ 22 ॥**

ಆ ಐನೂರು ಪತ್ನಿಯರಲ್ಲಿ ಇನ್ನೂರು ಬ್ರಾಹ್ಮಣ ಕನ್ಯೆಯರೂ, ನೂರು ಮಂದಿ ಕ್ಷತ್ರಿಯರೂ, ನೂರು ಮಂದಿ ವೈಶ್ಯರೂ, ನೂರು ಮಂದಿ ಶೂದ್ರಜಾತಿಯವರೂ ಇರುವರು.

ಇವರೆಲ್ಲರೂ ಭಾರ್ಯೆಯರು ಧರ್ಮಾತ್ಮನಾದ ದುರ್ವಾಸಮುನಿಯನ್ನು ಭಕ್ತ್ಯಾದರಗಳಿಂದ ಸೇವಿಸಿದರು. ಇದರಿಂದ ಸುಪ್ರೀತನಾದ ದುರ್ವಾಸನು ವರವೊಂದನ್ನು ನೀಡಿದನು.

**ಏಕೈಕಸ್ತನಯೊ ರಾಜನ್ ಏಕೈಕಾ ದುಹಿತಾ ತಥಾ ।**
**ರೂಪೇಣಾನುಪಮಾ ಸರ್ವಾ ವರದಾನೇನ ಧೀಮತಃ ॥ 23 ॥**

ದೂರ್ವಾಸ ಋಷಿಯ ವರದಾನದಿಂದಾಗಿ ಬ್ರಹ್ಮದತ್ತನ ಪ್ರತಿಯೊಬ್ಬ ಪತ್ನಿಯಲ್ಲಿಯೂ ಒಬ್ಬೊಬ್ಬ ಪುತ್ರನು ಜನಿಸುವನು. ಅತ್ಯಂತ ಸುರೂಪಿಣಿಯರಾದ ಒಬ್ಬೊಬ್ಬ ಮಗಳೂ ಜನಿಸುವರು.

**ಸಂಗಮೇ ಸಂಗಮೇ ವೀರ ಭರ್ತೃಭಿಃ ಶಯನೇ ಸಹ ।**
**ಸರ್ವಪುಷ್ಪಮಯಂ ಗಂಧಂ ಪ್ರಸ್ರವಂತಿ ವರಾಂಗನಾಃ ॥ 24 ॥**

ಈ ಕನ್ಯೆಯಲ್ಲಿರುವ ವಿಶೇಷವೆಂದರೆ ತಮ್ಮ ಪತಿಯಿಂದ ಸಂಗಮ ಮಾಡುವಾಗ ಅವರು ಕನ್ಯೆಯರಾಗಿಯೇ ಇರುವರು. ಸಮಸ್ತ ಪುಷ್ಪಗಳ ಸುಗಂಧವನ್ನು ತಮ್ಮ ಶರೀರದಿಂದ ಹೊರಸೂಸುವರು. ಇವರು ಯಾವಾಗಲೂ ಷೋಡಶಿಯರೇ ಆಗಿದ್ದು ಮಹಾಪತಿವ್ರತೆಯರಾಗಿರುತ್ತಾರೆ.

**ಸರ್ವದಾ ಯೌವನೇ ನ್ಯಸ್ತಾಃ ಸರ್ವಾಶ್ಚೈವ ಪತಿವ್ರತಾಃ ।**
**ಸರ್ವಾ ಗುಣೈರಪ್ಸರಸಾಂ ಗೀತನೃತ್ಯಗುಣೋದಯಮ್ ॥ 25 ॥**

ದುರ್ವಾಸರ ವರದಿಂದಾಗಿ ಇವರೆಲ್ಲರೂ ಅಪ್ಸರೆಯರಂತೆಯೆ ಸುಗುಣಮಣಿಗಳಾಗಿರುತ್ತಾರೆ. ನೃತ್ಯ, ಗೀತಾದಿಗಳಲ್ಲಿ ಪರಿಣತರೂ ಆಗಿರುತ್ತಾರೆ.

**ಪುತ್ರಾಶ್ಚ ರೂಪಸಂಪನ್ನಾಃ ಶಾಸ್ತ್ರಾರ್ಥಕುಶಲಾಸ್ತಥಾ ।**
**ಸ್ವೇಸ್ವೇ ಸ್ಥಿತಾ ವರ್ಣಧರ್ಮೇ ಯಥಾವದನು ಪೂರ್ವಶಃ ॥ 26 ॥**

ಇನ್ನು ಬ್ರಹ್ಮದತ್ತನ ಗಂಡುಮಕ್ಕಳಂತೂ ರೂಪಸಂಪನ್ನರೂ ಶಾಸ್ತ್ರಾಸ್ತ್ರ ಕುಶಲರೂ ಆಗಿದ್ದು ವರ್ಣಾಶ್ರಮಾಚಾರದಲ್ಲಿ ನಿರತರಾಗಿರುವರು.

**ಸಹಾಯಾರ್ಥಂ ತು ರಾಜಾನೋ ವ್ರಿಯಂತಾಂ ಹೇತು ಪೂರ್ವಕಮ್ ।**

ಮೇಧಾವಿಯಾದ ಬ್ರಹ್ಮದತ್ತನು ಪ್ರಾಯಶಃ ತನ್ನ ಕನ್ಯೆಯರನ್ನೆಲ್ಲ ಯಾದವಶ್ರೇಷ್ಠರಿಗೆ ಕನ್ಯಾದಾನ ಮಾಡಿಕೊಟ್ಟಿರುವನು. ಮದುವೆಯಾಗದೆ ಇರುವ ನೂರು ಮಂದಿಯನ್ನು ಮಾತ್ರ ನೀನು ಅಪಹರಿಸಿ ತಂದಿರುವೆ.

ನೀನು ಅಪಹರಿಸಿ ತಂದಿರುವ ಕನ್ಯೆಯರಿಗಾಗಿ ನಿಮಗೂ ಹಾಗೂ ಯಾದವರಿಗೆ ಘೋರಯುದ್ಧವಾಗುವುದು ನಿಶ್ಚಿತ. ಹೀಗಾಗಿ ನೀವು ಇಲ್ಲಿಗೆ ಬ್ರಹ್ಮದತ್ತನಿಂದ ಆಹ್ವಾನಿತರಾದ ರಾಜರನ್ನು ಉಪಾಯದಿಂದ ನಿನ್ನ ಕಡೆ ಒಲಿಸಿ ಸೇರಿಸಿಕೋ.

**ಬ್ರಹ್ಮದತ್ತ ಸುತಾರ್ಥಂ ಚ ರತ್ನಾನಿ ವಿವಿಧಾನಿ ಚ ।**
**ದೀಯಂತಾಂ ಭೂಮಿಪಾಲಾನಾಂ ಸಹಾಯಾರ್ಥಂ ಮಹಾತ್ಮನಾಮ್ ॥ 27 ॥**

ಬ್ರಹ್ಮದತ್ತನ ಕನ್ಯೆಯರನ್ನು ನೀನು ಹೊಂದಲು ಅವರ ಸಹಾಯಾಪೇಕ್ಷೆ ಇರುತ್ತದೆ. ಅದಕ್ಕಾಗಿ ಇವರೆಲ್ಲರಿಗೂ ವಿಧವಿಧವಾದ ರತ್ನ, ಮುತ್ತು, ಮಣಿ ಮಾಣಿಕ್ಯಗಳಿಂದ ಇವರನ್ನೆಲ್ಲ ಸತ್ಕರಿಸು.

ನಾರದರು ಹೇಳಿದ ಮಾತುಗಳು ನಿಕುಂಭಾದಿಗಳಿಗೆ ರುಚಿಸಿತು. ಅದರಂತೆ ಸಂತೋಷದಿಂದ ರಾಜರನ್ನು ಕಂಡು ರತ್ನಾದಿಗಳನಿತ್ತು ಗೌರವಿಸಿದರು ಹಾಗೂ ನೀವೆಲ್ಲರೂ ನನ್ನ ಪಕ್ಷವಹಿಸಿ ಯಾದವರ ವಿರುದ್ಧವಾಗಿ ನನಗೆ ಸಹಾಯ ಮಾಡಬೇಕು.

**ಋತೇ ಪಾಂಡುಸುತಾನ್ ವೀರಾನ್ ವಾರಿತಾ ನಾರದೇನ ವೈ ।**

ಪಾಂಡವರು ಮಾತ್ರ ಕನ್ಯಾಭಾಗವನ್ನಾಗಲೀ, ರತ್ನಗಳ ವಿಭಾಗವನ್ನಾಗಲೀ ಅವರ ಸ್ನೇಹವನ್ನಾಗಲೀ ಸ್ವೀಕರಿಸಲಿಲ್ಲ. ನಾರದರು ಕ್ಷಣ ಮಾತ್ರದಲ್ಲಿ ನಿಕುಂಭಾದಿಗಳಿಂದ ಬೀಳ್ಕೊಟ್ಟು ಹೊರಟು ಪಾಂಡವರಿಗೆ ಅದನ್ನು ಸ್ವೀಕರಿಸದಿರುವಂತೆ ನಿರ್ಬಂಧಿಸಿದ್ದರು.

ಕನ್ಯೆಯರನ್ನೂ ರತ್ನಗಳನ್ನೂ ಪಡೆದ ರಾಜರುಗಳು ಸಂತುಷ್ಟರಾದರು. ಅವರೆಂದರು – ನಿಕುಂಭಾದಿ ದೈತ್ಯವರ್ಯರೇ! ನೀವೆಲ್ಲರೂ ಅಪಾರ ಸಂಪತ್ತು ಭೋಗಗಳಿಂದ ಕೂಡಿದ್ದು ಆಕಾಶದಲ್ಲಿ ಸಂಚರಿಸುವ ಶಕ್ತಿವುಳ್ಳವರಾಗಿದ್ದೀರಿ. ಹೀಗಿದ್ದರೂ ನೀವೆಲ್ಲರೂ ರಾಜರೆಲ್ಲರನ್ನೂ ಯಥಾವಿಧಿ ರತ್ನಾದಿಗಳಿಂದ ಗೌರವಿಸಿರುವಿರಿ.

ಇದಕ್ಕಾಗಿ ನಾವು ನಿಮಗೆ ಕೃತಜ್ಞತೆ ಹೇಳುತ್ತಾ ಇದ್ದೇವೆ. ನಮ್ಮಿಂದ ನಿಮಗೆ ಯಾವ ಸಹಾಯವಾಗಬೇಕು. ಈ ಸತ್ಕಾರದ ಉದ್ದೇಶವೇನು? ಎಂದರು.

**ಅರ್ಚಿತಾಃ ಸ್ಮ ಯಥಾನ್ಯಾಯಂ ಕ್ಷತ್ರ ಕಿಂ ವಃ ಪ್ರಯಚ್ಛತು ।**
**ಸರ್ವಕಾಮ ಸಮೃದ್ಧಾರ್ಥೈ ಭವದ್ಭಿಃ ಖಗಮೈಃ ಸ್ವಯಮ್ ॥ 28 ॥**

ಇವರ ಮಾತನ್ನು ಆಲಿಸಿದ ನಿಕುಂಭನು ಕ್ಷತ್ರಿಯರ ಮಾತುಗಳನ್ನು ಕೇಳಿ ಸಂತುಷ್ಟನಾದನು. ಕ್ಷತ್ರಿಯರ ಮಹಿಮೆಯನ್ನು ಸತ್ಯದೀಕ್ಷತೆಯನ್ನೂ ಕೇಳಿ ಸಂತೋಷ ಹೊಂದಿ ಹೀಗೆಂದನು.

**ಯುದ್ಧಂ ನೋ ರಿಪುಭಿಃ ಸಾರ್ಧಂ ಭವಿಷ್ಯತಿ ನೃಪೋತ್ತಮಾಃ ।**
**ಸಾಹಾಯ್ಯಂ ದಾತುಮೀಚ್ಛಾಮೋ ಭವದ್ಭಿಃ ತತ್ರ ಸರ್ವಥಾ ॥ 29 ॥**

ರಾಜರೇ! ನಮಗೂ ನಮ್ಮ ರಿಪುಗಳಿಗೂ ಮುಂದೆ ಸಂಗ್ರಾಮವು ನಡೆಯಲಿದೆ. ಈ ಯುದ್ಧದಲ್ಲಿ ತಾವೆಲ್ಲರೂ ನಮಗೆ ಸರ್ವಪ್ರಕಾರಗಳಿಂದಲೂ ಸಹಾಯ ಮಾಡಬೇಕು.

ನಾರದರು ನೀಡಿದ ಸಲಹೆಯಂತೆ ನಡೆದುಕೊಂಡಿದ್ದ ರಾಜರೆಲ್ಲರೂ. ನಿಕುಂಭ ಮೊದಲಾದ ದೈತ್ಯರಿಗೆ ಹಾಗೇ ಆಗಲಿ ಎಂದು ಅಭಯ ವಚನವಿತ್ತರು.

**ಏವಮಸ್ತ್ವಿತಿ ತಾನೂಚುಃ ಕ್ಷತ್ರಿಯಾಃ ಕ್ಷೀಣಕಿಲ್ಬಿಷಾಃ ।**
**ಪಾಂಡವೇಯಾನ್ ಋತೇ ವೀರಾನ್ ಶ್ರುತಾರ್ಥಾನ್ನಾರದಾದ್ ವಿಭೋಃ ॥ 30 ॥**

ಕ್ಷತ್ರಿಯರೆಲ್ಲರೂ ಯುದ್ಧಕ್ಕೆ ತಯಾರಿ ನಡೆದರು. ಇತ್ತ ಬ್ರಹ್ಮದತ್ತನ ಪತ್ನಿಯರು

ಯುಜ್ಞಶಾಲೆಯನ್ನು ಪ್ರವೇಶಿಸಿದರು. ಶ್ರೀಕೃಷ್ಣನು ಸೈನ್ಯ ಸಹಿತನಾಗಿ ಷಟ್ಪುರವನ್ನು ಪ್ರವೇಶಿಸಿದನು. ರುದ್ರದೇವನ ಮಾತನ್ನು ಮನಸ್ಸಿನಲ್ಲಿ ಸ್ಮರಿಸಿದ್ದ ಶ್ರೀಕೃಷ್ಣನು ದ್ವಾರಕೆಯನ್ನು ನೋಡಿಕೊಳ್ಳಲು ಉಗ್ರಸೇನನಿಗೆ ಒಪ್ಪಿಸಿ ಷಟ್ಪುರಕ್ಕೆ ಬಂದಿದ್ದನು.

**ಪತ್ನ್ಯಸ್ತು ಬ್ರಹ್ಮದತ್ತಸ್ಯ ಯಜ್ಞವಾಟಂ ಗತಾ ಅಪಿ ।**
**ಕೃಷ್ಣೋಽಪಿ ಸೇನಯಾ ಸಾರ್ಧಂ ಪ್ರಯಯೌ ಷಟ್ಪುರಂ ವಿಭುಃ ॥ 31 ॥**
**ಮಹಾದೇವಸ್ಯ ವಚನ ಮುದ್ವಹನ್ ಮನಸಾ ನೃಪ ।**
**ಸ್ಥಾಪಯಿತ್ವಾ ದ್ವಾರವತ್ಯಾಮಾಹುಕಂ ಪಾರ್ಥಿವಂ ತದಾ ॥ 32 ॥**
**ದತ್ತ ಗುಲ್ಮಾ ಪ್ರತಿಸರಂ ಕೃತ್ವಾ ತಂ ವಿಧಿವತ್ ಪ್ರಭುಃ ।**
**ಪ್ರದ್ಯುಮ್ನಮಟನೇ ಶ್ರೀಮಾನ್ ರಕ್ಷಾರ್ಥಂ ವಿನಿಯುಜ್ಯ ಚ ॥ 33 ॥**

ತನ್ನ ಸೈನ್ಯದೊಂದಿಗೆ ಆಗಮಿಸಿದ್ದ ಶ್ರೀಕೃಷ್ಣನು ಷಟ್ಪುರ ಜನತೆಯ ಹಿತದೃಷ್ಟಿಯಿಂದ ತನ್ನ ಸೈನ್ಯವನ್ನು ಯಜ್ಞವಾಟಕ್ಕೆ ಸ್ವಲ್ಪದೂರದಲ್ಲಿಯೇ ನಿಲ್ಲಿಸಿದ್ದನು. ಬೇರೆಯವರು ಯಾರೂ ಅಲ್ಲಿಗೆ ಹೋಗಲಾಗದಂತೆ ಸೈನಿಕರನ್ನು ವ್ಯವಸ್ಥೆ ಮಾಡಲಾಗಿತ್ತು. ಈ ಸೈನ್ಯದ ಮೇಲ್ವಿಚಾರಕನಾಗಿ ಕೃಷ್ಣಪುತ್ರ ಪ್ರದ್ಯುಮ್ನನನ್ನು ನಿಯಮಿಸಲಾಗಿತ್ತು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ಬ್ರಹ್ಮದತ್ತ ಯಜ್ಞಾದಿ ಪ್ರಸ್ತಾಪವೆಂಬಲ್ಲಿ
ಎಂಬತ್ತಮೂರನೆಯ ಅಧ್ಯಾಯ ಸಮಾಪ್ತಿ

# ಅಥ ಚತುರಶೀತಿತಮೋಽಧ್ಯಾಯಃ

*ವೈಶಂಪಾಯನ ಉವಾಚ –*

ಮುಹೂರ್ತಾಭ್ಯುದಿತೇ ಸೂರ್ಯೇ ಜನಚಕ್ಷುಷಿ ನಿರ್ಮಲೇ ।
ಬಲಃ ಕೃಷ್ಣಃ ಸಾತ್ಯಕಿಶ್ಚ ತಾರ್ಕ್ಷ್ಯ ಮಾರುರುಹುಸ್ತದಾ ॥ 1 ॥
ಬದ್ಧ ಗೋಧಾಂಗುಲಿತ್ರಾಣಾ ದಂಶಿತಾ ಯುದ್ಧಕಾಂಕ್ಷಿಣಃ ।
ಬಿಲ್ವೋದಕೇಶ್ವರಂ ದೇವಂ ನಮಸ್ಕೃತ್ಯ ಸುರೋತ್ತಮಮ್ ॥ 2 ॥
ಆವರ್ತಯಾ ಜಲೇ ಸ್ನಾತ್ವಾ ರುದ್ರೇಣ ವರದತ್ತಯಾ ।
ಗಂಗಾಯಾಃ ಕುರುಶಾರ್ದೂಲ ರುದ್ರವಾಕ್ಯೇನ ಪುಣ್ಯಯಾ ॥ 3 ॥

ಜನಮೇಜಯ! ಸೂರ್ಯೋದಯವಾಯಿತು. ಮುಹೂರ್ತಕಾಲ ಕಳೆಯಲಾಗಿ ಜನರ ನೇತ್ರಗಳೆಲ್ಲವೂ ಅರವಿಂದಗಳಂತೆ ಅರಳಿದವು. ಬಲರಾಮ–ಶ್ರೀಕೃಷ್ಣ ಸಾತ್ಯಕಿಯರು ಗರುಡನ ಮೇಲೆ ಏರಿ ಕುಳಿತರು.

ಅವರೆಲ್ಲರೂ ಅಂಗುಲಿಗಳ ರಕ್ಷಣೆಗಾಗಿ ಅಂಗುಲಿತ್ರಾಣಗಳನ್ನು ಧರಿಸಿದ್ದರು. ಕವಚಗಳನ್ನು ಧರಿಸಿದ್ದರು. ಶತ್ರುಗಳೊಂದಿಗೆ ಯುದ್ಧದ ಇಚ್ಛೆಯಲ್ಲಿದ್ದರು. ಇದಕ್ಕಿಂತ ಮೊದಲು ರುದ್ರದೇವನ ವರದಿಂದ ಪುಣ್ಯಜಲವಾಗಿದ್ದ 'ಆವರ್ತಾ'ಯೆಂಬ ಗಂಗಾ ನದಿಯಲ್ಲಿ ಸ್ನಾನ ಮಾಡಿದರು. ನಂತರ ಬಿಲ್ವೋದಕೇಶ್ವರನಿಗೆ ಭಕ್ತಿಪೂರ್ವಕ ಪ್ರಣಾಮಗೈದರು.

ಪ್ರದ್ಯುಮ್ನಮಗ್ರೇ ಸೈನ್ಯಸ್ಯ ವಿಯತಿ ಸ್ಥಾಪ್ಯ ಮಾನದಃ ।
ರಕ್ಷಾರ್ಥಂ ಯಜ್ಞವಾಟಸ್ಯ ಪಾಂಡವಾನ್ ವಿನಿಯುಜ್ಯ ಚ ॥ 4 ॥

**ಶೇಷಂ ಸೇನಾಂ ಗುಹಾದ್ವಾರಿ ಭಗವಾನ್ ವಿನಿಯುಜ್ಯ ಚ ।**
**ಜಯಂತ ಮಥ ಸಸ್ಮಾರ ಪ್ರವರಂ ಚ ಸತಾಂ ಗತಿಃ ॥ 5 ॥**

ಶ್ರೀಕೃಷ್ಣನು, ಸೈನ್ಯ ಅಗ್ರ ಭಾಗದಲ್ಲಿ ಪ್ರದ್ಯುಮ್ನನನ್ನು ಸೈನ್ಯ ರಕ್ಷಣೆಗಾಗಿ ನಿಯಮಿಸಿದ್ದನು. ಯಜ್ಞವಾಟದ ರಕ್ಷಣೆಗಾಗಿ ಪಾಂಡವರನ್ನು ನಿಯಮಿಸಿದ್ದನು. ಅವಶಿಷ್ಟ ಸೈನಿಕರು ಗುಹೆಯ ದ್ವಾರದಲ್ಲಿ ನಿಲ್ಲಿಸಿದ್ದನು. ನಂತರ ಜಯಂತ ಹಾಗೂ ಪ್ರವರನನ್ನು ಸ್ಮರಿಸಿದನು. ಕೂಡಲೇ ಅವರಿಬ್ಬರೂ ಅಲ್ಲಿಗೆ ಬಂದರು. ಅವರನ್ನೂ ಸೈನ್ಯದ ರಕ್ಷಣೆಗಾಗಿ ನಿಯಮಿಸಿದ್ದನು. ಯುದ್ಧ ಪ್ರಾರಂಭದಲ್ಲಿ ಶಂಖಗಳು ಮೊಳಗಿದವು. ಭೇರಿಗಳು ಹೊಡೆಯಲ್ಪಟ್ಟವು.

## ಯಾದವ–ದಾನವ ಯುದ್ಧ

**ಮಾಕರೋ ರಚಿತೋ ವ್ಯೂಹಃ ಸಾಂಬೇನ ಚ ಗದೇನ ಚ ।**

ಸಾಂಬ–ಗದರು ಯಾದವ ಸೈನ್ಯವನ್ನು ಮಕರವ್ಯೂಹದಲ್ಲಿ ನಿಲ್ಲಿಸಿದರು. ಸಾರಣ, ಉದ್ಧವ, ಭೋಜ, ವೈತರಣ, ಅನಾದೃಷ್ಟಿ, ಪೃಥು, ವಿಪೃಥು, ಕೃತಕರ್ಮಾ, ದಂಷ್ಟ್ರ, ನಿಚಕ್ಷು ಇವರೆಲ್ಲರೂ ಅಗ್ರಭಾಗದಲ್ಲಿ ನಿಂತಿದ್ದರು.

**ಸನತ್ಕುಮಾರೋ ಧರ್ಮಾತ್ಮಾ ಚಾರುದೇಷ್ಣಶ್ಚ ಭಾರತ ।**
**ಅನಿರುದ್ಧ ಸಹಾಯೌ ತೌ ಪೃಷ್ಠಾಽನೀಕಂ ರರಕ್ಷತುಃ ॥ 6 ॥**

ಸನತ್ಕುಮಾರ ಹಾಗೂ ಚಾರೂದೇಷ್ಣರು ಅನಿರುದ್ಧನಿಗೆ ಸಹಾಯ ಮಾಡಲು ಸೈನ್ಯದ ಹಿಂಭಾಗದಲ್ಲಿ ನಿಂತು ರಕ್ಷಣೆ ಮಾಡುತ್ತಿದ್ದರು.

ಉಳಿದ ರಥ–ಅಶ್ವ–ಗಜ ಪದಾತಿಗಳು ಸೈನ್ಯದ ಮಧ್ಯಭಾಗದಲ್ಲಿದ್ದರು.

**ಷಟ್ಪುರಾದಪಿ ನಿಷ್ಕ್ರಾಂತಾ ದಾನವಾ ಯುದ್ಧದುರ್ಮದಾಃ ।**
**ಆರುಹ್ಯ ಮೇಘನಾದಾಂಶ್ಚ ಗರ್ದಭಾನಪಿ ಹಸ್ತಿನಃ ॥ 7 ॥**

ಷಟ್ಪುರದಿಂದ ಹೊರಬಂದ ದಾನವ ಸೈನ್ಯವೂ ಸಹ ಆನೆ, ಕುದುರೆ, ಕತ್ತೆ, ಒಂಟೆಯ ಮೇಲೆ ಕುಳಿತು ಯುದ್ಧಕ್ಕೆ ಹೊರಟರು. ದೈತ್ಯರಲ್ಲಿ ಕೆಲವರು ಮೊಸಳೆಗಳ ಮೇಲೂ, ನೀರಹಂದಿ, ಎಮ್ಮೆ, ಘೆಂಡಾಮೃಗ, ಆಮೆಗಳ ಮೇಲೆ ಸವಾರಿ ಮಾಡುತ್ತಾ ಯಾದವರ ಮೇಲೆ ಯುದ್ಧಕ್ಕೆ ಹೊರಟರು. ಕೆಲವು ದೈತ್ಯರು ಈ ಪ್ರಾಣಿಗಳನ್ನು ಹೂಡಿದ್ದ ರಥಗಳಲ್ಲಿ ಕುಳಿತಿದ್ದು ನಾನಾ ವಿಧ ಆಯುಧಗಳನ್ನು ಧರಿಸಿ ಯುದ್ಧಕ್ಕೆ ಹೊರಟರು.

ದೈತ್ಯರ ಸೇನಾವಾಹಿನಿಯಲ್ಲಿ ನಾನಾವಿಧ ರಣವಾದ್ಯಗಳು ಘೋಷಣೆಗೈಯ್ಯುತ್ತಿದ್ದವು. ರಥಗಳ ಚಕ್ರಗಳು ಸದ್ದು ಮಾಡುತ್ತಿದ್ದವು. ಶಂಖಧ್ವನಿಗಳು ಮೇಘದ ಗರ್ಜನೆಯಂತೆ ಮೊಳಗುತ್ತಿದ್ದವು. ನಿಕುಂಭನು ದೈತ್ಯರ ಸೈನ್ಯದ ಮುಂಭಾಗದಲ್ಲಿ ಅಗ್ರಣಿಯಾಗಿ ಹೋಗುತ್ತಿದ್ದನು. ಇದು ದೇವತೆಗಳ ಮುಂಭಾಗದಲ್ಲಿ ಹೋಗುವ ಇಂದ್ರನಂತೆ ತೋರುತ್ತಿತ್ತು. ನಿಕುಂಭನು ಮಹಾಟ್ಟಹಾಸ ಗೈಯ್ಯುತ್ತಾ ಹೋಗುತ್ತಿದ್ದರೆ, ದಾನವರು ಅನೇಕ ರೀತಿ ಸಿಂಹನಾದ ಮಾಡುತ್ತಾ ನುಗ್ಗುತ್ತಿದ್ದರು.

### ದಾನವರ ಯುದ್ಧೋತ್ಸಾಹ

ದೈತ್ಯರ ಗಜನಾದಿಗಳಿಂದ ಆಕಾಶ ಭೂಮಿಗಳೆರಡೂ ತುಂಬಿ ಹೋಗಿತ್ತು.

**ರಾಜಸೇನಾಽಂಸಿ ಸಂಯತ್ತಾ ಚೇದಿ ರಾಜ ಪುರೋಗಮಾ ।**
**ಅಸುರಾಣಾಂ ಸಹಾಯಾರ್ಥಂ ನಿಶ್ಚಿತಾ ಜನಮೇಜಯ ॥ 8 ॥**

**ದುರ್ಯೋಧನಂ ಭ್ರಾತೃಶತಂ ಚೇದಿರಾಜಾನುಜಾಗ್ರಗಮ್ ।**
**ಸ್ಥಿತಂ ರಥೈಃ ನರವ್ಯಾಘ್ರ ಗಂಧರ್ವ ನಗರೋಪಮೈಃ ॥ 9 ॥**

ರಾಜರ ಸೈನ್ಯಗಳು ದೈತ್ಯಕುಲಕ್ಕೆ ಸಹಾಯ ಮಾಡಬೇಕೆಂದು ತೀರ್ಮಾನಿಸಿತು. ಚೇದಿಭೂಪಾಲನ ನಾಯಕತ್ವದಲ್ಲಿ ಯುದ್ಧ ಸನ್ನದ್ಧವಾಯಿತು. ದುರ್ಯೋಧನನೆ ಮೊದಲಾದ ನೂರು ಅಣ್ಣತಮ್ಮಂದಿರು ಗಂಧರ್ವ ರಥಕ್ಕೆ ಸದೃಶವಾದ ರಥಗಳಲ್ಲಿ ಕುಳಿತು, ಶಿಶುಪಾಲನ ತಮ್ಮನನ್ನೇ ಅನುಸರಿಸುತ್ತಿದ್ದರು.

ದ್ರುಪದರಾಜನ ರಥಗಳು ಗಡಾಗಡಾ ಶಬ್ದ ಮಾಡುತ್ತಾ ಕಿವಿಗಡರುತ್ತಿದ್ದವು. ರುಗ್ಮಿ ಹಾಗೂ ಆಕೃತಿಗಳು ಯಾದವರೊಡನೆ ಹೋರಾಡಲು ಸಿದ್ಧರಾಗಿದ್ದರು. ಅವರ ಧನುಸ್ಸುಗಳು ತಾಳವೃಕ್ಷದಂತೆ ಇದ್ದವು. ಶಲ್ಯ-ಶಕುನಿ-ಭಗದತ್ತ-ಜರಾಸಂಧ-ತ್ರಿಗರ್ತರಾಜ ಸುಶರ್ಮ, ಪುತ್ರ ಉತ್ತರನಿಂದ ಕೂಡಿದ ವಿರಾಟ ಮೊದಲಾದ ಯುದ್ಧದಲ್ಲಿ ಗೆಲುವು ಸಾಧಿಸಲೋಸುಗ ನಿಕುಂಭನನ್ನು ಮುಂದಿಟ್ಟುಕೊಂಡು ಯುದ್ಧ ಸನ್ನದ್ಧರಾಗಿದ್ದರು.

**ತತೋ ನಿಕುಂಭಃ ಸಮರೇ ಶರೈರಾಶೀವಿಷೋಪಮೈಃ ।**
**ಮಮರ್ದ ಸಮರೇ ಸೇನಾಂ ಭಯಮಾನಾಂ ಭೀಮದರ್ಶನಮ್ ॥ 10 ॥**

ನಂತರ ನಿಕುಂಭನು ಸರ್ಪದಂತಿರುವ ಬಿಲ್ಲನ್ನು ಹಿಡಿದು ಆಶೀವಿಷದಂತೆ

ವಿಷಭರಿತ ಚೂಪಾದ ಬಾಣಗಳಿಂದ ಯುದ್ಧಸನ್ನದ್ಧರಾದ ಯಾದವರನ್ನು ನಿಗ್ರಹಿಸಲು ಪ್ರಾರಂಭಿಸಿದನು.

**ಸ ಪರೀತ್ಯ ತತೋ ವೀರಃ ನಿಕುಂಭೋ ಮಾಯಿನಾಂ ವರಃ ।**
**ಅಸ್ತಂಭಯದ್ ಅನಾದೃಷ್ಟಿಂ ಮಾಯಯಾ ಭೈಮಸತ್ತಮಂ ॥ 11 ॥**
**ಸ್ತಂಭಯಿತ್ವಾ ಅನಯದ್ ವೀರಂ ಗುಹಾಂ ಷಟ್ಪುರಸಂಜ್ಞಿತಾಮ್ ।**

ನಿಕುಂಭನ ಈ ಉದ್ಧಟತನವನ್ನು ಯಾದವರ ಸೈನ್ಯ ಮುಖಂಡನಾದ ಅನಾದೃಷ್ಟಿಯು ಸಹಿಸಲಿಲ್ಲ. ಅವನು ಚೂಪಾದ ಘೋರ ಬಾಣಗಳಿಂದ ನಿಕುಂಭ ಹಾಗೂ ಸೈನ್ಯವನ್ನು ಹೊಡೆಯತೊಡಗಿದ. ಬಾಣಗಳ ಸುರಿಮಳೆಯಿಂದಾಗಿ ನಿಕುಂಬನ ರಥವಾಗಲೀ, ಅವನ ಅಶ್ವಗಳಾಗಲೀ ಧ್ವಜವಾಗಲಿ ಕಾಣಿಸುತ್ತಿರಲಿಲ್ಲ. ನಿಕುಂಭನು ಕಪಟ ಮಾಯಾಬಲ್ಲ ವ್ಯಕ್ತಿಯಾಗಿದ್ದು ಅನಾದೃಷ್ಟಿಯನ್ನು ಆಕ್ರಮಿಸಿ, ತನ್ನ ಮಾಯಾ ಬಲದಿಂದ ಅವನು ಯುದ್ಧ ಮಾಡದಂತೆ ಸ್ತಂಭಿಸಿದನು. ಅಷ್ಟೇ ಅಲ್ಲದೆ, ತನ್ನ ಷಟ್ಪುರದಲ್ಲಿದ್ದ ಗುಹೆಗೆ ಅನಾದೃಷ್ಟಿಯನ್ನು ಹಿಡಿದೊಯ್ದು ಅವನನ್ನು ಅಲ್ಲಿಯೆ ಬಂಧಿಸಿಟ್ಟನು. ನಂತರ ಮಾಯೆಯಿಂದಲೇ ಯುದ್ಧ ಭೂಮಿಗೆ ಹಿಂತಿರುಗಿದನು.

ನಿಕುಂಭನು ಹಿಂದಿನಂತೆಯೇ ಮಾಯೆಯಿಂದ ಯುದ್ಧ ಮಾಡುತ್ತಾ ಕೃತವರ್ಮ, ಚಾರುದೇಷ್ಣ, ಭೋಜ, ವೈತರಣ, ಸನತ್ಕುಮಾರ ಜಾಂಬವತೀ ಪುತ್ರನಾದ ಋಕ್ಷ, ಬಲದೇವನ ಪುತ್ರರಾದ ನಿಶಠ, ಉಲ್ಮುಕರನ್ನೂ ಮಾಯೆಯಿಂದ ಸ್ತಂಭನಗೊಳಿಸಿ, ಗುಹೆಗೆ ಒಯ್ದು ಬಂಧಿಸಿಟ್ಟು ಪುನಃ ಯುದ್ಧೋನ್ಮುಖನಾಗುತ್ತಿದ್ದನು. ನಿಕುಂಭನು ಯಾದವ ವೀರರನ್ನು ಕಣ್ಕಟ್ಟಿ ಕದ್ದೊಯ್ದು ಷಟ್ಪುರದಲ್ಲಿ ಬಂಧಿಸುತ್ತಿರುವಾಗ ಅವನು ಯಾರಿಗೂ ಕಾಣಿಸುತ್ತಿರಲಿಲ್ಲ. ಇದೆಲ್ಲ ಪರವ್ಯಾಮೋಹಿನೀ ಮಾಯೆ.

**ನ ತಸ್ಯ ದದೃಶೇ ದೇಹೋ ಮಾಯಾಚ್ಛನ್ನೋ ಜನೇಶ್ವರ ।**

ನಿಕುಂಭನು ಮಾಯೆಯಿಂದ ಮಾಡುತ್ತಿದ್ದ ಯಾದವ ಸಂಹಾರವನ್ನು ನೋಡಿ ಶ್ರೀಕೃಷ್ಣನು ಬಹಳ ಕ್ಷುದ್ಧನಾದನು. ಬಲರಾಮ, ಸಾತ್ಯಕಿಗಳೂ ಕೋಪ-ಗೊಂಡರು.

**ತತಃ ಶಾಂರ್ಗಾಯುಧಃ ಶಾಂರ್ಗಂ ಕೃತ್ವಾ ಸಜ್ಯಂ ನರೇಶ್ವರ ।**
**ದಾನವೇಷು ಪ್ರವೃತ್ತೇಷು ತೃಣೇಷ್ವಿವ ಹುತಾಶನಃ ॥ 12 ॥**

ಶಾಂರ್ಗಪಾಣಿಯಾದ ಶ್ರೀಕೃಷ್ಣನು ಧನುಸ್ಸನ ಹಗ್ಗವನ್ನು ಎಳೆದು ಕಟ್ಟಿ ಒಣಗಿದ ಹುಲ್ಲಿನ ರಾಶಿಯಲ್ಲಿ ಬೆಂಕಿಯು ಪ್ರವೇಶಿಸುವಂತೆ ದೈತ್ಯರ ಸಮೂಹ ಪ್ರವೇಶಿಸಿ ಅವರ ನಾಶದಲ್ಲಿ ತೊಡಗಿದನು.

ಭಗವಾನ್ ಶ್ರೀಕೃಷ್ಣನು ತಮ್ಮ ಸೇನಾಶಿಬಿರವನ್ನೆ ನಾಶ ಮಾಡುತ್ತಿರುವುದನ್ನು ಕಂಡ ದಾನವರು ದೀಪದ ಹುಳುಗಳು ಜಾಜ್ವಲ್ಯಮಾನವಾದ ಅಗ್ನಿಯನ್ನು ಪ್ರವೇಶಿಸುವಂತೆ ಶ್ರೀಕೃಷ್ಣನೆಂಬ ಅಗ್ನಿಗೆ ಅಭಿಮುಖವಾಗಿ ಬಂದರು.

ಅವರೆಲ್ಲರೂ ಒಂದುಗೂಡಿ ಸಾವಿರಾರು ಶತಘ್ನಿಗಳನ್ನೂ, ಪರಿಘಾಯುಧ-ಗಳನ್ನೂ ದೇದೀಪ್ಯಮಾನವಾದ ತ್ರಿಶೂಲಗಳನ್ನೂ, ಚೂಪಾದ ಗಂಡು ಕೊಡಲಿಗಳನ್ನೂ ಶ್ರೀಕೃಷ್ಣನ ಮೇಲೆ ಪ್ರಯೋಗಿಸಿದರು.

**ಪರ್ವತಾಗ್ರಾಣಿ ವೃಕ್ಷಾಂಶ್ಚ ಘೋರಾಶ್ಚ ವಿಪುಲಾಃ ಶಿಲಾಃ ।**
**ಉತ್ಕ್ಷಿಪ್ಯ ಚ ಗಜಾನ್ ಮತ್ತಾನ್ ರಥಾನಪಿ ಹಯಾನಪಿ ॥ 13 ॥**
**ನಾರಾಯಣಾಗ್ನಿಃ ತಾನ್ ಸರ್ವಾನ್ ದದಾಹ ಪ್ರಹಸನ್ನಿವ ।**

ದಾನವರೆಲ್ಲರೂ ಶ್ರೀಕೃಷ್ಣನ ಮೇಲೆ ಪರ್ವತಗಳನ್ನೂ ವೃಕ್ಷಗಳನ್ನೂ ಮಹತ್ತಾದ ಬಂಡೆಗಲ್ಲುಗಳನ್ನೂ, ಮದವೇರಿದ ಗಜಗಳನ್ನೂ ರಥ-ಕುದುರೆಗಳನ್ನೂ ಮೇಲೆ ಎತ್ತಿ ಶ್ರೀಕೃಷ್ಣನ ಮೇಲೆ ಎಸೆಯುತ್ತಿದ್ದರು.

ಹೀಗಿದ್ದರೂ ಅಕುತೋಭಯನಾದ ಶ್ರೀಕೃಷ್ಣನು ಮಂದಹಾಸ ಪೂರ್ವಕ-ವಾಗಿಯೇ ಅವೆಲ್ಲವನ್ನೂ ಬಾಣಗಳಿಂದ ಸುಟ್ಟು ಹಾಕಿದನು. ಅವರು ಕೃಷ್ಣನ ಮೇಲೆ ಪ್ರಯೋಗಿಸಿದ ಬಾಣಗಳೆಲ್ಲವೂ ಗೂಳಿಯ ಮೇಲೆ ಬಿದ್ದ ಶರತ್ಕಾಲೀನ ವೃಷ್ಟಿಯಂತೆ ಏನನ್ನೂ ಮಾಡಲಾರದಂತಾದವು.

**ಶಾರದಂ ವರ್ಷಣಂ ಯದ್ವತ್ ಧೀರೋ ಗವಾಂ ಪತಿಃ ।**

ದೈತ್ಯರ ಬಾಣ ಸಮೂಹವನ್ನೆಲ್ಲ ಶ್ರೀಕೃಷ್ಣನು ಸಹಿಸಿಕೊಂಡರೆ ಕೃಷ್ಣನ ಬಾಣವೃಷ್ಟಿಯನ್ನು ದೈತ್ಯಗಣ ಸಹಿಸಲಾಗಲಿಲ್ಲ. ಅವರೆಲ್ಲರೂ ಬಾಣಾಘಾತಕ್ಕೆ ತತ್ತರಿಸಿದರು. ಉಸುಕಿನಿಂದ ತಯಾರಿಸಿದ ಮರಳಿನ ಸೇತುವೆಯು ಹೇಗೆ ಧಾರಾಕಾರವಾದ ಮಳೆಯನ್ನು ತಡೆದುಕೊಳ್ಳಲಾರದೊ ಹಾಗೆ ಶ್ರೀಕೃಷ್ಣನ ಧನುಸ್ಸಿನಿಂದ ಹೊರಬಂದ ಬಾಣಗಳ ಮಳೆಯನ್ನು ದೈತ್ಯರಿಗೆ ಸಹಿಸಿ-ಕೊಳ್ಳಲಾಗಲಿಲ್ಲ.

**ನ ಸೇಹಿರೇಽಸುರಾ ಬಾಣಾನ್ ನಾರಾಯಣ ಧನುಶ್ಚ್ಯುತಾನ್ ॥ 14 ॥**

ಬಾಯ್ದೆರೆದ ಮೃಗರಾಜನ ಮುಂದೆ ಗೂಳಿಗಳು ನಿಲ್ಲಲು ಸಾಧ್ಯವಾಗುವುದಿಲ್ಲ. ಅಂತೆಯೇ ಶ್ರೀಕೃಷ್ಣನೆಂಬ ವೃಷ್ಣಿ ಸಿಂಹದ ಮುಂದೆ ನಿಲ್ಲಲೂ ಸಹ ದೈತ್ಯ ವೃಷಭಗಳಿಗೆ ಸಾಧ್ಯವಾಗಲಿಲ್ಲ.

ಶ್ರೀಕೃಷ್ಣನೊಡನೆ ಹೋರಾಡಲು ಅಸಮರ್ಥರಾದ ಅಸುರ ಯೋಧರು ಪ್ರಾಣ ಪರೀಪ್ಸುಗಳಾಗಿ ಹರಿಯ ಬಾಣದಿಂದ ತಪ್ಪಿಸಿಕೊಳ್ಳಲು ಗಗನತಲವನ್ನೆ ಆಶ್ರಯ ಹೊಂದಿದರು.

**ತೇ ವಧ್ಯಮಾನಾಃ ಕೃಷ್ಣೇನ ದಿವಮಾಚಕ್ರಮುಸ್ತದಾ ।**
**ಜೀವಿತಾಶಾಂ ವಹಂತಸ್ತು ನಾರಾಯಣ ಭಯಾರ್ದಿತಾಃ ॥ 15 ॥**

ಆದರೆ ಆಕಾಶದಲ್ಲಿಯೂ ಅವರು ಪ್ರಾಣಗಳನ್ನು ರಕ್ಷಿಸಲಾಗಲಿಲ್ಲ. ಏಕೆಂದರೆ ಶ್ರೀಕೃಷ್ಣನ ಸೂಚನೆ ಮೇರೆಗೆ ಆಕಾಶದಲ್ಲಿಯೆ ನಿಂತಿದ್ದ ಜಯಂತ ಹಾಗೂ ಪ್ರವರರು ಅಗ್ನಿಯಂತೆ ಜ್ವಲಿಸುವ ನಿಶಿತನಾರಾಚಗಳಿಂದ ಆಕಾಶಕ್ಕೆ ನೆಗೆದ ದೈತ್ಯ ಪುಂಗವರನ್ನು ಕೊಂದು ಹಾಕುತ್ತಿದ್ದರು.

**ತಾನಾಕಾಶಗತಾನ್ ಐಂದ್ರಿರ್ಜಯಂತಃ ಪ್ರವರಸ್ತ ಥಾ ।**
**ನಿಜಘ್ನತುಃ ಶರೈಃ ಘೋರೈಃ ಜ್ವಲಿತಾರ್ಕಸಮೈಃ ಪ್ರಭೋ ॥ 16 ॥**

ಇವರ ಬಾಣಗಳಿಂದ ಸೀಳಲ್ಪಟ್ಟ ಅಸುರರ ಶಿರಗಳು ಮರದಿಂದ ಬೀಳುವ ತಾಲಫಲಗಳಂತೆ ಧರೆಗುರುಳಿದವು. *[ತೃಣರಾಜಫಲಾ ನೀವ ಮುಕ್ತಾನಿ ಶಿಖರಾತ್ತರೋಃ].*

ಶ್ರೀಕೃಷ್ಣನ ಚೂಪಾದ ಬಾಣಗಳಿಂದ ಭೇದಿಸಲ್ಪಟ್ಟ ದೈತ್ಯರ ಬಾಹುಗಳು ಕಾಲನಿಂದ ಕತ್ತರಿಸಲ್ಪಟ್ಟ ಪಂಚಫಣ ಸರ್ಪಗಳಂತೆ ಭೂಮಿಯ ಮೇಲೆ ಬಿದ್ದವು. *[ನಿಪೇತುಃ ಬಾಹವಃ ಛಿನ್ನಾಃ ಪಂಚವಕ್ತ್ರಾ ಇವೋರಗಾಃ].*

## ಪ್ರದ್ಯುಮ್ನ ಸಾಹಸ

ಶ್ರೀಕೃಷ್ಣನ ಪುತ್ರ ಪ್ರದ್ಯುಮ್ನನು ಮಾಯಾಮಯವಾದ ಗುಹೆವೊಂದನ್ನು ನಿರ್ಮಿಸಿದನು. ಇದು ಭಯಂಕರವಾಗಿತ್ತು. ಈ ಗುಹೆಗೆ ಯಾರೂ ಹೋದವರು ಹೊರಗೆ ಬರಲು ಅಸಾಧ್ಯವಾಗಿತ್ತು *[ಅದೃಶ್ಯ ನಿಷ್ಕ್ರಮಂ]*. ಆದರೆ ಪ್ರವೇಶ ಸುಲಭವಿತ್ತು. ಗದ-ಸಾರಣ ಸಾಂಬಾನಿರುದ್ಧರಿಗೆ ಸೋತು ಪಲಾಯನ

ಮಾಡುತ್ತಿದ್ದ ದುರ್ಯೋಧನ, ಶಕುನಿ, ಶಲ್ಯ, ನೀಲ, ರುಕ್ಮಿ ಶಿಶುಪಾಲಾದಿಗಳು ಕಂಗೆಟ್ಟು ಈ ಮಾಯಾಮಯ ಗುಹೆಯ ಒಳ ಹೊಕ್ಕು ಹೊರಗೆ ಬರಲಾರದೆ ದಿಕ್ಕು ತೋಚದೆ ಕುಳಿತರು.

## ಕರ್ಣನ ಪರಾಜಯ

**ಪ್ರಮಥ್ಯ ತರಸಾ ಕರ್ಣಂ ಯತಂತಂ ರಣಮೂರ್ಧನಿ ।**
**ಜಗ್ರಾಹ ಬಲವಾನ್ ಕಾರ್ಷ್ಣಿಃ ಪ್ರಸ್ಫುರಂತಂ ತತಸ್ತತಃ ॥ 17 ॥**

ಈ ಮಧ್ಯ ಕರ್ಣನಾದರು ರಾಕ್ಷಸರಿಗೆ ಜಯ ತಂದಿಡಲು ಹರಸಾಹಸ ಮಾಡುತ್ತಿದ್ದನು. ಪ್ರದ್ಯುಮ್ನನಾದರೂ ಅವನನ್ನು ತನ್ನ ಬಾಹುಗಳಿಂದ ಬಂಧಿಸಿ, ಅವನನ್ನೂ ಮಾಯಮಯ ಗುಹೆಯಲ್ಲಿರಿಸಿದನು.

ನಂತರ ದುರ್ಯೋಧನ, ವಿರಾಟ-ದ್ರುಪದ, ಜರಾಸಂಧ, ತ್ರಿಗರ್ತರಾಜ ಮಾಲವ, ವಾಸಂತ್ಯ ಗಣಗಳನ್ನೂ, ಧೃಷ್ಟದ್ಯುಮ್ನ ಮೊದಲಾದ ಪಾಂಚಾಲರನ್ನೂ ಬಂಧಿಸಿದನು.

ನಂತರ ಶಿಶುಪಾಲಾದಿ ರಾಜರನ್ನುದ್ಧೇಶಿಸಿ ಹೀಗೆಂದನು -

**ಸಂಬಂಧ ಚ ಗುರುತ್ವಂ ಚ ಮಾನಯಾಮಿ ನರಾಧಿಪಾಃ ।**
**ಬಿಲ್ವೋದಕೇಶ್ವರೇಣಾಹಮಾಜ್ಞಪ್ತಃ ಶೂಲಪಾಣಿನಾ ॥ 18 ॥**
**ಆಶ್ರಿತ್ಯ ಶಾಂಬರೀಂ ಮಾಯಾಂ ನಿಕುಂಭೇನ ಮಹಾತ್ಮನಾ ।**
**ಪ್ರಕ್ಷಿಪ್ತಾನ್ ಯಾದವಾಂಶ್ಚೈವ ಮೋಕ್ಷಯಿಷ್ಯಾಮಿ ಸರ್ವಥಾ ॥ 19 ॥**

ರಾಜರೇ! ನಿಮಗೂ, ನಮಗೂ ಇರುವ ರಕ್ತಸಂಬಂಧ, ಗುರುತ್ವಾದಿಗಳನ್ನು ಗೌರವಿಸುತ್ತೇನೆ. ಆದರೂ ಬಿಲ್ವೋದಕೇಶ್ವರನ ಆದೇಶವೂ ನನಗೆ ಮಾನ್ಯವಾಗಿದೆ. ಹೀಗಾಗಿ ನಿಮ್ಮನ್ನು ಈ ಗುಹೆಯಲ್ಲಿ ಬಂಧಿಸಲೇಬೇಕಾಗಿದೆ. ನಿಶುಂಭನು ಶಾಂಬರೀ ಮಾಯೆಯಿಂದ ನಿರ್ಮಿತ ಗುಹೆಯಲ್ಲಿ ಯಾದವರನ್ನೆಲ್ಲ ಬಂಧಿಸಿದ್ದನು. ನಾನಾದರೂ ಅವರನ್ನೆಲ್ಲ ಬಂಧವಿಮುಕ್ತ-ರನ್ನಾಗಿಸಿರುವೆನು ಎಂದನು.

ಪ್ರದ್ಯುಮ್ನನ ವಿರೋಚಿತ ಮಾತನ್ನು ಕೇಳಿದ ಸೇನಾಧಿಪತಿ ಶಿಶುಪಾಲನು ತನ್ನ ಬಾಣಗಳ ಮಳೆಯನ್ನು ಯಾದವರ ಮೇಲೆ ಸುರಿಸಿ ಪ್ರದ್ಯುಮ್ನನನ್ನು ಬಹುವಾಗಿ ಬಾಣಗಳಿಂದ ಹೊಡೆದನು.

ಪ್ರದ್ಯುಮ್ನನಾದರೂ ಬಿಲ್ವೋದಕೇಶ್ವರನಿಗೆ ನಮಿಸಿ ಶಿಶುಪಾಲನನ್ನೆ ಬಂಧಿಸಲು ಉದ್ಯುಕ್ತನಾದನು.

## ಪ್ರದ್ಯುಮ್ನ ಪರಾಕ್ರಮ

**ತತಃ ಪಾಶಸಹಸ್ರಾಣಿ ಗೃಹಾಯ ಪ್ರವರೋತ್ತಮಃ ।**
**ಶೈಲಾದಿರಬ್ರವೀದ್ ವೀರಂ ರೌಕ್ಮಿಣೇಯಂ ಮಹಾಬಲಮ್ ॥ 20 ॥**

ಈ ಸಂದರ್ಭದಲ್ಲಿ ಶಿವನ ಗಣಗಳಲ್ಲಿ ಪ್ರಮುಖ ಗಣನಾದ ನಂದೀಶ್ವರನು *[ಶೈಲಾದಿಃ = ನಂದೀ]* ಸಾವಿರ ಪಾಶಾಯುಧಗಳನ್ನು ಹಿಡಿದು ಪ್ರದ್ಯುಮ್ನನನ್ನು ಕುರಿತು ಪ್ರದ್ಯುಮ್ನನೇ – "ಬಿಲ್ವೋದಕೇಶ್ವರನು ನನ್ನ ದ್ವಾರಾ ನಿನಗೆ ಸಂದೇಶ ನೀಡಿರುವನು" ನಾನು ಈ ಹಿಂದೆ ನಿನಗೆ ಹೇಳಿದಂತೆ ಸಕಲ ಕಾರ್ಯಗಳನ್ನೂ ರಾತ್ರಿಯಲ್ಲಿಯೆ ಮಾಡುವವನಾಗು.

ಸಕಲರತ್ನಗಳನ್ನೂ, ಸ್ತ್ರೀರತ್ನಗಳನ್ನೂ ಅಪಹರಿಸಬೇಕೆಂದಿರುವ ಈ ರಾಜ–ರೆಲ್ಲರನ್ನೂ ಈ ನನ್ನ ಪಾಶಗಳಿಂದ ಕಟ್ಟಿ ಹಾಕು. ಇವರನ್ನೂ ಬಂಧಿಸಲು ಮೋಚನಗೊಳಿಸಲೂ ಸಹ ನೀನೇ ಸಮರ್ಥನಾಗಿರುವಿ. ಅಸುರರೆಲ್ಲರನ್ನೂ ನಿಶ್ಶೇಷವಾಗಿ ಕೊಂದು ಹಾಕು.

**ಕನ್ಯಾರ್ಥಂ ರತ್ನಲುಬ್ಧಾಂಸ್ತು ಬಧ್ವಾ ಚೇಮಾನ್ ನರಾಧಿಪಾನ್ ।**
**ಪಾಶೈಃ ತ್ವಮೇವ ಮೋಕ್ತುಂ ಚ ಪ್ರಮಾಣಂ ಯದುನಂದನ ॥ 21 ॥**
**ಅಸುರಾಂಸ್ತು ಮಹಾಬಾಹೋ ನಿಃಶೇಷಾನ್ ಕರ್ತುಮರ್ಹಸಿ ।**

ಈ ಅಸುರರಲ್ಲಿ ಒಬ್ಬನನ್ನು ಉಳಿಸಬಾರದು. ಶ್ರೀಕೃಷ್ಣನಿಗೂ ಈ ನನ್ನ ಸಂದೇಶವನ್ನು ತಿಳಿಸುವವನಾಗು.

## ರಾಜರ ಬಂಧನ

**ತತಃ ಸ ಭಗದತ್ತಂ ಚ ಶಿಶುಪಾಲಂ ಚ ಭೂಮಿಪ ।**
**ಆಭೃತಿಂ ಚೈವ ರುಕ್ಮಿಂ ಚ ಶೇಷಾಂಶ್ಚಾನ್ಯಾನ್ ನರಾಧಿಪಾನ್ ॥ 22 ॥**
**ಬಬಂಧ ಹರದತ್ತೈಸ್ತೈಃ ಪಾಶೈರುತ್ತಮವೀರ್ಯಧೃಕ್ ।**
**ಮಾಯಾಮಯೀಂ ಗುಹಾಂ ಚೈವ ಮಾನಯತ್ ಕುರುನಂದನ ॥ 23 ॥**

ನಂತರ ಶಿವನ ಆದೇಶದಂತೆ ಪ್ರದ್ಯುಮ್ನನು ಭಗದತ್ತನನ್ನು, ಶಿಶುಪಾಲನನ್ನು ಆಭೃತಿ, ರುಕ್ಮೀ ಹಾಗೂ ಉಳಿದಿರುವ ಸಮಸ್ತ ಭೂಪಾಲರನ್ನೂ, ಹರನು ನೀಡಿರುವ ಸಾವಿರ ಪಾಶಗಳಿಂದ ಬಂಧಿಸಿ, ಮಾಯಾಮಯ ಗುಹಾ ಪ್ರವೇಶ ಮಾಡಿಸಿದನು.

ಬಂಧಿತ ರಾಜರೆಲ್ಲರೂ ಏನೂ ಮಾಡಲಾಗದೆ ಆಶೀವಿಷದಂತೆ ಬುಸುಗುಟ್ಟುತ್ತಾ ನಿಟ್ಟುಸಿರು ಬಿಡುತ್ತಿದ್ದರು. ಪ್ರದ್ಯುಮ್ನನು ಅವರನ್ನು ನೋಡಿಕೊಳ್ಳಲು ತನ್ನ ಪುತ್ರನಾದ ಅನಿರುದ್ಧನನ್ನು ನಿಯಮಿಸಿದನು.

ನಂತರ ಪ್ರದ್ಯುಮ್ನನು ಶಿವನಾಜ್ಞೆಯಂತೆ ಕ್ಷತ್ರಿಯ ರಾಜರೆಲ್ಲರನ್ನೂ ಬಂಧಿಸಿ, ಅವರ ಸೇನಾನಿಗಳನ್ನು, ಕೋಶಾಧ್ಯಕ್ಷರನ್ನೂ ಚತುರಂಗ ಬಲವನ್ನೂ ತನ್ನ ವಶಕ್ಕೆ ತೆಗೆದುಕೊಂಡನು.

ತೇಷಾಂ ನಿರವಶೇಷೇಣ ಬಬಂಧ ಯದುನಂದನಃ ।
ಸೇನಾಪತೀನ್ ಕ್ಷತ್ರಿಯಾಂಶ್ಚ ಕೋಶಾಧ್ಯಕ್ಷಾಂಶ್ಚ ಭಾರತ ॥ 24 ॥

ಉಳಿದ ಸಮಸ್ತ ಅಸುರರನ್ನೆಲ್ಲ ಕೊಲ್ಲುವ ಸನ್ನಾಹದಲ್ಲಿರುವ ಪ್ರದ್ಯುಮ್ನನ ಉದ್ಯೋಗ ನೋಡಿದ ಬ್ರಹ್ಮದತ್ತನು ಭಯಪಟ್ಟನು. ಅವನಿಗೆ ಹೀಗೆಂದನು.

ವಿಸ್ರಬ್ಧಂ ವರ್ತತಾಂ ಕರ್ಮ ಮಾ ಭೈಃ ಪಶ್ಯ ಧನಂಜಯಮ್ ।
ನ ದೇವೇಭ್ಯೋ ನಾಸುರೇಭ್ಯೋ ನಾಗೇಭ್ಯೋ ದ್ವಿಜಸತ್ತಮ ॥ 25 ॥
ಭಯಂ ಹಿ ವಿದ್ಯತೇ ತಸ್ಯ ಗೋಪ್ತಾರೋ ಯಸ್ಯ ಪಾಂಡವಾಃ ।
ನ ಚಾಸುರೈಃ ತವ ಸುತಾಃ ಸ್ಪಷ್ಟಾಃ ಖಲ್ವಪಿ ಚೇತಸಾ ॥ 26 ।
ಯಜ್ಞವಾಟೇ ನಿರೀಕ್ಷ್ಯಂತಾಂ ಮಾಯಯಾ ನಿಹಿತಾ ಮಯಾ ॥ 27 ॥

ವಿಪವರ್ಯ ಬ್ರಹ್ಮದತ್ತ ! ನೀನು ನೀನು ಪ್ರಾರಂಭಿಸಿರುವ ಯಜ್ಞವನ್ನು ನಿರ್ಭಯವಾಗಿ ಮುಂದುವರೆಸು. ಅರ್ಜುನನು ನಿನ್ನ ಯಜ್ಞರಕ್ಷಣೆಗೆ ನಿಂತಿರುವಾಗ ಭಯವೆಲ್ಲಿಂದ ಬಂದೀತು.

ಪಾಂಡವರು ಯಾರ ರಕ್ಷಣೆಗಾಗಿ ಕಟಿಬದ್ಧರಾಗಿರುವರೋ ಅವರಿಗೆ ದೇವಾಸುರನಾಗಗಳಿಂದಲೂ ಭಯವಿರುವುದಿಲ್ಲ.

ನಿನ್ನ ಪುತ್ರಿಯರನ್ನು ಅಸುರಾದಿಗಳು ಮನಸ್ಸಿನಿಂದಲೂ ಮುಟ್ಟಲಾರರೆಂದ ಮೇಲೆ ದೇಹದಿಂದ ಮುಟ್ಟಲು ಸಾಧ್ಯವೆ. ಇದೂ ಅಲ್ಲದೆ ಅವರೆಲ್ಲರನ್ನೂ ಗುಹೆಯಲ್ಲಿ ಬಂಧಿತರಾಗಿರುವಾಗ ಯಜ್ಞವಾಟಕ್ಕೆ ಬರುವುದಾದರೂ ಹೇಗಾದೀತು? ಎಂದನು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ ಪ್ರದ್ಯುಮ್ನನು ಜರಾಸಂಧಾದಿ ರಾಜರನ್ನು ಬಂಧಿಸಿದನೆಂಬಲ್ಲಿ ಎಂಬತ್ತನಾಲ್ಕನೆಯ ಅಧ್ಯಾಯ ಸಮಾಪ್ತಿ

## ಅಥ ಪಂಚಾಶೀತಿತಮೋಽಧ್ಯಾಯಃ

*ವೈಶಂಪಾಯನ ಉವಾಚ –*

**ರುದ್ಧೇಷು ಭೂಮಿಪಾಲೇಷು ಸಾನುಗೇಷು ವಿಶಾಂಪತೇ ।**
**ಆವಿವೇಶಾಸುರಾಂಶ್ಚಾಥ ಕಶ್ಮಲಂ ಜನಮೇಜಯ ॥ 1 ॥**

**ದಿಶಃ ಪ್ರತಸ್ಥುಸ್ತೇ ವೀರಾ ವಧ್ಯಮಾನಾ ಸಮಂತತಃ ।**
**ಕೃಷ್ಣಾನಂತ ಪ್ರಭೃತಿಭಿಃ ಯದುಭಿಃ ಯುದ್ಧದುರ್ಮದೈಃ ॥ 2 ॥**

ರಾಜನ್ ಜನಮೇಜಯ ! ಪ್ರದ್ಯುಮ್ನನಿಂದ ರಾಜರೆಲ್ಲರೂ ತಮ್ಮ ಸೈನಿಕ ಸಮೇತರಾಗಿ ಬಂಧಿಸಲ್ಪಟ್ಟ ನಂತರ ಅಸುರರೆಲ್ಲರೂ ಏನು ಮಾಡಬೇಕೆಂದು ತಿಳಿಯದೆ ಮೋಹಗೊಂಡರು.

ಬಲರಾಮ-ಕೃಷ್ಣರಿಂದ ಹಾಗೂ ಯದುವೀರರಿಂದ ನಿರಂತರವಾಗಿ ಕೊಲ್ಲಲ್ಪಡುತ್ತಿದ್ದ ಅಸುರರು ಭಯದಿಂದಾಗಿ ದಿಕ್ಕುಪಾಲಾಗಿ ಓಡುತ್ತಿದ್ದರು. ತಮ್ಮ ಸೈನ್ಯದವರೆಲ್ಲರೂ ಪಲಾಯನ ಮಾಡುತ್ತಿರುವುದನ್ನು ನೋಡಿದ ನಿಕುಂಭನು ಕ್ರುದ್ಧನಾಗಿ ಅವರಿಗೆ ಹೀಗೆಂದನು.

**ಭಿತ್ವಾ ಪ್ರತಿಜ್ಞಾಂ ಕಿಂ ಮೋಹಾದ್ ಭಯಾರ್ತಾ ಯಾತ ವಿಹ್ವಲಾಃ ।**
**ಹೀನ ಪ್ರತಿಜ್ಞಾಃ ಕಾನ್ ಲೋಕಾನ್ ಪ್ರಯಾಸ್ಯಥ ಪಲಾಯಿತಾಃ ॥ 3 ॥**

**ಅಗತ್ವಾಪಚಿತಿಂ ಯುದ್ಧೇ ಜ್ಞಾತೀನಾಂ ಕೃತನಿಶ್ಚಯಾಃ ।**
**ಫಲಂ ಜಿತ್ವೇಹ ಭೋಕ್ತವ್ಯಂ ರಿಪೂನ್ ಸಮರಕರ್ಕಶಾನ್ ॥ 4 ॥**

ಯುದ್ಧದಲ್ಲಿ ಮಡಿದಿರುವ ಬಂಧುಗಳಿಗಾಗಿ ಪ್ರತೀಕಾರ ಮಾಡುತ್ತೇವೆಂದು

ಪ್ರತಿಜ್ಞೆ ಮಾಡಿರುವ ನೀವು ಪ್ರತಿಜ್ಞೆಯನ್ನು ಭಂಗಗೊಳಿಸಿ ಜೀವಭಯದಿಂದ ಓಡಿ ಹೋಗಬಹುದೇ. ಹೀಗೆ ಜ್ಞಾತಿಗಳ ಋಣ ತೀರಿಸದೇ ಬೆನ್ನು ತೋರಿಸಿ ಪಲಾಯನ ಮಾಡುತ್ತಿರುವ ನಿಮಗೆ ಎಂತಹ ಹೀನಲೋಕ ಲಭಿಸುತ್ತದೆ ಎಂದು ಬಲ್ಲಿರ?

ರಣರಂಗದಲ್ಲಿ ನಿಷ್ಠುರರಾದ ಶತ್ರುಗಳನ್ನು ಜಯಿಸಿ ರಾಜ್ಯ ಭೋಗಾದಿ ಐಹಿಕ ಸುಖವನ್ನು ಅನುಭವಿಸಬೇಕು ಅಥವಾ ಯುದ್ಧ ಮಾಡುತ್ತಲೇ ಶತ್ರುವಿನೊಂದಿಗೆ ಹೋರಾಡುವಾಗ ಸತ್ತರೆ ವೀರಸ್ವರ್ಗ ಲಭಿಸುತ್ತದೆ.[1]

**ಪಲಾಯಿತ್ವಾ ಗೃಹಂ ಗತ್ವಾ ಕಸ್ಯ ದ್ರಕ್ಷ್ಯಥ ಹೇ ಮುಖಮ್ ।**
**ದಾರಾನ್ ವಕ್ಷ್ಯಥ ಕಿಂ ಚಾಪಿ ದಿಗ್ ಧಿಕ್ ಕಿಂ ಕಿಂ ನ ಲಜ್ಜಥ ॥ 5 ॥**

ಯುದ್ಧದಲ್ಲಿ ಶತ್ರುವಿಗೆ ಬೆನ್ನು ತೋರಿಸಿ ಮನೆಗೆ ಹೋಗಿ ನೀವು ಯಾರ ಮುಖವನ್ನು ನೋಡಿವಿರಿ. ಯಾರು ನಿಮ್ಮ ಮುಖ ನೋಡುವರು? ಯುದ್ಧದ ವಾರ್ತೆ ಕೇಳಿದ ನಿಮ್ಮ ಪತ್ನಿಯರಿಗೆ ಏನೆಂದು ಹೇಳುವಿರಿ? ಯುದ್ಧದಲ್ಲಿ ಬೆನ್ನು ಹಾಕಿ ಬಂದೆವೆಂದು ಹೇಳುವಿರಾ? ಈ ಹೇಡಿತನ ಅವಳು ಒಪ್ಪುವಳೇ? ನಿಮಗೆ ಧಿಕ್ಕಾರವಿರಲಿ. ನಿಮಗೆ ನಾಚಿಕೆಯೂ ಇಲ್ಲದಂತಾಗಿದೆ.

ಹೀಗೆ ನಿಕುಂಭನ ಮಾತುಗಳನ್ನು ಕೇಳಿದ ಅಸುರ ವೀರರೆಲ್ಲರೂ ಲಜ್ಜೆಯಿಂದ ಪುನಃ ಯುದ್ಧದಲ್ಲಿ ಹಿಂತಿರುಗಿ ಮೊದಲಿಗಿಂತಲೂ ದುಪ್ಪಟ್ಟು ವೇಗದಿಂದ ಯುದ್ಧ ಮಾಡಲುಪಕ್ರಮಿಸಿದರು.

ಅನೇಕ ಅಸ್ತ್ರ ಶಸ್ತ್ರಗಳಿಂದ ಸಜ್ಜಿತರಾಗಿದ್ದ ಅಸುರರು ಬ್ರಹ್ಮದತ್ತನ ಯಜ್ಞ ಮಂಟಪಕ್ಕೆ ನುಗ್ಗುತ್ತಿದ್ದರೂ, ಅಂತಹ ಅಸುರರೆಲ್ಲರನ್ನೂ ಅಲ್ಲಿಗೆ ಹೋಗಲು ಬಿಡದೆ ಪಾಂಡವರು ಸಂಹರಿಸುತ್ತಿದ್ದರು.

ಬಾಣಗಳಿಂದ ತಪ್ಪಿಸಿಕೊಳ್ಳಲು ಆಕಾಶಕ್ಕೆ ಹಾರಿದ ಅಸುರರನ್ನು ಅಲ್ಲಿಯೇ ಇದ್ದ ಜಯಂತ-ಪ್ರವರರು ಕೊಚ್ಚಿ ಹಾಕುತ್ತಿದ್ದರು. ಈ ಯುದ್ಧದಿಂದಾಗಿ ರಕ್ತದ ಕೋಡಿ ಹರಿದು ರಕ್ತಾ ಎಂಬ ನದಿಯು ಪ್ರಾದುರ್ಭೂತವಾಯಿತು.

**ಅಥಾಸುರಾಸೃಕ್ ತೋಯಾಢ್ಯಾ ಕೇಶಶೈವಲಶಾಡ್ವಲಾ ।**
**ಚಕ್ರಕೂರ್ಮರಥಾವರ್ತಾ ಗಜಶೈಲಾನುಶೋಭಿನೀ ॥ 6 ॥**

---

1. ಹತೋವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತೋ ವಾ ಭೋಕ್ಷ್ಯಸೇ ಮಹೀಂ ।– *ಭ.ಗೀ.*

**ಗೋವಿಂದಶೈಲ ಪ್ರಭವಾ ಭೀರು ಚಿತ್ತಪ್ರಮಾಥಿನೀ ।**

ದೈತ್ಯರ ರಕ್ತವೆ ನೀರು, ತಲೆಗೂದಲುಗಳೆ ಪಾಚಿಗಳು ಹಾಗೂ ಚಿಗುರುಗಳು, ರಥಗಳ ಚಕ್ರಗಳೇ ನೀರಿನಲ್ಲಿರುವ ಆಮೆಗಳು, ರಥಗಳು ಸುಳಿಗಳು, ಗಜಗಳು ನದಿಯ ಪಕ್ಕದಲ್ಲಿರುವ ಪರ್ವತಗಳು, ಯೋಧರ ಗರ್ಜನೆಯು ನದಿಯ ನೀರಿನ ಶಬ್ದದಂತೆ ಇತ್ತು. ಈ ರಕ್ತ ನದಿಯು ಶ್ರೀಕೃಷ್ಣನೆಂಬ ಪರ್ವತದಿಂದ ಹುಟ್ಟಿ ಹರಿಯುತ್ತಿದ್ದಿತು.

ಈ ನದಿಯು ರಣಹೇಡಿಗಳ ಮನಸ್ಸಿನಲ್ಲಿ ಭಯವನ್ನು ಹುಟ್ಟಿಸುತ್ತಿತ್ತು. ಈ ನದಿಯ ಗುಳ್ಳೆಗಳು ನೊರೆಯಂತೆ ಇದ್ದವು. ಕತ್ತಿಗಳು ಮೀನಿನಂತೆ ಇದ್ದವು. ಇಂತಹ ನದಿ ಹರಿಯಿತು.

**ತಾನ್ ದೃಷ್ಟ್ವಾ ನಿಕುಂಭಸ್ತು ವರ್ಧಮಾನಾಂಶ್ಚ ಶಾತ್ರವಾನ್ ।**
**ಹತಾನ್ ಸರ್ವಾನ್ ಸಹಾಯಾಂಶ್ಚ ವೀರ್ಯಾದೇವ ಉತ್ಪಪಾತ ಹ ॥ 7॥**

ತನ್ನ ಸಹಾಯ ಕೋರಿ ಬಂದವರೆಲ್ಲರೂ ಶತ್ರುಗಳಿಂದ ಹತರಾಗುವುದನ್ನೂ ಶತ್ರುಸೈನ್ಯ ಕ್ಷಣಕ್ಷಣಕ್ಕೂ ಅಭಿವೃದ್ಧವಾಗುವುದನ್ನು ನೋಡಿದ ನಿಕುಂಭನು. ಮಾಯೆಯನ್ನಾಶ್ರಯಿಸಿ ಗಗನತಲಕ್ಕೆ ಹಾರಿದನು.

ಆಗಸದಲ್ಲಿಯೆ ನಿಂತಿದ್ದ ಜಯಂತ-ಪ್ರವರರು ವಜ್ರದಂತಹ ಬಾಣಗಳಿಂದ ನಿಕುಂಭನಿಗೆ ಹೊಡೆದರು.

ನಿಕುಂಭನು ಹಲ್ಲು ಕಟಕಟನೆ ಕಡಿಯುತ್ತಾ ಭೂಮಿಗೆ ಬಂದು ಕೋಪಗೊಂಡು ಪರಿಘಾಯುಧದಿಂದ ಪ್ರವರನ್ನು ಹೊಡೆದನು.

ಆ ಏಟನ್ನು ತಾಳಲಾರದೆ ಪ್ರವರನು ಭೂಮಿಗೆ ಬೀಳುವುದನ್ನು ನೋಡಿದ ಜಯಂತನು ಅವನನ್ನು ಹಿಡಿದೆತ್ತಿ ಬಾಚಿ ತಬ್ಬಿಕೊಂಡು ಎಚ್ಚರಗೊಳಿಸಿದನು. ನಂತರ ನಿಶಿತ ಖಡ್ಗದಿಂದ ನಿಕುಂಭನಿಗೆ ಹೊಡೆದನು.

ಆ ಪೆಟ್ಟನ್ನು ಲೆಕ್ಕಿಸದ ನಿಕುಂಭನು ಪರಿಘವನ್ನೆತ್ತಿ ಜಯಂತನ ಮೇಲೆ ಹೊಡೆದನು. ಆದರೆ ಜಯಂತನು ಪರಿಘಯುಧವನ್ನು ಬಾಣದಿಂದ ತುಂಡರಿಸಿ ಅವನಿಗೆ ಬಾಣಗಳಿಂದ ಪ್ರಹರಿಸಿದನು. ಅಂದಿನ ಯುದ್ಧದಲ್ಲಿ ಪ್ರದ್ಯುಮ್ನನು ನಿಕುಂಭನನ್ನು ಹೊಡೆದು ಬಹಳ ಗಾಯಗೊಳಿಸಿದನು.

**ತತಶ್ಚ ಬಹುಲಂ ಗಾತ್ರಂ ನಿಕುಂಭಸ್ಯೈಂದ್ರಿರಾಹವೇ ॥ 8 ॥**

ತನಗೆ ಹೀಗೆ ಘಾಸಿಗೊಳಸುತ್ತಿದ್ದ ಜಯಂತನನ್ನು ನೋಡಿ ಹೀಗೆ ಆಲೋಚಿಸಿದನು.

**ಕೃಷ್ಣೇನ ಸಹ ಯೋದ್ಧವ್ಯಂ ವೈರಿಣಾ ಜ್ಞಾತಿಘಾತಿನಾ ।**
**ಶ್ರಾವಯಾಮಿ ಕಿಮಾತ್ಮಾನಂ ಆಹವೇ ಶಕ್ರಸೂನುನಾ ॥ 9 ॥**

ಇಂದ್ರ ಪುತ್ರ ಜಯಂತನೊಡನೆ ನಾನು ಯುದ್ಧ ಮಾಡುವುದರಿಂದ ನನಗೆ ಏನು ಪ್ರಯೋಜನವಿರುವುದಿಲ್ಲ. ನನ್ನ ಬಂಧುಗಳನ್ನು ನಿರ್ದಯವಾಗಿ ಕೊಂದು ಹಾಕಿದ ಶ್ರೀಕೃಷ್ಣನೊಡನೆ ಯುದ್ಧ ಮಾಡಿದರೆ ಪ್ರತಿಕಾರ ಹಾಗೂ ಕೀರ್ತಿಯೂ ಲಭಿಸೀತು ಎಂದು ಚಿಂತಿಸಿ, ಕೂಡಲೇ ಮಾಯೆಯಿಂದ ಅದೃಶ್ಯನಾದನು.

**ಏವಂ ಸ ನಿಶ್ಚಯಂ ಕೃತ್ವಾ ತತ್ರೈವಾಂತರಧೀಯತ ।**
**ಜಗಾಮ ಚೈವ ಯುದ್ಧಾರ್ಥಂ ಯತ್ರ ಕೃಷ್ಣೋ ಮಹಾಬಲಃ ॥ 10 ॥**

ಶ್ರೀಕೃಷ್ಣನೊಂದಿಗೆ ಯುದ್ಧ ಮಾಡಲು ನಿಶ್ಚೈಸಿದ ಅವನು ಶ್ರೀಕೃಷ್ಣನಿದ್ದ ಸ್ಥಳಕ್ಕೆ ಧಾವಿಸಿದನು.

## ಇಂದ್ರನ ಆಗಮನ

ನಿಕುಂಭನು ಶ್ರೀಕೃಷ್ಣನೊಂದಿಗೆ ಯುದ್ಧ ಮಾಡಲು ಅವನ ಬಳ ಬಂದಾಗ ಇಂದ್ರದೇವನು ದೇವತೆಗಳೊಂದಿಗೆ ಯುದ್ಧವನ್ನು ನೋಡಲೆಂದು ತನ್ನ ಐರಾವತವನ್ನೇರಿ ಅಲ್ಲಿಗೆ ಬಂದನು.

**ತಂ ದೃಷ್ಟ್ವಾ ಐರಾವತಸ್ಕಂಧ ಮಾಸ್ಥಿತೋ ಬಲನಾಶನಃ ।**
**ದ್ರಷ್ಟುಮಭಾಗ್ಯತೋ ಯುದ್ಧಂ ಜಹೃಷೇ ಸಹ ದೈವತೈಃ ॥ 11 ॥**

ಇಂದ್ರನು ತನ್ನ ಮಗ ಜಯಂತನ ಯುದ್ಧ ಕೌಶಲವನ್ನು ನೋಡಿ ಸಾಧು ಪುತ್ರ ಸಾಧು! ಎಂದು ಪ್ರಶಂಸಿಸುತ್ತಾ ಅವನನ್ನು ಆಲಿಂಗಿಸಿದನು.

**ಸಾಧು ಸಾಧ್ವಿತಿ ಪುತ್ರಂ ಚ ಪರಿತುಷ್ಟಃ ಸ ಸಸ್ವಜೇ ।**

ಮೂರ್ಛೆ ತಿಳಿದಿದ್ದ ಪ್ರವರವನ್ನೂ ಆಲಿಂಗಿಸಿದನು.

ನಿಕುಂಭನೊಂದಿಗೆ ಯುದ್ಧ ಮಾಡಿ ವಿಜಯಿಯಾದ ಜಯಂತನನ್ನು ನೋಡಿ ಪರಿತುಷ್ಟನಾದ ಇಂದ್ರದೇವನ ಅಣತಿಯಂತೆ ದೇವದುಂದುಭಿಗಳು ಮೊಳಗಿದವು *[ದೇವದುಂದಿಭಯಃ ಪ್ರಣೇದುಃ ವಾಸವಾಜ್ಞಯಾ]*

## ಶ್ರೀಕೃಷ್ಣ-ನಿಕುಂಭ ಯುದ್ಧ

ಯುದ್ಧದಲ್ಲಿ ರಣದುರ್ಜಯನಾದ ಕೃಷ್ಣನು ಯಜ್ಞಮಂಟಪದ ಬಳಿ ಪಾರ್ಥನೊಂದಿಗೆ ಇರುವುದನ್ನು ಕಂಡ ನಿಕುಂಭನು ಅಲ್ಲಿಗೆ ಧಾವಿಸಿ ಬಂದನು. ಸಿಂಹನಾದ ಮಾಡುತ್ತಾ ಭಯಂಕರ ಪರಿಘಾಯುಧವನ್ನೆತ್ತಿ ಗರುಡನನ್ನೂ ಗರುಡನ ಮೇಲೆ ಕುಳಿತ್ತಿದ್ದ ಬಲರಾಮ ಸಾತ್ಯಕಿಯರನ್ನೂ ಬಲವಾಗಿ ಹೊಡೆದನು *[ಪರಿಘೇಣ ಪಕ್ಷಿರಾಜ ಮತಾಡಯತ್]*.

## ಕೃಷ್ಣ-ನಿಕುಂಭ ಯುದ್ಧ

**ಯುಯುಧೇ ಮಾಯಯಾ ದೈತ್ಯಃ ಶೀಘ್ರಕಾರೀ ಚ ಭಾರತ ।**
**ನ ಚೈನಂ ದದೃಶುಃ ಸರ್ವೇ ಸರ್ವಶಾಸ್ತ್ರ ವಿಶಾರದಾಃ ॥ 12 ॥**

ಮರುಕ್ಷಣದಲ್ಲಿಯೇ ನಿಕುಂಭನು ಶ್ರೀಕೃಷ್ಣ, ಧರ್ಮರಾಜ, ಭೀಮಾರ್ಜುನ ನಕುಲ ಸಹದೇವರನ್ನೂ, ಕೃಷ್ಣನ ಪುತ್ರ ಸಾಂಬ ಪ್ರದ್ಯುಮ್ನರನ್ನೂ ಪರಿಘಾಯುಧದಿಂದ ಬಲವಾಗಿ ಹೊಡೆದನು. ಶೀಘ್ರವಾಗಿ ಕಾರ್ಯ ಮಾಡುವ ಚಾಕಚಾಕ್ಯತೆ ಹೊಂದಿದ್ದ ನಿಕುಂಭನು ಮಾಯಾಯುದ್ಧವನ್ನು ಮಾಡುತ್ತಿದ್ದರಿಂದ ಧರ್ಮರಾಜಾದಿಗಳು ಸರ್ವಶಸ್ತ್ರ ವಿಶಾರದರೇ ಆಗಿದ್ದರೂ ನಿಕುಂಭನನ್ನು ಮಾತ್ರ ಕಾಣದಾದರು.

**ಯದಾ ತು ನೈವಾಪಶ್ಯಂಸ್ತಂ ತದಾ ಬಿಲ್ವೋದಕೇಶ್ವರಮ್ ।**
**ದಧ್ಯೌ ದೇವಂ ಹೃಷೀಕೇಶಃ ಪ್ರಮಥಾನಾಂ ಗಣೇಶ್ವರಮ್ ॥ 13 ॥[2]**

ಶ್ರೀಕೃಷ್ಣನು ಯಾವಾಗ ನಿಕುಂಭನು ಎಲ್ಲಿರುವನೆಂದೇ ತಿಳಿಯಲಾಗಲಿಲ್ಲವೋ

---

2. 1) ವಿಷ್ಣ್ವಾಧಿಕ್ಯ ವಿರೋದೀನಿ ಯಾನಿ ವೇದ ವಚಾಂಸ್ಯಪಿ ।
ತಾನಿ ಯೋಜ್ಯಾನಿ ಅನುಕೂಲ್ಯಾದ್ ವಿಷ್ಣ್ವಾಧಿಕ್ಯಸ್ಯ ಸರ್ವಶಃ । –ತಾ.ನಿ. *1/36*
2) ತ್ವಾಮಾರಾಧ್ಯ ತಥಾ ಶಂಭೋ ಗ್ರಹೀಷ್ಯಾಮಿ ವರಂ ಸದಾ ।
ದ್ವಾಪರಾದೌ ಯುಗೇಭೂತ್ವಾ ಕಲಯಾ ಮಾನುಷಾದಿಷು । – *ತಾ.ನಿ. 1/57*
ರುದ್ರಂ ಸಮಾಶ್ರಿತಾ ದೇವಾಃ ರುದ್ರೋಬ್ರಹ್ಮಾಣಮಾಶ್ರಿತಃ ।
ಬ್ರಹ್ಮಾಮಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ । –*ತಾ.ನಿ. 2/117*
ಪ್ರಾದುರ್ಭಾವಾಃ ಹರೇಃ ಸರ್ವೇ ನೈವ ಪ್ರಾಕೃತದೇಹಿನಃ ।
ನಿರ್ದೋಷ ಗುಣ ಸಂಪೂರ್ಣಾ ದರ್ಶಯಂ ತ್ಯನ್ಯಥೈವ ತು । – *ತಾ.ನಿ. 2/84*
ಅಜಾನನ್ ಪೃಚ್ಛತಿ ಸ್ಮಾನ್ಯಾನ್ – ಇತ್ಯಾದ್ಯಸುರಮೋಹಾಯ ।
ಸರ್ವೇಷಾಂ ಜ್ಞಾನದೋ ವಿಷ್ಣುಃ ಯಶೋದಾತೇತಿ ಚೋದಿತಃ । – *ತಾ.ನಿ.2/13*

ಆಗ ಪ್ರಮಥೇಶ್ವರನಾದ ಬಿಲ್ವೋದಕೇಶ್ವರನನ್ನು ಸ್ಮರಿಸಿಕೊಂಡನು. ಕೂಡಲೇ ಬಿಲ್ವೋದಕೇಶ್ವರನ ಅನುಗ್ರಹದಿಂದಾಗಿ ಮಾಯೆ ತೊಲಗಿ ನಿಕುಂಭನು ದೃಶ್ಯನಾದನು.

ನಿಕುಂಭನು ಕೈಲಾಸಶಿಖರದಂತೆ ಆಕಾರವುಳ್ಳವನೂ *[ಕೈಲಾಸ ಶಿಖರಾಕಾರಂ]*. ಸರ್ವರನ್ನೂ ನುಂಗುವಂತೆ ಗುಹೆಯಂತಹ ಬಾಯಿ ತೆರೆದಿದ್ದನು. ಬಂಧು-ಗಳನ್ನು ಕೊಂದ ನಂದನಂದನನನ್ನು ಯುದ್ಧಕ್ಕೆ ಬಾ ಎಂದು ಕರೆಯುತ್ತಿದ್ದನು.

ಈ ಸಮಯದಲ್ಲಿಯೇ ಗಾಂಡೀವಿಯು ತನ್ನ ಗಾಂಡೀವದಿಂದ ಹೊರ ನಿಶಿತನಾರಾಚಗಳಿಂದ ನಿಕುಂಭನನ್ನು ಪ್ರಹರಿಸುತ್ತಿದ್ದನು.

**ಸಜ್ಯ ಗಾಂಡೀವ ಏವಾಥ ಪಾರ್ಥಸ್ತಸ್ಯ ರಥೇಷುಭಿಃ ।**
**ಪರಿಘಂ ಚೈವ ಗಾತ್ರೇಷು ವಿವ್ಯಾಧ ಏನಮಥಾಸಕೃತ್ ॥ 14 ॥**

ಆದರೆ ಅರ್ಜುನನು ಪ್ರಯೋಗಿಸಿದ ಬಾಣಗಳು ದೈತ್ಯಾಕಾರದ ನಿಕುಂಭನನ್ನು ಹಾಗೂ ಪರಿಘಾಯುಧವನ್ನು ಸ್ಪರ್ಶಿಸಿ ಕೂಡಲೇ ತುಂಡು ತುಂಡಾಗಿ ಭೂಮಿಗೆ ಬಿದ್ದವು *[ಭಗ್ನಾಃ ನಿಪೇತುಃ ಕುಂಚಿತಾಃ ಕ್ಷಿತೌ]*.

ದಿವ್ಯ ಅಸ್ತ್ರ ಮಂತ್ರಗಳಿಂದ ಅಭಿಮಂತ್ರಿತವಾಗಿ ಪ್ರಬಲವಾಗಿದ್ದರೂ ಅರ್ಜುನನ ಬಾಣಗಳು ನಿಕುಂಭನ ಮೇಲೆ ಯಾವುದೇ ಪರಿಣಾಮವನ್ನು ಬೀರದಾದವು. ಹೀಗೆ ತನ್ನ ಅಮೋಘ ಬಾಣಗಳೆಲ್ಲವೂ ಮೋಘವಾದದ್ದನ್ನು ನೋಡಿದ ಅರ್ಜುನನು ಕೃಷ್ಣನಿಗೆ ಹೀಗೆಂದನು.

**ಪರ್ವತಾನಪಿ ಭಿಂದಂತಿ ಮಮ ವಜ್ರೋಪಮಾಃ ಶರಾಃ ।**
**ಕಿಮಿದಂ ದೇವಕೀ ಪುತ್ರ ವಿಸ್ಮಯೋಽತ್ರ ಮಹಾನ್ ಮಮ ॥ 15 ॥**

ದೇವಕೀಸುತ ಗೋವಿಂದ ! ನನ್ನ ಬಾಣಗಳೆಲ್ಲವೂ ವಜ್ರಾಯುಧ ಸದೃಶವಾಗಿದ್ದು ಪರ್ವತಗಳನ್ನು ಭೇದಿಸುವ ಸಾಮರ್ಥ್ಯವುಳ್ಳವುಗಳು. ಆದರೆ ಇಂತಹ ಬಾಣಗಳೂ ಸಹ ನಿಕುಂಭನಲ್ಲಿ ವ್ಯರ್ಥ ಸಾಮರ್ಥ್ಯವಾಗಿವೆ. ಇದೊಂದು ಮಹಾಶ್ಚರ್ಯ ಸಂಗತಿಯಾಗಿದೆ.

ಶ್ರೀಕೃಷ್ಣನು ನಸುನಗುತ್ತಾ ಈ ನಿಕುಂಭ ಮಹಾಭೂತವಾಗಿದ್ದಾನೆ. ಇವನ ಕಥೆಯನ್ನು ಹೇಳುವೆ ಕೇಳು.

**ಮಹದ್ಭೂತಂ ನಿಕುಂಭೋಽಯಂ ಕೌಂತೇಯ ಶ್ರುಣು ವಿಸ್ತರಾತ್ ।**
**ಪುರಾ ಗತೋತ್ತರ ಕುರೂನ್ ತಪಶ್ಚಕ್ರೇ ಮಹಾಸುರಃ ।**
**ಶತಂ ವರ್ಷ ಸಹಸ್ರಾಣಾಂ ದೇವಶತ್ರುಃ ದುರಾಸದಃ ॥ 16 ॥**

ಶ್ರೀಕೃಷ್ಣನು ಅರ್ಜುನನಿಗೆ ಕೌಂತೇಯ! ಈ ನಿಕುಂಭನು ಹಿಂದೆ ಉತ್ತರ ಕುರುಖಂಡದಲ್ಲಿ ಅಖಂಡ ತಪಸ್ಸನ್ನು ಆಚರಿಸಿದ. ಶಿವನು ಮೆಚ್ಚಿ ಅವನಿಗೆ ಮೈದೋರಿ ನಿನ್ನಾಸೆ ಏನೆಂದು ಕೇಳಿದ. ನಿಕುಂಭನು ದೇವದೇವನೇ ಉಮಾಧವನೇ! ನನಗೆ ಮೂರು ರೂಪಗಳಿರಬೇಕು. ಈ ಮೂರೂ ರೂಪಗಳೂ ಸಹ ದೇವಾಸುರರಿಂದ ಅವಧ್ಯವಾಗಿರಬೇಕು ಎಂದನು. ಶಿವನು.

**ಸ ವವ್ರೆ ತ್ರೀಣಿ ರೂಪಾಣಿ ನ ವಧ್ಯಾನಿ ಸುರಾಸುರೈಃ ।**

### ನಿಕುಂಭನಿಗೆ ಶಿವನ ವರ

ಅಸುರವರ್ಯನೇ! ನೀನು ನನಗಾಗಲೀ ಬ್ರಾಹ್ಮಣರಿಗಾಗಲಿ, ಬ್ರಹ್ಮಣ್ಯ-ದೇವನಾದ ಕೃಷ್ಣನಿಗಾಗಲೀ, ಎಂದಿಗೂ ದ್ರೋಹವೆಸಗಬಾರದು. ಹೀಗಾದಲ್ಲಿ ನೀನು ಎಂದಿಗೂ ಅವಧ್ಯನೇ.

**ಮಮ ವಾ ಬ್ರಾಹ್ಮಣಾನಾಂ ವಾ ವಿಷ್ಣೋರ್ವಾಽಪ್ರಿಯಮಾಚರನ್ ।**
**ಭವಿಷ್ಯಸಿ ಹರೇರ್ವಧ್ಯೋ ನ ತ್ವನ್ಯಸ್ಯ ಮಹಾಸುರ ॥ 17 ॥**

ಬ್ರಾಹ್ಮಣರಿಗೆ ಪರಮಗತಿಯೂ, ನನಗೂ ಪೂಜ್ಯನಾದ ಶ್ರೀಮನ್ನಾರಾಯಣ-ನನ್ನೂ ದ್ರೋಹ ಬಗೆದೆಯಾದರೆ ನೀನು ಅವನಿಂದ ವಧ್ಯನಾಗುವಿ ಎಚ್ಚರವಿರಲಿ! ಎಂದು ಮರೆಯಾದನು.

**ಭಾನುಮತ್ಯಪಹರಣೇ ದೇಹೋಽಸ್ಯೈಕೋ ಗತೋ ಮಯಾ ।**
**ಅವಧ್ಯಂ ಷಟ್ಪುರಂ ದೇಹಮಿದಮಸ್ಯ ದುರಾತ್ಮನಃ**
**ದಿತಿಂ ಶುಶ್ರೂಷತಿ ತ್ವೇಕೋ ದೇಹೋಽಸ್ಯ ತಪಸಾನ್ವಿತಃ ॥ 18 ॥**

ಅರ್ಜುನನೇ! ಶಿವನ ವರದಿಂದಾಗಿ ಈ ನಿಕುಂಭನು ಸರ್ವರಿಂದಲೂ ಅವಧ್ಯನಾಗಿದ್ದಾನೆ. ಅಸ್ತ್ರಶಸ್ತ್ರಗಳೆಲ್ಲವೂ ಇವನ ಮುಂದೆ ನಿಸ್ತೇಜಗಳಾಗುತ್ತವೆ. ಇವನ ತ್ರಿದೇಹಗಳಲ್ಲಿ ಒಂದನ್ನು ನಾಮ ಭಾನುಮತಿಯ ಅಪಹರಣ ಕಾಲದಲ್ಲಿ ಕೊಂದು ಹಾಕಿದ್ದೆ. ಇವನ ಮತ್ತೊಂದು ಶರೀರವು ತಾಯಿ ದಿತಿದೇವಿಯ ಸೇವೆಯಲ್ಲಿದೆ. ಈ ಷಟ್ಪುರವೇ ಈ ಅಸುರನ ಮೂರನೇ ದೇಹವು.

ಇದಿಷ್ಟು ನಿಕುಂಭನ ಚರಿತ್ರೆ. ಯುದ್ಧದಲ್ಲಿ ತೊಡಗು ಎಂದನು.

ಕೃಷ್ಣಾರ್ಜುನರಿಬ್ಬರೂ ಹೀಗೆ ಸಂಭಾಷಿಸುತ್ತಿದ್ದಾಗ ಇದೇ ಸಮಯವೆಂದು ತಿಳಿದ ನಿಕುಂಭನು ಷಟ್ಪುರವೆಂದ ಪ್ರಖ್ಯಾತವಾಗಿದ್ದ ಗುಹೆಯನ್ನು ಪ್ರವೇಶಿಸಿದನು.

ಶ್ರೀಕೃಷ್ಣನಾದರು ಸರ್ವಜ್ಞನಾದರೂ ಅಸುರ ವ್ಯಾಮೋಹಕ್ಕಾಗಿ ಯಾವ ಮಾರ್ಗದಿಂದ ಗುಹೆಯನ್ನು ಪ್ರವೇಶಿಸಿದನೆಂದು ಹುಡುಕಿ ತಾನೂ ಷಟ್ಪುರ ಗುಹೆಯನ್ನು ಪ್ರವೇಶಿಸಿದನು.

ಆ ಗುಹೆಯಲ್ಲಿ ಚಂದ್ರಾರ್ಕರ ಬೆಳಕು ಬೀಳುತ್ತಿದ್ದಿಲ್ಲ. ಆದರೂ ಅದು ತನ್ನದೆ ತೇಜಸ್ಸಿನಿಂದಾಗಿ ಬೆಳಗುತ್ತಿತ್ತು. ಷಟ್ಪುರವಾಸಿಗಳಿಗೆ ಬೇಕಾದ ಬೇಕುಬೇಕಾದ ವಾಂಛಿತಗಳನ್ನು ಪೂರ್ಣ ಮಾಡುತ್ತಿತ್ತು. ಶ್ರೀಕೃಷ್ಣನು ಆ ಮಾಯಾ ಗುಹೆಯೊಳಗೆ ಪ್ರವೇಶಿಸಿದನು. ಅಲ್ಲಿ ಬಂಧಿತರಾಗಿದ್ದ ಯಾದವ ರಾಜರುಗಳನ್ನು ನೋಡಿದನು.

ಕೂಡಲೇ ನಿಕುಂಭಾಸುರನೊಂದಿಗೆ ಯುದ್ಧವನ್ನು ಹೂಡಿದನು. ಕೃಷ್ಣನ ಅನುಮತಿ ಪಡೆದ ಬಲರಾಮ ಹಾಗೂ ಪಂಚಪಾಂಡವರೂ ಗುಹೆಯನ್ನೂ ಪ್ರವೇಶಿಸಿದರು *[ಬಲಾದ್ಯಾಯಾದವಾ ಪಾಂಡವಾಸ್ತೇ ಪ್ರವಿಷ್ಟಾಃ].*

ಇತ್ತ ಶ್ರೀಕೃಷ್ಣನಿಂದ ಪ್ರಚೋದಿತನಾದ ಪ್ರದ್ಯುಮ್ನನು ನಿಕುಂಭನಿಂದ ಬಂಧನಕ್ಕೊಳಗಾದ ಸಮಸ್ತ ರಾಜರೆಲ್ಲರನ್ನೂ ಬಂಧನದಿಂದ ವಿಮುಕ್ತಿ-ಗೊಳಿಸಿದನು. ಅವರೆಲ್ಲರೂ ಶ್ರೀಕೃಷ್ಣನ ಬಳಿ ಬಂದರು.

**ಆನಯದ್ ಯಾದವಾನ್ ಸರ್ವಾನ್ ಯಾನಯಂ ಬದ್ಧವಾನ್ ನೃಪ ।**
**ತೇ ಮುಕ್ತಾಃ ರೌಕ್ಮಿಣೇಯೇನ ಪ್ರಾಪ್ತಾ ಯತ್ರ ಜನಾರ್ದನಃ ॥ 19 ॥**

ಜನಮೇಜಯನೇ! ಪ್ರದ್ಯುಮ್ನನು ಗುಹೆಗೆ ಪ್ರವೇಶಿಸಿದಾಗ ಆ ಬಂಧಿತ ರಾಜರರೆಲ್ಲರೂ ಒಟ್ಟಿಗೆ ವೀರ! ನಮ್ಮೆಲ್ಲರನ್ನೂ ಈ ಬಂಧದಿಂದ ಮುಕ್ತಗೊಳಿಸು ಎಂದು ಪೌನಃಪುನ್ಯೇನ ಬೇಡಿದ್ದರು.

**ಅಧೋಮುಖಮುಖಾಃ ಸರ್ವೇ ಬದ್ಧಮೌನಾ ನರಾಧಿಪಾಃ ।**

ಬಿಡುಗಡೆ ಹೊಂದಿದ ರಾಜರೆಲ್ಲರೂ ಈಗ ನಾಚಿಕೆಯಿಂದ ತಲೆತಗ್ಗಿಸಿಕೊಂಡು ಅಧೋಮುಖರಾಗಿ ಮಾತನಾಡದೆ ನಿಸ್ತೇಜಸ್ಕರಾಗಿ ನಿಂತಿದ್ದರು.

ಇತ್ತ ಶ್ರೀಕೃಷ್ಣ ಹಾಗೂ ನಿಕುಂಭರಲ್ಲಿ ಘನಘೋರ ಯುದ್ಧ ನಡೆದಿತ್ತು. ನಿಕುಂಭನು

ತನ್ನ ಪರಿಘಾಯುಧದಿಂದ ಕೃಷ್ಣನನ್ನು ಹೊಡೆದರೆ ಕೃಷ್ಣನು ತನ್ನ ಕೌಮೋದಕೀ ಗದೆಯಿಂದ ನಿಕುಂಭನನ್ನು ಪ್ರಹರಿಸಿದನು. ಇದರಿಂದಾಗಿ ಶ್ರೀಕೃಷ್ಣ - ನಿಕುಂಭರಿಬ್ಬರೂ ಮೂರ್ಛೆ ಹೋದರು.[3]

## ಶ್ರೀಕೃಷ್ಣ-ನಿಕುಂಭ ಕಾಳಗ

ಶ್ರೀಕೃಷ್ಣನು ಮೂರ್ಛಿತ[4]ನಾದಂತೆ ತೋರಿಸಿಕೊಂಡಾಗ ಭೀಮ ಹೊರತಾಗಿ ಉಳಿದ ಪಾಂಡವರೆಲ್ಲರೂ ಯಾದವರೂ ಸಹ ದುಃಖಿತರಾದದ್ದನ್ನು ಮುನಿಗಳು ನೋಡಿ ಶ್ರೀಕೃಷ್ಣನಿಗೆ ಹಿತವುಂಟು ಮಾಡಲು *"ರಾಕ್ಷೋಘ್ನ"* ರಾಕ್ಷಸರನ್ನು ಹೊಡೆದೋಡಿಸುವ *'ರಕ್ಷೋಹಣಂ ವಾಜಿನಮಾಜಿಗರ್ಮಿ'* ಇತ್ಯಾದಿ ಮಂತ್ರಗಳನ್ನು ಪಠಿಸತೊಡಗಿದರು. ಶಾಂತಿರಸ್ತು ಇತ್ಯಾದಿ ಶಾಂತಿ ಮಂತ್ರ ಪಠಿಸಿದರು.

**ಜೇಪುಃ ಮುನಿಗಣಾಸ್ತತ್ರ ಕೃಷ್ಣಸ್ಯ ಹಿತಕಾಮ್ಯಯಾ ।**
**ತುಷ್ಟುವುಶ್ಚ ಮಹಾತ್ಮಾನಂ ವೇದಪ್ರೋಕ್ತೈಃ ತಥಾ ಸ್ತವೈಃ ॥ 20 ॥**

ಸ್ವಲ್ಪಕಾಲಾ ನಂತರ ಶ್ರೀಕೃಷ್ಣ ಹಾಗೂ ನಿಕುಂಭರು ಮೂರ್ಛೆಯಿಂದ ತಿಳಿದೆದ್ದರು. ಪುನಃ ಕಾಳಗ ಪ್ರಾರಂಭವಾಯಿತು. ನೋಡುವವರಿಗೆ ಇವರಿಬ್ಬರೂ ಮದ್ದಾನೆಗಳೋ, ಮಹಿಷಗಳೋ, ವೃಷಭದ್ವಯವೋ ಎಂಬಂತೆ ಗುಟುರು ಹಾಕುತ್ತಾ ಘೀಳಿಡುತ್ತಾ ಕಾದಾಡುತ್ತಾ ಇರುವ ವೀರರನ್ನು ದೇವದಾನವರೆಲ್ಲರೂ ಪ್ರಶಂಸೆ ಮಾಡಿದರು.

---

3. ಶ್ರೀಕೃಷ್ಣನ ಮೂರ್ಛೆ :
ಶ್ರೀಹರಿಯು ಅಜ್ಞಾನ, ಪಾರತಂತ್ರ್ಯ, ಭೇದಭೇದಾಭಿಗಳನ್ನು, ಪ್ರಾಕೃತದೇಹ ಪಡೆಯುವುದು, ದೇಹತ್ಯಾಗ - ಅಸಾಮರ್ಥ್ಯ - ದುಃಖಿತ್ವ, ಮೂರ್ಛೆ ಇವೆಲ್ಲವೂ ನಿತ್ಯಪೂರ್ಣಾನಂದ ಶ್ರೀಹರಿಗೆ ಎಂದೂ ತಿಳಿಯಬಾರದು. ಇದು ತೋರಿಸಿದ್ದರೆ ಅಸುರರ ಮೋಹಕ್ಕಾಗಿ, ನಿಜವಲ್ಲ.
**ಅಜ್ಞತ್ವಂ ಪಾರವಶ್ಯಂ ವಾ ವೇಧ ಭೇದಾದಿಕಂ ತಥಾ ।**
**ತಥಾ ಪ್ರಾಕೃತ ದೇಹತ್ವಂ ದೇಹತ್ಯಾಗಾದಿಕ ತಥಾ ।**
**ಪ್ರದರ್ಶಯತಿ ಮೋಹಾಯ ದೈತ್ಯಾದೀನಾಂ ಹರಿಃ ಸ್ವಯಮ್ ।**–*ತಾ.ನಿ.1/38–39*

4. 1) **ಮುಹ್ಯತೇ ಶಸ್ತ್ರಪಾತೇನ ಭಿನ್ನತ್ವಗ್ ರುಧಿರಸ್ರವಃ ।**
**ಅವಿದ್ಯಮಾನ ಮೇವೇಶಃ ಕುಹಕಂ ತದ್ವಿದುಃ ಸುರಾಃ ।** –*ತಾ.ನಿ. 2/82*
2) **ನ ಕೃಷ್ಣಬಾಣಧಾರಣೇ ಕ್ಷಮಾ ಸುರೇಶ್ವರಾ ಅಪಿ ।**
**ವಿರಿಂಚಿಶರ್ವ ಪೂರ್ವಕಾಃ ಕಿಮು ತ್ವಮಲ್ಪಸಾರಕಃ ।** –*ತಾ.ನಿ. 7/40*
ಈ ಹನುಮನ ಮಾತು ನಿಕುಂಭನಿಗೂ ಅನ್ವಯವಾಗುತ್ತದೆ.

ವೃಷಭಾವಿವ ನರ್ದಂತೌ ಗಜಾವಿವ ಚ ಭಾರತ ।
ಶಾಲಾವೃಕಾವಿವ ಕ್ರುದ್ಧೌ ಪ್ರಹರಂತೌ ರಣೋತ್ಕಟೌ ॥ 21 ॥

### ಶ್ರೀಕೃಷ್ಣನಿಂದ ನಿಕುಂಭ ಸಂಹಾರ

ಅಥ ಕೃಷ್ಣಂ ತದೋವಾಚ ನೃಪ ವಾಗಶರೀರಿಣೀ ।
ಚಕ್ರೇಣ ಶಮಯಸ್ವೈನಂ ದೇವ ಬ್ರಾಹ್ಮಣ ಕಂಟಕಮ್ ॥ 22 ॥
ಸುದರ್ಶನಂ ಮುಮೋಚಾಥ ಚಕ್ರಂ ದೈತ್ಯ ಕುಲಾಂತಕಮ್ ।

ಶ್ರೀಕೃಷ್ಣ – ನಿಕುಂಭರು ಯುದ್ಧದಲ್ಲಿ ತೊಡಗಿದ್ದಾಗ ಅಶರೀರವಾಣಿಯೊಂದು ಹೀಗೆ ಹೇಳಿತು. ಶ್ರೀಕೃಷ್ಣನೇ! ಈ ದೇವ ಬ್ರಾಹ್ಮಣ ಹಂತಕನಾದ ಅಸುರನಿಂದ ವಿಹರಿಸುತ್ತಿದ್ದು ಸಾಕು. ಈ ನಿಕುಂಭನನ್ನು ನಿನ್ನ ಚಕ್ರದಿಂದ ಕೊಂದು ಹಾಕು.

ಇದರಿಂದಾಗಿ ನಿನಗೆ ಮಹಾ ಯಶಸ್ಸುವುಂಟಾಗುತ್ತದೆ ಎಂದಿತು. ಈ ಮಾತು ಬಿಲ್ವೋದಕೇಶ್ವರನದೆ ಎಂದು ತಿಳಿದ ಶ್ರೀಕೃಷ್ಣನು ಬಿಲ್ವೋದಕೇಶ್ವರನನ್ನು ಮನದಲ್ಲಿಯೇ ಅಭಿನಂದಿಸಿ, ತನ್ನ ಸುದರ್ಶನ ಚಕ್ರವನ್ನು ನಿಕುಂಭನ ಮೇಲೆ ಪ್ರಯೋಗಿಸಿದನು.

ತನ್ನಿಕುಂಭಸ್ಯ ಚಿಚ್ಛೇದ ಶಿರಃ ಪ್ರವರಕುಂಡಲಮ್ ॥ 23 ॥

ಸುದರ್ಶನ ಚಕ್ರ ಶ್ರೇಷ್ಠವಾದ ಕರ್ಣಕುಂಡಲಗಳಿಂದ ಮಂಡಿತವಾದ ನಿಕುಂಭನ ಮುಂಡವನ್ನು ತುಂಡರಿಸಿ ಭೂಮಿಗೆಡಹಿತು.

ನಿಕುಂಭನ ಶಿರಸ್ಸು ಮೇಘದ ಗರ್ಜನೆಯಿಂದ ಉನ್ಮತವಾದ ಮಯೂರವೊಂದು ಗಿರಿಶಿಖರದಿಂದ ಕೆಳಗೆ ಬೀಳುವಂತೆ ಭೂಮಿಯಲ್ಲಿ ಬಿದ್ದಿತು.

ನಿಕುಂಭಾಸುರನು ಚಕ್ರದಿಂದ ಕೃತ್ತಶಿರಸ್ಕನಾಗಿ ಬಿದ್ದದ್ದನ್ನು ಕಂಡ ಬಿಲ್ವೋದಕೇಶ್ವರನು ಸಂತುಷ್ಟನಾದನು. ಇಂದ್ರನು ಪುಷ್ಪವೃಷ್ಟಿ ಮಾಡಿದನು. ಮಂಗಳವಾದ್ಯಗಳು ಮೊಳಗಿದವು. ಜಗನ್ನಾಥನ ಜಗದ್ವೈರಿ ನಿಕುಂಭನ ಸಂಹಾರವು ಜಗನ್ನಾಥನಿಂದ ನಡೆದಾಗ ಇಡೀ ಜಗತ್ತೆ ಸಂತೋಷಪಟ್ಟಿತು. ಋಷಿಮುನಿಗಳೂ ಸಂತುಷ್ಟರಾದರು. ಯಾದವರ ಸೇವೆಗಾಗಿ ನೂರಾರು ದೈತ್ಯಕನ್ಯೆಯರನ್ನು ಯಾದವರಿಗೆ ನೀಡಿದನು. ನಿಕುಂಭನ ಪೀಡೆಗೊಳಗಾಗಿದ್ದ ರಾಜರಿಗೆಲ್ಲ ವಿಧವಿಧವಾದ ರತ್ನಗಳನ್ನು ದಿವ್ಯಾಂಬರಗಳನ್ನೂ ಕೃಷ್ಣನು ನೀಡಿ ತನ್ನ ನಿಷ್ಕಾಮತೆಯನ್ನು ತೋರಿಸಿದನು.

**ರಥಾನಾಂ ವಾಜಿಯುಕ್ತಾನಾಂ ಷಟ್‌ಸಹಸ್ರಾಣಿ ಕೇಶವಃ ।**
**ಅದದತ್ ಪಾಂಡವೇಭ್ಯಶ್ಚ ಪ್ರೀತಾತ್ಮಾ ಗದಪೂರ್ವಜಃ ॥ 24 ॥**
**ತದೇವ ಚಾಥ ಪ್ರವರಂ ಷಟ್ಪುರಂ ಪುರವರ್ಧನಃ ।**
**ದ್ವಿಜಾಯ ಬ್ರಹ್ಮದತ್ತಾಯ ದದೌ ತಾರ್ಕ್ಷ್ಯವರಧ್ವಜಃ ॥ 25 ॥**

ಶ್ರೀಕೃಷ್ಣನು ಅತ್ಯಂತ ಪ್ರಿಯರಾದ ಪಾಂಡವರಿಗೆ ಆರುಸಾವಿರ ರಥಗಳನ್ನು ಕಾಣಿಕೆಯಾಗಿ ನೀಡಿದನು. ನಗರಾಭಿವೃದ್ಧಿಯಲ್ಲಿ ಸಮರ್ಥನಾದ ಕೃಷ್ಣನು ಷಟ್ಪುರವೆಂಬ ಆ ಪಟ್ಟಣವನ್ನು ವೈಕುಂಠಪತಿಯಾದ ನನಗೆ ಈ ಕುಂಠಿತ ಅಲ್ಪ ಪಟ್ಟಣದಿಂದ ಏನಾಗಬೇಕಿದೆ ಎಂಬಂತೆ ಬ್ರಹ್ಮದತ್ತನಿಗೆ ಬಿಟ್ಟುಕೊಟ್ಟನು.

## ಸಮಾಜೋತ್ಸವ

ಶ್ರೀಕೃಷ್ಣನು ಯಜ್ಞ ಸಮಾರಂಭಕ್ಕೆ ಬಂದಿದ್ದ ಪಾಂಡವರನ್ನು ಹಾಗೂ ಇನ್ನಿತರ ರಾಜರುಗಳನ್ನು ಅವರವರ ದೇಶಕ್ಕೆ ಹೋಗಲು ಅನುಮತಿಯಿತ್ತು, ಬಿಲ್ವೋದಕೇಶ್ವನಿಗೆ ಮಹಾ ಉತ್ಸವವನ್ನೇರ್ಪಡಿಸಿ, ಅದರ ಅಂಗವಾಗಿ ಮಾಂಸ, ಸೂಪ, ಪಲ್ಯಗಳಿಂದ ಕೂಡಿದ ಅನ್ನವನ್ನು ಸಮರ್ಪಿಸಿದನು. ಇದೊಂದು ಸಮಾಜೋತ್ಸವವಾಗಿತ್ತು.

ಈ ಸಮಾಜೋತ್ಸವದ ಅಂಗವಾಗಿ ನಾನಾದೇಶದ ಜಟ್ಟಿಗಳು ಮಲ್ಲಯುದ್ಧ ಮಾಡಿ ತಮ್ಮ ಬಲಾಬಲ ತೋರಿಸಿದರು. ಜಟ್ಟಿಗಳಿಗೆ ಯಥಾಯೋಗ್ಯ ಗೌರವ ನೀಡಿದನು.

**ಮಾತಾಪಿತೃಭ್ಯಾಂ ಸಹಿತೋ ಯದುಭಿಶ್ಚ ಮಹಾಬಲಃ ।**
**ಅಭಿವಾದ್ಯ ಬ್ರಹ್ಮದತ್ತಂ ಯಯೌ ದ್ವಾರಾವತೀಂ ಪುರೀಮ್ ॥ 26 ॥**

ನಂತರ ತಂದೆ ತಾಯಿಯೊಡನೆ ಬ್ರಹ್ಮದತ್ತನಿಂದ ಬೀಳ್ಕೊಟ್ಟು ದ್ವಾರಕೆಗೆ ಪ್ರಮಾಣ ಬೆಳೆಸಿದನು. ದಾರಿಯಲ್ಲಿ ಪ್ರಜೆಗಳ ಅಭಿವಾದನ ಪೂರ್ವಕ ಸತ್ಕಾರಗಳನ್ನು ಸ್ವೀಕರಿಸುತ್ತಾ ಪುಷ್ಪಾದಿಗಳಿಂದ ಅಲಂಕೃತವಾದ ದ್ವಾರಕೆಗೆ ಬಂದು ಸುಖದಿಂದಿದ್ದನು.

## ಫಲಸ್ತುತಿ

ಷಟ್ಪುರಾಸರನ ವಧೆ ಹಾಗೂ ಶ್ರೀಕೃಷ್ಣನ ವಿಜಯವನ್ನು ಶ್ರವಣ ಪಠನ ಮಾಡುವವರಿಗೆ ಯುದ್ಧದಲ್ಲಿ ಜಯವೇರ್ಪಡುವುದು.

**ಅಪುತ್ರೋ ಲಭತೇ ಪುತ್ರಮಧನೋ ಲಭತೇ ಧನಮ್ ।**
**ವ್ಯಾಧಿತೋ ಮುಚ್ಯತೇ ರೋಗೀ ಬದ್ಧಶ್ಚಾಪ್ಯಥ ಬಂಧನಾತ್ ॥ 27 ॥**

ಭಗವಂತನ ವಿಜಯೋತ್ಸವವನ್ನು ಶ್ರವಣ ಮಾಡುವ ಅಪುತ್ರವಂತರು ಪುತ್ರರನ್ನೂ ಪಡೆಯುವರು, ನಿರ್ಧನರು ಸಧನರಾಗುವರು. ವ್ಯಾಧಿಗ್ರಸ್ತರು ಆರೋಗ್ಯವಂತರಾಗುವರು. ಬಂಧಿತರಾದವರು ಬಂಧಮುಕ್ತರಾಗುವರು.

ಈ ವಿಜಯೋತ್ಸವವು ಗಂಡುಮಕ್ಕಳನ್ನು ಹೆರುವ ಭಾಗ್ಯವನ್ನು ನೀಡುವುದು ಇದರ ಶ್ರವಣದಿಂದ ಗರ್ಭದೋಷಗ್ರಸ್ತಳು ಗರ್ಭದೋಷವನ್ನು ಪರಿಹರಿಸಿ ಕೊಂಡು ಗರ್ಭವತಿಯಾಗುವಳು.

ಷಟ್ಪುರ ವಿಜಯವನ್ನು ಶ್ರಾದ್ಧ ಕಾಲದಲ್ಲಿ ಪಠಿಸಲ್ಪಟ್ಟರೇ ಪಿತೃಗಳು ಅಕ್ಷಯ್ಯ ಲೋಕ ಹೊಂದುವರು.

**ಮಣಿಕನಕ ವಿಚಿತ್ರ ಪಾಣಿಪಾದೋ ನಿರತಿಶಯಾರ್ಕ**
**ಗುಣೋಽರಿಹಾದಿನಾಥಃ ।**
**ಚತುರುದಧಿಶಯಃ ಚತುರ್ವಿಧಾತ್ಮಾ ಜಯತಿ ಜಗತ್ಪುರುಷಃ**
**ಸಹಸ್ರನಾಮಾ ॥ 28 ॥**

ಮಣಿಮಯ ಸುವರ್ಣಾಭರಣಾದಿಗಳಿಂದ ಭೂಷಿತಪಾಣಿಪಾದ ಕಮಲವುಳ್ಳ ಸೂರ್ಯನ ಜಗದ್ರಕ್ಷಕತ್ವ ಗುಣವನ್ನೂ ಮೀರಿರುವ ಗುಣವುಳ್ಳ, ಶತ್ರು ಸಂಹಾರಕನಾದ ಆದಿದೇವನಾದ ಶ್ರೀಹರಿಯು, ನಾಲ್ಕು ಸಮುದ್ರಗಳೇ ಮನೆಯಾಗಿವುಳ್ಳ ವಾಸುದೇವಾದಿ ನಾಲ್ಕು ವ್ಯೂಹ ರೂಪಗಳುಳ್ಳ[4] ಸಹಸ್ರ–ಅನಂತಾದಿ ರೂಪಗಳುಳ್ಳ ಜಗನ್ನಿಯಾಮಕನಾದ ಶ್ರೀಕೃಷ್ಣನಿಗೆ ಜಯವಾಗಲಿ.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ**
**ಶ್ರೀಕೃಷ್ಣ ನಿಕುಂಭ ಯುದ್ಧವೆಂಬಲ್ಲಿ**
**ಎಂಬತ್ತೈದನೆಯ ಅಧ್ಯಾಯ ಸಮಾಪ್ತಿ**

---

4. ಶ್ರೀಹರಿಯು ನಾರಾಯಣಾದಿ ಪಂಚ, ಕೇಶವಾದಿ ದ್ವಾದಶ, ಮತ್ಸ್ಯಾದಿ ದಶ, ನಾರಾಯಣಾದಿ ಶತ, ವಿಶ್ವಾದಿ ಸಹಸ್ರ, ಪರಾದಿ [1000000000000000000] (ಹದಿನೆಂಟು ಸೊನ್ನೆ) ಬಹುರೂಪಿಯೂ, ಅಜಾದಿ ಅನಂತ ರೂಪವುಳ್ಳವನು.
**ಸ ಏವ ದಶಧಾ ಪ್ರೋಕ್ತೋ ವಿಷ್ಣುಃ ಮತ್ಸ್ಯಾದಿರೂಪಕಃ ।**
**ಶತಂ ನಾರಾಯಣಾದ್ಯಾತ್ಮಾ ವಿಶ್ವಾದ್ಯಾತ್ಮಾ ಸಹಸ್ರಕಃ ॥**
**ಪರಾದಿರೂಪೋ ಬಹುಧಾ ಸೋಽನಂತಾತ್ಮಾಽಜಿತಾತ್ಮಕಃ ।** –ಬ್ರಹ್ಮ ಪು.
**ಸರ್ವತ್ರ ಪೂರ್ಣಗುಣಕೋಽಪಿ ಬಹೂಪಮೋಽಭೂತ್ ।** – ತಾ.ನಿ. 1/10

# ಅಥ ಷಡಶೀತಿತಮೋಽಧ್ಯಾಯಃ

## ಅಂಧಕಾಸುರ ಉತ್ಪತ್ತಿ –ದುರಾಚಾರ

*ಜನಮೇಜಯ ಉವಾಚ –*

**ಶ್ರುತೋಽಯಂ ಷಟ್ಪುರವಧೋ ರಮ್ಯೋ ಮುನಿವರೋತ್ತಮ ।**
**ಪುರೋಕ್ತಮಂಧಕವಧಂ ವೈಶಂಪಾಯನ ಕೀರ್ತಯ ॥ 1 ॥**

ಜಯಮೇಜಯನು – ವೈಶಂಪಾಯನರೇ! ನಿಮ್ಮಿಂದ ನಾನು ಷಟ್ಪುರ ಸಂಹಾರ ವಿಷಯವನ್ನು ವಿಸ್ತಾರವಾಗಿ ಕೇಳಿ ಧನ್ಯನಾಗಿರುವೆನು.

ಹಿಂದೆ ನೀವು ಅಂಧಕಾಸುರನ ಪ್ರಸಂಗವನ್ನು ಸೂಚ್ಯವಾಗಿ ಹೇಳಿದ್ದಿರಿ. ಅದನ್ನು ವಿಸ್ತಾರವಾಗಿ ತಿಳಿಸಿ ಅನುಗ್ರಹಿಸಿ. ಹಾಗೆಯೇ ಭಾನುಮತೀಹರಣ, ಆಗ ನಡೆದ ನಿಕುಂಭನ ವಧೆ ಇವುಗಳನ್ನು ಹೇಳಿರಿ.

*ವೈಶಂಪಾಯನ ಉವಾಚ –*

**ದಿತಿರ್ಹತೇಷು ಪುತ್ರೇಷು ವಿಷ್ಣುನಾ ಪ್ರಭವಿಷ್ಣುನಾ ।**
**ತಪಸಾಽಽರಾಧಯಾಮಾಸ ಮಾರೀಚಂ ಕಾಶ್ಯಪಂ ಪುರಾ ॥ 2 ॥**

ವೈಶಂಪಾಯನರು ಹೇಳುವರು – ವಿಷ್ಣುವು ದಿತಿಪುತ್ರರನ್ನೆಲ್ಲ ಕೊಂದು ಹಾಕಿದನು. ದಿತಿದೇವಿಯು ತಪಸ್ಸನ್ನಾಚರಿಸಿ ಕಶ್ಯಪರನ್ನು ಆರಾಧಿಸಿದಳು. ಅವಳ ತಪಸ್ಸು ಸೇವೆಯಿಂದ ಕಶ್ಯಪರು ಸಂತುಷ್ಟರಾಗಿ ಹೀಗೆಂದರು.

**ಪರಿತೋಷ್ಟೋಽಸ್ಮಿ ತೇ ಭದ್ರೇ ವರಂ ವರಯ ಸುವ್ರತೇ ।**

ಮಂಗಳಳೇ! ನಿನ್ನ ನಿರಂತರ ಸೇವೆಯಿಂದಲೂ ತಪಸ್ಸಿನಿಂದಲೂ ನಾನು ಬಹು ಸಂತುಷ್ಟನಾಗಿರುವೆ. ನಿನಗೆ ಬೇಕಾದ ವರವನ್ನು ಬೇಡು ಎಂದರು. ದಿತಿ ಹೇಳುವಳು.

**ಹತಪುತ್ರಾಸ್ಮಿ ಭಗವನ್! ದೇವೈಃ ಧರ್ಮಭೃತಾಂ ವರ ।**
**ಅವಧ್ಯಂ ಪುತ್ರಮಿಚ್ಛಾಮಿ ದೇವೈಃ ಅಮಿತವಿಕ್ರಮಮ್ ॥ 3 ॥**

ಧರ್ಮಾತ್ಮರಲ್ಲಿ ಅಗ್ರರಾದವರೇ! ದೇವತೆಗಳು ನಮ್ಮ ಮಕ್ಕಳನ್ನು ಕೊಂದು ಹಾಕಿದ್ದಾರೆ. ಸದ್ಯ ನಾನು ಪುತ್ರಹೀನರಾಗಿದ್ದೇನೆ. ಆದ್ದರಿಂದ ದೇವತೆಗಳಿಂದ ಕೊಲ್ಲಲ್ಪಡದ ಅವಧ್ಯನಾದ ಮಹಾಪರಾಕ್ರಮಿಯಾದ ಒಬ್ಬ ಪುತ್ರನನ್ನು ಪಡೆಯಬೇಕೆಂದು ಇಚ್ಛಿಸುವೆ. ಅದನ್ನು ವರವಾಗಿ ನೀಡಿರಿ ಎಂದಳು.

*ಕಶ್ಯಪ ಉವಾಚ –*

**ಅವಧ್ಯಸ್ತೇ ಸುತೋದೇವಿ ದಾಕ್ಷಾಯಣಿ! ಭವೇದಿತಿ ।**
**ದೇವಾನಾಂ ಸಂಶಯೋ ನಾತ್ರ ಕಶ್ಚಿತ್ ಕಮಲಲೋಚನೇ ॥ 4 ॥**

ದೇವಿ ದಾಕ್ಷಾಯಣಿ! ನೀನು ಕೇಳಿದಂತೆ ದೇವತೆಗಳಿಂದ ಅವಧ್ಯನಾದ ಒಬ್ಬ ಮಗನು ನಿನಗೆ ಹುಟ್ಟುವನು ಸಂಶಯಬೇಡ.

ಆದರೆ ದೇವಶ್ರೇಷ್ಠನಾದ ರುದ್ರದೇವನಿಂದ ಹೊರತಾಗಿ ಮತ್ತಾವ ದೇವತೆಯೂ ನಿನ್ನ ಮಗನನ್ನು ವಧಿಸಲಾರರು. *[ದೇವದೇವಮೃತೇ ರುದ್ರಂ].*

ರುದ್ರನ ಮೇಲೆ ನನ್ನ ಅಧಿಕಾರ ನಡೆಯಲಾರದು. ನಿನ್ನ ಮಗನನ್ನು ರುದ್ರದೇವನಿಂದ ರಕ್ಷಿಸಿಕೊಳ್ಳಬೇಕಷ್ಟೆ.

**ಸಹಸ್ರಬಾಹುಂ ಕೌರವ್ಯ ಸಹಸ್ರಶಿರಸಂ ತಥಾ ।**
**ದ್ವಿಸಹಸ್ರೇಕ್ಷಣಂ ಚೈವ ತಾವಚ್ಚರಣಮೇವ ಚ ॥ 5 ॥**

ಹೀಗೆ ಹೇಳಿದ ಕಶ್ಯಪರು ದಿತಿಯ ಉದರದ ಮೇಲೆ ತನ್ನ ಅಂಗಲಿಯ ತುದಿಯಿಂದ ಸ್ಪರ್ಶಿಸಿದನು.[1] ಕೇವಲ ಸ್ಪರ್ಶ ಮಾತ್ರದಿಂದಲೇ ದಿತಿಯು ಗಂಡು

---

1. ಹಿಂದೆ ಸಂಕಲ್ಪ, ಮಾತು, ದರ್ಶನ, ಸ್ಪರ್ಶ, ಮೈಥುನಗಳೆಂಬ ಐದು ರೀತಿಯಲ್ಲಿ ಸಂತಾನೋತ್ಪತ್ತಿ ಸಾಧ್ಯವಾಗುತ್ತಿತ್ತು.
**ಸಂತಿದೇವನಿಕಾಯಾಶ್ಚ ಸಂಕಲ್ಪಾತ್ ಜನಯಂತಿ ಹಿ ।**
**ವಾಚಾ ದೃಷ್ಟ್ಯಾ ತಥಾ ಸ್ಪರ್ಶಾತ್ ಸಂಘರ್ಷೇಣೇತಿ ಪಂಚಧಾ ॥** *–ಮ.ಭಾ.ಆ.–30/22*
1) ಸಂಕಲ್ಪದಿಂದ ಭಗವಂತನು ಸೃಷ್ಟಿಸುವುದು, 2) ವರದಿಂದಾಗಿ ಹುಟ್ಟುವುದು ವಾಚಾ, 3) ಊರ್ವಶ್ಯಾದಿಗಳ ದರ್ಶನದಿಂದಲೇ ಕೃಪಾದಿಗಳ ಜನ್ಮದೃಷ್ಟಿಯದು, 4) ವಾಯುದೇವನು ಕುಂತಿಯನ್ನು ಮುಟ್ಟಿದ ಕೂಡಲೇ ಭೀಮನು ಅವತರಿಸಿದ್ದು ಸ್ಪರ್ಶ, 5) ಲೋಕದಲ್ಲಿ ಮೈಥುನದಿಂದ ಸೃಷ್ಟಿ ಪ್ರಸಿದ್ಧವೆ. ಸ್ಪರ್ಶ ಮಾತ್ರದಿಂದ ಕಶ್ಯಪರು ದಿತಿಯ ಗರ್ಭ ಸ್ಪರ್ಶದಿಂದ ಮಾತ್ರ, ಅವನೇ ಅಂಧಕಾಸುರ.

ಮಗುವಿಗೆ ಜನ್ಮವಿತ್ತಳು. ಅದೊಂದು ಮಹಾಶ್ಚರ್ಯದ ಮಗುವಾಗಿದ್ದಿತು. ಆ ಮಗುವಿಗೆ ಸಾವಿರ ಭುಜಗಳೂ, ಸಾವಿರ ಶಿರಸ್ಸುಗಳು, ದ್ವಿ ಸಹಸ್ರ ನೇತ್ರಗಳು, ಎರಡು ಸಾವಿರ ಕಾಲುಗಳಿದ್ದವು.

**ಸ ವ್ರಜತ್ಯಂಧವತ್ ಯಸ್ಮಾತ್ ಅನಂಧೋऽಪಿ ಹಿ ಭಾರತ ।**
**ತಮಂಧಕೋऽಯಂ ನಾಮ್ನೇತಿ ಪ್ರೋಚುಃ ತತ್ರ ನಿವಾಸಿನಃ ॥ 6 ॥**

ಅಂಧಕಾಸುರನು ಕುರುಡನಾಗದಿದ್ದರೂ ಅಂಧರಂತೆ ಅವನ ನಡಿಗೆ ಇತ್ತು. ಆದ್ದರಿಂದ ಅಂಧಕನೆಂದು ಅಲ್ಲಿನ ನಿವಾಸಿಗಳು ಕರೆದರು.

### ಅಂಧಕಾಸುರ ಜನನ[2]

**ಅವಧ್ಯೋಽಸ್ಮೀತಿ ಲೋಕಾನ್ ಸ ಸರ್ವಾನ್ ಬಾಧತಿ ಭಾರತ ॥ 7 ॥**

ಅಂಧಕಾಸುರನು ತಾನು ದೇವತೆಗಳಿಂದ ಅವಧ್ಯನೆಂದು ತಿಳಿದು ಸಮಸ್ತ ಬ್ರಾಹ್ಮಣಾದಿ ಲೋಕಗಳನ್ನೆಲ್ಲ ಪೀಡಿಸಲಾರಂಭಿಸಿದನು. ಅಪಾರವಾದ ಬಲದಿಂದ ದರ್ಪಿಷ್ಠನಾದ ಅಂಧಕನು ಮೂಲೋಕದ ಅಮೂಲ್ಯವಾದ ರತ್ನಗಳನ್ನೆಲ್ಲ ಅಪಹರಿಸಿದನು *[ಹರತ್ಯಪಿಚರತ್ನಾನಿ]*.

ಬಲದರ್ಪದಿಂದಾಗಿ ತನ್ನ ಬಲದಿಂದ ಅಪ್ಸರಾ ಸ್ತ್ರೀಯರೆನ್ನೆಲ್ಲ ಬಂಧಿಸಿ ಅರಮನೆಯಲ್ಲಿಟ್ಟುಕೊಂಡು *[ನಿಗೃಹ್ಯ ಅಪ್ಸರಸಾಂಗಣಾನ್ ವಾಸಯತಿ]*.

ಪರದಾರಾಪಹರಣ ಪರರ ರತ್ನಾಪಹರಣವನ್ನು ನಿತ್ಯಕರ್ಮವನ್ನಾಗಿ ಮಾಡಿಕೊಂಡನು.

ಅಂಧಕನು ಲೆಕ್ಕವಿಲ್ಲದಷ್ಟು ಅಸುರರ ಸಹಾಯದಿಂದ ಮೂರುಲೋಕಗಳನ್ನು

---

2. **ಅಂಧಕಾಸುರ :**
ಇವನು ಇಬ್ಬರಿರುವರು. ಇಬ್ಬರಿಗೂ ತಂದೆ ಕಶ್ಯಪರೆ. ಕಶ್ಯಪರಿಂದ ದಿತಿಯಲ್ಲಿ ಜನಿಸಿದವನೊಬ್ಬ ಅಂಧಕ. ಕಶ್ಯಪರಿಂದ ದನುವಿನಲ್ಲಿ ಜನಿಸಿದ ದಾನವ ಅಂಧಕ. ಈ ದಾನವನಿಗೂ ಪರಮೇಶ್ವರನಿಗೂ ಉಜ್ಜಯಿನಿಯ ಮಹಾಕಾಲನಿರುವ ವನದಲ್ಲಿ ಯುದ್ಧವಾಯಿತು. ಇವನ ದೇಹದಿಂದ ಬಿದ್ದ ಒಂದೊಂದು ಹನಿರಕ್ತವೂ ಒಬ್ಬೊಬ್ಬ ರಾಕ್ಷಸನಾಗುತ್ತಿದ್ದ. ರುದ್ರದೇವ ವಿಷ್ಣುವನ್ನು ಪ್ರಾರ್ಥಿಸಲು ಶುಷ್ಕರೇವತೀಯೆಂಬ ರಾಕ್ಷಸಿಯನ್ನು ಸೃಷ್ಟಿಸಿ ಕಳುಹಿಸಿದ. ಇವಳು ಅಂಧಕನ ರಕ್ತವನ್ನು ಇಂಗಿಸುತ್ತಿದ್ದಳು. ನಿರ್ವೀರ್ಯನಾದ ಅಂಧಕನು ಶಿವನಿಗೆ ಶರಣು ಹೋಗಿ ಅವನ ಕಿಂಕರನಾದನು. ಮತ್ಸ್ಯ –ಅಧ್ಯಾಯ *178*.
ಮತ್ತೊಬ್ಬ ಅಂಧಕಾಸುರನು ಮಹಿಷಾಸುರನ ಮಂತ್ರಿ. ಇವನನ್ನು ಮಹಾಲಕ್ಷ್ಮಿಯು ಕೊಂದಳು. *ಮಾರ್ಕಂಡೇಯ –80ನೇ ಅಧ್ಯಾಯ*.

ಜಯಿಸಲು ಇಚ್ಛಿಸಿದನು. ಈ ವಾರ್ತೆಯನ್ನು ಕೇಳಿದ ಇಂದ್ರನು ತನ್ನ ತಂದೆಯಾದ ಕಶ್ಯಪರಿಗೆ ಅವನ ಉದ್ಧಟತನವನ್ನು ತಿಳಿಸಿದನು.

**ಅಂಧಕೇನೇದಮಾರಬ್ಧಂ ಈದೃಶಂ ಮುನಿಸತ್ತಮ ।**
**ಆಜ್ಞಾಪಯ ವಿಭೋ ಕಾರ್ಯಮಸ್ಮಾಕಂ ಸಮನಂತರಮ್ ॥ 8 ॥**

ಕಶ್ಯಪರೇ! ಈಗ ನಾನೇನು ಮಾಡಬೇಕು? ತನ್ನ ಸೋದರನಾದ ಅಂಧಕನ ಪೀಡೆ ಅಧಿಕವಾಗಿದೆ. ಇದನ್ನು ಹೇಗೆ ಸಹಿಸಲಿ? ಇವನು ದಿತಿಮಾತೆಗೆ ಪ್ರಿಯ ಪುತ್ರನಾಗಿರುವನು. ನಾನು ಇವನನ್ನು ಸಂಹರಿಸಿದ್ದೆ ಆದರೆ ದಿತಿಮಾತೆಯು ನನ್ನ ಮೇಲೆ ಕ್ರುದ್ಧಳಾಗವಳು ಎಂದನು.

ದೇವೇಂದ್ರನ ಈ ಮಾತನ್ನು ಕೇಳಿದ ಕಶ್ಯಪರು ಇಂದ್ರನಿಗೆ ಸಮಾಧಾನ ಮಾಡುತ್ತ ಹೀಗೆಂದರು.

**ವಾರಯಿಷ್ಯಾಮಿ ದೇವೇಂದ್ರ! ಸರ್ವಥಾ ಭದ್ರಮಸ್ತು ತೇ ॥ 9 ॥**

ಇಂದ್ರನೇ, ನೀನು ಸಮಾಧಾನ ಮನಸ್ಕನಾಗು. ನಾನು ಅಂಧಕನಿಗೆ ಬುದ್ಧಿ ಹೇಳಿ ದುರಾಚಾರವನ್ನು ತಡೆಯುವೆ ಎಂದು ಹೇಳಿ ಕಳುಹಿಸಿಕೊಟ್ಟನು.

ನಂತರ ಕಶ್ಯಪರು ದಿತಿಯೊಂದಿಗೆ ಅಂಧಕನ ಬಳಿ ಬಂದು ಮೂರು ಲೋಕಗಳನ್ನು ಜಯಿಸಲು ಹೋಗದಂತೆ ತಡೆದರು. ಇವನನ್ನು ತಡೆಯಲು ಬಹಳ ಕಷ್ಟವಾಯಿತು. ಅಂಧಕನ ದಿಗ್ವಿಜಯಯಾತ್ರೆ ತಡೆದರಾದರೂ ಕಶ್ಯಪರು ದೇವತೆಗಳಿಗೆ ಆಗಿಂದಾಗೆ ಕಾಟ ಕೊಡುತ್ತಲೇ ಇದ್ದನು. ನಾನಾ ಉಪಾಯಗಳಿಂದ ದೇವತೆಗಳನ್ನು ಸದೆ ಬಡಿಯುತ್ತಿದ್ದನು.

**ವಾರಿತೋಽಪಿ ಸ ದುಷ್ಟಾತ್ಮಾ ಬಾಧತ್ಯೇವ ದಿವೌಕಸಃ ।**
**ಬಭಂಜ ಕಾನನೇ ವೃಕ್ಷಾನ್ ಉದ್ಯಾನಾನಿ ಚ ದುರ್ಮತಿಃ ।**
**ಉಚ್ಚೈಃಶ್ರವಃ ಸುತಾನಶ್ವಾನ್ ಬಲಾದಪ್ಯಾನಯದ್ ದಿವಃ ॥ 10 ॥**

ಸ್ವರ್ಗೀಯ ನಂದನ ವನದಲ್ಲಿರುವ ವೃಕ್ಷೋತ್ಪಾಟನ ತತ್ಪರನಾಗಿದ್ದನು. ಉದ್ಯಾನವನಗಳೆಲ್ಲ ಇವನ ದುರಾಚಾರಕ್ಕೆ ಬಲಿಯಾದವು.

ಉಚ್ಚೈಃ ಶ್ರವಸ್ಸೆಂಬ[3] ಅಶ್ವಜಾತಿಗೆ ಸೇರಿದ್ದ ಅಶ್ವಗಳನ್ನೆಲ್ಲ ಬಲಾತ್ಕಾರವಾಗಿ ಸ್ವರ್ಗದಿಂದ ಅಪಹರಿಸಿ ತಂದಿಟ್ಟನು.

3. ಉಚ್ಚೈಃಶ್ರವಸ್ಸು : ಬಿಳಿಯಾದ, ಕಿವಿಗಳು ನಿಮಿರಿನಿಂತ ಕುದುರೆ ಇದು. ಇಂದ್ರನ ಪಟ್ಟದ ಕುದುರೆ. ಸಮುದ್ರಮಥನ ಕಾಲದಲ್ಲಿ ಬಂದ ಹದಿನಾಲ್ಕು ರತ್ನಗಳಲ್ಲಿ ಇದೂ ಒಂದು.
**ಉಚ್ಚೈಃಶ್ರವಾ ನಾಮ ತುರಂಗಮೋಽಭೂತ್ ।**
**ಕರೀ ತಥೈರಾವತ ನಾಮಧೇಯಃ** ॥ –ತಾ.ನಿ. *10/19*

ಕಶ್ಯಪನ ವರದಿಂದ ದರ್ಪಿಷ್ಟನಾದ ಅಂಧಕನು ಅಂಧನಂತೆ ದೇವತೆಗಳು ನೋಡುತ್ತಿರುವಾಗಲೇ ದಿಗ್ಗಜಗಳ ಸಂತಾನವಾದ ದಿವ್ಯದಾರಣಗಳನ್ನು ಅಪಹರಿಸಿದನು.

## ಅಂಧಕಾಸುರನ ದುರ್ವೃತ್ತ

**ನಾಗಾನ್ ದಿಶಾಗಜಸುತಾನ್ ದಿವ್ಯಾನಪಿ ಚ ಭಾರತ ।[4]**
**ಬಲಾದ್ ಹರತಿ ದೇವಾನಾಂ ಪಶ್ಯತಾಂ ವರದರ್ಪಿತಃ ॥ 11 ॥**

ದೇವತೆಗಳಿಗೂ ಕಂಟಕದಂತಿದ್ದ ದುರಾತ್ಮ ಅಂಧಕನು, ಯಜ್ಞಯಾಗಾದಿ ತಪಸ್ಸಿನಿಂದ ಲೋಕಕ್ಕೆ ಕ್ಷೇಮವನ್ನೇ ಬಯಸುತ್ತಿದ್ದ ಋಷಿಗಳ ಯಜ್ಞಾದಿಗಳಿಗೆ ಭಂಗವುಂಟು ಮಾಡುತ್ತಿದ್ದನು *[ತೇಷಾಂ ವಿಘ್ನಂ ಚಕಾರ].*

ಅಂಧಕನು ವಿಘ್ನವುಂಟು ಮಾಡುವನೆಂದ ಭೀತಿಯಿಂದ ಜನರು ಯಜ್ಞಾದಿಗಳನ್ನೆ ಮಾಡುವುದನ್ನೆ ಬಿಟ್ಟ *[ಅಂಧಕಸ್ಯಭಯಾತ್ ನೇಜುಃ ಯಜ್ಞೈಃ]* ತಪಸನ್ನಾಚರಿಸಲಿಲ್ಲ.

ಅಂಧಕನ ಇಚ್ಛೆಗೆ ಅನುಸಾರ ಭೂತ ವಾಯು ಬೀಸುತ್ತಿದ್ದನು. ಸೂರ್ಯನೂ ಸಹ ಅಂಧಕನ ಇಚ್ಛಾನುಸಾರ ಬಿಸಲನ್ನು ಬೀರುತ್ತಿದ್ದನು. ಅಂಧಕನು ಕಾಣಬಯಸಿದ್ದರೆ ಚಂದ್ರನೂ ಕೂಡ ನಕ್ಷತ್ರಗಳಿಂದ ಸಹಿತ ಕಾಣುತ್ತಿದ್ದನು. ಮರೆಯಾಗ ಬಯಸಿದರೆ ಕಾಣದಾಗುತ್ತಿದ್ದ.

**ತಸ್ಯೇಚ್ಛಯಾ ವಾತಿ ವಾಯುರಾದಿತ್ಯಶ್ಚ ತಪತ್ಯುತ ।**
**ಚಂದ್ರಮಾ ವಾ ಸನಕ್ಷತ್ರೋ ದೃಶ್ಯತೇ ನೈವ ವಾ ಪುನಃ ॥ 12 ॥**

ಮಹಾದುರಹಂಕಾರಿಯಾದ ಅಂಧಕನ ಭಯದಿಂದಾಗಿ ಗಗನದಲ್ಲಿ ವಿಮಾನಗಳೂ ಸಂಚರಿಸುವುದನ್ನು ತ್ಯಜಿಸಿದವು.

ಸಮಸ್ತ ಜಗತ್ತಿನಲ್ಲಿ ಇವನ ಭಯದಿಂದಾಗಿ ಓಂಕಾರ – ವಷಟ್ಕಾರಗಳ ಧ್ವನಿ ರಹಿತವಾದವು *[ನಿರೋಂಕಾರ ವಷಟ್ಕಾರಂ ಜಗದ್ ಭಯಾತ್].*

---

ಅಶ್ವಗಳಲ್ಲಿ ಉಚ್ಚೈಃಶ್ರವಸ್ ಶ್ರೇಷ್ಠವಾಗಲು ಭಗವಂತನ ವಿಭೂತಿರೂಪ ಇದೆ.
ಉಚ್ಚೈಃಶ್ರವಸ ಸಮಶ್ವಾನಾಂ ವಿದ್ಧಿ ಮಾಮ್ಮೃತೋದ್ಭವಮ್ । –ಗೀ/10/27

4. ದಿಗ್ಗಜಗಳು :
ಐರಾವತಃ ಪುಂಡರೀಕೋ ವಾಮನೋ ಕುಮುದೋಽಂಜನಃ ।
ಪುಷ್ಪದಂತಃ ಸಾರ್ವಭೌಮಃ ಸುಪ್ರತೀಕಶ್ಚ ದಿಗ್ಗಜಾಃ ।

ಅಂಧಕಾಸುರನು ಉತ್ತರಕುರು, ಭದ್ರಾಶ್ವರು, ಕೇತುಮಾಲರು, ಜಂಬೂದ್ವೀಪ-ದಲ್ಲಿ ವಾಸ ಮಾಡುವ ಸಕಲ ಸಜ್ಜನರನ್ನು ಆಕ್ರಮಣ ಮಾಡಿ ಅವರನ್ನೆಲ್ಲ ಅಲ್ಲಿಂದ ಹೊರಹಾಕಿದನು.

ದೇವತೆಗಳು ದುರ್ಜಯರಾದರೂ ಅಂಧಕಾಸುರನ ಭಯದಿಂದ ಅವನಿಗೇ ಗೌರವ ನೀಡುತ್ತಿದ್ದರು.

## ಋಷಿಗಳ ಮಂತ್ರಾಲೋಚನೆ

**ಋಷಯೋ ವಧ್ಯಮಾನಾಸ್ತು ಸಮೇತಾಃ ಬ್ರಹ್ಮವಾದಿನಃ ।**
**ಅಚಿಂತಯನ್ ಅಂಧಕಸ್ಯ ವಧಂ ಧರ್ಮಭೃತಾಂ ವರ ॥ 13 ॥**

ಯಜ್ಞಯಾಗಾದಿ ತಪೋನಿರತರಾದ ಋಷಿ ಮುಖ್ಯರೆಲ್ಲರೂ ಒಂದೆಡೆ ಸೇರಿ, ಅಂಧಕಾಸುರನನ್ನು ಕೊಲ್ಲುವ ಉಪಾಯ ಚಿಂತಿಸಿದರು. ಆಗ ಬೃಹಸ್ಪತಿಯು ಹೀಗೆಂದನು.

**ನಾಸ್ಯ ರುದ್ರಾದ್ ಋತೇ ಮೃತ್ಯುರ್ವಿದ್ಯತೇ ಚ ಕಥಂಚನ ॥ 14 ॥**

ಈ ಅಂಧಕಾಸುರನಿಗೆ ಪರಮಶಿವನ ಹೊರತಾಗಿ ಬೇರೆಯವರಿಂದ ಮೃತ್ಯುವಿರುವುದಿಲ್ಲ.

ಕಶ್ಯಪರೂ ಕೂಡ ದಿತಿಗೆ ವರ ನೀಡುವಾಗ ಅವಳ ಮಗನಿಗೆ ಅವಧ್ಯತ್ವ ನೀಡುವಾಗ ನಾನು ರುದ್ರನಿಂದ ರಕ್ಷಿಸಲು ಅಸಮರ್ಥ ಎಂಬ ಮಾತನ್ನು ಹೇಳಿದ್ದರು. ಹೀಗಾಗಿ ಅಂಧಕಾಸುರನು ಸಕಲ ಪ್ರಾಣಿಗಳನ್ನು ಪೀಡಿಸುತ್ತಿರುವ-ನೆಂಬುದನ್ನು ಶಿವನಿಗೆ ತಿಳಿಸಬೇಕು. ಶಂಕರನಿಗೆ ಹೇಗೆ ತಿಳಿಸಬಹುದು ಎಂಬ ಉಪಾಯ ಹುಡುಕಬೇಕು. ಜಗತ್ತಿಗೆ ಪ್ರಭುವಾದ ಶಂಕರನಿಗೆ ಈ ವಿಷಯ ತಿಳಿದದ್ದಾದರೆ ಕೂಡಲೇ ಅಂಧಕಾಸುರನ ಉಪಟಳದಿಂದ ಸಜ್ಜನರು ಕಣ್ಣೀರಿಡುವುದನ್ನು ತಪ್ಪಿಸುತ್ತಾನೆ.

**ತಮುಪಾಯಂ ಚಿಂತಯಾಮಃ ಶರ್ವೋ ಯೇನ ಸನಾತನಃ ।**
**ಜಾನೀಯಾತ್ ಸರ್ವಭೂತಾನಿ ಪೀಡ್ಯಮಾನಾನಿ ಶಂಕರಃ ।**
**ಅಶ್ರುಪ್ರಮಾರ್ಜನಂ ದೇವಃ ಕರಿಷ್ಯತಿ ಸತಾಂ ಗತಿಃ ॥ 15 ॥**

**ವ್ರತಂ ಹಿ ದೇವದೇವಸ್ಯ ಭವಸ್ಯ ಜಗತೋ ಗುರೋಃ ।**
**ಸಂತೋಽಸದ್ಭ್ಯೋ ರಕ್ಷಿತವ್ಯಾ ಬ್ರಾಹ್ಮಣಾಸ್ತು ವಿಶೇಷತಃ ॥ 16 ॥**

ಶ್ರೀ ರುದ್ರದೇವನ ವ್ರತವೆಂದರೆ – ಸಜ್ಜನರನ್ನು ದುಷ್ಟರಿಂದ ರಕ್ಷಿಸುವುದು ಹಾಗೂ ಬ್ರಾಹ್ಮಣರನ್ನು ವಿಶೇಷವಾಗಿ ರಕ್ಷಣೆ ನೀಡಬೇಕೆಂಬುದೂ ಆಗಿದೆ. ಇದರಿಂದಾಗಿ ನಾವೆಲ್ಲರೂ ಬ್ರಾಹ್ಮಣೋತ್ತಮನಾದ ನಾರದ ಮಹರ್ಷಿಯನ್ನು ಶರಣು ಹೊಂದೋಣ. ನಾರದರು ಶಿವನಿಗೆ ಪರಮಮಿತ್ರರಾದ್ದರಿಂದ ಶಿವನನ್ನು ಮೆಚ್ಚಿಸುವ ಉಪಾಯ ಅವರಿಗೆ ತಿಳಿದಿರುತ್ತದೆ. ಸುಜನರಕ್ಷಾ ದೀಕ್ಷನಾದ ತ್ರ್ಯಕ್ಷನಲ್ಲಿ ನಾರದರನ್ನು ಕಳುಹಿಸಿದರೆ ನಮ್ಮ ಕಾರ್ಯ ನೆರವೇರುವುದು ಎಂದರು.

**ಉಪಾಯಂ ವೇತ್ಸ್ಯತೇ ತತ್ರ ವಯಸ್ಯೋ ಹಿ ಭವಸ್ಯ ಸಃ ।**

## ನಾರದರ ಆಗಮನ

ಬೃಹಸ್ಪತ್ಯಾಚಾರ್ಯರ ಹಿತವಚನ ಕೇಳಿದ ವಿಪ್ರಾದಿ ಸಮಸ್ತ ಸಜ್ಜನರ ಪ್ರಾರ್ಥನೆಯಂತೆ ನಾರದರ ಬಳಿ ಹೋಗಬೇಕೆಂದಿರುವಾಗಲೇ ಗಗನತಲದಿಂದ ಭೂಮಿಗೆ ಇಳಿಯುತ್ತಿದ್ದರು.

**ತಾವದ್ ಆಕಾಶೇ ಪ್ರಾಪ್ತಂ ದೇವರ್ಷಿ ಸತ್ತಮಂ ॥ 17 ॥**

ಭೂಮಿಗಿಳಿದ ನಾರದರನ್ನು ತಪೋಧನರೆಲ್ಲರೂ ಯಥಾನ್ಯಾಯ ಸತ್ಕರಿಸಿ ಹೀಗೆಂದರು.

**ದೇವರ್ಷೇ ಭಗವನ್ ಸಾಧೋ ಕೈಲಾಸಂ ವ್ರಜ ಸತ್ವರಮ್ ।**
**ವಿಜ್ಞಪ್ತುಮರ್ಹಸೇ ದೇವಂ ಅಂಧಕಸ್ಯ ವಧೇ ಹರಮ್ ॥ 18 ॥**

ದೇವರ್ಷಿ ನಾರದ ಭಗವಾನ್‌ರೆ! ಈ ಕೂಡಲೇ ತಾವು ಕೈಲಾಸಕ್ಕೆ ಹೋಗಬೇಕು. ಅಲ್ಲಿರುವ ಪರಮಶಿವನ ಬಳಿ ಹೋಗಿ ಅಂಧಕಾಸುರನನ್ನು ಸಂಹಾರ ಮಾಡುವಂತೆ ನಮ್ಮೆಲ್ಲರ ಪರವಾಗಿ ಅವನಿಗೆ ವಿನಂತಿಸಿಕೊಳ್ಳಿರಿ.

ನಾರದರು ಹಾಗೇ ಆಗಲಿ ಎಂದು ಹೇಳಿ ಋಷಿಗಳೆಲ್ಲರೂ ಸಂತೋಷಪಟ್ಟು ತಮ್ಮ ತಮ್ಮ ನಿವಾಸಗಳಿಗೆ ಹೊರಟು ಹೋದರು. ನಾರದರು ತಾವು ತಪೋಧನರ ಕಾರ್ಯ ಸಾಧನೆಯನ್ನು ಹೇಗೆ ಮಾಡಬಹುದೆಂದು ಯೋಚಿಸಿ ಪರಮಶಿವನ ಬಳಿ ಹೋದರು. ಶಿವನು ಕೈಲಾಸದಲ್ಲಿರುವ ಮಂದಾರವನ[5]ದಲ್ಲಿ ಭೇಟಿಯಾದರು.

---

5. ಮಂದಾರವನ : ಶಿವನು ಬ್ರಹ್ಮಾಂಡದಲ್ಲೆಲ್ಲ ವ್ಯಾಪಿಸಿರುವನು. ಆದರೂ ಮೇರುಪರ್ವತದಲ್ಲಿರುವ ಒಂದು ಕೈಲಾಸವಿದ್ದು, ಗಂಧಮಾದನ ಪರ್ವತದಲ್ಲಿರುವ ಎರಡನೇ ಕೈಲಾಸದಲ್ಲಿಯೂ, ಹೇಮಕೂಟವೆಂಬಲ್ಲಿರುವ ಕೈಲಾಸದಲ್ಲಿಯೂ, ಹಿಮಾಲಯದಲ್ಲಿಯೂ ಇರುವ ಕೈಲಾಸದಲ್ಲಿಯೂ ಇರುವನು. ಕೈಲಾಸದಲ್ಲಿರುವ ವನವೆ ಸ್ವರ್ಗೀಯ ಮಂದರಾದಿ ವನವಿದೆ.

## ನಾರದರ ಶಿವನ ಭೇಟಿ

**ಮಂದಾರವನ ಮಧ್ಯಸ್ಥೋ ಯತ್ರ ನಿತ್ಯೋ ವೃಷಧ್ವಜಃ ।**
**ಸ ತತ್ರ ರಜನೀಮೇಕಾಮುಷಿತ್ವಾ ಮುನಿಸತ್ತಮಃ ॥ 19 ॥**

ಶಿವನಿದ್ದ ಮಂದಾರವನಕ್ಕೆ ಹೋಗಿ ಶಿವನಿಗೆ ಅಂಧಕಾಸುರ ದುರಾಚಾರಾದಿ–ಗಳನ್ನು ಶಿವನಿಗೆ ತಿಳಿಸಿದರು. ಅವನೊಂದಿಗೆ ವಿಚಾರ ಮಾಡಿ ಒಂದು ರಾತ್ರಿಯನ್ನು ಅಲ್ಲಿಯೇ ಕಳೆದು ಪ್ರಾತಃ ಅವನನುಮತಿ ಪಡೆದು ಹೊರಟು ಅಂಧಕಾಸುರನ ಪಟ್ಟಣಕ್ಕೆ ಬಂದರು.

ಅಂಧಕನ ಮನೆಗೆ ಹೋಗುವಾಗ ಅವರು ಶಿವನ ಪ್ರಸಾದವಾದ ಮಂದಾರ ಪುಷ್ಪಮಾಲಿಕೆ ಸಂತಾನಪುಷ್ಪ ಪಾರಿಜಾತಾದಿ ನಿರ್ಮಿತವಾದ ಮಾಲೆಗಳನ್ನು ಧರಿಸಿದ್ದರು. ಮೊದಲೇ ಸುಗಂಧವಿರುವ ಈ ಮಾಲೆಗಳು ಸುಗಂಧಿಯಾದ ಶಿವನು ಧರಿಸಿದ್ದರಿಂದ ಇನ್ನೂ ಪರಿಮಳ ಕಾಂತಿಯುಕ್ತವಾಗಿದ್ದು ಮೋಹಕವಾಗಿದ್ದವು.

**ಮಂದಾರಪುಷ್ಪೈಃ ಸುಕೃತಾಂ ಮಾಲಾಮಾಬಧ್ಯ ಭಾರತ ।**
**ಗ್ರಥಿತಾಂ ಸವಿಶೇಷಾಂ ತಾಂ ಸರ್ವಗಂಧೋತ್ತಮೋತ್ತಮಾಮ್ ॥ 20 ॥**

ಮಂದಾರಪುಷ್ಪಗಳಿಂದ ಮನೋಹರವಾಗಿ ಪೋಣಿಸಿದ್ದ ಈ ಮಾಲೆಯು ಸುಗಂಧ ಪರಿಮಳವನ್ನು ಹೊರಚೆಲ್ಲುತ್ತಿತ್ತು. ಸಂತಾನಪುಷ್ಪಗಳ ಮಾಲೆಯನ್ನೂ ಧರಿಸಿದ್ದ ನಾರದರನ್ನು ನೋಡಿದ ಕೂಡಲೇ ಅವರು ಧರಿಸಿದ್ದ ಮಾಲೆಯ ಸುಕಂಪು ಅಂಧಕನ ಮೂಗಿಗೆ ಬಡಿಯಿತು.

**ಅಂಧಕಸ್ತ್ವಥ ತಂ ದೃಷ್ಟ್ವಾ ಗಂಧಮಾಘ್ರಾಯ ಚೋತ್ತಮಮ್ ।**
**ಸ್ವರ್ಗೇ ಸಂತಾನ ಕುಸುಮಾನ್ಯತಿವರ್ತತಿ ಸರ್ವಥಾ ।**
**ಕಃ ಪ್ರಭುಸ್ತಸ್ಯ ವೃಕ್ಷಸ್ಯ ಶಕ್ಯಂ ವ ಆನಯಿತುಂ ಮುನೇ ॥ 21 ॥**

ಅಂಧಕನು ಆ ಮಾಲೆಗಳ ಸೌಗಂಧ್ಯಕ್ಕೆ ಮಾರು ಹೋಗಿ – ಮಹಾಮುನಿ ನಾರದರೆ ಈ ಮನೋಹರ ಸುಗಂಧಯುಕ್ತ ಈ ಜಾತಿಯ ಪುಷ್ಪಗಳು ಎಲ್ಲಿ ಲಭಿಸುತ್ತದೆ. ಏನು ಗಂಧ! ಏನು ಬಣ್ಣ ಆಹಾ. ಸ್ವರ್ಗದ ಕುಸುಮಗಳ ಸೌಗಂಧ್ಯ ಸೌಕುಮಾರ್ಯವನ್ನು ನಾನು ತಿಳಿದಿರುವೆ. ಸ್ವರ್ಗದ ಪುಷ್ಪದ ಸೌಂದರ್ಯಾದಿಗಳನ್ನು ಅತಿಕ್ರಮಿಸಿರುವ ಈ ಸುಮರಾಜಿ ಯಾರ ವಶಕ್ಕೆ ಸಂಬಂಧಪಟ್ಟದ್ದು? ಅದೆಲ್ಲಿದೆ? ಅದು ಯಾರ ವಶದಲ್ಲಿದೆ? ಇದನ್ನು ತರಲು ಸಾಧ್ಯವೆ?

## ಶಿವನ ಮಂದಾರವನ ವರ್ಣನೆ

**ತಮುವಾಚ ಮುನಿಶ್ರೇಷ್ಠಃ ಪ್ರಹಸನ್ನಿವ ಭಾರತ ।**
**ಆದಾಯ ದಕ್ಷಿಣೇ ಹಸ್ತೇ ಮಹತಸ್ತವಸೋ ಮುನಿಃ ॥ 22 ॥**

ಅಂಧಕಾಸುರನ ಪ್ರಶ್ನೆಗಳಿಗೆ ಮುನಿನಾರದರು ನಸುನಕ್ಕು ಅಂಧಕನ ಬಲ ಹಸ್ತವನ್ನು ಹಿಡಿದುಕೊಂಡು ಹೀಗೆಂದರು.

ಅಂಧಕನೇ! ಇದು ಮಂದಾರ ವನದಿಂದ ಆರಿಸಿ ತಂದದ್ದಾಗಿದೆ. ಈ ವನಕ್ಕೆ ಪರಮಶಿವನು ಅಧಿಪತಿ. ಶಿವನ ಅನುಮತಿಯಿಲ್ಲದೆ ಮಂದಾರ ವನದೊಳಗೆ ಪ್ರವೇಶವೂ ದುರ್ಲಭ. ರುದ್ರದೇವನ ಪಾರ್ಷದರು ಅದರ ರಕ್ಷಣೆಯಲ್ಲಿದ್ದಾರೆ. ವಿವಿಧ ಆಯುಧಧಾರಿಗಳೂ, ನಾನಾ ವೇಷಧಾರಿಗಳನ್ನು ಧರಿಸಿ ನೋಡುವವರಿಗೆ ಘೋರ ರೂಪಿಗಳಾಗಿದ್ದಾರೆ. ರುದ್ರದೇವನ ಅನುಗ್ರಹ-ದಿಂದಾಗಿ ಅವರೆಲ್ಲರೂ ಸರ್ವಪ್ರಾಣಿಗಳಿಂದಲೂ ಅವಧ್ಯರಾಗಿರುವರು.

ಈ ಮಂದಾರ ಪುಷ್ಪಗಳಿರುವ ಈ ಮಂದಾರವನದಲ್ಲಿ ಉಮಾ ಸಹಿತನಾಗಿ ಶಿವನು ವಿಹರಿಸಿರುತ್ತಿರುತ್ತಾನೆ.

**ಸ್ತ್ರೀ ರತ್ನ ಮಣಿರತ್ನಾನಿ ಯಾನಿ ಚಾನ್ಯಾನಿ ಚಾಪ್ಯಥ ।**
**ಕಾಂಕ್ಷಿತಾನಿ ಫಲಂತಿ ಸ್ಮ ತೇ ದ್ರುಮಾಃ ಹರವಲ್ಲಭಾಃ ॥ 23 ॥**

ಆ ದೇವದೇವನನ್ನು ತಪಸ್ಸಿನಿಂದ ಸಂತೋಷಪಡಿಸಿ ಮಂದಾರಪುಷ್ಪಗಳನ್ನು ಪಡೆಯಬಹುದಾಗಿದೆ. ಈ ವೃಕ್ಷವು ಕಲ್ಪವೃಕ್ಷದಂತೆ ಬೇಡಿದ್ದನ್ನೆಲ್ಲ ನೀಡುವ ಸಾಮರ್ಥ್ಯವುಳ್ಳದ್ದು. ಸ್ತ್ರೀರತ್ನ-ಮಣಿರತ್ನಗಳೇ ಮೊದಲಾದ ಯಾವುದೇ ರತ್ನವನ್ನೂ ಇದು ಫಲ ರೂಪದಲ್ಲಿ ನೀಡುತ್ತದೆ.

ಶಿವನ ಮಂದರವನದಲ್ಲಿ ಸೂರ್ಯಚಂದ್ರರು ಇಣುಕುವುದಿಲ್ಲ. ತನ್ನ ಸ್ವತಃ ಕಾಂತಿಯಿಂದಲೇ ಬೆಳಗುತ್ತದೆ. ಅಲ್ಲಿರುವವರಿಗೆ ಎಂದೂ ದುಃಖ ದುಮ್ಮಾನಗಳುಂಟಾಗುವುದಿಲ್ಲ.

### ಮಂದರವನ ವೈಭವ

**ತತ್ರ ಗಂಧಾನ್ ಸ್ರವಂತ್ಯನ್ಯೇ ನೀರಾಣ್ಯನ್ಯೇ ಮಹಾದ್ರುಮಾಃ ।**
**ವಾಸಾಂಸಿ ವಿವಿಧಾನ್ಯನ್ಯೇ ಸುಗಂಧೀನಿ ಮಹಾಬಲ ॥ 24 ॥**

**ಭಕ್ಷ್ಯಂ ಭೋಜ್ಯಂ ಚ ಪೇಯಂ ಚ ಚೋಷ್ಯಂ ಲೇಹ್ಯಂ ತಥೈವ ಚ ।**
**ತರುಭ್ಯಃ ಸ್ರವತೇ ತೇಭ್ಯೋ ವಿವಿಧಂ ಮನಸೇಪ್ಸಿತಮ್ ॥ 25 ॥**

ಈ ವೃಕ್ಷಗಳಲ್ಲಿ ಕೆಲವು ಉತ್ತಮ ಸುಗಂಧವನ್ನು ಸೂಸಿದರೆ ಮತ್ತೆ ಕೆಲವು ಶುದ್ಧ ಹಾಗೂ ಅಮೃತೋಪಮವಾದ ನೀರನ್ನು ಸುರಿಸುತ್ತದೆ. ಕೆಲವಂತೂ ವಸ್ತ್ರಗಳನ್ನೆ ನೀಡುತ್ತವೆ. ವಿಧವಿಧ ಭಕ್ಷ್ಯ ಭೋಜಲೆಹ್ಯಪೇಯಾದಿಗಳನ್ನೂ ನೀಡಬಲ್ಲವು.

**ಪಿಪಾಸಾ ವಾ ಬಭುಕ್ಷಾ ವಾ ಗ್ಲಾನಿಶ್ಚಿಂತಾಪಿ ವಾಽನಘ ।**
**ನ ಮಂದಾರವನೇ ಭವತೀತ್ಯುಪಧಾರ್ಯತಾಮ್ ॥ 26 ॥**

**ನ ತೇ ವರ್ಣಯಿತುಂ ಶಕ್ಯಾ ಗುಣಾಃ ವರ್ಷಶತೈರಪಿ ।**

ಅನಘ ಅಂಧಕನೇ! ಈ ಮಂದಾರವನದಲ್ಲಿರುವವರಿಗೆ ಹಸಿವೆ ಬಾಯಾರಿಕೆ ಶ್ರಮ, ಚಿಂತೆಯಾಗುವುದಿಲ್ಲ. ಇದರ ಮಹಿಮೆ ನೂರು ವರ್ಷ ಹೇಳಿದರೂ ಮುಗಿಯದು. ಸ್ವರ್ಗದ ಪಾರಿಜಾತಾದಿ ವೃಕ್ಷಗಳ ಗುಣಗಳಿಕ್ಕಿಂತಲೂ ಅಧಿಕವಾದ ಗುಣಗಳು ಮಂದಾರವನದಲ್ಲಿರುವ ವೃಕ್ಷಗಳಲ್ಲಿವೆ.

**ಏಕಾಹಮಪಿ ಯಸ್ತತ್ರ ವಸೇಚ್ಚ ದಿತಿಜೋತ್ತಮ ।**
**ಅತೀವ ಹಿ ಜಯೇಲ್ಲೋಕಾನ್ ಸಮಹೇಂದ್ರಾನ್ ನ ಸಂಶಯಃ ॥ 27 ॥**

ಮಂದಾರವನದಲ್ಲಿ ಒಂದು ದಿವಸ ವಾಸ ಮಾಡಿದರೂ ಸಾಕು ಮಹೇಂದ್ರ ಸಹಿತ ಮೂರ್ಲೋಕವನ್ನು ಕರಗತ ಮಾಡಿಕೊಳ್ಳಬಹುದು.

ಇದು ಸ್ವರ್ಗಕ್ಕೂ ಸ್ವರ್ಗ, ಸುಖಕ್ಕೂ ಪರಮಸುಖ, ಇದೊಂದು ವಿಶ್ವದ ಸೌಂದರ್ಯದ ಸಾರಸರ್ವಸ್ವವೆ ಸರಿ ಎಂದರು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ**
**ನಾರದರು ಅಂಧಕನಿಗೆ ಮಂದಾರವನ ವರ್ಣನೆವೆಂಬಲ್ಲಿ**
**ಎಂಬತ್ತಾರನೆಯ ಅಧ್ಯಾಯ ಸಮಾಪ್ತಿ**

# ಅಥ ಸಪ್ತಾಶೀತಿತಮೋಽಧ್ಯಾಯಃ

## ಅಂಧಕನು ಮಂದರವನಕ್ಕೆ ಪ್ರವೇಶ

**ಅಂಧಕೋ ನಾರದವಚಃ ಶ್ರುತ್ವಾ ತತ್ತ್ವೇನ ಭಾರತ ।**
**ಮಂದರಂ ಪರ್ವತಂ ಗಂತುಂ ಮನೋದಧೇ ಮಹಾಸುರಃ ॥ 1 ॥**

ಜಯಮೇಜಯನೇ ! ಕೇಳು. ಅಂಧಕಾಸುರನು ನಾರದರಿಂದ ಮಂದಾರವನದ ಮಹಿಮೆಯನ್ನು ಕೇಳಿ ಅಲ್ಲಿಗೆ ಹೋಗಲು ನಿಶ್ಚೈಯಿಸಿದನು.

ಅಂಧಕಾಸುರನು ತನ್ನ ಅನುಚರಗಳನ್ನು ಒಂದು ಕಡೆ ಸೇರಿಸಿ ಮಹದೇವನ ಮಂದರವನಕ್ಕೆ ಹೊರಟನು.

ಈ ಮಂದರವು ಮಹಾಮೇಘಗಳಿಂದ ಆಚ್ಛಾದಿತವಾಗಿತ್ತು. ಮಹೌಷಧಿಲತೆಗಳಿಂದ ಕೂಡಿದ್ದು ಸಿದ್ಧರಿಗೆ ಆಶ್ರಯ ನೀಡಿತ್ತು. ಚಂದನ ಅಗರು, ದೇವದಾರು ಗಿಡಗಳಿಂದ ತುಂಬಿತ್ತು. ಯಕ್ಷ ಕಿನ್ನರರ ಸಮಧುರ ಗಾನದಿಂದಾಗಿ ಮಂದರವನವು ಶೋಭಾಯಮಾನವಾಗಿತ್ತು. ಪರ್ವತವು ಗೈರಿಕಾದಿಧಾತುಗಳನ್ನು ಹೊರಸೂಸುತ್ತಿತ್ತು.

ಪಕ್ಷಿಗಳ ಧ್ವನಿಗಳಿಂದ ಪರ್ವತವು ಪ್ರತಿಧ್ವನಿಸುತ್ತಿರುವಂತೆ ಭಾಸವಾಗುತ್ತಿತ್ತು. ಶುಭ್ರವಾದ ಪಾದಗಳನ್ನು ಹೊಂದಿದ್ದ ಹಂಸಪಕ್ಷಿಗಳಿಂದ ಪರ್ವತವು ತುಂಬಿ ಹೋಗಿತ್ತು ದೈತ್ಯರನ್ನು ಎದುರಿಸುವ ಸಾಮರ್ಥ್ಯ ಹೊಂದಿರುವ ಕಾಡೆಮ್ಮೆಗಳು ಸಂಚರಿಸುತ್ತಿದ್ದವು. ಸಿಂಹಗಳಿಂದ ತುಂಬಿದ್ದ ಪರ್ವತವು ತುಂಬಿ ಹೋಗಿತ್ತು. ಮಂದರಾವನ ಅಭಿಮಾನಿ ದೇವತೆಯನ್ನು ಕುರಿತು ಅಂಧಕಾಸುರನು ದರ್ಪಿಷ್ಠನಾಗಿ ಹೇಳಿದನು.

**ವೇತ್ಸಿ ತ್ವಂ ಹಿ ಯಥಾವಧ್ಯೋ ವರದಾನಾದಹಂ ಪಿತುಃ ।**
**ಮಮಚೈವ ವಶೇ ಸರ್ವಂ ತ್ರೈಲೋಕ್ಯಂ ಸಚರಾಚರಮ್ ॥ 2 ॥**
**ಪ್ರತಿಯೋದ್ಧುಂ ನ ಮಾ ಕಶ್ಚಿದ್ ಇಚ್ಛತ್ಯಪಿ ಗಿರೇ ಭಯಾತ್ ।**
**ಪಾರಿಜಾತವನಂ ಚಾಸ್ತಿ ತವ ಸಾನೌ ಮಹಾಗಿರೇ ।**
**ಸರ್ವಕಾಮ ಪ್ರದೈಃ ಪುಷ್ಪೈಃ ಭೂಷಿತಂ ರತ್ನಮುತ್ತಮಮ್ ॥ 3 ॥**

ಮಂದರನೇ! ನನ್ನ ತಂದೆ ಕಶ್ಯಪರ ವರದಿಂದಾಗಿ ನನ್ನನ್ನು ಯಾರು ಕೊಲ್ಲಲು ಸಾಧ್ಯವಿಲ್ಲ. ಇದು ನಿನಗೂ ತಿಳಿದ ವಿಷಯವೆ. ನಾನು ಮಹಾಬಲಿಷ್ಠ. ಸಮಸ್ತ ಸ್ಥಾವರಜಂಗಮದಿಂದ ಯುಕ್ತವಾದ ಈ ಮೂರು ಲೋಕಗಳೂ ನನ್ನ ವಶದಲ್ಲಿದೆ. ನನ್ನ ಭೀತಿಯಿಂದಾಗಿ ನನ್ನೊಂದಿಗೆ ಯಾರೂ ಯುದ್ಧ ಮಾಡುವ ಸಾಹಸ ಮಾಡಲಾರು.

ಪ್ರಕೃತ ಸಮಸ್ತ ಇಷ್ಟಾರ್ಥಗಳನ್ನು ಈಡೇರಿಸುವ ಪುಷ್ಪಗಳಿಂದ ಕೂಡಿರುವ ಸಂತಾನ, ಮಂದರಾದಿ ವೃಕ್ಷಗಳ ವನವಿದೆಯೆಂದು ನಾನು ಕೇಳಿದ್ದೇನೆ.

ಅದು ಎಲ್ಲಿದೆಯೆಂದು ತಿಳಿಸು. ಆ ವೃಕ್ಷಗಳ ಫಲಗಳನ್ನು ನಾನು ಅನುಭವಿಸಲು ಇಚ್ಛಿಸಿದ್ದೇನೆ. ಇದರಿಂದಾಗಿ ನಿನಗೆ ಕೋಪ ಬರಬಹುದೇನೋ? ಆದರೆ ನಿನ್ನ ಕೋಪದಿಂದಾಗಿ ನನ್ನನ್ನೇನೂ ಮಾಡಲಾರೆ. ಈ ಮಂದಾರ ವೃಕ್ಷಗಳ ವನವನ್ನು ಈ ಕೂಡಲೇ ನನಗೊಪ್ಪಿಸು. ಒಪ್ಪಿಸದಿದ್ದರೆ ನಿನ್ನನ್ನೆ ಕೊಂದು ನನ್ನ ವಶ ಮಾಡಿಕೊಳ್ಳುವೆ.

**ತದಾಚಕ್ಷ್ವ ಉಪಭೋಕ್ಷ್ಯಾಮಿ ತದ್‌ವನಂ ತವ ಸಾನುಜಮ್ ।**
**ಕಿಂ ಕರಿಷ್ಯಸಿ ಕ್ರುದ್ಧಸ್ತ್ವಂ ಮನೋ ಹಿ ತ್ವರತೇ ಮಮ ॥ 4 ॥**

ಕೋಪಗೊಂಡು ನಿಗ್ರಹ ಮಾಡಲು ನನ್ನಿಂದ ನಿನ್ನನ್ನು ರಕ್ಷಿಸುವವನು ಮೂಲೋಕದಲ್ಲಿಯೂ ಇಲ್ಲ. ಹೀಗೆಂದಾಗ ಮಂದರನು ಅಲ್ಲಿಯೇ ಅದೃಶ್ಯನಾದನು. ಪರ್ವತನು ಏನು ಉತ್ತರ ನೀಡದೆ ಮರೆಯಾದದ್ದನ್ನು ಕಂಡು ಅಂಧಕನು ಕಿಡಿಕಿಡಿಯಾಗಿ ಜೋರಾಗಿ ಸಿಂಹನಾದ ಮಾಡಿ ಹೀಗೆಂದನು.

**ಮಯಾ ವೈ ತ್ವಂ ಯಾಚ್ಯಮಾನೋ ಯಸ್ಮಾನ್ನ ಬಹು ಮನ್ಯಸೇ ।**
**ಅಹಂ ಚೂರ್ಣೀಕರೋಮಿ ತ್ವಾಂ ಬಲಂ ಪರ್ವತ ಪಶ್ಯ ಮೇ ॥ 5 ॥**

ದುಷ್ಟಪರ್ವತನೇ! ನಾನು ಮಂದಾರ ವೃಕ್ಷಗಳನ್ನು ಬೇಡುತ್ತಿದ್ದರೂ ತಿರಸ್ಕಾರ

ಮಾಡಿ ಅದೃಶ್ಯವಾಗಿರುವೆ. ನಿನ್ನನ್ನು ನಾನು ಪುಡಿಗುಟ್ಟುವೆನು. ನನ್ನ ಬಲವೇನೆಂದು ತೋರಿಸುವೆ ನೋಡು. ನನ್ನ ಕೈಯಿಂದ ನಿನ್ನನ್ನು ಯಾರು ರಕ್ಷಿಸುವರೋ ನೋಡುವೆ ಎಂದನು.

ಹೀಗೆ ಹೇಳಿದ ಅಂಧಕಾಸುರನು ಪರ್ವತದ ಶಿಖರವೊಂದನ್ನು ಕಿತ್ತಿ ಅದನ್ನು ಮತ್ತೊಂದು ಶಿಖರದ ಮೇಲೆತ್ತಿ ಹಾಕಿ ಪುಡಿಗೈದನು. ಇವನ ಆರ್ಭಟಕ್ಕೆ ಅಲ್ಲಿ ಹರಿಯುತ್ತಿದ್ದ ನದಿಗಳೂ ಅದೃಶ್ಯವಾದವು. ಪರ್ವತನು ಶಿವನಿಗೆ ಶರಣಾದ.

**ತೇ ಪ್ರಚ್ಛನ್ನನದೀಜಾಲಂ ಮನ್ಯಮಾನಂ ಮಹಾಗಿರಿಮ್ ।**
**ವಿದಿತ್ವಾ ಭಗವಾನ್ ರುದ್ರಃ ಚಕಾರಾನುಗ್ರಹಂ ಗಿರೇಃ ॥ 6 ॥**

ಪರ್ವತನ ದುಃಸ್ಥಿತಿಯನ್ನು ಕಂಡು ಶಿವನು ಪರ್ವತನ ಮೇಲೆ ಕೃಪಾಕಟಾಕ್ಷ ಬೀರಿದನು. ಶಿವನ ಅನುಗ್ರಹ ಪರ್ವತದ ಮೇಲೆ ಬಿದ್ದ ಕೂಡಲೇ ಬಿದ್ದ ಗಿಡಮರಗಳು ಎದ್ದು ನಿಂತವು. ನದಿಗಳು ಪುನಃ ಹರಿಯಲಾರಂಭಿಸಿದವು. ಫಲಪುಷ್ಪಭರಿತ ಗಿಡಮರಗಳಿಂದ ಪುನಃ ಗಿರಿಯು ಕಂಗೊಳಿಸಿತು.

ಇದನ್ನು ನೋಡಿದ ಅಂಧಕನು ದರ್ಪದಿಂದ ಈ ಗಿರಿಯನ್ನು ರಕ್ಷಿಸಿದವನ್ಯಾರೆ ಆಗಿರಲಿ. ನನ್ನೊಂದಿಗೆ ಯುದ್ಧಕ್ಕೆ ಬರಲಿ ಈ ಮಾಯೆಗೆ ನಾನು ಬೆದರುವವನಲ್ಲ.

**ಆಹ್ವಯೇ ತಂ ವನಂ ಯಸ್ಯ ಯುದ್ಧಾರ್ಥಮುಪತಿಷ್ಠತು ॥ 7 ॥**

ಶಿವನ ಅನುಗ್ರಹದಿಂದ ಪುಡಿಯಾದ ಶಿಖರಗಳು ಪುನಃ ಮೊದಲಿನಂತೆಯೇ ಆಗಿದ್ದು ಮಾತ್ರವಲ್ಲದೆ ಆ ಪರ್ವತಗಳು ಅಂಧಕ ಹಾಗೂ ಅವನ ಅನುಚರರನ್ನು ಹೊಡೆಯಲಾರಂಭಿಸಿತು. ದೈತ್ಯರು ಪರ್ವತಭೇದದ ಕಾರ್ಯವನ್ನು ಬಿಟ್ಟು ಪ್ರಾಣಕ್ಕಾಗಿ ಪಲಾಯನ ಮಾಡಿದರು. ಶಿವನ ಅನುಗ್ರಹದಿಂದಾಗಿ ಆ ಪರ್ವತ ಶಿಖರಗಳೇ ಅವರನ್ನು ಬೆನ್ನಟ್ಟಿ ಹೊಡೆಯುತ್ತಿದ್ದವು. ಇದನ್ನು ನೋಡಿದ ಅಂಧಕನಿಗೆ ಕೋಪ ಬಂದಿತು. ಜೋರಾಗಿ ಸಿಂಹ ಗರ್ಜನೆ ಮಾಡಿದನು.

ಎಲ್ಲವೋ ಪರ್ವತನೇ ನಿನ್ನೊಂದಿಗೆ ಯುದ್ಧ ಮಾಡಿ ಏನು ಪ್ರಯೋಜನ? ಮೋಸದಿಂದ ನಮ್ಮವರನ್ನೆಲ್ಲ ಕೊಲ್ಲುತ್ತಿರುವೆ. ಪರ್ವತಗಳು ಜಡವಾಗಿದ್ದು ಅವು ಯುದ್ಧ ಮಾಡಲಾರವು. ಇದು ನಿನ್ನದೆ ಕುಟಿಲೋಪಾಯ. ಆದ್ದರಿಂದ ಈ ಮಂದಾರವನಕ್ಕೆ ಯಾರು ಅಧಿಪತಿಯೋ ಅವನೊಂದಿಗೆ ಯುದ್ಧ ಮಾಡುವೆನು. ಹೀಗೆ ಹೇಳುತ್ತಿರುವಾಗಲೇ ರುದ್ರದೇವನು ತನ್ನ ತ್ರಿಶೂಲವನ್ನು

ಎತ್ತಿಕೊಂಡು ಅಂಧಕನನ್ನು ಸಂಹರಿಸಲು ವೃಷಭಾರೂಢನಾಗಿ ಅವನ್ನಿದ್ದಲ್ಲಿಗೆ ಬಂದನು.

**ಸಂಪ್ರಾಪ್ತಃ ಶೂಲಮುದ್ಯಮ್ಯ ದೇವೋಽಂಧಕಜಿಘಾಂಸಯಾ ॥ 8 ॥**

ಭೂತಗಣಾಧಿಪತಿ ಭೂತನಾಥನನ್ನು, ಪ್ರಮಥಗಣಗಳು, ಭೂತಗಣಗಳೂ ಅನುಸರಿಸಿದವು. ಭಗವಾನ್ ಶಿವನು ಕೋಪಗೊಂಡೊಡನೆಯೆ ಮೂರು ಲೋಕಗಗಳೂ ಕಂಪಿಸಿದವು. ನದಿಗಳೆಲ್ಲವೂ ವಿಪರೀತವಾಗಿ ಹರಿಯತೊಡಗಿದವು ಹಾಗೂ ಪ್ರವಾಹೋದಕವೂ ಕೂಡ ಚೆನ್ನಾಗಿ ಕಾದು ಕುದಿಯತೊಡಗಿದವು.

**ಸಿಂಧವಶ್ಚ ಪ್ರತಿಸ್ರೋತಂ ಊಹುಃ ಪ್ರಜ್ವಲಿತೋದಕಾಃ ॥ 9 ॥**

ವೃಷಭಧ್ವಜನ ತೇಜಸ್ಸಿನಿಂದ ಹತ್ತೂ ದಿಕ್ಕುಗಳಲ್ಲಿ ಅಗ್ನಿಜ್ವಾಲೆಗಳು ಏಳತೊಡಗಿದವು. ಆದಿತ್ಯಾದಿ ನವಗ್ರಹಗಳು ವಿಪರೀತವಾಗಿ ಸಂಚರಿಸಿದವು. ಧೂಮಸಹಿತ ಬೆಂಕಿಯ ಮಳೆ ಸುರಿಯಿತು. ಗ್ರಹಗಳಲ್ಲಿ ಯುದ್ಧವೇರ್ಪಟ್ಟಿತು.

**ಯುಯುಧುಶ್ಚ ಗ್ರಹಾಃ ಸರ್ವೇ ವಿಪರೀತಾ ಜನಾಧಿಪ ।**
**ಉಷ್ಣಭಾಶ್ಚಂದ್ರಮಾಶ್ಚಾಸೀತ್ ಸೂರ್ಯಃ ಶೀತಪ್ರಭಸ್ತಥಾ ॥ 10 ॥**

ಶೀತಲಕಿರಣನಾದ ಚಂದ್ರನು ಉಷ್ಣರಶ್ಮಿಗಳನ್ನುಗುಳದನು. ಉಷ್ಣರಶ್ಮಿ ಸೂರ್ಯನು ತಂಪಾದ ಕಿರಣನಾಗಿ ಪರಿಣಮಿಸಿದನು. ಮುನಿಗಳಗೆ ಬ್ರಹ್ಮಜ್ಞಾನವೆ ಮಸಕಾಯಿತು.

**ವಡವಾಃ ಸುಷುವುಃ ಗಾಶ್ಚ ಗಾವೋಽಶ್ವಾನಪಿ ಚಾನಘ ।**
**ಪೇತುಃ ವೃಕ್ಷಾಶ್ಚ ಮೇದಿನ್ಯಾಂ ಅಚ್ಛಿನ್ನಾ ಭಸ್ಮಸಾತ್ ಕೃತಾಃ ॥ 11 ॥**

ಹೆಣ್ಣು ಕುದುರೆಗಳಲ್ಲಿ ಗೋವುಗಳೂ, ಗೋವುಗಳಲ್ಲಿ ಕುದುರೆಗಳು ಜನಿಸಿದವು. ಬದ್ಧಮೂಲಗಳಾದ ಮಹಾವೃಕ್ಷಗಳೆಲ್ಲವೂ ಕಾರಣವಿಲ್ಲದೆ ಭೂಮಿಗೆ ಬಿದ್ದವು. ಕೂಡಲೇ ಬೆಂಕಿಯು ತಗಲಿ ಉರಿದು ಬೂದಿಯಾದವು.

ಗೋವುಗಳೂ ವೃಷಭಗಳ ಮೇಲೆ ಹಾರಿ ದಾಳಿ ಮಾಡಿದವು. ರಾಕ್ಷಸರು ಯಾತುಧಾನ ಪಿಶಾಚಿಗಳು ಪ್ರಪಂಚವನ್ನು ಪೀಡಿಸಿದವು.

## ಶಿವ–ಅಂಧಕ ಸಂಗ್ರಾಮ

ಭೂಮಿಯಲ್ಲಾಗುತ್ತಿದ್ದ ವೈಪರೀತ್ಯವನ್ನು ಕಂಡ ಲೋಕರಕ್ಷದೀಕ್ಷಾಯುಕ್ತ

ತ್ರ್ಯಂಭಕನು ಜಾಜ್ವಲ್ಯಮಾನವಾದ ಅಗ್ನಿಯಂತೆ ಪ್ರಭೆಯಿಂದ ಕೂಡಿರುವ ತನ್ನ ತ್ರಿಶೂಲವನ್ನು ಅಂಧಕಾಸುರನ ಮೇಲೆ ಎಸೆದನು.

**ಮುಮೋಚ ಭಗವಾನ್ ಶೂಲಂ ಪ್ರದೀಪ್ತಾಗ್ನಿಸಮಪ್ರಭಮ್ ॥ 12 ॥**

ಶಿವನಿಂದ ಪ್ರಯುಕ್ತವಾದ ಧಾರಣೆಗೆ ಅಸಾಧ್ಯವೂ ಆದ ಆ ತ್ರಿಶೂಲವು ಅಂಧಕಾಸುರನ ಎದೆಯಲ್ಲಿ ನಾಟಿತು. ತಕ್ಷಣದಲ್ಲಿಯೇ ಸಜ್ಜನರಿಗೆ ಕಂಟಕನಾಗಿದ್ದ ಅಂಧಕಾಸುರನು ಸುಟ್ಟು ಬೂದಿಯಾಗಿ ಹೋದನು.

**ತತ್ಪಪಾತ ಹರೋತ್ಸೃಷ್ಟಂ ಅಂಧಕೋರಸಿ ದುರ್ಧರಮ್ ।**
**ಭಸ್ಮಸಾಚ್ಚಾಕರೋತ್ ರೌದ್ರಮಂಧಕಂ ಸಾಧುಕಂಟಕಮ್ ॥ 13 ॥**

ಜಗತ್ತಿಗೆ ಅರಿಯಾಗಿದ್ದ ಅಂಧಕಾಸುರನು ಸಂಹೃತನಾದಾಗ ದೇವತೆಗಳೂ ತಪೋವನ ಮುನಿಗಳು ಸಂತುಷ್ಟರಾಗಿ ಅವನ ಸಾಮರ್ಥ್ಯವನ್ನು ಪ್ರಶಂಸಿದರು.

ದೇವದುಂದುಭಿಗಳು ಮೊಳಗಿ ಪುಷ್ಪವೃಷ್ಟಿಯಾಯಿತು. ಮೂರುಲೋಕದವರ ಹೃದಯ ಕಳವಳ ರಹಿತವಾಯಿತು. ದೇವಗಾಯನ ಅಪ್ಸರೆಯರ ನರ್ತನ, ಬ್ರಾಹ್ಮಣರ ನಮಕ-ಚಮಕ ಪಾರಾಯಣ ನಡೆದವು. ಯಜ್ಞಯಾಗಾದಿಗಳು ಪುನಃ ಪ್ರಾರಂಭವಾದವು. ಗ್ರಹಗಳು ಯಥಾಸ್ಥಿತವಾಗಿ ಚಲಿಸತೊಡಗಿದವು. ನದಿಗಳೂ ಹಿಂದಿನಂತೆಯೇ ಸಮುದ್ರದ ಕಡೆಗೆ ಹರಿಯಲಾರಂಭಿಸಿದವು. ನೀರಿನಲ್ಲಿದ್ದ ಜ್ವಾಲೆಗಳು ಆರಿ ನೀರು ತಂಪಾದವು. ದಿಕ್ಕುಗಳಲ್ಲಿ ಪ್ರಸನ್ನತೆ ತೋರಿದವು. ಪರ್ವತನು ಮೊದಲಿಗಿಂತಲೂ ಅಧಿಕವಾಗಿ ರಾರಾಜಿಸಿದನು. ಹೀಗೆ ಶಿವನು ಇಂದ್ರಾದಿಗಳಿಗೆ ಧರ್ಮಾನುಷ್ಠಾನಕ್ಕೆ ಅನುವು ಮಾಡಿಕೊಂಡು ಉಮಾಧವನು ಉಮೆಯೊಂದಿಗೆ ಪಾರಿಜಾತವನದಲ್ಲಿ ವಿಹರಿಸಲಾರಂಭಿಸಿದನು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ಅಂಧಕಾಸುರ ಸಂಹಾರವೆಂಬಲ್ಲಿ
ಎಂಬತ್ತೇಳನೆಯ ಅಧ್ಯಾಯ ಸಮಾಪ್ತಿ

# ಅಥ ಅಷ್ಟಾಶೀತಿತಮೋಽಧ್ಯಾಯಃ

## ಪಿಂಡಾರಕ ತೀರ್ಥದಲ್ಲಿ ಶ್ರೀಕೃಷ್ಣನ ಜಲಕೇಳಿ

*ಜನಮೇಜಯ ಉವಾಚ –*

**ಮುನೇಽಂಧಕವಧಃ ಶ್ರಾವ್ಯ ಶ್ರುತೋಽಯಂ ಖಲು ಭೋ ಮಯಾ ।**
**ಶಾಂತಿಃ ತ್ರಯಾಣಾಂ ಲೋಕಾನಾಂ ಕೃತಾ ದೇವೇನ ಧೀಮತಾ ॥ 1 ॥**

ಜನಮೇಜಯನು ವೈಶಂಪಾಯನರಿಗೆ ಗುರುಗಳೇ! ಶಿವನಿಂದ ನಡೆದ ಅಂಧಕಾಸುರನ ವಧೆ ಪ್ರತಿಯೊಬ್ಬನೂ ಕೇಳಲೇಬೇಕಾದದ್ದು, ನಾನದನ್ನು ಶ್ರವಣ ಮಾಡಿದೆ.

ಶ್ರೀಕೃಷ್ಣನು ನಿಕುಂಭನ ಮೂರು ಶರೀರಗಳಿದ್ದು ಒಂದನ್ನು ಕೊಂದನೆಂದು ತಿಳಿಸಿದಿರಿ. ಅವನ ಎರಡನೇ ಶರೀರವನ್ನು ಹೇಗೆ ಸಂಹರಿಸಿದನು? ಎಂದು ತಿಳಿಯಲು ಇಚ್ಛಿಸುವೆನು ಕೃಪೆ ಮಾಡಿ ಹೇಳಿರಿ.

ರಾಜನ್ ! ನೀನು ಶ್ರದ್ಧಾವಂತನಾಗಿರುವೆ ಆದ್ದರಿಂದ ಮಹಾಮಹಿಮನಾದ ಶ್ರೀಕೃಷ್ಣನ ಕಥೆಯನ್ನು ಕೇಳಲು ಉದ್ಯುಕ್ತನಾಗಿರುವೆ. ಹೇಳುವೆ ಕೇಳು!

**ದ್ವಾರವತ್ಯಾಂ ನಿವಸತೋ ವಿಷ್ಣೋರತುಲ ತೇಜಸಃ ।**
**ಸಮುದ್ರಯಾತ್ರ ಸಂಪ್ರಾಪ್ತಾ ತೀರ್ಥೇ ಪಿಂಡಾರಕೇ[1] ನೃಪ ॥ 2 ॥**

1. **ಪಿಂಡಾರಕ :** ಪಿಂಡಾರಕ ಕ್ಷೇತ್ರವು ದ್ವಾರಕೆಯ ಮಧ್ಯದಲ್ಲಿರುವ ನೂರಾರು ತೀರ್ಥಗಳಿಗೂ ತೀರ್ಥವೆನಿಸಿದೆ. **"ಮಧ್ಯೆ ಪಿಂಡಾರಕಂ ಕ್ಷೇತ್ರಂ ತೀರ್ಥಾನಾಂ ತೀರ್ಥ ಮುತ್ತಮಮ್"** – *ಮಭಾ ವನ 88/21*
ಸಕಲತೀರ್ಥಗಳ ಸನ್ನಿಧಾನ ಹೊಂದಿ ತೀರ್ಥಗಳನ್ನೆಲ್ಲ ಸೇರಿಸಿಕೊಂಡ ಈ ತೀರ್ಥ

ಶ್ರೀಕೃಷ್ಣನು ದ್ವಾರಕೆಯಲ್ಲಿದ್ದಾಗ ಪಿಂಡಾರಕ ಕ್ಷೇತ್ರಕ್ಕೆ ಸಮುದ್ರದ ಮೂಲಕ ಹೋಗಬೇಕಾಯಿತು. ವಸುದೇವ ಹಾಗೂ ಉಗ್ರಸೇನರನ್ನೂ ಹೊರತುಪಡಿಸಿ ಉಳಿದ ಯಾದವರೆಲ್ಲ ದ್ವಾರಾವತಿ ಬಿಟ್ಟು ಪಿಂಡಾರಕಕ್ಕೆ ಹೊರಟರು. ಬಲರಾಮ ಕೃಷ್ಣರು ಪ್ರತ್ಯೇಕವಾಗಿ ಪ್ರಯಾಣ ಮಾಡುತ್ತಿದ್ದರು. ಯಾತ್ರೆಯಲ್ಲಿ ರೂಪಸಿಯರಾದ ಗಣಿಕೆಯರು ಸಾವಿರಾರು ಇದ್ದರು. ಯಾದವರೆಲ್ಲರೂ ಸಮುದ್ರರಾಜನನ್ನು ಗೆದ್ದು ದೈತ್ಯರ ಬಳಿಯಿದ್ದ ವೇಶ್ಯೆಯರನ್ನು ದ್ವಾರಕೆಗೆ ತಂದಿದ್ದರು.

## ಪಿಂಡಾರಕಕ್ಕೆ ಪ್ರಯಾಣ

ಈ ವೇಶ್ಯೆಯರೆಲ್ಲರೂ ಯಾದವರ ಉಪಭೋಗಕ್ಕಾಗಿ ಯೋಗ್ಯರಾಗಿದ್ದರು. ಇವರನ್ನೆಲ್ಲ 'ರಾಜನ್ಯಾ' ಎಂದು ಕರೆದರು.

**ಸ್ತ್ರೀನಿಮಿತ್ತಂ ಭವೇದ್ ವೈರಂ ಮಾ ಯದೂನಾಮಿತಿ ಪ್ರಭೋ ।**

ಯಾದವರಲ್ಲಿ ಸ್ತ್ರೀನಿಮಿತ್ತಕವಾಗಿ ಕಲಹವುಂಟಾಗದಿರಲಿ ಎಂದೆ ಈ ವ್ಯವಸ್ಥೆಯನ್ನು ಮಾಡಿದ್ದನು.

ಬಲರಾಮದೇವನು ತನ್ನ ಪತ್ನಿಯಾದ ರೇವತಿಯಿಂದ ಚಕ್ರವಾಕ ದಂಪತಿಗಳಂತೆ ಕ್ರೀಡಿಸಿದನು. ದೇವಭೋಗ್ಯವಾದ ಕಾದಂಬರೀ ಎಂಬ ಪಾನೀಯವನ್ನು ಪಾನ ಮಾಡಿದ ಬಲದೇವನು ಸಮುದ್ರದಲ್ಲಿ ಜಲಕ್ರೀಡೆಯಲ್ಲಿ ತೊಡಗಿದ್ದನು.

**ಷೋಡಶ ಸ್ತ್ರೀ ಸಹಸ್ರಾಣಿ ಜಲೇ ಜಲಜಲೋಚನಃ ।**
**ರಮಯಾಮಾಸ ಗೋವಿಂದೋ ವಿಶ್ವರೂಪೇಣ ಸರ್ವದೃಕ್ ॥ 3 ॥**

ಶ್ರೀಕೃಷ್ಣನಾದರೂ ಅನೇಕ ರೂಪ ಧರಿಸಿ ಸರ್ವಪತ್ನಿಯರಿಗೂ ಪ್ರತ್ಯೇಕ ಪ್ರತ್ಯೇಕವಾಗಿಯೆ ಅವರೊಂದಿಗಿದ್ದು ಅವರೊಂದಿಗೆ ಜಲಕೇಳಿ-ಯನ್ನಾಡುತ್ತಿದ್ದನು.

---

'ಪಿಂಡಾರಕ' ಎನಿಸಿತು. ಸಾಂಬನಿಗೆ ಸ್ತ್ರೀವೇಷ ಹಾಕಿ ವಿಶ್ವಮಿತ್ರಾದಿಗಳಿಂದ ಶಾಪ ಪಡೆದದ್ದು ಇಲ್ಲಿಯೇ. **"ತೇನ ಪಿಂಡಾರಕಂ ನಾಮ ಸರ್ವತೀರ್ಥಸ್ಯ ಪಿಂಡತಃ"** - *ಗರ್ಗಸಂಹಿತೆ.*
ಯದುರಾಜನು ರಾಜಸೂಯ ಮಾಡಿದ ಸ್ಥಳ. ಉಗ್ರಸೇನನು ಯಾಗ ಮಾಡಿರುವನು.
**ಕ್ರತುರಾಜಂ ರಾಜಸೂಯಂ ಯದುರಾಜೋಮಹಾಬಲಃ ।**
ಪಿಂಡಾರಕವು ದ್ವಾರಕೆಯ ಪೂರ್ವಕ್ಕೆ 13 ಮೈಲು ದೂರದಲ್ಲಿದೆ.

ಪ್ರತಿಯೊಬ್ಬರೊಂದಿಗೂ ಒಂದೊಂದು ರೂಪದಿಂದ ವಿಹರಿಸುತ್ತಿದ್ದಾಗ ಸ್ತ್ರೀಯರೆಲ್ಲರೂ ಶ್ರೀಕೃಷ್ಣನು ನನ್ನೊಂದಿಗೆ ಕ್ರೀಡಿಸುತ್ತಿರುವನು. ಅವರೆಲ್ಲರನ್ನೂ ಬಿಟ್ಟು ನನ್ನೊಂದಿಗೆ ಇರುವುದರಿಂದ ನಾನು ಅವನಿಗೆ ಬಹಳ ಇಷ್ಟಲಾದವಳಾದೆನು. ಹೀಗೆ ಪ್ರತಿಯೊಬ್ಬರಿಗೂ ಭಾವನೆ ಬಂದಿತು.

**ಅಹಮಿಷ್ಟಾ ಮಯಾ ಸಾರ್ಧಂ ಜಲೇ ವಸತಿ ಕೇಶವಃ ।**
**ಇತಿ ತಾ ಮೇನಿರೇ ಸರ್ವಾ ರಾತ್ರೌ ನಾರಾಯಣ ಸ್ತ್ರಿಯಃ ॥ 4 ॥**

ರಾತ್ರಿಯಲ್ಲಿಯೂ ಶ್ರೀಕೃಷ್ಣನು ಅನೇಕ ರೂಪಗಳಿಂದ ವಿಹರಿಸಿದ್ದರಿಂದ ಅವರ ಅಂಗಾಂಗಗಳಲ್ಲಿ ಸುರತಚಿಹ್ನೆಗಳಿದ್ದವು. ಇದರಿಂದಾಗಿ ಸರ್ವರಿಗೂ ನನ್ನೊಂದಿಗೆ ಮಾತ್ರ ಶ್ರೀಕೃಷ್ಣನಿದ್ದನು ಎಂಬ ಭಾವವನ್ನು ಹದಿನಾರು ಸಾವಿರ ಸ್ತ್ರೀಯರೂ ಹೊಂದಿದ್ದರೂ.

**ಅಹಮಿಷ್ಟಾऽಹಮಿಷ್ಟೇತಿ ಸ್ನಿಗ್ಧೇ ಪರಿಜನೇ ತದಾ ।**
**ನಾರಾಯಣ ಸ್ತ್ರಿಯಃ ಸರ್ವಾ ಮುದಾ ಶಶ್ಲಾಘಿರೇ ಶುಭಾಃ ॥ 5 ॥**

ಸಖಿಯರೇ! ಹದಿನಾರು ಸಾವಿರದ ನೂರರಲ್ಲಿ ನಾನೊಬ್ಬಳೆ ಪ್ರಿಯತಮ ಪ್ರೇಯಸಿಯಾಗಿರುವೆನು. ಏಕೆಂದರೆ ಶ್ರೀಕೃಷ್ಣನು ಹಗಲು-ರಾತ್ರಿಯೆನ್ನದೆ ಯಾವಾಗಲೂ ನನ್ನೊಂದಿಗೆ ಇದ್ದು ಬಿಡುತ್ತಿದ್ದ. ಹೀಗಾಗಿ ನನ್ನಂತಹ ಧನ್ಯಳು ಮತ್ತೊಬ್ಬಳಿಲ್ಲ. ಹೀಗೆ ಪ್ರತಿಯೊಬ್ಬ ತಮ್ಮ ಧನ್ಯತೆಯನ್ನು ಹೇಳಿಕೊಂಡು ಸಂತೋಷಪಡುತ್ತಿದ್ದರು.

ಇವರೆಲ್ಲರೂ ದರ್ಪಣದಲ್ಲಿ ತಮ್ಮನ್ನು ನೋಡಿಕೊಂಡಾಗ ಪ್ರತಿಯೊಬ್ಬ ಗೋಪಿಯರ ನಖಕ್ಷತ ದಂತಕ್ಷತ ಗುರುತು ನೋಡಿ ತಮಗೆ ಸಿಕ್ಕಿದ ಈ ಸೌಭಾಗ್ಯಕ್ಕಾಗಿ ಬಹಳ ಹೆಮ್ಮೆಪಟ್ಟರು.

**ಗೋತ್ರಮುದ್ಧಿಶ್ಯ ಕೃಷ್ಣಸ್ಯ ಜಗಿರೇ ಕೃಷ್ಣಯೋಷಿತಃ ।**
**ಪಿಬಂತ್ಯ ಇವ ಕೃಷ್ಣಸ್ಯ ನಯನೈಃ ವದನಾಂಬುಜಮ್ ॥ 6 ॥**
**ಕೃಷ್ಣಾರ್ಪಿತ ಮನೋದೃಷ್ಟ್ಯಃ ಕಾಂತಾ ನಾರಾಯಣ ಸ್ತ್ರಿಯಃ ॥ 7 ॥**

ಶ್ರೀಕೃಷ್ಣ ಪತ್ನಿಯರೆಲ್ಲ ಶ್ರೀಕೃಷ್ಣ ವಂಶವನ್ನುದ್ಧೇಶಿಸಿ ಗಾನ ಮಾಡುತ್ತಿದ್ದರು. ನೇತ್ರಗಳೆಂಬ ದುಂಬಿಗಳಿಂದ ಮುಖಕಮಲದ ಸೌಂದರ್ಯವೆಂಬ ಮಧುವನ್ನು ನಿರಂತರವಾಗಿ ಪಾನ ಮಾಡುತ್ತಿದ್ದರು. ಶ್ರೀಕೃಷ್ಣ ಸ್ತ್ರೀಯರೆಲ್ಲರ ಮನಸ್ಸು ಹಾಗೂ ದೃಷ್ಟಿ ಕೃಷ್ಣನಿಗೆ ಅರ್ಪಿಸಲ್ಪಟ್ಟಿದ್ದವು.

ಅವರೆಲ್ಲರ ಸಂಕಲ್ಪ ಒಂದೆಯಾಗಿತ್ತು. ಶ್ರೀಕೃಷ್ಣನನ್ನು ಯಾವಾಗಲೂ ತಮ್ಮೊಂದಿಗೆ ಇರಿಸಿಕೊಳ್ಳುವುದು. ಶ್ರೀಕೃಷ್ಣನೂ ಸಹ ಅವರ ಮನೋರಥಗಳನ್ನೆಲ್ಲ ಪೂರ್ತಿ ಮಾಡಿದ್ದನು.

**ಶಿರಾಂಸಿ ಗರ್ವಿತಾನ್ಯೂಹುಃ ಸರ್ವಾ ನಿರವಶೇಷತಃ ।**
**ವಾಲ್ಲಭ್ಯಂ ಕೇಶಮಯಂ ವಹಂತ್ಯಃ ಚಾರುದರ್ಶನಾಃ ॥ 8 ॥**

ಇಂತಹ ಸುಂದರಿಯರಿಂದ ಕೂಡಿ ಭಗವಂತನು ಅವರೊಂದಿಗೆ ವಿಹರಿಸಿದನು. ಶ್ರೀಹರಿಯನ್ನು ತಮ್ಮ ಪತಿಯನ್ನಾಗಿ ಮಾಡಿಕೊಂಡಿದ್ದ ಅವನ ಸ್ತ್ರೀಯರೆಲ್ಲರೂ ತಮಗೆ ಸಮಾನವಾರೂ ಇಲ್ಲವೆಂದು ಬೀಗುತ್ತಿದ್ದರು.

**ಉವಾಹ ಸರ್ವಗಂಧಾಢ್ಯಂ ಸ್ವಚ್ಛಂ ವಾರಿ ಮಹೋದಧಿಃ ।**
**ತೋಯಂ ವಿಲವಣಂ ಮೃಷ್ಟಂ ವಾಸುದೇವಸ್ಯ ಶಾಸನಾತ್ ॥ 9 ॥**

ಶ್ರೀಕೃಷ್ಣನು ಈ ತನ್ನ ಪತ್ನಿಯರೊಂದಿಗೆ ಸಮುದ್ರಜಲದಲ್ಲಿ ಕ್ರೀಡೆಯಾಡುವಾಗ ಅವನ ಆದೇಶದಂತೆ ಸಮುದ್ರವು ಪರಿಮಳಯುಕ್ತವೂ ಸ್ವಚ್ಛವು, ಉಪ್ಪಿಲ್ಲದ ಮಧುರವಾದ ನೀರನ್ನು ಹೊಂದಿದ್ದಿತು.

**ಗುಲ್ಫದಘ್ನಂ ಜಾನುದಘ್ನಂ ಊರುದಘ್ನಂ ಅಥಾಪಿ ವಾ ।**
**ನಾರ್ಯಸ್ತಾಃ ಸ್ತನದಘ್ನಂ ವಾ ಜಲಂ ಸಮಭಿಕಾಂಕ್ಷಿತಮ್ ॥ 10 ॥**

ಶ್ರೀಕೃಷ್ಣ ಪತ್ನಿಯರ ಅಪೇಕ್ಷೆಯಂತೆ ಆ ಸಮುದ್ರದ ನೀರು ಕೆಲವು ಕಡೆ ಪಾದವನ್ನು ಮಾತ್ರ ಮುಳುಗುವಷ್ಟು ಕೆಲವು ಸ್ತ್ರೀಯರ ಅಪೇಕ್ಷೆಯಂತೆ ಸೊಂಟ ಮುಳುಗುವಷ್ಟು, ಕೆಲವು ಸ್ತ್ರೀಯರ ಸ್ತನಗಳು ಮುಳುಗುವಷ್ಟು ಮಾತ್ರ ನೀರಿರುತ್ತಿದ್ದವು.

**ಸಿಷಿಚುಃ ಕೇಶವಂ ಪತ್ನ್ಯೋ ಧಾರಾ ಇವ ಮಹೋದಧಿಮ್ ॥ 11 ॥**

ಜಲಧಾರೆಯು ಸಮುದ್ರವನ್ನು ಮುಳುಗಿಸುವಂತೆ ಕೃಷ್ಣನ ಭಾರ್ಯೆಯರು ಧಾರಾದ್ವಾರಾ ನೀರನ್ನು ಅವನ ಮೇಲೆ ಎರಚುತ್ತಾ ಮುಳುಗಿಸಲು ಪ್ರಯತ್ನಿಸಿದರು.

ಆದರೆ ಶ್ರೀಕೃಷ್ಣನನ್ನು ಮುಳುಗಿಸಲಾಗಲಿಲ್ಲ. ಬದಲಾಗಿ ಶ್ರೀಕೃಷ್ಣಮೇಘವು ವಿಕಸಿತಲತೆಗಳ ಮೇಲೆ ನೀರು ಸುರಿಸುವಂತೆ ಅವರ ಮೇಲೆ ನೀರೆರಚುತ್ತಿದ್ದನು.

**ಅವಲಂಬ್ಯ ಪರಾಃ ಕಂಠೇ ಹರಿಂ ಹರಿಣಲೋಚನಾಃ ।**
**ಉಪಗೂಹಸ್ವ ಮಾಂ ವೀರ ಪತಾಮೀತ್ಯಬ್ರುವನ್ ಸ್ತ್ರಿಯಃ ॥ 12 ॥**

ಕೆಲವು ಸ್ತ್ರೀಯರು ಶ್ರೀಕೃಷ್ಣನ ಆಲಿಂಗನ ಇಚ್ಛೆವುಳ್ಳವರಾಗಿ ಅವನ ಕುತ್ತಿಗೆಗೆ ಜೋತುಬಿದ್ದು ಶ್ರೀಕೃಷ್ಣ! ನಾನು ಬೀಳುತ್ತಿರುವೆ ನನ್ನನ್ನು ಆಲಿಂಗಿಸಿಕೋ, ಹಾಗಿಲ್ಲವಾದರೆ ನಾನು ನೀರಿನಲ್ಲಿ ಬಿದ್ದು ಹೋಗುವೆನು ಎನ್ನುತ್ತಿದ್ದರು.

## ಗೋಪಿಯರೊಂದಿಗೆ ಗೋಪಿನಾಥನ ಜಲವಿಹಾರ[2]

ಕೃಷ್ಣ ಪತ್ನಿಯರಲ್ಲಿ ಕೆಲವರು ಮರದಿಂದ ತಯಾರಾದ ಕ್ರೌಂಚ ಪಕ್ಷಿ –

---

2. ಶ್ರೀಕೃಷ್ಣನ ಈ ಕಾಮಕೇಳಿಯಿಂದಾಗಿ ದೈತ್ಯರು ಮೋಹಗೊಂಡರಷ್ಟೆ. ಸಜ್ಜನರಲ್ಲ. ಶ್ರೀಕೃಷ್ಣಪತ್ನಿಯರಲ್ಲಿ ರಮಾವೇಶದಿಂದಾಗಿ ಕೆಲವು ಕಾಲದಲ್ಲಿ ಮಾತ್ರ ಭಗವಂತನ ಅಂಗಸಂಗಕ್ಕೆ ಪಾತ್ರರಾಗುವವರಿರುವರು. ಅವರಲ್ಲಿ ಪಿಂಗಳಾ ಎಂಬುವಳೂ ಒಬ್ಬಳು.
**ಭಗವತ್ ಭಾರ್ಯತಾಯೋಗ್ಯಾಃ ಕಾಶ್ಚಿದಪ್ಸರಸಃ ಸ್ತ್ರಿಯಃ ।**
**ರಮಾವೇಶಾತ್ ಕದಾಚಿತ್ ಸ್ಯುಃ ತಾಸ್ವೇಕಾ ಪಿಂಗಲಾಽಭವತ್ ॥**
ಇವಳೇ ಕುಬ್ಜೆಯಾಗಿ ಗಂಧ ನೀಡಿ ಅವನ ಅಂಗಸಂಗ ಪಡೆದಳು.
ಬೇರೆ ಸ್ತ್ರೀಯರು ಯಾರಾದರೂ ಹರಿಯು ನನ್ನ ಗಂಡ ಎಂದು ಮನಸ್ಸಿನಲ್ಲಿ ತಂದರೂ ಮಹಾದೋಷ ಪ್ರಾಪ್ತವಾಗುತ್ತದೆ.
**ತದನ್ಯಾಸಾಂ ಮಹಾದೋಷಃ ಭಗವತ್ ಭರ್ತೃತಾ ಸ್ಮೃತೌ** ॥ – *ಭಾ.ತಾ.*
ಶ್ರೀಹರಿಗೆ ಈ ಸ್ತ್ರೀಯರಿಂದ ಮಾತ್ರ ಲಕ್ಷ್ಮೀದೇವಿಯಿಂದಲೂ ಏನೂ ಆಗಬೇಕಿಲ್ಲ. ಹರಿಯು ರಮಾವೇಶವಿಲ್ಲದ ವಸ್ತುವನ್ನು ಸ್ವೀಕರಿಸಲಾರನು. ಅಂಗಸಂಗವಾಗಬೇಕಾದರೆ ರಮಾವೇಶವಿರಲೇಬೇಕು. ಹೀಗಾಗಿ ಕೃಷ್ಣನು ಅವರೊಂದಿಗೆ ಬೆರೆತನು. ರಮೆಯಲ್ಲಿ ರಮಿಸುವವನಾದರೂ ಅವಳಲ್ಲಿ ಸ್ತ್ರೀರೂಪ ಇಟ್ಟೆ ರಮಿಸುವನು.
**ಋತೇ ರಮಾಂ ಮಮಾಂಗ ಸಂಗಯೋಗ್ಯಾಂಗ ನಾ ನಾಸ್ತಿ ಸುರಾಲಯೇಽಪಿ** ॥ – *ತಾ.ನಿ. 11*
**ರಮಯಾ ರಮಮಾಣೋಽಪಿ ತತ್ಥೇನೈವ ಸ್ತ್ರಿಯಾತ್ಮನಾ ರಮತೇ ।**
**ನಾನ್ಯತಃ ಕ್ವಾಪಿ ರತಿಃ ವಿಷ್ಣೋಃ ಪರಾತ್ಮನಃ ॥**
ಈ ಹದಿನಾರು ಸಾವಿರ ಸ್ತ್ರೀಯರೂ ಅಗ್ನಿಪುತ್ರರಾಗಿದ್ದು ತಪಸ್ಸು ಮಾಡಿ ವಾಯುದೇವನಿಂದ ಸ್ತ್ರೀಯರಾದರು. ಹಾವಭಾವಕ್ಕಾಗಿ ಲಕ್ಷ್ಮೀದೇವಿಯನ್ನೂ ಉಪಾಸನೆ ಮಾಡಿ ಅವಳ ಹಾವಭಾವ ಪಡೆದರು.
**ಯೋಷಿತ್ತನುಂ ತಾಸಾಮಿಚ್ಛತೀನಾಂ ಸಮೀರಃ ।**
**ಅದಾತ್ ವರಂ** ॥ – ತಾ.ನಿ.
ಇವರೆಲ್ಲರೂ ಬದರಿಗೆ ಹೋಗಿ ನರನಾರಾಯಣರನ್ನು ಸೇವಿಸುತ್ತಿದ್ದರು. ಘೋರ ತಪಸ್ಸನ್ನು ಮಾಡಿದರು. ಲಕ್ಷ್ಮೀದೇವಿಯ ಆವೇಶವುಂಟಾಯಿತು. ಇದರಿಂದಾಗ ಆಜಾನಜದೇವತೆಗಳಿಕ್ಕಿಂತಲೂ ಅಧಿಕರಾದರು.
ಹೀಗೆ ರಮಾವೇಶದಿಂದಾಗಿಯೇ ಕೃಷ್ಣಭಾರ್ಯೆರಾಗಿ ಅವನೊಂದಿಗೆ ಕ್ರೀಡಿಸಿದರು.

ಮಯೂರ – ಸರ್ಪಗಳ ಆಕಾರವುಳ್ಳ ದೋಣಿಗಳಲ್ಲಿ ಕುಳಿತು ವಿಹರಿಸುತ್ತಿದ್ದರು. ಮತ್ತೆ ಕೆಲವರು ಮರದ ಮಕರ, ಮೀನು ಮೊದಲಾದ ಆಕಾರದ ದೋಣಿವಿಹಾರ ಸಾಗಿಸಿದ್ದರು.

ಕೆಲವರಂತು ಕುಂಭಗಳ ಆಶ್ರಯ ಪಡೆದು ಈಜುವವರಂತೆ ತಮ್ಮ ಕುಂಭ ಸ್ತನಗಳನ್ನು ಆಶ್ರಯಿಸಿ ಈಜುತ್ತಿದ್ದರು.

## ಕೃಷ್ಣ–ರುಕ್ಮಿಣೀ ವಿಹಾರ

**ರರಾಮಿ ಸಹ ರುಕ್ಮಿಣ್ಯಾ ಜಲೇ ತಸ್ಮಿನ್ ಮುದಾ ಯತಃ ।**
**ಯೇನ್ಯೇವ ಕಾರ್ಯಯೋಗೇನ ರಮತೇ ಅಮರಸತ್ತಮಃ ॥ 13 ॥**

ದೇವದೇವೋತ್ತಮನಾದ ಶ್ರೀಕೃಷ್ಣನು ರುಕ್ಮಿಣಿಯೊಂದಿಗೆ ಸಂತೋಷದಿಂದ ಜಲಕ್ರೀಡೆಯಾಡುತ್ತಿದ್ದನು. ಶ್ರೀಕೃಷ್ಣನು ಯಾವ ಆಟವನ್ನು ಆಡುತ್ತಿದ್ದನೋ ಅದೇ ಆಟವನ್ನು ಅವನ ಪತ್ನಿಯರೂ ಆಡುತ್ತಿದ್ದರು. ಶ್ರೀಕೃಷ್ಣನು ಯಾವ ತನ್ನ ಭಾರ್ಯೆಯಲ್ಲಿ ಯಾವ ರೀತಿ ಭಾವನೆಯಿರುತ್ತಿತ್ತೋ ಅದನ್ನು ತಿಳಿದು ಅದರಂತೆಯೇ ಅವಳನ್ನು ಸಂತೋಷಪಡಿಸಿ ಅವಳನ್ನು ತನ್ನ ವಶಕ್ಕೆ ತಂದುಕೊಳ್ಳುತ್ತಿದ್ದನು.

**ಯಸ್ಯಾ ಯಸ್ಯಾಸ್ತು ಯೋ ಭಾವಃ ತಾಂ ತಾಂ ತೇನೈವ ಕೇಶವಃ ।**
**ಅನುಪ್ರವಿಶ್ಯ ಭಾವಜ್ಞೋ ನಿನಾಯ ಆತ್ಮವಶಂ ವಶೀ ॥ 14 ॥**

ಶ್ರೀಕೃಷ್ಣನೂ ಸಹ ಅವರವರ ಭಾವಕ್ಕೆ ಮಣಿದವನಂತೆ ತನ್ನನ್ನು ಅವರ ವಶನಾಗಿದ್ದೇನೆಂದು ತೋರಿಸಿದ.

ಶ್ರೀಕೃಷ್ಣನ ಪತ್ನಿಯರಲ್ಲಿ ಕೆಲವರು ರಾಜಪುತ್ರಿಯರು ಗಂಧರ್ವರು ಮೊದಲಾದವರಿದ್ದರು. ಶ್ರೀಕೃಷ್ಣನು ಅವರವರ ಗೋತ್ರ ವಂಶಗಳಿಗೆ ತಕ್ಕಂತೆ ಅವರಲ್ಲಿ ವ್ಯವಹರಿಸುತ್ತಿದ್ದನು. ಇದರಿಂದಾಗಿ ಪತ್ನಿಯರಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಶ್ರೀಕೃಷ್ಣನು ನಮ್ಮ ಜಾತಿಯವನೆ ನಮ್ಮ ಗೋತ್ರದವನೆ ಎಂದು ಭಾವನೆ ಬರುವಂತಾಯಿತು.

ಯಾದವರ ಗುಂಪು ಒಂದು ಪ್ರತ್ಯೇಕ ಪ್ರತ್ಯೇಕವಾಗಿಯೇ ಇತ್ತು ಅವರೆಲ್ಲರೂ ತಮ್ಮ ಸ್ತ್ರೀಯರೊಂದಿಗೆ ಜಲವಿಹಾರ ನಡೆಸಿದ್ದರು. ಯಾದವರೆಲ್ಲರೂ ಸಮುದ್ರಕ್ಕೆ ಅಲಂಕಾರಪ್ರಾಯರಾಗಿದ್ದರು. ಸ್ತ್ರೀಯರೂ ಸಹ ನೃತ್ಯ ಗೀತಾದಿಗಳಲ್ಲಿ

ಪರಿಣತರೇ ಆಗಿದ್ದರು. ಅವರ ಹಾವಭಾವಾದಿಗಳನ್ನು ನೋಡಿ ಯಾದವರು ಅವರ ವಶವಾಗಿ ಬಿಟ್ಟರು.

**ಪಂಚಚೂಡಾಂ ತತಃ ಕೃಷ್ಣಃ ಕೌಬೇರ್ಯಶ್ಚ ವರಾಪ್ಸರಾಃ ।**
**ಮಾಹೇಂದ್ರೀಶ್ಚಾನಯಾಮಾಸ ವಿಶ್ವರೂಪೇಣ ಹೇತುನಾ ॥ 15 ॥**

ಶ್ರೀಕೃಷ್ಣನು ಪಂಚಚೂಡಾ ಎಂಬ ಅಪ್ಸರೆ ಹಾಗೂ ಕುಬೇರನ ಸಮೀಪದಲ್ಲಿದ್ದ ದೇವೇಂದ್ರನ ಆಸರೆಯಲ್ಲಿದ್ದ ಅಪ್ಸರೆಯರನ್ನೂ ಸ್ಮರಿಸಿದ ಕೂಡಲೇ ಅಪ್ಸರೆಯರೆಲ್ಲ ಕೃಷ್ಣನ ಬಳಿ ಪ್ರತ್ಯಕ್ಷರಾಗಿ ಅವನ ಪಾದಕ್ಕೆರಗಿದರು. ಅವರನ್ನು ಮೇಲೆತ್ತಿ ಹೀಗೆಂದನು, ಸುದತಿಯರೇ! ನೀವೆಲ್ಲರೂ ಯಾದವರೊಂದಿಗೆ ಇರುವ ಭೀಮವಂಶೀಯ ಸ್ತ್ರೀಯರಲ್ಲಿ ಪ್ರವೇಶಿಸಿ, ನನ್ನ ಯಾದವರೊಂದಿಗೆ ಇದ್ದು ಸ್ವರ್ಗೀಯ ಸುಖವನ್ನು ನೀಡಿರಿ.

ನೀವು ನೃತ್ಯ ಗೀತಾದಿಗಳಿಂದ ಯಾದವರನ್ನು ಹೇಗೆ ಸಂತೋಷ ನೀಡಬೇಕು, ಹಾಗೆ ಅವರನ್ನು ಏಕಾಂತದಲ್ಲಿ ಸೇವಿಸುವ ಕಲೆಯನ್ನು, ವಿಧವಿಧ ವಾದ್ಯಗಳನ್ನು ನುಡಿಸುವ ಜಾಣ್ಮೆಯನ್ನು ನಮ್ಮ ಯಾದವ ಸ್ತ್ರೀಯರಿಗೆ ಕಲಿಸಿ ಕೊಡಿರಿ. ಈ ಯಾದವರಿಗೆ ನೀವು ಮಾಡುವ ಸೇವಾದಿಗಳು ನನಗೆ ಮಾಡಿದಂತೆಯೇ ಇವರೆಲ್ಲರೂ ನನ್ನ ಪ್ರತಿಬಿಂಬದಂತಿರುವವರು.

ಅಪ್ಸರೆಯರೆಲ್ಲ ಆದೇಶ ಶಿರಸಾಮಾನ್ಯ ಮಾಡಿ ಕ್ರೀಡೆಯಲ್ಲಿ ತೊಡಗಿರುವ ಯಾದವರ ಸ್ತ್ರೀಯಲ್ಲಿ ಸೇರಿಕೊಂಡರು. ಸೇರುತ್ತಿದ್ದಂತೆಯೇ ಮಹಾಸಾಗರವು ದೇದೀಪ್ಯಮಾನವಾಯಿತು. ಘನಮೇಘದಲ್ಲಿ ಕಾಣುವ ಮಿಂಚುಗಳಂತೆ ಸ್ತ್ರೀಯರು ತೋರಿದರು.

ಸ್ವರ್ಗದಲ್ಲಿ ಅಪ್ಸರೆಯರು ಅಭಿನಯಿಸುವಂತೆ ನೀರಿನಲ್ಲಿಯೇ ಇವರ ಪ್ರವೇಶದಿಂದಾಗಿ ಅಭಿನಯ ಮಾಡತೊಡಗಿದರು. ಗೀತೆಗಳನ್ನು ಹಾಡಿ ವಾದ್ಯಗಳನ್ನು ಬಾರಿಸಿದರು. ಅವರು ನಾನಾ ವಿಧ ಕ್ರೀಡೆಗಳು, ಹಾಸ್ಯರಸ–ಯುಕ್ತ ಹಾವಭಾವಗಳನ್ನು ತೋರಿಸುತ್ತ ಯಾದವರನ್ನು ಆಕರ್ಷಿಸಿದರು. ಅಪ್ಸರೆಯರು ಯಾದವರನ್ನು ಮೇಲೆತ್ತಿಕೊಂಡು ಅಲ್ಲ ಅವರೊಂದಿಗೆ ಕ್ರೀಡಿಸಿದರು. ಶ್ರೀಕೃಷ್ಣನೂ ಸಹ ಆಕಾಶದಲ್ಲಿ ತನ್ನ ಪತ್ನಿಯರೊಂದಿಗೆ ವಿಹರಿಸಿದನು.

**ಕೇಚಿತ್ ರೈವತಕಂ ಗತ್ವಾ ಪುನರಾಯಾಂತಿ ಭಾರತ ।**
**ಗೃಹಾನ್ಯನ್ಯೇ ವನಾನ್ಯನ್ಯೇ ಕಾಂಕ್ಷಿತಾನ್ಯರಿಮರ್ದನ ॥ 16 ॥**

ಶತ್ರು ಸಂಹಾರಕ ಜನಮೇಜಯನೇ! ಯದುಕುಮಾರರಲ್ಲಿ ಕೆಲವರು ತಮ್ಮ ಕ್ರೀಡೆಗಾಗಿ ರೈವತಕ ಗಿರಿಗೆ ವಿಹರಿಸಿ ಬಂದರು. ಮತ್ತೆ ಕೆಲವರು ದ್ವಾರಾವತಿಯಲ್ಲಿದ್ದ ತಮ್ಮ ಮನೆಗೆ ಹೋಗಿ ವಿಹರಿಸಿದರು. ತಮಗೆ ಇಷ್ಟವಾದ ಉದ್ಯಾನದಿಗಳಲ್ಲಿ ವಿಹರಿಸಿದವರು ಕೆಲವರು.

**ಅಪೇಯಃ ಪೇಯಸಲಿಲಃ ಸಾಗರಶ್ಚಾಭವತ್ ತದಾ ।**
**ಆಜ್ಞಯಾ ಲೋಕನಾಥಸ್ಯ ವಿಷ್ಣೋರಮಿತ ತೇಜಸಃ ॥ 17 ॥**
**ಭಕ್ಷ್ಯ ಭೋಜ್ಯಾನಿ ಪೇಯಾನಿ ಚೋಷ್ಯಂ ಲೇಹ್ಯಂ ತಥೈವ ಚ ।**
**ಬಹುಪ್ರಕಾರಂ ಮನಸಾ ಧ್ಯಾತೇ ತೇಷಾಂ ಭವತ್ಯುತ ॥ 18 ॥**

ಮುಕ್ತನಾಯಕನಾದ ಶ್ರೀಕೃಷ್ಣನ ಆದೇಶದಂತೆ ಉಪ್ಪಿನಿಂದಾಗಿ ಅಪೇಯವಾದ ಸಾಗರಜಲವು ಕುಡಿಯುವ ಮಧುರಜಲವಾಗಿ ಪರಿಣಮಿಸಿತು. ಅನ್ಯಥಾ ಕರ್ತುಂ ಸಮರ್ಥನಿಗೆ ಇದೇನು ಮಹಾವಿಷಯ?[3]

ಅವನ ಸಾಮರ್ಥ್ಯದಿಂದಾಗಿ ಕಮಲಲೋಚನೆಯರೆಲ್ಲ ನೀರಿನಲ್ಲಿಯೂ ನೆಲದ ಮೇಲೆ ನಡೆವಂತೆ ನಡೆದು ಹೋದರು.

ಯಾದವರು ಮನಸ್ಸಿನಲ್ಲಿ ಸಂಕಲ್ಪ ಮಾತ್ರದಿಂದಲೇ ಭಕ್ಷ್ಯ ಭೋಜ್ಯ ಲೇಹ್ಯ ಪೇಯಗಳು ಎದುರಿಗೆ ಇರುತ್ತಿದ್ದವು.

ಯಾವಾಗಲೂ ಅಮ್ಲಾನ ಮಾಲೆಗಳನ್ನು ಧರಿಸಿದ್ದ ಅಪ್ಸರೆಯರ ಪ್ರವೇಶದಿಂದಾಗಿ ಕ್ರೀಡಾಸ್ತ್ರೀಯರು ಸ್ವರ್ಗದಲ್ಲಿ ಅಪ್ಸರೆಯರು ಆನಂದಗೊಳಿಸುವಂತೆ ಯಾದವರನ್ನು ಆನಂದಪಡಿಸಿದರು.

ಅಂಧಕ –ವೃಷ್ಣಿ ವಂಶದ ಯಾದವ ವೀರರು ಸಂಜೆ ಸ್ನಾನ ಮಾಡಿ ವಿವಿಧ ಗಂಧಗಳನ್ನು ಲೇಪಿಸಿಕೊಂಡು ಮನೆಗಳಂತೆಯೇ ಇದ್ದ ದೋಣಿಗಳಲ್ಲಿ ವಿಹರಿಸಿದರು. ಮನೆಗಳಲ್ಲಿ ಕೆಲವು ಉದ್ದವಾಗಿದ್ದರೆ ಮತ್ತೆ ಕೆಲವು ಚಚ್ಚೌಕ – ಗೋಲಾಕಾರ – ಸ್ವಸ್ತಿಕಾಕೃತಿಯಲ್ಲಿದ್ದವು. ಇದೆಲ್ಲ ವಿಶ್ವಕರ್ಮನ ಚಮತ್ಕಾರ.

ಮನೆಗಳು ಕೈಲಾಸದಂತೆಯೂ –ಮೇರು – ಮಂದರಗಳಂತೆ ಸಂಕಲ್ಪದಂತೆ

---

3. ದುರ್ವಾಸರು ಸಿದ್ಧವಾದ ಅನ್ನ ನನಗೆ ಬೇಡ. ಮಾಡಿ ಹಾಕುತ್ತೇವೆ ಎಂದರೆ ಕಾಯಲು ಸಾಧ್ಯವಿಲ್ಲವೆಂದಾಗ ಶ್ರೀರಾಮನು ತನ್ನ ನಾಲ್ಕು ಬೆರಳುಗಳಿಂದ ನಾಲ್ಕು ವಿಧ ಭಕ್ಷ್ಯ ಭೋಜ್ಯಾದಿಗಳನ್ನು ತಕ್ಷಣವೇ ಸೃಷ್ಟಿಸಿ ಬಡಿಸಿ ತೃಪ್ತಿಪಡಿಸಿದ. **ಸ್ವಹಸ್ತಾತ್ – ಅನ್ನಂ ಚತುರ್ಗುಣಮದಾದ್ ಅಮೃತೋಪಮಾನಂ ।** – *ಹಾ.ಸ.–9/50*

ಆಕಾರ ತಾಳುತ್ತಿದ್ದವು. ಕೆಲವು ಪಕ್ಷಿಗಳಂತೆ ಗಗನಕ್ಕೆ ಹಾರುತ್ತಾ ಹೋಗುತ್ತಿದ್ದು. ಕೆಲವು ಬಾರಿ ತೋಳ ಮೊದಲಾದ ರೂಪವನ್ನು ಹೊಂದಿರುತ್ತಿತ್ತು.

ಈ ಕ್ರೀಡಾ ಗೃಹಗಳಲ್ಲಿ ವೈಡೂರ್ಯಮಣಿ ನಿರ್ಮಿತ ತೋರಣಗಳು, ಮಣಿಮಯ ಶಯನಗಳು ಮರಕತಾದಿಗಳಿಂದ ಶೋಭಿಸುತ್ತಿದ್ದವು. ಕ್ರೀಡಾಗೃಹಗಳೂ ಕೆಲವು ಗರುಡಾಕಾರ – ಕ್ರೌಂಚಾಕಾರ – ಶುಕಾಕಾರ ಗಜಾಕಾರವಾಗಿದ್ದು ಸುವರ್ಣಮಯವಾಗಿದ್ದವು.

ಅನೇಕ ವಿಧ ಹಡಗು, ದೋಣಿ ಮೊದಲಾದವುಗಳಿಂದ ಸಾಗರವು ಸುಂದರವಾಗಿತ್ತು. ಈ ಜಲಯಾನಗಳನ್ನು ದೇವಶಿಲ್ಪಿಯು ಸ್ವರ್ಗದಲ್ಲಿದ್ದಂತೆ ತಯಾರಿಸಿದ್ದನು. ನೌಕೆಯಲ್ಲಿದ್ದ ಉದ್ಯಾನಗಳದ್ದು ಕೋಗಿಲೆ ಮೊದಲಾದವು ಸುಮಧುರ ಆಲಾಪ ಮಾಡುತ್ತಿದ್ದವು. ನವಿಲುಗಳ ಮಯೂರ ನೃತ್ಯ ಅವುಗಳ ಕೇಕಾಸ್ವರಯುಕ್ತವಾಗಿದ್ದಿತು. ಶೋಭಾಯಮಾನವಾದ ಪತಾಕೆಯು ಹಾರುತ್ತಿತ್ತು. ಅದಕ್ಕೆ ಪುಷ್ಪಮಾಲೆ ಹಾಕಿ ಅಲಂಕರಿಸಿದ್ದರು. ಈ ಪುಷ್ಪಗಳಿಗೆ ದುಂಬಿಗಳು ಕುಳಿತು ಇಂಪಾಗಿ ಧ್ವನಿ ಮಾಡುತ್ತಿದ್ದವು.

**ನಾರಾಯಣಾಜ್ಞಯಾ ವೃಕ್ಷಾಃ ಪುಷ್ಪಾಣಿ ಮುಮುಚುಃ ಭೃಶಮ್ ।**
**ಋತವಃ ಚಾರುರೂಪಾಣಿ ವಿಹಾಯಸಿ ಗತಾಸ್ತಥಾ ॥ 19 ॥**

**ವವೌ ಮನೋಹರೋ ವಾತೋ ರತಿಖೇದ ಹರಃ ಸುಖಃ ।**
**ರಜೋಭಿಃ ಸರ್ವಪುಷ್ಪಾಣಾಂ ಪೃಕ್ತಃ ಚಂದನಶೈತ್ಯಭೃತ್ ॥ 20 ॥**

### ಯಾದವರ ಸ್ವರ್ಗೀಯ ಸುಖ

ಶ್ರೀಕೃಷ್ಣನ ಆಜ್ಞೆಯಂತೆ ವೃಕ್ಷ ಹಾಗೂ ವಸಂತಾದಿ ಋತುಗಳ ಅಭಿಮಾನಿಗಳು ಗಗನದಲ್ಲಿ ನಿಂತು ಸುಂದರವಾದ ಪುಷ್ಪಗಳನ್ನು ಯಾದವರ ಮೇಲೆ ಸುರಿಸಿದವು.

ಸುಖಕರವಾದ–ಸುಖಸ್ಪರ್ಶದ ಗಾಳಿಯು ಬೀಸುತ್ತಾ ಯಾದವರ ರತಿಶ್ರಮವನ್ನು ಪರಿಹರಿಸುತ್ತಿತ್ತು. ಗಾಳಿಯು ಸಮಸ್ತ ಕುಸುಮಗಳ ಪರಿಮಳ ಹಾಗೂ ತಂಪಾಗಿತ್ತು.

ಚಕ್ರಪಾಣಿಯ ಪ್ರಭಾವದಿಂದಾಗಿ ಯಾದವರಿಗೆ ಹಸಿವು–ಬಾಯಾರಿಕೆ ದುಃಖ ಶೋಕಗಳಾಗಲೀ, ಶ್ರಮವಾಗಲಿ ಪೀಡಿಸುತ್ತಿರಲಿಲ್ಲ.

**ಬಹುಯೋಜನ ವಿಸ್ತೀರ್ಣಂ ಸಮುದ್ರಂ ಸಲಿಲಾಶಯಮ್ ।**
**ರುದ್ಧಾಂ ಚಿಕ್ರೀಡುಮಿಂದ್ರಾಭಾ ಭೌಮಾಃ ಕೃಷ್ಣಾಭಿರಕ್ಷಿತಾಃ ॥ 21 ॥**

ಕೃಷ್ಣದೇವನ ಅನುಗ್ರಹಕ್ಕೆ ಪೂರ್ಣಪಾತ್ರರಾದ ಯಾದವರು ಇಂದ್ರನ ಸಾಮರ್ಥ್ಯೋಪೇತರಾಗಿದ್ದು ಬಹುಯೋಜನ ವಿಸ್ತೀರ್ಣವಾದ ಸಮುದ್ರವನ್ನೇ ತಡೆದು ನಿಲ್ಲುವಂತೆ ಮಾಡಿ ವಿಹರಿಸುತ್ತಿದ್ದರು. ಶ್ರೀಕೃಷ್ಣ ಸೇವಾಸಕ್ತನಾದ ದೇವಬಡಗಿಯು ಶ್ರೀಕೃಷ್ಣನ ದೊಡ್ಡ ಪರಿವಾರಕ್ಕೆ ಸಾಕಾಗುವಷ್ಟು ದೊಡ್ಡ ನೌಕೆಯನ್ನು ನಿರ್ಮಿಸಿ, ಅದರಲ್ಲಿ ಮೂರ್ಲೋಕದಲ್ಲಿ ಸರ್ವಶ್ರೇಷ್ಠ ರತ್ನಗಳವೆಯೊ ಅವೆಲ್ಲವನ್ನೂ ನೌಕೆಯಲ್ಲಿರಿಸಿದ್ದನು.

ನೌಕೆಯಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಒಬ್ಬೊಬ್ಬ ಪತ್ನಿಗೆ ಒಂದೊಂದು ನಿವಾಸಗಳದ್ದವು. ಅವೆಲ್ಲವೂ ಚಿತ್ರವಿಚಿತ್ರ ರತ್ನ ವೈಢೂರ್ಯಗಳಿಂದ ಅಲಂಕೃತವಾಗಿತ್ತು. ಸಮಸ್ತ ಋತುಗಳಲ್ಲಿರಬಹುದಾದ ಪುಷ್ಪಗಳಿಂದ ಸುವಾಸಿತವಾಗಿತ್ತು. ಇಂತಹ ಜಲಕ್ರೀಡೆಯನ್ನಾಡಿದರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ಶ್ರೀಕೃಷ್ಣನ ಜಲಕ್ರೀಡಾ ವಿಹಾರವೆಂಬಲ್ಲಿ
ಎಂಬತ್ತೆಂಟನೆಯ ಅಧ್ಯಾಯ ಸಮಾಪ್ತಿ

# ಅಥ ನವಾಶೀತಿತಮೋಽಧ್ಯಾಯಃ

**ರೇಮೆ ಬಲಶ್ಚಂದನ ಪಂಕದಿಗ್ಧಃ ಕಾದಂಬರೀ ಪಾನಕಲಃ ಪೃಥುಶ್ರೀಃ ।**
**ರಕ್ತೇಕ್ಷಣೋ ರೇವತಿ ಮಾಶ್ರಯಿತ್ವಾ ಪ್ರಲಂಬ ಬಾಹುಃ**
**ಲಲಿತಪ್ರಯಾತಃ ॥ 1 ॥**

ವೈಶಂಪಾಯನರು, ರಾಜನೇ! ಬಲರಾಮ-ಶ್ರೀಕೃಷ್ಣರ ಜಲಕೇಳಿಯನ್ನು ವರ್ಣಿಸುವೆನು ಕೇಳು ಎಂದು ಮುಂದುವರಿಸಿದರು.

ಬಲದೇವನು ಸುಗಂಧವನ್ನು ಮೈಯಿಗೆಲ್ಲ ಪೂಸಿಕೊಂಡಿದ್ದನು *[ಚಂದನ ಪಂಕದಿಗ್ಧಃ]* ಕಾದಂಬರೀ ಎಂಬ ಪಾನೀಯವನ್ನು ಪಾನ ಮಾಡಿದ್ದನು.[1] *[ಕಾದಂಬರೀಪಾನಕಲಃ]*

---

1. **ಕಾದಂಬರೀಪಾನಕಲಃ** ಶುಕ್ಲಕೇಶವೆಂಬ ಶ್ರೀಹರಿಯ ಆವೇಶವುಳ್ಳವನು. ಶೇಷನ ಅವತಾರ, ಸಾವಿರ ತಲೆವುಳ್ಳವನು, ವನಮಾಲೆ ಧರಿಸಿರವನು, ನೀಲವಸ್ತ್ರಧಾರೀ, ಏಕಕುಂಡಲವುಳ್ಳವನು. ಎಡಗೈಯಲ್ಲಿ ನೇಗಿಲು, ಬಲಗೈ ಸೌನಂದವೆಂಬ ಒನಕೆಯನ್ನು ಧರಿಸಿರುವನು.
**ದಧಾನೋ ಹಲ-ಸೌನಂದೌ ಶ್ವೇತವರ್ಣಃ ಕೃತಾಂಜಲಿಃ ।**
**ಸಹಸ್ರಮೂರ್ಧಾಽ ದ್ವಿತೀಯ ಕರ್ಣಭೂಷಃ ಪ್ರಿಯಾಯುತಃ ।**
**ವನಮಾಲೀ ನೀಲವಾಸಾಃ** ॥ – *ತಂ. ಸಾ. 4/82*
**ಬಲರಾಮ** : ಬಲರಾಮನ ನಿಯತ ಪತ್ನಿ ರೇವತಪುತ್ರೀ ರೇವತೀ. ಇವಳು ನಿಯತ ಪತ್ನಿಯೆಂದು ಹರಿವಂಶದಲ್ಲಿದೆ. ಇವಳಲ್ಲದೆ ಬಲರಾಮನಿಗೆ ಮೂಲರೂಪದಲ್ಲಿ ಪತ್ನಿಯಾಗಿದ್ದ ವಾರುಣೀದೇವಿಯೂ ಇದ್ದಳು.
**ಭಾರ್ಯಾಽಸ್ಯಾಗಾದ್ ವಾರುಣೀ ನಾಮ ಪೂರ್ವಾ** ॥ –ತಾ.ನಿ. *16/10*
ಇವಳಲ್ಲದೆ ಕಾಂತಿ ಎಂಬ ಸೋಮನ ಪತ್ನಿಯೂ ಬಲರಾಮನ ಪತ್ನಿಯು. ವಾದಿರಾಜರು – **ಸೋಮಸ್ಯಭಾರ್ಯಾ ಕಾಂತಿರನ್ಯಾಪತ್ನೀ ।**
ಹರಿವಂಶದಲ್ಲಿ '**ಕಾಂತಿಶ್ಚ ಶಶಿನಃ ಪ್ರಿಯಾ**" ಉತ್ತಮ ಸ್ತ್ರೀಯರಿಗೆ ತಮ್ಮ ಪತಿಗಿಂತ

**ಬಲರಾಮನ ಕಣ್ಣುಗಳು ಕೆಂಪಾಗಿದ್ದವು. ನೀಳವಾದ ಬಾಹುಗಳು. ರೇವತಿ ಭುಜವನ್ನು ಹಿಡಿದು ನಿಧಾನವಾಗಿ ಚಲಿಸುತ್ತಿದ್ದನು.**

---

ಉತ್ತಮರ ಸಂಗದಿಂದ ದೋಷವಿರುವುದಿಲ್ಲ. ಹರಿವಂಶದಲ್ಲಿ ಚಂದ್ರನ ಕಾಂತಿದೇವಿಯು ನಾನು ಚಂದ್ರನಿಗಿಂತ ಉತ್ತಮನಾದ ನಿನ್ನಲ್ಲಿ ಅನುರಾಗದಿಂದ ಬಂದಿರುವೆನು.

**ಅಹಂ ಚಂದ್ರಾದಪಿ ಗುರುಂ ಸಹಸ್ರಶಿರಸಂ ಪ್ರಭುಂ ।**

**ಸ್ವೈಃ ಗುಣೈ ರನುರಕ್ತಾ ತ್ವಾಂ ಯಥೈವ ಮದಿರಾ ತಥಾ ॥**

ಎನ್ನುತ್ತಾಳೆ.

ಇವನ ಪತ್ನಿಯರು : ವಾರುಣಿಯೇ ರಮಾವೇಶಯುಕ್ತ ಶ್ರೀಯೆಂಬ ರೂಪದಿಂದ ಬಲರಾಮನ ವಿವಾಹವಾದಳು.

**"ಶ್ರೀರಿತ್ಯಾಖ್ಯಂ ಸೇಂದಿರಾವೇಶಮಗ್ರ್ಯಮ್"** –ತಾ.ನಿ.16/11

ಈ ಇಬ್ಬರು ಕಾಂತಿಯರಲ್ಲಿ ಮೊದಲನೆಯ ಕಾಂತಿಯು ಅತಿ ಸುಂದರಿಯು [ಪೂರ್ವತನಾ ಸುರೂಪಾ] ವಾರುಣಿಯು ಬಲರಾಮನ ಎದೆಯಲ್ಲಿ ಶೋಭಿಸಿದಳು. ವಿಷ್ಣುವಿನ ಎದೆಯಲ್ಲಿರುವ ಲಕ್ಷ್ಮೀದೇವಿಯೇ ಶುಕ್ಲಕೇಶನ ಸೇವೆಗಾಗಿ ವಾರುಣಿಯಲ್ಲಿದ್ದು ಬಲರಾಮನ ಎದೆ ಸೇರಿದಳು. – *ಹರಿವಂಶ*

**ಶ್ರೀಶ್ಚ ಪದ್ಮಾಲಯಾ ದೇವೀ ನಿಧೇಯಾ ವೈಷ್ಣವೋರಸಿ ।**

**ರೌಹಿಣೇಯೋರಸಿ ಶುಭಾ ಮಾಲೇವ ಅಮಲತಾಂ ಗತಾ ॥**

ಇನ್ನೊಬ್ಬ ಪತ್ನೀ ಪೇಯರೂಪಳಾದ ಕಾದಂಬರೀ. ಶೇಷಪತ್ನಿ ವಾರುಣಿಯು ವಾರುಣೀ ಎಂಬ ಪೇಯಾಭಿಮಾನಿನಿಯು.

**ತಸ್ಯಾಃ ವಾರುಣ್ಯಾಃ ಪ್ರತಿಮಾ ಪೇಯರೂಪಾ ಕಾದಂಬರೀ ವಾರುಣೀಂ ತಾಂ ಪಪೌ ।**
–ತಾ.ನಿ. 16/12

ವರುಣನಿಂದ ಕಳುಹಿಸಲ್ಪಟ್ಟವಳಾದ್ದರಿಂದ 'ವಾರುಣೀ' ಎಂದು ಭಾಗವತ ಹೇಳಿದೆ.

**ವರುಣಪ್ರೇಷಿತಾ ದೇವೀ ವಾರುಣೀ ವೃಕ್ಷಕೋಟರಾತ್ ।**

**ಪತಂತೀ ತದ್ವನಂ ಸರ್ವಂ ಸೌರಭೇಣಾಧ್ಯವಾಸಯತ್ ॥** – *ಭಾಗ 10/90/19*

ಕಾದಂಬರೀಯೆಂದರೆ ಕದಂಬವೃಕ್ಷ ಈಚಲು ಮರದ ಹಣ್ಣಿನಿಂದ ತಯಾರಾದ ಒಂದು ಮದ್ಯ ವಿಶೇಷ. ಇವಳು ಕದಂಬ ಕೋಟರದಿಂದ ಹರಿದು ಬಂದವಳಾದ್ದರಿಂದ ಕಾದಂಬರೀಯೆಂದು ಹರಿವಂಶ ಹೇಳಿದೆ.

**ಕದಂಬಕೊಟರಾಜ್ಜಾತಾ ನಾಮ್ನಾಕಾದಂಬರೀತಿ ಸಾ ।**

**ವಾರುಣೀ ರೂಪಿಣೀ ತತ್ರ ದೇವಾನುಮಮೃತಾರಣೀ ॥**

ಕ್ಷೀರಸಮುದ್ರಮಥನ ಕಾಲದಲ್ಲಿ ವರುಣನಿಂದ ಹುಟ್ಟಿದವಳು. ಇವಳು ವಾರುಣೀ. ವರುಣನ ಪುತ್ರಿ ವಾರುಣಿಯೆ ಈ ಪೇಯಕ್ಕೆ ಅಭಿಮಾನಿಯಾದ್ದರಿಂದಲೂ 'ವಾರುಣೀ' ಎಂದು ಪೇಯಕ್ಕೆ ಹೆಸರು. ಈ ವಾರುಣೀ ಬಲರಾಮನಿಗೆ ಇಷ್ಟವಾದ್ದರಿಂದ ಕಾದಂಬರಿ ಶಬ್ದ ವಾಚ್ಯವೆನಿಸಿದೆ. **ಕುತ್ತಿತಂಚತದ್ ಅಂಬರಂ ಚ ನೀಲಾಂಬರು ಬಲರಾಮಃ ಕದಂಬರಃ, ತಸ್ಯೇಯಂ ಪ್ರಿಯೇತಿ ಕಾದಂಬರಿ ।**

ಈ ಪೇಯ ಕುಡಿದಾಗ ದೇವತೆಗಳೆಲ್ಲರೂ ಪುಷ್ಪವೃಷ್ಟಿ ಮಾಡಿದ್ದಾರೆ ಎಂದರೆ ಇದೊಂದು ದೇವಭೋಗ್ಯವಾದ ಮೂರನೆಯದಾದ ಸುರಾಸಮುದ್ರದ್ದು ಹೊರತು ಮಾನವರು ಕುಡಿಯುವ ದುರ್ವಾಸನಾಯುಕ್ತ ಹೆಂಡವನ್ನಲ್ಲ. ಒಂದು ರೀತಿ ತನ್ನ ಪತ್ನಿಯಲ್ಲಿ ಆಸಕ್ತನಾದನೆಂದು ಗ್ರಹಿಸುವುದೇ ಯುಕ್ತ.

**ನೀಲಾಂಬುದಾಭೇ ವಸನೇ ವಸಾನಃ ಚಂದ್ರಾಂಶುಗೌರೋ ಮದಿರಾವಿಲಾಕ್ಷಃ।**
**ರರಾಜ ರಾಮೋಽಂಬುದ ಮಧ್ಯಮೇತ್ಯ ಸಂಪೂರ್ಣಬಿಂಬಃ**
**ಭಗವಾನಿವೇಂದು ॥ 2 ॥**

ಬಲರಾಮನು ತಾನು ಚಂದ್ರನಂತೆ ಶ್ವೇತಬಣ್ಣದವನಾಗಿದ್ದು ನೀಲಮೇಘಕಾಂತಿ ಸಮವಸನಗಳನ್ನು ಧರಿಸಿದ್ದನು. ಕಾದಂಬರೀಪಾನದಿಂದಾಗಿ ಕಣ್ಣುಗಳು ಚಲಿಸುತ್ತಿದ್ದವು. ಸಮುದ್ರ ಮಧ್ಯೆ ಇದ್ದ ಬಲದೇವನು ಆಕಾಶದ ಮಧ್ಯೆ ಶೋಭಿಸುವ ಚಂದ್ರಮನಂತೆ ಕಂಡನು.

ಬಲರಾಮನ ಪತ್ನಿ ರೇವತಿಯು ತನ್ನ ಪತಿಯ ಮೇಲೆ ಕುಡಿನೋಟ ಬೀರಿದ್ದಳು. *[ತಿರ್ಯಕ್ಕಟಾಕ್ಷಂ ಪ್ರಿಯಯಾ]* ರಾಮನು ಅವಳ ಸೌಂದರ್ಯವನ್ನೇ ವೀಕ್ಷಿಸುತ್ತಿದ್ದನು.

ನಂತರ ಕಂಸ–ನಿಕುಂಭವೈರಿಯಾದ ಶ್ರೀಕೃಷ್ಣನ ಆದೇಶದಂತೆ

---

**ಶುಭ್ರೈಕ ಕುಂಡಲೋ** : ಮಧ್ವಾಚಾರ್ಯರು ತಂತ್ರಸಾರದಲ್ಲಿ **ಅದ್ವಿತೀಯ ಕರ್ಣಭೂಷಃ** ಎಂದಿದ್ದಾರೆ. ಏಕಕುಂಡಲಧಾರಿಯು. ಭಾಗವತವೂ **"ನೀಲವಾಸಾಃ ಏಕಕುಂಡಲೋ"** ಎಂದಿದೆ.

ನೀಲಾಂಬುದಾಭೇ : ಈ ನೀಲಿ ವಸ್ತ್ರಗಳನ್ನು ಯಮುನೆಯು ಬಲನಿಗೆ ನೀಡಿದಳೆಂದು ಭಾಗವತಲ್ಲಿದೆ. – **ಉತ್ತೀರ್ಣಾಯ ಅಸಿತಾಂಬರೇ** । – *ಭಾಗ 10/90/31*
ವಿಷ್ಣುಪುರಾಣದಲ್ಲಿ ವರುಣನಿಂದ ಕಳುಹಿಸಲ್ಪಟ್ಟ ಬಾಡದಿರುವ ಕಮಲಮಾಲೆಯನ್ನು, ಸಮುದ್ರದಂತೆ ನೀಲಿಬಣ್ಣದ ವಸ್ತ್ರಗಳನ್ನು ಲಕ್ಷ್ಮೀದೇವಿ ಬಲರಾಮನಿಗೆ ನೀಡಿದಳು ಎಂದಿದೆ.
**ವರುಣ ಪ್ರಹಿತಾಂ ಚಾಸ್ಮೈ ಮಾಲಾ ಮಮ್ಲಾನ ಪಂಕಜಾಂ ।**
**ಸಮುದ್ರಾಭೇ ತಥಾ ನೀಲೇ ವಸ್ತ್ರೇ ಲಕ್ಷ್ಮೀರಯಚ್ಛತ ॥**
ವಸ್ತ್ರಗಳನ್ನು ಇಬ್ಬರೂ ನೀಡಬಹುದಾದ್ದರಿಂದ ವಿರೋಧವಿಲ್ಲ.
ಬಲರಾಮನಿಗೆ ಒಂದು ಕರ್ಣಕುಂಡಲ ಧರಿಸುತ್ತಾನೆ. ಅದು ಎಂತಹದು? ಎಂದು ಹರಿವಂಶ ಹೇಳಿದೆ.
ಸುವರ್ಣದಲ್ಲಿ ಒಂದು ವಜ್ರವನ್ನು ಸೇರಿಸಿದ್ದು ಪದ್ಮವೆಂಬ ಹೆಸರುಳ್ಳ ದಿವ್ಯ ಕಮಲವೆ ಶ್ರವಣಕ್ಕೆ ಭೂಷಣವು. ಇನ್ನೊಂದು. ಹೀಗೆ ಎರಡು,
**ಜಾತರೂಪಮಯಂ ಚೈಕಂ ಕುಂಡಲಂ ವಜ್ರಭೂಷಣಂ ।**
**ಆದಿಪದ್ಮಂ ಚ ಪದ್ಮಾಖ್ಯಂ ದಿವ್ಯ ಶ್ರವಣಭೂಷಣಮ್ ।**
**ದೇವೇಮಾಂ ಪ್ರತಿಗೃಹ್ಣೀಷ್ವ –**
ಈ ಭಾಗದಲ್ಲಿ ಎರಡು ಕುಂಡಲಗಳನ್ನು ಧರಿಸಿದನೆಂದು ಹೇಳಿದ. ಎಡಗಿವಿಯಲ್ಲಿ ಕರ್ಣಕುಂಡಲವನ್ನು, ಬಲಗಿವಿಯಲ್ಲಿ ಕಮಲವೆ ಶ್ರವಣಾಭರಣವಾಗಿದ್ದಿತು.
**ವಾಮೈಕ ಕರ್ಣಾಮಲ ಕುಂಡಲಶ್ರೀಃ ಸ್ಮೇರಂ ಮನೋಜ್ಞಾಬ್ಜಕೃತಾವತಂ ಸಃ ।**

ಅಪ್ಸರಾಸ್ತ್ರೀಯರು ರೇವತಿಯನ್ನು ನೋಡಲು ಧರೆಗಿಳಿದು ಬಂದರು. ಅಪ್ಸರೆಯರ ಶರೀರ ಕಾಂತಿಯು ಕೋಲ್ಮಿಂಚಿನಂತಿತ್ತು.

ಸಮುದ್ರದ ಬಳಿ ಬಂದ ಅಪ್ಸರೆಯರು ರೇವತೀ ಹಾಗೂ ಬಲರಾಮನಿಗೆ ನಮಸ್ಕರಿಸಿ, ತಾಳಕ್ಕನುಗುಣವಾಗಿ ನರ್ತನ ಪ್ರಾರಂಭಿಸಿದರು *[ವಾದ್ಯಾನು-ರೂಪಂ ನನೃತುಃ]* ಇತರರು ಸುಂದರವಾಗಿ ಹಾಡಲಾರಂಭಿಸಿದರು.

ನೃತ್ಯವಾದ ಮೇಲೆ ಅಭಿನಯ ನಡೆದು ರೇವತೀ ಬಲರಾಮನಿಗೆ ಪ್ರಿಯವುಂಟು ಮಾಡಿತ್ತು. ಅಪ್ಸರೆಯರೆಲ್ಲರೂ ದೇಶಕಾಲ ಭಾಷೆಗೆ ತಕ್ಕಂತೆ ಕರತಾಡನ ಮಾಡುತ್ತಾ ಮುಗುಳ್ನಗುತ್ತಾ ಲೀಲೆಯಿಂದ ರಾಸಕ್ರೀಡೆಯಲ್ಲಿದ್ದರು.

**ಸಂಕರ್ಷಣಾಧೋಕ್ಷಜ ನಂದನಾನಿ ಸಂಕೀರ್ತಯಂತ್ಯೋಽಥಚ ಮಂಗಳಾನಿ ।**
**ಕಂಸ-ಪ್ರಲಂಭಾದಿ ವಧಂ ಚ ರಮ್ಯಂ ಚಾಣೂರಗಾಥಂ ಚ ತಥೈವ ರಂಗೇ ॥ 3 ॥**

ಅಪ್ಸರೆಯರು ಶ್ರೀಕೃಷ್ಣ-ಬಲರಾಮರಿಗೆ ಆನಂದದಾಯಕವಾದ ಅವರ ಮಹಿಮಾದ್ಯೋತಕ - ಕಂಸಮರ್ದನ - ಪ್ರಲಂಭಾಸುರವಧೆ, ಚಾಣೂರಮುಷ್ಟಿಕ ಪರಾಜಯ ಮೊದಲಾದವುಗಳದ್ದವು.

## ಅಪ್ಸರೆಯರಿಂದ ಶ್ರೀಕೃಷ್ಣ ಮಹಿಮಾ ಪ್ರಶಂಸೆ

ಯಶೋಧೆಯು ಉದರಕ್ಕೆ ಹಗ್ಗ ಬಿಗಿದು ದಾಮೋದರನೆಂದು ಕರೆದದ್ದು ಅರಿಷ್ಟಾಸುರವಧೆ – ಕತ್ತೆ ವೇಷದ ಧೇನುಕಾಸುರಮರ್ದನ ಪ್ರಸಂಗಗಳನ್ನೂ ಪೂತನಿಯ ವಧೆ, ಅರ್ಜುನ ವೃಕ್ಷಗಳ ಬೀಳಿಸಿವಿಕೆ, ತೋಳಗಳ ಸೃಷ್ಟಿ ವತ್ಸಾಸುರ ವಧೆ, ಯಮುನೆಯಲ್ಲಿ ಕಾಲಿಯನಾಗನ ಕ್ಷ್ವೇಲಪರಿಹಾರ, ಶಂಖೋದ್ಧಾರದ[2] ಮಹಿಮೆಯನ್ನು ಗೋವರ್ಧನೋದ್ಧಾರ, ಕುಬ್ಜೆಯ ಡೊಂಕನ್ನು ತಿದ್ದಿದ, ಇತ್ಯಾದಿ ಪ್ರಸಂಗವನ್ನೂ ಅಪ್ಸರೆಯರು ಗೀತೆಯೊಂದಿಗೆ ಹಾಡಿ ನಲಿದರು.

---

2. **ಶಂಖೋದ್ಧಾರ :** ಕಕ್ಷಿವಾನ್ ಎಂಬುದನ್ನು ತ್ರಿತನ ಶಿಷ್ಯ. ತ್ರಿತನ ಬಳಿ ಅಪೂರ್ವವಾದ ಶಂಖವೊಂದಿತ್ತು. ಅದನ್ನು ಕಕ್ಷಿವಾನ್ ಅಪಹರಿಸಿ ಬಿಟ್ಟ. ತ್ರಿತನು ಶಂಖ ಕದ್ದವನು ಶಂಖವೆ ಆಗಲಿ ಎಂದಾಗ ಕ್ಷಮೆಯಾಚಿಸಿದ ಕಕ್ಷಿವಾನನಿಗೆ ಕೃಷ್ಣ ಉಪಾಸನೆಯಿಂದ ನಿನಗೆ ಉಶ್ಶಾಪ ಎಂದನು. ಕೃಷ್ಣನನ್ನೆ ಉಪಾಸಿಸುತ್ತಾ ಶಂಖೋದ್ಧಾರ ಸರೋವರ-ದಲ್ಲಿಯೆ ಇದ್ದ. ಶ್ರೀಕೃಷ್ಣನು ಬಂದು ಶಂಖ ರೂಪದ ಅವನನ್ನೆತ್ತಿದ್ದಕ್ಕಾಗಿ ಶಂಖೋದ್ಧಾರ.

ತ್ರಿವಿಕ್ರಮನಾಗಿ ಸರ್ವತ್ರ ವ್ಯಾಪ್ತನಾಗಿದ್ದರೂ ಚಿಕ್ಕ ವಾಮನ ರೂಪ ಧರಿಸಿದ್ದು, ಸೌಭವಿಮಾನಾರೂಢನಾದ ಸಾಲ್ವನನ್ನು ವಧಿಸಿದ ಪ್ರಸಂಗವನ್ನು ಹಾಡುತ್ತಿದ್ದರು. ಹಾಗೆಯೇ ಬಲರಾಮನು ಆಕಾಶದಿಂದ ಬಂದಿಳಿದ ಹಲಾಯುಧ ಸ್ವೀಕಾರ ಮಹಿಮೆ. ಹಾಗೆಯೇ ಶ್ರೀಕೃಷ್ಣನು ಮುರಾಸುರನನ್ನು ಕೊಂದದ್ದು, ಗಾಂಧಾರ ರಾಜಕನ್ಯೆಯರ ವಿವಾಹ ಕಾಲದಲ್ಲಿ ಪ್ರತಿರೋಧಿಸಿದ ರಾಜರನ್ನೂ ರಥಕ್ಕೆ ಕಟ್ಟಿ ಎಳೆದದ್ದು, ಸುಭದ್ರಾಹರಣದಲ್ಲಿ ಅರ್ಜುನನಿಗೆ ಸಹಾಯ ಮಾಡಿದ್ದು, ಬಲಾಹಕ ಮತ್ತು ಜಂಬುಮಾಲಿಗಳೊಂದಿಗೆ ಯುದ್ಧದಲ್ಲಿ ಜಯ, ನರಕಾಸುರ ಯುದ್ಧದಲ್ಲಿ ದೈತ್ಯರೆಲ್ಲರನ್ನೂ ಪರಾಜಯಗೊಳಿಸಿ, ಇಂದ್ರನು ಎದುರಿಗೇನೆ ಸಂಪತ್ತನ್ನು ದ್ವಾರಕೆಗೆ ಕಳುಹಿಸಿದ್ದು, ಇದೇ ಮೊಲಾದ ಬಲರಾಮ–ಕೃಷ್ಣರಿಗೆ ಆನಂದವುಂಟು ಮಾಡುವ ಅನೇಕ ಘಟನೆಗಳನ್ನು ಅಪ್ಸರೆಯರು ಹಾಡಿ ಹೊಗಳಿದರು.

ಬಲರಾಮನು ರೇವತಿಯೊಂದಿಗೆ ತಾಳಗಳೊಂದಿಗೆ ಸುಮಧುರವಾಗಿ ಹಾಡಿದನು. ಬಲರಾಮನು ಹಾಡುವುದನ್ನು ನೋಡಿ ಅವನ ಉತ್ಸಾಹ ಉಕ್ಕೇರಿಸಲು ಸತ್ಯಭಾಮೆಯೊಂದಿಗೆ ನಂದನಂದನನೂ ಆನಂದದಿಂದ ಹಾಡಲಾರಂಭಿಸಿದನು.

**ಚುಕೂರ್ದ ಸತ್ಯಾಸಹಿತೋ ಮಹಾತ್ಮಾ ಹರ್ಷಾಗಮಾರ್ಥಂ ಚ ಬಲಸ್ಯ ಧೀಮಾನ್ ॥ 4 ॥**

ಅದೇ ಸಮಯಕ್ಕೆ ಸಮುದ್ರಯಾತ್ರೆಗಾಗಿ ಅಲ್ಲಿಗೆ ಬಂದಿದ್ದ ಅರ್ಜುನನೂ ಸಹ ಸುಭದ್ರೆಯೊಂದಿಗೆ ಹಾಡಿದನು *[ಚುಕೂರ್ದ ಪಾರ್ಥೋಽ ನರಲೋಕವೀರಃ].*

ಇವರೊಂದಿಗೆ ಗದ, ಸಾರಣ, ಪ್ರದ್ಯುಮ್ನ, ಸಾಂಬ, ಸಾತ್ಯಕಿ, ಸತ್ಯಭಾಮಾ ಪುತ್ರನಾದ ಭಾನು, ಚಾರುದೇಷ್ಣ – ಬಲರಾಮ ಪುತ್ರರಾದ ನಿಶಠ ಉಲ್ಮುಕರೂ ಸಹ ಧ್ವನಿಗೂಡಿಸಿದರು.

ಅಕ್ರೂರ, ಅನಾಧೃಷ್ಟಿ, ಶಂಕು ಇನ್ನೂ ಅನೇಕರೂ ಸಹ ಭಾಗಿಯಾದರು.

ನೌಕೆಗೆ ಹೊರಗಿನಿಂದ ಬಂದು ತುಂಬಿದರು. ಶ್ರೀಕೃಷ್ಣನ ಅಚಿಂತ್ಯಶಕ್ತಿ–

---

ಶಂಖೋದ್ಧಾರವೆಂದರೆ ಗೋಪಿತಲಾಬ್ ಎನಿಸುವ ಬೇಟ್‌ದ್ವಾರಕಾ. ಇಲ್ಲೊಂದು ದೊಡ್ಡ ಸರೋವರವಿದೆ. ಸಮುದ್ರ ಮುಳುಗುವ ಮುನ್ನ ದ್ವಾರಕಾವಾಸಿಗಳನ್ನು ಸುರಕ್ಷಿತ ಸ್ಥಳವಾದ ಇಲ್ಲಿಗೆ ಕಳುಹಿಸಿದ್ದ. [**ಸ್ತ್ರಿಯೋ ಬಾಲಾಶ್ಚ ವೃದ್ಧಾಶ್ಚ ಶಂಖೋದ್ಧಾರಂ ವ್ರಜಂತ್ವಿತಃ** ॥ *–ಭಾಗ–11/30/6*]

ಯಿಂದಾಗಿ ಅದು ಹಿಗ್ಗುತ್ತಿತ್ತು. ಎಲ್ಲರಿಗೂ ಸ್ಥಳವಾಗುತ್ತಿತ್ತು *[ತದ್ ಯಾನ ಪತ್ರಂ ವವೃಧೇ ಕೃಷ್ಣ ಪ್ರಭಾವೇಣ].*

ಹೀಗೆ ಸಮಸ್ತ ಯಾದವರೂ ಸಂತೋಷದಲ್ಲಿ ಮುಳುಗಿರುವಾಗಲೇ ದೇವಲೋಕ ನಾರದರು ಅಲ್ಲಿಗೆ ಆಗಮಿಸಿದರು *[ದೇವಾತಿಥಿಃ ತತ್ರ ಚ ನಾರದೋsಥ].*

ನಾರದರೂ ಸಹ ಗಾನ ಪ್ರಾರಂಭಿಸಿದರು. ಅವರು ಶ್ರೀಕೃಷ್ಣನ ಮಹಿಮಾ-ದ್ಯೋತಕ ಹಾಡುಗಳನ್ನು ಲೀಲಾಪ್ರಸಂಗಗಳನ್ನು ಅನುಕರಿಸುತ್ತಲೇ ಹಾಡಿದರು.

ನಾರದರು ಬಲರಾಮ, ರೇವತೀ, ಶ್ರೀಕೃಷ್ಣ, ಸತ್ಯಭಾಮೆ, ಅರ್ಜುನ, ಸುಭದ್ರೆಯರ ಬಳಿ ಸಾರಿ ತಮ್ಮ ಅಭಿನಯದಿಂದಾಗಿ ನಗಿಸುತ್ತಿದ್ದರು.

ಅವರ ಅಭಿನಯ ಹಾಸ್ಯ ಮಾತುಗಳು ಹಾಗೂ ಅನೇಕ ಉಪಾಯಗಳಿಂದ ಇದುವರೆಗೂ ಮಾತನಾಡದೆ ಗಂಭೀರವಾಗಿರುತ್ತಿದ್ದ ರಾಣಿಯರನ್ನೂ ನಗಿಸಿದರು.

ನಾರದರ ಹಾಸ್ಯ ಪ್ರವೃತ್ತಿಯಿಂದಾಗಿ ಯದು ಕನ್ಯೆಯರು ಅವರಿಗೆ ನಾನಾ ವಿಧ ರತ್ನಗಳನ್ನೂ ವಸ್ತ್ರಗಳನ್ನೂ ನೀಡಿದರು. ಹಾಗೆಯೇ ಕೃಷ್ಣನ ಇಂಗಿತವನ್ನರಿತ ಯದು ಸ್ತ್ರೀಯರು ಸ್ವರ್ಗೀಯ ಹಾರಗಳನ್ನು ಪಾರಿಜಾತ ಪುಷ್ಪಹಾರವನ್ನೂ, ಇನ್ನೂ ಅನೇಕ ಮಾಲೆಗಳನ್ನು ಅರ್ಪಿಸಿದರು.

ರಾಸಾವಸಾನೇ ತ್ವಥ ಗೃಹ್ಯಹಸ್ತೇ ಮಹಾಮುನೀ ನಾರದಮಪ್ರಮೇಯಃ ।
ಪಪಾತ ಕೃಷ್ಣೋ ಭಗವಾನ್ ಸಮುದ್ರೇ ಸಾತ್ರಾಜಿತೀಂ ಚಾರ್ಜುನಮೇವ ಬಾಥ ॥ 5 ॥

ರಾಸಕ್ರೀಡೆಯು ಮುಗಿಯುತ್ತಿದ್ದಂತೆ ಶ್ರೀಕೃಷ್ಣನು ನಾರದರ ಕೈಯನ್ನು ಹಿಡಿದು, ಸತ್ಯಭಾಮೆ ಹಾಗೂ ಅರ್ಜುನರ ಕೈಹಿಡಿದುಕೊಂಡು ಸಮುದ್ರಕ್ಕೆ ಹಾರಿದನು. ನಂತರ ಸಾತ್ಯಕಿಗೆ, ಸಾತ್ಯಕಿಯೇ! ನೀವೆಲ್ಲ ಯಾದವರೂ ಎರಡು ಪಂಗಡ ಮಾಡಿಕೊಳ್ಳಿರಿ. ನಿಮ್ಮ ಪತ್ನಿಯೊಂದಿಗೆ ನೀರಿಗಿಳಿಯಿರಿ. ಅರ್ಧಭಾಗ ಯಾದವರು ಹಾಗೂ ನನ್ನೆಲ್ಲ ಪುತ್ರರೂ ಒಂದು ಭಾಗ ಈ ಪಂಗಡಕ್ಕೆ ನಾಯಕ ಬಲರಾಮನಾಗಲಿ. ಉಳಿದ ಯಾದವರಿಗೂ ಬಲರಾಮ ಪುತ್ರರಿಗೂ ನಾನು ನೇತಾರನಾಗುತ್ತೇನೆ. ಈ ಸಮಯದಲ್ಲಿ ಭಗವಂತನಿಚ್ಛೆಯಂತೆ ಸಮುದ್ರರಾಜನು ವಿನಮ್ರನಾಗಿ ಬಂದು ನಿಂತನು. ಶ್ರೀಕೃಷ್ಣನು ಅವನಿಗೆ ಹೀಗೆಂದನು.

ತ್ರಿವಿಕ್ರಮನಾಗಿ ಸರ್ವತ್ರ ವ್ಯಾಪ್ತನಾಗಿದ್ದರೂ ಚಿಕ್ಕ ವಾಮನ ರೂಪ ಧರಿಸಿದ್ದು, ಸೌಭವಿಮಾನಾರೂಢನಾದ ಸಾಲ್ವನನ್ನು ವಧಿಸಿದ ಪ್ರಸಂಗವನ್ನು ಹಾಡುತ್ತಿದ್ದರು. ಹಾಗೆಯೇ ಬಲರಾಮನು ಆಕಾಶದಿಂದ ಬಂದಿಳಿದ ಹಲಾಯುಧ ಸ್ವೀಕಾರ ಮಹಿಮೆ. ಹಾಗೆಯೇ ಶ್ರೀಕೃಷ್ಣನು ಮುರಾಸುರನನ್ನು ಕೊಂದದ್ದು, ಗಾಂಧಾರ ರಾಜಕನ್ಯೆಯರ ವಿವಾಹ ಕಾಲದಲ್ಲಿ ಪ್ರತಿರೋಧಿಸಿದ ರಾಜರನ್ನೂ ರಥಕ್ಕೆ ಕಟ್ಟಿ ಎಳೆದದ್ದು, ಸುಭದ್ರಾಹರಣದಲ್ಲಿ ಅರ್ಜುನನಿಗೆ ಸಹಾಯ ಮಾಡಿದ್ದು, ಬಲಾಹಕ ಮತ್ತು ಜಂಬುಮಾಲಿಗಳೊಂದಿಗೆ ಯುದ್ಧದಲ್ಲಿ ಜಯ, ನರಕಾಸುರ ಯುದ್ಧದಲ್ಲಿ ದೈತ್ಯರೆಲ್ಲರನ್ನೂ ಪರಾಜಯಗೊಳಿಸಿ, ಇಂದ್ರನು ಎದುರಿಗೇನೆ ಸಂಪತ್ತನ್ನು ದ್ವಾರಕೆಗೆ ಕಳುಹಿಸಿದ್ದು, ಇದೇ ಮೊದಲಾದ ಬಲರಾಮ–ಕೃಷ್ಣರಿಗೆ ಆನಂದವುಂಟು ಮಾಡುವ ಅನೇಕ ಘಟನೆಗಳನ್ನು ಅಪ್ಸರೆಯರು ಹಾಡಿ ಹೊಗಳಿದರು.

ಬಲರಾಮನು ರೇವತಿಯೊಂದಿಗೆ ತಾಳಗಳೊಂದಿಗೆ ಸುಮಧುರವಾಗಿ ಹಾಡಿದನು. ಬಲರಾಮನು ಹಾಡುವುದನ್ನು ನೋಡಿ ಅವನ ಉತ್ಸಾಹ ಉಕ್ಕೇರಿಸಲು ಸತ್ಯಭಾಮೆಯೊಂದಿಗೆ ನಂದನಂದನನೂ ಆನಂದದಿಂದ ಹಾಡಲಾರಂಭಿಸಿದನು.

**ಚುಕೂರ್ದ ಸತ್ಯಾಸಹಿತೋ ಮಹಾತ್ಮಾ ಹರ್ಷಾಗಮಾರ್ಥಂ ಚ ಬಲಸ್ಯ ಧೀಮಾನ್ ॥ 4 ॥**

ಅದೇ ಸಮಯಕ್ಕೆ ಸಮುದ್ರಯಾತ್ರೆಗಾಗಿ ಅಲ್ಲಿಗೆ ಬಂದಿದ್ದ ಅರ್ಜುನನೂ ಸಹ ಸುಭದ್ರೆಯೊಂದಿಗೆ ಹಾಡಿದನು *[ಚುಕೂರ್ದ ಪಾರ್ಥೋ ನರಲೋಕವೀರಃ].*

ಇವರೊಂದಿಗೆ ಗದ, ಸಾರಣ, ಪ್ರದ್ಯುಮ್ನ, ಸಾಂಬ, ಸಾತ್ಯಕಿ, ಸತ್ಯಭಾಮಾ ಪುತ್ರನಾದ ಭಾನು, ಚಾರುದೇಷ್ಣ – ಬಲರಾಮ ಪುತ್ರರಾದ ನಿಶಠ ಉಲ್ಮುಕರೂ ಸಹ ಧ್ವನಿಗೂಡಿಸಿದರು.

ಅಕ್ರೂರ, ಅನಾಧೃಷ್ಟಿ, ಶಂಕು ಇನ್ನೂ ಅನೇಕರೂ ಸಹ ಭಾಗಿಯಾದರು.

ನೌಕೆಗೆ ಹೊರಗಿನಿಂದ ಬಂದು ತುಂಬಿದರು. ಶ್ರೀಕೃಷ್ಣನ ಅಚಿಂತ್ಯಶಕ್ತಿ–

---

ಶಂಖೋದ್ಧಾರವೆಂದರೆ ಗೋಪಿತಲಾಬ್ ಎನಿಸುವ ಬೇಟ್‌ದ್ವಾರಕಾ. ಇಲ್ಲೊಂದು ದೊಡ್ಡ ಸರೋವರವಿದೆ. ಸಮುದ್ರ ಮುಳುಗುವ ಮುನ್ನ ದ್ವಾರಕಾವಾಸಿಗಳನ್ನು ಸುರಕ್ಷಿತ ಸ್ಥಳವಾದ ಇಲ್ಲಿಗೆ ಕಳುಹಿಸಿದ್ದ. [**ಸ್ತ್ರಿಯೋ ಬಾಲಾಶ್ಚ ವೃದ್ಧಾಶ್ಚ ಶಂಖೋದ್ಧಾರಂ ವ್ರಜಂತ್ವಿತಃ** ॥ *–ಭಾಗ–11/30/6*]

ಯಿಂದಾಗಿ ಅದು ಹಿಗ್ಗುತ್ತಿತ್ತು. ಎಲ್ಲರಿಗೂ ಸ್ಥಳವಾಗುತ್ತಿತ್ತು *[ತದ್ ಯಾನ ಪತ್ರಂ ವವೃಧೇ ಕೃಷ್ಣ ಪ್ರಭಾವೇಣ]*.

ಹೀಗೆ ಸಮಸ್ತ ಯಾದವರೂ ಸಂತೋಷದಲ್ಲಿ ಮುಳುಗಿರುವಾಗಲೇ ದೇವಲೋಕ ನಾರದರು ಅಲ್ಲಿಗೆ ಆಗಮಿಸಿದರು *[ದೇವಾತಿಥಿಃ ತತ್ರ ಚ ನಾರದೋsಥ]*.

ನಾರದರೂ ಸಹ ಗಾನ ಪ್ರಾರಂಭಿಸಿದರು. ಅವರು ಶ್ರೀಕೃಷ್ಣನ ಮಹಿಮಾ-ದ್ಯೋತಕ ಹಾಡುಗಳನ್ನು ಲೀಲಾಪ್ರಸಂಗಗಳನ್ನು ಅನುಕರಿಸುತ್ತಲೇ ಹಾಡಿದರು.

ನಾರದರು ಬಲರಾಮ, ರೇವತೀ, ಶ್ರೀಕೃಷ್ಣ, ಸತ್ಯಭಾಮೆ, ಅರ್ಜುನ, ಸುಭದ್ರೆಯರ ಬಳಿ ಸಾರಿ ತಮ್ಮ ಅಭಿನಯದಿಂದಾಗಿ ನಗಿಸುತ್ತಿದ್ದರು.

ಅವರ ಅಭಿನಯ ಹಾಸ್ಯ ಮಾತುಗಳು ಹಾಗೂ ಅನೇಕ ಉಪಾಯಗಳಿಂದ ಇದುವರೆಗೂ ಮಾತನಾಡದೆ ಗಂಭೀರವಾಗಿರುತ್ತಿದ್ದ ರಾಣಿಯರನ್ನೂ ನಗಿಸಿದರು.

ನಾರದರ ಹಾಸ್ಯ ಪ್ರವೃತ್ತಿಯಿಂದಾಗಿ ಯದು ಕನ್ಯೆಯರು ಅವರಿಗೆ ನಾನಾ ವಿಧ ರತ್ನಗಳನ್ನೂ ವಸ್ತ್ರಗಳನ್ನೂ ನೀಡಿದರು. ಹಾಗೆಯೇ ಕೃಷ್ಣನ ಇಂಗಿತವನ್ನರಿತ ಯದು ಸ್ತ್ರೀಯರು ಸ್ವರ್ಗೀಯ ಹಾರಗಳನ್ನು ಪಾರಿಜಾತ ಪುಷ್ಪಹಾರವನ್ನೂ, ಇನ್ನೂ ಅನೇಕ ಮಾಲೆಗಳನ್ನು ಅರ್ಪಿಸಿದರು.

**ರಾಸಾವಸಾನೇ ತ್ವಥ ಗೃಹ್ಯಹಸ್ತೇ ಮಹಾಮುನೀ ನಾರದಮಪ್ರಮೇಯಃ ।
ಪಪಾತ ಕೃಷ್ಣೋ ಭಗವಾನ್ ಸಮುದ್ರೇ ಸಾತ್ರಾಜಿತೀಂ ಚಾರ್ಜುನಮೇವ ಬಾಢ ॥ 5 ॥**

ರಾಸಕ್ರೀಡೆಯು ಮುಗಿಯುತ್ತಿದ್ದಂತೆ ಶ್ರೀಕೃಷ್ಣನು ನಾರದರ ಕೈಯನ್ನು ಹಿಡಿದು, ಸತ್ಯಭಾಮೆ ಹಾಗೂ ಅರ್ಜುನರ ಕೈಹಿಡಿದುಕೊಂಡು ಸಮುದ್ರಕ್ಕೆ ಹಾರಿದನು. ನಂತರ ಸಾತ್ಯಕಿಗೆ, ಸಾತ್ಯಕಿಯೇ! ನೀವೆಲ್ಲ ಯಾದವರೂ ಎರಡು ಪಂಗಡ ಮಾಡಿಕೊಳ್ಳಿರಿ. ನಿಮ್ಮ ಪತ್ನಿಯೊಂದಿಗೆ ನೀರಿಗಿಳಿಯಿರಿ. ಅರ್ಧಭಾಗ ಯಾದವರು ಹಾಗೂ ನನ್ನೆಲ್ಲ ಪುತ್ರರೂ ಒಂದು ಭಾಗ ಈ ಪಂಗಡಕ್ಕೆ ನಾಯಕ ಬಲರಾಮನಾಗಲಿ. ಉಳಿದ ಯಾದವರಿಗೂ ಬಲರಾಮ ಪುತ್ರರಿಗೂ ನಾನು ನೇತಾರನಾಗುತ್ತೇನೆ. ಈ ಸಮಯದಲ್ಲಿ ಭಗವಂತನಿಚ್ಛೆಯಂತೆ ಸಮುದ್ರರಾಜನು ವಿನಮ್ರನಾಗಿ ಬಂದು ನಿಂತನು. ಶ್ರೀಕೃಷ್ಣನು ಅವನಿಗೆ ಹೀಗೆಂದನು.

**ಸುಗಂಧತೋಯೋ ಭವ ಮೃಷ್ಟತೋಯಃ ।**
**ತಥಾ ಭವ ಗ್ರಾಹವಿವರ್ಜಿತಶ್ಚ ॥ 6 ॥**

ಸಮುದ್ರರಾಜನೇ! ನೀನು ನಾವು ಜಲಕೇಳಿಯಾಡಲು ಅನುಕೂಲವಾಗುವಂತೆ ನೀನು ಸುಗಂಧಯುಕ್ತ ಮಧುರ ಜಲವಾಗು ಹಾಗೂ ಮೊಸಳೆಗಳಿಂದ ರಹಿತವಾದ ಜಲವುಳ್ಳವನಾಗು, ತೀರ ಪ್ರದೇಶವೂ ಕಾಲುಗಳಿಗೆ ಸುಖದಾಯವಾಗಿರಲಿ. ಈ ನನ್ನ ಜನರಿಗೆ ಯಾವ ವಸ್ತುಗಳು ಅನುಕೂಲವಾಗಿದೆಯೋ ಅವೆಲ್ಲವನ್ನೂ ನೀನು ನೀಡಬೇಕು.

ವಸ್ತುತಃ ನಿನ್ನ ನೀರು ಕ್ಷಾರ ಜಲವಾಗಿದ್ದರು ನನ್ನ ಸಾಮರ್ಥ್ಯದಿಂದಾಗಿ ಕುಡಿಯಲು ಯೋಗ್ಯವಾದ ಜಲವಾಗುತ್ತದೆ. ಜಲಚರ ಮೀನು ಮೊದಲಾದವೂ ಸಹ ಸೌಮ್ಯವಾದ ರೂಪ ಧರಿಸಲಿ.

## ಲವಣ ಸಮುದ್ರ ಮಧುರವಾಯಿತು

ಕಮಲಗಳು ಕನ್ನೈದಿಲೆಗಳು ಸಮುದ್ರದಲ್ಲಿ ತೇಲಾಡಲಿ, ಅನೇಕ ವಿಧವಾದ ಪಾನೀಯಗಳು ತಯಾರಾಗಲಿ, ಸುವರ್ಣಮಧುಪಾನ ಪಾತ್ರೆಗಳಾಗಲಿ. ತಂಪಾದ ಜಲರಾಶಿಯು ಪುಷ್ಪರಾಶಿಗಳಿಂದ ಪರಿಮಳ ಯುಕ್ತವಾಗಿರಲಿ. ಸ್ತ್ರೀಯರಿಂದ ಕೂಡಿದ ನನ್ನ ಯಾದವರಿಗೆ ಯಾವುದೇ ರೀತಿಯ ಅವಘಡ ಘಟಿಸದಂತೆ ಎಚ್ಚರಿಕೆಯಿಂದಿರಬೇಕು *[ಭವಾಪ್ರಮತ್ತಃ ಖಲು ತೋಯರಾಶೇ].*

ಹೀಗೆ ಆದೇಶಿಸಿ ಜಲಕ್ರೀಡೆಯಾಡಲು ತೊಡಗಿದನು. ಅರ್ಜುನನೂ ಜೊತೆಗೆ ನೀರಿನಲ್ಲಿದ್ದನು. ಸತ್ಯಭಾಮೆಯು ನಾರದರ ಮೇಲೆ ನೀರನ್ನೆರಚಿದಳು. ಕೃಷ್ಣನ ಸೂಚನೆಯೂ ಇದಾಗಿತ್ತು.

ರೇವತಿಯೊಂದಿಗೆ ಬಲರಾಮ ನೀರಿನೊಳಗೆ ಹಾರಿದನು. ಇವನು ಜಲದೊಳಗೆ ಪ್ರವೇಶಿಸಿದಂತೆ ಯಾದವರೂ ಕೃಷ್ಣಪುತ್ರರೂ ನೀರೊಳಗೆ ಹಾರಿದರು.

ಉಳಿದರ್ಧ ಯಾದವರೂ ಬಲರಾಮ ಪುತ್ರರ ಗುಂಪಿನಲ್ಲಿ ಸೇರಿದರು. ಉಭಯ ಪಂಗಡದವರು ಮಧುಪಾನರಾಗಿ ನಾನಾ ವಿಧಾಭರಣಗಳಿಂದ ಶೋಭಿಸುತ್ತಾ ಮೈರೇಯ ಪಾನ ಪಾತ್ರ ಹಿಡಿದು ಗೀತೆಗಳನ್ನು ಗಾನ ಮಾಡುತ್ತಿದ್ದರು.

ಶ್ರೀಕೃಷ್ಣನ ಅಣತಿಯಂತೆ ಸಾವಿರಾರು ಅಪ್ಸರಾಸ್ತ್ರೀಯರು ಜಲರಂಗಾದಿ ವಾದ್ಯಗಳನ್ನು ನುಡಿಸುತ್ತಿದ್ದರು. ಅಪ್ಸರೆಯರೆಲ್ಲರೂ ನಿಷ್ಕಲಂಕ ಚಂದ್ರ ಮಂಡಲದಂತೆ ಕಡು ಚೆಲುವೆಯಾಗಿದ್ದರು. ಸಮುದ್ರದಲ್ಲಿ ಇವರೆಲ್ಲ

ವಿಹರಿಸುತ್ತಿದ್ದಾಗ ಸಾವಿರ ಚಂದ್ರರು ಗಗನದಲ್ಲಿ ಹುಟ್ಟಿರುವಂತೆ ಭಾಸವಾಗುತಿತ್ತು.

**ನಾರಾಯಣಶ್ಚೈವ ಸನಾರದಶ್ಚ ಸಿಷೇಚ ಪಕ್ಷೀ ಕೃತ ಚಾರು ಚಿಹ್ನಃ ॥ 7 ॥**

ಶ್ರೀಕೃಷ್ಣ ಹಾಗೂ ನಾರದರು ತಮ್ಮ ಬೆಂಬಲಿಗರ ಸಹಾಯದಿಂದ ಬಲರಾಮ ಪಂಗಡದವರ ಮೇಲೆ ನೀರನ್ನೆರಚಿದರು. ಬಲರಾಮ ಪಂಗಡದವರೂ ಕೃಷ್ಣನ ಬೆಂಬಲಿಗರ ಮೇಲೆ ನೀರೆರೆಚಿದರು.

ಕೃಷ್ಣ ಹಾಗೂ ಬಲರಾಮನ ಪತ್ನಿಯರೂ ಸಹ ಜಲಯಂತ್ರದಿಂದ ನೀರನ್ನೆರಚಿಕೊಂಡರು. ಯಾದವರೂ ಸಹ ಮಾನವನ್ನೂ ಕಾಮನನ್ನೂ ಮದವನ್ನೂ ಇಟ್ಟುಕೊಂಡು ಸ್ತ್ರೀಯರ ಮೇಲೆ ಜೋರಾಗಿಯೆ ನೀರನ್ನೆರಚುತ್ತಿದ್ದರು.

ಬಹಳ ಕಾಲ ಜಲಕ್ರೀಡೆಯಲ್ಲಿ ನಿರತರಾಗಿದ್ದನ್ನು ನೋಡಿದ ಕೃಷ್ಣನು ವಿಪರೀತಕ್ಕೆ ಹೋದೀತೆಂಬ ಶಂಕೆಯಿಂದ ಜಲಕ್ರೀಡೆಯನ್ನು ಮುಕ್ತಾಯಗೊಳಸಲು ಆದೇಶಿಸಿದನು.

**ಅತಿಪ್ರಸಂಗಂ ತು ವಿಚಿಂತ್ಯ ಕೃಷ್ಣಃ ।**
**ತಾನ್ ವಾರಯಾಮಾಸ ರಥಾಂಗ ಪಾಣಿಃ ॥ 8 ॥**

ತಾನೂ ಸಹ ನೀರಿನಿಂದ ಮೇಲೆ ಬಂದು ಚಂದನವನ್ನು ನಾರದರಿಗೆ ಕೊಟ್ಟು ತಾನೂ ಧರಿಸಿದನು.

ಯಾದವರೆಲ್ಲರೂ ನೀರಿನಿಂದ ಮೇಲೆದ್ದು ಕೃಷ್ಣನ ಆದೇಶದಂತೆ ಎಲ್ಲರೂ ಭೋಜನ ಶಾಲೆಗೆ ತೆರಳದರು. ಅಲ್ಲಿ ವಯಸ್ಸಿಗೆ ತಕ್ಕಂತೆ ಹಿರಿಯರನ್ನು ಅಗ್ರಪಂಕ್ತಿಯಲ್ಲಿ ಕೂರಿಸಿ ತಾವೂ ಕುಳತರು.

ನಂತರ ಅನೇಕ ವಿಧವಾದ ಭಕ್ಷ್ಯಭೋಜ್ಯ ಲೇಹ್ಯ ಪೇಯಗಳನ್ನು ಯಥೇಚ್ಛವಾಗಿ ಸವಿದರು. ಪಶುಮಾಂಸವೆಂದರೆ ನಿರ್ದಯರಾಗಿ ಪಶುಗಳನ್ನು ಕೊಂದು ತಿನ್ನುತ್ತಿದ್ದರೆಂದರ್ಥವಲ್ಲ. ಮಾಂಸವನ್ನು ಸಜ್ಜನರು ಯಾವ ಕಾಲಕ್ಕೂ ಮುಟ್ಟುತ್ತಿದ್ದಿಲ್ಲ. ವ್ರೀಹಿಗೆ ಪಶುವೆಂದು ಸಂಕೇತ. ಅದರಿಂದ ತಯಾರಾದ ಆಹಾರ ಪದಾರ್ಥ ತಿಂದರು.

ಲವಣಯುಕ್ತ ಭಕ್ಷ್ಯಗಳು. ತುಪ್ಪದಿಂದ ತಯಾರಾದ ಭಕ್ಷ್ಯಗಳನ್ನೂ

ಸೇವಿಸಿದರು. ಕಾಸಿದ ಹಾಲಿಗೆ ಸಕ್ಕರೆ ಬೆರೆಸಿ ಕುಡಿದರು. ನಾನಾ ವಿಧ ಹಣ್ಣಿನ ರಸಗಳನ್ನು ಸೇವಿಸಿದರು.

ನಂತರ ಗಾನ ಪ್ರಾರಂಭವಾಯಿತು. ವೀಣಾನಾದ ಪ್ರಾರಂಭವಾಯಿತು. ಕೃಷ್ಣನಾದರೂ ತನ್ನ ಮುರಳಿಯ ನಾದದಿಂದ ಎಲ್ಲರನ್ನೂ ಬೇರೆ ಲೋಕಕ್ಕೆ ಕರೆದೊಯ್ದನು. ಅರ್ಜುನನು ಮೃದಂಗ ಬಾರಿಸಿದನು. ದೇವಲೋಕದ ನರ್ತಕಿ ರಂಭೆಯು ನೃತ್ಯವಾಡಿದಳು. ಹಾಗೆಯೇ ಊರ್ವಶೀ ಮಿಶ್ರಕೇಶೀ, ತಿಲೋತ್ತಮಾ ಮೇನಕೆ ಹೇಮಾದಿಗಳೂ ಗೀತೆಗಳೊಂದಿಗೆ ಅಭಿನಯಿಸಿದರು.

ಶ್ರೀಕೃಷ್ಣನು ಈ ಕ್ರೀಡಾಕೂಟವನ್ನು ಉದ್ದೇಶಪೂರ್ವಕವಾಗಿಯೇ ಏರ್ಪಡಿಸಿದ್ದನು. ಬಂದವರಿಗೆ ತಾಂಬೂಲಾದಿಗಳನ್ನು ನೀಡಲಾಯಿತು.

ಉತ್ಸವಾನಂತರ ಯಾದವರನ್ನೆಲ್ಲ ಕಳುಹಿಸಿಕೊಟ್ಟನು. ಅಪ್ಸರೆಯರೂ ಕೂಡ ತಮ್ಮ ಸ್ಥಾನಕ್ಕೆ ಹೋದರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ಜಲಕೇಲೀವಿಹಾರವೆಂಬಲ್ಲಿ
ಎಂಬತ್ತೊಂಬತ್ತನೆಯ ಅಧ್ಯಾಯ ಸಮಾಪ್ತಿ

# ಅಥ ನವತಿತಮೋऽಧ್ಯಾಯಃ

## ನಿಕುಂಭನಿಂದ ಭಾನುಮತಿ ಅಪಹಾರ

*ವೈಶಂಪಾಯನ ಉವಾಚ –*

**ತೇಷಾಂ ಕ್ರೀಡಾವಸಕ್ತಾನಾಂ ಯದೂನಾಂ ಪುಣ್ಯಕರ್ಮಣಾಮ್ ।**
**ಛಿದ್ರಮಾಸಾದ್ಯ ದುರ್ಬುದ್ಧಿಃ ದೇವಶತ್ರುಃ ದುರಾಸದಃ ॥ 1 ॥**

**ಕನ್ಯಾಂ ಭಾನುಮತೀಂ ನಾಮ ಭಾನೋಃ ದುಹಿತರಂ ನೃಪ ।**
**ಜಹಾರಾತ್ಮವಧಾಕಾಂಕ್ಷೀ ನಿಕುಂಭೋ ನಾಮ ದಾನವಃ ॥ 2 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! ಯಾದವರೆಲ್ಲರೂ ಶ್ರೀಕೃಷ್ಣ ಅಣತಿಯಂತೆ ಜಲಕೇಲಿಯಲ್ಲಿ ಆಸಕ್ತರಾಗಿದ್ದರು. ಅವರ ಈ ಕ್ರೀಡೆಯೂ ಸಹ ಪುಣ್ಯಕಾರ್ಯವೆ ಆಗಿರುತ್ತದೆ. ಹೀಗೆ ಯಾದವರೆಲ್ಲರೂ ಅನ್ಯಾಸಕ್ತರಾಗಿರುವ ಸಮಯವನ್ನೆ ಕಾಯುತ್ತಿದ್ದ ನಿಕುಂಭ ದಾನವನು ಅವಕಾಶ ನೋಡಿ ಭಾನುವಿನ ಮಗಳಾದ ಭಾನುಮತಿಯೆಂಬ ಕನ್ಯೆಯನ್ನು ಅಪಹರಿಸಿಕೊಂಡು ಹೋದ. ಇದು ಅವನ ನಾಶವನ್ನು ಅವನೇ ಬಯಸಿದಂತಿತ್ತು.

**ಅಂತರ್ಹಿತೋ ಮೋಹಯಿತ್ವಾ ಯದೂನಾಂ ಪ್ರಮದಾಜನಮ್ ।**
**ಮಾಯಾವೀ ಮಾಯಯಾ ರಾಜನ್ ಪೂರ್ವವೈರ ಮನುಸ್ಮರನ್ ॥ 3 ॥**

ನಿಕುಂಭನು ಯಾದವರ ಮೇಲೆ ತನಗಿದ್ದ ವೈರವನ್ನು ಮನಸ್ಸಿನಲ್ಲಿಟ್ಟುಕೊಂಡು. ಯಾರಿಗೂ ಕಾಣದಂತೆ ಅಂತಃಪುರ ಪ್ರವೇಶಿಸಿ ಮಾಯೆಯಿಂದ ಯಾದವ ಸ್ತ್ರೀರಯನ್ನೆಲ್ಲ ಮೋಹಗೊಳಿಸಿ ಭಾನುಮತಿಯನ್ನು ಅಪಹರಿಸಿಕೊಂಡು ಹೋದನು.

**ಭ್ರಾತುರ್ಹಿ ವಜ್ರನಾಭಸ್ಯ ತಸ್ಯ ಕನ್ಯಾ ಪ್ರಭಾವತೀ ।**
**ಪ್ರದ್ಯುಮ್ನೇನ ಹೃತಾ ವೀರ! ವಜ್ರನಾಭಸ್ತಥಾ ಹತಃ ॥ 4 ॥**

ಈ ದುರ್ಬುದ್ಧಿ ಇವನಿಗೇಕೆ ಬಂತು ಎನ್ನುವೆಯಾ. ನಿಕುಂಭಕುನಿಗೆ ಒಬ್ಬ ವಜ್ರನಾಭನೆಂಬ ಅಣ್ಣನಿದ್ದನು. ಅವನ ಮಗಳೆ ಪ್ರಭಾವತೀ! ಪ್ರಭಾವತಿಯನ್ನು ಶ್ರೀಕೃಷ್ಣ ಪುತ್ರ ಪ್ರದ್ಯುಮ್ನ ಅಪಹರಿಸಿದ. ತಂದೆ ವಜ್ರನಾಭ ಪ್ರತಿಬಂಧಿಸಿದ. ಆದರೆ ವಜ್ರನಾಭನನ್ನು ಕೊಂದು ಹಾಕಿ ಪ್ರಭಾವತಿಯನ್ನು ಹೊತ್ತು ನಡೆದ. ಇದರಿಂದಾಗಿ ನಿಕುಂಭನು ಅಣ್ಣನ ಸಂಹಾರ, ಕನ್ಯೆಯ ಅಪಹರಣ ನಿಕುಂಭನನ್ನು ಈ ದುರಾಚಾರಕ್ಕೆ ಆಸ್ಪದವಿತ್ತಿತ್ತು. ಬಹುಕಾಲದಿಂದ ಛಿದ್ರಾನ್ವೇಷಣೆಯಲ್ಲಿ ತೊಡಗಿದ್ದ ಇವನು ಭಾನುವಿನ ಪಟ್ಟಣವು ಅಚ್ಛೇದ್ಯಾಭೇದ್ಯವಾಗಿತ್ತು. ಅದಕ್ಕಾಗಿ ಅರಣ್ಯದಲ್ಲಿ ಸಮಯ ಕಾಯುತ್ತಿದ್ದನು. ಯಾದವರೆಲ್ಲ ಜಲಕೇಲಿಯಲ್ಲಿ ತತ್ಪರರಾಗಿರಲು ಭಾನುಮತಿಯ ರಕ್ಷಣೆಗೆ ಯಾರೂ ಇರಲಿಲ್ಲ. ಹೀಗಾಗಿ ಭಾನುಮತಿಯ ಅಪಹಾರವಾಯಿತು. ಹೀಗಾಗಬೇಕೆಂದೆ ಶ್ರೀಕೃಷ್ಣನು ಈ ಜಲಕೇಲಿಯನ್ನು ಏರ್ಪಡಿಸಿದ್ದನು.

**ಕನ್ಯಾಪುರೇ ಮಹಾನಾದಃ ಸಹಸಾ ಸಮುಪಸ್ಥಿತಃ ।**
**ತಸ್ಯಾಂ ಹ್ರಿಯಂತ್ಯಾಂ ಕನ್ಯಾಯಾಂ ರುದಂತ್ಯಾ ಸಮಿತಿಂಜಯಃ ॥ 5 ॥**
**ವಸುದೇವಾಹುಕೌ ವೀರೌ ದಂಶಿತೌ ನಿರ್ಗತಾವುಭೌ ।**
**ಆರ್ತನಾದ ಮುಪಶ್ರುತ್ಯ ಭಾನೋಃ ಕನ್ಯಾಪುರೇ ತದಾ ॥ 6 ॥**

ನಿಕುಂಭನು ಭಾನುಮತಿಯನ್ನು ಅಪಹರಿಸುತ್ತಿದ್ದಾಗ ರಕ್ಷಣೆಗಾಗಿ ಜೋರಾಗಿ ಭಯದಿಂದ ಕಿರುಚಿಕೊಂಡಳು. ಅವಳ ಕೂಗಾಟವನ್ನು ಕೇಳಿದ ಆಗಿನ ರಕ್ಷಣೆಯಲ್ಲಿದ್ದ ವಸುದೇವ ಹಾಗೂ ಆಹುಕರಿಬ್ಬರೂ ಕವಚಗಳನ್ನು ಧರಿಸಿ ತಮ್ಮ ವಾಸಸ್ಥಾನದಿಂದ ಹೊರಟರು.

ಆಹುಕ ವಸುದೇವರು ಬಹುದೂರದವರೆಗೂ ಕಣ್ಣನ್ನು ಹಾಯಿಸಿದರು. ಆದರೂ ಕನ್ಯಾಪಹಾರಿ ನಿಕುಂಭನು ಅವರಿಗೆ ದೃಷ್ಟಿಗೋಚರನಾಗಲಿಲ್ಲ. ಕಡೆಗೆ ಶ್ರೀಕೃಷ್ಣನನ್ನು ಸಮೀಪಿಸಿ ಭಾನುಮತಿಯ ಅಪಹಾರ ದುರ್ವಾರ್ತೆಯನ್ನು ಕೃಷ್ಣನಿಗೆ ಅರುಹಿದರು.

**ಶ್ರುತಾರ್ಥಃ ಸ್ವಂ ವಿಮಾನಂ ತದಾರುರೋಹ ಜನಾರ್ದನಃ ।**
**ಪಾರ್ಥೇನ ಸಹಿತಃ ತಾರ್ಕ್ಷ್ಯಂ ನಾಗಶತ್ರುಮರಿಂದಮಃ ॥ 7 ॥**

ಈ ವಿಷಯವನ್ನು ಕೇಳಿದ ಕೂಡಲೇ ನಿಕುಂಭನದ್ದೆ ಈ ಕನ್ಯಾಪಹರಣವೆಂದು ತಿಳಿದು ಶ್ರೀಕೃಷ್ಣನು ಅರ್ಜುನನೊಂದಿಗೆ ತನ್ನ ವಾಹನ ಗರುಡನ ಮೇಲೇರಿ ಹೋದನು.

ನಂತರ ಮಕರಧ್ವಜನಾದ ಪ್ರದ್ಯುಮ್ನನಿಗೆ ನೀನು ರಥದಲ್ಲಿ ಕುಳಿತು ನಮ್ಮನ್ನು ಅನುಸರಿಸುವವನಾಗು ಎಂದು ಆದೇಶಿಸಿ ಗರುಡನಿಗೆ 'ಶೀಘ್ರವಾಗಿ ಹೋಗು' ಎಂದನು.

ವಜ್ರಂ ನಗರ ಮಾಯಾಂತಂ ನಿಕುಂಭಂ ರಣದುರ್ಜಯಮ್ ॥
ಪಾರ್ಥಕೃಷ್ಣೌ ಮಹಾತ್ಮಾನೌ ಆಸೇದತುರರಿಂದ ಮೌ ॥ 8 ॥

ಪ್ರದ್ಯುಮ್ನಶ್ಚ ಮಹಾತೇಜಾ ಮಾಯಿನಾಂ ಪ್ರವರೋ ನೃಪ ।
ನಿಕುಂಭಶ್ಚಾಥ ತಾನ್ ದೃಷ್ಟ್ವಾ ತ್ರಿಧಾऽऽತ್ಮಾನಮಥಾऽಕರೋತ್ ॥ 9 ॥

ಮಹಾತ್ಮರೂ – ಶತ್ರು ಭಯಂಕರರೂ ಆದ ಅರ್ಜುನ ಕೃಷ್ಣರು ವಜ್ರವೆಂಬ ಪಟ್ಟಣದ ಕಡೆಗೆ ಹೋಗುತ್ತಿದ್ದ ಚಂಡವಿಕ್ರಮನಾದ ನಿಕುಂಭನನ್ನು ದಾರಿಯಲ್ಲಿಯೆ ತಡೆದರು.

ಪ್ರದ್ಯುಮ್ನನು ನಿಕುಂಭನ ಬಳಿ ಬಂದು ಸೇರಿದನು. ಈ ಭಯಂಕರ ಮಹಾವೀರರನ್ನು ನೋಡಿದ ನಿಕುಂಭನು ಅವರೊಂದಿಗೆ ಹೋರಾಡಲು ಮೂರು ರೂಪಗಳನ್ನು ಧರಿಸಿದನು.

ಬಹುಭಾರವಿರುವ ಉಕ್ಕಿನ ಗದೆ ಹಿಡಿದು ಈ ಮೂವರೊಂದಿಗೂ ಯುದ್ಧಕ್ಕೆ ಅಣಿಯಾದನು. ಇವರೊಂದಿಗೆ ನಗುನಗುತ್ತಲೆ ಯುದ್ಧ ಮಾಡಿದನು.

ತಾನ್ ಸರ್ವಾನ್ ಯೋಧಯಾಮಾಸ ನಿಕುಂಭಃ ಪ್ರಹಸನ್ನಿವ ॥ 10 ॥

ಎಡಬಾಹುವಿನಲ್ಲಿ ಭಾನುಮತಿಯನ್ನು ಹಿಡಿದುಕೊಂಡು ಬಲಗೈಯಲ್ಲಿ ಗದೆ ಹಿಡಿದು ಹೊಡೆದನು.

ಸವ್ಯೇನಾಲಂಬ್ಯ ಹಸ್ತೇನ ಕನ್ಯಾಂ ಭಾನುಮತೀಂ ನೃಪ ।
ದಕ್ಷಿಣೇನಾಥ ಹಸ್ತೇನ ಗದಯಾ ಪ್ರಾಹರತ್ ಪುನಃ ॥ 11 ॥

ನಿಕುಂಭನು ಘೋರವಾಗಿ ಮೂವರೊಂದಿಗೆ ಯುದ್ಧ ಮಾಡುತ್ತಿದ್ದರೂ ಅವರು ಭಾನುಮತಿಯು ಅವನ ಕೈಯ್ಯಲಿರುವುದರಿಂದ ಅವರು ಅವನಿಗೆ ಪ್ರತಿಯಾಗಿ ಹೊಡೆಯಲಿಲ್ಲ. ಭಾನುಮತಿಗೆ ಏಟು ಬೀಳದಂತೆ ಮೃದುವಾಗಿಯೆ ಪ್ರಹರಿಸುತ್ತಿದ್ದರು.

## ಕೃಷ್ಣಾರ್ಜುನ–ನಿಕುಂಭ ಯುದ್ಧ

**ಕನ್ಯಾರ್ಥಂ ನ ಚ ಕೃಷ್ಣೌವಾ ಕಾಮೋ ವಾ ನೃಪಸತ್ತಮ ।**
**ನಿರ್ದಯಂ ಪ್ರಹರಂತಿ ಸ್ಮ ನಿಕುಂಭೇ ಚ ಮಹಾಸುರೇ ॥ 12 ॥**

**ಸಮರ್ಥಾ ತೇ ಮಹಾತ್ಮಾನಃ ಶತ್ರುಂ ಹಂತುಂ ದುರಾಸದಾಃ ।**
**ನಿಶಶ್ವಸುಃ ನರಪತೇ! ದಯಾಭಾರಾವಪೀಡಿತಾಃ ॥ 13 ॥**

ದುರಾಸದರಾದ ಪಾರ್ಥಾದಿಗಳು ನಿಕುಂಭನನ್ನು ಸಂಹರಿಸಲು ಸಮರ್ಥ–ರಾಗಿಯೆ ಇದ್ದರು. ಭಾನುಮತಿಯ ಮೇಲಿನ ದಯಾಭಾರದಿಂದಾಗಿ ಅವರು ನಿಕುಂಭನನ್ನು ಪ್ರಹರಿಸದೆ ನಿಟ್ಟುಸಿರನ್ನು ಬಿಡುತಿದ್ದರು. ದೈತ್ಯನಾದರೂ ಮೂರ್ಛಿತ ಭಾನುಮತಿಯನ್ನು ಗುರಾಣಿಯನ್ನಾಗಿಸಿ ಯುದ್ಧ ಮಾಡುತ್ತಿದ್ದನು.

## ನಾಗೋಷ್ಟ್ರ ವಿಧಿ ಪ್ರಯೋಗ

**ಶ್ರೇಷ್ಠೋ ಧನುಷ್ಮತಾಂ ಪಾರ್ಥಃ ಸರ್ವಥಾ ಕುಶಲೋ ಯುಧಿ ।**
**ನಾಗೋಷ್ಟ್ರ ವಿಧಿನಾದೈತ್ಯಂ ಶರಪಂಕ್ತ್ಯಾ ಜಘಾನ ಹ ॥ 14 ॥**

ಈ ಸಂದರ್ಭದಲ್ಲಿ ಮಹಾಬಾಣಾಕ್ಷನಾದ ಅರ್ಜುನನು ಉಪಾಯ ಹೂಡಿದನು. 'ನಾಗೋಷ್ಟ್ರ ವಿಧಿ'ಯಿಂದ ಬಾಣಗಳನ್ನು ಬಿಟ್ಟು ಹೊಡೆದನು. ಈ ವಿಧಿಯಲ್ಲಿ ಒಂದು ಹೆಬ್ಬಾವು ಒಂಟೆಯನ್ನು ಸುತ್ತಿ ಹಾಕಿರುತ್ತದೆ. ಒಬ್ಬ ಕುಶಲ ಧನುರ್ಧರನು ಬಾಣವನ್ನು ಪ್ರಯೋಗಿಸಿ ಅಜಗರವನ್ನು ಹೊಡೆದುರುಳಿಸುತ್ತಾನೆ. ಅದರೆ ಒಂಟೆಗೆ ಮಾತ್ರ ಒಂದು ಗಾಯವೂ ಆಗಿರುವುದಿಲ್ಲ. ಇದು 'ನಾಗೋಷ್ಟ್ರ ವಿಧಿ'ಯು. ಇದರಂತೆ ಅರ್ಜುನನು ನಿಕುಂಭನಿಗೆ ಹೊಡೆದರೂ ಭಾನುಮತಿಗೆ ಏನೂ ಗಾಯವಾಗದಂತೆ 'ನಾಗೊಷ್ಟ್ರ ವಿಧಿ'ಯಿಂದ ಪ್ರಹರಿಸಿದನು. [ನಾಗ + ಉಷ್ಟ್ರ – ನಾಗ = ಸರ್ಪ, ಉಷ್ಟ್ರ = ಒಂಟೆ]

ಇತ್ತ ಕೃಷ್ಣಾದಿಗಳೂ ಸಹ ತಮ್ಮ ಯುದ್ಧ ಕಲೆಯಿಂದಲೂ ಶಿಕ್ಷಣದ ಬಲದಿಂದಲೂ 'ವೈತಸ್ತಿಕ' ಬಾಣಗಳಿಂದ ನಾನಾ ವಿಧಿದಾನವರನ್ನೂ ಹೊಡೆದರು. ಭಾನುಮತಿಗೆ ಒಂದೂ ಬಾಣವೂ ತಗಲಲಿಲ್ಲ.

ಮುರಾರಿ – ಶಂಬರಾರಿಗಳು ವೈತಸ್ತಿಕ ಬಾಣವನ್ನು ಬಿಟ್ಟಾಗ ಅಸುರನು ಅವರ ಶರಚಾತುರ್ಯವನ್ನು ನೋಡಿ ಹೆದರಿ ಭಾನುಮತಿ ಸಹಿತ ಅಂತರ್ಹಿತನಾದನು.

**ತತಃ ಕನ್ಯಯಾ ಸಾರ್ಧಂ ತತ್ರೈವಾಂತರಧೀಯತ ।**
**ಆಸುರೀಮಾಶ್ರಿತೋ ಮಾಯಾಂ ನ ಚ ತಾಂ ವೇತ್ತಿ ಕಶ್ಚನ ॥ 15 ॥**

ಈ ಮಾಯಾವಿದ್ಯೆಯು ಶ್ರೀಕೃಷ್ಣ ಅರ್ಜುನ ಪ್ರದ್ಯುಮ್ನರಿಗೆ ತಿಳಿದಿದ್ದರೂ ಮೋಸದ ವಿದ್ಯೆಯನ್ನು ಉಪಯೋಗಿಸಲಿಲ್ಲ. ಇದು ವೀರರಿಗೆ ಹೇಳಿದ್ದಲ್ಲ. ಇವರನ್ನು ಬಿಟ್ಟು ಇತರರಿಗೆ ಅದು ತಿಳಿದಿದ್ದಿಲ್ಲ.

ಆ ಮೂವರೂ ನಿಕುಂಭನನ್ನು ಅನುಸರಿಸಿಯೇ ಹೋಗುತ್ತಿದ್ದರು. ರಾಕ್ಷಸನು ಹಾರಿತವೆಂಬ ಪಾರಿವಾಳ ಜಾತಿಯ ಪಕ್ಷಿಯ ವೇಷಧರಿಸಿ ಒಂದೆಡೆ ಕುಳಿತ.

**ಹಾರಿತಃ ಶಕುನೋ ಭೂತ್ವಾ ತಸ್ಥಾವಥ ಮಹಾಸುರಃ ॥ 16 ॥**

**ಗೋಕರ್ಣಸ್ಯ ಉಪರಿಷ್ಟಾತ್ತು ಪರ್ವತಸ್ಯ ಮಹಾಸುರಃ ।**
**ಪಪಾತ ವೇಲಾಂ ಗಂಗಾಯಾಃ ಪುಲಿನೇ ಸಹ ಕನ್ಯಯಾ ॥ 17 ॥**

ಧನಂಜಯನು ವೈತಸ್ತಿಕವೆಂಬ ಗೇಣುದ್ದ ಬಾಣದಿಂದ ಭಾನುಮತಿಗೆ ತಗಲದಂತೆ ಅಸುರನನ್ನು ಹೊಡೆಯುತ್ತಿದ್ದ ಅಸುರನು ಬಾಣದ ಭಯದಿಂದಾಗಿ ಸಪ್ತದ್ವೀಪ ಸಹಿತ ಭೂಮಂಡಲವನ್ನು ಪರಿಭ್ರಮಿಸುತ್ತಿದ್ದನು. ಹೀಗೆ ಹಾರುತ್ತಾ ಗೋಕರ್ಣ ಪರ್ವತದ ಶಿಖರಾಗ್ರಕ್ಕೆ ಹೋದನು. ಅದನ್ನು ದಾಟಲೆಂದು ಹೊರಟಾಗ ಭಾನುಮತಿ ಸಹಿತ ಗಂಗಾ ತೀರದಲ್ಲಿ ಬಿದ್ದನು.

ಜನಮೇಜಯನೇ! ರುದ್ರದೇವನ ತೇಜಸ್ಸಿನಿಂದ ಪರಿಪಾಲಿಸಲ್ಪಡುತ್ತಿರುವ ಈ ಗೋಕರ್ಣ ಪರ್ವತವನ್ನು ದೇವಾಸುರರಾಗಲಿ ಋಷಿಮುನಿಗಳಾಗಲೀ ಅತಿಕ್ರಮಿಸಲು ಸಾಧ್ಯವಿಲ್ಲ.

**ನ ದೇವಾಃ ನಾಸುರಾಶ್ಚಾಪಿ ಲಂಘಯಂತಿ ತಪೋಧನಾಃ ।**
**ಗೋಕರ್ಣಂ ತೇಜಸಾ ಗುಪ್ತಂ ಮಹಾದೇವಸ್ಯ ಭಾರತ ॥ 18 ॥**

**ಏತದಂತರ ಮಾಸಾದ್ಯ ಪ್ರದ್ಯುಮ್ನಃ ಶೀಘ್ರ ವಿಕ್ರಮಃ ।**
**ಕನ್ಯಾಂ ಭಾನುಮತೀಂ ಭೈಮೋ ಜಗ್ರಾಹ ರಣದುರ್ಜಯಃ ॥ 19 ॥**

ಇದೇ ಸಮಯದಲ್ಲಿ ರಣವಿಕ್ರಮನೂ ಶೀಘ್ರ ಪರಾಕ್ರಮಿಯೂ ಆದ ಪ್ರದ್ಯುಮ್ನನು ಕೆಳಗೆ ಬಿದ್ದಿದ್ದ ಭಾನುಮತಿಯನ್ನು ಎತ್ತಿಕೊಂಡನು.

ಶ್ರೀಕೃಷ್ಣಾರ್ಜುನರಾದರೂ ಶರವರ್ಷದಿಂದ ನಿಕುಂಭನನ್ನು ಪ್ರಹರಿಸುತ್ತಲೇ ಇದ್ದರು. ಇದರಿಂದ ಪೀಡಿತನಾದ ಅಸುರನು ದಕ್ಷಿಣದಿಕ್ಕಿಗೆ ಹೊರಟನು.

ಕೃಷ್ಣಾರ್ಜುನರೂ ಅವನನ್ನು ಬೆನ್ನಟ್ಟಿದರು. ಅಸುರನಾದರೂ ತಮ್ಮ ಬಂಧುಬಾಂಧವರಿದ್ದ ಷಟ್ಪುರವನ್ನು ಸೇರಿದನು. ಕೃಷ್ಣಾರ್ಜುನರು ಷಟ್ಪುರ ಗುಹೆಯ ದ್ವಾರದಲ್ಲಿಯೇ ಇರಬೇಕಾಯಿತು.

**ತತ್ರ ವೀರೌ ಗುಹಾದ್ವಾರಿ ಕೃಷ್ಣೌ ರಾತ್ರೌ ತದೋಷತುಃ ॥ 20 ॥**

ಪ್ರದ್ಯುಮ್ನನಾದರೂ ಭಾನುಮತಿಯನ್ನು ಕೃಷ್ಣ ಆದೇಶದಂತೆ ದ್ವಾರಕೆಗೆ ತಂದು ಅವಳನ್ನು ದ್ವಾರಕೆಯಲ್ಲಿ ಬಿಟ್ಟು ಪುನಃ ಷಟ್ಪುರಕ್ಕೆ ಕಷ್ಣಾರ್ಜುನರನ್ನು ನೋಡಿದನು. ಆ ಮೂವರೂ ಗುಹೆಯ ಮಹಾದ್ವಾರವನ್ನು ಆಕ್ರಮಿಸಿದರು. ನಿಕುಂಭನು ಪುನಃ ಯುದ್ಧ ಮಾಡಲು ಹೊರಗೆ ಬಂದನು. ಅರ್ಜುನನಾದರೂ ಅವನ ಸರ್ವ ರೀತಿಯಿಂದಲೂ ಮಾರ್ಗವನ್ನು ತಡೆದನು.

ನಿಕುಂಭನಾದರೂ ಅರ್ಜುನನ ಬಳ ಸಾರಿ ಲೋಹದ ಮುಳ್ಳುಗದೆಯಿಂದ ತಲೆಯ ಮೇಲೆ ಬಲವಾಗಿ ಹೊಡೆದನು. ಇದರಿಂದಾಗಿ ರಕ್ತ ಕಾರುತ್ತಾ ಅರ್ಜುನನು ಧರೆಗುಳದನು. ಅದೃಶ್ಯನಾಗಿದ್ದು ಅರ್ಜುನನನ್ನು ಹೊಡೆದಂತೆ, ಗಟ್ಟಿಯಾಗಿ ಅಟ್ಟಹಾಸ ಮಾಡುತ್ತಾ ಪ್ರದ್ಯುಮ್ನನನ್ನೂ ಹೊಡೆದನು. ಪ್ರದ್ಯುಮ್ನನೂ ಕೆಳಗೆ ಬಿದ್ದು ಮೂರ್ಛೆ ಹೋದನು. ಶ್ರೀಕೃಷ್ಣನು ಇದರಿಂದ ಕ್ರುದ್ಧನಾಗಿ ತನ್ನ ಕೌಮೋದಕೀ ಗದೆಯನ್ನು ಹಿಡಿದು ನಿಕುಂಭನ ಸಮೀಪ ಬಂದನು. ಇಬ್ಬರೂ ವೀರರಿಗೂ ಗದಾಯುದ್ಧವೇರ್ಪಟ್ಟಿತು.

**ತಾವನ್ಯೋನ್ಯಂ ದುರಾಧರ್ಷೌ ಗರ್ಜಂತಾವಭಿಪೇತತುಃ ॥ 21 ॥**

ಇವರಿಬ್ಬರ ಗದಾಯುದ್ಧ ನೋಡಲೆಂದು ಇಂದ್ರದೇವನು ಐರಾವತವನ್ನೇರಿ ದೇವತೆಗಳೊಂದಿಗೆ ಸಮರ ಭೂಮಿಗೆ ಆಗಮಿಸಿದನು.

**ಐರಾವತ ಗತಃ ಶಕ್ರಃ ಸರ್ವೈಃ ದೇವಗಣೈಃ ಸಹ ।**
**ದದರ್ಶ ತನ್ಮಹಾಯುದ್ಧಂ ಘೋರಂ ದೇವಾಸುರಂ ತದಾ ॥ 22 ॥**

## ಶ್ರೀಕೃಷ್ಣ–ನಿಕುಂಭ ಗದಾಯುದ್ಧ

**ದೃಷ್ಟ್ವಾ ದೇವಾನ್ ಹೃಷೀಕೇಶಃ ಚಿತ್ರೈಃ ಯುದ್ಧೈರರಿಂದಮಃ ।**
**ಇಯೇಷ ದಾನವಂ ಹಂತುಂ ದೇವಾನಾಂ ಹಿತಕಾಮ್ಯಯಾ ॥ 23 ॥**

ಇಂದ್ರದೇವನೊಂದಿಗೆ ಬಂದಿರುವ ದೇವತೆಗಳಿಗೆ ಹಿತವನ್ನುಂಟು ಮಾಡಲು ಚಿತ್ರ–ವಿಚಿತ್ರ ಯುದ್ಧ ಮಾಡಿ ನಿಕುಂಭನನ್ನು ಯಮನಿಗೆ ಅತಿಥಿಯನ್ನಾಗಿ ಮಾಡಲು ನಿಶ್ಚೈಯಿಸಿದನು.

ಯುದ್ಧಕೋವಿದನಾದ ಶ್ರೀಕೃಷ್ಣನು ತನ್ನ ಗದೆಯನ್ನು ತಿರುಗಿಸುತ್ತಾ ಮಂಡಲಕ್ರಮಗಳನ್ನು ತೋರಿಸಿದನು. ನಿಕುಂಭನೂ ಕೂಡ ತನ್ನ ಉಕ್ಕಿನ ಮುಳ್ಳು ಗದೆಯನ್ನು ಮಂಡಲದಂತೆ ತಿರುಗಿಸುತ್ತಾ ಮಂಡಲಕ್ರಮದಲ್ಲಿ ಸುತ್ತ ತೊಡಗಿದನು.

**ವೃಷಭಾವಿವ ಗರ್ಜಂತೌ ಬೃಹಂತಾವಿವ ಕುಂಜರೌ ।**
**ಝಷಿತಾಂತರ ಮಾಸಾದ್ಯ ಕ್ರುದ್ಧೌ ಶಾಲಾವೃಕಾವಿವ ॥ 24 ॥**

ಇವರ ಯುದ್ಧ ಎರಡು ಗೂಳಿಗಳ ಯುದ್ಧದಂತೆಯೂ, ಮಹಾಗಜಗಳು ಯುದ್ಧವಾಡುವಂತೆಯೂ, ಎರಡು ತೋಳಗಳ ಯುದ್ಧದಂತೆಯೂ ಇತ್ತು.

ನಿಕುಂಭನು ಎಂಟು ಗಂಟೆಗಳಿಂದ ಕೂಡಿದ್ದ ಗದೆಯಿಂದ ಗದಾಗ್ರಜನನ್ನು ಹೊಡೆದನು. ಶ್ರೀಕೃಷ್ಣನೂ ಸಹ ಮಹಾಗದೆಯನ್ನು ಚೆನ್ನಾಗಿ ತಿರುಗಿಸುತ್ತಾ ಬಲವಾಗಿ ನಿಕುಂಭನ ತಲೆಗೆ ಹೊಡೆದನು.

**ತತ್ಕಾಲಮೇವ ಕೃಷ್ಣೋಽಪಿ ಭ್ರಾಮಯಿತ್ವಾ ಮಹಾಗದಾಮ್ ।**
**ನಿಕುಂಭ ಮೂರ್ಧನಿ ತದ್ ಪಾತಯಾಮಾಸ ಭಾರತ ॥ 25 ॥**

ತನ್ನ ಗದೆಯನ್ನು ನಿಕುಂಭನ ತಲೆಯ ಮೇಲೆ ಸ್ವಲ್ಪ ಕಾಲ ಹಾಗೆ ಸ್ಥಿರಗೊಳಿಸಿದ್ದನು. ನಂತರ ಆಯಾಸಗೊಂಡು ಮೂರ್ಛಿತನಾದವನಂತೆ ನೆಲದ ಮೇಲೆ ಕುಸಿದನು.[1]

**ಹಾಹಾಭೂತಂ ಜಗತ್ ಸರ್ವಂ ತತ್ಕಾಲ ಮಭವತ್ ತದಾ ।**
**ಆಕಾಶಗಂಗಾತೋಯೇನ ಶೀತೇನ ಚ ಸುಗಂಧಿನಾ ॥ 26 ॥**
**ಸಿಷೇಚಾಮೃತಮಿಶ್ರೇಣ ಕೃಷ್ಣಂ ದೇವೇಶ್ವರಃ ಪ್ರಭುಃ ॥ 27 ॥**

ಶ್ರೀಕೃಷ್ಣನಿಗೆ ಇಂತಹ ಅವಸ್ಥೆ ಬಂದಿತೆಂದು ಜಗತ್ತಿನಲ್ಲೆಲ್ಲ ಹಾಹಾಕಾರ ಉಂಟಾಯಿತು. ಕೂಡಲೇ ದೇವೇಂದ್ರನು ಸುಗಂಧಿಯೂ ಅಮೃತಮಿಶ್ರಿತವೂ ಆದ ಆಕಾಶಗಂಗಾ ನೀರಿನಿಂದ ಶ್ರೀಕೃಷ್ಣನಿಗೆ ಅಭಿಷೇಚಿಸಿದನು.

---

1. **ತದನ್ಯನ್ ಮೋಹನಾಯ ಚ** ಎಂಬಂತೆ ಇದು ದೈತ್ಯಮೋಹಕವೆಂದು ತಿಳಿಯುವುದು. ನರಕಾಸುರನು ಶತಘ್ನಿಯಿಂದ ಹೊಡೆದಾಗ ಶತಘ್ನಿಯನ್ನು ನುಂಗಿ ಶ್ರಮವಾದಂತೆ ನಟಿಸಿದ್ದ.
**ನಿತ್ಯ ಅಶ್ರಾಂತೋಽಪ್ಯದರ್ಶಯತ್ ಶ್ರಾಂತವಚ್ಚ ।** – *ತಾ.ನಿ. 20/101*

**ನೂನಮಾತ್ಮೇಚ್ಛಯಾ ಕೃಷ್ಣಃ ತಥಾ ಚಕ್ರೇ ಸುರೋತ್ತಮಃ ।**
**ಕೋ ಹಿ ಶಕ್ತೋ ಮಹಾತ್ಮಾನಂ ಯುದ್ಧೇ ಮೋಹಯಿತುಂ ಹರಿಮ್ ॥ 28 ॥**

ನಿಜವಾಗಿ ಹೇಳುವುದಾದರೆ ಶ್ರೀಕೃಷ್ಣನು ತನ್ನಿಚ್ಛೆಯಿಂದಲೇ ಹೀಗೆ ತನ್ನನ್ನು ಮೂರ್ಛಿತನಂತೆ ಜನರಿಗೆ ವಿಡಂಬನ ಮಾಡಿದ ಹಾಗಿಲ್ಲವಾದರೆ ಸರ್ವಸಮರ್ಥನೂ ಸರ್ವಶಕ್ತನೂ ಆದ ಭಗವಂತನನ್ನು ಮೂರ್ಛೆಗೊಳಿಸುವ ಧೈರ್ಯ ಯಾರಿಗುಂಟು?

ಇಂದ್ರನು ಗಂಗಾಜಲದಿಂದ ಅಭಿಷೇಕ ಮಾಡಿದ ಕೂಡಲೇ ಮೂರ್ಛೆ ತಿಳಿದವನಂತೆ ನಟಿಸುತ್ತಾ, ಸುದರ್ಶನ ಚಕ್ರವನ್ನು ಹಿಡಿದುಕೊಂಡು, ಎಲೋ ದುರಾತ್ಮನೇ! ಈ ಚಕ್ರದ ಏಟನ್ನು ಸಹಿಸಿಕೋ ಎಂದು ಚಕ್ರ ಪ್ರಯೋಗ ಮಾಡಿದ ಕೂಡಲೇ ದಾನವನು ಆ ಶರೀರವನ್ನು ಅಲ್ಲಿಯೇ ತ್ಯಜಿಸಿ ಮೇಲೆ ಹಾರಿ ಹೋದನು. ಹೀಗೆ ಹಾರಿ ಹೋದದ್ದನ್ನು ತಿಳಿದರೂ ತಿಳಿಯದವನಂತೆ ವೀರರ ವ್ರತವನ್ನನುಸರಿಸಿ ಬೀಳುತ್ತಿರುವ ನಿಕುಂಭನ ಶರೀರವನ್ನು ಹೊಡೆಯದೆ ರಕ್ಷಿಸಿದನು. ಪ್ರದ್ಯುಮ್ನನು ಇದನ್ನು ಅರಿತು ಶ್ರೀಕೃಷ್ಣನಿಗೆ ತಂದೆಯೇ! ದುರಾಚಾರಿಯಾದ ನಿಕುಂಭನು ಈ ಶರೀರದಲ್ಲಿಲ್ಲ. ಎಲ್ಲಿಯೋ ಅದೃಶ್ಯನಾಗಿದ್ದಾನೆ. ಅಷ್ಟರಲ್ಲಿಯೇ ನಿಕುಂಭ ಶರೀರವೂ ಮಾಯವಾಯಿತು. ಇದನ್ನು ನೋಡಿ ಅರ್ಜುನ ಕೃಷ್ಣರು ಜೋರಾಗಿ ನಗಾಡಿದರು.

**ತದಾಯುತ ಸಹಸ್ರಾಣಿ ನಿಕುಂಭಾನಾಂ ಜನಾಧಿಪ ।**
**ದದೃಶಸ್ತೇ ತತೋವೀರಾಃ ಕ್ಷಿತೌ ದಿವಿ ಚ ಸರ್ವತಃ ॥ 29 ॥**

## ಲಕ್ಷಲಕ್ಷ ನಿಕುಂಭರ ಉದಯ

ಮರುಕ್ಷಣದಲ್ಲಿಯೇ ಶ್ರೀಕೃಷ್ಣ ಅರ್ಜುನ ಪ್ರದ್ಯುಮ್ನರು ಭೂಮ್ಯಂತರಿಕ್ಷಗಳಲ್ಲಿ ಲಕ್ಷೋಪಲಕ್ಷ ನಿಕುಂಭಾಸುರರು ಕಾಣಿಸಿದರು. ಇವನ ಮಾಯೆಯನ್ನರಿತ ಮೂವರು ವೀರರು ಸಾವಿರಾರು ಕೃಷ್ಣರು, ಸಾವಿರಾರು ಅರ್ಜುನ ಪ್ರದ್ಯುಮ್ನರು ಅಂತರಿಕ್ಷ ಭೂಮಿಯಲ್ಲಿ ಕಂಡುಬಂದರು. ಈ ದೃಶ್ಯ ಪರಮಾದ್ಭುತವಾಗಿತ್ತು.

ಕೆಲವು ದಾನವರು ಅರ್ಜುನನ ಧನುಸ್ಸು ಬಾಣಗಳನ್ನು ಕಿತ್ತುಕೊಂಡರು. ಕೆಲವರಂತು ಅವನ ಪಾದಾದ್ಯವಗಳನ್ನು ಹಿಡಿದು ಗಗನಕ್ಕೆ ಹಾರಿದರು. ಕೋಟಿ ಕೋಟಿ ದೈತ್ಯರು ಕೋಟಿ ಕೋಟಿ ಅರ್ಜುನರನ್ನು ಹಿಡಿದಿದ್ದರು.

ಶ್ರೀಕೃಷ್ಣ ಪ್ರದ್ಯುಮ್ನರು ಬಾಣಗಳಿಂದ ನಿಕುಂಭ ಶರೀರಗಳನ್ನು ಕತ್ತರಿಸಿ ಹಾಕುತ್ತಿದ್ದರೂ ಅದು ಮುಗಿದಂತೆ ಕಾಣಲಿಲ್ಲ. ವಿಚಿತ್ರವೆಂದರೆ ನಿಕುಂಭನನ್ನು ಎರಡು ಭಾಗಗಳಾಗಿ ಕತ್ತರಿಸಿದರೆ ಆ ಎರಡು ಭಾಗಗಳು ಎರಡು ನಿಕುಂಭ ರೂಪ ತಾಳುತ್ತಿದ್ದವು.

ಅರ್ಜುನನ್ನು ಅಪಹರಿಸಿ ಕೊಂಡೊಯ್ದು ಮಾಯವಿಯಾದ ನಿಜವಾದ ನಿಕುಂಭನನ್ನು ಶ್ರೀಕೃಷ್ಣನು ಒಂದು ಬಾರಿ ನೋಡಿಬಿಟ್ಟನು.

ಕೂಡಲೇ ತನ್ನ ಚಕ್ರದಿಂದ ಜಗತ್ತಿನ ಸಮಕ್ಷಮದಲ್ಲಿಯೇ ನಿಕುಂಭನ ತಲೆಯನ್ನು ಕತ್ತರಿಸಿದನು.

**ಸ ಚಕ್ರೇಣ ಶಿರಸ್ತಸ್ಯ ಚಕರ್ತಾಸುರಸೂದನುಂ ॥ 30 ॥**

ನಿಕುಂಭನು ತನ್ನ ತಲೆಯನ್ನು ಚಕ್ರವು ತರಿದು ಹಾಕಿದಂತೆ ಬುಡಕಡಿದ ಮರದಂತೆ ಬಿದ್ದ ನಿಕುಂಭನು ಅರ್ಜುನನನ್ನು ಕೈಬಿಟ್ಟು ಭೂಮಿಯಲ್ಲಿ ಬಿದ್ದನು. ಪ್ರದ್ಯುಮ್ನನು ಆಕಾಶಕ್ಕೆ ಹಾರಿ ಅರ್ಜುನನನ್ನು ಹಿಡಿದುಕೊಂಡು ಕೆಳಗೆ ಬಂದನು. ನಂತರ ದ್ವಾರಕೆಗೆ ಬಂದು ನಾರದರಿಗೆ ನಮಸ್ಕರಿಸಿದರು.

## ಸಹದೇವ ಭಾನುಮತಿ ವಿವಾಹ

**ನಾರದೋಽಥ ಮಹಾತೇಜಾ ಭಾನುಂ ಯಾದವಮಬ್ರವೀತ್ ।**
**ಭಾನೋ ಮಾ ಕಾರ್ಷೀಃ ಮನ್ಯುಂ ತ್ವಂ ಶ್ರೂಯತಾಂ ಭೈಮನಂದನ ॥ 31॥**

ಭಾನುಮಂತನೇ ! ನಿನ್ನ ಮಗಳು ಅಪಹೃತಳಾದಳೆಂದು ಚಿಂತಿಸಬೇಡ. ಯಾರ ಮೇಲೂ ಕೋಪವನ್ನೂ ಮಾಡಬೇಡ ದೈವನಿರ್ಣಯವೇ ಹಾಗಿದೆ.

ನೋಡು! ಒಂದು ಬಾರಿ ನಿನ್ನ ಮಗಳು ರೈವತಕ ಪರ್ವತಕ್ಕೆ ಹೋಗಿದ್ದಳು. ಅದು ದೂರ್ವಾಸರ ತಪೋಭೂಮಿಯಾಗಿತ್ತು. ಇದನ್ನು ತಿಳಿಯದೆ ಚಾಪಲ್ಯದಿಂದ ಹಾವಭಾವ ತೋರಿದಳು. ಇದರಿಂದ ದುರ್ವಾಸರ ತಪೋಭಂಗವಾಗಿ ಅವರು ಇವಳನ್ನು ಶಪಿಸಿದರು.

**ಅತಿದುರ್ಲಲಿತೈಃ ಕನ್ಯಾ ಶತ್ರುಹಸ್ತಂ ಗಮಿಷ್ಯತಿ ॥ 32 ॥**

ಈ ಕನ್ಯೆಯು ತನ್ನ ಅತಿಯಾದ ಚೆಲ್ಲಾಟದಿಂದಾಗಿ ಶತ್ರುವು ಇವಳನ್ನು ಅಪಹರಿಸಿಕೊಂಡು ಹೋಗುವನು. ಇದು ಸತ್ಯ ಎಂದು.

ರಾಜನೇ! ನಾನು ಆಗ ಅಲ್ಲಿಯೆ ಇದ್ದೆ. ಹುಡುಗಿಗೆ ಶಾಪವನ್ನು ಕೊಟ್ಟದ್ದನ್ನು ಕೇಳಿ ಹೀಗೆಂದೆನು.

**ಬಾಲಾಂ ವ್ರತನವತೀಂ ಕನ್ಯಾಮನಗಾಸಾಮಿಮಾಂ ಮುನೇ ।**
**ಶಪ್ತವಾನಸಿ ಧರ್ಮಜ್ಞ ಕಥಂ ಧರ್ಮಭೃತಾಂ ವರ ॥ 33 ॥**

ದೂರ್ವಾಸ ಮಹರ್ಷಿಯೇ, ಈ ಬಾಲೆಯು ಕನ್ಯಾವ್ರತದಲ್ಲಿರುವವಳು ಸುಶೀಲೆಯು. ಯಾವ ಪಾಪವನ್ನು ಅರಿಯದ ಮುಗ್ಧೆ. ಧರ್ಮಾತ್ಮರಾದ ತಾವು ಈ ಕನ್ಯೆಯನ್ನು ಶಪಿಸಿರುವುದು ನ್ಯಾಯವೇ? ಇವಳ ಮೇಲೆ ದಯೆ ತೋರಿ ಎಂದು.

ನಾವೆಲ್ಲರೂ ಹೀಗೆ ಪ್ರಾರ್ಥಿಸಿದರೂ ಮೌನವಾಗಿದ್ದು ನಂತರ ಹೀಗೆಂದರು. ನನ್ನ ಶಾಪಕ್ಕೆ ತಿರುಗಿಲ್ಲ. ಆದರೂ ಶತ್ರು ಹಸ್ತ ಸೇರಿದರೂ ಅವಳು ದೂಷಿತಳಾಗದೆ ಕ್ಷೇಮವಾಗಿ ಬರುವಳು. ಮುಂದೆ ಬಹು ಪುತ್ರವಂತಳು ಸೌಭಾಗ್ಯವತಿಯೂ ಕುಲವಧುವಾಗುವಳು.

**ಸುಗಂಧಗಂಧಾ ಚ ಕುಮಾರೀ ಚ ಪುನಃಪುನಃ ।**
**ನ ಚ ಶೋಕಮಿಮಂ ಘೋರಂ ತನ್ವಂಗೀ ಧಾರಯಿಷ್ಯತಿ ॥ 34 ॥**

## ಭಾನುಮತಿಗೆ ದುರ್ವಾಸರ ಅನುಗ್ರಹ

ಇವಳ ಶರೀರದ ಗಂಧವು ಸುಗಂಧ ಯುಕ್ತವಾಗಿಯೆ ಇರುವುದು. ಪತಿಯ ಸಮಾಗಮವಾದರೂ ಇವಳು ಕನ್ಯೆಯಾಗಿಯೆ ಉಳಿದಿರುತ್ತಾಳೆ. ಇವಳಿಗೆ ಅಪಹಾರದಿಂದಾದ ಶೋಕದ ಸ್ಮೃತಿಯು ಉಳಿಯುವುದಿಲ್ಲ.

**ಏವಂ ಭಾನುಮತೀ ವೀರ ಸಹದೇವಾಯ ದೀಯತಾಮ್ ।**
**ಶ್ರದ್ಧಧಾನಃ ಸ ಶೂರಶ್ಚ ಧರ್ಮಶೀಲತ್ವ ಪಾಂಡವಃ ॥ 35 ॥**

ಭಾನುವೇ! ನನ್ನ ಈ ಮಾತನ್ನು ಕೇಳಿ ನಿನ್ನ ಕನ್ಯೆಯನ್ನು ಪಾಂಡವ ಪಂಚಮನಾದ ಸಹದೇವನಿಗೆ ಧಾರೆಯೆರೆದು ಕೊಡು. ಸಹದೇವನೂ ದೇವರು ಭಕ್ತರಲ್ಲಿ ಶ್ರದ್ಧಾವಂತನು, ಮಹಾಶೂರನೂ, ಧರ್ಮವೇತ್ತನೂ ಆಗಿರುವನು.

ಹೀಗೆ ನಾರದರ ಮಾತನ್ನು ಕೇಳಿ ಋಷಿಯ ಮಾತಿನಂತೆ ಭಾನುಮತಿಯನ್ನು ಸಹದೇವನಿಗೆ ವಿವಾಹ ಮಾಡಿಕೊಟ್ಟನು. ಈ ಕೃಷ್ಣನ ಮಹಿಮೆಯನ್ನು ಕೇಳುವವರಿಗೆ ಸರ್ವತ್ರ ವಿಜಯಿಯಾಗುವನು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ**
**ಸಹದೇವ-ಭಾನುಮತೀ ವಿವಾಹವೆಂಬಲ್ಲಿ**
**ತೊಂಬತ್ತನೆಯ ಅಧ್ಯಾಯ ಸಮಾಪ್ತಿ**

ವಿಷ್ಣುಪರ್ವ 91 ವಿಷ್ಣುಪರ್ವ

# ಅಥ ಏಕನವತಿತಮೋಽಧ್ಯಾಯಃ

## ವಜ್ರನಾಭನ ತಪಸ್ಸು

**ಭಾನುಮತ್ಯಾಪಹರಣಂ ವಿಜಯಂ ಕೇಶವಸ್ಯ ಚ ।**
**ಛಾಲಿಕ್ಯನಯನಂ ಚೈವ ದೇವಲೋಕಾನ್ ಮಹಾಮುನೇ ॥ 1 ॥**

ಜನಮೇಜಯನು ಹೇಳುವನು – ವೈಶಂಪಾಯನರೇ, ತಾವು ನನಗೆ ಭಾನುಮತಿ ಅಪಹರಣ, ಶ್ರೀಕೃಷ್ಣನ ವಿನಯ, ಛಾಲಿಕ್ಯವೆಂಬ ಗಾಂಧರ್ವ ವಿದ್ಯೆಯನ್ನು ಭೂಮಿಗೆ ತರುವುದು. ಸಾಗರದಲ್ಲಿ ಜಲಕೇಳೀ, ಇದೆಲ್ಲ ಕೇಳಿದ್ದೇನೆ.

ನಿಕುಂಭನ ವಧೆಯ ಸಂದರ್ಭದಲ್ಲಿ ವಜ್ರನಾಭನ ಸಂಹಾರವನ್ನು ಹೇಳಿದ್ದೀರಿ. ವಜ್ರನಾಭನ ವಧೆಯನ್ನು ವಿಸ್ತಾರವಾಗಿ ಹೇಳಿರಿ.

**ಹಂತ ಮೇ ವರ್ತಯಿಷ್ಯಾಮಿ ವಜ್ರನಾಭವಧಂ ನೃಪ ।**
**ವಿಜಯಂ ಚೈವ ಕಾಮಸ್ಯ ಸಾಂಬಸ್ಯೈವ ಚ ಭಾರತ ॥ 2 ॥**

**ಮೇರೋಃ ಸಾನೌ ನರಪತೇ ತಪಶ್ಚಕ್ರೇ ಮಹಾಸುರಃ ।**
**ವಜ್ರನಾಭ ಇತಿ ಖ್ಯಾತೋ ನಿಶ್ಚಿತಃ ಸಮಿತಿಂಜಯಃ ॥ 3 ॥**

ರಾಜನೇ! ನೀನು ಕೇಳಿದಂತೆ ವಜ್ರನಾಭನ ವೃತ್ತಾಂತವನ್ನು ಪ್ರದ್ಯುಮ್ನ – ಸಾಂಬ ಇವರ ವಿಜಯವನ್ನೂ ಹೇಳುವೆ. ಕೇಳು.

ಜಗತ್ತನ್ನೆ ಗೆಲ್ಲಬೇಕೆಂಬ ನಿಶ್ಚಯ ಹೊಂದಿದ್ದ ವಜ್ರನಾಭನೆಂಬ ಅಸುರನು ಮೇರುವಿನ ಬುಡದಲ್ಲಿ ತಪಸ್ಸನ್ನಾಚರಿಸುತ್ತಿದ್ದನು. ತಪಸ್ಸಿಗೆ ಮೆಚ್ಚಿದ

ಬ್ರಹ್ಮದೇವನು 'ವರವನ್ನು ಬೇಡು' ಎನ್ನಲಾಗಿ ಯಾವ ದೇವತೆಯಿಂದಲೂ ವಧ್ಯನಾಗದಂತೆ ವರವನ್ನು, ಸರ್ವರತ್ನೋಪೇತ 'ವಜ್ರಪುರ'ವನ್ನೂ ಬೇಡಿದನು.

**ಅವಧ್ಯತ್ವಂ ಸ ದೇವೇಭ್ಯೋ ವವ್ರೇ ದಾನವಸತ್ತಮಃ ।**
**ಪುರಂ ವಜ್ರಪುರಂ ಚಾಪಿ ಸರ್ವರತ್ನಮಯಂ ಶುಭಮ್ ॥ 4 ॥**

ಬ್ರಹ್ಮದೇವನ ವರದಂತೆ ಆ ಪುರವು ನಾಲ್ಕು ಕಡೆಗಳಲ್ಲಿಯೂ ಪ್ರಾಕಾರ ತೋರಣ ಉದ್ಯಾನಗಳಿದ್ದವು. ಉಪನಗರದಿಂದ ಶೋಭಿತ ವಜ್ರಪುರದಲ್ಲಿ ಮನೋ–ವಾಂಛಿತವೆಲ್ಲ ಕೈಗೂಡುತ್ತಿತ್ತು. ಈ ಪುರದಲ್ಲಿ ಗಾಳಿ ಬೀಸಲು ಸಹ ವಜ್ರನಾಭನ ಆದೇಶ ಪಡೆಯಬೇಕಿತ್ತು. ಕೋಟಿ ಕೋಟಿ ದೈತ್ಯರು ಈ ವಜ್ರನಾಭನ ಆಶ್ರಯದಲ್ಲಿದ್ದರು. *[ಸ್ವಚ್ಛಂದೇನ ವಾಯೋರಪಿ ನ ಪ್ರದೇಶಃ]* ಈ ವರದಿಂದಾಗಿ ದುರಹಂಕಾರಿಯಾಗಿ ಲೋಕವನ್ನು ಪೀಡಿಸಲಾರಂಭಿಸಿದನು.

**ಮಹೇಂದ್ರ ಮಬ್ರವೀದ್ ಗತ್ವಾ ದೇವಲೋಕಂ ವಿಶಾಂಪತೇ ।**
**ಅಹಮೀಶಿತುಮಿಚ್ಛಾಮಿ ತ್ರೈಲೋಕ್ಯಂ ಪಾಕಶಾಸನ ॥ 5 ॥**

**ಸಾಮಾನ್ಯಂ ಹಿ ಜಗತ್ ಕೃತ್ಸ್ನಂ ಕಾಶ್ಯಪಾನಾಂ ಮಹಾತ್ಮನಾಮ್ ।**
**ಅಥವಾ ಮೇ ಪ್ರಯಚ್ಛಸ್ವ ಯುದ್ಧಂ ದೇವಗಣೇಶ್ವರ ॥ 6 ॥**

ವಜ್ರನಾಭನು ದೇವಲೋಕಕ್ಕೆ ಹೋಗಿ ಇಂದ್ರನೊಡನೆ ಹೀಗೆಂದನು. "ನಾವೆಲ್ಲರೂ ಕಶ್ಯಪ ಸಂತತಿಯವರೇ ಆಗಿರುವೆನು. ನೀನು ಮಾತ್ರ ತ್ರೈಲೋಕ್ಯ ಆಳಬೇಕೆಂದು ನಿಯಮವೇನಿಲ್ಲ. ನಮಗೂ ಕೆಲಕಾಲ ಅಧಿಪತ್ಯ ನೀಡು ಅನ್ಯಥಾ ನಮ್ಮೊಂದಿಗೆ ಯುದ್ಧಕ್ಕೆ ಸಿದ್ಧನಾಗು" ಎಂದು.

ಇಂದ್ರದೇವನು ಬೃಹಸ್ಪತ್ಯಾಚಾರ್ಯರೊಂದಿಗೆ ವಿಚಾರ ಮಾಡಿ ಹೀಗೆಂದನು.

**ಸತ್ರೇಷು ದೀಕ್ಷಿತಃ ಸೌಮ್ಯ ಕಶ್ಯಪೋ ನಃ ಪಿತಾ ಮುನಿಃ ।**
**ತಸ್ಮಿನ್ ವೃತ್ತೇ ಯಥಾ ನ್ಯಾಯ್ಯಂ ತಥಾ ಸ ಕರಿಷ್ಯತಿ ॥ 7 ॥**

ನಮ್ಮಿಬ್ಬರ ತಂದೆ ಕಶ್ಯಪನು ಈಗ ಸತ್ರಯಾಗದಲ್ಲಿ ದೀಕ್ಷಿತನಾಗಿರುವನು. ಅದು ಮುಗಿದ ಮೇಲೆ ನಮ್ಮ ವಿವಾದ ಅವನ ಮುಂದೆ ಹೇಳೋಣ. ಅವನು ಹೇಳಿದಂತೆ ಕೇಳೋಣ ಎಂದನು.

ಈ ಮಾತಿನಿಂದ ವಜ್ರನಾಭನು ತಂದೆಯ ಬಳಿ ಬಂದು ತನ್ನ ಇಚ್ಛೆಯನ್ನು ತಿಳಿಸಿದನು. ಕಶ್ಯಪನು ನನ್ನ ಯಾಗ ಮುಗಿದ ಮೇಲೆ ವಿವಾದ ಪರಿಹರಿಸುವೆನು ಎಂದನು.

**ಸತ್ರೇ ವೃತ್ತೇ ಕರಿಷ್ಯಾಮಿ ಯಥಾ ನ್ಯಾಯ್ಯಂ ಭವಿಷ್ಯತಿ ॥ 8 ॥**

## ವಜ್ರನಾಭನ ದುಷ್ಟಪ್ರವೃತ್ತಿ

ಇದನ್ನು ಕೇಳಿ ವಜ್ರಪುರಕ್ಕೆ ಹೋಗಿ ಕಾಲ ನಿರೀಕ್ಷಿಸುತ್ತಿದ್ದನು. ಇತ್ತ ಮಹೇಂದ್ರನೂ ಶ್ರೀಕೃಷ್ಣನ ಬಳಿ ಬಂದು ತನಗೆ ಬಂದ ಆಪತ್ತನ್ನು ಪರಿಹರಿಸ-ಬೇಕೆಂದು ಏಕಾಂತದಲ್ಲಿ ಅರುಹಿದನು. ಶ್ರೀಕೃಷ್ಣನು ಇಂದ್ರನೇ! ನಮ್ಮ ತಂದೆಯ ಅಶ್ವಮೇಧದಲ್ಲಿ ದೀಕ್ಷಿತನಾಗಿರುವನು.

**ಶೌರೇರುಪಸ್ಥಿತೋ ದೇವ ವಾಜಿಮೇಧೋ ಮಹಾಕ್ರತುಃ ।**
**ತಸ್ಮಿನ್ ವೃತ್ತೇ ವಜ್ರನಾಭಂ ಪಾತಯಿಷ್ಯಾಮಿ ವಾಸವ ॥ 9 ॥**

ವಜ್ರನಾಭನ ಪುರವೂ ದುರ್ಭೇದ್ಯವಾಗಿದೆ. ವಾಯುವೂ ಕೂಡ ಆ ಪುರ ಪ್ರವೇಶ ಮಾಡಲು ವಜ್ರನಾಭನ ಆದೇಶ ಬೇಕಾಗುತ್ತದೆ. ಆ ಪುರ ಪ್ರವೇಶ ಮಾಡಲು ಉಪಾಯದಿಂದ ಸಾಧಿಸೋಣ. ನಮ್ಮ ತಂದೆಯವರ ಯಜ್ಞದಲ್ಲಿ ಭಾಗವಹಿಸಿದವರೆಲ್ಲರನ್ನೂ ತನ್ನ ಅಭಿನಯ ಚತುರತೆಯಿಂದ ಸಂತೋಷಪಡಿಸಿದ ಭದ್ರನೆಂಬ ಒಬ್ಬ ನಟನಿರುವನು. ಅವನು ನಮ್ಮ ಕಾರ್ಯ ಮಾಡುವನು.

**ತತ್ರ ಯಜ್ಞೇ ವರ್ತಮಾನೇ ಸುನಾಟ್ಯೇವ ನಟಸ್ತದಾ ।**
**ಮಹರ್ಷೀಂ ಸ್ತೋಷಯಾಮಸ ಭದ್ರನಾಮೇತಿ ನಾಮತಃ ॥ 10 ॥**

ಸಂತುಷ್ಟರಾದ ಋಷಿಮುಖ್ಯರು ಭದ್ರನಿಗೆ ಏನಾದರೂ ವರವನ್ನು ಬೇಡು ಎಂದರು.

ಭದ್ರನು ಇಂದ್ರ ಕೃಷ್ಣರ ಹಾಗೂ ಸರಸ್ವತಿಯಿಂದಲೂ ಪ್ರೇರಿತನಾಗಿ ಹೀಗೆಂದನು. ಋಷಿಗಳೇ, ನಾನು ಪ್ರತಿದಿವಸ ಬ್ರಾಹ್ಮಣರಿಗೆ ಭೋಜನ ಮಾಡಿಸು-ವಂತಾಗಬೇಕು. *[ಭೋಜ್ಯೋ ದ್ವಿಜಾನಾಂ ಭವೇಯಂ].*

ಸಪ್ತದ್ವೀಪ ಪೃಥಿವಿಯನ್ನು ಎಲ್ಲಿ ಬೇಕಾದರೆ ಅಲ್ಲಿಗೆ ಹೋಗುವ ಸಾಮರ್ಥ್ಯ ಬರಲಿ. ನನಗೆ ಆಕಾಶದಲ್ಲಿ ಸಂಚರಿಸುವಂತೆಯೂ ಅನುಗ್ರಹಿಸಿ. ಸರ್ವಪ್ರಾಣಿ-ಗಳಿಂದಲೂ ನಾನು ಅವಧ್ಯನಾಗಿರಬೇಕು.

## ಭದ್ರನ ವರ ಪ್ರಾರ್ಥನೆ

**ಅವಧ್ಯಃ ಸರ್ವಭೂತಾನಾಂ ಸ್ಥಾವರಾ ಯೇ ಚ ಜಂಗಮಾಃ ॥ 11 ॥**

ಯಾರೆ ಆಗಲಿ ಸತ್ತು ಹೋದ, ಬದುಕಿರುವ, ಮುಂದೆ ಜನಿಸುವವನ ಯಾವ

ವೇಷವನ್ನು ನಾನು ಧರಿಸುವಂತಾಗಬೇಕು. ಆ ವೇಷ ನನ್ನಲ್ಲಿ ಬರಬೇಕು. ಆ ವೇಷದಲ್ಲಿಯೇ ನಾನು ನಾಟ್ಯವಾಡಬೇಕು. ನನಗೆ ಮುಪ್ಪು ರೋಗರುಜಿನಗಳಿಂದ ದೂರನಾಗಿರಬೇಕು. *[ಜರಾರೋಗ ವಿವರ್ಜಿತಃ]* ಋಷಿ ಮುನಿಗಳು ನನ್ನ ಮೇಲೆ ಯಾವಾಗಲೂ ಸಂತೃಪ್ತರಾಗಿರಬೇಕು.

**ಯಸ್ಯ ಯಸ್ಯ ಚ ವೇಷೇಣ ಪ್ರವಿಶೇಯಮಹಂ ಖಲು ।**
**ಮೃತಸ್ಯ ಜೀವತೋ ವಾಪಿ ಭಾವ್ಯೇನೋತ್ಪಾದಿತಸ್ಯ ವಾ ॥ 12 ॥**

ಈ ವರಗಳನ್ನೆಲ್ಲ ಕೇಳಿ ಋಷಿಗಳು ಹಾಗೆ ಆಗಲಿ ಎಂದರು. ಅಂದಿನಿಂದಲೂ ಸಪ್ತದ್ವೀಪ ಭೂಮಿಯಲ್ಲಿ ಸಂಚರಿಸುತ್ತಲೇ ಇದ್ದಾನೆ. ಹೀಗೆ ಭದ್ರಾಶ್ವ ಕೇತುಮಾಲಗಳಲ್ಲಿ ಸಂಚರಿಸುತ್ತಾ ಕೆಲವೊಮ್ಮೆ ಪರ್ವದಿನಗಳಲ್ಲಿ ದ್ವಾರಕೆಗೂ ಬರುವನು. ಅವನ ಸಹಾಯ ಪಡೆದು ಅಭೇದ್ಯ ವಜ್ರನಾಭಪುರ ಪ್ರವೇಶವು ಸುಭೇದ್ಯವಾಗುತ್ತದೆ.

## ಇಂದ್ರನ ಹಂಸಗಳಿಗೆ ಆದೇಶ

ಒಂದು ಬಾರಿ ಇಂದ್ರನು ಹಂಸಗಳನ್ನುದ್ದೇಶಿಸಿ ಹಂಸಗಳೇ! ನೀವೂ ಕಶ್ಯಪನ ಸಂತಾನದವರೇ ಅಂದರೆ ನಮಗೂ ಸಹೋದರರು.

ನೀವು ದೇವತೆಗಳು ಹಾಗೂ ಪುಣ್ಯಕರ್ಮದಿಂದ ಸ್ವರ್ಗ ಸೇರಿರುವ ಸುಜೀವಿಗಳಿಗೆ ವಿಮಾನವನ್ನು ಹೊತ್ತು ನಡೆಯುವಿರಿ. ನಿಮಗೆ ಸರ್ವತ್ರ ಸಂಚಾರ ಸಾಮರ್ಥ್ಯವಿದೆ. ಈಗ ಶತ್ರುವಧರೂಪ ದೇವ ಕಾರ್ಯವೊದಗಿದೆ. ವಜ್ರನಾಭನ ವಜ್ರವೆಂಬ ಪಟ್ಟಣವಿದೆ. ನಿಮಗೆ ಮಾತ್ರ ಅಲ್ಲಿಗೆ ಹೋಗುವ ಸಾಮರ್ಥ್ಯವಿದೆ. ನೀವು ವಜ್ರಪುರಕ್ಕೆ ಹೋಗಿ ಅಲ್ಲಿರುವ ಸರೋವರಗಳಲ್ಲಿ ವಿಹರಿಸಿರಿ.

**ತಸ್ಯಾಸ್ತಿ ಕನ್ಯಾರತ್ನಂ ಹಿ ತ್ರೈಲೋಕ್ಯಾತಿಶಯಂ ಶುಭಂ ।**
**ನಾಮ್ನಾ ಪ್ರಭಾವತೀ ನಾಮ ಚಂದ್ರಾಭೇವ ಪ್ರಭಾವತೀ ॥ 13 ॥**

ವಜ್ರನಾಭನಿಗೆ ರತ್ನ ಸದೃಶವಾದ ಪ್ರಭಾವತೀಯೆಂಬ ಕನ್ಯಾರತ್ನವಿರುವಳು.

## ಹಂಸ ಸಂದೇಶ ಪ್ರಸ್ತಾವ

**ವರದಾನೇನ ಸಾ ಲಬ್ಧಾ ಮಾತ್ರಾ ಕಿಲ ವರಾನನಾ ।**
**ಹೈಮವತ್ಯಾಃ ಮಹಾದೇವ್ಯಾಃ ಸಕಾಶಾದಿತಿ ನಃ ಶ್ರುತಮ್ ॥ 14 ॥**

ಹಿಮಾಲಯನ ಪುತ್ರಿ ಹೈಮವತಿಯ ಆರಾಧನೆಯಿಂದಾಗಿ ಪ್ರಭಾವತಿಯ ತಾಯಿ ಪ್ರಭಾವತಿಯಂತಹ ಸ್ತ್ರೀರತ್ನವನ್ನು ಪಡೆದಿರುವಳು.

ಬಂಧುಗಳೆಲ್ಲರೂ ಅವಳನ್ನು ಅಪ್ರಮತ್ತರಾಗಿ ರಕ್ಷಿಸುತ್ತಿರುವರು. ಹಂಸಗಳೇ! ನೀವು ಪ್ರಭಾವತಿಯ ಸ್ನೇಹ ಸಂಪಾದಿಸಬೇಕು. ಪ್ರದ್ಯುಮ್ನ ರೂಪ ವೀರ್ಯ ಗುಣಗಳನ್ನು ಅವಳ ಮುಂದೆ ವರ್ಣಿಸಬೇಕು. ಅವಳ ಮನಸ್ಸು ಅವನಲ್ಲಿಯೆ ಲಗ್ನವಾಗುವಂತೆ ಮಾಡಿರಿ.

ತದ್ಭವದ್ಭಿಃ ಗುಣಾ ವಾಚ್ಯಾಃ ಪ್ರದ್ಯುಮ್ನಸ್ಯ ಮಹಾತ್ಮನಃ ।
ಯದಾ ಸಾ ರಕ್ತ ಭಾವಾ ಚ ವಜ್ರನಾಭಸುತಾ ಸತೀ ॥ 15 ॥

ತಸ್ಯಾಃ ಸಕಾಶಾತ್ ಸಂದೇಶೋ ನಯಿತವ್ಯಃ ಸಮಾಧಿನಾ ।

ಪಾರ್ವತಿಯ ವರದಿಂದ ಜನಿಸಿದ ಪ್ರಭಾವತಿಯು ಪ್ರದ್ಯುಮ್ನನೊಂದಿಗೆ ಪತ್ನಿಯಾಗಿ ಇರಲು ಯೋಗ್ಯಳಾಗಿರುವಳು. ಪ್ರಭಾವತಿಯು ಪ್ರದ್ಯುಮ್ನನ ಗುಣಗಳಿಂದ ಅನುರಕ್ತಳಾಗಿರುವಳೆಂದು ತಿಳಿದು, ಅವರಿಬ್ಬರ ಪ್ರೇಮ ಸಂದೇಶವನ್ನು ಹೊತ್ತು ದೇವಕಾರ್ಯ ಸಾಧಿಸಿರಿ.

ವೃತ್ತಾಂತಶ್ಚ ಅನು ದಿವಸಂ ಪ್ರದೇಯೋ ಮಮ ಸರ್ವಥಾ ।
ದ್ವಾರವತ್ಯಾಂ ಚ ಕೃಷ್ಣಸ್ಯ ಭ್ರಾತುರ್ಮಮ ಯವೀಯಸಃ ॥ 16 ॥

ಪ್ರತಿದಿನವೂ ನಡೆದ ವಾರ್ತೆಯನ್ನು ನನಗೂ ಹಾಗೂ ನನ್ನ ತಮ್ಮ ಉಪೇಂದ್ರನಿಗೆ ತಿಳಿಸುತ್ತಿರಬೇಕು. ಪ್ರದ್ಯುಮ್ನನು ಪ್ರಭಾವತಿಯನ್ನು ತನ್ನ ವಶ ಮಾಡಿಕೊಳ್ಳುವವರೆಗೂ ನಿಮ್ಮ ಪ್ರಯತ್ನ ನಡೆಯುತ್ತಿರಲಿ.

ಅವಧ್ಯಾಸ್ತೇ ತು ದೇವಾನಾಂ ಬ್ರಹ್ಮಣೋ ವರದರ್ಪಿತಾಃ ।
ದೇವಪುತ್ರೈರ್ಹಿ ಹಂತವ್ಯಾಃ ಪ್ರದ್ಯುಮ್ನ ಪ್ರಮುಖೈಃ ಯುಧಿ ॥ 17 ॥

ನಟೋ ದತ್ತ ವರಸ್ತಸ್ಯ ವೇಷಮಾಸ್ಥಾಯ ಯಾದವಾಃ ।
ಪ್ರದ್ಯಮ್ನಾದ್ಯಾಃ ಗಮಿಷ್ಯಂತಿ ವಜ್ರನಾಭ ವಿನಾಶನಾಃ ॥ 18 ॥

ಪ್ರದ್ಯುಮ್ನಾದಿ ಯಾದವರು ಋಷಿಗಳಿಂದ ವರವನ್ನು ಪಡೆದಿರುವ ಭದ್ರನೆಂಬ ನಟನ ವೇಷ ಧರಿಸಿ ವಜ್ರನಾಭನ ಪುರವನ್ನು ಪ್ರವೇಶಿಸುವರು.

ಹಂಸಗಳೇ ನಾವು ಹೇಳಿದಂತೆ ಮಾಡಿರಿ. ಮಂತ್ರಾಲೋಚನೆಯು ಮಂತ್ರಾಲೋಚನೆಯಾಗಿಯೆ ಇರಲಿ ಬಹಿರಂಗವಾಗುವುದು ಬೇಡ. ಯಾವ

ಪುರಕ್ಕೆ ದೇವತೆಗಳಿಗೂ ಪ್ರವೇಶವಿಲ್ಲವೊ ಅಲ್ಲಿಗೆ ನೀವು ಹೋಗಿ ವಿಹರಿಸಿರಿ ಎಂದನು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ**
**ಇಂದ್ರನು ಹಂಸಗಳಿಗೆ ನೀಡಿದ ಕರ್ತವ್ಯಾದೇಶವೆಂಬಲ್ಲಿ**
**ತೊಂಬತ್ತೊಂದನೆಯ ಅಧ್ಯಾಯ ಸಮಾಪ್ತಿ**

ವಿಷ್ಣುಪರ್ವ 92 ವಿಷ್ಣುಪರ್ವ

# ಅಥ ದ್ವಿನವತಿತಮೋಽಧ್ಯಾಯಃ

## ಹಂಸಗಳು ವಜ್ರಪುರದಲ್ಲಿ ನಿವಾಸ

**ತೇ ವಾಸವವಚಃ ಶ್ರುತ್ವಾ ಹಂಸಾ ವಜ್ರಪುರಂ ಯಯುಃ ।**
**ಪೂರ್ವೋಚಿತಂ ಹಿ ಗಮನಂ ತೇಷಾಂ ತತ್ರ ಜನಾಧಿಪ ॥ 1 ॥**

ಇಂದ್ರನ ಆದೇಶದಂತೆ ಧಾರ್ತರಾಷ್ಟ್ರ ಪಕ್ಷಿಗಳು ನಿರಾತಂಕವಾಗಿ ವಜ್ರಪುರ ಸೇರಿ ಅಲ್ಲಿನ ಸರೋವರದಲ್ಲಿ ವಿಹರಿಸುತ್ತಿದ್ದವು. ಸುವರ್ಣಕಮಲ ಸರೋವರಗಳಲ್ಲಿ ವಿಹರಿಸುತ್ತಿದ್ದ ಹಂಸಗಳು ಶುದ್ಧ ಸಂಸ್ಕೃತ ಮಾತನಾಡುತ್ತಿದ್ದವು *[ಸಂಸ್ಕೃತಾ ಪೂರ್ವ ಭಾಷಿಣಃ]*. ಇದರಿಂದಾಗಿ ನೋಡುವ ಸ್ತ್ರೀಯರಿಗೆಲ್ಲ ವಿಸ್ಮಯವುಂಟಾಗುತ್ತಿತ್ತು. ಈ ಪಕ್ಷಿಗಳನ್ನು ಒಮ್ಮೆ ವಜ್ರನಾಭನೂ ನೋಡಿದನು. ಹಂಸಗಳೇ ! ನೀವು ಸ್ವರ್ಗದಲ್ಲಿರತಕ್ಕವರು

**ಆಗಂತವ್ಯಂ ಜಾಲಪಾದಾಃ ಸ್ವಮಿದಂ ಭವತಾಂ ಗೃಹಮ್ ।**
**ಯದ್ಯೈವೇಹೋತ್ಸವೋಽಸ್ಮಾಕಂ ಭವದ್ಭಿರವಗಮ್ಯತೇ ॥ 2 ॥**

ನಮ್ಮ ಊರಿನಲ್ಲಿ ಉತ್ಸವವಿದೆಯೆಂದು ತಿಳಿದ ಕೂಡಲೇ ನೀವೆಲ್ಲ ಉತ್ಸವಕ್ಕೆ ಬರಬಹುದು. ನಿಮ್ಮದೇ ಮನೆಯೆಂದು ತಿಳಿಯಿರಿ ಎಂದನು.

ಹಂಸಗಳು ಮಾನುಷಾಲಾಪಚತುರತೆ ನೋಡಿದ ಸ್ತ್ರೀಕೂಟವನ್ನೇ ಮೈ ಮರೆಸಿತು.

ದೈತ್ಯೇಂದ್ರನ ಆದೇಶದಂತೆ ಅರಮನೆಗೆ ಪ್ರವೇಶಿಸಿ ದೇವತಕಾರ್ಯ ಸಿದ್ಧಿಗಾಗಿ ಅಂತಃಪುರದವರನ್ನು ಪರಿಚಯ ಮಾಡಿಕೊಂಡವು.

ಪ್ರತಿದಿನವು ಮಂಗಳಕರವಾದ ಅನೇಕ ವಿಚಿತ್ರ ಕಥೆಗಳನ್ನು ಹೇಳುತ್ತಿದ್ದವು. ಹೀಗೆ ದಾನವ ಸ್ತ್ರೀಯರಿಗೆ ಮನಸ್ಸಿಗೆ ಉಲ್ಲಾಸವಾಗುವ ರೀತಿಯಲ್ಲಿ ಕಾಶ್ಯಪವಂಶೀಯ ಕಥೆಗಳನ್ನು ಹೇಳುತ್ತಿದ್ದವು.

**ವಿಚರಂತಃ ತತೋ ಹಂಸಾಃ ದದೃಶುಃ ಚಾರುಹಾಸಿನೀಮ್ ।**
**ಪ್ರಭಾವತೀಂ ವರಾರೋಹಾಂ ವಜ್ರನಾಭ ಸುತಾಂ ತದಾ ॥ 3 ॥**

ಅರಮನೆಯಲ್ಲಿ ಯಥೇಚ್ಛ ಸಂಚರಿಸುತ್ತಿದ್ದ ಹಂಸಗಳು ಒಮ್ಮೆ ವಜ್ರನಾಭನ ಮಗಳಾದ ಪ್ರಭಾವತಿಯನ್ನು ನೋಡಿದವು. ಇವಳ ಪರಿಚಯ ಮಾಡಿ–ಕೊಂಡವು. ಪ್ರಭಾವತಿಯೂ ಸಹ ಹಂಸಗಳಲ್ಲಿ 'ಶುಚಿಮುಖೀ' ಎಂಬ ಹಂಸವನ್ನು ತನ್ನ ಆಪ್ತಮಿತ್ರಗಳನ್ನಾಗಿ ಮಾಡಿಕೊಂಡಳು.

**ಸಖೀಂ ಶುಚಿಮುಖೀಂ ಚಕ್ರೇ ಹಂಸೀಂ ರಾಜಸುತಾ ತದಾ ।**

ಶುಚಿಮುಖಿಯು ಪ್ರಭಾವತಿಗೆ ಚಿತ್ರ ವಿಚಿತ್ರ ನೂರಾರು ಕಥೆಗಳನ್ನು ಹೇಳುತ್ತಿತ್ತು. ಇದರಿಂದ ಪ್ರಭಾವತಿಗೆ ಅತೀವಿಶ್ವಾಸ ಮೂಡಿತು. ತನ್ನಲ್ಲಿ ವಿಶ್ವಸ್ತಳಾದ ರಾಜಕುಮಾರಿಯನ್ನು ಶುಚಿಮುಖಿಯು ಹೀಗೆಂದಳು – ಪ್ರಭಾವತಿ! ನೀನು ಅಪ್ರತಿಮ ಸೌಂದರ್ಯರಾಶಿಯಾಗಿರುವೆ. ಈ ನಿನ್ನ ಯೌವನವು ನದಿಯಲ್ಲಿ ನೀರು ಹರಿದು ಹೋಗುವಂತೆ ಹರಿದು ಹೋಗುತ್ತಿದೆ. ಹೋದ ನೀರು ಮರಳಿ ಬರಲಾರದು. ಹೋದ ಯೌವನ ಬರಲಾರದಷ್ಟೆ!

**ಯದತೀತಂ ಪುನರ್ನೈತಿ ಗತಂ ಸ್ರೋತ ಇವಾಂಭಸಃ ॥ 4 ॥**

ದೇವಿಯೇ! ಸ್ತ್ರೀಯರಿಗೆ ಕಾಮೋಪಭೋಗಕ್ಕೆ ಸರಿಸಮನಾದ ಸುಖ ಬೇರೊಂದಿಲ್ಲ. ಹಿಂದೆ ನಿನ್ನ ಸ್ವಯಂವರದಲ್ಲಿ ನೀನು ದೇವ–ದಾನವರಲ್ಲಿ ಯಾರನ್ನೂ ವರಿಸಲಿಲ್ಲ. ಏಕೆ! ಎಂದು ನೀನು ನಿನ್ನ ಕುಲ ರೂಪಗಳಿಗೆ ಸದೃಶರಾದವರನ್ನೂ ವರಿಸದೆ ಅವರನ್ನು ಲಜ್ಜೆಗೀಡು ಮಾಡಿದೆ.

ರೂಪದಲ್ಲಾಗಲೀ, ಕುಲದಲ್ಲಾಗಲೀ, ಗುಣಶೌರ್ಯಗಳಲ್ಲಿ ಅದ್ವಿತೀಯನಾದ ರುಕ್ಮಿಣಿಯ ಪುತ್ರ ಪ್ರದ್ಯುಮ್ನನಿದ್ದಾನೆ.

**ತ್ರೈಲೋಕ್ಯೇ ಯಸ್ಯ ರೂಪೇಣ ಸದೃಶೋ ನ ಕುಲೇನ ವ ।**
**ಗುಣೈರ್ವಾ ಚಾರುಸರ್ವಾಂಗಿ ಶೌರ್ಯೇಣಾಪ್ಯತಿವಾ ಶುಭೇ ॥ 5 ॥**
**ಮಾನುಷೇಷ್ವಪಿ ಧರ್ಮಾತ್ಮಾ ಮನುಷ್ಯಃ ಸ ಮಹಾಬಲಃ ॥ 6 ॥**

ಮಹಾಬಲಿಷ್ಠನಾದ ಪ್ರದ್ಯುಮ್ನನು ದೇವತೆಗಳಲ್ಲಿ ದೇವತೆಯಂತೆಯೂ ದಾನವರಲ್ಲಿ ದಾನವನಂತೆ, ಮನುಷ್ಯರಲ್ಲಿ ಮನುಷ್ಯರಂತೆ ಇರುವನು.

ಪ್ರದ್ಯುಮ್ನನ ಮುಖಕ್ಕೆ ಕಳಂಕವಿರುವ ಚಂದ್ರನನ್ನು ಹೋಲಿಸಲಾರೆ. ಬಾಡುವ ಸ್ವಭಾವವುಳ್ಳ ಕಮಲವನ್ನು ಅವನ ನಯನಗಳಿಗೊ ಹೇಳಲಾರೆ. ಉದಾಸೀನ ಸ್ವಭಾವದ ಸಿಂಹದ ನಡಿಗೆಗೆ ಅವನ ನಡಿಗೆ ಹೋಲಿಸಲಾಗದು *[ಉತ್ಸಹೇ ನೋಪಮಾತುಂ]*.

ಶ್ರೀಕೃಷ್ಣನು ಸಮಸ್ತ ಜಗತ್ತಿನ ಸಾರ ತೆಗೆದುಕೊಂಡು ಅನಂಗನಾದ ಮನ್ಮಥನನ್ನು ಅಂಗಸಹಿತವನ್ನಾಗಿ ಮಾಡಿ ಪ್ರದ್ಯುಮ್ನನನ್ನು ಸೃಷ್ಟಿಸಿರುವನು *[ಕೃತ್ವಾನಂಗಂ ಸಾಂಗಂ]*.

**ಹೃತೇನ ಶಂಬರೋ ಬಾಲ್ಯೇ ಯೇನ ಪಾಪೋ ನಿವರ್ಹಿತಃ ।**
**ಮಾಯಾಶ್ಚ ಸರ್ವಾ ಸಂಪ್ರಾಪ್ತಾ ನ ಚ ಶೀಲಂ ವಿನಾಶಿತಮ್ ॥ 7 ॥**

ಪ್ರದ್ಯುಮ್ನನು ಮಗುವಾಗಿದ್ದಾಗಲೇ ಶಂಬರಾಸುರನು ಅಪಹರಿಸಿದ್ದನು. ಆದರೆ ಅವನು ಯೌವನಕ್ಕೆ ಬಂದಾಗ ಶಂಬರನನ್ನೆ ಕೊಂದು ಹಾಕಿದ ವೀರನಿವನು. ಆಗಲೇ ಶಂಬರಾಸುರನ ಮಾಯೆಗಳನ್ನೆಲ್ಲ ಕಲಿತಿದ್ದನು. ಅಸುರನ ವಾತಾವರಣದಲ್ಲಿ ಬೆಳೆದರೂ ತಂದೆಯ ಗುಣಶೀಲಗಳು ಇವನನ್ನು ಬಿಡಲಿಲ್ಲ.

ಪೃಥುಶ್ರೋಣಿಯೇ! ನೀನು ಇಚ್ಛಿಸುವವರಲ್ಲಿ ಏನೇನು ಗುಣಗಳಿರಬೇಕೆಂದು ಇಚ್ಛಿಸುವಿಯೋ ಅವೆಲ್ಲವೂ ಪ್ರದ್ಯುಮ್ನನಲ್ಲಿದೆ.

**ಯಾನ್ ಯಾನ್ ಗುಣಾನ್ ಪೃಥುಶ್ರೋಣಿ ಮನಸಾ ಕಲ್ಪಯಿಷ್ಯಸಿ ।**
**ಏಷ್ಟವ್ಯಾಃ ತ್ರಿಷು ಲೋಕೇಷು ಪ್ರದ್ಯುಮ್ನೆ ಸರ್ವ ಏವ ಹಿ ॥ 8 ॥**

ಕಾಂತಿಯಲ್ಲಿ ಅಗ್ನಿ, ಕ್ಷಮೆಯಲ್ಲಿ ಭೂದೇವಿ, ತೇಜಸ್ಸಿನಲ್ಲಿ ಸೂರ್ಯ, ಗಾಂಭೀರ್ಯದಲ್ಲಿ ಸಮುದ್ರನಾಗಿರುವನು ಪ್ರದ್ಯುಮ್ನ ಎಂದು ಹೇಳಿದ ಶುಚಿಮುಖಿಗೆ ಪ್ರಭಾವತಿ ಹೇಳುವಳು.

ಶುಚಿಮುಖಿ! ಶ್ರೀಕೃಷ್ಣನು ದೈತ್ಯ ನಾಶಕ. ನಮಗೆ ಮೂಲ ಕುಠಾರ ಪ್ರಾಯನಾದ ಶ್ರೀಕೃಷ್ಣ ಮಗನೆಂದ ಮೇಲೆ ಅವನನ್ನು ಹೊಂದುವುದು ಹೇಗೆ? ಸ್ತ್ರೀಯರಿಗೆ ಪಿತೃಕುಲಕ್ಕಿಂತಲೂ ಪತಿಯ ಕುಲವೆ ಶ್ರೇಷ್ಠವಾಗಿರಬೇಕೆಂಬ ಹಂಬಲವಿರುತ್ತದೆ. ದೈತ್ಯಕುಲಕ್ಕಿಂತಲೂ ಮಾನವಕುಲ ಶ್ರೇಷ್ಠ ಇದಕ್ಕಿಂತಲೂ ದೇವಕುಲ ಶ್ರೇಷ್ಠ ದೇವಕುಲದ ಈ ಮಾನವನನ್ನು ಹೊಂದುವುದಾದರೂ ಹೇಗೆಂದು ತಿಳಿಸು.

**ಭವೇದ್ಧಿ ಮೇ ಪತಿಕುಲಂ ಶ್ರೇಷ್ಠಂ ಪಿತೃಕುಲಾದಪಿ ।**

## ಹಂಸದೂತ್ಯ

**ದಾಸೀ ತವಾಹಂ ಸಖ್ಯಾರ್ಹೇ ದೂತ್ಯೇ ತ್ವಾಂ ಚ ವಿಸರ್ಜಯೆ ॥ 9 ॥**

ಹಂಸಿಯೇ ನೀನು ನನ್ನನ್ನು ನಿನ್ನ ದಾಸಿಯೆಂದೆ ತಿಳಿ. ನಿನ್ನನ್ನು ನಾನು ದೂತಿಯನ್ನಾಗಿ ನಿಯೋಜಿಸಲಿರುವೆ ಸಮಾಗಮ ಹೇಗಾದೀತೆಂಬ ಉಪಾಯ ಹೇಳು ಎಂದಾಗ ಹಂಸಿಯು – ಪ್ರಭಾವತಿ ! ನಾನು ನಿನ್ನ ದೂತಿಯಾಗಿ ಪ್ರದ್ಯುಮ್ನನಲ್ಲಿಗೆ ಹೋಗಿ ಅವನಲ್ಲಿ ನಿನಗಿರುವ ಉತ್ಕೃಷ್ಟ ಪ್ರೇಮವನ್ನು ಅರುಹುವೆ. ಅವನು ಇಲ್ಲಿಗೆ ಬರುವಂತೆ ಮಾಡುವೆ.,

ಇದಲ್ಲದೆ ನೀನು ನಿನ್ನ ತಂದೆಯೊಡನೆ ಮಾತನಾಡುವಾಗ ನನ್ನ ಕಥಾ ಕೌಶಲವನ್ನೂ ತಿಳಿಸುತ್ತಿರು ಎಂದಳು. ಪ್ರಭಾವತಿಯೂ ಹಾಗೆ ಮಾಡಿದಳು. ದೈತ್ಯೇಂದ್ರನು ಒಮ್ಮೆ ಅಂತಃಪುರದಲ್ಲಿದ್ದ ಶುಚಿಮುಖಿಯನ್ನು – ಹಂಸಿಯೇ! ನೀನು ಚಿತ್ರವಿಚಿತ್ರ ಕಥೆಗಳನ್ನು ಹೇಳುವುದರಲ್ಲಿ ನಿಷ್ಣಾತೆಯೆಂದು ಪ್ರಭಾವತಿ ಹೇಳಿರುವಳು. ನನಗೊಂದು ಕಥೆಯನ್ನು ಹೇಳು ನೋಡೋಣ.

ಶುಚಿಮುಖಿಯು ರಾಜನೇ ಕೇಳು – ಮೇರುವಿನ ತಪ್ಪಲಲ್ಲಿ ಶಾಂಡಿಲೀ ಎಂಬುವಳು ಇರುವಳು. ಇವಳು ಪಾರ್ವತೀದೇವಿಯ ಪ್ರಸಾದದಿಂದ ಜನಿಸಿದ ಭದ್ರನೆಂಬ ನಟನನ್ನು ನೋಡಿದಳು.

ಮುನಿಗಳ ವರದಿಂದಾಗಿ ಇವನು ಕಾಮರೂಪೀ, ಸರ್ವತ್ರ ಸಂಚಾರೀ, ಸರ್ವರಿಗೂ ಬೇಕಾದವನು. ದೇವಗಂಧರ್ವ ಗಾನ ನೃತ್ಯದಲ್ಲಿ ಅದ್ವಿತೀಯನು. ಇವನ ನಟನಾ ಕೌಶಲ ಅತ್ಯಾಶ್ಚರ್ಯವಾಗಿದೆ.

**ದೇವಗಂಧರ್ವಗೇಯಾನಿ ನೃತ್ಯಾನಿ ವಿವಿಧಾನಿ ಚ ।**
**ಸ ವೇತ್ತಿ ದೇವನ್ ನೃತ್ಯೇನ ವಿಸ್ಮಾಪಯತಿ ಸರ್ವಥಾ ॥ 10 ॥**

ಹಂಸಿಯು ಮಾತನ್ನು ಕೇಳಿದ ವಜ್ರನಾಭನು ಹಂಸಿಯೇ! ಋಷಿಮುನಿಗಳಿಂದ ವರ ಪಡೆದ ಆ ಅದ್ಭುತ ನಟನನ್ನು ನಾನೂ ನೋಡಬೇಕೆಂದಿದೆ. ಆದರೆ ನನ್ನ ಶಕ್ತಿ ಸಾಮರ್ಥ್ಯಗಳು ಅವರಿಗೆ ಇನ್ನೂ ತಿಳಿದಿಲ್ಲವಾದ್ದರಿಂದ ಇಲ್ಲಿಗೆ ಬಂದಿರುವುದಿಲ್ಲ ಎಂದನು.

ಹಂಸಿಯು, ದೈತ್ಯೇಂದ್ರನೇ! ಆ ನಟನು ಸರ್ವತ್ರ ಸಂಚರಿಸುತ್ತಿದ್ದು ಗುಣವಂತರು ಎಲ್ಲಿಯಾದರೂ ಇರುವರೆಂದು ತಿಳಿದರೆ ಸಾಕು ಅವರ ಬಳಿಗೆ ಹೋಗುತ್ತಾನೆ.

ಅವನೇನಾದರೂ ನಿನ್ನ ಗುಣಗಳನ್ನೂ ಕೇಳಿದ್ದೆ ಆದರೆ ಇಲ್ಲಿಗೆ ಖಂಡಿತಾ ಬರುವನು.

**ತವ ಚೇಚ್ಛೃಣುಯಾದ್ ವೀರ ಸದ್ಭೂತಂ ಗುಣವಿಸ್ತರಂ ।**
**ನಟಂ ತದಾಗತಂ ವಿದ್ಧಿ ಪುರಂ ತವ ಮಹಾಸುರ ॥ 11 ॥**

ಹಂಸಿ, ಅವರು ಇಲ್ಲಿಗೆ ಕರೆತರುವ ಉಪಾಯ ಮಾಡಲ್ಪಡಲಿ. ಹಂಸಿಯು ಒಪ್ಪಿತು. ನಟರನ್ನು ಕರೆತರಲು ಹೇಳಿದ. ವಿಷಯವನ್ನು ಪಕ್ಷಿಗಳು ಕೃಷ್ಣನಿಗೂ, ದೇವೇಂದ್ರನಿಗೂ ತಿಳಿಸಿದರು.

ಶ್ರೀಕೃಷ್ಣನಾದರೂ ಪ್ರದ್ಯುಮ್ನನಿಗೆ ವಜ್ರನಾಭನ ಸಂಹಾರ ಕಾರ್ಯ ಪ್ರಭಾವತಿ ಪಾಣಿಗ್ರಹಣ ವಿಷಯಗಳನ್ನು ಒಪ್ಪಿಸಿದನು.

**ಪ್ರಭಾವತ್ಯಾಶ್ಚ ಸಂಸರ್ಗೇ ವಜ್ರನಾಭವಧೇ ತಥಾ ।**
**ಅಧೋಕ್ಷಜೇನ ಪ್ರದ್ಯುಮ್ನೋ ನಿಯುಕ್ತಸ್ತತ್ರ ಕರ್ಮಣಿ ॥ 12 ॥**

ಶ್ರೀಕೃಷ್ಣನು ಪ್ರದ್ಯುಮ್ನನನ್ನು ನಟನನ್ನಾಗಿ ಮಾಡಿದನು. ಇತರ ಯಾದವರನ್ನು ನಟರ ಸಹಾಯಕರನ್ನಾಗಿ ವಜ್ರಪುರಕ್ಕೆ ಕಳುಹಿಸಿದನು. ಪ್ರದ್ಯುಮ್ನನು ನಾಯಕನಟನಾದನು. ಸಾಂಬನು ವಿದೂಷಕನಾದನು.

ಗದನು ಪ್ರದ್ಯುಮ್ನನ ಪಕ್ಕದಲ್ಲಿರುವವನಾದನು. ಇತರರು ಬೇರೆ ಬೇರೆ ವೇಷಧರಿಸಿದರು. ಭದ್ರನನ್ನೂ ಅವನಿಗೆ ಯೋಗ್ಯವೇಷಧರಿಸಿ ಕಳುಹಿಸಿದನು.

**ಪ್ರದ್ಯುಮ್ನವಿಹಿತಂ ರಮ್ಯಂ ವಿಮಾನಂ ತೇ ಮಹಾರಥಾಃ ।**
**ಜಗ್ಮುರಾರುಹ್ಯ ಕಾರ್ಯಾರ್ಥಂ ದೇವಾನಾಮಮಿತೌಜಸಾಮ್ ॥ 13 ॥**

ಅವರೆಲ್ಲರೂ ಸಹ ಪ್ರದ್ಯುಮ್ನನಿಂದ ನಿರ್ಮಿತ ವಿಮಾನವನ್ನೇರಿ ವಜ್ರನಾಭನ ವಜ್ರಪುರಿಗೆ ಹೋದರು.

ಆ ಪುರುಷರೆಲ್ಲರೂ ಒಬ್ಬರಿಗಿಂತ ಒಬ್ಬರು ಅನುರೂಪರಾಗಿದ್ದರು. ರಾಜಕುಮಾರರೂ ಅದ್ಭುತ ಸೌಂದರ್ಯ ಯುಕ್ತರಾಗಿದ್ದರು. ಅವರೆಲ್ಲರೂ ವಜ್ರಪುರದ ಒಂದು ಭಾಗವೆನಿಸಿದ ಸುಪುರಕ್ಕೆ ಹೋದರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ವಜ್ರಪುರಕ್ಕೆ ಪ್ರದ್ಯುಮ್ನಾದಿಗಳ ಪ್ರಯಾಣ ಎಂಬಲ್ಲಿ
ತೊಂಬತ್ತೆರಡನೆಯ ಅಧ್ಯಾಯ ಸಮಾಪ್ತಿ

# ಅಥ ತ್ರಿನವತಿತಮೋऽಧ್ಯಾಯಃ

## ಪ್ರದ್ಯುಮ್ನ ಪ್ರಭಾವತೀ ಭೇಟಿ

*ವೈಶಂಪಾಯನ ಉವಾಚ –*

**ತತಃ ಸುಪ್ರರವಾಸೀನಾಮಸುರಾಣಾಂ ನರಾಧಿಪಃ ।**

**ದದಾವಾಜ್ಞಾಂ ವಜ್ರನಾಭೋ ದೀಯತಾಂ ಗೃಹಮುತ್ತಮಮ್ ॥ 1 ॥**

ವೈಶಂಪಾಯನರು ಜನಮೇಜಯನಿಗೆ ರಾಜನ್,

ವಜ್ರನಾಭನು ತನ್ನ ನಗರಕ್ಕೆ ಆಗಮಿಸಿರುವ ನಟರ ವಾರ್ತೆಯನ್ನು ಕೇಳಿ, ಈ ನಟರಿಗಾಗಿ ಒಂದು ಉತ್ತಮವಾದ ಅರಮನೆಯನ್ನು ಕಲ್ಪಿಸಿ ಕೊಡಬೇಕೆಂದು ತಮ್ಮ ಸೇವಕ ಅಸುರರಿಗೆ ಆದೇಶಿಸಿದನು.

ಈ ನಟರೆಲ್ಲರಿಗೂ ಯೋಗ್ಯವಾದ ಆತಿಥ್ಯವನ್ನು ಮಾಡಿರಿ. ಲೆಕ್ಕವಿಲ್ಲದಷ್ಟು ರತ್ನ-ವಸ್ತ್ರಗಳನ್ನು ಬಹುಮಾನವಾಗಿ ನೀಡಿರಿ. ಅಷ್ಟೇಕೆ? ಅವರಿಗೆ ಸಂತೋಷವುಂಟು ಮಾಡುವ ಯಾವುದೇ ವಸ್ತುಗಳನ್ನು ನೀಡಿರಿ.

**ವಾಸಾಂಸಿ ಸುವಿಚಿತ್ರಾಣಿ ಸುಖಾಯ ಜನರಂಜನಮ್ ।**

ಅಸುರೆಲ್ಲರೂ ತಮ್ಮ ರಾಜನ ಆದೇಶವನ್ನು ಶಿರಸಾ ಮಾನ್ಯ ಮಾಡಿ, ಅವನು ಹೇಳಿದಂತೆಯೇ ಅತಿಥಿ ಸತ್ಕಾರವನ್ನು ಮಾಡಿದರು.

ಸುಪುರವಾಸಿಗಳು ಈ ಹಿಂದೆ ಅವರೆಲ್ಲರೂ ಕೇಳಿದ್ದ ಸುಪ್ರಸಿದ್ಧ ಭದ್ರ ನಟನು ತಮ್ಮಲ್ಲಿಗೆ ಬಂದಿರುವನೆಂಬ ವಾರ್ತೆ ಕೇಳಿ ಮತ್ತಷ್ಟು ಕುತೂಹಲ ಭರಿತರಾದರು.

**ಸುಪ್ರರೇ ಪುರವಾಸೀನಾಂ ಪರಂ ಹರ್ಷಂ ಸಮಾದಧತ್ ॥ 2 ॥**

ಆ ಅಸುರರು ಭದ್ರನಿಗೆ ಅನೇಕ ಪಾರಿತೋಷಕ ನೀಡಿದರು. ಆ ಋಷಿಗಳ ಅನುಗ್ರಹದಿಂದ ವರದಿಂದಾಗಿ ಭದ್ರ ನಟನು ನೃತ್ಯವಾಡಿದನು [*ಸ ನನೃತೇ ತತ್ರ ವರದತ್ತೋ ನಟಃ*]

**ರಾಮಾಯಣಂ ಮಹಾಕಾವ್ಯಮುದ್ದಿಶ್ಯ ನಾಟಕಂ ಕೃತಮ್ ।**
**ಜನ್ಮ ವಿಷ್ಣೋರಮೇಯಸ್ಯ ರಾಕ್ಷಸೇಂದ್ರ ವಧೇಪ್ಸಯಾ ॥ 3 ॥**

ನಟರೆಲ್ಲರೂ ಶ್ರೀ ರಾಮಾಯಣ ಕಥಾ ಪ್ರಸಂಗವನ್ನು ವಿಷಯವನ್ನಾಗಿ ಆರಿಸಿಕೊಂಡರು. ರಾವಣನನ್ನು ಸಂಹರಿಸಲು ಶ್ರೀನಾರಾಯಣನು ಭೂಮಿ ಇಳಿದು ಬಂದದ್ದು ಕಥಾವಸ್ತುವಾಗಿತ್ತು.

**ಲೋಮಪಾದೋ ದಶರಥಃ ಋಷ್ಯಶೃಂಗಂ ಮಹಾಮುನಿಮ್ ।**
**ಶಾಂತಾಮಪ್ಯಾನಯಾಮಾಸ ಗಣಿಕಾಭಿಃ ಸಹಾನಘಃ ॥ 4 ॥**

ಲೋಮಪಾದನು[1] ಋಷ್ಯಶೃಂಗನನ್ನು ವೇಶ್ಯರೊಂದಿಗೆ ಅಯೋಧ್ಯೆಗೆ ಕರೆತಂದನು. ಯಜ್ಞಕ್ಕಾಗಿ ಶಾಂತಾಸಹಿತ ಇವನನ್ನು ತನ್ನ ಅರಮನೆಗೆ ಬರ ಮಾಡಿಕೊಂಡನು.

ನಟರೆಲ್ಲರೂ ರಾಮಲಕ್ಷಣ, ಭರತಶತ್ರುಘ್ನ, ಋಷ್ಯಶೃಂಗ, ಶಾಂತ ಮೊದಲಾದವರ ವೇಷ ಧರಿಸಿದರು.

---

1. **ಲೋಮಪಾದ ದಶರಥಃ** : ಲೋಮಪಾದ/ರೋಮಪಾದನಿಗೆ ದಶರಥ ಮಹಾರಾಜನು ತನ್ನ ಮಗಳಾದ ಶಾಂತಾ ಎಂಬುವಳನ್ನು ದತ್ತುಕೊಟ್ಟಿದ್ದ. ರೋಮಪಾದನು ಋಷ್ಯಶೃಂಗನಿಗೆ ತನ್ನ ಸಾಕುಮಗಳನ್ನು ವಿವಾಹ ಮಾಡಿದ್ದ. ಇವನಿಗೆ ಇನ್ನೊಂದು ಹೆಸರು ದಶರಥ.
   **ಅಥ ಚಿತ್ರರಥಸ್ಯಾಪಿ ಪುತ್ರೋ ದಶರಥೋऽಭವತ್ ।**
   **ಲೋಮಪಾದ ಇತಿ ಖ್ಯಾತೋ ಯಸ್ಯ ಶಾಂತಾ ಸುತಾऽಭವತ್ ।** *–/31/46*
   **ಋಷ್ಯಶೃಂಗ** : ವಿಭಾಂಡಕ ಮುನಿಯ ಪುತ್ರ. ವಿಭಾಂಡಕನು ಮುನಿ ನೀರಿನಲ್ಲಿದ್ದು ಪಾದ ತೊಳೆದುಕೊಳ್ಳುತ್ತಿದ್ದ. ಮೇಲೆ ಊರ್ವಶೀ ದರ್ಶನದಿಂದ ರೇತೋಪಾತವಾಯಿತು. ಆ ರೇತೋಯುಕ್ತ ನೀರನ್ನು ಜಿಂಕೆಯು ಕುಡಿಯಿತು. ಜಿಂಕೆಯಿಂದಲೆ ಜನಿಸಿದ ಋಷ್ಯಶೃಂಗ ಕೊಂಬನ್ನು ಹೊಂದಿದ್ದರಿಂದ ಋಷ್ಯಶೃಂಗನಾದ [ಮ.ಭಾ.ವನ 111]. ಅಂಗದೇಶದಲ್ಲಿ ಅನಾವೃಷ್ಟಿಯಾದಾಗ ರೋಮಪಾದ ಕರೆಸಿದಾಗ ಮಳೆ ಬಂತು. ಇದಕ್ಕಾಗಿ ಶಾಂತೆಯನ್ನು ಕೊಟ್ಟು ಮದುವೆ ಮಾಡಿದ. ದಶರಥನು ಪುತ್ರಕಾಮೇಷ್ಟಿಗಾಗಿ ಈತನನ್ನು ಕರೆಸಿದ್ದ. [ರಾ. ಬಾ. 7/16]

ಶ್ರೀರಾಮನ ತ್ರೇತೆಯಲ್ಲಿದ್ದ ಈ ಅಸುರರು ಶ್ರೀರಾಮನನ್ನು ನೋಡಿದ್ದರು. ಅವನಂತೆ ಇರುವ ಶ್ರೀರಾಮ ನಟನನ್ನು ನೋಡಿ ಆಶ್ಚರ್ಯಗೊಂಡರು.

**ತತ್ಕಾಲಜೀವಿನೋ ವೃದ್ಧಾಃ ದಾನವಾಃ ವಿಸ್ಮಯಂ ಗತಾಃ ॥ 5 ॥**

ಅವರ ವೇಷಭೂಷಣ ಅಭಿನಯ ಪಾತ್ರ ಧಾರಣೆ ಇವುಗಳನ್ನು ನೋಡಿದ ದೈತ್ಯವರ್ಯರು ಆಶ್ಚರ್ಯಚಕಿತರಾಗಿ ನಾಟಕದಲ್ಲಿಯೇ ಆಸಕ್ತರಾಗಿದ್ದರು. ಆನಂದದ ರಭಸದಲ್ಲಿ ಮಧ್ಯೆ ಮಧ್ಯೆ ಎದ್ದು ನಿಂತು ಆಹಾ! ಅದ್ಭುತ ಅದ್ಭುತವೆನ್ನುತ್ತ ಕರತಾಡನ ಮೂಲಕ ತಮ್ಮ ಹರ್ಷ ಸೂಚಿಸಿದರು.

ಅಭಿನಯದಿಂದ ಸಂತೋಷ ಹೊಂದಿದ್ದ ಅವರೆಲ್ಲರೂ ಪಾತ್ರಧಾರಿಗಳಗೆ ಆಭರಣಾದಿಗಳನ್ನು ನೀಡಿದರು.

**ಪ್ರೇಷಿತಂ ವಜ್ರನಾಭಸ್ಯ ಶಾಖಾ ನಗರ ವಾಸಿಭಿಃ ।**
**ನಟಸ್ಯ ದಿವ್ಯರೂಪಸ್ಯ ನಗೇಂದ್ರಾಗಮನಂ ತದಾ ॥ 6 ॥**

ಅಸುರರು ದಿವ್ಯರೂಪ ಧರಿಸಿರುವ ನಟನು ತಮ್ಮ ನಗರಕ್ಕೆ ಬಂದಿರುವ ಶುಭವಾರ್ತೆಯನ್ನು ತಮ್ಮ ದೈತ್ಯೇಂದ್ರನಿಗೆ ಹೇಳ ಕಳುಹಿಸಿದರು.

ವಜ್ರನಾಭನು ಈ ಮೊದಲೇ ಕೇಳದ್ದು ಆ ವಾರ್ತೆ ಬಂದ ಕೂಡಲೇ ಅವನು ಅವನನ್ನು ಕರೆತರಲು ಆದೇಶಿಸಿದನು.

ವಜ್ರನಾಭನ ಆದೇಶವನ್ನು ಕೇಳದ ಶಾಖಾನಗರದವರು ನಟರ ವೇಷ ಹಾಕಿದ ಯಾದವರನ್ನೂ ರಮ್ಯವಾದ ಸುರಪುರಕ್ಕೆ ಕರೆದೊಯ್ದರು.

ವಜ್ರನಾಭನು ವಿಶ್ವಕರ್ಮನಿಂದ ತಯಾರಾದ ಸುಂದರವಾದ ಅರಮನೆಯನ್ನು ಅವರಿಗೆ ಬಿಟ್ಟು ಕೊಟ್ಟನು.

ನಟರಿಗೆ ಏನೇನು ಅವಶ್ಯಕತೆಯಿತ್ತೋ ಅದಕ್ಕಿಂತ ನೂರುಪಟ್ಟು ಅಧಿಕವಾಗಿ ಒದಗಿಸಿಕೊಟ್ಟನು.

**ಏಷ್ಟವ್ಯಂ ಯಚ್ಚ ತತ್ ಸರ್ವಂ ದತ್ತಂ ಶತಗುಣೋತ್ತರಮ್ ।**

ನಂತರ ವಜ್ರನಾಭನು 'ಮಹಾಕಾಲ'ನೆಂಬ ಹೆಸರಿನ ರುದ್ರನಿಗೆ ಸಂಬಂಧಿಸಿದ ಉತ್ಸವವನ್ನು ಆರಂಭಿಸಿದನು.

**ಅಥ ಕಾಲೋತ್ಸವಂ ಚಕ್ರೇ ವಜ್ರನಾಭೇ ಮಹಾಸುರಃ ॥ 7 ॥**

ನಟರೆಲ್ಲರೂ ವಿಶ್ರಾಂತಿಯ ನಂತರ ವಜ್ರನಾಭನು ಬೇಕಾದಷ್ಟು ಪಾರಿತೋಷಕ ನೀಡಿ ನಾಟ್ಯವನ್ನು ಪ್ರದರ್ಶಿಸಲು ಆದೇಶಿಸಿದ.

ಅಂತಃಪುರದ ಸ್ತ್ರೀಯರು ನೋಡಲೆಂದು ವ್ಯವಸ್ಥೆ ಮಾಡಲಾಗಿತ್ತು ತಾನೂ ಸಹ ಬಾಂಧವರೊಡನೆ ನಾಟ್ಯವನ್ನು ನೋಡಲು ಕುಳಿತುಕೊಂಡನು. ನಟರು ತಾಳ, ಕೊಳಲು, ಮೃದಂಗ, ನಗಾರಿ, ಟಮಟೆ, ವೀಣಾವಾದ್ಯಗಳು ವಾದ್ಯಕಾರರು ನುಡಿಸತೊಡಗಿದರು.

**ತತಸ್ತು ದೇವ ಗಾಂಧಾರಂ ಛಾಲಿಕ್ಯಂ ಶ್ರವಣಾಮೃತಮ್ ।**
**ಆ ಗಾಂಧಾರ ಗ್ರಾಮರಾಗಂ ಗಂಗಾವತರಣಂ ತಥಾ ॥ 8 ॥**
**ವಿದ್ಧ ಮಾಸಾರಿತಂ ರಮ್ಯಂ ಜಗಿರೇ ಸ್ವರಸಂಪದಾ ॥ 9 ॥**

ನಂತರ ಯಾದವರ ಜೊತೆಯಲ್ಲಿಯೇ ಬಂದಿದ್ದ ವಾರಾಂಗನೆಯರು ಕರ್ಣಾಮೃತಗಳಾದ ದೇವಗಾಂಧಾರ ಛಾಲಿಕ್ಯ ಗಾನವನ್ನು ಹಾಡಲಾರಂಭಿಸಿದರು. ರಾಗಗಳಲ್ಲಿ ಗಂಗಾವತರಣವೆಂಬ ವಿಶೇಷವಾದ ಗೀತೆಗಳನ್ನು ಮಧುರವಾದ ಸ್ವರಗಳನ್ನು ಹಾಡತೊಡಗಿದರು.

**ಲಯ ತಾಲ ಸಮಂ ಶ್ರುತ್ವಾ ಗಂಗಾವತರಣಂ ಶುಭಮ್ ।**
**ಅಸುರಾಂ ಸ್ತೋಷಯಾಮಾಸುಃ ಉತ್ಥಾಯೋತ್ಥಾಯ ಭಾರತ ॥ 10 ॥**

### ಪ್ರದ್ಯುಮ್ನ ಸಾಂಬರ ವೇಷ

ಈ ಮಧ್ಯದಲ್ಲಿ ಕಾರ್ಯ ಸಾಧನೆಗಾಗಿ ನಿಯಮಿತರಾಗಿ ನಟರಾಗಿದ್ದ ಪ್ರದ್ಯುಮ್ನ ಗದ ಸಾಂಬರು ನಾಂದಿ ಹಾಡಿದರು. ನಂತರ ಪ್ರದ್ಯುಮ್ನನು ಗಂಗಾವತರಣಕ್ಕೆ ಸಂಬಂಧಿಸಿದ ಶ್ಲೋಕಗಳನ್ನು ಅಭಿನಯ ಸಹಿತವಾಗಿ ಹಾಡಲಾರಂಭಿಸಿದನು.

**ನಾಂದ್ಯಂತೇ ಚ ತದಾ ಶ್ಲೋಕಂ ಗಂಗಾವತರಣಾಶ್ರಿತಮ್ ।**
**ರೌಕ್ಮಿಣೇಯಃ ತದೋವಾಚ ಸಮ್ಯಕ್ ಸ್ವಭಿನಯಾನ್ವಿತಮ್ ॥ 11 ॥**

### ರಂಭಾಭಿಸಾರ ನಾಟಕಾಭಿನಯ

ಅನಂತರ ಕುಬೇರನ ಅಲಕಾವತಿಯಲ್ಲಿ ಪ್ರಚಲಿತವಿದ್ದ 'ರಂಭಾಭಿಸಾರ'ವೆಂಬ ನಾಟಕವನ್ನು ಅಭಿನಯಿಸಿದರು. ಶೂರನೆಂಬ ಯಾದವನು ರಾವಣನ ವೇಷ ಧರಿಸಿದ್ದರೆ, 'ಮನೋವತೀ' ಎಂಬ ವಾರಾಂಗನೆಯು ರಂಭೆಯ ವೇಷ ಧರಿಸಿದಳು. ಪ್ರದ್ಯುಮ್ನನು ನಲಕೂಬರನ ವೇಷವನ್ನು ಸಾಂಬನು ವಿದೂಷಕನಾಗಿಯೂ ಇದ್ದನು.

ನಲಕೂಬರನು ರಾವಣನಿಗೆ ಶಾಪವನ್ನು ನೀಡಿದ ಪ್ರಸಂಗ, ರಂಭೆಯನ್ನು ಸಮಾಧಾನಗೊಳಿಸುವುದು. ನಾರದರ ಯಶಸ್ಸು ಮೊದಲಾದವುಗಳನ್ನು ಯಾದವರು ಅಭಿನಯಿಸಿದರು. ಇವರ ಪಾದನ್ಯಾಸಗಳಿಂದ ವಸ್ತುವನ್ನು ಅಭಿನಯಿಸಿದ್ದನ್ನು ನೋಡಿದ ಅಸುರರು ಅನೇಕ ವಸ್ತ್ರಾಲಂಕಾರಾದಿಗಳನ್ನು ನೀಡಿದರು.

ಇದಲ್ಲದೆ ವೈಡೂರ್ಯ ನಾನಾ ವಿಧ ಹಾರಗಳು, ಚಿತ್ರ ವಿಚಿತ್ರ ಆಕಾಶಗಾಮಿ ವಿಮಾನಗಳು ಆ ಆಕಾಶದ ಮೇಲೂ ಸಂಚರಿಸುವ ಮದ್ದಾನೆಗಳನ್ನೂ ನೀಡಿದರು. ಚಿಂತಿತ ಫಲದಾತೃಗಳಾದ ಚಿಂತಾಮಣಿಗಳನ್ನೂ ನೀಡಿದರು.

**ತತೋ ಹಂಸೀ ಪ್ರಭಾವತ್ಯಾಃ ಸಖೀ ಪ್ರಾಹ ಪ್ರಭಾವತೀಮ್ ।**
**ಗತಾಸ್ಮಿ ದ್ವಾರಕಾಂ ರಮ್ಯಾಂ ಭೈಮಗುಪ್ತಾಮನಿಂದಿತೇ ॥ 12 ॥**
**ಪ್ರದ್ಯುಮ್ನಶ್ಚ ಮಯಾದೃಷ್ಟಃ ವಿವಿಕ್ತೇ ಚಾರುಲೋಚನೇ ।**

ಇತ್ತ ಪ್ರಭಾವತಿಯ ಸಖಿಯಾದ ಶುಚಿಮುಖಿಯು ಪ್ರಭಾವತಿಗೆ ರಾಜಕುಮಾರಿ! ನೀನು ಆದೇಶಿಸಿದಂತೆ ನಾನು ದ್ವಾರಕೆಗೆ ಹೋದೆನು. ದ್ವಾರಕೆಯಲ್ಲಿ ಪ್ರದ್ಯುಮ್ನನನ್ನು ನೋಡಿ ನಿನಗೆ ಅವನಲ್ಲಿರುವ ಪ್ರೀತಿಯನ್ನು ವರ್ಣಿಸಿ ಹೇಳಿರುವೆನು. ಇದನ್ನು ಕೇಳಿದ ಪ್ರದ್ಯುಮ್ನನು ಅನಂದ ಹೊಂದಿದನು. ಇಂದೆ ಪ್ರದೋಷ ಕಾಲದಲ್ಲಿ ನಿನ್ನನ್ನು ಸಂಧಿಸುತ್ತಾನೆ. ಇಂದೇ ನಿನಗೆ ಪ್ರಾಣವಲ್ಲಭನೊಂದಿಗೆ ಸಮಾಗಮವಾಗುತ್ತದೆ.

**ಅದ್ಯ ಪ್ರದೋಷ ಸಮಯೇ ತ್ವಯಾ ಸಹ ಸಮಾಗಮೇ ।**

ಪ್ರದ್ಯುಮ್ನನು ಯಾದವಕುಲದಲ್ಲಿ ಜನಿಸಿರುವನು. ಅಂತಹವರು ತಮ್ಮ ಪ್ರಾಣದಂತಿರುವ ಜನರಿಗೆ ಸುಳ್ಳನ್ನು ಹೇಳಲಾರ.

**ನ ಹ್ಯಾತ್ಮವತಿ ಭಾಷಂತಿ ಮಿಥ್ಯಾ ಭೈಮ ಕುಲೋದ್ಭವಾಃ ॥ 13 ॥**

ಹಂಸಿಯು ಹೇಳಿದ ಮಾತನ್ನು ಕೇಳಿ ಪ್ರಭಾವತಿಗೆ ಪರಮಾನಂದ ಹೊಂದಿದಳು. ಹಂಸಿಯೇ! ನೀನು ಹಿಂದಿನಂತೆ ನನ್ನ ಅಂತಃಪುರದಲ್ಲಿಯೇ ಇರುವವಳಾಗು. ಇಂದು ನಾನು ನಿನ್ನೊಂದಿಗೆ ಪ್ರದ್ಯುಮ್ನನನ್ನು ನೋಡ-ಬೇಕೆಂದಿರುವೆನು. ನೀನು ನನ್ನ ಜೊತೆಯಲ್ಲಿದ್ದರೆ ಪ್ರದ್ಯುಮ್ನನನ್ನು ನೋಡಲು ಭಯವುಂಟಾಗುವುದಿಲ್ಲ.

**ನಿಃ ಸಾಧ್ವಸಾ ಭವಿಷ್ಯಾಮಿ ತ್ವಯಾ ಸಹ ವಿಹಂಗಮೇ ।**

ಹಂಸಿಯು ಹಾಗೆಯೇ ಆಗಲಿ ಎಂದಿತು. ಇತ್ತ ಪ್ರಭಾವತಿಯು ತನ್ನ ಅಂತಃಪುರವನ್ನು ಸ್ವಾಗತಕ್ಕಾಗಿ ಅಲಂಕರಿಸಿದಳು. ನಂತರ ಹಂಸಿಯು ಪ್ರದ್ಯುಮ್ನನನ್ನು ಕರೆತರಲು ಹೋಯಿತು. ನಟನ ವೇಷದಲ್ಲಿದ್ದ ಪ್ರದ್ಯುಮ್ನ

**ನಟವೇಷಧರಂ ಕಾಮಂ ಗತ್ವೋವಾಚ ಶುಚಿಸ್ಮಿತಾ ।**
**ಅದ್ಯ ಭೂತಃ ಸ ಭಗವಾನ್ ಸಮಯೋ ವರ್ತತೇ ನಿಶಿ ॥ 14 ॥**

ಪ್ರದ್ಯುಮ್ನನೇ! ಈ ಹಿಂದೆ ನಿಶ್ಚಿತವಾಗಿರುವ ಕಾಲವು ಇಂದು ರಾತ್ರಿಗೆ ಪ್ರಾಪ್ತವಾಗುತ್ತದೆ. ಈ ಮಾತಿಗೆ ಹಾಗೆ ಆಗಲಿ ಎಂದು ಪ್ರದ್ಯುಮ್ನನೆಂದನು.

ನಂತರ ಹಂಸಿಯು ಪ್ರಭಾವತಿಯ ಬಳಿಗೆ ಬಂದು ಪ್ರಭಾವತಿ! ನಿಶ್ಚಿಂತಳಾಗಿರು ರೌಕ್ಮಿಣೇಯನು ಇಂದು ನಿನ್ನ ಬಳ ಬಂದೇ ಬರುವನು.

## ಪ್ರದ್ಯುಮ್ನ-ಪ್ರಭಾವತಿ ಭೇಟೀ

ಪ್ರದ್ಯುಮ್ನನು ತಾನು ಹೊರಡುವಾಗ ಸುಗಂಧಯುಕ್ತವಾದ ಪುಷ್ಪಮಾಲೆಯನ್ನು ಹಿಡಿದು ಹೊರಟನು. ಪುಷ್ಪಮಾಲೆಯಲ್ಲಿ ದುಂಬಿಗಳು ತುಂಬಿದ್ದವು. ಪ್ರಭಾವತಿಯ ಮನೆಗೆ ಹೋಗುವಾಗ ಆ ಪುಷ್ಪಮಾಲೆಯಲ್ಲಿ ದುಂಬಿಯಾಗಿ ಸೇರಿಕೊಂಡ.

**ಭ್ರಮರೈರಾವೃತಂ ವೀರಃ ಸುಗಂಧಿಮರಿಮರ್ದನಃ ।**
**ನಿಲಿಲ್ಯೇ ತತ್ರ ಮಾಲ್ಯೇತು ಭೂತ್ವಾ ಮಧುಕರಃ ತದಾ ॥ 15 ॥**

ಅರಮನೆಯ ಮುಂದೆ ದುಂಬಿಗಳಿಂದ ತುಂಬಿದ್ದ ಪುಷ್ಪಮಾಲಿಕೆಯನ್ನು ಪ್ರಭಾವತಿಯ ಸಖಿಯರು ಅಂತಃಪುರಕ್ಕೆ ಕೊಂಡೊಯ್ದರು. ಮತ್ತೆ ಕೆಲವು ಸಖಿಯರು ಅದನ್ನು ಪ್ರಭಾವತಿಗೆ ಕೊಟ್ಟರು. ಪ್ರಭಾವತಿಯು ಆ ಪುಷ್ಪಹಾರವನ್ನು ತನ್ನ ಬಳ ಇಟ್ಟುಕೊಂಡಳು.

**ಅವಿದೂರೇ ಚ ವಿನ್ಯಸ್ತಂ ಪ್ರಭಾವತ್ಯಾ ಜನಾಧಿಪ ।**
**ಭ್ರಮರಾಸ್ತೇ ಯಯುಃ ಸೌಮ್ಯ ಸಂಧ್ಯಾಕಾಲೇ ಹ್ಯುಪಸ್ಥಿತೇ ॥ 16 ॥**

ತನ್ನ ಬಳ ಇದ್ದ ಪುಷ್ಪಮಾಲಿಕೆಯಿಂದ ಸಾಯಂಕಾಲವಾಗುತ್ತಿದ್ದಂತೆ ದುಂಬಿಗಳೆಲ್ಲ ಹಾರಿ ಹೋದವು. ಅದೇ ಸಮಯ ದುಂಬಿಯಾಗಿದ್ದ ಪ್ರದ್ಯುಮ್ನನು ಪ್ರಭಾವತಿಯ ಕಿವಿಮಾಲೆಯಾಗಿದ್ದ ಕಮಲಾಭರಣದಲ್ಲಿ ಹಾರಿ ಕುಳಿತನು.

**ಸ ಭೈಮಪ್ರವರೋ ವೀರಸ್ತೈಃ ಸಹಾಯ್ಯೈಃ ವಿಹೀನತಃ ।**

**ದುಂಭಿಯಾಗಿ ಪ್ರದ್ಯುಮ್ನ**

**ಕರ್ಣೋತ್ಪಲೇ ಪ್ರಭಾವತ್ಯಾಃ ನಿಲಿಲ್ಯೇ ಶನಕೈರಿವ ॥ 17 ॥**

ಅದೇ ಸಮಯದಲ್ಲಿ ಸುಂದರನಾದ ಪೂರ್ಣಚಂದ್ರನು ಉದಯಿಸಿದನು. ಇದನ್ನು ಪ್ರಭಾವತಿಯೆ ನೋಡಿ ಹಂಸಿಗೆ ಹೇಳಿದಳು.

## ಪ್ರಭಾವತಿಯ ವಿರಹ

**ಸಖಿ ದಹಂತಿ ಮೇಽಂಗಾನಿ ಮುಖಂ ಚ ಪರಿಶುಷ್ಯತಿ ।**

**ಔತ್ಸುಕ್ಯಂ ಹೃದಿ ಚಾತೀವ ಕೋಽಯಂ ವ್ಯಾಧಿರನೌಷಧಃ ॥ 18 ॥**

ಹಂಸಿಯೇ! ವಿರಹದಿಂದಾಗಿ ನನ್ನ ಅಂಗಾಂಗಳೆಲ್ಲವೂ ಸುಡುತ್ತಿದೆ. ಮುಖವು ಬಾಡುತ್ತಿದೆ. ಹೃದಯದಲ್ಲಿ ಉತ್ಸುಕತೆವುಂಟಾಗುತ್ತಿದೆ. ಇದಾವ ರೋಗ? ಇದಕ್ಕೇನು ಔಷಧಿ?

ಈ ಚಂದ್ರನು ಉದಯಿಸಿ ನನ್ನ ವಿರಹ ತಾಪವನ್ನು ಇನ್ನೂ ಹೆಚ್ಚಿಸುತ್ತಿರುವನು. ಪ್ರಿಯನಾದರೂ ಅಪ್ರಿಯನಾಗುತ್ತಿರುವನು.

ಸಖಿ! ಪ್ರದ್ಯುಮ್ನನನ್ನು ನಾನೆಂದೂ ನೋಡಿಲ್ಲ. ನೀನು ಅವನ ಹೆಸರನ್ನು ಹೇಳಿದೆ. ಇದರಿಂದಾಗಿ ನಾನು ಅವನನ್ನು ಬಯಸಿದೆನು. ಇದರಿಂದಾಗಿಯೇ ನನ್ನ ಅಂಗಾಂಗ ಸುಡುತ್ತಿದೆ. ಸ್ತ್ರೀ ಸ್ವಭಾವಕ್ಕೆ ಧಿಕ್ಕಾರವಿರಲಿ! *[ಸ್ತ್ರೀಸ್ವಭಾವಸ್ಯ ಧಿಕ್ ಖಲು].*

**ಕಲ್ಪಯಾಮಿ ಯಥಾಬುದ್ಧ್ಯಾ ಯದಿ ನಾಭ್ಯೇತಿ ಮೇ ಪ್ರಿಯಃ ।**

**ಕುಮುದ್ವತೀಗತಂ ಮಾರ್ಗಂ ಹಾ ಗಮಿಷ್ಯಾಮ್ಯಕಿಂಚನಾ ॥ 19 ॥**

ನನ್ನ ಪ್ರಿಯತಮನು ಇಂದು ಬರದಿದ್ದರೆ ಏನಾಗಬಹುದೆಂದು ನಾನು ಊಹಿಸುತ್ತೇನೆ. "ಪ್ರಿಯನು ಜೀವಂತವಿರುವಾಗಲೇ ಅವನ ಸಂಗಮವಾಗದೆ ದೇಹತ್ಯಾಗ ಮಾಡಿದ ಕುಮುದ್ವತಿಯ ಮಾರ್ಗವೆ ನನಗೂ ಗತಿ" ಎಂದು ನನಗನಿಸುತ್ತದೆ.

## ಹಂಸೀ–ಪ್ರಭಾವತಿಯರ ಸಂಭಾಷಣೆ

**ಮದನಾಶೀ ವಿಷೇಣಾಸ್ಮಿ ಹ ಹಾ ದಷ್ಟಾ ಮನಸ್ವಿನೀ ।**

**ಶೀತವೀರ್ಯಾ ಪ್ರಕೃತ್ಯೈವ ಜಗತೋ ಹ್ಲಾದನಾಃ ಸುಖಾಃ ॥ 20 ॥**

**ದಹಂತಿ ಮಮ ಗಾತ್ರಾಣಿ ಕಿಂ ನು ಚಂದ್ರಗಭಸ್ತಯಃ ॥**
**ಬಂಭ್ರಮಿತಿ ಚ ಮೇ ದೃಷ್ಟಿ ರ್ಹಾ ಯಾಮಿ ಧ್ರುವಂ ಕ್ಷಯಮ್ ॥ 21 ॥**

ಹಂಸಿಯೇ! ನಾನು ಮನ್ಮಥನೆಂಬ ಸರ್ಪದಿಂದ ದಷ್ಟಳಾಗಿದ್ದೇನೆ. ಹಾಗಿಲ್ಲವಾದರೆ ಪ್ರಕೃತ್ಯಾ ತಂಪಾದ ಕಿರಣವುಳ್ಳ ಚಂದ್ರನೂ ಸಹ ಈಗ ನನ್ನನ್ನು ಸುಟ್ಟು ಹಾಕುತ್ತಿರುವನಂತೆ ಕಾಣುತ್ತಿರುವನೆ?

ಸ್ವಾಭಾವಿಕವಾಗಿಯೇ ಶೀತಲನಾದ ಅನೇಕ ಪುಷ್ಪ ಪರಿಮಳವನ್ನು ತನ್ನಲ್ಲಿರಿಸಿಕೊಂಡು ಬೀಸುವ ವಾಯುವೂ ಕೂಡ ನನಗೀಗ ದಾವಾಗ್ನಿಯ ಬಿಸಿಯಂತೆ ಭಾಸನಾಗುತ್ತಿರುವನು. ಈ ಸುಂದರ ಶರೀರವನ್ನು ಸುಡುತ್ತಿರುವನು *[ದಾವಾಗ್ನಿ ಸದೃಶೊ ಮೇ ದಂದಹಿ].*

ನಾನಾದರೂ ಮನಸ್ಸನ್ನು ದೃಢ ಮಾಡುವ ಸಂಕಲ್ಪ ಮಾಡುವೆನು. ಆದರೆ ಮನ್ಮಥನಿಂದ ಮಥನಗೊಳ್ಳುತ್ತಿರುವ ನನ್ನ ಮನಸ್ಸು ದುರ್ಬಲವಾಗುತ್ತಿದೆ. ಹೃದಯವು ಕಂಪಿಸುತ್ತಿದೆ. ನೇತ್ರಗಳು ಬಿರಬಿರನೆ ತಿರುಗುತ್ತಿದೆ. ಈ ಸ್ಥಿತಿಯು ನನ್ನನ್ನು ಕುಮುದ್ವತೀ ಮಾರ್ಗಕ್ಕೆಳಯಬಹುದೇನೋ?

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ**
**ಪ್ರಭಾವತಿಯ ವಿರಹ ವೇದನೆ ಎಂಬಲ್ಲಿ**
**ತೊಂಬತ್ತಮೂರನೆಯ ಅಧ್ಯಾಯ ಸಮಾಪ್ತಿ**

ವಿಷ್ಣುಪರ್ವ 94 ವಿಷ್ಣುಪರ್ವ

# ಅಥ ಚತುರ್ನವತಿತಮೋऽಧ್ಯಾಯಃ

## ಪ್ರದ್ಯುಮ್ನ ಪ್ರಭಾವತೀಯರ ಗಾಂಧರ್ವ ವಿವಾಹ

**ಆವಿಷ್ಟೇಯಂ ಮಯಾ ಬಾಲಾ ಸರ್ವಥೇತ್ಯವಗಮ್ಯ ತು ।**
**ಕಾರ್ಷ್ಣಿಃ ಹೃಷ್ಟೇನ ಮನಸಾ ಹಂಸೀಮಿದಮುವಾಚ ಹ ॥ 1 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! ಪ್ರದ್ಯುಮ್ನನು ಪ್ರಭಾವತಿಯು ತನ್ನನ್ನು ಹೊಂದಲೇಬೇಕೆಂಬ ಇಚ್ಛೆಯನ್ನು ತಿಳಿದವನಾಗಿ ದುಂಬಿಯ ರೂಪದಲ್ಲಿದ್ದ ಪ್ರದ್ಯುಮ್ನನು ಹಂಸಿಗೆ ಹೀಗೆಂದನು.

ಹಂಸಿಯೇ! ನಾನು ದುಂಬಿಯ ರೂಪ ತಾಳಿ ಅವಳ ಪುಷ್ಪಮಾಲೆಯಲ್ಲಿರುವ ವಿಷಯವನ್ನು ನೀನೇ ಸೂಚಿಸು. ಅವಳು ತನ್ನಿಚ್ಛೆಯಂತೆ ನಡೆಯಲಿ. ಹೀಗೆ ಹೇಳಿದ ಪ್ರದ್ಯುಮ್ನನು ತನ್ನ ನಿಜವಾದ ರೂಪವನ್ನು ಪ್ರಭಾವತಿಗೆ ತೋರಿಸಿದನು. ಅವನ ಪ್ರಭೆಯಿಂದಾಗಿ ಅರಮನೆ ಹೆಚ್ಚು ಶೋಭಿಸಿತು. ಚಂದ್ರನ ಪ್ರಕಾಶ ಮಸುಕಾಯಿತು. *[ಅಭಿಭೂತಾ ಪ್ರಭಾ ಚಂದ್ರೋದ್ಭವ ಶುಭಾ].*

ಸುಂದರಮೂರ್ತಿಯಾದ ಪ್ರದ್ಯುಮ್ನನನ್ನು ನೋಡಿದ ಕೂಡಲೆ ಚಂದ್ರನು ಉದಯಿಸಿದ ಕೂಡಲೆ ಸಮುದ್ರ ಉಕ್ಕೇರುವಂತೆ ಇವಳ ಕಾಮವೆಂಬ ಸಾಗರವು ಉಕ್ಕೇರಿತು. *[ತಂ ದೃಷ್ಟ್ವಾ ವವೃಧೇ ಕಾಮಸಾಗರಃ].*

ಪ್ರಭಾವತಿಯು ನಾಚಿಕೆಯಿಂದ ಕೆಂಪಾದಳು ಅಧೋಮುಖಿಯಾದರೂ ಆಗಾಗ್ಗೆ ಪ್ರದ್ಯುಮ್ನನ ಕಡೆ ಓರೆನೋಟ ಬೀರುತ್ತಿದ್ದಳು. ಸುಮ್ಮನೆ ಸುಸ್ಥಿರವಾಗಿ ನಿಂತಿದ್ದ

ಪ್ರಭಾವತಿಯ ಚುಬುಕವನ್ನು ಪ್ರದ್ಯುಮ್ನನು ಮುಟ್ಟಿದನು. ಅವಳ ಸ್ಪರ್ಶವಾದರೂ ಅವನಿಗೆ ರೋಮಾಂಚನವನ್ನು ತಂದಿತ್ತು. ಸುಮುಖಿ! ನಿಷ್ಕಳಂಕ ಚಂದ್ರನಂತಿರುವ ನಿನ್ನ ಮುಖವನ್ನು ನನಗೆ ತೋರಿಸದೆ ಅಧೋಮುಖಿಯಾಗಿ ಮಾತನ್ನಾಡದೆ ನಿಂತಿರುವೆ.

ಹೀಗಾದರೆ ನಿನ್ನ ಮುಖದ ಕಾಂತಿ ನನ್ನ ಮೇಲೆ ಬೀಳದಂತಾಗಿ ನೂರಾರು ಮನೋರಥಗಳು ನನಗೆ ಲಭಿಸದಂತಾಗುತ್ತದೆ. ನಿನಗೆ ಭಯವೆ? ನಾನಿರುವಾಗ ನಿನಗಾವ ಭಯವೂ ಬೇಡ, ನಿರ್ಭೀತಳಾಗಿರು. ನಿನ್ನ ದಾಸನಾಗಿರುವ ನನ್ನ ಮೇಲೆ ಕೃಪೆ ದೋರು. ನನ್ನನ್ನು ಗಾಂಧರ್ವ ರೀತಿಯಿಂದ ಪಾಣಿಗ್ರಹಣ ಮಾಡು. *[ಗಾಂಧರ್ವೇಣ ವಿವಾಹೇನ ಕುರುಷ್ವಾನುಗ್ರಹಂ ಮಮ].*

## ಗಾಂಧರ್ವ ವಿವಾಹ

**ಉಪಸ್ಪೃಶ್ಯ ತತೋ ಭೈಮೋ ಮಣಿಸ್ಥಂ ಜಾತವೇದಸಮ್ ।**
**ಜುಹಾವ ಸಮಯೇ ವೀರಃ ಪುಷ್ಪೈಃ ಮಂತ್ರನುದೀರಯನ್ ॥ 2 ॥**

**ಜಗ್ರಾಹಾಥ ಕರಂ ತಸ್ಯಾಃ ವರಾಭರಣ ಭೂಷಿತಮ್ ।**
**ಚಕ್ರೇ ಪ್ರದಕ್ಷಿಣಂ ಚೈವ ತಂ ಮಣಿಸ್ಥಂ ಹುತಾಶನಮ್ ॥ 3 ॥**

ಪ್ರಭಾವತಿಯು ಮೌನವಾಗಿಯೇ ಸಮ್ಮತಿಸಿದಳು. ಕೂಡಲೇ ಪ್ರದ್ಯುಮ್ನನು ಆಚಮನ ಮಾಡಿ, ಸೂರ್ಯಕಾಂತಿಮಣಿಯಲ್ಲಿದ್ದ ಅಗ್ನಿಯನ್ನು ಪ್ರಕಟಗೊಳಿಸಿದನು. ಯೋಗ್ಯ ವಿವಾಹ ಮಂತ್ರಗಳನ್ನು ಉಚ್ಚರಿಸುತ್ತಾ ಪುಷ್ಪಗಳನ್ನೆ ಆಹುತಿಗಳನ್ನಾಗಿ ಅರ್ಪಿಸಿದ. ಪ್ರಭಾವತಿಯ ಪಾಣಿಯನ್ನು ಗ್ರಹಣ ಮಾಡಿ ಅಗ್ನಿಗೆ ಪ್ರದಕ್ಷಿಣೆ ಬಂದನು.

**ಪ್ರಜಜ್ವಾಲ ಸ ತೇಜಸ್ವೀ ಮಾನಯನ್ ಅಚ್ಯುತಾತ್ಮಜ ।**
**ಭಗವನ್ ಜಗತಃ ಸಾಕ್ಷೀ ಶುಭಸ್ಯಾಥಾಶುಭಸ್ಯ ಚ ॥ 4 ॥**

ಶುಭಾಶುಭ ಕಾರ್ಯಗಳಿಗೆ ಸಾಕ್ಷಿಯಾದವನೆ ಅಗ್ನಿ. ಅವನು ಪ್ರದ್ಯುಮ್ನನ ಕಾರ್ಯವನ್ನು ಉಜ್ವಲವಾಗಿ ಬೆಳಗಿ ಸಮ್ಮತಿಸಿದ. ಪ್ರದ್ಯುಮ್ನನು ಗಾಂಧರ್ವ ವಿವಾಹಾಂಗವಾಗಿ ವಿಪ್ರರ ಆಶೀರ್ವಾದಕ್ಕಾಗಿ ಕೈತುಂಬ ದಕ್ಷಿಣೆ ನೀಡಲು ಸಂಕಲ್ಪಿಸಿದನು. ನಂತರ ಹಂಸಿಯನ್ನು ತನ್ನ ಕೋಣೆಯ ಬಾಗಿಲಿನಲ್ಲಿ ಇರುವಂತೆ ಹೇಳಿ ಯಾರೂ ಬರದಂತೆ ರಕ್ಷಿಸು ಎಂದನು.

ನಂತರ ಪ್ರದ್ಯುಮ್ನನು ಪ್ರಭಾವತಿಯ ಕೈ ಹಿಡಿದುಕೊಂಡು ಹಂಸತೂಲಿಕಾ ತಲ್ಪಕ್ಕೆ ಕರೆದೊಯ್ದು, ಹಾಸಿಗೆಯ ಮೇಲೆ ಕುಳಿತು ಪ್ರಭಾವತಿಯನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಅವಳನ್ನು ಸಂತೈಸುತ್ತಾ ನಾನಾ ವಿಧ ಕ್ರೀಡೆಗಳಿಂದ ಅವಳನ್ನು ಸಂತೋಷಪಡಿಸಿದನು.

**ಚುಚುಂಬ ಶನಕೈಃ ಗಂಡಂ ವಾಸಯನ್ ಮುಖಮಾರುತೈಃ ।**
**ಆಲಿಲಿಂಗೇ ಚ ಸುಶ್ರೋಣೀಂ ಕ್ರಮೇಣ ರತಿಕೋವಿದಃ ॥ 5 ॥**

### ಪ್ರದ್ಯುಮ್ನ–ಪ್ರಭಾವತಿಯ ರತಿವಿಹಾರ

ಆಲಿಂಗನಾದಿಗಳು, ಚುಂಬನಾದಿಗಳು ಇವುಗಳಿಂದ ಅವಳನ್ನು ಸಂತೋಷಪಡಿಸಿ ಆ ರಾತ್ರಿ ಅವಳೊಂದಿಗೆ ಕಳೆದ. ಬೆಳಗ್ಗೆ ನಟಾಲಯಕ್ಕೆ ಹೊರಟ. ಪ್ರಿಯತಮೆಯನ್ನು ಮನಸ್ಸಿನಲ್ಲಿಯೇ ಚಿಂತಿಸುತ್ತಾ ಇದ್ದನು.

ಯಾದವರಾದರೂ ತಮ್ಮ ಅಭೀಷ್ಟ ಸಿದ್ಧಿಯಾಗಲು ಇಂದ್ರ ಹಾಗೂ ಶ್ರೀಕೃಷ್ಣರ ಆದೇಶಕ್ಕಾಗಿ ಕಾಯುತ್ತಿದ್ದರು. ನಟರ ವೇಷದಲ್ಲಿಯೇ ಇದ್ದು ವಜ್ರನಾಭನ ಮೂರು ಪಟ್ಟಣಗಳನ್ನು ಗೆಲ್ಲುವುದನ್ನೆ ನಿರೀಕ್ಷಿಸುತ್ತಿದ್ದರು. ಕಶ್ಯಪರ ಯಾಗ ಪೂರ್ತಿಯಾಗಬೇಕಿತ್ತು. ಅದಕ್ಕಾಗಿ ವಜ್ರನಾಭನೂ ಕಾಯುತ್ತಿದ್ದನು. ಹೀಗಾಗಿ ದೇವ–ದಾನವರಲ್ಲಿ ವಿರೋಧವಿಲ್ಲದೆ ಸಾಗಿತ್ತು.

**ದೇವಾಸುರಾಣಾಂ ಸರ್ವೇಷಾಮವಿರೋಧೋ ಮಹಾತ್ಮನಾಮ್ ।**
**ತ್ರೈಲೋಕ್ಯ ವಿಜಯಾರ್ಥಾಯ ಯತತಾಂ ಧರ್ಮ ಚಾರಿಣಾಮ್ ॥ 6 ॥**

ಹೀಗೆ ಯಾದವರು ವಿಜಯಗಳಿಸಲು ಕಾಲ ನಿರೀಕ್ಷಣೆಯಲ್ಲಿ ಇರುವಾಗಲೇ ಸಕಲಪ್ರಾಣಿಗಳಿಗೂ ಮನೋಹ್ಲಾದವುಂಟು ಮಾಡುವ ಮಳೆಗಾಲವು ಪ್ರಾಪ್ತವಾಯಿತು.

**ಸಂಪ್ರಾಪ್ತಃ ಪ್ರಾವೃಷೋ ರಮ್ಯಃ ಸರ್ವಭೂತಮನೋಹರಃ ।**

ಹಂಸಗಳಾದರೂ ಹಗಲು ರಾತ್ರಿಯೆನ್ನದೆ ಇಂದ್ರೋಪೇಂದ್ರರಿಗೆ ಅಲ್ಲಿ ನಡೆಯುವ ವಾರ್ತೆಗಳನ್ನು ತಿಳಿಸುತ್ತಿದ್ದವು.

**ಅಹರ್ನಿಶಂ ಚ ವೃತ್ತಾಂತಂ ಪ್ರಯಚ್ಛಂತಿ ಮನೋಜವಾಃ ।**
**ರೇಮೇ ಸಹ ಪ್ರಭಾವತ್ಯಾ ಪ್ರದ್ಯುಮ್ನಶ್ಚಾರುರೂಪಯಾ ॥ 7 ॥**
**ರಾತ್ರೌ ರಾತ್ರೌ ಮಹಾತೇಜಾಃ ಧಾರ್ತರಾಷ್ಟ್ರಾಭಿರಕ್ಷಿತಃ ॥ 8 ॥**

ಮನಸ್ಸಿನಂತೆ ವೇಗವುಳ್ಳ ಪಕ್ಷಿಗಳು ಯಾದವರಿಗೆ ಇಂದ್ರ ಕೇಶವರ ವಿಚಾರವನ್ನೂ ತಿಳಿಸುತ್ತಿದ್ದವು.

ಪ್ರದ್ಯುಮ್ನ - ಪ್ರಭಾವತಿಯರು ಧಾರ್ತರಾಷ್ಟ್ರ ಪಕ್ಷಿಗಳ ರಕ್ಷಣೆಯಲ್ಲಿ ಪ್ರತಿರಾತ್ರಿಯೂ ಸಂಗಮಿಸುತ್ತಿದ್ದರು.

ಇಂದ್ರದೇವನ ಆದೇಶದಂತೆ ಹಂಸಪಕ್ಷಿಗಳು ವಜ್ರಪುರ ಪೂರ್ತಿ ವ್ಯಾಪಿಸಿದ್ದವು. ಕೇವಲ ನಟರು-ನಾಟ್ಯ ಇವುಗಳಲ್ಲಿಯೇ ದೃಷ್ಟಿ ಇದ್ದ ದಾನವರಿಗೆ ನಟರು ಯಾರೆಂದು ತಿಳಿಯುವ ಯೋಚನೆ ಬರದಾಗಿತ್ತು. ನಟವೇಷಧಾರಿಗಳಾಗಿದ್ದ ಯಾದವರಿಗೆ ಮಾಯೆಯಿಂದ ಇನ್ನೊಂದು ರೂಪ ಪಡೆದು ಅವರೊಂದಿಗೂ ಇರುತ್ತಿದ್ದ, ಪ್ರದ್ಯುಮ್ನನು ತಮ್ಮೊಂದಿಗಿಲ್ಲ ಎಂದೂ ತಿಳಿಯುತ್ತಿರಲಿಲ್ಲ.

ಪ್ರದ್ಯುಮ್ನನು ಮಾಯೆಯಿಂದ ದ್ವಿಕಾಯನಾಗಿ ಪ್ರಭಾವತಿಯೊಂದಿಗೂ ಯಾದವರೊಂದಿಗೂ ಇರುತ್ತಿದ್ದ.

**ಮಾಯಯಾಸ್ಯ ಪ್ರತಿಚ್ಛಾಯಾ ದೃಶ್ಯತೇ ಹಿ ನಟಾಲಯೇ ।**
**ದೇಹಾರ್ಧೇನ ತು ಕೌರವ್ಯ! ಸಿಷೇವೇಽಸೌ ಪ್ರಭಾವತೀಮ್ ॥ 9 ॥**

ಅಸುರರು ನಟವೇಷದಲ್ಲಿರುವ ಯಾದವರ ವಿನೀತತೆ, ಶೀಲ ನೃತ್ಯಾದಿಲೀಲೆ, ಚಾತುರ್ಯ, ವಿದ್ವತ್ತು ಇವುಗಳನ್ನು ನೋಡಿ ಬಹಳ ಪ್ರಭಾವಯುತರಾಗಿದ್ದರು. ಅವರ ಪುನರ್ದರ್ಶನಕ್ಕಾಗಿ ಹಾತೊರೆಯುತ್ತಿದ್ದರು.

ದಾನವರ ಸ್ತ್ರೀಯರೂ ಸಹ ಯಾದವರೊಡನೆ ಬಂದಿದ್ದ ಸುಂದರಿಯರ ರೂಪ-ವಿಲಾಸ ಹಾವಭಾವ -ಸೌಗಂಧ್ಯ ಮಧುರ ಮಾತುಗಳು, ಅವರ ಸ್ವಭಾವಗಳನ್ನು ಬಹಳ ಮೆಚ್ಚಿದ್ದರು.

**ತಾಸಾಂ ಯಾದವನಾರೀಣಾಂ ಸ್ಪೃಹಯಂತ್ಯಸುರಸ್ತ್ರಿಯಃ ।**
**ರೂಪಂ ವಿಲಾಸಂ ಗಂಧಂ ಚ ಮಂಜುಭಾಷಾಮಥಾರ್ಯತಾಮ್ ॥ 10॥**

ವಜ್ರನಾಭನಿಗೆ 'ಸುನಾಭ'ನೆಂಬ ಸೋದರನಿದ್ದನು. ಅವನಿಗೆ ಅಪರೂಪಸುಂದರಿಯರಾದ ಚಂದ್ರವತೀ -ಗುಣವತೀಯೆಂಬ ಇಬ್ಬರು ಪುತ್ರಿಯರಿದ್ದರು. ಅವರಿಬ್ಬರೂ ಪ್ರಭಾವತಿಯ ಪ್ರಾಣಸಖಿಯರು. ಪ್ರಭಾವತಿಯೊಂದಿಗೆ ಭೇಟಿ ಮಾಡುತ್ತಿದ್ದ ಕಾಲದಲ್ಲಿ ಪ್ರಭಾವತಿಯು ಯಾರೋ ಒಬ್ಬ ಪರಪುರುಷನೊಂದಿಗೆ ವಿಹಾರ ಮಾಡುತ್ತಿರುವುದನ್ನು ತಿಳಿದರು.

**ವಜ್ರನಾಭಸ್ಯ ತು ಭ್ರಾತಾ ಸುನಾಭೋ ನಾಮ ವಿಶ್ರುತಃ ।**
**ದುಹಿತೃದ್ವಯಂ ಚ ನೃಪತೇಃ ತಸ್ಯ ರೂಪಗುಣಾನ್ವಿತಮ್ ॥ 11 ॥**
**ಏಕಾ ಚಂದ್ರವತೀ ನಾಮ್ನಾ ಗುಣವತ್ಯಥ ಚಾಪರಾ ।**
**ಪ್ರಭಾವತ್ಯಾಲಯಂ ತೇ ತು ವ್ರಜತಃ ಖಲು ನಿತ್ಯ ದಾ ॥ 12 ॥**
**ದದೃಶಾತೇ ತು ತೇ ತತ್ರ ರತಿಸಕ್ತಾಂ ಪ್ರಭಾವತೀಮ್ ॥ 13 ॥**

ಪ್ರಭಾವತಿಯನ್ನು ಕುರಿತು ಸಖಿ! ನೀನು ಯಾರೊಂದಿಗೆ ರತಿಕ್ರೀಡೆಯಲ್ಲಿ ತೊಡಗಿರುವೆ? ಎಂದರು. ಪ್ರಭಾವತಿಯಾದರೂ, 'ಭಗಿನಿಯರೇ ! ನನಗೊಂದು ವಿದ್ಯೆ ತಿಳಿದಿದೆ. ಆ ವಿದ್ಯೆಯನ್ನು ಪ್ರಯೋಗಿಸಿದ ಕೂಡಲೇ ರತಿಕ್ರೀಡೆಗಾಗಿ ನಾವು ಅಪೇಕ್ಷಿಸುವ ದೇವನಾಗಲಿ ದಾನವನಾಗಲಿ ವಿವಶವನ್ನಾಗಿ ಮಾಡಿ ನಮ್ಮ ಮುಂದೆ ನಿಲ್ಲಿಸುತ್ತದೆ.'

**ರತ್ಯರ್ಥಂ ಸಾಽಽನಯತ್ಯಾಶು ಸೌಭಾಗ್ಯಂ ಚ ಪ್ರಯಚ್ಛತಿ ।**
**ದೇವಂ ವಾ ದಾನವಂ ವಾಪಿ ವಿವಶಂ ಸದ್ಯ ಏವ ಹಿ ॥ 14 ॥**

ಈ ವಿದ್ಯೆಯಿಂದಾಗಿ ದೇವಪುತ್ರನೊಂದಿಗೆ ವಿಹರಿಸುತ್ತಿರುವೆನು. ಈ ದೇವಪುತ್ರನು ವಿದ್ಯೆಯ ಪ್ರಭಾವದಿಂದಾಗಿ ನನ್ನೊಂದಿಗೆ ಇರುವನು ಎಂದಳು. ಪ್ರದ್ಯುಮ್ನನ ಸೌಂದರ್ಯ ರೂಪ–ಯೌವ್ವನಗಳನ್ನು ನೋಡಿದ ಚಂದ್ರ–ಗುಣವತಿಯರು ಆಶ್ಚರ್ಯಪಟ್ಟರು.

ನಾನು ದೇವತೆಯನ್ನು ಯಾಕೆ ಬಯಸಿದನೆಂದರೇ ದೇವತೆಗಳು ಸರ್ವದಾ ಧರ್ಮಕಾರ್ಯಗಳಲ್ಲಿ ಆಸಕ್ತರಾಗಿದ್ದರೆ ದೈತ್ಯರು *[ದೇವ ಧರ್ಮರತಾಃ]* ಅಸುರರಾದರೂ ದಂಭಾಚಾರದಲ್ಲಿ ಆಸಕ್ತರಾಗಿರುವರು.

ದೇವತೆಗಳು ತಪಸ್ಸಿನಲ್ಲಿ ಆಸಕ್ತರಾದರೆ, ಅಸುರರು ವೈಷಯಿಕ ಸುಖದಲ್ಲಿಯೇ ಮುಳುಗಿರುವರು. *[ಸುಖೇ ರಕ್ತಾ ಮಹಾಸುರಾಃ].*

**ದೇವಾಃ ಸತ್ಯೇ ರತಾಃ ನಿತ್ಯಂ ಅನೃತೇ ತು ಮಹಾಸುರಾಃ ।**
**ಧರ್ಮಸ್ತಪಶ್ಚ ಸತ್ಯಂ ಚ ಯತ್ರ ತತ್ರ ಜಯೋ ಧ್ರುವಮ್ ॥ 15 ॥**

ದೇವತೆಗಳು ಸತ್ಯನಿಷ್ಠರು, ಅಸುರರು ಅಸತ್ಯನಿಷ್ಠರು, ದೇವತೆಗಳಲ್ಲಿ ಸತ್ಯ–ಧರ್ಮ–ತಪಸ್ಸು ಈ ಮೂರೂ ಯಾವ ಪಕ್ಷದಲ್ಲಿರುತ್ತವೆಯೋ ಆ ಪಕ್ಷವು ಗೆಲ್ಲುತ್ತದೆ.

**ದೇವಪುತ್ರೌ ವರಯತಾಂ ಪತಿವಿದ್ಯಾಂ ದದಾಮ್ಯಹಮ್ ।**
**ಉಚಿತೌ ಮತ್ಪ್ರಭಾವೇಣ ಸದಯ ಏವೋಪಲಪ್ಸ್ಯಥ ॥ 16 ॥**

ಪ್ರಭಾವತಿಯು ನಿಮಗೂ ನಾನು ಪತಿವಶೀಕರಣ ವಿದ್ಯೆಯನ್ನು ಉಪದೇಶಿಸುವೆನು. ನೀವೂ ಈ ವಿದ್ಯೆಯ ಮೂಲಕ ದೇವಪುತ್ರರನ್ನೂ ವರಿಸಬಹುದು ಎಂದಳು.

ಚಂದ್ರವತೀ-ಗುಣವತಿಯರು ಒಪ್ಪಿ ವಿದ್ಯೆಯನ್ನು ಪಡೆದರು. ಈ ವಿಷಯವನ್ನು ಪ್ರಭಾವತಿಯು ಪ್ರದ್ಯುಮ್ನನಿಗೆ ಈ ವಿಷಯ ಹೇಳಿದಳು.

ಪ್ರದ್ಯುಮ್ನನು ಗದ ಹಾಗೂ ಸಾಂಬನನ್ನು ಸೂಚಿಸಿದನು.

**ಸಪಿತೃವ್ಯಂ ಗದಂ ವೀರಂ ಸಾಂಬಂ ಚಾಥಾಬ್ರವಿತ್ ತದಾ ।**
**ರೂಪಾನ್ವಿತೌ ಸುಶೀಲೌ ಚ ಶೂರೌ ಚ ರಣಕರ್ಮಣಿ ॥ 17 ॥**

ಪ್ರಭಾವತಿಯು ತನ್ನ ತಂಗಿಯರಿಗೆ ಪ್ರದ್ಯುಮ್ನನ ಚಿಕ್ಕಪ್ಪನಾದ ಗದ ಹಾಗೂ ತಮ್ಮನನ್ನು ಸೂಚಿಸಿದಳು. ದೂರ್ವಾಸರು ತನಗೆ ಈ ವಿದ್ಯೆಯನ್ನು ನೀಡಿದ್ದು ಹಾಗೂ ಸದಾಕನ್ಯೆಯಾಗಿರುವಂತೆಯೂ ಅನುಗ್ರಹಿಸಿದ್ದರು ಎಂದು ಹೇಳಿದಳು.

ಕುತೂಹಲಾವಿಷ್ಟ ಗುಣವತೀ ಚಂದ್ರವತಿಯರು ಪ್ರಭಾವತಿಯಿಂದ ಪಡೆದ ವಿದ್ಯೆಯ ಉಪದೇಶದಿಂದ ಗದ-ಸಾಂಬರನ್ನು ಧ್ಯಾನಿಸಿದರು. ಕೂಡಲೇ ಗದ-ಸಾಂಬರು ಅರಮನೆಗೆ ಪ್ರವೇಶಿಸಿದರು.

ಗಾಂಧರ್ವವಿಧಿಯಂತೆ ವಿವಾಹವಾದ ಗದ-ಸಾಂಬರು ಚಂದ್ರವತಿ ಹಾಗೂ ಗುಣವತೀಯರನ್ನು ವಿವಿಧ ವಿಹಾರಗಳಿಂದ ಸಂತೋಷಪಡಿಸಿದರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ಪ್ರದ್ಯುಮ್ನ-ಪ್ರಭಾವತಿಯರ ಗಾಂಧರ್ವ ವಿವಾಹ ಎಂಬಲ್ಲಿ
ತೊಂಬತ್ತನಾಲ್ಕನೆಯ ಅಧ್ಯಾಯ ಸಮಾಪ್ತಿ

ವಿಷ್ಣುಪರ್ವ 95 ವಿಷ್ಣುಪರ್ವ

# ಅಥ ಪಂಚನವತಿತಮೋಽಧ್ಯಾಯಃ

## ಪ್ರದ್ಯುಮ್ನನಿಂದ ತನ್ನ ಕುಲ ಪರಿಚಯ

ನಭೋ ನಭಸ್ಯೇಽಥ ನಿರೀಕ್ಷ್ಯ ಮಾಸಿ
ಕಾಮಸ್ತದಾ ತೋಯದ ವೃಂದ ಕೀರ್ಣಮ್ ।
ಪ್ರಭಾವತೀಂ ಚಾರುವಿಶಾಲನೇತ್ರಾಮ್
ಉವಾಚ ಪೂರ್ಣೇಂದು ನಿಕಾಶ ವಕ್ತ್ರಃ ॥ 1 ॥

ವೈಶಂಪಾಯನರು ಜನಮೇಜಯನಿಗೆ ರಾಜನೇ! ಪ್ರದ್ಯುಮ್ನನು ಭಾದ್ರಪದ ಮಾಸದಲ್ಲಿ ಆಕಾಶವು ಮೇಘಾಚ್ಛಾದಿತವಾಗಿದ್ದನ್ನು ನೋಡಿ ಪ್ರಭಾವತಿಗೆ ಹೀಗೆಂದನು.

ಸುಂದರಿ! ನಿನ್ನ ಮುಖದ ಕಾಂತಿಯಂತೆ ಬೆಳಗುತ್ತಿದ್ದ ಚಂದ್ರನು ಈಗ ಕಾಣುತ್ತಿಲ್ಲ. ನಿನ್ನ ಕೇಶರಾಶಿಯಂತಿರುವ ಕಪ್ಪಾದ ಮೋಡವು ಚಂದ್ರನನ್ನು ಮುಚ್ಚಿದೆ.

ಮಿಂಚುಗಳಿಂದ ಮುಕ್ತನಾಗಿರುವ ಈ ಮೋಡಗಳು ಸುವರ್ಣಾಭರಣದ ಧರಿಸಿರುವ ನಿನ್ನಂತೆಯೇ ತೋರುತ್ತಿದೆ *[ತ್ವದ್ಧಾರಯಷ್ಟೇಃ ಸದೃಶಾ ವರಾಂಗಿ]*.

ಗರ್ಜನೆ ಮಾಡುತ್ತಾ ಮೇಘಗಳು ಜಲಧಾರೆಗಳು ನಿನ್ನ ಕಂಠದ ಮುತ್ತಿನ ಸರದಂತೆಯೆ ಇದೆ. ಆಕಾಶದಲ್ಲಿ ಮೋಡಗಳನ್ನು ಸುತ್ತುಗಟ್ಟಿರುವ ಬೆಳ್ಳಕ್ಕಿಗಳ ಸಾಲುಗಳು ನಿನ್ನ ಹಲ್ಲುಗಳ ಪಂಕ್ತಿಯಂತಿದೆ.

ನಿನ್ನ ಮುಖದಲ್ಲಿರುವ ಕಡೆಗಣ್ಣಿನಂತೆ ಗಗನದಲ್ಲಿ ತೋರುತ್ತಿರುವ ಕಾಮನಬಿಲ್ಲನ್ನು ನೋಡು.

ಗುಡುಗುಗಳ ಶಬ್ಧದಿಂದ ಸಂತುಷ್ಟವಾದ ನವಿಲುಗಳು ಪ್ರತಿಧ್ವನಿಸುತ್ತಿವೆ. ಕೆಲವು ಬಾರಿ ಮಹಡಿಗಳಲ್ಲಿ ಹಾಗೂ ವೃಕ್ಷಗಳ ಮೇಲು ಕುಳಿತ್ತಿರುತ್ತವೆ. ರೆಕ್ಕೆಗಳು ಒದ್ದೆಯಾಗಿರುವ ಅವುಗಳು ಚೂಡಾಮಣಿ ರತ್ನದಂತೆ ಭಾಸಮಾನವಾಗುತ್ತಿವೆ.

ಮಳೆಯು ಸುರಿಯುತ್ತಿರುವಾಗ ಅದರಿಂದ ಹೊರಟ ವಾಯುವು ಅರ್ಜುನಾದಿ ಅನೇಕ ಪರಿಮಳ ಪುಷ್ಪಗಳ ಸುಗಂಧವನ್ನು ತನ್ನೊಂದಿಗೆ ಹೊತ್ತು ತಂದು ರತಿಕ್ರೀಡೆಯಿಂದಾಗಿ ಶ್ರಮವಾರಿಯನ್ನು ನಿವಾರಿಸದಿದ್ದರೆ ಈ ವರ್ಷಾಕಾಲವು ನನಗೆ ಪ್ರಿಯವಾಗುತ್ತಿರಲಿಲ್ಲ.

ಸಾರಸ ಕ್ರೌಂಚ ಪಕ್ಷಿಗಳಿಂದ ಸಹಿತವಾದ ಹಂಸಪಕ್ಷಿಗಳು ನದಿಗಳ ಮರಳಿನ ರಾಶಿಗಳು ಪ್ರವಾಹದಿಂದ ಮುಳುಗಿದ್ದನ್ನು ನೋಡಿ ಮಾನಸಸರೋವರಕ್ಕೆ ಹೊರಡಲನುವಾಗಿವೆ.

ಈ ಹಂಸಾದಿ ಪಕ್ಷಿಗಳೆಲ್ಲ ಹೊರಟು ಹೋದರೆ ಈ ನದಿ ಸರೋವರಗಳು ಕಾಂತಿಹೀನವಾಗುತ್ತವೆ.

ಯೋಗನಿದ್ರಾದೇವಿಯು ಈ ಕಾಲದಲ್ಲಿ ಮಲಗುವಂತೆ ನಟಿಸುವ ಶ್ರೀಮಹಾವಿಷ್ಣುವಿನ ಬಳಿ ಸಾಗುತ್ತದೆ.

ಶ್ರೀಹರಿಯು ಯೋಗನಿದ್ರಾಮುದ್ರಿತನಾದಾಗ ಕಾಂತಿಯಿಂದ ಬೆಳಗುತ್ತಿರುವ ಚಂದ್ರನು ಮೇಘವೆಂಬ ವಸ್ತ್ರದಿಂದ ಆಚ್ಛಾದಿತನಾದಂತೆ ತೋರುವನು.

ಭಗವಂತನಿಗಾಗಿ ಪುಷ್ಪಮಾಲೆಯನ್ನು ತಯಾರಿಸಿರುವ ಕದಂಬ ನೀವ ಅರ್ಜುನಾದಿ ವೃಕ್ಷಗಳ ಪುಷ್ಪಗಳಲ್ಲಿ ದುಂಬಿಗಳು ಮಧುವನ್ನು ಹೀರಿದರೂ ಪುಷ್ಪಗಳು ಕಾಂತಿಹೀನವಾಗಲಾರವು. ಆದರೆ ವಿಷಭರಿತ ಸರ್ಪಗಳು ಮೂಸಿದರೂ ಸಾಕು ಕಾಂತಿಹೀನಗಳಾಗುತ್ತವೆ. ಹಾಗೆಯೇ ಪ್ರಿಯತಮನು ಎಷ್ಟೇ ರಸಾಸ್ವಾದನೆ ಮಾಡಿದರೂ ಪ್ರಿಯತಮೆಗೆ ಸಂತೋಷವೆ. ಪ್ರಿಯತಮನಲ್ಲದೆ ಬೇರೆಯವರು ರಸಾಸ್ವಾದ ಮಾಡಿದರ ಮುಖಕಾಂತಿ ಕುಂದುತ್ತದೆ.

**ಋಚೋ ದ್ವಿಜಾತಿಃ ಪ್ರಿಯಸತ್ಯಧರ್ಮಾ ಯಥಾ**
**ಸುಶಿಷ್ಯೈಃ ಪರಿವಾರ್ಯಮಾಣಃ ॥ 2 ॥**

ಸತ್ಯಧರ್ಮರತನಾದ ಬ್ರಾಹ್ಮಣನು ತನ್ನ ಶಿಷ್ಯರಿಂದೊಡಗೂಡಿ ವೇದಾಧ್ಯಯನ ನಡೆಸುವಂತೆ, ಮಂಡೂಕಗಳು ವರ್ಷಾಕಾಲದ ಚಾತುರ್ಮಾಸಗಳಲ್ಲಿ ಹೆಣ್ಣು ಕಪ್ಪೆಗಳೊಂದಿಗೆ ವಟಗುಟ್ಟುತ್ತಿದೆ.

ಪ್ರಭಾವತಿಯೇ! ವರ್ಷಾಕಾಲದಲ್ಲಿ ಇಷ್ಟು ಗುಣಗಳಿದ್ದರೂ ದೋಷವೂ ಇದೆ. ಚಂದ್ರನು ಮೇಘಾಚ್ಛಾದಿತನಾಗಿ ತೋರುವುದಿಲ್ಲವೆಂಬುದೆ ಆ ದೋಷ. ಈ ಚಂದ್ರನು ಪ್ರಿಯನಿಂದ ವಿಹೀನರಾದ ವಿರಹಿಣಿಯರಿಗೆ ಕಾಡ್ಗಿಚ್ಚಿನಂತೆ ದಹಿಸುತ್ತಾನೆ. ಹೀಗೆ ಚಂದ್ರನು ಒಬ್ಬೊಬ್ಬರಿಗೆ ಒಂದೊಂದು ರೀತಿ ಪ್ರಿಯ–ಅಪ್ರಿಯನೂ ಆಗುವನು.

## ಪ್ರದ್ಯುಮ್ನನು ತನ್ನ ವಂಶ ವಿವರಿಸಿದ್ದು

**ಅವಾಪ ಯೋ ಬ್ರಾಹ್ಮಣ ರಾಜ್ಯಮೀಡ್ಯೇ ದುರಾಪಮನ್ಯೈಃ**
**ಸುಕೃತೈಃ ತಪೋಭಿಃ ।**
**ಗಾಯಂತಿ ವಿಪ್ರಾಃ ಪವಮಾನ ಸಂಜ್ಞಂ**
**ಸಮಾಗತಾಃ ಪರ್ವಣಿ ಚಾಪ್ಯುದಾರಮ್ ॥ 3 ॥**

ಪ್ರೇಯಸಿಯೇ! ಯಾರನ್ನು ಒಲಿಸಿಕೊಳ್ಳಲು ತಪಸ್ಸೆ ಮೊದಲಾದ ಪುಣ್ಯಕಾರ್ಯಗಳಿಂದ ಸಾಧ್ಯವಿಲ್ಲವೋ, ಯಾರೂ ಬ್ರಾಹ್ಮಣರಿಗೆ ಒಡೆಯನೋ, ಯಜ್ಞಕಾಲದಲ್ಲಿ ಪವಮಾನದಲ್ಲಿ ಬರುವ ಆಪ್ಯಾಯಸ್ವ ಎಂಬ ವೇದ ಮಂತ್ರದಿಂದ ಅವನ ಗುಣಗಾನ ಮಾಡುವರೋ ಯಾವನು ಜ್ಞಾನಿ ಬುಧದೇವನಿಗೆ ಜನಕನೋ, ಔಷಧಿ ವನಸ್ಪತಿಗಳಿಗೆ ಅಧಿದೈವನೋ ಪುರೂರವಸ್‌ನು ಮೊಮ್ಮಗನಾಗಿರುವನೋ, ಅಂತಹ ಚಂದ್ರನೇ ನಮ್ಮ ಮೂಲ ಪುರುಷ.

ಅವನ ವಂಶದಲ್ಲಿ ಪುರೂರವಸ್ಸನು ಜನಿಸಿದನು. ಅವನು ಕುಶಾಗ್ರದಿಂದ ನೂರಾರು ಯಜ್ಞಗಳನ್ನು ಮಾಡಿ ಗಂಧರ್ವರಂತೆ ಅಗ್ನಿ ಸಮಾನ ತೇಜಸ್ಸನಾಗಿ ಸ್ವರ್ಗದಲ್ಲಿರುವನು.

ಚಂದ್ರನ ವಂಶದಲ್ಲಿ ಆಯುವೆಂಬ ರಾಜನಾದನು. ಅವನ ಪುತ್ರನೇ ನಹುಷ. ನಹುಷನು ಬಹುವರ್ಷ ತ್ರಿಲೋಕಾಧಿಪತಿಯಾಗಿ ಮೆರೆದನು.

**ಆಯುಶ್ಚ ವಂಶೇ ನಹುಷಶ್ಚ ಯಸ್ಯ ಯೋದೇವರಜತ್ವಮವಾಪ ವೀರಃ॥4॥**

ಈ ಚಂದ್ರವಂಶ ಭೀಮವಂಶದಲ್ಲಿಯೇ ಜಗಜ್ಜನ್ಮಾದಿಕರ್ತನಾದ ಶ್ರೀಹರಿಯು

ದೇವಕಾರ್ಯಕ್ಕಾಗಿ ಅವತರಿಸಿರುವನು. ಇದೇ ವಂಶದಲ್ಲಿಯೇ ಉಪರಿಚರವಸುವೂ ಜನಿಸಿರುವನು. ಅವರಿಗೆ ಯದುರಾಜನು ಚಕ್ರವರ್ತಿಯಾಗಿ ಶೋಭಿಸಿದನು.

ಈ ಯದುವಂಶದಲ್ಲಿ ಒಬ್ಬನೂ ಕಪಟಿಯಿರುವುದಿಲ್ಲ *[ನ ಕೂಟಕೃದ್].* ನಾಸ್ತಿಕನಾಗಲೀ, ಧರ್ಮದಲ್ಲಿ ಅನಾಸಕ್ತನಾಗಲೀ, ಲೋಭಿಯಾಗಲೀ, ಶೌರ್ಯರಹಿತನಾಗಲೀ ಇಲ್ಲ *[ನ ನಾಸ್ತಿಕೋ ನ್ಯೆಷ್ಕೃತಿಕೋ ಶೌರ್ಯೇಣ ಹೀನಃ].*

ಸುದತಿ! ನೀನು ನನ್ನನ್ನು ಹೊಂದಿ ಚಂದ್ರವಂಶ-ಯದುವಂಶ. ಹೀಗೆ ಉಭಯವಂಶಕ್ಕೂ ಸೊಸೆಯಾಗಿರುವೆ. ಹೀಗಾಗಿ ಸಜ್ಜನರಿಗೆ ಪ್ರಿಯನೂ ಜಗದೀಶ್ವರನಿಗೂ ನಮಸ್ಕರಿಸು.

ಯಾವನು ಬ್ರಹ್ಮದೇವನಿಗೂ ಆಶ್ರಯನೋ *[ಆತ್ಮಭವಾಯನಾಯ]* ಹದಿನಾಲ್ಕು ಲೋಕಾಶ್ರಯನೋ, ಇಂದ್ರಾದಿ ದೇವತೆಗಳಿಗೂ ಆಧಾರಭೂತನಾದ, ಗರುಡಧ್ವಜನಾದ ಪುರುಷೋತ್ತಮನೋ ಅವನೇ ನಿನಗೆ ಶ್ವಶುರನಾಗಿರುವನು. ಇವನಿಗೆ ಪ್ರಣಾಮ ಮಾಡು. *[ಕುರು ಪ್ರಣಾಮಂ ಶ್ವಶುರಾಯ ದೇವಿ].*

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ ಪ್ರದ್ಯುಮ್ನನು ಪ್ರಭಾವತಿಗೆ ತನ್ನ ವಂಶದ ಪರಿಚಯ ಮಾಡಿಸುವುದೆಂಬಲ್ಲಿ ತೊಂಬತ್ತೈದನೆಯ ಅಧ್ಯಾಯ ಸಮಾಪ್ತಿ**

# ಅಥ ಷಣ್ಣವತಿತಮೋಽಧ್ಯಾಯಃ

## ವಜ್ರನಾಭನ ವಿಜಯಯಾತ್ರೆ

**ಸತ್ರಾವಸಾನೇ ಚ ಮುನೇಃ ಕಶ್ಯಪಸ್ಯಾತಿತೇಜಸಃ ।**
**ಜಗ್ಮುಃ ದೇವಾಸುರಾಃ ಸ್ವಾನಿ ಸ್ಥಾನಾನ್ಯಮಿತ ತೇಜಸಃ ॥ 1 ॥**

ಜನಮೇಜಯನೇ! ಮಹಾನುಭಾವರಾದ ಕಶ್ಯಪರು ಪ್ರಾರಂಭಿಸಿದ್ದ ಯಜ್ಞ ಮುಗಿದಿತ್ತು. ದೇವ-ದೈತ್ಯರೆಲ್ಲರೂ ತಮ್ಮ ನಿವಾಸ ಸೇರಿದರು.

ವಜ್ರನಾಭನು ಮೂರ್ಲೋಕಗಳನ್ನು ಗೆಲ್ಲಬೇಕೆಂಬ ಮಹಾದಾಕಾಂಕ್ಷೆಯನ್ನು ಹೊಂದಿದ್ದು ಯಜ್ಞ ಸಮಾಪ್ತಿಗಾಗಿ ಕಾಯುತ್ತಿದ್ದನು. ಅಂತೆಯೇ ಕಶ್ಯಪರ ಸಮೀಪ ಹೋದನು. ಅವನ ಅಭಿಲಾಷೆ ತಿಳಿಸಿದ. ಕಶ್ಯಪರಾದರು ಹೀಗೆಂದರು,

**ವಜ್ರನಾಭ ನಿಬೋಧ ತ್ವಂ ಶ್ರೋತವ್ಯಂ ಯದಿಚೇನ್ಮಮ ।**
**ವಸ ವಜ್ರಪುರೇ ಪುತ್ರ ಸ್ವಜನೇನ ಸಮಾವೃತಃ ॥ 2 ॥**

ವಜ್ರನಾಭನೇ, ನಾನು ಹೇಳುವ ಮಾತನ್ನು ಕೇಳು. ಈ ಯುದ್ಧೋತ್ಸಾಹವನ್ನು ತ್ಯಜಿಸಿ ನಿನ್ನ ಬಂಧುಗಳೊಂದಿಗೆ ನಿನ್ನ ಪುರದಲ್ಲಿ ಸುಖವಾಗಿರು.

ಇಂದ್ರದೇವನು ನಿನಗಿಂತಲೂ ಅಧಿಕ ತಪಸ್ವಿಯಾಗಿರುವನು. ನಿನಗಿಂತಲೂ ಅಧಿಕವಾದ ಶಕ್ತಿಶಾಲಿಯು. ಬ್ರಾಹ್ಮಣ ಪ್ರಿಯನಾದ ಅವನು ಕೃತಜ್ಞನೂ ಸ್ವಾಭಾವಿಕವಾಗಿಯೇ ನಿಮ್ಮೆಲ್ಲರಿಗೂ ಜ್ಯೇಷ್ಠನು.

ಸಮಗ್ರ ಜಗತ್ತಿಗೂ ರಾಜನೂ, ಸತ್ಪಾತ್ರನೂ ಸಜ್ಜನ ಶರಣ್ಯನೂ ಆಗಿ ಸಕಲ ಪ್ರಾಣಿಗಳ ಹಿತದಲ್ಲಿಯೇ ಆಸಕ್ತನಾಗಿರುವನು.

**ನೈವ ಶಕ್ಯಸ್ತ್ವಯಾ ಜೇತುಂ ವಜ್ರನಾಭ ವಿಹನ್ಯಸೇ ।**
**ಅಹಿಂ ಪದಾ ವ್ಯತ್ಕ್ರಮನ್ ವೈ ನಚಿರಾದ್ ವಿನಶಿಷ್ಯಸಿ ॥ 3 ॥**

ವಜ್ರನಾಭನೇ! ಇಂತಹ ಮಹಿಮಾವಂತನಾದ ಇಂದ್ರದೇವನನ್ನು ನಿಶ್ಚಿತವಾಗಿಯೂ ಗೆಲ್ಲಲಾರೆ. ಸರ್ಪವನ್ನು ತುಳಿದ ವ್ಯಕ್ತಿಯು ಅದೇ ಸರ್ಪದಿಂದ ಕಚ್ಚಲ್ಪಡುವಂತೆ ಮೂರು ಲೋಕ ಗೆಲ್ಲಲು ಹೊರಡುವ ನೀನೇ ನಾಶ ಹೊಂದುವೆ. ಮೃತ್ಯು ಆವರಿಸಿದವನಿಗೆ ಔಷಧಿಗಳು ಕೆಲಸ ಮಾಡದಿರುವಂತೆ ಯಮಪಾಶದಿಂದ ಹಿಡಿಯಲ್ಪಟ್ಟ ವಜ್ರನಾಭನಿಗೆ ಕಶ್ಯಪರು ಹೇಳಿದ ಮಾತು ಹಿಡಿಸಲಿಲ್ಲ.

ದುರ್ಬುದ್ಧಿಯ ವಜ್ರನಾಭನು ಕಶ್ಯಪರಿಗೆ ನಮಸ್ಕರಿಸಿ ತ್ರಿಲೋಕ ವಿಜಯಿಯಾಗಿ ಯುದ್ಧವನ್ನಾರಂಭಿಸಲೆಂದೇ ನಿಶ್ಚೈಯಿಸಿದನು.

**ತ್ರೈಲೋಕ್ಯ ವಿಜಯಾರಂಭೇ ಮತಿಂ ಚಕ್ರೇ ದುರಾಸದಃ ।**
**ಪ್ರತಸ್ಥೇ ಸ್ವರ್ಗಮೇವಾಗ್ರೇ ವಿಜಿಗೀಷನ್ ವಿಶಾಂಪತೇ ॥ 4 ॥**

ತನ್ನ ಬಂಧುಬಾಂಧವರನ್ನೆಲ್ಲ ಅಪಾರಸಂಖ್ಯೆಯ ಮಿತ್ರರನ್ನು ಸೈನಿಕರಾಗಿ ಸ್ವರ್ಗಲೋಕವನ್ನು ಗೆಲ್ಲಲು ಹೊರಟನು.

**ಏತಸ್ಮಿನ್ನಂತರೇ ದೇವೌ ಕೃಷ್ಣೇಂದ್ರೌ ಚ ಮಹಾಬಲೌ ।**
**ಪ್ರೇಷಯಾಮಾಸತುಃ ಹಂಸಾನ್ ವಜ್ರನಾಭವಧಂ ಪ್ರತಿ ॥ 5 ॥**

ಇತ್ತ ಇಂದ್ರ-ಉಪೇಂದ್ರರು ವಜ್ರನಾಭನನ್ನು ಸಂಹರಿಸುವ ಉದ್ದೇಶದಿಂದ ಯಾದವರಿಗೆ ಸಂದೇಶವನ್ನು ಹಂಸಗಳ ಮೂಲಕ ಕಳುಹಿಸಿಕೊಟ್ಟರು. ಸಂದೇಶ ಕೇಳಿದ ಯಾದವರು ಒಂದು ಕೂಡಿ ಪರಸ್ಪರ ಮಾತಾಡಿಕೊಂಡರು.

ಪ್ರದ್ಯುಮ್ನನಿಂದಲೇ ವಜ್ರನಾಭನು ಸಂಹರಿಸಲ್ಪಡಬೇಕೆಂಬ ಶ್ರೀಕೃಷ್ಣರ ಸಂದೇಶದ ಸಾರವನ್ನು ಅರಿತರು.

ಪ್ರಸ್ತುತ ವಜ್ರನಾಭನ ಹಾಗೂ ಅವನ ತಮ್ಮನ ಪುತ್ರಿಯರು ನಮಗೆ ಪತ್ನಿಯರಾಗಿದ್ದಾರೆ. ಇದಲ್ಲದೆ ಇವರು ನಮ್ಮ ಶುಭವನ್ನೇ ಕೋರುತ್ತಿರುವರು.

ಈಗ ಗರ್ಭವತಿಯರೂ ಆಗಿದ್ದಾರೆ. ಪ್ರಸೂತಿಯ ಸಮಯವೂ ಸಮೀಪಿಸಿದೆ. ಇದೆಲ್ಲ ಆಲೋಚಿಸಿ ಹಂಸಗಳ ಮೂಲಕ ಪ್ರಸವಕಾಲ ಸಮೀಪಿಸುತ್ತಿರುವ ವಿಷಯವನ್ನು ಹೇಳಿ ಕಳುಹಿಸಿದರು. ಹಂಸಗಳು ಎಲ್ಲಾ ವಿಷಯಗಳನ್ನೂ ಇಂದ್ರೋಪೇಂದ್ರರಿಗೆ ತಿಳಿಸಿದವು. ಇಂದ್ರ–ಉಪೇಂದ್ರರು 'ನ ಭೇತವ್ಯಂ' ಎಂದು ಹೇಳಿದರು.

**ಉತ್ಪತ್ಸ್ಯಂತಿ ಗುಣೈಃ ಶ್ಲಾಘ್ಯಾಃ ಪುತ್ರಾ ವಃ ಕಾಮರೂಪಿಣಃ ।**
**ಗರ್ಭಸ್ಥಾಃ ಸರ್ವವೇದಾಂಶ್ಚ ಸಾಂಗಾನ್ ವೇತ್ಸ್ಯಂತಿ ಅನಿಂದಿತಾಃ ॥ 6 ॥**

## ಪ್ರಭಾವತಿಗೆ ಪುತ್ರಜನ್ಮ

ಹಂಸಗಳ ಮೂಲಕ ಹೀಗೆಂದರು –

ಈ ಸ್ತ್ರೀಯರ ಗರ್ಭಗಳಿಂದ ಕಾಮರೂಪಧರಿಸುವ ಸಾಮರ್ಥ್ಯವುಳ್ಳ ಮಕ್ಕಳು ಜನಿಸುವರು. ಉತ್ತಮ ಗುಣಗಳಿಂದ ಸರ್ವರಿಂದಲೂ ಪ್ರಶಂಸಲ್ಪಡುತ್ತಾರೆ. ಮಕ್ಕಳು ಗರ್ಭದಲ್ಲಿರುವಾಗಲೇ ಸಾಂಗೋಪಾಂಗ ವೇದಗಳನ್ನು ಅಧ್ಯಯನ ಮಾಡಿರುತ್ತಾರೆ.

**ತಥಾ ಚಾನಾಗತಂ ಸರ್ವಮಸ್ತ್ರಾಣಿ ವಿವಿಧಾನಿ ಚ ।**
**ಸದ್ಯ ಏವ ಯುವಾನಶ್ಚ ಭವಿಷ್ಯಂತಿ ಸುಪಂಡಿತಾಃ ॥ 7 ॥**

ಅಸ್ತ್ರಶಸ್ತ್ರಗಳಲ್ಲಿ ಪರಿಣತರಾಗಿರುತ್ತಾರೆ. ಭವಿಷ್ಯಜ್ಞಾನಿಗಳೂ ಹುಟ್ಟಿದ ಕೂಡಲೇ ಯುವಕರಾಗಿರುತ್ತಾರೆ. ಶ್ರೇಷ್ಠ ವಿದ್ವಾಂಸರೂ ಆಗಿರುತ್ತಾರೆ.

ಹೀಗೆ ಕೃಷ್ಣ ಇಂದ್ರರ ಸಂದೇಶವನ್ನು ಹಂಸಗಳು ತಂದು ಯಾದವರ ಮುಂದೆ ಅರುಹಿದವು.

**ಪ್ರಭಾವತೀ ತದಾ ಪುತ್ರಂ ಸುಷುವೇ ಸದೃಶಂ ಪಿತುಃ ।**
**ಸದ್ಯೋ ಯೌವನ ಸಂಪ್ರಾಪ್ತಂ ಸರ್ವಜ್ಞತ್ವಂ ಚ ಭಾರತ ॥ 8 ॥**

ಜಯಮೇಜಯನೇ! ಯದುವೀರರ ನಿರೀಕ್ಷಿಸಿದಂತೆ ಪ್ರಭಾವತಿಯು ಕೆಲವೇ ದಿನಗಳಲ್ಲಿ ಪುತ್ರರತ್ನನನ್ನೂ ಹಡೆದಳು. ಅವನಾದರೂ ಸರ್ವರೀತಿಯಿಂದಲೂ ತಂದೆಯಾದ ಪ್ರದ್ಯುಮ್ನನಂತೆಯೇ ಇದ್ದ.

ಆ ಶಿಶುವಾದರೂ ಹುಟ್ಟಿದ ಕೂಡಲೇ ಸರ್ವಜ್ಞತ್ವವನ್ನು ನೂತನ ಯೌವನವನ್ನೂ ಪಡೆದುಕೊಂಡಿತ್ತು.

## ಚಂದ್ರವತಿಗೆ ಪುತ್ರಜನ್ಮ

**ಮಾಸಮಾತ್ರೇಣ ಸುಷುವೇ ದೇವೀ ಚಂದ್ರಮತೀ ನೃಪ ।**
**ಚಂದ್ರಪ್ರಭಮಿತಿ ಖ್ಯಾತಂ ತನಯಂ ಸದೃಶಂ ಪಿತುಃ ॥ 9 ॥**

ಪ್ರಭಾವತಿಯು ಶಿಶುವಿಗೆ ಜನ್ಮ ನೀಡಿದ ತಿಂಗಳು ಕಳೆದಾಗ ಗದನ ಪತ್ನಿಯಾದ ಚಂದ್ರವತಿಯು ಚಂದ್ರಪ್ರಭನೆಂಬ ಸುಪುತ್ರನನ್ನೂ, ಸಾಂಬನ ಭಾರ್ಯೆಯು ಗುಣವತಿಯು ಗುಣವಂತನಾದ ಪುತ್ರನನ್ನೂ ಪ್ರಸವಿಸಿದಳು.

ಗದ-ಸಾಂಬರ ಪುತ್ರರಿಬ್ಬರೂ ಇಂದ್ರೋಪೇಂದ್ರರ ಅನುಗ್ರಹದಿಂದಾಗಿ ಕೂಡಲೇ ಯುವಕರೂ ಹಾಗೂ ಸರ್ವಜ್ಞರೂ ಆದರೂ-

**ಸದೃಶ್ಚ ಯೌವನಂ ಪ್ರಾಪ್ತಂ ಸರ್ವಜ್ಞತ್ವಂ ಚ ಭಾರತ ।**
**ಯುವಾನಾವಥ ಸದ್ಯಸ್ತೌ ಸರ್ವಶಾಸ್ತ್ರಾರ್ಥ ಕೋವಿದೌ ॥ 10 ॥**

ಹೀಗೆಯೇ ಯದುಕುಮಾರರು ವೃದ್ಧಿ ಹೊಂದುತ್ತಿರಲು ಒಂದು ದಿನ ಉಪ್ಪರಿಗೆಯಲ್ಲಿ ಓಡಾಡುತ್ತಿದ್ದ ಪುತ್ರರೀರ್ವರನ್ನೂ ದಾನವರು ನೋಡಿದರು. ಹೀಗೆ ನೋಡಿದ್ದೂ ಸಹ ಇಂದ್ರ-ಉಪೇಂದ್ರರ ಇಚ್ಛೆಗೆ ಅನುಗುಣವಾಗಿತ್ತು. *[ಇಂದ್ರೋಪೇಂದ್ರೇಚ್ಛಯಾ ನಾನ್ಯಥಾ].*

ಸಂಭ್ರಾಂತರಾದ ಪುರರಕ್ಷಕ ದಾನವರು ಈ ವಿಷಯವನ್ನು ವಜ್ರನಾಭನಿಗೆ ಹೇಳಿದರು. ಈ ವಾರ್ತೆ ಕೇಳಿದ ವಜ್ರನಾಭನು ಈ ಯುವಕರು ನನ್ನ ಮನೆಗೆ ಕಳಂಕಪ್ರಾಯರಾಗಿದ್ದಾರೆ. ಇವರನ್ನು ಕೊಲ್ಲುವ ಸಲುವಾಗಿ ಈಗಲೇ ಬಂಧಿಸಿರಿ.

**ವಧಾಯ ಸರ್ವೇ ಗೃಹ್ಯಂತಾಂ ಮಮೈತೇ ಗೃಹಧರ್ಷಕಾಃ ।**

ಹೀಗೆ ವಜ್ರನಾಭನು ಆದೇಶಿಸಿದ ಕೂಡಲೇ ದೈತ್ಯರು ಹತ್ತು ದಿಕ್ಕುಗಳಿಂದಲೂ ಆಗಮಿಸಿ ವಜ್ರಪುರಿಯನ್ನು ಆಕ್ರಮಿಸಿದರು.

ಎಲ್ಲಾ ಕಡೆಯಿಂದಲೂ 'ಹಿಡಿಯಿರಿ ಕೊಲ್ಲಿರಿ' ಎಂಬ ಘೋಷಣೆಯೊಂದಿಗೆ ಯುದ್ಧ ಸನ್ನದ್ಧರಾದರು. ಪ್ರಭಾವತೀ, ಚಂದ್ರವತೀ ಮತ್ತು ಗುಣವತಿಯರು ವಜ್ರನಾಭನ ಆದೇಶದಿಂದ ಭಯಪಟ್ಟು ಜೋರಾಗಿ ಅಳಲಾರಂಭಿಸಿದರು.

**ತಚ್ಛ್ರುತ್ವಾ ವ್ಯಥಿತಾಸ್ತೇಷಾಂ ಮಾತರಃ ಪುತ್ರವತ್ಸಲಾಃ ॥ 11 ॥**

ಹೀಗೆ ಅಳುತ್ತಿದ್ದ ಪ್ರಭಾವತಿಯರನ್ನು ನೋಡಿ ಪ್ರದ್ಯುಮ್ನ ನಗುತ್ತಾ ಹೀಗೆಂದನು.

**ಮಾ ಭೈಷ್ಟ ಜೀವಮಾನೇಷು ಸ್ಥಿತೇಷ್ವಸ್ಮಾಸು ಸರ್ವಥಾ ।**
**ಕಿಂ ನೋ ದೈತ್ಯಾಃ ಕರಿಷ್ಯಂತಿ ಸರ್ವಥಾ ಭದ್ರಮಸ್ತು ವಃ ॥ 12 ॥**

ದಾನವ ಕನ್ಯೆಯರೇ! ಹೀಗೇಕೆ ಭಯಪಡುತ್ತಿರುವಿರಿ! ನಾವು ಜೀವಂತರಾಗಿ ನಿಮ್ಮ ಬಳಿ ಇರುವಾಗ ಯಾವ ದೈತ್ಯರು ತಾನೆ ಏನು ಮಾಡಬಲ್ಲರು. ನಿಮಗೆ ಸರ್ವಥಾ ಮಂಗಳವೆ ಆಗುವುದು.

ಹೀಗೆ ಹೇಳಿದರೂ ಪ್ರಭಾವತಿಯು ದುಃಖದಿಂದ ನಿಂತಿದ್ದಳು. ಪ್ರದ್ಯುಮ್ನನು ದೇವಿ ನಿನ್ನ ತಂದೆ ಹಾಗೂ ನಿನ್ನ ಪಿತೃವ್ಯ ಇಬ್ಬರೂ ತನ್ನ ಭುಜಗಳಲ್ಲಿ ಗದಾದಂಡ ಹಿಡಿದು ಯುದ್ಧ ಸನ್ನದ್ಧರಾಗಿದ್ದಾರೆ. ಇವರಿಗೆ ಸಹಾಯಕರಾಗಿ ನಿನ್ನ ಸಹೋದರರೂ ಬಂಧುಬಾಂಧವರೂ ಕೈಜೋಡಿಸಿದ್ದಾರೆ. ನಿನಗೆ ಬಂಧುಗಳೆಂದ ಮೇಲೆ ನನಗೆ ಅವರೆಲ್ಲರೂ ಪೂಜ್ಯರೆ. ಆದರೂ ಈ ಸಮಯವು ಅತಿ ಭಯಂಕರವಾಗಿರುವುದು.

**ಮರಣಂ ಸಹಮಾನಾನಾಂ ಯುದ್ಧ್ಯತಾಂ ವಿಜಯೋ ಧ್ರುವಮ್ ।**

ಆದರೂ ಮರಣವನ್ನು ಲೆಕ್ಕಿಸದೆ ಹೋರಾಡುವವರಿಗೆ ಜಯವು ಖಂಡಿತಾ ಸಿಗುತ್ತದೆ. ಪ್ರಭಾವತಿಯೇ! ಈಗ ವಜ್ರನಾಭನು ನಮ್ಮನ್ನೂ ಸಂಹರಿಸುವ ಇಚ್ಛೆಯಿಂದ ಯುದ್ಧ ಆರಂಭಿಸಿಯೆ ತೀರುತ್ತಾನೆ. ಇಂತಹ ಸಂದರ್ಭದಲ್ಲಿ ನಾವೇನು ಮಾಡಬೇಕೆಂದು ನೀನೇ ಹೇಳಬೇಕು ಎಂದಾಗ,

ಪ್ರಭಾವತಿಯು ಅತ್ತ ತಂದೆ, ಇತ್ತ ಪತಿ ಎರಡು ಕಣ್ಣುಗಳಲ್ಲಿ ಯಾವುದು ಬೇಡ? ಇಂತಹ ಸ್ಥಿತಿಯಲ್ಲಿ ಅಬಲೆ ಪ್ರಭಾವತಿಯು ಮಂಡಿಗಳನ್ನೂರಿ ಕೈಗಳನ್ನು ಜೋಡಿಸಿ ಅಳುತ್ತಾ ಹೀಗೆಂದಳು.

**ಗ್ರಹಾಣ ಶಸ್ತ್ರ ಮಾತ್ಮಾನಂ ರಕ್ಷ ಶತ್ರು ನಿಬರ್ಹಣ ।**
**ಜೀವನ್ ಪುತ್ರಾಂಶ್ಚ ದಾರಾಂಶ್ಚ ದ್ರಷ್ಟಾಸಿ ಯದುನಂದನ ॥ 13 ॥**

**ಆರ್ಯಾಂ ನೃವರ ವೈದರ್ಭೀಮನಿರುದ್ಧಂ ಚ ಮಾನದ ।**
**ಸ್ಮೃತ್ವೈತನ್ಮೋಕ್ಷಯಾಽತ್ಮಾನಂ ವ್ಯಸನಾದ್ ಅರಿಮರ್ದನ ॥ 14 ॥**

ಯದುಕುಮಾರ ಈ ಶಸ್ತ್ರವನ್ನು ಹಿಡಿ. ನಿನ್ನ ರಕ್ಷಣೆ ನೀನು ಮಾಡಿಕೋ ನೀನು ಜೀವಿಸಿ ಬಂದರೆ ನಿನ್ನ ಪತ್ನಿಪುತ್ರರನ್ನು ನೋಡುವೆ. ಹಾಗೆ ರುಕ್ಮಿಣಿಯನ್ನೂ ನಿನ್ನ ಪುತ್ರ ಅನಿರುದ್ಧನನ್ನು ನೋಡುವೆ. ನಮ್ಮೆಲ್ಲರ ಮುಖ ನೋಡಿ ನಿನ್ನ ರಕ್ಷಣೆಗಾಗಿ ಹೋರಾಡು. ನೀನು ಯುದ್ಧದಲ್ಲಿ

ವಿಜಯಿಯಾಗುವುದರಲ್ಲಿ ಸಂಶಯವಿಲ್ಲ. ದುರ್ವಾಸಮುನಿಗಳು ನನಗೆ ಅಂತಹ ವರನೇ ಸಿಗುವನೆಂದು ವರ ನೀಡಿರುವರು.

**ವೈಧವ್ಯರಹಿತಾ ಹೃಷ್ಟಾ ಜೀವಪುತ್ರಾ ಭವಿಷ್ಯಸಿ ।**

ವೈಧವ್ಯವಿಲ್ಲದೆ ಜೀವಂತ ಪುತ್ರರಿಗೆ ತಾಯಿಯೆನಿಸುವೆ ಎಂದಿದ್ದಾರೆ.

**ದುರ್ವಾಸಸಾ ವರೋ ದತ್ತೋ ಮುನಿನಾ ಮಮ ಧೀಮತಾ ॥ 15 ॥**

ಈ ವರವೆ ನನ್ನ ಮನಸ್ಸಿಗೆ ವಿಶ್ವಾಸ ತಂದಿದೆ. ದುರ್ವಾಸರಂತಹ ಹರಿಭಕ್ತರ ಮಾತು ಎಂದಿಗೂ ಸುಳ್ಳಾಗುವುದಿಲ್ಲ.

ಹೀಗೆ ಹೇಳುತ್ತಾ ಪ್ರಭಾವತಿಯು ಖಡ್ಗವೊಂದನ್ನು ಅಭಿಮಂತ್ರಿಸಿ ಯುದ್ಧದಲ್ಲಿ ಶತ್ರುಗಳನ್ನು ನಿಗ್ರಹಿಸು ಎಂದು ಪ್ರದ್ಯುಮ್ನನಿಗೆ ನೀಡಿದಳು.

**ಸ ತಂ ಜಗ್ರಾಹ ಧರ್ಮಾತ್ಮಾ ಪ್ರಹೃಷ್ಟೇನಾಂತರಾತ್ಮನಾ ।**
**ಪ್ರಣಮ್ಯ ಶಿರಸಾ ದತ್ತಂ ಪ್ರಿಯಯಾ ಭಕ್ತಿಯುಕ್ತಯಾ ॥ 16 ॥**

ತನ್ನ ಪ್ರೇಯಸಿಯು ಭಕ್ತಿಯುಕ್ತಳಾಗಿ ನೀಡಿದ ಆ ಕತ್ತಿಯನ್ನು ಪ್ರದ್ಯುಮ್ನನು ಸಂತೋಷದಿಂದ ಸ್ವೀಕರಿಸಿ, ಖಡ್ಗಕ್ಕೆ ತಲೆಬಾಗಿ ನಮಸ್ಕರಿಸಿದನು.

ಚಂದ್ರವತಿಯೂ ಸಹ ಗದನಿಗೆ ಕತ್ತಿಯೊಂದನ್ನು ನೀಡಿದಳು. ಗುಣವತಿಯೂ ಕೂಡ ಸಾಂಬನಿಗೆ ವಿಜಯೀಭವ ಎನ್ನುತ್ತಾ ಖಡ್ಗವನ್ನು ನೀಡಿದಳು.

ಪ್ರದ್ಯುಮ್ನ ತನ್ನ ಬಳ ವಿನೀತವಾಗಿ ನಿಂತಿದ್ದ ತನ್ನ ಸಾರಥಿಯಾದ ಹಂಸಕೇತುವಿಗೆ - ಸಾಂಬ ಹಾಗೂ ಇತರ ಯಾದವರೊಂದಿಗೆ ಕೂಡಿಕೊಂಡು ದಾನವರೊಂದಿಗೆ ಯುದ್ಧ ಮಾಡುವಂತೆ ಆದೇಶವಿತ್ತನು.

ತನಗೆ ಸಾರಥಿ ಸದ್ಯ ಬೇಕಿಲ್ಲವೆಂದು ಹೇಳುತ್ತಾ ಹಂಸಕೇತುವಿಗೆ ಆಕಾಶ ಮತ್ತು ಹತ್ತು ದಿಕ್ಕುಗಳಲ್ಲಿಯೂ ಓಡಾಡುವ ಸಾಮರ್ಥ್ಯವುಳ್ಳ ರಥವನ್ನೂ ಸಾರಥಿಯನ್ನೂ ನಾನೇ ಮಾಯೆಯಿಂದ ಸೃಷ್ಟಿಸಿಕೊಳ್ಳುತ್ತೇನೆ.

**ಸಹಸ್ರಶಿರಸಂ ನಾಗಂ ಕೃತ್ವಾ ಸಾರಥಿಮಾತ್ಮವಾನ್ ।**
**ಅನಂತಭೋಗಂ ಕೌರವ್ಯ ಸರ್ವನಾಗೋತ್ತಮೋತ್ತಮಂ ॥ 17 ॥**

ಹೀಗೆ ಹೇಳುತ್ತಾ ಭೂಮಿಯಲ್ಲಿರುವ ಸಮಸ್ತ ಸರ್ಪಗಳಿಗೂ ಉತ್ತಮವಾದ ಸಾವಿರ ಫಣಗಳಿಂದ ಶೋಭಿಸುವ ನಾಗನನ್ನೇ ರಥಕ್ಕೆ ಸಾರಥಿಯಾಗಿರುವ ದಿವ್ಯರಥವೊಂದನ್ನು ಕಲ್ಪಿಸಿಕೊಂಡನು.

ಪ್ರದ್ಯುಮ್ನನು ದೈತ್ಯರೊಂದಿಗೆ ಯುದ್ಧ ಮಾಡುತ್ತಾ, ಒಣಹುಲ್ಲಿನ ಮೆದೆಯಲ್ಲಿ ಬೆಂಕಿ ಸಂಚರಿಸುವಂತೆ ಶತ್ರು ಸೈನ್ಯದಲ್ಲಿ ಸಂಚರಿಸಿದನು. ಪ್ರಭಾವತಿಗೆ ಇದು ಆನಂದವುಂಟು ಮಾಡಿತ್ತು.

**ಭೇದನೈಃ ಗಾಧನೈಶ್ಚೈವ ತತರ್ದ ದಿತಿ ಸಂಭವಾನ್ ।**

ವಿಷಸರ್ಪಗಳಿಗೆ ಸದೃಶ ಭೇದನ– ಗಾಧನಗಳೆಂಬ ಅರ್ಧಚಂದ್ರಾಕಾರದ ಬಾಣಗಳಿಂದ ದಾನವರನ್ನು ನಿಗ್ರಹಿಸಿದ.

ದೈತ್ಯರೂ ಕೂಡ ಪ್ರದ್ಯುಮ್ನನನ್ನು ಶಸ್ತ್ರಗಳಿಂದ ಪ್ರಹರಿಸಿದರು. ಪ್ರದ್ಯುಮ್ನನು ಕೇಯೂರಾಂಗದಗಳಿಂದ ಶೋಭಿತಗಳಾದ ತೋಳುಗಳನ್ನು ಕತ್ತರಿಸಿ ಹಾಕಿದನು. ಕರ್ಣಕುಂಡಲಶೋಭಿತ ದಾನವರ ಮುಂಡಗಳು ಧರೆ–ಗುರುಳಿದವು. ಧರೆಯಲ್ಲಿ ಎಲ್ಲಿ ನೋಡಿದರಲ್ಲಿ ಶತ್ರುಗಳ ತಲೆಗಳು

ದೇವೇಂದ್ರನೂ ದೇವತೆಗಳೊಂದಿಗೆ ನಿಂತು ಸಮರವನ್ನು ನೋಡಿ ಆನಂದಿಸುತ್ತಿದ್ದನು.

ದೈತ್ಯದಾನವರೆಲ್ಲರೂ ಸಾಂಬ, ಗದ, ಪ್ರದ್ಯುಮ್ನರಿಂದ ಹೊಡೆಯಲ್ಪಟ್ಟು ಮಹಾಸಾಗರದಲ್ಲಿ ಜಲಜಂತುಗಳು ಮುಳುಗಿ ಹೋಗುವಂತೆ ನಿಧನ ಹೊಂದಿದರು.

ದಾನವರೆಲ್ಲರೂ ಒಂದುಗೂಡಿ ಗದ–ಸಾಂಬನ ಮೇಲೆರಗಿದರು. ಇದನ್ನು ಕಂಡ ಸಹಸ್ರಾಕ್ಷನು – ತನ್ನ ಸಾರಥಿ ಮಾತಲಿಯ ಮಗನಾದ 'ಸುವರ್ಚಸ'–ನನ್ನೂ ಸಾರಥಿಯನ್ನಾಗಿ ಮಾಡಿ ತನ್ನ ರಥವನ್ನೆ ಗದನಿಗೆ ಕಳುಹಿಸಿದನು.

**ಗದಾಯ ಪ್ರೇಷಯಾಮಾಸ ಸ್ವಂ ರಥಂ ಹರಿವಾಹನಃ ।**
**ದಿದೇಶ ಮಾತಲಿಸುತಂ ಯಂತಾರಂ ಚ ಸುವರ್ಚಸಮ್ ॥ 18 ॥**

ಇಂದ್ರನು ಬ್ರಹ್ಮದೇವರ ಅನುಮತಿ ಪಡೆದು ಪ್ರದ್ಯುಮ್ನಾದಿಗಳ ಸಹಾಯಕ್ಕಾಗಿ ಜಯಂತ–ಪ್ರವರ–ಐರಾವತ –ಸುವರ್ಚಸರನ್ನು ಕಳುಹಿಸಿದ್ದನು.

ಈ ಯುದ್ಧ ಸಮಯದಲ್ಲಿ ಸಕಲ ಪ್ರಾಣಿಗಳೂ ಹೀಗೆ ಮಾತನಾಡಿ–ಕೊಳ್ಳುತ್ತಿದ್ದರು.

**ಕ್ಷೀಣಮಸ್ಯ ತಪೋ ವೀರ್ಯಂ ವಧ್ಯೋ ಯದೂನಾಮೇಷ ದುರ್ಮತಿಃ ।**

ಈ ವಜ್ರನಾಭನ ತಪಸ್ಸು ಕ್ಷೀಣಿಸಿದೆ. ಪುಣ್ಯಹೀನನಾದ ಇವನು ಯಾದವರಿಂದ ಖಂಡಿತ ಕೊಲ್ಲಲ್ಪಡುತ್ತಾನೆ ಎಂದು.

ಪ್ರದ್ಯುಮ್ನ ಹಾಗೂ ಜಯಂತರು ಬಾಣಗಳನ್ನು ದೈತ್ಯರ ಸಮೂಹದ ಕಡೆಗೆ ಕಳುಹಿಸುತ್ತಾ ಶತ್ರು ನಾಶ ಮಾಡುತ್ತಿದ್ದರು. ಆಗ ಯುದ್ಧದಲ್ಲಿ ಸೋಲನ್ನೇ ಅರಿಯದ ಪ್ರದ್ಯುಮ್ನನು ತನ್ನ ಚಿಕ್ಕಪ್ಪನಿಗೆ ಹೀಗೆಂದನು.

**ಉಪೇಂದ್ರಾನುಜ ಶಕ್ರೇಣ ರಥೋಽಯಂ ಪ್ರೇಷಿತಸ್ತವ ।**
**ಹರಿಯುಙ್ ಮಾತಲಿ ಸುತೋ ಯಂತಾ ಚಾಯಂ ಮಹಾಬಲಃ ।**
**ಪ್ರವರಾಧಿಷ್ಠಿತಶ್ಚಾಯಂ ಸಾಂಬಸ್ಯೈರಾವಣೋ ಗಜಃ ॥ 19 ॥**

ಶೌರಿಯ ಅನುಜನೇ! ಚಿಕ್ಕಪ್ಪ ನಿನಗಾಗಿ ಈ ಕುದುರೆಗಳಿಂದ ಹೂಡಿದ ರಥವನ್ನು ಶಕ್ರನು ಕಳುಹಿಸಿರುವನು. ಮಾತಲಿಯ ಮಗ ಸುವರ್ಚಸನೇ ಸಾರಥಿಯಾಗಿರುವನು. ಪ್ರವರನು ಕುಳಿತಿರುವ ಐರಾವತವೆಂಬ ಆನೆಯನ್ನು ಸಾಂಬನಿಗಾಗಿ ಕಳುಹಿಸಿರುವನು.

ಪಿತೃವ್ಯನೇ! ಇಂದು ದ್ವಾರಕೆಯಲ್ಲಿ ರುದ್ರದೇವನ ಪೂಜೆ ನಡೆಯುತಿದ್ದು ಅದು ಸಮಾಪ್ತವಾದ ಕೂಡಲೇ ಶ್ರೀಕೃಷ್ಣನು ಇಲ್ಲಿಗೆ ಬರುವನು. ಆ ತಂದೆಯ ಆದೇಶ ಪಡೆದುಕೊಂಡು ನಾನು ಮೂಲೋಕ ಜಯಾಕಾಂಕ್ಷಿಯಾದ ಪಾಪಿ ವಜ್ರನಾಭನನ್ನು ಸಂಹಾರ ಮಾಡೋಣ. ಈಗ ಮಾತ್ರ ನಾವೆಲ್ಲರೂ ಅಪ್ರಮತ್ತರಾಗಿರಬೇಕು ಎಂದು.

**ಕಲತ್ರರಕ್ಷಣಂ ಕಾರ್ಯಂ ಸರ್ವೋಪಾಯೈಃ ನರೈಃ ಬುಧೈಃ ।**
**ಕಲತ್ರ ಧರ್ಷಣಂ ಲೋಕೇ ಮರಣಾದತಿರಿಚ್ಯತೇ ॥ 20 ॥**

ಬುದ್ಧಿವಂತನು ಸರ್ವೋಪಾಯಗಳಿಂದಲೂ ತನ್ನ ಪತ್ನಿಯನ್ನು ರಕ್ಷಿಸಬೇಕು. ಪತ್ನಿಯ ಧರ್ಷಣವಾದರೂ ಗಂಡನಿಗೆ ಮರಣಕ್ಕಿಂತಲೂ ಅಧಿಕ ಯಾತನೆ ನೀಡುತ್ತದೆ.

## ಪ್ರದ್ಯುಮ್ನನ ಮಾಯಾಬಲ

ಹೀಗೆ ಪ್ರದ್ಯುಮ್ನನು ಸಾಂಬ -ಗದರಿಗೆ ಹೇಳಿ ಕೂಡಲೇ ತನ್ನ ಮಾಯಾಬಲದಿಂದ ಕೋಟಿ ಕೋಟಿ ಸಂಖ್ಯೆಯಲ್ಲಿ ಪ್ರದ್ಯುಮ್ನರನ್ನು ಸೃಷ್ಟಿಸಿದನು. ದೈತ್ಯರು ಸೃಷ್ಟಿಸಿದ್ದ ಮಹಾಂಧಕಾರವನ್ನು ನಾಶಗೊಳಿಸಿದನು. ಪ್ರದ್ಯುಮ್ನನ ಪರಾಕ್ರಮ ನೋಡಿದ ಇಂದ್ರದೇವ ಹಿರಿಹಿರಿ ಹಿಗ್ಗಿದ.

ಮಾಯೆಯಿಂದಾಗಿ ಪ್ರತಿಯೊಬ್ಬ ದಾನವನ ಮುಂದೆಯೂ ಒಬ್ಬೊಬ್ಬ ಪ್ರದ್ಯುಮ್ನ ಯುದ್ಧಕ್ಕೆ ಅಣಿಯಾಗಿದ್ದ.

### ಪ್ರದ್ಯುಮ್ನನ ಸಂಧ್ಯೋಪಾಸನೆ

**ತಮಶ್ಚ ನಾಶಯಾಮಾಸ ದೈತ್ಯ ಸೃಷ್ಟಂ ದುರಾಸದಮ್ ।**

ಪ್ರತಿಯೊಬ್ಬ ದೈತ್ಯನ ಮುಂದೆ ನಿಂತಿರುವ ಪ್ರದ್ಯುಮ್ನನು ಪ್ರತಿಯೊಬ್ಬರ ಬಿಂಬನಾದ ಕ್ಷೇತ್ರಜ್ಞನಾದ ಹರಿಯೆಂದೆ ಜನರು ಭಾವಿಸಿದರು.

**ಏವಂ ವ್ಯತೀತಾ ರಜನೀ ರೌಕ್ಮಿಣೇಯಸ್ಯ ಯುಧ್ಯತಃ ।**
**ಅಸುರಾಣಾಂ ತ್ರಿಭಾಗಶ್ಚ ನಿಹತಃ ಚಾತಿತೇಜಸಾ ॥ 21 ॥**

ಹೀಗೆ ಯುದ್ಧ ಮಾಡುತ್ತಿರುವಾಗಲೇ ರಾತ್ರಿಯು ಕಳೆದುಹೋಗಿತ್ತು. ಅಂದು ರಾತ್ರಿಯಲ್ಲಿ ಪ್ರದ್ಯುಮ್ನನು ವಜ್ರನಾಭನ ಸೈನ್ಯದಲ್ಲಿ ಮೂರನೇ ಒಂದು ಭಾಗ ನಾಶ ಮಾಡಿದ್ದನು.

**ಸಂಧ್ಯೋಪಾಸಾ ಜಯಂತೇನ ತಾವದ್ ವಿಷ್ಣುಪದೀ ಜಲೇ ।**
**ತಾವದಾಕಾಶ ಗಂಗಾಯಾಂ ಭೈಮಃ ಸಂಧ್ಯಾಮುಪಾಸ್ತವಾನ್ ॥ 22 ॥**

ಪ್ರದ್ಯುಮ್ನನು ಶತ್ರು ನಿಗ್ರಹದಲ್ಲಿ ತೊಡಗಿರುವಾಗ ಜಯಂತನು ಗಂಗಾನದಿಯಲ್ಲಿ ಸಂಧ್ಯಾವಂದನೆಯನ್ನು ಮಾಡುತ್ತಿದ್ದನು.

ಜಯಂತನು ಎಷ್ಟು ಕಾಲ ಯುದ್ಧ ಮಾಡುತ್ತಿದ್ದನೊ ಅಷ್ಟುಕಾಲ ಪ್ರದ್ಯುಮ್ನನು ಆಕಾಶಗಂಗೆಯ ಜಲದಲ್ಲಿ ಸಂಧ್ಯೋಪಾಸನೆ ಮಾಡುತ್ತಿದ್ದ.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ಇಲ್ಲಿಗೆ ಯಾದವ ದಾನವ ಯುದ್ಧವೆಂಬಲ್ಲಿ
ತೊಂಬತ್ತಾರನೆಯ ಅಧ್ಯಾಯ ಸಮಾಪ್ತಿ

# ಅಥ ಸಪ್ತನವತಿತಮೋಽಧ್ಯಾಯಃ

## ವಜ್ರನಾಭನ ವಧೆ

*ವೈಶಂಪಾಯನ ಉವಾಚ –*

**ಜಗತಶ್ಚಕ್ಷುಷಿ ತತೋ ಮುಹೂರ್ತಾಭ್ಯುದಿತೇ ರವೌ ।**
**ಪ್ರಾದುರಾಸೀದ್ ಹರಿರ್ದೇವಃ ತಾರ್ಕ್ಷ್ಯೇಣೋರಗಶತ್ರುಣಾ ॥ 1 ॥**

ಜನಮೇಜಯನೇ! ಜಗತ್ತಿಗೆ ನೇತ್ರನಂತಿರುವ ಸೂರ್ಯನು ಉದಯಿಸಿದನು. ಉದಯಾನಂತರ ಒಂದು ಮುಹೂರ್ತ ಕಳೆಯುವುದರೊಳಗಾಗಿ ಗರುಡವಾಹನನಾಗಿ ಶ್ರೀಹರಿಯು ವಜ್ರಪುರಕ್ಕೆ ಬಂದನು.

ಗರುಡನು ಇಂದ್ರನ ಸಮೀಪವೇ ನಿಂತನು. ಶ್ರೀಕೃಷ್ಣನು ಇಂದ್ರನ ಬಳಿ ಸಾರಿ ಯಥಾ ಯೋಗ್ಯ ಆದರಿಸಿದ ನಂತರ ಪಾಂಚಜನ್ಯ ಶಂಖವನ್ನು ಊದಿದನು. ಈ ಶಬ್ಧ ದಾನವರಿಗೆ ಭಯವುಂಟು ಮಾಡುತ್ತಿತ್ತು.

ಪ್ರದ್ಯುಮ್ನನು ತಂದೆಯ ಶಂಖನಾದ ಕೇಳಿ ಅವನ ಸಮೀಪ ಬಂದನು. ಪದ್ಮನಾಭನು ಪ್ರದ್ಯುಮ್ನನನ್ನು ನೋಡುತ್ತಲೇ ವಜ್ರನಾಭನನ್ನು ಕೊಂದು ಹಾಕಲು ಆದೇಶಿಸಿದನು.

**ವಜ್ರನಾಭಂ ಜಹೀತ್ಯುಕ್ತಃ ಕೇಶವೇನ ತ್ವರೇತಿ ಚ ॥ 2 ॥**

ಗರುಡನನ್ನೇರಿ ಹೋಗು ಎಂದು ಆದೇಶಿಸಿದ. ವೀರನಾದ ಪ್ರದ್ಯುಮ್ನನು ಹಾಗೆಯೇ ಆಗಲೆಂದು ಗರುಡನ ಮೇಲೇರಿ ವಜ್ರನಾಭನ ಬಳಿ ಬಂದನು.

ಪ್ರದ್ಯುಮ್ನನು ಸಕಲ ಶಸ್ತ್ರಾಸ್ತ್ರವೇತ್ತನೂ ಪರಾಕ್ರಮಿಯೂ ಆಗಿದ್ದನು. ಅವನಾದರೂ ಗರುಡನ ಮೇಲೆ ದೃಢವಾಗಿ ಕುಳಿತೇ ವಜ್ರನಾಭನನ್ನು ಆಯುಧಗಳಿಂದ ಹೊಡೆದನು. ತನ್ನ ಗದೆಯನ್ನು ತಿರುಗಿಸಿ ವಜ್ರನಾಭನ ಎದೆಗೆ ವೇಗವಾಗಿ ಹೊಡೆದನು. ಆ ಪೆಟ್ಟಿಗೆ ಮೂರ್ಛೆ ಹೋದ ವಜ್ರನಾಭನನ್ನು ನೋಡಿ ಸ್ವಲ್ಪಕಾಲ ವಿಶ್ರಾಂತಿ ಪಡೆದು ನಂತರ ಯುದ್ಧಕ್ಕೆ ಬರುವಂತೆ ಹೇಳಿದನು.

**ಆಶ್ವಸೇತ್ಯಥ ತಂ ಕಾರ್ಷ್ಣಿರುವಾಚ ರಣದುರ್ಜಯಃ ॥ 3 ॥**

**ತಯಾ ಲಲಾಟೇಽಭಿಹಿತಃ ಪ್ರದ್ಯುಮ್ನೋ ಗದಯಾ ನೃಪ ।**
**ಉದ್ವಮನ್ ರುಧಿರಂ ಭೂರಿ ಮುಮೋಹ ಯದುನಂದನಃ ॥ 4 ॥**

ಮೂರ್ಛೆಯಿಂದ ಎದ್ದ ವಜ್ರನಾಭನು ಭಲೇ ಯಾದವ, ನೀನು ನನ್ನ ಶತ್ರುವಾಗಿದ್ದರೂ ನಿನ್ನ ಶೌರ್ಯದಿಂದ ಶ್ಲಾಘನೀಯನಾಗಿರುವೆ ನಿನ್ನ ಗದಾಪ್ರಹಾರಕ್ಕೆ ನಾನು ಕೊಡುವ ಪ್ರಹಾರಕ್ಕೆ ಸಿದ್ಧನಾಗಿರು.

ಹೀಗೆ ಹೇಳುತ್ತಾ ಘನಘೋರ ಸಿಂಹನಾದ ಮಾಡುತ್ತಾ ಮುಳ್ಳುಗದೆಯಿಂದ ಪ್ರದ್ಯುಮ್ನನನ್ನು ಹೊಡೆದನು. ಗದೆಯಿಂದ ಹಣೆಯಲ್ಲಿ ಪೆಟ್ಟು ತಿಂದ ಪ್ರದ್ಯುಮ್ನನು ರಕ್ತಕಾರುತ್ತಾ ಮೂರ್ಛೆ ಹೋದನು.

**ತಂ ದೃಷ್ಟ್ವಾ ಭಗವಾನ್ ಕೃಷ್ಣಃ ಪಾಂಚಜನ್ಯಂ ಜಲೋದ್ಭವಮ್ ।**
**ದಧ್ಮೌ ಆಶ್ವಾಸನಕರಂ ಪುತ್ರಸ್ಯ ರಿಪುನಾಶನಃ ॥ 5 ॥**

ಪುತ್ರನು ಹೀಗೆ ಮೂರ್ಛಿತನಾಗಿದ್ದನ್ನು ನೋಡಿದ ಶ್ರೀಕೃಷ್ಣನು ಅವನನ್ನು ಉತ್ತೇಜಿಸಲು ತನ್ನ ಪಾಂಚಜನ್ಯವನ್ನೂದಿದನು.

ಪಾಂಚಜನ್ಯದ ಧ್ವನಿಯು ಕಿವಿಗೆ ಬೀಳುತ್ತಲೇ ಪ್ರದ್ಯುಮ್ನನು ಮೂರ್ಛೆ ತಿಳಿದು ಎದ್ದು ಕೂತಾಗ ಸಕಲ ಜನರು ಹಾಗೂ ಇಂದ್ರೋಪೇಂದ್ರರೂ ಸಂತುಷ್ಟರಾದರು.

**ತಸ್ಯ ಚಕ್ರಂ ಕರೇ ಯಾತಂ ಕೃಷ್ಣಚ್ಛಬ್ಧೇನ ಭಾರತ ।**
**ಕ್ಷುರನೇಮಿ ಸಹಸ್ರಾರಂ ದೈತ್ಯ ಸಂಘ ಕುಲಾಂತಕಮ್ ॥ 6 ॥**

**ವಜ್ರನಾಭಸ್ಯ ತತ್ಕಾಯಾದ್ ಉಚ್ಚಕರ್ತ ಶಿರಸ್ತ್ರದಾ ।**

ಇದೇ ಸಮಯದಲ್ಲಿ ಶ್ರೀಕೃಷ್ಣನಿಚ್ಛೆಯಂತೆ ಸಾವಿರ ಅಲಗುಗಳಿಂದ ಕೂಡಿದ ಸುದರ್ಶನ ಚಕ್ರ ಪ್ರದ್ಯುಮ್ನನ ಕೈ ಸೇರಿತು.

ಚಕ್ರ ತನ್ನ ಹಸ್ತಗತವಾದಂತೆಯೇ ಪ್ರದ್ಯುಮ್ನನು ತಂದೆ ಹಾಗೂ ಇಂದ್ರದೇವನಿಗೂ ಅಭಿವಂದಿಸಿ ವಜ್ರನಾಭ ಸಂಹಾರಕ್ಕಾಗಿ ಪ್ರಯೋಗಿಸಿದನು. ಹೀಗೆ ಪ್ರದ್ಯುಮ್ನನಿಂದ ಪ್ರಯುಕ್ತ ಚಕ್ರವು ದಾನವರೆಲ್ಲ ನೋಡುತ್ತಿರುವಂತೆಯೇ ವಜ್ರನಾಭನ ಕುತ್ತಿಗೆಯನ್ನು ಕತ್ತರಿಸಿ ಹಾಕಿತು.

**ಗದಃ ಸುನಾಭಮವಧೀತ್ ಯತಮಾನಂ ರಣಾಜಿರೇ ।**
**ಹರ್ಮ್ಯಪೃಷ್ಠೇ ಜಿಘಾಂಸಂತಂ ರಣದೃಪ್ತಂ ಭಯಾನಕಮ್ ॥ 7 ॥**

ಉಪ್ಪರಿಗೆಯ ಮೇಲಿದ್ದ ಗದನು ತನ್ನನ್ನು ಕೊಲ್ಲಲು ಹಾತೊರೆಯುತ್ತಿದ್ದ ಸುನಾಭನನ್ನು ಕೊಂದು ಹಾಕಿದನು. ಸಾಂಬನೂ ಸಹ ದೈತ್ಯಸೈನಿಕರನ್ನು ಬಾಣಗಳಿಂದ ಹೊಡೆದು ಕೊಂದನು.

**ನಿಕುಂಭೋಽಪಿ ಹತೇ ವೀರೆ ವಜ್ರನಾಭೇ ಮಹಾಸುರೇ ।**
**ಜಗಾಮ ಷಟ್ಪುರಂ ವೀರೋ ನಾರಾಯಣ ಭಯಾರ್ದಿತಃ ॥ 8 ॥**

ದೇವಶತ್ರುವಾದ ವಜ್ರನಾಭನು ಹತನಾದಂತೆಯೇ, ನಿಕುಂಭನು ಶ್ರೀಕೃಷ್ಣನಿಂದ ಭಯಪಟ್ಟು ತನ್ನ ಷಟ್ಪುರ ಪಟ್ಟಣಕ್ಕೆ ಓಡಿ ಹೋದನು.

ವಜ್ರನಾಭನು ಹತನಾದಂತೆಯೆ ಆಕಾಶದಲ್ಲಿದ್ದ ಇಂದ್ರೋಪೇಂದ್ರರು ಕೆಳಗಿಳಿದು ಬಂದರು. ಅವರಿಬ್ಬರೂ ಅಲ್ಲಿನ ಪ್ರಜೆಗಳ ದುಃಖ ಶೋಕಗಳನ್ನು ಶಾಂತ-ಗೊಳಿಸಿದರು.

ಬಾಲಕರು, ವೃದ್ಧರೂ, ಪ್ರಜೆಗಳನ್ನೂ ಸಹ ಸಮಾಧಾನ ಮಾಡಿದರು. ಮುಂದಿನ ಕಾರ್ಯವನ್ನು ಬೃಹಸ್ಪತಿಯ ಮತದಂತೆ ವಜ್ರಪುರವನ್ನು ನಾಲ್ಕು ವಿಭಾಗ ಮಾಡಿದರು. ಒಂದು ಭಾಗ ಜಯಂತ ಪುತ್ರನಿಗೂ ಮತ್ತೊಂದು ಭಾಗ ಪ್ರದ್ಯುಮ್ನ ಪುತ್ರನಿಗೂ, ತೃತೀಯ ಭಾಗ ಸಾಂಬಪುತ್ರನಿಗೂ, ತುರೀಯ ಭಾಗವನ್ನು ಗದಪುತ್ರನಿಗೂ ನೀಡಲಾಯಿತು.

ಕೇವಲ ರಾಜ್ಯವನ್ನು ಮಾತ್ರವಲ್ಲ ವೈಡೂರ್ಯಾದಿಗಳು, ವಸ್ತ್ರಗಳು, ಮುತ್ತುರತ್ನಗಳೂ ಸಹ ವಿಭಾಗ ಮಾಡಿದರು.

**ವಜ್ರನಾಭಸ್ಯ ತದ್ ರಾಜ್ಯಂ ಚತುರ್ಧಾ ಚಕ್ರತುರ್ನೃಪ ।**
**ಕಂಬಲಾಜಿನವಾಸಾಂಸಿ ರತ್ನಾನಿ ವಿವಿಧಾನಿ ಚ ॥ 9 ॥**

ನಂತರ ಇಂದ್ರದೇವನ ಆಜ್ಞೆಯಂತೆ ಆ ನಾಲ್ವರೂ ರಾಜಕುಮಾರರೂ

ಗಂಗಾಜಲದಿಂದ ರಾಜ್ಯದಲ್ಲಿ ಮೂರ್ಧಾಭಿಷಿಕ್ತರಾದರು. ಇಂದ್ರೋಪೇಂದ್ರರೆ ರಾಜಪದವಿಯಲ್ಲಿ ಕೂಡಿಸಿ ಅಭಿಷೇಕಗೈದರು.

ಪಟ್ಟಾಭಿಷೇಕ ಮುಹೂರ್ತ ಮುಗಿದ ಮೇಲೆ ಇಂದ್ರನು ಜಯಂತನಿಗೆ ಹೀಗೆಂದನು.

**ತ್ವಯೈತೇ ವೀರ ಸಂರಕ್ಷ್ಯಾಃ ರಾಜಾನಃ ಸಮಿತಿಂಜಯಾಃ ।**
**ಮಮ ವಂಶಕಲೋಽತ್ರೈಕಃ ಕೇಶವಸ್ಯ ತ್ರಯೋಽನಘ ॥ 10 ॥**

ಪುತ್ರ ಜಯಂತ! ನೀನು ಈ ನಾಲ್ವರೂ ಮಹಾವೀರರನ್ನು ಸರ್ವಕಾಲ-ದಲ್ಲಿಯೂ ರಕ್ಷಿಸಬೇಕು. ಇವರಲ್ಲಿ ಒಬ್ಬನು ನನ್ನ ವಂಶೋದ್ಧಾರಕನಾದರೆ ಉಳಿದ ಮೂವರು ಶ್ರೀಕೃಷ್ಣನ ವಂಶೋದ್ಧಾರಕರು.

ನನ್ನಾಜ್ಞೆಯಂತೆ ಇವರನ್ನು ವಧಿಸಲು ಯಾರಿಗೂ ಸಾಧ್ಯವಾಗುವುದಿಲ್ಲ.

ಇವರಿಗೆ ತಾಯಿಯ ಗುಣಗಳನ್ನು ಅನುಸರಿಸಿ ಆಕಾಶ ಸಂಚಾರ ವಿದ್ಯೆಯೂ ಫಲಿಸಿದೆ. ಹೀಗಾಗಿ ದ್ವಾರಕಾಪಟ್ಟಣಕ್ಕೂ, ಸ್ವರ್ಗಲೋಕಕ್ಕೂ ಇವರು ಬಂದು ಹೋಗಿ ಬರಬಹುದು.

**ಗಮನಾಗಮನಂ ಚೈವ ದಿವಿ ಸಿದ್ಧಂ ಭವಿಷ್ಯತಿ ।**
**ತ್ರಿವಿಷ್ಟಪಮ್ ದ್ವಾರಕಾಂ ಚ ರಮ್ಯಾಂ ಭೌಮಾಭಿರಕ್ಷಿತಾಮ್ ॥ 11 ॥**

ದಿಗ್ಗಜಗಳ ಕಲಭಗಳನ್ನು, ಉಚ್ಚೈಃಶ್ರವಸ್ಸಿನ ಮರಿಗಳನ್ನು, ವಿಶ್ವಕರ್ಮ ನಿರ್ಮಿತ ರಥಗಳನ್ನೂ ಯಥೇಚ್ಛವಾಗಿ ಇವರಿಗೆ ನೀಡುವವನಾಗು.

ಐರಾವತದ ಮರಿ ಆನೆಗಳಾದ ಶತ್ರುಂಜಯ - ರಿಪುಂಜಯವೆಂಬ ಗಗನ ಸಂಚಾರಿ ಆನೆಮರಿಗಳನ್ನು ಗದ-ಸಾಂಬರಿಗೆ ಕೊಡು. ಇವುಗಳ ಮೇಲೆ ಕುಳಿತು ದ್ವಾರಕೆಗೆ ಹಾಗೂ ವಜ್ರಪುರಕ್ಕೆ ಸಂಚರಿಸಲಿ.

**ಇತಿ ಸಂದಿಶ್ಯ ಭಗವಾನ್ ದೇವರಾಜಃ ಪುರಂದರಃ ।**
**ಜಗಾಮ ಭಗವಾನ್ ಸ್ವರ್ಗಂ ದ್ವಾರಕಾಮಪಿ ಕೇಶವಃ ॥ 12 ॥**

ಹೀಗೆ ಆದೇಶಿಸಿದ ಇಂದ್ರದೇವನು ಸ್ವರ್ಗಕ್ಕೆ ತೆರಳಿದನು. ಕೃಷ್ಣನೂ ಸಹ ದ್ವಾರಕೆಗೆ ಹೊರಟು ಹೋದನು.

ಪ್ರದ್ಯುಮ್ನ-ಸಾಂಬ-ಗದರು ನಾಲ್ವರಿಗೂ ರಾಜಕೀಯ ತತ್ವ ತಿಳಿಸಿ ಕೊಡಲೆಂದು ಆರು ತಿಂಗಳು ಅವರೊಂದಿಗೆ ಇದ್ದು ನಂತರ ದ್ವಾರಕೆಗೆ

ಹಿಂತಿರುಗಿದರು. ಈ ರಾಜ್ಯಗಳೂ ಮೇರುವಿನ ಉತ್ತರ ಭಾಗದಲ್ಲಿ ಇಂದಿಗೂ ಇವೆ.

**ನಿವೃತ್ತೇ ಮೌಸಲೇ ಯುದ್ಧೇ ಸ್ವರ್ಗಂ ಯಾತೇಷು ವೃಷ್ಣಿಷು ।**
**ಗದ ಪ್ರದ್ಯುಮ್ನ ಸಾಂಬಾಸ್ತೇ ಗತಾ ವಜ್ರಪುರಂ ವಿಭೋ ॥ 13 ॥**

ಕೊನೆಗೆ ಯಾದವರೆಲ್ಲರೂ ಭಗದಿಚ್ಛೆಯಂತೆ ಮೈರೇಯ ಪಾನಮತ್ತರಾಗಿ ಪ್ರಭಾಸ ಕ್ಷೇತ್ರದಲ್ಲಿ ಪರಸ್ಪರ ಸ್ವಯೂಥ ಕಲಹದಿಂದಾಗಿ ಮರಣ ಹೊಂದಿದರು. ನಂತರ ಪ್ರದ್ಯುಮ್ನ, ಗದ, ಸಾಂಬಾದಿಗಳು ತಮ್ಮ ಪುತ್ರರಿದ್ದ ವಜ್ರಪುರಕ್ಕೆ ಹೋದರು. ನಂತರ ಸಾಂಬಾದಿಗಳು ತಾವು ಮಾಡಿರುವ ಪುಣ್ಯಕರ್ಮ-ಗಳಿಂದಲೂ ಹಾಗೂ ಶ್ರೀಕೃಷ್ಣನ ಪರಮಾನುಗ್ರಹದಿಂದಲೂ ವಜ್ರಪುರದಿಂದ ಸ್ವರ್ಗಲೋಕಕ್ಕೆ ಹೋಗುವರು.

**ಪುತ್ರಪೌತ್ರಾಃ ವಿವರ್ಧಂತೇ ಆರೋಗ್ಯಧನಸಂಪದಃ ।**
**ಯಶೋವಿಪುಲಮಾಪ್ನೋತಿ ದ್ವೈಪಾಯನವಚೋ ಯಥಾ ॥ 14 ॥**

ರಾಜನೇ! ನಾನು ನಿನಗೆ ಪ್ರದ್ಯುಮ್ನನ ಪರಾಕ್ರಮವನ್ನು ವರ್ಣಿಸಿದ್ದೇನೆ. ಈ ಪ್ರಕರಣದ ಶ್ರವಣ-ಕಥಾಕಥನಾದಿಗಳಿಂದ ಶ್ರೇಯಸ್ಸುಂಟಾಗುವುದು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ವಜ್ರನಾಭವಧ ಎಂಬಲ್ಲಿ
ತೊಂಬತ್ತೇಳನೆಯ ಅಧ್ಯಾಯ ಸಮಾಪ್ತಿ

# ಅಥ ಅಷ್ಟನವತಿತಮೋಽಧ್ಯಾಯಃ

## ವಿಶ್ವಕರ್ಮನಿಂದ ದ್ವಾರಕಾ ರಚನೆ

**ದದರ್ಶಾಥ ಪುರೀಂ ಕೃಷ್ಣೋ ದ್ವಾರಕಾಂ ಗರುಡೇ ಸ್ಥಿತಃ ।**
**ದೇವಸದ್ಮಪ್ರತೀಕಾಶಾಂ ಸಮಂತಾತ್ ಪ್ರತಿನಾದಿತಾಮ್ ॥ 1 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! ಶ್ರೀಕೃಷ್ಣನು ದೇವಲೋಕ ಸದೃಶವೂ, ಸಮುದ್ರದ ಮಧ್ಯೆ ಬೋರ್ಗರೀಯುವ ಗಂಭೀರ ನಾದದಿಂದ ಕೂಡಿರುವ ವಿಶ್ವಕರ್ಮನಿಂದ ನಿರ್ಮಿತವಾದ ದ್ವಾರಕಾಪಟ್ಟಣವನ್ನು ನೋಡಿದನು.

### ದ್ವಾರಕಾ ವರ್ಣನೆ

ದ್ವಾರಕೆಯ ಸುತ್ತಲೂ ಮಣಿಪರ್ವತಗಳದ್ದು ರಕ್ಷಣೆಗಾಗಿ ನಾನಾ ವಿಧಯಂತ್ರಗಳನ್ನು ಅಳವಡಿಸಿದ್ದರು. ಕ್ರೀಡಾಗೃಹಗಳು, ಸುಂದರವಾದ

---

1. **ದ್ವಾರಕೆ :**
ಗೋಮತೀ ನದಿ ಸಮುದ್ರ ಸಂಗಮವಾಗುವ ಸ್ಥಳ. ದ್ವಾರಕಕ್ಷೇತ್ರವು ಸ್ಕಾಂದಪುರಾಣದಲ್ಲಿ ಪ್ರಭಾಸಖಂಡದಲ್ಲಿ ನಲವತ್ತಕ್ಕಿಂತಲೂ ಹೆಚ್ಚು ಅಧ್ಯಾಯಗಳಲ್ಲಿ ವರ್ಣಿತವಾಗಿದೆ. ಬ್ರಹ್ಮಾಂಡ, ಮತ್ಸ್ಯ, ವಾಯು ಪುರಾಣಗಳಲ್ಲಿಯೂ ಬಂದಿದೆ.
ಗೋಮತೀ ನದಿಯನ್ನು ಸ್ವರ್ಗಕ್ಕೆ ಏಣಿಯೆಂದು ವರ್ಣಿಸಲಾಗಿದೆ.
**ಸ್ವರ್ಗಾರೋಹಣ ನಿಃಶ್ರೇಣೀ ವಹತೇ ಯತ್ರ ಗೋಮತೀ ।**
ಮುಕ್ತಿಯನ್ನು ನೀಡುವ ಸಾಮರ್ಥ್ಯವೂ ಬ್ರಹ್ಮಹತ್ಯಾದಿ ಪಾತಕ ನಾಶಕವೆಂದೂ, ಶ್ರೀಕೃಷ್ಣನ ಸನ್ನಿಧಿಯಲ್ಲಿ ಸಕಲತೀರ್ಥಗಳೂ, ದೇವತೆಗಳೂ, ಯಜ್ಞಗಳೂ ಸನ್ನಿಹಿತವಾಗಿರುತ್ತವೆ.

ಚಕ್ರಾಂಕಿತಗಳ ಜನ್ಮಭೂಮಿಯೂ ಇದೆ ಆಗಿದೆ.

**ಭವಂತಿ ಯತ್ರ ಪಾಷಾಣಾಃ ಚಕ್ರಾಂಕಾಃ ಮುಕ್ತಿದಾಯಕಾಃ ।**
**ತೇಷಾಂ ಸ್ಪರ್ಶನ ಮಾತ್ರೇಣ ಮುಚ್ಯತೇ ಸರ್ವಕಿಲ್ಬಿಷೈಃ ॥**

ಇಲ್ಲಿಂದ ಸ್ವಲ್ಪದೂರವಿರುವ ಗೋಪೀಹ್ರದ ಗೋಪಿಚಂದನವೆಂದು ಪ್ರಸಿದ್ಧವಾಗಿದೆ. ಇದರ ದಾನ, ಧಾರಣಾದಿಗಳಿಗೆ ವಿಶಿಷ್ಟ ಫಲಗಳಿವೆ.

ಮಹಾಲಯ ದಿನಗಳಲ್ಲಿ ಗೋಮತೀ ಸಾಗರ ಸಂಗಮದಲ್ಲಿ ಪಿಂಡಸಮರ್ಪಣೆ ಮಾಡಿದರೆ ಗಯಾದಲ್ಲಿ ಶ್ರಾದ್ಧ ಮಾಡಿದ ಫಲವು.

**ಶ್ರಾದ್ಧಪಕ್ಷೇ ತ್ವಮಾವಾಸ್ಯಾಂ ಗೋಮತ್ಯುದಧಿಸಂಗಮೇ ।**
**ದತ್ವಾಪಿಂಡಂ ಗಯಾಸಮಂ ॥**

ಗೋಮತಿ ಸಿಂಧು ಸಂಗಮ ಸ್ನಾನದಿಂದ ಶತಾಶ್ವಮೇಧಯಾಗ ಫಲ.

ಗುರುವು ಸಿಂಹದಲ್ಲಿದ್ದಾಗ ಗೋಮತೀ ಸ್ನಾನ ಗೋದಾವರಿಗಿಂತ ವಿಶೇಷ ಫಲ.

ದ್ವಾರಕೆಯತ್ತ ಮುಖ ಮಾಡಿ ದ್ವಾರಕೆಯೆಂಬ ಮೂರಕ್ಷರ ನುಡಿದರೆ ಸಾಕು, ಶ್ರೀಕೃಷ್ಣನ ಅನುಗ್ರಹವಾಗುವುದು. ಸುಮಾರು $106^1/_2$ ವರ್ಷದಲ್ಲಿ 80 ವರ್ಷ ದ್ವಾರಕೆಯಲ್ಲಿದ್ದನು. ರುಕ್ಮಿಣೀ ಕಲ್ಯಾಣ, ಪ್ರದ್ಯುಮ್ನ ಜನ್ಮ, ಸತ್ಯಭಾಮ ವಿವಾಹ, ಪಾರಿಜಾತ ಪುಷ್ಪ ನಾರದರು ನೀಡಿದ್ದು, ಧನ್ಯಾಶ್ಚರ್ಯಪ್ರಸಂಗ, 16000 ರಾಜಕುಮಾರಿಯರ ವಿವಾಹ, ನಾರದರಿಂದ ಕೃಷ್ಣದಾಂಪತ್ಯ ದರ್ಶನ, ಸುಭದ್ರೆಯ ವಿವಾಹ, ಪೌಂಡ್ರಕವಧೆ, ಒಂದೇ ದಿನದಲ್ಲಿ ಅಶ್ವಮೇಧ ನಡೆಸಿದ್ದು ದ್ವಾರಕೆಯಲ್ಲಿ. ಇವೆ ಮೊದಲಾದ ಮುಖ್ಯ ಘಟನೆಗಳು ದ್ವಾರಕೆಯಲ್ಲಿಯೇ ನಡೆದವು.

ದ್ವಾರಕೆಯಿಂದ ಹಲವು ಮೈಲಿ ದೂರ ಪ್ರಭಾಸಕ್ಷೇತ್ರವಿದೆ. ಇದು ಯಾದವರು ಪರಸ್ಪರ ಕಲಹದಿಂದ ಮೃತರಾಗಿದ್ದು. ಕೃಷ್ಣನೂ ಪರಂಧಾಮಕ್ಕೆ ಹೋಗಿದ್ದು ಇಲ್ಲಿಯೇ. ಪಿಂಡಾರಕ ಕ್ಷೇತ್ರವು ದ್ವಾರಕೆಯ ಸಮೀಪವೆ ಇದ್ದು ಸಾಂಬನಿಗೆ ಸ್ತ್ರೀವೇಷ ಹಾಕಿ ವಿಶ್ವಾಮಿತ್ರಾದಿ ಮುನಿಗಳು ಶಾಪ ನೀಡಿದ್ದು, ಅರ್ಜುನನು ಸನ್ಯಾಸಿಯಾಗಿ ಚಾತುರ್ಮಾಸಕ್ಕಾಗಿ ದ್ವಾರಕೆಯಲ್ಲಿದ್ದಾಗ ಬಲರಾಮಾದಿಗಳು ಪಿಂಡಾರಕಕ್ಕೆ ಬಂದಿದ್ದರೂ. ಇದು ತೀರ್ಥಗಳಿಗೂ ತೀರ್ಥ. ಯದುರಾಜನು ರಾಜಸೂಯ ಯಾಗ ಮಾಡಿದ್ದು, ಕುಶಸ್ಥಲೀಯೆಂಬ ಪ್ರಾಚೀನ ಹೆಸರಿತ್ತು. ಮುಂದೆ ದ್ವಾರಕಾ ಎಂದು ಪ್ರಸಿದ್ಧವಾಯಿತು. ದ್ವಾರಕಾ ವರ್ಣನೆಯು ಹರಿವಂಶ, ವಿಷ್ಣುಪುರಾಣ, ಮಹಾಭಾರತ ಸಭಾಪರ್ವ, ಭಾಗವತ 10ಸ್ಕಂಧಗಳಲ್ಲಿ ಬಂದಿದೆ. ಗೋಮತೀನದೀ, ತ್ರಿವಿಕ್ರಮದೇವ, ಗೋಪೀಚಂದನ, ಚಕ್ರಾಣಿಕೆ, ಶಂಖೋದ್ಧಾರ ಮೊದಲಾದವುಗಳಿಗೆ ಪ್ರಸಿದ್ಧ ಕ್ಷೇತ್ರ.

**ದ್ವಾರಕಾ :** ತಾತ್ಪರ್ಯನಿರ್ಣಯದಲ್ಲಿ ಶ್ರೀಕೃಷ್ಣನು ಕಾಲಯವನನ್ನು ಆಕ್ರಮಿಸಿದ್ದಾಗ ಈಗ ಜರಾಸಂಧನೂ ಬಂದರೆ ಯಾದವರನ್ನು ರಕ್ಷಿಸುವುದು ಕಷ್ಟವಾಗಬಹುದೆಂದು ಅವರಿಗೆ ಸುರಕ್ಷಿತ ಸ್ಥಳದಲ್ಲಿಡಲು ಆಲೋಚಿಸಿದನು. ಅದಕ್ಕಾಗಿ ಸಮುದ್ರ ಮಧ್ಯೆ ದ್ವಾರಕಾ ನಗರಿಯನ್ನು ನಿರ್ಮಿಸಲು ದೇವಶಿಲ್ಪಿಯನ್ನು ಕರೆದ. ಸ್ಮರಿಸಿದ ಕೂಡಲೇ ವಿಶ್ವಕರ್ಮ ಬಂದು ದ್ವಾರಕಾಪಟ್ಟಣವನ್ನು ನಿರ್ಮಿಸಿದ. ಸಾಗರವು ಒಳಗಿ ಹಿಂದೆ ಹೋದಾಗ ಪುರೀ ನಿರ್ಮಿತವಾಯಿತು.

**ಸ ಭೌವನಃ ಸಮಾಗತಃ ಕುಶಸ್ಥಲೀಂ ವಿನಿರ್ಮಮೇ ।**
**ನಿರಂಬುಕೇ ತು ಸಾಗರೇ ಜನಾರ್ದನಾಜ್ಞಯಾ ಕೃತೇ ॥** *–17/112*

ಉದ್ಯಾನವನಗಳು, ಚತುಷ್ಪಥಗಳು, ವಿಚಿತ್ರಭವನಗಳು ಮೊದಲಾದವುಗಳಿದ್ದ ದ್ವಾರಕೆಯನ್ನು ಗರುಡನ ಮೇಲೆ ಆರೂಢನಾಗಿದ್ದ ಕೃಷ್ಣನು ನೋಡಿದನು.

ಶ್ರೀಕೃಷ್ಣನು ದ್ವಾರಕೆಗೆ ಬೀಜಯಂಗೈಯ್ಯುತ್ತಿದ್ದಂತೆ ಇಂದ್ರದೇವನು ವಿಶ್ವಕರ್ಮನನ್ನು ಕರೆದು ಹೀಗೆಂದನು.

**ಪ್ರಿಯಮಿಚ್ಛಸಿ ಚೇತ್ ಕರ್ತುಂ ಮಹ್ಯಂ ಶಿಲ್ಪವತಾಂ ವರ ।**
**ಕೃಷ್ಣ ಪ್ರಿಯಾರ್ಥಂ ಭೂಯಸ್ತ್ವಂ ಪ್ರಕುರುಷ್ವ ಮನೋಹರಾಮ್ ॥ 2 ॥**

ಶಿಲ್ಪಿ ವಿಶ್ವಕರ್ಮನೇ, ನೀನು ನನ್ನ ಪ್ರಿಯವನ್ನು ಬಯಸುವುದಾದರೆ ಶ್ರೀಕೃಷ್ಣನಿಗೆ ಪ್ರೀತಿವುಂಟು ಮಾಡಲು ಈಗಿರುವ ದ್ವಾರಕಾ ಪಟ್ಟಣವನ್ನು ನವೀನ ರೀತಿಯಲ್ಲಿ ಮನೋಹರವಾಗಿರುವಂತೆ ನಿರ್ಮಿಸು.

ನನ್ನ ಅಮರಾವತಿಯಂತೆ ನಾನಾ ವಿಧ ಉದ್ಯಾನ ಉಪವನಗಳು, ಇದ್ದು ಪುನಃ ನೂತನವಾಗಿ ನಿರ್ಮಿಸು.

**ಯತ್ ಕಿಂಚಿತ್ ತ್ರಿಷುಲೋಕೇಷು ರತ್ನಭೂತಂ ಪ್ರಪಶ್ಯಸಿ ।**
**ತೇನ ಸಂಯುಜ್ಯತಾಂ ಕ್ಷಿಪ್ರಂ ಪುರೀ ದ್ವಾರವತೀ ತ್ವಯಾ ॥ 3 ॥**

---

ವಸ್ತುತಃ ದ್ವಾರಕೆಗೆ ಕುಶಸ್ಥಲೀ ಎಂದು ಹೆಸರಿತ್ತು. ಇದು ರೇವತರಾಜನ ರಾಜಧಾನಿಯಾಗಿತ್ತು. ಯಕ್ಷರಿಂದ ನಾಶ ಹೊಂದಿತ್ತು. ಈಗ ಅದೇ ಸ್ಥಳದಲ್ಲಿ ವಿಶ್ವಕರ್ಮನು ದ್ವಾರಕೆಯನ್ನು ನಿರ್ಮಿಸಿದನು.
ಇದು ಸಮುದ್ರದ ಮಧ್ಯೆ ಹನ್ನೆರಡು ಯೋಜನ ಉದ್ದವಿತ್ತು. ಅಲ್ಲಿನ ಲವಣೋದಕವನ್ನೂ ಸಹ ಹರಿಯು ಸ್ವಾದೋದಕವನ್ನಾಗಿ ಮಾಡಿದ. ಕರ್ತುಂ ಅಕರ್ತುಂ ಅನ್ಯಥಾಕರ್ತುಂ, ಸಮರ್ಥನಿಗೆ ಇದೊಂದು ಸಂಗತಿಯಲ್ಲ.
**ಚಕಾರ ಲಾವಣೋದಕಂ ಜನಾರ್ದನೋಽಮೃತೋಪಮಂ ।**
ಮುಂದೆ ದೇವಲೋಕದ ಸುಧರ್ಮಸಭೆಯನ್ನು ವಾಯುದೇವ ತಂದಿತ್ತ. ಆದರೆ ಸುಧರ್ಮಸಭೆ ನೂರೈವತ್ತು ಯೋಜನ ಉದ್ದ, ನೂರು ಯೋಜನ ಅಗಲ ಐದು ಯೋಜನ ಎತ್ತರವಿದ್ದು, ಹನ್ನೆರಡು ಯೋಜನ ಉದ್ದ, ಎಂಟು ಯೋಜನ ಅಗಲ ದ್ವಾರಕೆಯಲ್ಲಿ ತುಂಬುವುದು ಹೇಗೆ? ವಸ್ತುತಃ ವರದಿಂದಾಗಿ ಕುಂಭಕರ್ಣನು ಅತ್ಯಲ್ಪ ಪ್ರದೇಶದಲ್ಲಿ ವಾಸಿಸುತ್ತಿದ್ದನು.
**ಅಲ್ಪೇಽಪಿ ನಿವಾಸಶಕ್ತಿಃ** । – *ತಾ.ನಿ. 8/182*
**ಪೂರ್ವಂ ಪಶ್ಚಾತ್ ಸಂಚುಕೋಚ ಲಂಕಾಯಾಮುಷಿತುಂ ಸ್ವಯಮ್** ॥–*ತಾ.ನಿ.8/132*
ಆದರೂ ಹೀಗೆ ಹೇಳಿದರೆ ಹರಿವಂಶ ವಿರೋಧವಿದೆ. ಹರಿವಂಶವು ವಾಯುವು ಸುಧರ್ಮ ಸಭೆ ಒಂದು ಭಾಗವನ್ನು ಮಾತ್ರ ತಂದಿರುವನೆಂದಿದೆ.

ಈ ಮೂರು ಲೋಕಗಳಲ್ಲಿ ಇರುವ ಶ್ರೇಷ್ಠವಾದ ವಜ್ರ ವೈಢೂರ್ಯಗಳಿಂದ ನಂದನವನ, ಕಲ್ಪವೃಕ್ಷಾದಿಗಳೆಲ್ಲ ದ್ವಾರಕೆಯಲ್ಲಿರಬೇಕು.

ಶ್ರೀಕೃಷ್ಣನು ಸರ್ವದ ದೇವತಾ ಕಾರ್ಯಗಳಲ್ಲಿ ಕಟಿಬದ್ಧನಾಗಿರುವನು. ದೈತ್ಯರ ಬಹುಪಾಲು ಯುದ್ಧದಲ್ಲಿ ನಮ್ಮ ಪರವಾಗಿಯೆ ಹೋರಾಡುತ್ತಾನೆ. ಇದಕ್ಕಾಗಿ ಇದೊಂದು ಕೃತಜ್ಞತೆ ಮಾತ್ರ.

**ಕೃಷ್ಣೋ ಹಿ ಸುರಕಾರ್ಯೇಷು ಸರ್ವೇಷು ಸತತೋತ್ಥಿತಃ ।**
**ಸಂಗ್ರಾಮಾನ್ ಘೋರರೂಪಾಂಶ್ಚ ವಿಗಾಹತಿ ಮಹಾಬಲಃ ॥ 4 ॥**

ಇಂದ್ರನ ಆದೇಶದಂತೆ ವಿಶ್ವಕರ್ಮನು ದ್ವಾರಕೆಯನ್ನು ಪುನರ್ನಿರ್ಮಿಸಿದನು. ಇದೊಂದು ಇಂದ್ರನ ಅಮರಾವತಿಯಂತೆಯೇ ಇತ್ತು. ಇದು ಸ್ವರ್ಗದಲ್ಲಿರುವಂತೆಯೇ ನಿರ್ಮಿತವಾಗಿತ್ತು. ಮಹಾದ್ವಾರದ ಮೂಲಕ ದ್ವಾರಕೆಯನ್ನು ಪ್ರವೇಶಿಸಿದ ಕೃಷ್ಣನು ನಯನ ಮನೋಹರವೂ, ಗಂಗಾ ಸಿಂಧೂಗಳಂತೆ ದಿವ್ಯಜಲಯುಕ್ತವೂ, ದ್ವಾರಕೆಯ ರಕ್ಷಣೆಗಾಗಿ ಸುತ್ತಲೂ ನಿರ್ಮಿಸಿದ್ದ ಕಂದಕಗಳು, ಅದರಲ್ಲಿ ಕಮಲಗಳು ತುಂಬಿದ್ದವು. ಹಂಸಪಕ್ಷಿಗಳಿಂದ ತುಂಬಿದ್ದ ಆ ಕಂದಕದಲ್ಲಿ ಪಕ್ಷಿಗಳು ನೀರನ್ನು ಸೇವಿಸುತ್ತಿದ್ದವು. ನಂದನವನ – ಚೈತ್ರರಥೋದ್ಯಾನದಂತೆ ಸುಂದರ ಉಪವನಗಳಿಂದ ತುಂಬಿದ್ದ ದ್ವಾರಕೆಯು ಮೇಘಗಳಿಂದ ವ್ಯಾಪ್ತವಾದ ದೇವಲೋಕವೆಂಬಂತೆ ಭಾಸಮಾನವಾಗಿತ್ತು.

**ಬಭೌ ರೈವತಕಃ ಶೈಲೋ ರಮ್ಯ ಸಾನು ಗುಹಾಜಿರಃ ।**
**ಪೂರ್ವಸ್ಯಾಂ ದಿಶಿ ಲಕ್ಷ್ಮೀವಾನ್ ಮಣಿಕಾಂಚನ ತೋರಣಃ ॥ 5 ॥**

ಇದರ ಮಧ್ಯದಲ್ಲಿಯೇ ಅನೇಕ ಸಾನು ಪ್ರದೇಶಗಳಿಂದಲೂ, ಗುಹೆಗಳಿಂದಲೂ ಕೂಡಿದ್ದ ರೈವತಕ ಪರ್ವತವಿದ್ದಿತು.

ಇದರ ಹೊರಬಾಗಿಲು ಮಣಿಗಳಿಂದಲೂ ಸುವರ್ಣಗಳಿಂದಲೂ ಅಲಂಕೃತವಾಗಿತ್ತು.

ದಕ್ಷಿಣದಲ್ಲಿ 'ಲತಾವೇಷ್ಟ'ವೆಂಬ ಪರ್ವತವು ಐದು ಬಣ್ಣಗಳಿಂದ ಕೂಡಿದ್ದೂ ಇಂದ್ರಧ್ವಜದಂತೆ ಶೋಭಿಸುತ್ತಿತ್ತು. ಪಶ್ಚಿಮದಲ್ಲಿ ಬೆಳ್ಳಗಿರಿಯೆನಿಸಿದ 'ಸುಕಕ್ಷ'ವೆಂಬ ಉದ್ಯಾನವನವಿತ್ತು.

ಮಂದರ ಪರ್ವತೋಪಮವಾದ ಬಿಳಿಯ ವೇಣುಮಂತ ಪರ್ವತವು ಉತ್ತರ ದಿಕ್ಕಿನಲ್ಲಿ ಬೆಳಗುತ್ತಿತ್ತು.

ಪೂರ್ವದಿಕ್ಕಿನಲ್ಲಿದ್ದ ರೈವತಕದ ಸುತ್ತಲೂ ಚಿತ್ರಕ, ಪಂಚವರ್ಣ, ಪಾಂಚಜನ್ಯ ಸರ್ವರ್ತುಕಗಳೆಂಬ ಉದ್ಯಾನವನವಿದ್ದವು.

ದಕ್ಷಿಣದಲ್ಲಿದ್ದ ಲತಾವೇಷ್ಟ ಪರ್ವತದ ನಾಲ್ಕೂ ಕಡೆ ಮೇರು, ಪ್ರಭ, ಭಾನು, ಪುಷ್ಪಕವೆಂಬ ವನಗಳು ಶೋಭೆಯನ್ನು ಅಧಿಕವಾಗಿಸಿದ್ದವು.

ಪಶ್ಚಿಮದಿಕ್ಕಿನಲ್ಲಿದ್ದ ಸುರಕ್ಷದ ಸುತ್ತಲೂ ರುದ್ರಾಕ್ಷಿ ಗಿಡಗಳಿಂದ ತುಂಬಿದ್ದ ಅಕ್ಷಕವನ, ಬೀಜಕವನ, ಮಂದಾರವನ, ಶತಾವರ್ತವನ, ಕರವೀರಾಕರ ವನಗಳಿದ್ದವು.

ಉತ್ತರದಲ್ಲಾದರೂ ವೇಣುವಂತ ಪರ್ವತದ ಸುತ್ತಲೂ ಚೈತ್ರರಥ, ನಂದನ, ರಮಣ ಹಾಗೂ ಭಾವನಗಳೆಂಬ ಉದ್ಯಾನವಿದ್ದವು.

**ವೈಡೂರ್ಯ ಪತ್ರೈಃ ಜಲೈಸ್ತದಾ ಮಂದಾಕಿನೀ ನದೀ ।**
**ಭಾತಿ ಪುಷ್ಕರಿಣೀ ರಮ್ಯಾ ಪೂರ್ವಸ್ಯಾಂ ದಿಶಿ ಭಾರತ ॥ 6 ॥**

ದ್ವಾರಕೆಯ ಪೂರ್ವದಿಕ್ಕಿನಲ್ಲಿ ವೈಡೂರ್ಯಮಯವಾದ ಪತ್ರಪುಟಗಳಿಂದ ಶೋಭಿಸುವ ಕಮಲಗಳಿಂದ ಶೋಭಿಸುವ ಮಂದಾಕಿನೀ ನದಿಯು ವಿಶ್ವಕರ್ಮನ ಕೈಚಳಕದಿಂದಾಗಿ ರಮ್ಯವಾದ ಪುಷ್ಕರಿಣಿಯ ರೂಪ ತಳೆದಿತ್ತು.

ಶ್ರೀಕೃಷ್ಣನನ್ನು ಸಂತೋಷಗೊಳಿಸಲೆಂದೇ ದೇವ-ಗಂಧರ್ವಾಪ್ಸರಸೆಯರು ವಿಶ್ವಕರ್ಮನ ಪ್ರೇರಣೆಯಂತೆ ಸುತ್ತಲೂ ಇದ್ದ ಪರ್ವತಗಳ ಸಾನು ಪ್ರದೇಶಗಳನ್ನು ತಮ್ಮ ಸನ್ನಿಧಾನದಿಂದ ಅಲಂಕೃತಗೊಳಿಸಿದ್ದರು.

ಪವಿತ್ರವಾದ ಮಂದಾಕಿನೀ ನದಿಯು ತನ್ನನ್ನು ಐವತ್ತು ವಿಭಾಗಗೊಳಿಸಿ ದ್ವಾರಕಾವಾಸಿಗಳ ಸಂತೋಷಕ್ಕಾಗಿ ಪುರದ ಸುತ್ತಲೂ ಹರಿಯತೊಡಗಿದ್ದಳು. ದ್ವಾರಕೆಯ ಶೋಭೆ ಅಪ್ರತಿಮವಾಗಿತ್ತು. ಎತ್ತರ ಸ್ಥಳದಲ್ಲಿದ್ದ ದ್ವಾರಕೆಯು ಶತ್ರುಗಳಿಗೆ ಅಭೇದ್ಯವಾದ ಕಂದಕಗಳಿಂದ ಸುತ್ತುವರೆಯಲ್ಪಟ್ಟಿತ್ತು. ಎತ್ತರವಾದ ಗೋಡೆಗಳಿಂದ ಆವೃತವಾಗಿತ್ತು. ಗೋಡೆಗಳಿಗೆ ಸುಣ್ಣ ಬಳಿದು ಬಿಳಿಯನ್ನಾಗಿ ಮಾಡಲಾಗಿತ್ತು. *[ಸುಧಾ ಪಾಂಡುರಲೇಪನಾಮ್]*.

ಕೋಟೆಗಳ ಮೇಲೆ ಯಂತ್ರಗಳನ್ನೂ ನೂರಾರು ಜನರನ್ನು ನಾಶಗೈಯ್ಯುವ

ಶತಘ್ನಿಗಳೆಂಬ [ಫಿರಂಗಿ] ಯಂತ್ರಗಳಿದ್ದವು. ಕಬ್ಬಿಣದ ಚಕ್ರಗಳನ್ನೂ ಹೊಂದಿದ್ದಿತು.

## ಶ್ರೀಕೃಷ್ಣನ ಭವನ ವಿಶಿಷ್ಟತೆ[2]

ತಸ್ಮಿನ್ ಪುರವರ ಶ್ರೇಷ್ಠೇ ದಾಶಾರ್ಹಾಣಾಂ ಯಶಸ್ವಿನಾಮ್ ।
ವೇಶ್ಮಾನಿ ಜಹೃಷೇ ದೃಷ್ಟ್ವಾ ತತೋ ದೇವಕಿನಂದನಃ ॥ 7 ॥
ಕಾಂಚನೈಃ ಮಣಿಸೋಪಾನೈಃ ಉಪೇತಾನಿ ನೃಹರ್ಷಣೈಃ ।
ದದೃಶೇ ವಾಸುದೇವಸ್ಯ ಚತುರ್ಯೋಜನ ಮಾಯತಮ್ ॥ 8 ॥
ತಾವದೇವ ಚ ವಿಸ್ತೀರ್ಣಮಪ್ರಮೇಯ ಮಹಾಧನಮ್ ।
ಪ್ರಾಸಾದವರ ಸಂಪನ್ನಂ ಯುಕ್ತಂ ಜಗತಿ ಪರ್ವತೈಃ ॥ 9 ॥

ವಿಶ್ವಕರ್ಮನಿಂದ ನಿರ್ಮಿತವಾದ ಶ್ರೀಕೃಷ್ಣನ ಅರಮನೆಯು ನಾಲ್ಕು ಯೋಜನ ಅಗಲ, ನಾಲ್ಕು ಯೋಜನ ಉದ್ದವಾಗಿಯೂ ಇತ್ತು. ಹದಿಮೂರು ಯೋಜನ ವಿಸ್ತಾರವಾಗಿದ್ದಿತು. ಅನಂತ ಧನರಾಶಿ ಅದಕ್ಕಾಗಿ ವಿನಿಯೋಗಿಸಲಾಗಿತ್ತು. ಇದು ಸುಂದರವಾದ ಅನೇಕ ಪ್ರಾಸಾದಗಳಿಂದ ಯುಕ್ತವಾಗಿತ್ತು.

ಜಗತ್ತಿನಲ್ಲಿದ್ದ ಸಮಸ್ತ ಪರ್ವತಗಳನ್ನು ತಂದು ಅಲ್ಲಿ ಕ್ರೀಡಾ ಪರ್ವತ ರೂಪದಲ್ಲಿ ದೇವಶಿಲ್ಪಿಯು ನಿರ್ಮಿಸಿದ್ದನು. ಇದೆಲ್ಲ ಇಂದ್ರನ ಆದೇಶ, ಉಪೇಂದ್ರನಲ್ಲಿರುವ ಭಕ್ತಿಯಿಂದ ಆಗಿತ್ತು.

## ರುಕ್ಮಿಣಿಯ ಪ್ರಾಸಾದ

ಪ್ರಾಸಾದಂ ಚೈವ ಹೇಮಾಭಂ ಸರ್ವಭೂಮನೋಹರಮ್ ।
ಮೇರೋರಿವ ಗಿರೇಃ ಶೃಂಗಮುಚ್ಚ್ರಿತಂ ಕಾಂಚನಂ ಮಹತ್ ॥ 10 ॥
ರುಕ್ಮಿಣ್ಯಾಃ ಪ್ರವರಂ ವಾಸಂ ವಿಹಿತಂ ವಿಶ್ವಕರ್ಮಣಾ ॥ 11 ॥

ವಿಶ್ವಕರ್ಮನು ರುಕ್ಮಿಣಿಯ ವಾಸಕ್ಕಾಗಿ ನಿರ್ಮಿಸಿದ್ದ ರುಕ್ಮಿಣೀ ಭವನವು ಸುವರ್ಣದಂತೆ ದೇದೀಪ್ಯಮಾನವಾಗಿದ್ದು ಸಕಲ ಪ್ರಾಣಿಗಳ ಮನಸ್ಸು ಇದರ ಸೌಂದರ್ಯದಿಂದ ಮಾರು ಹೋಗುತ್ತಿದ್ದವು. ಇವಳ ಮನೆಯ ಮೇಲಿದ್ದ ಸುವರ್ಣಮಯ ಕಲಶವು ಮೇರುವಿನ ಶಿಖರ.

2. ಭವನಂ ವಿಭಾತಿ ಭುವನೈಕಪತೇಃ ಭುವನತ್ರಯಾದ್ಭುತ ಗುಣಾತಿಶಯೀ ।
ವರಮಂದಿರ ಪ್ರಕರಮಧ್ಯಗತಂ ದ್ವಿಜಮಂಡಲಸ್ಥ ಶಶಿಮಂಡಲವತ್ ಸುಮ । -11/15

**ಅಷ್ಟೌರಥ ಸಹಸ್ರಾಣಿ ನಗರೇ ಕಿಂಕಿಣೀಕಿನಾಮ್ ।**

**ಅಷ್ಟಯೋಜನ ವಿಸ್ತೀರ್ಣಾಂ ಅಚಲಾಂ ದ್ವಾದಶಾಯತಾಮ್ ॥ 12 ॥**

**ದ್ವಿಗುಣೋಪನಿವೇಶಾಂ ಚ ದದರ್ಶ ದ್ವಾರಕಾಂ ಪುರೀಮ್ ॥ 13 ॥**

ಶ್ರೀಕೃಷ್ಣನು ದ್ವಾರಕೆಯಲ್ಲಿ ಸಣ್ಣ ಸಣ್ಣ ಘಂಟೆಗಳಿಂದ ಅಲಂಕೃತವಾಗಿದ್ದ ಎಂಟು ಸಾವಿರ ರಥಗಳನ್ನು ಕಂಡನು. ರಥಗಳ ಮೇಲೆ ಪತಾಕೆಗಳು ಹಾರಾಡುತ್ತಿದ್ದವು.

ದ್ವಾರಕೆಯು ಉದ್ದ ಹನ್ನೆರಡು ಯೋಜನ, ಎಂಟು ಯೋಜನ ಅಗಲ, ಸುತ್ತಳತೆಯು ತೊಂಭತ್ತಾರು ಯೋಜನಗಳಿತ್ತು. ಅದರ ಶಾಖಾಪಟ್ಟಣವಾದರೂ ಅದಕ್ಕೆ ದ್ವಿಗುಣ ಮಡಿಯಷ್ಟಿತ್ತು.

**ಅಷ್ಟಮಾರ್ಗಮಹಾರಥ್ಯಾಂ ಮಹಾಷೋಡಶಚತ್ವರಾಮ್ ।**

**ಸ್ತ್ರಿಯೋಽಪಿ ಯಸ್ಯಾಂ ಯುಧ್ಯೇರನ್ ಕಿಮು ವೃಷ್ಣಿಮಹಾರಥಾಃ ॥ 14 ॥**

ಜನರು ಸಂಚರಿಸಲು ವಿಶ್ವಕರ್ಮನು ಎಂಟು ಮಹಾಬೀದಿಗಳನ್ನು, ಹದಿನಾರು ಮಹಾವೃತ್ತಗಳನ್ನೂ ಪರಿಷ್ಕರಿಸಿ ನಿರ್ಮಿಸಿದ್ದು ಶುಕ್ರನಿಗೆ ಸರಿ ಹೋಲುತ್ತಿತ್ತು.

ದ್ವಾರಕೆಯಲ್ಲಿ ಸ್ತ್ರೀಯರು ಸಹ ಯುದ್ಧ ಮಾಡುವ ಕೌಶಲ್ಯ ಹೊಂದಿದ್ದರೆಂದ ಮೇಲೆ ಯಾದವ ವೀರರು ಯುದ್ಧ ಮಾಡುವರೆಂದು ಹೇಳುವುದೇನು?

ವ್ಯೂಹ ರಚಿಸಲು ಯೋಗ್ಯವಾದ ಏಳು ಮಹಾಮಾರ್ಗಗಳಿದ್ದು ಯಾದವರು ವಾಸಕ್ಕಾಗಿ ನಿರ್ಮಿಸಲ್ಪಟ್ಟ ಸೌಧಗಳನ್ನು ಅವಲೋಕಿಸಿದನು. ಈ ದಿವ್ಯ ಭವನಗಳು ನೊಡುವವರಿಗೆ ಮುದವನ್ನೀಯುತ್ತಿದ್ದು. ಭವನಗಳ ಮೇಲೆ ಪತಾಕೆಗಳು ಹಾಗೂ ಗಿಡಮರಬಳ್ಳಿಗಳೂ ಹಾರಾಡುತ್ತಿದ್ದು. ಸುವರ್ಣ ಕಲಶಗಳಿಂದ ಅಲಂಕೃತವಾಗಿತ್ತು. ಆಕಾಶವನ್ನೆ ಮುಟ್ಟಲು ಹೊರಟಂತಿರುವ ಗಗನಚುಂಬಿ ಭವನಗಳು ಮೇರುವಿನ ಶಿಖರವನ್ನೆ ಹೋಲುತ್ತಿದ್ದವು.

ಭವನಗಳಲ್ಲಿ ಕೆಲವು ಪಂಚವರ್ಣಗಳಿಂದ ಕೂಡಿದ್ದರೆ ಮತ್ತೆ ಕೆಲವು ಸುವರ್ಣ ಬಣ್ಣದ್ದಾಗಿದ್ದವು. ಕೆಲವು ಮಹಡಿ ಮನೆಗಳು ನಾನಾ ವರ್ಣಯುಕ್ತವಾಗಿದ್ದು ನಾನಾ ವರ್ಣದ ಪರ್ವತಗಳಂತೆಯೇ ತೋರುತ್ತಿದ್ದವು. ತೇಜೋ ವಿಶಿಷ್ಟವಾಗಿ ವಿಶ್ವಕರ್ಮನಿಂದ ನಿರ್ಮಿತಗಳಾಗಿದ್ದ ಭವನಗಳು ದಾವಾಗ್ನಿ ಜ್ವಾಲೆಯಂತೆ ತೇಜೋಭಾಸಮಾನವಾಗಿದ್ದವು.

## ಸತ್ಯಭಾಮಾ ಪ್ರಾಸಾದ

**ಸತ್ಯಭಾಮಾ ಪುನರ್ವೇಶ್ಮ ಯದಾವಸತ ಪಾಂಡುರಮ್ ।**
**ವಿಚಿತ್ರ ಮಣಿ ಸೋಪಾನಂ ತದ್ ವಿದುಃ ಭೋಗವಾನಿವ ॥ 15 ॥**

**ವಿಮಲಾದಿತ್ಯ ವರ್ಣಾಭಿಃ ಪತಾಕಾಭಿರಲಂಕೃತಮ್ ।**
**ವ್ಯಕ್ತ ಸಂಜವನೋದ್ದೇಶೋ ಯಶ್ಚತುರ್ದಿಙ್‌ಮಹಾಧ್ವಜಃ ॥ 16 ॥**

ಸತ್ಯಭಾಮೆಯ ನಿವಾಸ ಸ್ಥಾನವಾದ ಅಂತಃಪುರವು ಶ್ವೇತವರ್ಣದ್ದಾಗಿತ್ತು. ಚಿತ್ರವಿಚಿತ್ರ ಮಣಿಗಳಿಂದ ನಿರ್ಮಿತ ಸೋಪಾನಗಳಿಂದ ಶೋಭಿಸುತ್ತಿತ್ತು. ಸಮಸ್ತಭೋಗ ಸಾಮಗ್ರೀಯುಕ್ತವೂ, ಸೂರ್ಯಪ್ರಕಾಶ ಸದೃಶ ನಿರ್ಮಲ ಪತಾಕೆಗಳಿಂದ ಕಂಗೊಳಿಸುತ್ತಿತ್ತು.

## ಜಾಂಬವತೀ ಪ್ರಾಸಾದ

**ಸ ಚ ಪ್ರಾಸಾದ ಮುಖ್ಯೋಽಥ ಜಾಂಬವತ್ಯಾಃ ವಿಭೂಷಿತಃ ।**
**ಪ್ರಭಯಾಽಭ್ಯಭವತ್ ಸರ್ವಾಂಸ್ತಾನ್ನನ್ಯಾನ್ ಭಾಸ್ಕರೋ ಯಥಾ ॥ 17 ॥**

ಜಾಂಬವತೀದೇವಿಯ ಪ್ರಾಸಾದವು ಪ್ರತಿಕ್ಷಣವೂ ನೂತನ ರೂಪಗಳನ್ನು ತಳೆದು ಪ್ರಕಾಶಿಸುತ್ತಿತ್ತು. ಈ ಪ್ರಾಸಾದದ ನಾಲ್ಕೂ ದಿಕ್ಕುಗಳಲ್ಲಿಯೂ ಮಹಾಧ್ವಜಗಳು ಅನವರತ ಹಾರಾಡುತ್ತಿದ್ದವು.

ಸೂರ್ಯದೇವನು ಅಗ್ನಿ, ಚಂದ್ರ ಗ್ರಹಗಳು, ನಕ್ಷತ್ರ ತಾರಾಮಂಡಲಗಳ ಕಾಂತಿಯನ್ನು ತಿರಸ್ಕರಿಸುವಂತೆ ಜಾಂಬವತಿಯು ಅರಮನೆಯ ಉಳಿದ ನೀಲ, ಭದ್ರಾ, ಮಿತ್ರವಿಂದಾದಿ ಕೃಷ್ಣಭಾಮೆಯರ ಪ್ರಾಸಾದಗಳನ್ನೆಲ್ಲ ಮೀರಿ ಅತಿಶಯವಾಗಿ ಮಿಂಚುತ್ತಿತ್ತು. ಆಗ ತಾನೆ ಉದಯಿಸಿದ ಬಾಲಸೂರ್ಯನಂತೆ ಸುವರ್ಣಮಯವಾಗಿ ಶೋಭಿಸುತ್ತಿತ್ತು.

ರುಗ್ಮಿಣೀ ಹಾಗೂ ಸತ್ಯಭಾಮೆಯರ ಪ್ರಾಸಾದದ ಮಧ್ಯೆ ಜಾಂಬವತೀ ಮನೆಯನ್ನು ವಿಶ್ವಕರ್ಮನು ನಿರ್ಮಿಸಿದ್ದನು. ಈ ಪ್ರಾಸಾದವು ಕೈಲಾಸ ಶಿಖರವನ್ನೆ ಹೋಲುತ್ತಿತ್ತು.

**ಸಾಗರ ಪ್ರತಿಮೋಽತಿಷ್ಠನ್ ಮೇರು ರಿತ್ಯಭಿವಿಶ್ರುತಃ ।**
**ತಸ್ಮಿನ್ ಗಾಂಧಾರ ರಾಜಸ್ಯ ದುಹಿತಾ ಕುಲಶಾಲಿನೀ ॥ 18 ॥**

ನೀಲವಾದ ಸುವರ್ಣಮಣಿಯಂತೆ ಶೋಭಾಯಮಾನವಾದ ಅಂತಃಪುರವು

ಕೃಷ್ಣನ ಮಡದಿಯಾದ ಸಮುದ್ರೋಪಮವಾಗಿದ್ದ ಮೇರು ಎಂಬ ಹೆಸರಿನ ಪ್ರಾಸಾದದಲ್ಲಿ ಗಾಂಧಾರ ರಾಜನ ಪುತ್ರಿಯಾದ ಸತ್ಯೆಯನ್ನು ಇರಿಸಿದ್ದನು. ಇವಳಿಗೆ ಗಾಂಧಾರೀಯೆಂದು, ನಾಗ್ನಜಿತೀ ಸತ್ಯಾ[3]ಯೆಂದು ಹೆಸರಿದೆ.

## ಸುಭೀಮೆಯ ಮನೆ

**ಪದ್ಮಕೂಲ ಇತಿ ಖ್ಯಾತಂ ಪದ್ಮವರ್ಣಂ ಮಹಾಪ್ರಭಮ್ ।**
**ಸುಭೀಮಾಯಾಃ ಮಹಾಕೂಟಂ ವೇಶ್ಮ ಅತಿರುಚಿರಪ್ರಭಮ್ ॥ 19 ॥**

ಶ್ರೀಕೃಷ್ಣ ಮತ್ತೊಬ್ಬ ಪ್ರೇಯಸಿ ಸುಭೀಮೆ. ಕಮಲ ಬಣ್ಣದ್ದಾಗಿದ್ದು ಅತ್ಯಂತ ಕಾಂತಿಯುಕ್ತವಾಗಿದ್ದ ಸುಭೀಮೆಯ ಪ್ರಾಸಾದವು ಮಹಾಶಿಖರವನ್ನು ಹೋಲುತ್ತಿದ್ದು, ಪದ್ಮಕೂಲವೆಂಬ ಹೆಸರಿನಿಂದ ಪ್ರಖ್ಯಾತವಾಗಿತ್ತು.

## ಲಕ್ಷಣಾವಾಸ ಸ್ಥಾನ

**ಸೂರ್ಯಪ್ರಭಸ್ತು ಪ್ರಾಸಾದಃ ಸರ್ವಕಾಮಗುಣೈರ್ಯುತಃ ।**
**ಲಕ್ಷಣಾಯಾಃ ನೃಪಶ್ರೇಷ್ಠ! ನಿರ್ದಿಷ್ಟಃ ಶಾಂರ್ಗಧನ್ವನಾ ॥ 20 ॥**

ಶ್ರೀಕೃಷ್ಣನು ಸೂರ್ಯನ ಕಾಂತಿಗೆ ಸದೃಶವೂ, ಸಕಲವೈಷಯಿಕ ಸಾಮಗ್ರೀಯುಕ್ತವೂ ಆಗಿದ್ದ ದಿವ್ಯಪ್ರಾಸಾದವನ್ನು ಲಕ್ಷಣೆಗೆ[4] ವಾಸಸ್ಥಾನವೆಂದು ನಿರ್ದೇಶಿಸಿದ್ದನು. ಹಸಿರಿನ ಕಾಂತಿಯಿಂದ ಕೂಡಿದ್ದು ವೈಡೂರ್ಯಮಣಿಗಳ

---

3. **ಸತ್ಯಾ :**
ಕೋಸಲ ದೇಶದ ರಾಜ ನಗ್ನಜಿತ್. ಅವನ ಮಗಳು ಸತ್ಯಾ, ನಾಗ್ನಜಿತೀಯೆಂದು ತಂದೆಯಿಂದ ಬಂದ ನಾಮಾಂತರ. ಈ ರಾಜನಲ್ಲಿ ದುರ್ಮದಾಂಧ ದೈತ್ಯರೂಪದ ಗೂಳಿಗಳಿದ್ದವು. ಅವುಗಳನ್ನು ನಿಗ್ರಹಿಸಿದವರಿಗೆ ತನ್ನ ಮಗಳನ್ನು ನೀಡುವುದಾಗಿ ಪ್ರಕಟಿಸಿದ್ದ ರಾಜ. ಕೃಷ್ಣನು ಆತನಲ್ಲಿಗೆ ಹೋಗಿ ದೈತ್ಯರೂಪ ಗೂಳಿಗಳನ್ನು ಕೊಂದು ಹಾಕಿ ಸತ್ಯೆಯನ್ನು ವಿವಾಹವಾದನು. [ಭಾಗ 10/58].
ಈ ಏಳೂ ಎತ್ತುಗಳೂ ಕಾಲನೇಮಿಯ ಪುತ್ರರು. ಕೃಷ್ಣನನ್ನು ಕೊಲ್ಲಲೆಂದೆ ಜನಿಸಿದವರು. ಈ ಹಿಂದೆಯೇ ನೀಲಾಯೆಂಬ ಕುಂಭಕನ ಮಗಳನ್ನು ಶ್ರೀಕೃಷ್ಣನು ವಿವಾಹವಾಗಿದ್ದನು. ಈ ನೀಲೆ ಹಾಗೂ ನಾಗ್ನಜಿತಿಯೂ ಒಬ್ಬಳೇ ಆದ್ದರಿಂದ ನೀಲೆಯಲ್ಲಿ ಪ್ರವೇಶ ಮಾಡಿದಳು. ಹಾಗಾಗಿ
**ಸಾ ದೇಹೇಽಸ್ಯಾಃ ಪ್ರಾವಿಶತ್ ಪೂರ್ವಮೇಷಾ ಯಸ್ಮಾದೇಕಾ ।**
**ದ್ವಿವಿಧಾ ಸಂಪ್ರಜಾತಾ** ॥ – *ತಾ.ನಿ. 20/47*

4. **ಲಕ್ಷಣಾ :**
ಇವಳು ಮದ್ರಾಧಿಪತಿಯ ಮಗಳು. ಲಕ್ಷಣ ಸಂಪನ್ನಳು. ಸುಪರ್ಣನು ಸುಧೆಯನ್ನು ಅಪಹರಿಸಿದಂತೆ ಯಾರ ಬಲವನ್ನೂ ಅಪೇಕ್ಷಿಸದೆ ನಿಯಮ ಪೂರ್ತಿಗೊಳಿಸಿ ಲಕ್ಷಣೆಯನ್ನು ಹೊಂದಿದ.

ಕಾಂತಿಯಂತಿದ್ದು ಸಕಲ ಪ್ರಾಣಿಗಳಿಂದಲೂ ಸುಂದರಪ್ರಾಸಾದವೆಂಬ ಪ್ರಶಂಸೆಗೆ ಪಾತ್ರವಾಗಿದ್ದ ಮತ್ತೊಂದು ಅಂತಃಪುರವು ಮಿತ್ರವಿಂದೆಗೆ[5] ಸೇರಿತ್ತು.

## ಸುವಾರ್ತೆಯ ನಿವಾಸ

**ಸುವಾರ್ತಾಯಾಃ ನಿವಾಸಃ ಸ ಪ್ರಶಸ್ತಃ ಸರ್ವದೈವತೈಃ ।**
**ಯೋಜನಾಯತ ವಿಷ್ಕಂಭಃ ಸರ್ವರತ್ನಮಯಃ ಶುಭಃ ॥ 21 ॥**

ಸುವಾರ್ತೆಯೆಂಬುವಳು ಶ್ರೀಕೃಷ್ಣನ ಮತ್ತೊಬ್ಬ ಮಡದಿಯಾಗಿದ್ದಳು. ಇವಳ ಪ್ರಾಸಾದವು ಅಲ್ಲಿದ್ದ ರಮಣೀಯ ಪ್ರಾಸಾದಗಳಲ್ಲಿಯೇ ಅತ್ಯಂತ ರಮಣೀಯವೂ, ಅಚಲದಂತೆ ಅಚಲವೂ, ಸಮಸ್ತ ದೇವತೆಗಳಿಂದಲೂ ಪ್ರಶಂಸಿತವಾದದ್ದೂ ಆಗಿದ್ದು ಕೇತುಮಂತಯೆಂಬ ನಾಮ ಹೊಂದಿತ್ತು.

## ದೇವರ ಕೋಣೆ ವಿರಜೆ

ಯಾವ ಪ್ರಾಸಾದವು ಅತ್ಯಂತ ಶ್ರೇಷ್ಠವಾಗಿದ್ದಿತೋ, ವಿಶ್ವಕರ್ಮನೆ ಸ್ವತಃ ನಿರ್ಮಿಸಿದ್ದನೋ ಒಂದು ಯೋಜನ ವಿಸ್ತಾರ ಹೊಂದಿದ್ದ ಸರ್ವರತ್ನಾಕರವಾದ, ಪ್ರಭೆಯಿಂದ ಬೆಳಗುತ್ತಿದ್ದ ಅಂತಃಪುರವು 'ವಿರಜಾ' ಎಂಬ ಪ್ರಾಸಾದವು ಶ್ರೀಕೃಷ್ಣನ ಉಪಾಸನಾ ಮಂದಿರವಾಗಿತ್ತು.

**ಸ ಶ್ರೀಮಾನ್ ವಿರಜಾ ನಾಮ ವ್ಯರಾಜತ್ ತತ್ರ ಸಂಪ್ರಭಃ ।**
**ಉಪಾಸನಾಗೃಹಂ ಯತ್ರ ಕೇಶವಸ್ಯ ಮಹಾತ್ಮನಃ ॥ 22 ॥**

ಈ ವಿರಜಾಗೃಹದಲ್ಲಿ ಅನೇಕ ಸುವರ್ಣ ದಂಡದ ಪತಾಕೆಗಳೂ, ಶ್ರೀಕೃಷ್ಣನ ಮನೆಗೆ ಹೋಗಲು ಮಾರ್ಗ ಸೂಚಿ ಧ್ವಜಗಳೂ ಇದ್ದವು. ಶ್ರೀಕೃಷ್ಣನು ಈ ಮನೆಯಲ್ಲಿ ದಿವ್ಯವಾದ ರತ್ನಗಳ ರಾಶಿಯನ್ನೆ ಸಂಗ್ರಹಿಸಿಟ್ಟದ್ದು. 'ವೈಜಯಂತ'ವೆಂಬ ಮಹಾಪರ್ವತವನ್ನು ಇಲ್ಲಿಯೆ ಸ್ಥಾಪಿಸಿದ್ದನು.

ಇಂದ್ರದ್ಯುಮ್ನ ಸರೋವರದ ಹತ್ತಿರ ಹಂಸಕೂಟವೆಂಬ ಪರ್ವತವಿದ್ದು, ಅದು ಆರು ತಾಳೆಗಿಡಗಳಷ್ಟು ಎತ್ತರವಾಗಿತ್ತು. ಅಗಲವಾದರೂ ಅರ್ಧ ಯೋಜನವಿತ್ತು. ವಿಶ್ವಕರ್ಮನು ಸರ್ವಪ್ರಾಣಿಗಳೂ ನೋಡುತ್ತಿದ್ದರೂ ಲೆಕ್ಕಿಸದೆ ಆ ಪರ್ವತವನ್ನೆ ಕಿತ್ತು ತಂದು ದ್ವಾರಕೆಯಲ್ಲಿಟ್ಟನು.

---

5. ಮಿತ್ರವಿಂದಾ : ಅವಂತೀ ದೇಶದ ಅರಸು ಜಯಸೇನ. ಇವನು ವಸುದೇವನ ತಂಗಿಯಾದ ರಾಜಾಧಿದೇವಿಯನ್ನು ಪರಿಣಯವಾಡಿದ್ದನು. ಮಿತ್ರವಿಂದೆಯ ಅಣ್ಣಂದಿರು ವಿಂದಾನುವಿಂದರು. ಇವರು ದುರ್ಯೋಧನನಿಗೆ ತನ್ನ ತಂಗಿಯನ್ನು ನೀಡಬೇಕೆಂದಿದ್ದರು. ಸ್ವಯಂವರದಲ್ಲಿ ಬಲಾತ್ಕಾರವಾಗಿ ಅಪಹರಿಸಿ ತಂದನು. ಇವಳಲ್ಲಿ ವೃಕನೇ ಮೊದಲಾದ ಹತ್ತು ಮಕ್ಕಳಾದರು. *–ಭಾಗ. 10/59*

ಅನೇಕ ಔಷಧಿಗಳಿಗೆ ಜನ್ಮಭೂಮಿಯಾದ ಮೇರುವಿನ ಶಿಖರವನ್ನೂ ಕೃಷ್ಣ ಪ್ರೀತಿಗಾಗಿ ದ್ವಾರಕೆಯಲ್ಲಿಟ್ಟಿದ್ದನು.

ಪಾರಿಜಾತ ವೃಕ್ಷವನ್ನಾದರೂ ಸ್ವರ್ಗದಿಂದ ಶ್ರೀಕೃಷ್ಣನೇ ತಂದಿಟ್ಟಿದ್ದನು. ಆ ವೃಕ್ಷವು ಕಮಲಗಳಿಂದ ಪೂಜಿಸಲ್ಪಡುತ್ತಿದ್ದು ಸುವರ್ಣ ವಿಮಾನಗಳಿಂದ ರಕ್ಷಿಸಲ್ಪಡುತ್ತಿತ್ತು. ದ್ವಾರಕೆಯಲ್ಲಿ ಅನೇಕ ಪುಷ್ಕರಿಣಿಗಳೂ, ರತ್ನಮಯವಾದ ಕಮಲಗಳೂ, ವಿಶ್ವಕರ್ಮನ ಕುಸುರಿ ಕೆಲಸವಾಗಿತ್ತು. ದೇವ ಬಡಗಿಯು ಹಿಮಾಲಯದಲ್ಲಿದ್ದ ವೃಕ್ಷಗಳನ್ನು, ತಾಲ, ಕದಂಬ, ಶತಶಾಖಾ ವೃಕ್ಷಗಳನ್ನು ತಂದು ದ್ವಾರಕೆಯಲ್ಲಿ ನೆಟ್ಟಿದ್ದನು.

**ಸಮಕೂಲ ಜಲೋಪೇತಾಃ ಶಾಂತಶರ್ಕರ ವಾಲುಕಾಃ ।**
**ತಸ್ಮಿನ್ ಪುರವರೇ ನದ್ಯಃ ಪ್ರಸನ್ನ ಸಲಿಲಾ ಹ್ರದಾಃ ॥ 23 ॥**

ದ್ವಾರಕೆಯಲ್ಲಿ ಪ್ರವಹಿಸುತ್ತಿದ್ದ ನದಿಗಳು ಸುಂದರವೂ ಸಮತಟ್ಟಾದ ತೀರ ಪ್ರದೇಶಗಳನ್ನೂ ಸ್ವಚ್ಛ ಜಲವನ್ನೂ ಹೊಂದಿದ್ದವು. ನದಿಯ ದಂಡೆಯಲ್ಲಿದ್ದ ಸಣ್ಣ ಸಣ್ಣ ಕಲ್ಲುಗಳೂ ಹಾಗೂ ಮರಳುಗಳು ನೀರಿನ ಒಳಗಿದ್ದು ಯಾರಿಗೂ ದುಃಖದಾಯಕವಾಗಿದ್ದಿಲ್ಲ.

ಕೆಲವು ನದಿಗಳು ಕಲ್ಲು– ಮರಳುಗಳೂ ಸಹ ಸುವರ್ಣಮಯವಾಗಿದ್ದವು. ದ್ವಾರಕೆಯಲ್ಲಿರುವ ವೃಕ್ಷಗಳಲ್ಲಿ ನವಿಲು, ಕೋಗಿಲೆಗಳಿಂದ ಶೋಭಿಸುತ್ತಿತ್ತು.

**ತತ್ರೈವ ಗಜಯೂಥಾನಿ ಪುರೇ ಗೋಮಹಿಷಾಸ್ತಥಾ ।**
**ನಿವಾಸಶ್ಚ ಕೃತಸ್ತತ್ರ ವರಾಹ ಮೃಗ ಪಕ್ಷಿಭಿಃ ॥ 24 ॥**

ಅಲ್ಲಿ ಆನೆಗಳ ಗುಂಪುಗಳು ಹಂದಿಗಳು, ಎಮ್ಮೆಗಳು, ಗೋವುಗಳು ಅಪಾರ ಸಂಖ್ಯೆಯಲ್ಲಿದ್ದವು. ಇವುಗಳ ರಕ್ಷಣೆಗಾಗಿ ಪ್ರಾಕಾರವನ್ನು ನೂರು ಮೊಳಗಳಷ್ಟು ಎತ್ತರವಾಗಿದ್ದು ಅಭೇದ್ಯವಾಗಿದ್ದವು.

ಹೀಗೆ ವಿಶ್ವಕರ್ಮನು ವಿಷ್ಣುಪ್ರೀತ್ಯರ್ಥವಾಗಿಯೇ ಚಿತ್ರವಿಚಿತ್ರ ಪರ್ವತಗಳು, ಸರೋವರ ನದಿಗಳು ಅನೇಕ ವೃಕ್ಷಗಳು, ಪಕ್ಷಿಗಳು, ಪ್ರಾಕಾರಗಳು, ವಿಹಾರ ಪರ್ವತಗಳನ್ನೂ ನಿರ್ಮಿಸಿದ್ದನು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ**
**ದ್ವಾರಕಾ ವರ್ಣನೆ ಎಂಬಲ್ಲಿ**
**ತೊಂಬತ್ತೆಂಟನೆಯ ಅಧ್ಯಾಯ ಸಮಾಪ್ತಿ**

# ಅಥ ನವನವತಿತಮೋಽಧ್ಯಾಯಃ

ಏವಮಾಲೋಕಯಾನಃ ಸ ದ್ವಾರಕಾಂ ವೃಷಭೇಕ್ಷಣಃ ।
ಅಪಶ್ಯತ್ ಸ್ವಗೃಹಂ ಕೃಷ್ಣಃ ಪ್ರಾಸಾದಶತಶೋಭಿತಮ್ ॥ 1 ॥
ಮಣಿಸ್ತಂಭಸಹಸ್ರಾಣಾಂ ಅಯುತೈಃ ವಿವೃತಂ ಶತೈಃ ।
ತೋರಣೈಃ ಜ್ವಲದ ಪ್ರಖ್ಯೈಃ ಮಣಿವಿದ್ರುಮರಾಜಿತೈಃ ।
ಪ್ರಾಸಾದಸ್ತತ್ರ ಸುಮಹಾನ್ ಕೃಷ್ಣೋಪಸ್ಥಾನಿಕೋಽಭವತ್ ॥ 2 ॥

ವೈಶಂಪಾಯನರು ಜನಮೇಜಯನಿಗೆ ರಾಜನೇ! ವೃಷಭನೇತ್ರನಾದ ಪುರುಷರ್ಷಭನಾದ ಶ್ರೀಕೃಷ್ಣನು ದೇವಶಿಲ್ಪಿಯಿಂದ ವಿಚಿತ್ರ ರೀತಿಯಲ್ಲಿ ರಚಿತವಾಗಿದ್ದ ದ್ವಾರಕಾಪುರಿಯನ್ನು ನಿರೀಕ್ಷಿಸುತ್ತ, ಶತಪ್ರಾಸಾದ ಯುಕ್ತವಾಗಿದ್ದ ತನ್ನ ಅರಮನೆಯನ್ನು ನೋಡಿದನು.

ಅದೊಂದು ವಿಶಾಲವಾದ ಅರಮನೆ. ಸಾವಿರಾರು ಮಣಿಸ್ತಂಭಗಳು ಹತ್ತು ಸಾವಿರ ಮಣಿ ನಿರ್ಮಿತ ಸ್ತಂಭಗಳಿಂದ ಶೋಭಾಯಮಾನವಾಗಿತ್ತು. ಸ್ತಂಭಗಳ ಒಳಭಾಗಗಳೂ ಕೂಡ ಹವಳ ಮುತ್ತು ರಜತಗಳಿಂದ ರಚಿತವಾಗಿದ್ದು ಅಗ್ನಿಯಂತೆ ಜಾಜ್ವಲ್ಯಮಾನವಾಗಿತ್ತು.

ಆ ಪ್ರಾಸಾದದ ಕೆಲವೆಡೆ ಸುವರ್ಣನಿರ್ಮಿತವಾಗಿದ್ದು ಪ್ರಕಾಶಿಸುವ ಜಗುಲಿಗಳಿದ್ದವು *[ಚಿತ್ರ ಕಾಂಚನ ವೇದಿಕೈಃ].*

ಇಂತಹ ಪರಮಾದ್ಭುತವೂ ರಮ್ಯವೂ ಆದ ಪ್ರಾಸಾದವು ಶ್ರೀಕೃಷ್ಣನ ಪ್ರಾಸಾದದಲ್ಲಿ ಅವನ ಉಪಾಸನಾ ಮಂದಿರವಿತ್ತು.

ಇದರಲ್ಲಿ ಸ್ಫಟಿಕಮಣಿ ನಿರ್ಮಿತ ಸ್ತಂಭಗಳಿದ್ದು ಅರಮನೆಯನ್ನೆ ಬೆಳಗಿಸುತ್ತಿತ್ತು. ಪ್ರಾಸಾದದಲ್ಲಿರುವ ಎಲ್ಲಾ ವಸ್ತುಗಳೂ ಸುವರ್ಣಮಯವೆ ಆಗಿದ್ದಿತು.

ಸ್ವಚ್ಛ ನೀರಿನ ಕೊಳಗಳಿದ್ದು ಕಮಲಗಳಿಂದ ತುಂಬಿದ್ದವು. ರಕ್ತವರ್ಣದ ಸೌಗಂಧಿಕ ಕಮಲಗಳೂ ಇದ್ದವು.

**ಪದ್ಮಾಕುಲಜಲೋಪೇತಾ ರಕ್ತಸೌಗಂಧಿಕೋತ್ಪಲಾಃ ।**
**ಮಣಿಹೇಮನಿಭಾಶ್ಚಿತ್ರಾಃ ರತ್ನಸೋಪಾನಭೂಷಿತಾಃ ॥ 2 ॥**

ಸರೋವರವು ಮಣಿ ಹಾಗೂ ಚಿನ್ನದ ಶೋಭೆಯಿಂದ ಶೋಭಿಸುತಿತ್ತು. ಅದರ ಮೆಟ್ಟಿಲುಗಳೂ ಸಹ ರತ್ನಾಲಂಕೃತವಾಗಿದ್ದವು.

ಮದಭರಿತ ನವಿಲುಗಳು, ಪಂಚಮಸ್ವರದ ಕೋಗಿಲೆಗಳು ಸರೋವರ ತೀರದಲ್ಲಿ ವಿಹರಿಸುತ್ತಿದ್ದವು *[ಮತ್ತಬರ್ಹಿಣಜುಷ್ಟಾಃ ಕೋಕಿಲೈಶ್ಚ].*

**ವಿಶ್ವಕರ್ಮಕೃತಃ ಶೈಲಃ ಪ್ರಾಕಾರಸ್ತಸ್ಯ ವೇಶ್ಮನಃ ।**
**ವ್ಯಕ್ತಕಿಷ್ಕುಶತೋತ್ಸೇಧಃ ಪರಿಖಾ ಪರಿವೇಷ್ಟಿತಃ ।**
**ತದ್ ಗೃಹಂ ವೃಷ್ಣಿ ಸಿಂಹಸ್ಯ ನಿರ್ಮಿತಂ ವಿಶ್ವಕರ್ಮಣಾ ॥ 4 ॥**

ಶ್ರೀಕೃಷ್ಣನ ಅರಮನೆಗೆ ವಿಶ್ವಕರ್ಮನು ಪರ್ವತವನ್ನೇ ಪ್ರಾಕಾರವಾಗಿ ನಿರ್ಮಿಸಿದ್ದನು. ನೂರು ಬಾಹುಗಳಷ್ಟು ಎತ್ತರವಾಗಿತ್ತು. ಸುತ್ತಲೂ ಜಲದುರ್ಗವೇರ್ಪಡಿಸಿದ್ದ ಪ್ರವೇಶ ದುರ್ಭರವಾಗಿತ್ತು. ಇಂತಹ ಆಶ್ಚರ್ಯ ಸೌಧವನ್ನು ಶ್ರೀಕೃಷ್ಣನಿಗಾಗಿ ನಿರ್ಮಿಸಿದ್ದನು.

**ಮಹೇಂದ್ರ ಸದೃಸಮ ವೇಶ್ಮ ಸಮಂತಾದರ್ಧ ಯೋಜನಮ್ ।**
**ತತಸ್ತಂ ಪಾಂಡುರಂ ಶೌರಿಃ ಮೂರ್ಧ್ನಿ ತಿಷ್ಠನ್ ಗುರುತ್ಮತಃ ॥ 5 ॥**
**ಪ್ರೀತಃ ಶಂಖಮುಪಾಧ್ಮಾಸೀದ್ ದ್ವಿಷತಾಂ ರೋಮಹರ್ಷಣಮ್ ॥ 6 ॥**

ಶ್ರೀಕೃಷ್ಣನ ಅರಮನೆಯು ಅರ್ಧಯೋಜನೆ ವಿಸ್ತಾರವಾಗಿದ್ದು ಇಂದ್ರದೇವನ ಅರಮನೆಯನ್ನೆ ಹೋಲುತ್ತಿತ್ತು. ಇಂತಹ ಅರಮನೆ ನೋಡಿದ ಕೂಡಲೇ ಪರಮಸಂತುಷ್ಠನಾದ ಕೃಷ್ಣ ತನ್ನ ಪಾಂಚಜನ್ಯಶಂಖವನ್ನೂದಿದನು.

ಶಂಖಧ್ವನಿಯಿಂದಾಗಿ ಸಮುದ್ರವ ಉಲ್ಲೋಕಲ್ಲೋಲವಾಯಿತು. ಶತ್ರುಗಳ ಹೃದಯ ಭೀತಿಯಿಂದ ನಡುಗಿತು. ಭಯದ ಕುರುಹಾದ ಕೂದಲುಗಳು ನಿಮಿರಿ ನಿಂತವು.

**ಪಾಂಚಜನ್ಯಸ್ಯ ನಿರ್ಘೋಷಂ ಸಂಶ್ರುತ್ಯ ಕುಕುರಾಂಧಕಾಃ ।**
**ವಿಶೋಕಾಃ ಸಮಪದ್ಯಂತ ಗರುಡಸ್ಯ ಚ ದರ್ಶನಾತ್ ॥ 7 ॥**

ಇತ್ತ ಶ್ರೀಕೃಷ್ಣನು ತಾನು ಬಂದಿರುವೆನೆಂಬ ಸೂಚಕವಾದ ಶಂಖಧ್ವನಿ ಕೇಳುತ್ತಲೇ ಕುಕುರಾಂಧಕ ವಂಶೀಯರೆಲ್ಲ ನಿರ್ಭಯರಾದರು.

**ಶಂಖಚಕ್ರ ಗದಾಪಾಣಿಂ ಗರುಡಸ್ಯೋಪರಿ ಸ್ಥಿತಮ್ ।**
**ದೃಷ್ಟ್ವಾ ಜಹೃಷಿರೇ ಪೌರಾಃ ಭಾಸ್ಕರೋಮತೇಜಸಮ್ ॥ 8 ॥**

ಆರೂಢ ಗರುಡಸ್ಕಂಧನೂ, ಶಂಖಚಕ್ರ ಗದಾಧಾರಿಯೂ, ಸೂರ್ಯ ತೇಜಸ್ವಿಯೂ ಆದ ಶ್ರೀಕೃಷ್ಣನನ್ನು ನೋಡಿ ಪರಮಾನಂದ ಹೊಂದಿದರು.

**ವಾಸುದೇವಂ ಪುರಸ್ಕೃತ್ಯ ಶಂಖ ತೂರ್ಯರವೈಃ ಸಹ ।**
**ಉಗ್ರಸೇನೋ ಯಯೌ ರಾಜಾ ವಸುದೇವ ನಿಕೇತನಮ್ ॥ 9 ॥**

ಶ್ರೀಕೃಷ್ಣನ ಶಂಖನಾದ ಹಾಗೂ ದರ್ಶನಾದಿಗಳಿಂದ ಆನಂದತುಂದಿಲರಾದ ಯಾದವರೆಲ್ಲರೂ ಅದಕ್ಕೆ ಪ್ರತಿಯಾಗಿ ಅನೇಕ ತೂರ್ಯ ಭೇರೀ ನಿನಾದಗಳಿಂದ ಮದುಸೂಧನನನ್ನು ಸ್ವಾಗತಿಸಿದರು.

ರಾಜನಾದ ಉಗ್ರಸೇನನು ಶ್ರೀಕೃಷ್ಣನನ್ನು ಸ್ವಾಗತಿಸಿ ಅವನನ್ನು ಮುಂದೆ ಮಾಡಿಕೊಂಡು ವಸುದೇವನ ಮನೆಗೆ ಹೋದನು.

ಅಮಾನವ ನವಾಕೃತಿಯ ರೂಪನಂತಿದ್ದ ತನ್ನ ಪುತ್ರನನ್ನು ನೋಡಿದ ದೇವಕಿಯು ಪರಮಮುದ ಹೊಂದಿದಳು. ರೋಹಿಣೀ, ಯಶೋದೆಯರು, ಉಗ್ರಸೇನನ ಪತ್ನಿಯರೂ ಕೃಷ್ಣನನ್ನು ಭಕ್ತ್ಯಾದರದಿಂದ ಸ್ವಾಗತಿಸಿದರು.

**ತತಃ ಕೃಷ್ಣಃ ಸುಪರ್ಣೇನ ಸ್ವಂ ನಿವೇಶನಮಭ್ಯಗಾತ್ ॥ 10 ॥**

ನಂತರ ಶ್ರೀಕೃಷ್ಣನು ತನ್ನ ಅರಮನೆ ಪ್ರವೇಶಿಸಿದನು. ಇಂದ್ರಾದಿ ದೇವತೆಗಳೂ ಸಹ ಯಾರ ಅಧೀನರಾಗಿ ತಮ್ಮ ತ್ರಿಲೋಕ ರಕ್ಷಣಾಭಾರ ಹೊಂದಿರುವರೊ ಅಂತಹ ಸ್ವಾಮಿಯು ತನ್ನ ಅರಮನೆಗೆ ಪ್ರವೇಶಿಸಿದನು.

ಗರುಡನ ಸ್ಕಂಧದಿಂದ ಅವತರಿಸಿದ ಕೃಷ್ಣನು ತನ್ನೊಂದಿಗೆ ಬಂದ ಯಾದವರನ್ನೆಲ್ಲ ಯಥಾಯೋಗ್ಯ ಸತ್ಕರಿಸಿದನು.

ಅದಕ್ಕೆ ಪ್ರತಿಯಾಗಿ ಬಲರಾಮ – ಉಗ್ರಸೇನ – ಗದಾಕ್ರೂರ – ಪ್ರದ್ಯುಮ್ನರಿಂದ ನೀಡಲ್ಪಟ್ಟ ಗೌರವವನ್ನು ಸ್ವೀಕರಿಸಿ ಮಣಿಪರ್ವತದೊಂದಿಗೆ ಅರಮನೆಯನ್ನು ಪ್ರವೇಶಿಸಿದನು. [ಇದಲ್ಲವೆ ನಿಜವಾದ ಅರ್ಥದಲ್ಲಿ ಗೃಹಪ್ರವೇಶವೆಂದರೆ].

ರುಗ್ಮಿಣೀತನಯನಾದ ಪ್ರದ್ಯುಮ್ನನಾದರೂ ಇಂದ್ರನಿಗೆ ಅತ್ಯಂತ ಪ್ರೀತಿಪಾತ್ರವಾದ ಮಣಿಪರ್ವತ ಹಾಗೂ ಪಾರಿಜಾತವನ್ನೂ ಶ್ರೀಕೃಷ್ಣನ ಮನೆಯಲ್ಲಿಟ್ಟನು.

## ಪಾರಿಜಾತ ಪ್ರಭಾವ[1]

**ತೇಽನ್ಯೋನ್ಯಂ ದದೃಶುರ್ವೀರಾ ದೇಹಬಂಧಾನಮಾನುಷಾನ್ ।**
**ಪಾರಿಜಾತ ಪ್ರಭಾವೇಣ ತತೋ ಮುಮುದಿರೇ ಜನಾಃ ॥ 11 ॥**

ದ್ವಾರಕೆಯಲ್ಲಿರುವ ಯದುವೀರರು ಪಾರಿಜಾತವೃಕ್ಷದ ಪ್ರಭಾವದಿಂದಾಗಿ ತಮ್ಮಲ್ಲಿ ಮಾನುಷಾತೀತ ಸಂಬಂಧವುಂಟಾಗಿರುವುದನ್ನು ಕಂಡು ಬಹು ಸಂತೋಷಪಟ್ಟರು.

ಶ್ರೀಕೃಷ್ಣನು ಯಾದವರೊಂದಿಗೆ ತನ್ನ ಅರಮನೆ ಪ್ರವೇಶಿಸಿ, ಶಿಖರದಿಂದ ಕೂಡಿದ್ದ ಮಣಿಪರ್ವತವನ್ನು ಅಂತಃಪುರದ ಮಧ್ಯದಲ್ಲಿಟ್ಟು, ವೃಕ್ಷಶ್ರೇಷ್ಠವಾದ ಪಾರಿಜಾತವೃಕ್ಷವನ್ನು ತನಗೆ ಇಷ್ಟವಾದ ಸ್ಥಳದಲ್ಲಿ ಸ್ಥಾಪಿಸಿದನು.

**ತಂ ಚ ದಿವ್ಯಂ ದ್ರುಮಶ್ರೇಷ್ಠಂ ಇಷ್ಟೇ ದೇಶೇ ನ್ಯವೇಶಯತ್ ।**
**ತಾಃ ಸ್ತ್ರೀಯಃ ಪೂಜಯಾಮಾಸ ಸಂಹೃತಾಃ ನರಕೇಣ ಯಾಃ ॥ 12 ॥**
**ವಸ್ತ್ರೈರಾಭರಣೈಃ ದಿವ್ಯೈಃ ದಾಸೀಭಿಃ ಧನಸಂಚಯೈ ।**
**ಹಾರೈಃ ಚಂದ್ರಾಂಶು ಸಂಕಾಶೈಃ ಮಣಿಭಿಶ್ಚ ಮಹಾಪ್ರಭೈಃ ॥ 13 ॥**

ನಂತರ ಶ್ರೀಕೃಷ್ಣನು ಸಕಲ ಬಂಧುಬಾಂಧವರನ್ನು ತಮ್ಮ ತಮ್ಮ ಮನೆಗೆ

---

1. **ಪಾರಿಜಾತ ಪ್ರಭಾವ :**
ಪಾರಿಜಾತವನ್ನು ಭಾಗವತ ಪ್ರಕಾರ ಕೃಷ್ಣ ಒಂದೇ ಬಾರಿ ತಂದಿದ್ದು. ಹರಿವಂಶದಲ್ಲಿ ಹಾಗೂ ತಾತ್ಪರ್ಯ ನಿರ್ಣಯದಲ್ಲಿ ಎರಡು ಬಾರಿ ಚಿತ್ರಿತವಾಗಿದೆ. ಪ್ರಥಮಬಾರಿಗೆ ಅದಿತಿಗೆ ಕುಂಡಲ ನೀಡಿ ಇಂದ್ರನ ಅನುಮತಿಯಿಂದಲೇ ಪಾರಿಜಾತ ತಂದಿದ್ದ. ಮತ್ತೊಮ್ಮೆ ಯುದ್ಧ ಮಾಡಿ ತಂದು ಸತ್ಯಭಾಮೆಯ ಮನೆಯಂಗಳದಲ್ಲಿರಿಸಿದ. ಈ ವೃಕ್ಷ ದರ್ಶನ ಮಾತ್ರದಿಂದಲೇ ಮುದುಕರು ಯುವಕರಾದರು. ಇದರ ಸುವಾಸನೆ ಮಾತ್ರದಿಂದ ಅಂಧರು ದಿವ್ಯದೃಷ್ಟಿ ಹೊಂದಿದರು. ರೋಗ ದೂರವಾದವು. ವೃಕ್ಷದ ಬಳಿ ಬಂದವರಿಗೆ ನಾನಾ ವಿಧವಾದ ದಿವ್ಯವಾದ ಸಂಗೀತ ಕೇಳಿಬರುತ್ತಿತ್ತು. ಇದರಿಂದ ಯಾರಿಗೆ ಏನು ಈಪ್ಸಿತವೊ ಅವೆಲ್ಲ ಹಸ್ತಗತವಾದವು. ಭೂಮಿಯಲ್ಲಿಯೇ ಸ್ವರ್ಗಸುಖ ಪಡೆದರು.
ಈ ವೃಕ್ಷ ಚಿಕ್ಕ ಗಿಡವಾಗಿಯೂ ದೊಡ್ಡ ಮರವಾಗಿಯೂ ಆಗುತ್ತಿತ್ತು. ಇಡೀ ಹನ್ನೆರಡು ಯೋಜನ ಉದ್ದದ ದ್ವಾರಕೆಯನ್ನ ತನ್ನ ಛಾಯೆಯನ್ನು ನೀಡಿತ್ತು. ಇದರ ನೆರಳಿನಲ್ಲಿ ಕೂತವರಿಗೆ ಹಿಂದಿನ ಜನ್ಮದ ಸ್ಮರಣೆ ಬರುತ್ತಿತ್ತು.

ಹೋಗಲು ಅನುಮತಿ ನೀಡಿ, ನರಕಾಸುರನು ಅಪಹರಿಸಿದ್ದು ತನ್ನಿಂದ ಮೋಚನಗೊಂಡಿದ್ದ ಸ್ತ್ರೀಯರನ್ನು, ಅನೇಕ ವಸ್ತ್ರಾಭರಣ ದಾನೇಗಣ, ಅಪಾರ ಧನರಾಶಿ, ಚಂದ್ರಕಾಂತಿಯ ಹಾರಗಳಂದಲೂ ಸಮಾದರ ಮಾಡಿದನು.

**ಪೂರ್ವಮಭ್ಯರ್ಚಿತಾಶ್ಚೈವ ವಸುದೇವನತಾಃ ಸ್ತ್ರಿಯಃ ॥ 14 ॥**

ಈ ಸ್ತ್ರೀಯರೆಲ್ಲರೂ ಈ ಮೊದಲೇ ವಸುದೇವ, ದೇವಕಿ, ರೋಹಿಣಿ, ರೇವತೀ, ಆಹುಕರಿಂದ ಸಮಾದರ ಹೊಂದಿದ್ದರು.

**ಸತ್ಯಭಾಮಾ ಉತ್ತಮಾ ಸ್ತ್ರೀಣಾಂ ಸೌಭಾಗ್ಯೇನಾಭವತ್ ತದಾ ।**
**ಕುಟುಂಬಸ್ಯೇಶ್ವರೀ ತ್ವಾಸೀದ್ ರುಕ್ಮಿಣೀ ಭೀಷ್ಮಕಾತ್ಮಜಾ ॥ 15 ॥**

ಈ ಸಮಯದಲ್ಲಿ ಸೌಭಾಗ್ಯ ದೃಷ್ಟಿಯಿಂದ ಸತ್ಯಭಾಮೆಯೇ ಇತರ ಸ್ತ್ರೀಯರಿಗಿಂತ ಉತ್ತಮಳೆನಿಸಿದಳು. ಲಕ್ಷ್ಮಿಯ ಮತ್ತೊಂದು ರೂಪವೆನಿಸಿದ ರುಗ್ಮಿಣಿಯಾದರೂ ಇಡೀ ತನ್ನ ಕುಟುಂಬಕ್ಕೆ ಸ್ವಾಮಿನಿಯಾಗಿದ್ದಳು.

ಶ್ರೀಕೃಷ್ಣನು ತನ್ನನ್ನು ವರಿಸಿದ ಹದಿನಾರು ಸಾವಿರದ ನೂರೆಂಟು ಮಂದಿ ಪತ್ನಿಯರಿಗೂ ಯಥಾಯೋಗ್ಯ ವಾಸಗೃಹವನ್ನು, ಪ್ರಾಸಾದಶಿಖರವನ್ನೂ ಪುಷ್ಕಳವಾದ ಗೃಹೋಪಕರಣಗಳನ್ನೂ ಒದಗಿಸಿ ನೀಡಿದ್ದನು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ದ್ವಾರಕೆಯ ಅರಮನೆಯ ಪ್ರವೇಶ ಎಂಬಲ್ಲಿ
ತೊಂಬತ್ತೊಂಬತ್ತನೆಯ ಅಧ್ಯಾಯ ಸಮಾಪ್ತಿ

ವಿಷ್ಣುಪರ್ವ **100** ವಿಷ್ಣುಪರ್ವ

# ಅಥ ಶತತಮೋಽಧ್ಯಾಯಃ

## ಯದುವೀರರ ಸಮ್ಮಾನ

**ತತಃ ಸಂಪೂಜ್ಯ ಗರುಡಂ ವಾಸುದೇವೋಽನುಮಾನ್ಯ ಚ ।**
**ಸಖಿವಚ್ಚೋಪಗೃಹ್ಯೈನ ಮನುಜಜ್ಞೇ ಗೃಹಂ ಪ್ರತಿ ॥ 1 ॥**

ಜನಮೇಜಯನೇ ಕೇಳು – ಶ್ರೀಕೃಷ್ಣನು ಗರುಡನನ್ನು ಗೌರವ ಸತ್ಕಾರಗಳನ್ನು ಮಿತ್ರನಂತೆ ಮಾಡಿ ಅತ್ಯಂತ ಪ್ರೀತಿಯಿಂದ ಅವನನ್ನು ಕಳುಹಿಸಿಕೊಟ್ಟನು.

**ಸೋಽನುಜ್ಞಾತಃ ಹಿ ಸತ್ಕೃತ್ಯ ಪ್ರಣಮ್ಯ ಚ ಜನಾರ್ದನಮ್ ।**
**ಊರ್ಧ್ವಮಾಚಕ್ರಮೇ ಪಕ್ಷೀ ಯಥೇಷ್ಟಂ ಗಗನೇಚರಃ ॥ 2 ॥**

ಗಗನ ಸಂಚಾರಿಯಾದ ಗರುಡನು ಕೃಷ್ಣನಿಂದ ಅನುಜ್ಞಾತನಾಗಿ ಅವನನ್ನು ನಮಸ್ಕರಿಸಿ ಆಕಾಶದ ಕಡೆ ಹಾರಿ ಹೋದನು.

ಹಾರುವಾಗ ತನ್ನ ಪಕ್ಷದ ಬಡಿತದಿಂದ ಮಕರಾಲಯವನ್ನೆ ಅಲ್ಲೋಲ ಕಲ್ಲೋಲ ಮಾಡಿ 'ನನ್ನ ಅವಶ್ಯಕತೆ ಇದ್ದಾಗ ಪುನಃ ಬರುವೆ' *[ಕೃತ್ಯಕಾಲೇ ಉಪಸ್ಥಾಸ್ಯೇ]* ಎಂದು ಹೇಳಿ ಹೊರಟು ಹೋದನು.

**ಕೃಷ್ಣೋ ದದರ್ಶ ಪಿತರಂ ವೃದ್ಧಮಾನಕ ದುಂದುಭಿಮ್ ॥ 3 ॥**

ಗರುಡನನ್ನು ಬೀಳ್ಕೊಟ್ಟು ವೃದ್ಧನಾದ ವಸುದೇವನನ್ನು ನೋಡಿದನು. ಹಾಗೆ ರಾಜ ಉಗ್ರಸೇನ, ಬಲರಾಮ, ಸಾತ್ಯಕಿ, ಕಾಶೀರಾಜ, ಸಾಂದೀಪಿನೀಗಳು, ಬ್ರಹ್ಮಗಾರ್ಗ್ಯ ಮುನಿಗಳನ್ನೂ ಭೇಟಿ ಮಾಡಿದನು. ಭೋಜಾಂಧಕ ವೃಷ್ಣಿಗಳೆಲ್ಲರಿಗೆ ಶ್ರೀಕೃಷ್ಣನು ಯೋಗ್ಯತಾನುಸಾರಿಯಾಗಿ ತಾನು ಗೆದ್ದು ತಂದಿದ್ದ ರತ್ನರಾಶಿಗಳಿಂದ ಸತ್ಕರಿಸಿದನು.

ರತ್ನಪ್ರವೇಕೈಃ ದಾಶಾರ್ಹಾನ್ ವೀರ್ಯಲಬ್ಧೈಃ ತಥಾಽರ್ಚಯತ್ ॥ 4 ॥

ಬ್ರಾಹ್ಮಣ ದ್ವೇಷಿಗಳು ಹತರಾದರು, ವೃಷ್ಣಿ ಅಂಧಕ ವೀರರು ವಿಜಯಗಳಾದರು. ಈ ಯುದ್ಧದಲ್ಲಿ ಯಾವುದೇ ರೀತಿಯ ಸಣ್ಣ ಗಾಯವೂ ಇಲ್ಲದೆ ಶ್ರೀಕೃಷ್ಣನು ಯುದ್ಧದಿಂದ ಮರಳಿ ಬಂದಿರುವನು ಎಂದು ಡಂಗುರ ಹೊಡೆಯುವ ಪರಿಚಾರಕನು ಘೋಷಿಸಿದನು.

## ಯಾದವರಿಗೆ ಸನ್ಮಾನ

ಹತಾಃ ಬ್ರಹ್ಮದ್ವಿಷಃ ಸರ್ವೇ ಜಯಂತ್ಯಂಧಕ ವೃಷ್ಣಯಃ ।
ರಣಾತ್ ಪ್ರತಿನಿವೃತ್ತೋಽಯಮಕ್ಷತೋ ಮಧುಸೂದನಃ ॥ 5 ॥

ವಿನಯಶೀಲ ಶ್ರೀಕೃಷ್ಣನು ವಿದ್ಯಾಗುರುಗಳದ ಸಾಂದೀಪಿನೀ ಆಚಾರ್ಯರ ಬಳಿ ಸಾರಿ, ನಮಸ್ಕರಿಸಿ ಆಶೀರ್ವಾದ ಹೊಂದಿ, ಮರ್ತ್ಯರಿಗೆ ಶಿಕ್ಷಣ ನೀಡಿದನು. ನಂತರ ಬಲರಾಮನೊಂದಿಗೆ ತಂದೆಗೂ ನಮಸ್ಕರಿಸಿದನು. ವಸುದೇವನಿಗೆ ಆನಂದಭಾಷ್ಪ ಸುರಿದು ಹೃದಯವು ಆನಂದ ಸಮುದ್ರದಲ್ಲಿ ಮುಳುಗಿತು.

ತಥಾಶ್ರುಪರಿಪೂರ್ಣಾಕ್ಷ ಮಾನಂದಾಗತಚೇತಸಮ್ ।
ವವಂದೇ ಸಹ ರಾಮೇಣ ಪಿತರಂ ವಾಸವಾನುಜಃ ॥ 6 ॥

ನಂತರ ತಂದೆಯಾದೇಶ ಪಡೆದು ಯಾದವರೆನ್ನೆಲ್ಲ ಭೇಟಿ ಮಾಡಿ ಅವರನ್ನು ಯಥಾಯೋಗ್ಯ ಸತ್ಕರಿಸಿದನು.

ನಂತರ ದಾಶಾರ್ಹ ವಂಶದವರನ್ನೆಲ್ಲ ಆಹ್ವಾನಿಸಿದಾಗ ಅವರೆಲ್ಲರೂ ಬಂದರು. ಸಭಾಮಂದಿರದಲ್ಲಿ ಸಿಂಹಾಸನಗಳಲ್ಲಿ ಆಸೀನರಾದರು. ದುಂದುಭಿ ಘೋಷದಿಂದ ಕೃಷ್ಣನು ಅವರನ್ನೆಲ್ಲ ಸ್ವಾಗತಿಸಿದನು. ನಂತರ ಕಿಂಕರನೆಂಬ ರಾಕ್ಷಸರು ತಂದಿದ್ದ ಅಕ್ಷಯ ಧನರಾಶಿಯನ್ನು ಸಭಾಂಗಣಕ್ಕೆ ತರಲಾಯಿತು. ಶ್ರೀಕೃಷ್ಣನು ಅವರನ್ನು ಅಪಾರ ಧನರಾಶಿಯಿಂದ ಸನ್ಮಾನಿಸಿದನು.

ರಾಮೇಣ ಸಹ ಗೋವಿಂದಃ ಕಾಂಚನಂ ಮಹದಾಸನಮ್ ।
ಉಗ್ರಸೇನಂ ಪುರಸ್ಕೃತ್ಯ ಭೋಜ ವೃಷ್ಣಿ ಪುರಸ್ಕೃತಃ ॥ 7 ॥

ಶ್ರೀಕೃಷ್ಣನು ರಾಜನಾದ ಉಗ್ರಸೇನನನ್ನು ಮುಂದು ಮಾಡಿಕೊಂಡು ಬಲರಾಮನೊಂದಿಗೆ ರತ್ನಸಿಂಹಾಸನದಲ್ಲಿ ಆಸೀನನಾದನು.

**ಸಮಾಧಾಪ್ಯ ಯದುಶ್ರೇಷ್ಠಾನ್ ಉವಾಚ ಪುರುಷೋತ್ತಮಃ ॥ 8 ॥**

ಸಭಾಮಂದಿರದಲ್ಲಿ ಕುಳಿತಿದ್ದ ಯಾದವರನ್ನು ಅವರ ಯೋಗ್ಯತೆಗೆ ತಕ್ಕಂತೆ ಮರ್ಯಾದೆ ಮಾಡಿ, ಮುಂದಿನ ಮಾತುಗಳನ್ನಾಡಿದನು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ಸಭಾಪ್ರವೇಶ ಎಂಬಲ್ಲಿ
ನೂರನೆಯ ಅಧ್ಯಾಯ ಸಮಾಪ್ತಿ

# ಅಥ ಏಕಾಧಿಕಶತತಮೋऽಧ್ಯಾಯಃ

## ಯಾದವರ ಸನ್ಮಾನ

**ಭವತಾಂ ಪುಣ್ಯಕೀರ್ತೀನಾಂ ತಪೋಬಲ ಸಮಾಧಿಭಿಃ ।**
**ಅಪಧ್ಯಾನಾಚ್ಚ ಪಾಪಾತ್ಮಾ ಭೌಮಃ ಸ ನರಕೋ ಹತಃ ॥ 1 ॥**

**ಮೋಕ್ಷಿತಂ ಬಂಧನಾದ್ ಗುಪ್ತಂ ಕನ್ಯಾಂತಃ ಪುರಮುತ್ತಮಂ ।**
**ಮಣಿಪರ್ವತ ಮುತ್ಪಾಟ್ಯ ಶಿಖರಂ ಚೈತದಾ ಹೃತಮ್ ॥ 2 ॥**

**ಅಯಂ ಧನೌಘಃ ಸುಮಹಾನ್ ಕಿಂಕರೈರಾಹೃತೋ ಮಮ ।**
**ಈಶಾ ಭವಂತೋ ದ್ರವ್ಯಸ್ಯ ತಾನುಕ್ತ್ವಾ ವಿರರಾಮ ಹ ॥ 3 ॥**

ಯಾದವರೇ! ಪುಣ್ಯವಂತರಾದ ನಿಮ್ಮ ತಪೋಬಲದಿಂದಲೂ ಚಿತ್ತೈಕಾಗ್ರತೆಯಿಂದಲೂ, ಶತ್ರುವಿನ ಬಗ್ಗೆ ಇದ್ದ ಅನಿಷ್ಟ ಚಿಂತನೆಯ ಫಲವಾಗಿ ಭೂದೇವಿ ಪುತ್ರನಾದ ಪಾಪಿಷ್ಟ ನರಕಾಸುರನು ನಾಶ ಹೊಂದಿದನು.

ಇದರಿಂದಾಗಿ ಇವನು ಅಂತಃಪುರದಲ್ಲಿ ಗುಪ್ತವಾಗಿ ಬಚ್ಚಿಟ್ಟಿದ್ದ ಹದಿನಾರುಸಾವಿರನೂರು ಕನ್ಯೆಯರನ್ನು ನಾನು ಬಂಧದಿಂದ ಮುಕ್ತಿಗೊಳಿಸು-ವಂತಾಯಿತು. ಅವನು ಸಂಗ್ರಹಿಸಿದ್ದ ಮಣಿಪರ್ವತದಲ್ಲಿ ಅದರ ಶಿಖರವನ್ನು ಕಿತ್ತು ಇಲ್ಲಿಗೆ ತರುವಂತಾಯಿತು.

ಇಲ್ಲಿರುವ ಧನರಾಶಿಯನ್ನು ಕಿಂಕರರೆಂಬ ರಾಕ್ಷಸರು ನನಗಾಗಿ ತಂದಿರಿಸಿದ್ದಾರೆ. ಆದರೆ ಇವೆಲ್ಲ ನಿಮಗೆ ಸೇರಿದವುಗಳಾಗಿವೆ. ಇಷ್ಟು ಹೇಳಿ ಶ್ರೀಕೃಷ್ಣನು ಸುಮ್ಮನಾದನು.

ಶ್ರೀಕೃಷ್ಣನಾಡಿದ ನಿಸ್ಪೃಹೆಯ ಮಾತನ್ನು ಕೇಳಿದ ಭೋಜ-ವೃಷ್ಣಿ ಅಂಧಕರೆಲ್ಲರೂ ಆನಂದ ಹೊಂದಿದರು. ಎಲ್ಲರೂ ಅವನ ತ್ಯಾಗವನ್ನು ಪ್ರಶಂಸಿಸಿದರು.

**ನೈತಚ್ಚಿತ್ರಂ ಮಹಾಬಾಹೋ ತ್ವಯಿ ದೇವಕಿನಂದನೇ ।**
**ಲಾಲಯೇಃ ಸ್ವಜನಾನ್ ಭೋಗ್ಯೈಃ ರತ್ನೈಃ ಸ್ವಯಮರ್ಜಿತೈಃ ॥ 4 ॥**

ಶ್ರೀಕೃಷ್ಣನೇ ಲಕ್ಷ್ಮೀಪತಿಯಾದ ಜಗನ್ನಾಥನಾದ ನಿನಗೆ ಈ ಔದಾರ್ಯ ಆಶ್ಚರ್ಯವಲ್ಲ. ದೇವತೆಗಳಿಂದಲೂ ಅಸಾಧ್ಯ ಕರ್ಮವಾದ ನರಕಾಸುರಾದಿ ಶತ್ರುಗಳನ್ನು ಸದೆಬಡೆದು ತಂದ ಧನರಾಶಿಯನ್ನು ನಮ್ಮೆಲ್ಲರಿಗೂ ವಿತರಿಸುತ್ತಿರುವಿ ಎಂದು ಹೇಳಿದರು.

ನಂತರ ದಾಶಾರ್ಹ ಕುಲಸ್ತ್ರೀಯರೂ ಉಗ್ರಸೇನನ ಅಂತಃಪುರ ಸ್ತ್ರೀಯರು ಯುದ್ಧದಲ್ಲಿ ಜಯಗಳಿಸಿದ ಶ್ರೀಕೃಷ್ಣನನ್ನು ನೋಡಲು ಬಂದರು.

ದೇವಕಿಯೇ ಮೊದಲಾದ ವಸುದೇವನ ಪತ್ನಿಯರು[1] ಹಾಗೂ ರೋಹಿಣಿಯರು ಶ್ರೀಕೃಷ್ಣನನ್ನು ನೋಡಿದರು.

ರಾಮಕೃಷ್ಣರು ರೋಹಿಣಿಯನ್ನು ನೋಡುತ್ತಿದ್ದಂತೆಯೇ ಅವಳಿಗೆ ನಮಸ್ಕರಿಸಿ ನಂತರ ಜನ್ಮದಾತೆಯಾದ ದೇವಿಕಿಗೂ ನಮಸ್ಕರಿಸಿದರು.

**ಅದಿತಿಃ ದೇವಮಾತೇವ ಮಿತ್ರೇಣ ವರುಣೇನ ಚ ।**

ಶ್ರೀಕೃಷ್ಣ-ಬಲರಾಮನಿಂದ ಕೂಡಿದ್ದ ದೇವಕೀದೇವಿಯು ಮಿತ್ರ-ವರುಣರಿಂದ ಕೂಡಿದ್ದ ದೇವಮಾತೆ ಅದಿತಿಯಂತೆ ಕಂಡಳು.

ಇದೇ ಸಮಯದಲ್ಲಿಯೇ ಯಶೋದೆಯ ಮಗಳು ಆಗಮಿಸಿದಳು. ಇವಳಾದರೂ ಸ್ವೇಚ್ಛಾರೂಪಧಾರಿಣಿಯಾಗಿದ್ದು 'ಏಕಾನಂಶಾ' ಎಂದು ಪ್ರಖ್ಯಾತಳಾಗಿದ್ದಳು. ಯಾವ ದುರ್ಗೆಯು ಅವತರಿಸಿದಾಕ್ಷಣ ಮುಹೂರ್ತದೊಳಗೆ ಶ್ರೀಹರಿಯು ಶ್ರೀಕೃಷ್ಣನಾಗಿ ಅವತರಿಸಿದ್ದನು. ಇವಳ ನಿಮಿತ್ತವಾಗಿಯೇ ಕೃಷ್ಣನು ಕಂಸಾದಿಗಳನ್ನು ಕೊಂದಿದ್ದನು.

---

1. ವಸುದೇವ ಪತ್ನಿಯರು :
ದೇವಕನ ಪುತ್ರಿಯರಾದ ಸಹದೇವಾ, ಶಾಂತಿದೇವಾ, ಶ್ರೀದೇವಾ, ದೇವರಕ್ಷಿತಾ, ವೃಕದೇವೀ ಉಪದೇವೀ, ದೇವಕೀ ಏಳು ಪುತ್ರಿಯರನ್ನು ವಸುದೇವ ವಿವಾಹವಾಗಿದ್ದನು. ರೋಹಿಣಿಯು ಜ್ಯೇಷ್ಠಭಾರ್ಯೆಯು.

**ಸಾ ಕನ್ಯಾ ವವೃಧೇ ತತ್ರ ವೃಷ್ಣಿಸದ್ಮನಿ ಪೂಜಿತಾ ।**
**ಪುತ್ರವತ್ ಪಾಲ್ಯಮಾನಾ ವೈ ವಾಸುದೇವಾಜ್ಞಯಾ ತದಾ ॥ 5 ॥**

ಈ ಕನ್ಯೆಯು ವೃಷ್ಣಿಗಳ ಗೃಹದಲ್ಲಿಯೇ ಅತ್ಯಂತ ಆದರ ಸತ್ಕಾರಗಳಿಂದ ಅಭಿವೃದ್ಧಿ ಹೊಂದುತ್ತಿದ್ದಳು. ವಾಸುದೇವನ ಆಜ್ಞೆಯಂತೆ ಇವಳನ್ನು ಯಾದವರು ತಮ್ಮ ಮಗಳೆಂದೆ ಪಾಲನೆ-ಪೋಷಣೆ ಮಾಡುತ್ತಿದ್ದರು.

ಶ್ರೀಕೃಷ್ಣನನ್ನು ಕಂಸನಿಂದ ರಕ್ಷಿಸಿದ್ದು ಈ ಭಾವನೆಗೆ ಕಾರಣವಾಗಿತ್ತು.

## ಯೋಗಮಾಯವೃತ್ತಾಂತ

**ತಾಂ ಚ ತತ್ರೋಪಸಂಗಮ್ಯ ಪ್ರಿಯಾಮಿವ ಸಖೀಂ ಸ್ವಸಾಮ್ ।**
**ದಕ್ಷಿಣೇನ ಕರಾಗ್ರೇಣ ಪರಿಜಗ್ರಾಹ ಮಾಧವಃ ॥ 6 ॥**

ಸಖಿಯಂತಿದ್ದ ತನ್ನ ಸೋದರಿಯನ್ನು ಕೃಷ್ಣನು ತನ್ನ ಬಲಗೈಯಿಂದ ಅವಳ ಬಲಗೈಯನ್ನು ಪ್ರೀತಿಪೂರ್ವಕವಾಗಿ ಹಿಡಿದುಕೊಂಡನು.

ಯಾವ ಈ ಕನ್ಯೆ ಹುಟ್ಟಿದ ಕೂಡಲೇ ಬಾಲಕೃಷ್ಣನ ರಕ್ಷಣೆಗಾಗಿಯೇ ಬಂದಿರುವಳೆಂದು ಜನರು ಆಕೆಯನ್ನು 'ಯೋಗಕನ್ನಿಕೆಯೆಂದೂ ಯಾರಿಂದಲೂ ಅಜೇಯಳೆಂದು ಕರೆಯುತ್ತಿದ್ದರು.

ಆದ್ದರಿಂದಲೇ ಶ್ರೀಕೃಷ್ಣನು ಪ್ರೀತಿಪಾತ್ರ ಸಖಿಯಂತಿದ್ದ ತನ್ನ ತಂಗಿಯಾದ ಯೋಗಮಾಯೆಯನ್ನು ಸಮೀಪಿಸಿ ತನ್ನ ಬಲಗೈಯಿಂದ ಅವಳ ಬಲಗೈಯನ್ನು ಹಿಡಿದುಕೊಂಡನು.

**ತಥೈವ ರಾಮೋಽತಿಬಲಃ ಸಂಪರಿಷ್ವಜ್ಯ ಭಾವಿನೀಮ್ ।**
**ಮೂರ್ಧ್ನ್ಯುಪಾಘ್ರಾಯ ಸವ್ಯೇನ ಪ್ರತಿಜಗ್ರಾಹ ಪಾಣಿನಾ ॥ 7 ॥**

ಅದರಂತೆಯೇ ಬಲಿಷ್ಠ ಬಲದೇವನೂ ಕೂಡ ತನ್ನ ಭಗಿನಿಯನ್ನು ಆಲಿಂಗಿಸಿ ನೆತ್ತಿಯನ್ನು ಆಘ್ರಾಣಿಸಿ ತನ್ನ ಎಡಗೈಯಿಂದ ಆಕೆಯನ್ನು ಹಿಡಿದುಕೊಂಡನು.

**ದದೃಶುಃ ತಾ ಸ್ತ್ರೀಯೋ ಮಧ್ಯೆ ಭಗಿನಿಂ ರಾಮಕೃಷ್ಣಯೋಃ ।**
**ರುಕ್ಮಪದ್ಮವ್ಯಗ್ರಕರಾಂ ಸ್ತ್ರಿಯಂ ಪದ್ಮಾಲಯಾಮಿವ ॥ 8 ॥**

ಅಲ್ಲಿ ನೆರೆದಿರತಕ್ಕ ಸ್ತ್ರೀಯರೆಲ್ಲರೂ ಕೃಷ್ಣ-ಬಲರಾಮರ ಮಧ್ಯೆ ಪ್ರಕಾಶಿಸುವ ಸುವರ್ಣ ಪದ್ಮವನ್ನು ಹಿಡಿದಿರುವ, ಸಾಕ್ಷಾತ್ ಲಕ್ಷ್ಮೀದೇವಿಯಂತೆ ಕಂಗೊಳಿಸುವ ಯೋಗಮಾಯೆಯನ್ನು ಕಂಡು ಭಕ್ತಿಯಿಂದ

ಅಕ್ಷತೆಗಳಿಂದಲೂ ನಾನಾ ವಿಧ ಪರಿಮಳ ಪುಷ್ಪಗಳನ್ನೂ ಅರಳನ್ನೂ ಅವಳ ಮೇಲೆರಚಿ ಹರ್ಷಗೊಂಡು ತಮ್ಮ ನಿವಾಸಗಳಿಗೆ ಹೊರಟು ಹೋದರು.

ಅವಕೀರ್ಯ ಚ ಲಾಜೈಸ್ತಾಃ ಸ್ತ್ರಿಯೋ ಜಗ್ಮುಃ ಯಥಾಲಯಮ್ ।

ನಂತರ ಸಮಸ್ತ ಯಾದವರೂ ಶ್ರೀಕೃಷ್ಣನ ಅದ್ಭುತ ಮಹಿಮೆಗಳನ್ನು ಪ್ರಶಂಸೆ ಮಾಡುತ್ತಾ ವಿಶೇಷವಾಗಿ ಅವನನ್ನು ಸತ್ಕರಿಸಿ ತಮ್ಮ ತಮ್ಮ ಆಸನಗಳಲ್ಲಿ ಆಸೀನರಾದರು.

## ಶ್ರೀಕೃಷ್ಣಮಹಿಮಾ ವರ್ಣನ

ಪರಾಕ್ರಮಿಯಾದ ಶ್ರೀಕೃಷ್ಣನು ದೇವತೆಗಳ ಸಭೆಯಲ್ಲಿ ಇಂದ್ರಾದಿ ದೇವತೆಗಳಿಂದ ಆದರಿಸಲ್ಪಟ್ಟು ವಿರಾಜಿಸುವಂತೆ ಯಾದವರ ಸಭೆಯಲ್ಲಿಯೂ ವಿರಾಜಿಸಿದನು.

ಶ್ರೀಕೃಷ್ಣನು ಅತ್ಯುತ್ಸಾಹಯುಕ್ತನಾಗಿಯೂ ವಿಚಿತ್ರಮಹಿಮೆವುಳ್ಳವನಾಗಿಯೂ ಅವರೆಲ್ಲರಿಂದಲೂ ಪೂಜಿಸಲ್ಪಟ್ಟನಾಗಿ ಪ್ರಕಾಶಿಸಿದನು.

ಯಾದವರೆಲ್ಲರೂ ಕುಳಿತ ನಂತರ ಆ ಸಭೆಗೆ ದೇವೇಂದ್ರನ ಪ್ರಾರ್ಥನೆ ಮೇರೆಗೆ ನಾರದರು ಆಗಮಿಸಿದರು.

ನಿಯೋಗಾತ್ ತ್ರಿದಶೇಂದ್ರಸ್ಯ ನಾರದೋಽಭ್ಯಾಗಮತ್ ಸಭಾಮ್ ।
ಸೋಽಥ ಸಂಪೂಜಿತಃ ಪೂಜ್ಯಃ ಶೂರೈಸ್ತೈಃ ಯದುಪುಂಗವೈಃ ॥ 9 ॥
ಸಂಪ್ರಾಪ್ತಂ ಶಕ್ರವಚನಾದ್ ಜಾನೀಧ್ವಂ ಮಾಂ ನರರ್ಷಭಾಃ ॥ 10 ॥

ನಾರದರು ಆಗಮಿಸುತ್ತಿದ್ದಂತೆಯೇ ಅವರನ್ನು ಯಾದವರೆಲ್ಲರೂ ಎದ್ದು ನಿಂತು ಆದರದಿಂದ ಸ್ವಾಗತಿಸಿದರು. ನಾರದರು ಶ್ರೀಕೃಷ್ಣನಿಗೆ ಕರಲಾಘವ ನೀಡಿ ತಮ್ಮ ದಿವ್ಯಾಸನದಲ್ಲಿ ಆಸೀನರಾದರು. ಇತರರನ್ನು ಕೂಡಲು ಅನುಮತಿಸಿದರು.

ಶೃಣುಧ್ವಂ ರಾಜಶಾರ್ದೂಲಾಃ ಕೃಷ್ಣಸ್ಯಾಸ್ಯ ಪರಾಕ್ರಮಮ್ ।
ಯಾನಿ ಕರ್ಮಾಣಿ ಕೃತವಾನ್ ಬಾಲ್ಯಾತ್ ಪ್ರಭೃತಿ ಕೇಶವಃ ॥ 11 ॥

ನಾರದರು, ಸಭೆಯಲ್ಲಿ – ನೆರೆದಿರುವ ರಾಜರನ್ನುದ್ದೇಶಿಸಿ, ಯಾದವರೇ! ನಾನು ದೇವೇಂದ್ರನ ಮಾತಿನಂತೆ ಇಲ್ಲಿಗೆ ಬಂದಿರುವೆನೆಂದು ತಿಳಿಯಿರಿ. ಶ್ರೀಕೃಷ್ಣನು ಸಾಮಾನ್ಯ ಮಾನವನೆಂದು ತಿಳಿಯಲಾಗದು. ಅವನು ಬಾಲ್ಯದಿಂದ ಈವರೆಗೂ ಮಾಡಿರುವ ಅದ್ಭುತ ಕಾರ್ಯಗಳನ್ನು ನಿಮಗೆ ತಿಳಿಸುವೆನು.

**ಉಗ್ರಸೇನಸುತಃ ಕಂಸಃ ಸರ್ವಾನ್ ನಿರ್ಮಥ್ಯ ಯಾದವಾನ್ ।**
**ರಾಜ್ಯಂ ಜಗ್ರಾಹ ದುರ್ಬುದ್ಧಿಃ ಬಧ್ವಾ ಪಿತರಮಾಹುಕಮ್ ॥ 12 ॥**

ಉಗ್ರಸೇನನ ಪುತ್ರನಾದ ದುಷ್ಟ ಕಂಸನು ತಂದೆಗೆ ಸಮಾನನಾದ ವೃದ್ಧ ಆಹುಕನನ್ನು ಬಂಧಿಸಿ ಸಮಸ್ತ ಯಾದವರನ್ನು ಪೀಡಿಸುತ್ತಾ ರಾಜ್ಯಾಧಿಕಾರವನ್ನು ವಶಪಡಿಸಿಕೊಂಡನು.

**ಸಮಾಶ್ರಿತ್ಯ ಜರಾಸಂಧಂ ಶ್ವಶುರಂ ಕುಲಪಾಂಸನಃ ।**
**ಭೋಜನವೃಷ್ಣ್ಯಂಧಿಕಾನ್ ಸರ್ವಾನ್ ಅವಮನ್ಯತ ದುರ್ಮತಿಃ ॥ 13 ॥**

ಇಷ್ಟೇ ಅಲ್ಲದೆ ಕುಲದೂಷಕನಾದ ಕಂಸನು ತನ್ನ ಮಾವನಾದ ಜರಾಸಂಧನನ್ನು ಆಶ್ರಯಿಸಿ ಭೋಜರು ವೃಷ್ಣಿ ಅಂಧಕರನ್ನು ಅವಮಾನಿಸಲಾರಂಭಿಸಿದನು.

ಪ್ರತಾಪಿ ವಸುದೇವನು ತನ್ನ ಜ್ಞಾತಿಗಳಿಗೆ ಬಂದಿರುವ ಆಪತ್ತನ್ನು ವಿಚಾರಿಸುತ್ತಾ ಅದನ್ನು ಪರಿಹರಿಸಲೆಂದು, ಉಗ್ರಸೇನನನ್ನು ರಕ್ಷಿಸಲು ಶ್ರೀಕೃಷ್ಣನನ್ನು ಬಹು ಜಾಗರೂಕತೆಯಿಂದ ರಕ್ಷಿಸುತ್ತಿದ್ದನು.

**ಉಗ್ರಸೇನಸ್ಯ ರಕ್ಷಾರ್ಥಂ ಸ್ವಪುತ್ರಂ ಪರ್ಯರಕ್ಷತ ।**

ಕಂಸನಿಂದ ಭಯಪಟ್ಟು ವಸುದೇವನು ಮಥುರೆಯ ಉಪವನದಲ್ಲಿ ಗೊಲ್ಲರಿಂದ ಕೂಡಿ ವಾಸಿಸುತ್ತಿದ್ದನು. ಅಂದಿನಿಂದ ಕೃಷ್ಣನು ತನ್ನ ಅದ್ಭುತ ಕಾರ್ಯಗಳನ್ನು ಮಾಡಲಾರಂಭಿಸಿದನು.

ಶೂರಸೇನರ ಸಮಕ್ಷಮದಲ್ಲಿಯೇ ನಡೆದ ಶ್ರೀಕೃಷ್ಣನ ಮಹಿಮೆಗಳು ಸರ್ವತ್ರ ಕೇಳ ಬರುತ್ತಿವೆ.

**ರಾಕ್ಷಸೀ ನಿಹತಾ ರೌದ್ರಾ ಶಕುನೀ ವೇಷಧಾರಿಣೀ ।**
**ಪೂತನಾ ನಾಮ ಘೋರಾ ಸ ಮಹಾಕಾಯಾ ಮಹಾಬಲಾ ॥ 14 ॥**

**ವಿಷದಿಗ್ಧಂ ಸ್ತನಂ ರೌದ್ರಂ ಪ್ರಯಚ್ಛಂತೀ ಜನಾರ್ದನೇ ।**
**ದದೃಶುಃ ನಿಹತಾಂ ತಾಂ ತೇ ರಾಕ್ಷಸೀ ವನಗೋಚರಾಃ ॥ 15 ॥**

ಭಯಂಕರಳಾದ ಕಂಸನ ಧಾತ್ರಿಯಾದ ಪೂತನಿಯು ಪಕ್ಷಿ ವೇಷಧರಿಸಿ ಗೋಕುಲಕ್ಕೆ ಹಾರಿ ಬಂದಳು. ನಂತರ ಸುಂದರೀ ವೇಷಧರಿಸಿ, ಬಾಲಕ ಕೃಷ್ಣನನ್ನು ಕೊಲ್ಲಲೆಂದು ಸ್ತನಗಳಿಗೆ ಕಾಲಕೂಟ ವಿಷ ಲೇಪಿಸಿಕೊಂಡು ಬಂದಿದ್ದಳು. ಪೂತನಿಯು ಶ್ರೀಕೃಷ್ಣನಿಗೆ ವಿಷಸ್ತನ್ಯಪಾನ ಮಾಡಿಸುತ್ತಿದ್ದಾಗ

ರಾಕ್ಷಸಿಯ ಪಂಚಪ್ರಾಣವನ್ನೇ ಹೀರಿ ಕೊಂದು ಹಾಕಿದನು. ಏಳು ದಿವಸದ ಮಗು ಇಂತಹ ಮಹಿಮೆ ತೋರಿದೆ.[2]

## ಶಕಟಾಸುರ ಭಂಜನ

**ಉತ್ತಾನೇನ ಶಯಾನೇನ ಶಕಟಾಂತರ ಚಾರಿಣಾ ।**
**ಪಾದಾಂಗುಷ್ಠೇನ ಶಕಟಾ ಕ್ರೀಡಮಾನೋ ವ್ಯಲೋಡಯತ್ ॥ 16 ॥**

ಶ್ರೀಕೃಷ್ಣ ನಾಲ್ಕನೇ ತಿಂಗಳಿಗೆ ಕಾಲಿಟ್ಟಾಗ ಉಪನಿಷ್ಕ್ರಮಣ ನಡೆಯಿತು. ಆ ಸಂದರ್ಭದಲ್ಲಿ ಶಕಟದಡಿಯಲ್ಲಿ ಮಲಗಿಸಿದ್ದ ಶ್ರೀಕೃಷ್ಣನು ಗಾಡಿಯಲ್ಲಿ ಅಡಗಿ ಕುಳಿತಿದ್ದ ಶಕಟಾಸುರನನ್ನು ತನ್ನ ಕಾಲು ಮೇಲೆಕ್ಕೆತ್ತಿ ಬಂಡಿಗೆ ಒದ್ದು ಪುಡಿ ಮಾಡಿ ಬಂಡಿಯಲ್ಲಿದ್ದ ಶಕಟಾಸುರನನ್ನು ಕೊಂದು ಹಾಕಿದ.

**ಪುನರ್ಜಾತೋಽಯಮಿತ್ಯಾಹುರುಕ್ತಃ ತಸ್ಮಾದಧೋಕ್ಷಜಃ ।**
**ಅತ್ಯದ್ಭುತಮಿದಂ ಚಾಸೀದ್ ಯಚ್ಚಿಶುಃ ಪುರುಷೋತ್ತಮಃ ॥ 17 ॥**

ಪೂತನಿ ರಾಕ್ಷಸಿಯು ನಿಜವೇಷ ತಾಳಿ ಸತ್ತಿರುವುದನ್ನು ಅಲ್ಲಿದ್ದವರೆಲ್ಲ ನೋಡಿ ಈ ಮಗುವು ಪೂತನಿಯಿಂದ ಪಾರಾಗಿ ಬಂದು ಎರಡನೇ ಬಾರಿ ಹುಟ್ಟಿದಂತೆಯೆ ಆಯಿತು ಎಂದುಕೊಂಡರು. ಈ ಮಗುವು ಬಹುಶಃ ಪುರುಷೋತ್ತಮನೇ ಆಗಿರಬೇಕು. ಯಾಕೆಂದರೆ ಈ ಮಗು ಆಡುತ್ತಾ ತನ್ನ ಪಾದಾಂಗುಷ್ಠದಿಂದ ಗಾಡಿಗೆ ಒದ್ದು ಗಾಡಿಯನ್ನೇ ಮೇಲಕ್ಕೆ ಹಾಕಿಸಿ ಪುಡಿ ಮಾಡಿತೆಂಬುದು ಆಶ್ಚರ್ಯವೆ ಸರಿ.

**ದಾಮ್ನಾ ಚೋಲೂಖಲೇ ಬದ್ಧೋ ವಿಪ್ರಕುರ್ವನ್ ಕುಮಾರಕಮ್ ।**
**ಬಭಂಜಾರ್ಜುನವೃಕ್ಷೌ ದ್ವೌ ಖ್ಯಾತೌ ದಾಮೋದರ[3]ಸ್ತದಾ ॥ 18 ॥**

ಯಶೋದೆಯ ಕೃಷ್ಣನ ಕಾಟ ತಡೆಯಲಾರದೆ ಮಗುವನ್ನು ಹಗ್ಗದಿಂದ ಅವಲಕ್ಕಿ ಕುಟ್ಟುವ ಒರಳಿಗೆ ಕಟ್ಟು ಹಾಕುತ್ತಿರಲು ಆ ಉಲೂಖಲ ಸಹಿತವಾಗಿ ಹಗ್ಗವನ್ನು

---

2. ಹುಟ್ಟಿದ್ದೇಳು ದಿನದಲ್ಲಿ ದುಷ್ಟ ಪೂತನಿಯ ಕೊಂದೆ.
ಸಾ ತಾಟಕಾ ಊರ್ವಶೀ ಸಂಪ್ರವಿಷ್ಟಾ
ಕೃಷ್ಣ ವಧ್ಯಾನಾನ್ ನಿಯರಂ ಸಂಜಗಾಮ ॥ –*ತಾ.ನಿ. 12/87*

3. ದಾಮೋದರ :
ನಲಕೂಬರ ಮಣಿಗ್ರೀವೌ ಮೋಚಯಾಮಾಸ ಶಾಪತಃ ।
ಧುನಿಶ್ಚಮುಶ್ಚ ತೌ ತರೂ ಸಮಾಶ್ರಿತೌ ನಿಷೂದಿತೌ ॥ –*ತಾ.ನಿ. 13/22*

ಎಳೆದುಕೊಂಡು ಎರಡು ಅರ್ಜುನ ವೃಕ್ಷಗಳ [ಮತ್ತಿಮರ] ನಡುವೆ ಹೋಗಿ ಎಳೆಯಲು ಮರಗಳೆರಡು ಉರುಳಬಿದ್ದವು.

ಹೀಗೆ ಸೊಂಟಕ್ಕೆ ದಾರವನ್ನು ಕಟ್ಟಿಸಿಕೊಂಡಾಗ 'ದಾಮೋದರ'ನೆನಿಸಿದ.

## ಕಾಲಿಯ ಮರ್ದನ

**ಕಾಲಿಯಶ್ಚ ಮಹಾನಾಗೋ ದುರಾಧರ್ಷೋ ಮಹಾಬಲಃ ।**
**ಕ್ರೀಡತಾ ವಾಸುದೇವೇನ ನಿರ್ಜಿತೋ ಯಮುನಾಹ್ರದೇ ॥ 19 ॥**

ಕಾಲಿಯ ನಾಗನೆಂಬ ಘೋರವಿಷವುಳ್ಳ ಕಾಳಿಂಗನು ತನ್ನ ವಿಷಜ್ವಾಲೆಯಿಂದ ನೀರನ್ನೆಲ್ಲ ವಿಷಭರಿತವನ್ನಾಗಿಸಿ, ಕುಡಿಯಲು ಬಂದ ಗೋವು-ಗೋಪಾಲಕ ಮಹಾಬಾಧೆ ಪಡಿಸುತ್ತಿರುವಾಗ ಈ ಸುದ್ಧಿ ತಿಳಿದ ಶ್ರೀಕೃಷ್ಣನು ಆ ವಿಷ ಮಡುವಿಗೆ ಹಾರಿ ದುಷ್ಟ ಕಾಳಿಂಗನನ್ನು ಮರ್ದಿಸಿದನು. ನಂತರ ಸಕುಟುಂಬ ಸಪರಿವಾರನಾಗಿ ಆ ಕಾಳಿಂಗನನ್ನು ರಮಣಕ ದ್ವೀಪಕ್ಕೆ ಕಳುಹಿಸಿ ಯಮುನೆಯನ್ನು ಒಳಗೂ ಹೊರಗೂ ನಿರ್ವಿಷವಾಗುವಂತೆ ಮಾಡಿದನು.

## ಅಕ್ರೂರನಿಗೆ ವಿಶ್ವರೂಪ

**ಅಕ್ರೂರಸ್ಯ ಸಮಕ್ಷಂ ಚ ಯನ್ನಾಗ ಭವನೇ ವಿಭುಃ ।**
**ಪೂಜ್ಯಮಾನಂ ತದಾ ನಾಗೈಃ ದಿವ್ಯಂ ವಪುರಧಾಯತ್ ॥ 20 ॥**

ಸರ್ವಸಮರ್ಥನಾದ ಶ್ರೀಕೃಷ್ಣನು ಬಲರಾಮನೊಂದಿಗೆ ಅಕ್ರೂರನಿಂದ ಕೂಡಿ ಮಥುರೆಗೆ ಹೊರಟಿರುವಾಗ, ದಾರಿಮಧ್ಯದಲ್ಲಿ ಅಕ್ರೂರನು ಸ್ನಾನಾಹ್ನಿಕಕ್ಕಾಗಿ ನೀರಿಗೆ ಇಳಿದಾಗ ನಾಗರು ನಾಗಲೋಕಕ್ಕೆ ಒಯ್ದು ಅಲ್ಲಿ ಅನಂತನಲ್ಲಿ ಸನ್ನಿಹಿತನಾದ ಅನಂತಪದ್ಮನಾಭನನ್ನು, ಸಂಕರ್ಷಣನನ್ನು, ಅನಂತನೆಂಬ ಶೇಷನನ್ನು ಅವರನ್ನು ಉಪಾಸನೆ ಮಾಡುತ್ತಿರುವ ಅನಂತನಾಗರನ್ನೂ ನೋಡಿ ಆಶ್ಚರ್ಯಗೊಂಡನು. ನಾಗಮಂದಿರದಲ್ಲಿ ನಾಗರಿಂದ ಪೂಜಿತರಾದ ಅನಂತ-ಪದ್ಮನಾಭರೇ ಈ ರಾಮಕೃಷ್ಣರೆಂದು ತಿಳಿದನು.[4]

---

4. ಅಕ್ರೂರನು ದಿನನಿತ್ಯ ಶೇಷನನ್ನು ಮಾತ್ರ ಕಾಣುತ್ತಿದ್ದ. ಈ ದಿನ ಹರಿಯನ್ನೂ ನೋಡಿದ.
**ನಿತ್ಯಂ ಹಿ ಶೇಷಮಭಿಪಶ್ಯತಿ ಸಿದ್ಧಮಂತ್ರೋ ದಾನೇಶ್ವರಃ ಸ ತು ತದಾ ದದೃಶೇ ಹರಿಂ ಚ ।**
**ತತ್ರಾಪಿ ಕೃಷ್ಣ ಮಭಿವೀಕ್ಷ್ಯ ಪುನರ್ನಿಮಜ್ಯ ಶೇಷೋರು ಭೋಗಶಯನಂ ಪರಮಂ ದದರ್ಶ ॥** – *ತಾ.ನಿ.13/94*

**ಶೀತವಾತಾರ್ದಿತಾ ಗಾಶ್ಚ ದೃಷ್ಟ್ವಾ ಕೃಷ್ಣೇನ ಧೀಮತಾ ।**
**ಧೃತೋ ಗೋವರ್ಧನಃ ಶೈಲಃ ಸಪ್ತರಾತ್ರಂ ಮಹಾತ್ಮನಾ ॥ 21 ॥**

ಗೋಕುಲದಲ್ಲಿ ಅಖಂಡವಾಗಿ ಏಳು ದಿವಸ ದೇವೇಂದ್ರನ ವ್ಯಾಕೋಪದಿಂದಾಗಿ ಅನವರತ ಧಾರಾಕಾರವಾಗಿ ಸುರಿಯುತ್ತಿದ್ದ ಮಳೆಯಿಂದಾಗಿ ಗೋವುಗಳೆಲ್ಲವೂ ಛಳಿಗಾಳಿಗಳಿಂದ ಪೀಡಿಸಲ್ಪಟ್ಟಾಗ, ಏಳು ವರ್ಷದ ಬಾಲಕೃಷ್ಣ ಗೋವು ಗೋಪಾಲಕರ ರಕ್ಷಣೆಗಾಗಿ ಏಳು ದಿನಗಳ ಪರ್ಯಂತವಾಗಿ ಆ ಗೋವರ್ಧನ ಪರ್ವತವನ್ನೇ ಕಿರುಬೆರಳಿನಲ್ಲಿ ಎತ್ತಿ ನಾಯಿ ಕೊಡೆಯನ್ನು ಬಾಲಕನು ಕಿತ್ತಿ, ಎತ್ತುವಂತೆ ಎತ್ತಿ ನಿಂತಿದ್ದನು.

**ತಥೋಕ್ಷ ದುಷ್ಟೋಽತಿಬಲೋ ಮಹಾಕಾಯೋ ನರಾಂತಕೃತ್ ।**
**ಗೋಪತಿಃ ವಾಸುದೇವೇನ ಹತೋಽರಿಷ್ಟೋ ಮಹಾಸುರಃ ॥ 22 ॥**

ಹಾಗೆ ಮಹತ್ತರವಾದ ಬಲವುಳ್ಳ ವೃಷಭವೇಷದ ಅರಿಷ್ಟಾಸುರನು ಶಿವ ವರದಿಂದ ಅವಧ್ಯನಾಗಿದ್ದು, ಕಂಸನ ಭೃತ್ಯನಾಗಿದ್ದನು. ಅವನು ಕೃಷ್ಣನಿಗೆ ವಿರೋಧವಾಗಿ ನಡೆಯುತ್ತಾ ಗೋವುಗಳನ್ನು ಭಯಪಡಿಸುತ್ತಿರುವಾಗ ಕೃಷ್ಣನು ಎದುರಾದ. ಅವನನ್ನು ತಿವಿಯಲು ಕೊಂಬನ್ನು ಮುಂದೆ ಮಾಡಿ ಬರುತ್ತಿರುವಾಗ ಕೊಂಬನ್ನು ಹಿಡಿದು ನೆಲದಲ್ಲಿ ಬೀಳಿಸಿ ಯಜ್ಞಪಶುವಂತೆ ಕೊಂದು ಹಾಕಿದ.

## ಧೇನುಕಾಸುರ ವಧೆ

**ಧೇನುಕಃ ಸ ಮಹಾಕಾಯಃ ದಾನವಃ ಸುಮಹಾಬಲಃ ।**
**ನಿಹತೋ ವಾಸುದೇವೇನ ಗವಾಂ ತ್ರಾಣಾಯ ದುರ್ಮತಿಃ ॥ 23 ॥**

ಮಹಾಬಲಿಷ್ಠನೂ ಗಣಪತಿಯ ವರದಿಂದಾಗಿ ಅವಧ್ಯನು ಆದ ಕತ್ತೆ ವೇಷದ ಧೇನುಕಾಸುರನನ್ನು ವಸುದೇವನ ಮಗನಾದ ಬಲರಾಮನು ತನ್ನನ್ನು ಒದೆಯಲು ಬಂದ ಅವನ ಕಾಲುಗಳನ್ನು ಹಿಡಿದು ತಾಳೆಮರದ ತುದಿಗೆ ಎಸೆದ. ಅವನು ಗತಪ್ರಾಣನಾದ.[5]

---

5. **ಧೇನುಕಾಸುರ** : ಧೇನುಕಾಸುರನು ವಿಘ್ನೇಶ ವರದಿಂದ ಅವಧ್ಯತ್ವ ಪಡೆದಿದ್ದನು. ಉತ್ತಮಬಲಶಾಲಿಯೂ ಕದನ ಪ್ರಿಯನೂ ಆಗಿದ್ದನು. ಬಲರಾಮನು ತಾಳಮರಗಳಿಂದ ಹಣ್ಣನ್ನು ಉದರಿಸುತ್ತಿದ್ದಾಗ ಓಡಿ ಬಂದ. ಧೇನುಕನು ಬಲದೇವನನ್ನು ಒದೆಯಲೆಂದು ಬಯಸಿ ಹಿಂಗಾಲುಗಳನ್ನೂ ಎತ್ತಿದಾಗ ಬಲರಾಮನು ಅವನ ಕಾಲುಗಳನ್ನು ಹಿಡಿದು ತಾಳೆಯ ಮರದ ಮೇಲೆ ಎಸೆದು ಕೊಂದು ಹಾಕಿದ.

## ಸುನಾಮ ದೂರೀಕರಣ

**ಸುನಾಮಾನ ಮಮಿತ್ರಘ್ನಃ ಸರ್ವಸೈನ್ಯ ಪುರಸ್ಕೃತಮ್ ।**
**ವೃಕೈಃ ವಿದ್ರಾವಯಾಮಾಸ ಗ್ರಹೀತುಂ ಸಮುಪಸ್ಥಿತಮ್ ॥ 24 ॥**

ಶತ್ರುವಿನಾಶಕ ಕೃಷ್ಣನು ಸೈನ್ಯ ಸಮೇತನಾಗಿ ಬಂದಿದ್ದ ತನ್ನನ್ನು ಬಂಧಿಸಲು ಹೊಂಚು ಹಾಕುತ್ತಿದ್ದ 'ಸುನಾಮಾ' ಎಂಬ ದೈತ್ಯನನ್ನು ತೋಳಗಳನ್ನು ಸೃಷ್ಟಿಸಿ ಅವುಗಳಿಂದಲೇ ದೂರ ಓಡಿಸಿಬಿಟ್ಟನು.

## ಪ್ರಲಂಭಾಸುರ ವಧೆ

ಮತ್ತೊಮ್ಮೆ ಬಲರಾಮನೊಂದಿಗೆ ಅರಣ್ಯದಲ್ಲಿ ಸಂಚರಿಸುತ್ತಿರುವಾಗ ಗೋಪ ವೇಷಧರಿಸಿದ ದೈತ್ಯನನ್ನೂ ವೃಕವೇಷ ಧರಿಸಿದ ವೃಕಾಸುರನನ್ನೂ, ಬಕ ವೇಷಧರಿಸಿದ ಬಕಾಸುರನನ್ನು ಇನ್ನು ಅನೇಕ ದೈತ್ಯರನ್ನು ಕೊಂದು ಕಂಸನಿಗೆ ಭಯವುಂಟು ಮಾಡಿದನು.

ಗೋಪಾಲಕರು ಎರಡು ಪಂಗಡಗಳಾಗಿ ಕ್ರೀಡೆಯಾಡುತ್ತಿರುವಾಗ ಪ್ರಲಂಬನೆಂಬ ಅಸುರನು ಬಂದು ಸೇರಿದ. ಹರಿಣಾಕ್ರೀಡನಕವೆಂಬ ಬಾಲಕ್ರೀಡೆಯಲ್ಲಿ ತಾನೂ ಭಾಗಿಯಾದ. ಶ್ರೀಕೃಷ್ಣನಿಗೆ ಇದು ತಿಳಿದಿತ್ತು. ಆಟದ ನಿಯಮದಂತೆ ಸೋತ ಪ್ರಲಂಬನು ಬಲರಾಮನನ್ನು ಹೊತ್ತು ಭಾಂಡೀರಕ ವೃಕ್ಷದ ಕಡೆ ನಡೆದ. ಭಯಂಕರ ರೂಪ ಧರಿಸಿ ಆಕಾಶಕ್ಕೆ ನೆಗೆದ. ಬಲದೇವನಿಗೆ ಭಯವಾಗಿ ಶ್ರೀಕೃಷ್ಣನನ್ನು ಸ್ತುತಿಸಿದಾಗ ಶುಕ್ಲಕೇಶಾವೇಶವನ್ನು ಹೊಂದಿದ ಬಲನು ಅವನನ್ನು ಒಂದೇ ಮುಷ್ಟಿಯಿಂದ ಹೊಡೆದು ಕೊಂದು ಹಾಕಿದನು.

---

ಪಾಪಿಯು ಫಲದೊಂದಿಗೆ ಬಿದ್ದು ಪಾತ್ರೈಕಫಲನಾದ. ಧೇನುಕಾಸುರನು ಕತ್ತೆಯ ವೇಷಧರಿಸಿ ಅವನ ಬುದ್ಧಿಯೂ ಕತ್ತೆಯ ಬುದ್ಧಿಯಂತಿತ್ತು. ಅವನನ್ನು ಎತ್ತಿ ಬಿಸಾಡಿದ ಬಲರಾಮನ ಶಕ್ತಿ ಶುಕ್ಲಕೇಶದಿಂದ ಬಂದಿದ್ದು ಕೊಂದದ್ದು ಬಲರಾಮನಾದರೂ ಶ್ರೀಕೃಷ್ಣನನ್ನು ಧೇನುಕಾಸುರಭಂಜನ ಎನ್ನಲಾಗಿದೆ. ಎಲ್ಲರಿಗೂ ಬಲದೇವನೆ ಮೊದಲಾದ ಎಲ್ಲರಿಗೂ ಬಲದಾತಾ ಶ್ರೀಕೃಷ್ಣನೆ.

**ಸವ್ವೈ ಬಲಂ ಬಲಿನಾಂ ಚಾಪರೇಷಾಂ ।**

**ತಾಳಫಲ :** ತಾಳವೃಕ್ಷದಲ್ಲಿ ಶ್ರೀತಾಲ ಹಾಗೂ ಖರತಾಲವೆಂಬ ಎರಡು ಬಗೆ ಇದೆ. ಶ್ರೀತಾಲವು ತಾಟನಿಂಗು ಎಂದು ಕರೆಯುವರು. ಇದರಿಂದ ಮದ್ಯ ತಯಾರಿಸುವರು. ಇದನ್ನು ಗೋಪರು ತಿಂದದ್ದಲ್ಲ. ಮತ್ತೊಂದು ಖರತಾಲ ಇದನ್ನು ಖರ್ಜೂರವೆಂದಿದ್ದಾರೆ ಜನಾರ್ದನ ಭಟ್ಟರು. ಇದು ನಿಷಿದ್ಧವಲ್ಲ.

**ಖರತಾಲ – ಶ್ರೀತಾಲ ಇತಿ ತಾಲಭೇದೋಽಸ್ತಿ ತತ್ರ ಖರತಾಲವನಸ್ಯ ಮಧ್ಯಸ್ಥಾಃ ।**

ದಾನವೋ ಮುಷ್ಟಿನೈಕೇನ ಕಂಸಾಮಾತ್ಯೋ ನಿಪಾತಿತಃ ॥ 25 ॥

ದೇವಪುತ್ರರಂತೆ ವಿರಾಜಮಾನರಾದ ವಸುದೇವ ಪುತ್ರರು ಮಹಾಬಲಿಷ್ಠರಾಗಿ ಗರ್ಗರಿಂದ ಸಂಸ್ಕಾರ ಪಡೆದು ಬೆಳೆದರು. ಕ್ರಮೇಣ ಅಭಿವೃದ್ಧಿ ಹೊಂದಿ ಬಲ–ಕೃಷ್ಣರೇ ಹಿಮಾಲಯ ಪರ್ವತದಲ್ಲಿ ಮದಭರಿತ ಸಿಂಹ ಮರಿಗಳಂತೆ ಪ್ರಾಯ ಹೊಂದಿದರು.

ದೇವೋಪಮರಾದ ಇವರಿಬ್ಬರೂ ಗೊಲ್ಲರ ಸ್ತ್ರೀಯರ ಮನಸ್ಸನ್ನೆ ಆಕರ್ಷಿಸಿದರು.

ಏತೌ ಜಯೇ ವಾ ಯುದ್ಧೇ ವಾ ಕ್ರೀಡಾಸು ವಿವಿಧಾಸು ಚ ।
ನಂದಗೋಪಸ್ಯ ಗೋಪಾಲಾಃ ನ ಶೇಕುಃ ಪ್ರಸಮೀಕ್ಷಿತುಮ್ ॥ 26 ॥

ವ್ಯೂಢೋರಸ್ಕೌ ಮಹಾಬಾಹೂ ಶಾಲಸ್ಕಂಧಾವಿವೋದ್ಗತೌ ।
ಶ್ರುತ್ವಾಽಸೌ ವ್ಯಥಿತಃ ಕಂಸಃ ಮಂತ್ರಿಭಿಃ ಸಹಿತೋಽಭವತ್ ॥ 27 ॥

ನಂದಗೋಪನ ಪುತ್ರಮಿತ್ರ ಪರಿವಾರದವರಾದ ಗೋಪಾಲಕರೆಲ್ಲರೂ ಈ ಶ್ರೀಕೃಷ್ಣ–ಬಲರಾಮರನ್ನು ಯುದ್ಧದಲ್ಲಾಗಲೀ, ವಿವಿಧ ಆಟಗಳಲ್ಲಿ ಪಾಠಗಳಲ್ಲಾಗಲೀ ಜಯಿಸಲು ಸಾಧ್ಯವಾಗಲಿಲ್ಲ.

ವಿಶಾಲವಾದ ಎದೆ, ದೀರ್ಘವೃತ್ತಗಳಾದ ಬಾಹುಗಳು, ಸಕಲರನ್ನೂ ತಮ್ಮೆಡೆಗೆ ಸೆಳೆಯುವ ಮುಖಸೌಂದರ್ಯ ಮೈಕಟ್ಟು ಮೊದಲಾದ ಸಲ್ಲಕ್ಷಣ ಭರಿತರಾಗಿ ಮೆರೆದಾಡುತ್ತಿರುವ ವಿಷಯ ತಿಳಿದ ಕಂಸನು ವ್ಯಥೆಗೊಳಗಾಗಿ ತನ್ನ ಆಪ್ತೇಷ್ಟ ಮಂತ್ರಿಗಳಿಂದ ಕೂಡಿ ಸಮಾಲೋಚಿಸಿದನು.

### ಕಂಸನಿಂದ ವಸುದೇವನ ಬಂಧನ

ನಾಶಕಚ್ಚ ಯದಾ ಕಂಸಃ ಗೃಹೀತುಂ ಬಲಕೇಶವೌ ।
ನಿಜಗ್ರಾಹ ತತಃ ಕ್ರೋಧಾದ್ ವಸುದೇವಂ ಸಬಾಂಧವಮ್ ॥ 28 ॥

ಕಂಸಸ್ತು ಪಿತರಂ ಬಧ್ವಾ ಶೂರಸೇನಾನ್ ಶಶಾಸ ಹ ।
ಜರಾಸಂಧಂ ಸಮಾಶ್ರಿತ್ಯ ತಥೈವಾ ಭೀಷ್ಮಕೌಹ್ವತಿ ॥ 29 ॥

ಯಾವಾಗ ಕಂಸನಿಗೆ ಬಲರಾಮ–ಕೃಷ್ಣರನ್ನು ಹಿಡಿಯಲಾಗದಿದ್ದಾಗ ಬಲರಾಮಕೃಷ್ಣರ ತಂದೆಯಾದ ವಸುದೇವನನ್ನು ಬಂಧನಕ್ಕೊಳಪಡಿಸಿದನು. ಹಾಗೆಯೆ ತನ್ನ ತಂದೆಯಾದ ಉಗ್ರಸೇನನ್ನೂ ಜೈಲಿನಲ್ಲಿರಿಸಿ, ಜರಾಸಂಧ, ಆಹ್ವೃತಿ, ಭೀಷ್ಮಕರ ನೆರವಿನೊಂದಿಗೆ ತಾನೇ ಶೂರಸೇನರ ದೇಶವನ್ನು ಆಳತೊಡಗಿದನು.

## ಕಂಸನಿಂದ ಬಿಲ್ಲುಹಬ್ಬ

**ಕಸ್ಯಚಿತ್ ತ್ವಥಕಾಲಸ್ಯ ಮಥುರಾಯಾಂ ಮಹೋತ್ಸವಮ್ ।**
**ಪಿನಾಕಿನಂ ಸಮುದ್ದಿಶ್ಯ ಚಕ್ರೇ ಕಂಸೋ ನರಾಧಿಪಃ ॥ 30 ॥**
**ತತ್ರ ಮಲ್ಲಾಃ ಸಮಾಜಗ್ಮುಃ ನಾನಾದೇಶ್ಯಾಃ ವಿಶಾಂಪತೇ ।**
**ತತೋ ಕಂಸಃ ಮಹಾತೇಜಾಃ ರಂಗವಾಟಂ ಮಹಾಧನಮ್ ॥ 31 ॥**
**ಕುಶಲೈಃ ಕಾರಯಾಮಾಸ ಶಿಲ್ಪಿಭಿಃ ಸಾಧುನಿಷ್ಠಿತೈಃ ।**
**ತತ್ರ ಮಂಚಸಹಸ್ರಾಣಿ ಪೌರಜಾನಪದೈಃ ಜನೈಃ ।**
**ಸಮಾಕೀರ್ಣಾನಿ ದೃಶ್ಯಂತೇ ಜ್ಯೋತೀಂಷಿ ಗಗನೇ ಯಥಾ ॥ 32 ॥**

ಕೆಲಕಾಲದ ನಂತರ ಕಂಸನು ಮಥುರಾ ಪಟ್ಟಣದಲ್ಲಿ ರುದ್ರದೇವತಾಕವಾದ ಮಹೋತ್ಸವವನ್ನಾಚರಿಸಿದನು.

ಆ ಮಹೋತ್ಸವಕ್ಕಾಗಿ ನಾನಾ ದೇಶಗಳಿಂದ ಬಲಿಷ್ಠರಾದ ಮಲ್ಲರು, ನೃತ್ಯ ನಾಟ್ಯ ಕುಶಲರು, ಗಾಯಕರೂ ಸಹ ಲೆಕ್ಕವಿಲ್ಲದಷ್ಟು ಬಂದು ಸೇರಿದ್ದರು.

ಕಂಸನು ಬಹಳ ಧನವ್ಯಯ ಮಾಡಿ ಕುಶಲರಾದ ಶಿಲ್ಪಿಗಳಿಂದ ವಿಶಾಲವಾದ ರಂಗ ಮಂಟಪವನ್ನು ಮಾಡಿಸಿದ್ದನು.

ಆ ರಂಗ ಮಂಟಪದಲ್ಲಿ ವಿವಿಧ ವಿನೋದಾವಳಿಗಳನ್ನು ಏರ್ಪಡಿಸಿದ್ದು, ಅದನ್ನು ನೋಡಲೆಂದು ಅದರ ಸುತ್ತಲೂ ಮಹಾಜನರು ಕುಳಿತು ನೋಡುವುದಕ್ಕಾಗಿ ಸಾವಿರಾರು ಆಸನಗಳನ್ನು ಸಿದ್ಧಪಡಿಸಿದ್ದನು. ಇವುಗಳು ರಂಗಮಂಟಪವೆಂಬ ಆಕಾಶದಲ್ಲಿ ಕಂಗೊಳಿಸುವ ಅಸಂಖ್ಯಾತ ನಕ್ಷತ್ರಗಳಂತೆ ತೋರುತ್ತಿದ್ದವು.

**ಭೋಜರಾಜಃ ಶ್ರಿಯಾ ಜುಷ್ಟಂ ರಂಗವಾಟಂ ಮಹರ್ಧಿಮತ್ ।**
**ಆರುರೋಹ ತತಃ ಕಂಸಃ ವಿಮಾನಂ ಸುಕೃತೀ ಯಥಾ ॥ 33 ॥**

ಕಂಸನೂ ಸಹ ಪುಣ್ಯಾತ್ಮರು ವಿಮಾನವನ್ನೇರುವಂತೆ ಶಿಲ್ಪಕಲೆಯ ಶೋಭೆಯಿಂದ ಸಮೃದ್ಧವಾದ ರಂಗವಾಟದ ಮಧ್ಯದಲ್ಲಿದ್ದ ಸಿಂಹಾಸನವನೇರಿ ಕುಳಿತನು.[6]

---

6. ಮಂಚಂ ವಿವೇಶ ಸಹ ಜಾನಪದೈಶ್ಚ ಪೌರೈಃ
ನಾನಾನುಮಂಚಕಗತೈಃ ಯುವತೀ ಸಮೇತೈಃ ॥ – *ತಾ.ನಿ. 13/107*

## ಕುವಲಯಾಪೀಡ

**ರಂಗವಾಟೇ ಗಜಂ ಮತ್ತಂ ಪ್ರಭೂತಾಯುಧ ಕಲ್ಪಿತಮ್ ।**
**ಶೂರೈರಧಿಷ್ಠಿತಂ ಕಂಸಃ ಸ್ಥಾಪಯಾಮಾಸ ವೀರ್ಯವಾನ್ ॥ 34 ॥**

ಮಹಾಪರಾಕ್ರಮಿಯಾದ ಕಂಸನು ರಂಗಮಂಟಪದ ಹೆಬ್ಬಾಗಿಲಿನಲ್ಲಿ ಮದಭರಿತವಾದ 'ಕುವಲಯಾಪೀಡ' ಎಂಬ ಆನೆಯನ್ನು ಹಾಗೂ ಅದರ ಪಾರ್ಶ್ವದಲ್ಲಿ ಬಹು ಪರಾಕ್ರಮಿಗಳಾದ ಆಯುಧಧಾರಿಗಳಾದ ಮಾಹುತರನ್ನೂ ನಿಲ್ಲಿಸಿದ್ದನು. ಕುವಲಯಾಪೀಡವೂ ಸಹ ದಿತಿಪುತ್ರನಾದ ರಿಷ್ಟನೆಂಬ ದೈತ್ಯನೇ ಆಗಿದ್ದು. ಕಂಸನ ವಾಹನವಾಗಿದ್ದನು[7] *[ರಿಷ್ಟೋನಾಮ ದಿತೇಃ ಪುತ್ರಃ].*

**ಯದಾ ಹಿ ಸ ಮಹಾತೇಜಾ ರಾಮಕೃಷ್ಣೌ ಸಮಾಗತೌ ।**
**ಶುಶ್ರಾವ ಪುರುಷವ್ಯಾಘ್ರೌ ಸೂರ್ಯಾಚಂದ್ರಮಸಾವಿವ ॥ 35 ॥**

**ತದಾಪ್ರಭೃತಿ ಯತ್ನೋಽಭೂದ್ ರಕ್ಷಾಂ ಪ್ರತಿ ನರಾಧಿಪ ।**
**ನ ಶಿಶ್ಯೇ ಸುಖಂ ರಾತ್ರೌ ರಾಮಕೃಷ್ಣೌ ವಿಚಿಂತಯನ್ ॥ 36 ॥**

ಮಹಾತೇಜಸ್ವಿಗಳೂ ಪುರುಷಶ್ರೇಷ್ಠರೂ ಆದ ಸೂರ್ಯಚಂದ್ರರಂತಿರುವ ಬಲರಾಮ ಕೃಷ್ಣರನ್ನು ಬಂದರೆಂದು ಕೇಳಿದೊಡನೆಯೆ ಕಂಸನು ಸ್ವತಃ ಪರಾಕ್ರಮಿಯಾಗಿದ್ದರೂ, ರಾಮಕೃಷ್ಣರ ಶತ್ರು ಹನನರೂಪ ಕಾರ್ಯಗಳನ್ನು ಚಿಂತಿಸುತ್ತಾ ರಾತ್ರಿಯಲ್ಲಿ ಸುಖವಾಗಿ ನಿದ್ರಿಸಲಿಲ್ಲ.

ಅವರಿಬ್ಬರು ಬಂದ ವಿಷಯ ಕೇಳಿ ಅವರಿಂದ ರಕ್ಷಣೆ ಮಾಡಿಕೊಳ್ಳಲು ಕಂಸನು ಮಹಾಪ್ರಯತ್ನವನ್ನೇ ಮಾಡಿದನು.[8]

---

7. ಶ್ರೀಕೃಷ್ಣನು ಕಂಸನ ಆಯುಧಾಗಾರ ಪ್ರವೇಶಿಸಿ ಶಿವದತ್ತವಾದ ಧನುಸ್ಸನ್ನು ಶ್ರೀರಾಮನಂತೆ ಮುರಿದು ಹಾಕಿದನು. ಇದೊಂದು ಐರಾವತವು ಕಬ್ಬಿನಜಲ್ಲೆಯನ್ನು ಮುರಿಯು–ವಂತಾಯಿತು.

   **1) ಕರೇಣ ವಾಮೇನ ಸಲೀಲಮುದ್ಧೃತ್ಯ ಸಜ್ಯಂ ಚ ಕೃತ್ವಾ ನಿಮಿಷೇಣ ಪಶ್ಯತಾಮ್।**
   **ನೃಣಾಂ ವಿಕೃಷ್ಯ ಪ್ರಬಭಂಜ ಮಧ್ಯತೋ ಯಥೇಕ್ಷುದಂಡಂ ಮದಕರ್ಯುರುಕ್ರಮಃ ॥** – *ಭಾಗವತ 10/42/17*

   **2) ಯಥೇಕ್ಷು ದಂಡಂ ಶತಮನ್ಯುಕುಂಜರ :** ಧನುಸ್ಸು ಮುರಿಯುವಾಗ ಉಂಟಾದ ಶಬ್ದ ಭೂಮ್ಯಾಕಾಶವನ್ನು ತುಂಬಿಸಿತು. ಈ ಶಬ್ದ ಕೇಳಿ ಕಂಸ ಅತೀವಯ ಭಯಪಟ್ಟನು.
   **ಧನುಷೋ ಭಜ್ಯಮಾನಸ್ಯ ಶಬ್ದಃ ಖಂ ರೋದಸೀ ದಿಶಃ ।**
   **ಪೂರಯಾಮಾಸ ಯಂ ಶ್ರುತ್ವಾ ಕಂಸಃ ತ್ರಾಸ ಮುಪಾಗಮತ್ ॥** – *ಭಾಗ 10/42/18*

8. **ಕಂಸನ ಭಯ :** ಕಂಸನಿಗೆ ಬಲರಾಮ ಕೃಷ್ಣರ ಅದ್ಭುತ ಕಾರ್ಯ ಕೇಳಿ ತಿಳಿದಿದ್ದ. ಅವರ ಪ್ರವೇಶದ ವಿಷಯ ಕೇಳಿ ಭಯದಿಂದ ತನ್ನನ್ನು ರಕ್ಷಿಸಿಕೊಳ್ಳಲು ಇಚ್ಛಿಸಿದ.

## ಕುವಲಯ ಪೀಡ ವಧೆ

**ಶ್ರುತ್ವಾ ತು ರಾಮಃ ಕೃಷ್ಣಶ್ಚ ತಂ ಸಮಾಜಮನುತ್ತಮಮ್ ।**
**ಉಭೌ ವಿವಿಶತುಃ ವೀರೌ ಶಾರ್ದೂಲೌ ಗೋವ್ರಜಂ ಯಥಾ ॥ 37 ॥**

ಮಥುರೆಯಲ್ಲಿ ಸಮಾಜೋತ್ಸವವು ನಡೆಯುತ್ತಿರುವ ವಿಷಯ ತಿಳಿದ ರಾಮಕೃಷ್ಣರು, ಹುಲಿಗಳು ಗೋಕೊಟ್ಟಿಗೆಗೆ ನುಗ್ಗುವಂತೆ ರಂಗಶಾಲೆಗೆ ಪ್ರವೇಶಿಸಿದರು.

ಮಹಾದ್ವಾರದಲ್ಲಿದ್ದ ಆನೆ ಹಾಗೂ ಅದರ ಮೇಲೆ ಕುಳಿತಿದ್ದ ಮಾಹುತರು ರಾಮಕೃಷ್ಣರನ್ನು ಒಳಗೆ ಹೋಗದಂತೆ ತಡೆದರು.

ಕೂಡಲೇ ಕುವಲಯಾಪೀಡವನ್ನೂ ಮಾಹುತರನ್ನೂ ಹೊಡೆದು ಕೊಂದು ಹಾಕಿ, ರಂಗಮಂಟಪ ಪ್ರವೇಶಿಸಿದರು.

ನಂತರ ಇವರನ್ನು ತಡೆಯಲು ಬಂದ ಚಾಣೂರ ಹಾಗೂ ಮುಷ್ಟಿಕರೆಂಬ ಮಹಾಮಲ್ಲರನ್ನೂ ಕಂಸನ ಮುಂದೆಯೆ ಕಂಸನ ಪರಲೋಕ ಪ್ರಯಾಣ ನಿರ್ವಿಘ್ನವಾಗಿ ನಡೆಯುವುದಕ್ಕಾಗಿ ಅವರಿಬ್ಬರನ್ನೂ ತೆಂಗಿನಕಾಯಿಯಂತೆ ನಿವಾಣಿಸಿ ಕೊಂದು ಹಾಕಿದನು *[ಚಾಣೂರಾಂಧ್ರ ನಿಷೂದನಃ].*

**ಚಾಣೂರಾಂಧ್ರೌ ವಿನಿಷ್ಪಿಷ್ಯ ಕೇಶವೇನ ಬಲೇನ ಚ ।**
**ಔಗ್ರಸೇನಿಃ ಸುದುಷ್ಟಾತ್ಮಾ ಸಾನುಜೋ ವಿನಿಪಾತಿತಃ ॥ 38 ॥**

ನಂತರ ದುಷ್ಟನಾದ ಕಂಸನನ್ನು ಅವನು ಕುಳಿತಿದ್ದ ಮಂಚಕ್ಕೆ ಹಾರಿ ಅವನ ಕೂದಲನ್ನು ಹಿಡಿದೆಳೆದು ಕೆಳಗೆ ಹಾಕಿ ಮುಷ್ಟಿಘಾತದಿಂದ ಕೊಂದು ಹಾಕಿದನು. ಶಿವನ ವರದಿಂದಾಗಿ ಅವಧ್ಯತ್ವ ಇದ್ದೂ ಶಿವ ವರದಿಂದ ಅವಧ್ಯರಾದ ಇಪ್ಪತ್ತು ಆಕ್ಷೋಹಿಣೀ ಬಲವಿದ್ದರೂ ತೋಶಲ ಮೊದಲಾದ ಏಳು ತಮ್ಮಂದಿರಿದ್ದರೂ ಕಂಸ ಸತ್ತ.

---

ಅದಕ್ಕಾಗಿ ಭೂಮಿಗೆ ಭಾರಭೂತವಾಗಿರುವ ರಿಷ್ಟ ಎಂಬ ದೈತನ ರೂಪವಾದ ಕುವಲಯಾಪೀಡ ಆನೆಯನ್ನು ದ್ವಾರದಲ್ಲಿ ಅವರನ್ನು ತಡೆಯಲು ನಿಲ್ಲಿಸಿದ್ದ, ಸಾವಿರಾರು ಮಾಹುತರೂ ಸಜ್ಜಾಗಿದ್ದರು. ಅವರೊಂದಿಗೆ ವರಾಹ ಹಾಗೂ ಕಿಶೋರರೆಂಬ ದಾನವರ ರೂಪರಾದ ಚಾಣೂರ ಹಾಗೂ ಮುಷ್ಟಿಕರನ್ನೂ ಇನ್ನೂ ಅನೇಕ ಮಲ್ಲರನ್ನೂ ನಿಲ್ಲಿಸಿ ಶ್ರೀಕೃಷ್ಣನನ್ನು ನಿಗ್ರಹಿಸಲು ಬಯಿಸಿದ.

1) **ಚಾಣೂರ ಮುಷ್ಟಿಕ ಮುಖಾನಪಿ ಮಲ್ಲವೀರಾನ್ ।**
**ರಂಗೇ ನಿಧಾಯ ಹರಿಸಂಯಮನಂ ಕಿಲೈಚ್ಛತ್** ॥ *–ತಾ.ನಿ. 13/108*

2) **ವರಾಹಶ್ಚ ಕಿಶೋರಶ್ಚ ಜಾತೌ ಚಾಣೂರ ಮುಷ್ಟಿಕೌ** ॥ *–ಅಂಶಾವತಾರ 29*

**ಯತ್ ಕೃತಂ ಯದುಸಿಂಹೇನ ದೇವೈರಪಿ ಸುದುಷ್ಕರಮ್ ।**
**ಕರ್ಮ ತತ್ ಕೇಶವಾದನ್ಯಃ ಕರ್ತುಮರ್ಹತಿ ಕಃ ಪುಮಾನ್ ॥ 39 ॥**

ಯದುಸಿಂಹನಾದ ಕೃಷ್ಣನು ಮಾಡಿದ ಕಂಸಹನನಾದಿ ಕಾರ್ಯವನ್ನೂ ದೇವತೆಗಳೂ ಮಾಡಲಾರರು. ಹೀಗಿರುವಾಗ ಶ್ರೀಕೃಷ್ಣನನ್ನು ಹೊರತುಪಡಿಸಿ ಬೇರಾರು ಈ ಸುದುಷ್ಕರ ಕಾರ್ಯವನ್ನು ಮಾಡಿಯಾರು?

**ಯದ್ಧಿ ನಾಧಿಗತಂ ಪೂರ್ವೈಃ ಪ್ರಹ್ಲಾದ ಬಲಿ ಶಂಬರೈಃ ।**
**ತದಿದಂ ಪ್ರಾಪಿತಂ ವಿತ್ತಂ ಶೌರಿಣಾ ಭವತಾಂ ಕೃತೇ ॥ 40 ॥**

ಪ್ರಹ್ಲಾದ – ಬಲಿ – ಶಂಬರಾದಿ ಪೂರ್ವಜರಿಂದ ಸಂಪಾದಿಸಲಾಗದ ಅಪಾರ ಧನರಾಶಿಯನ್ನು ಶ್ರೀಕೃಷ್ಣನು ನಿಮಗಾಗಿ ಸಂಪಾದಿಸಿ ತಂದಿರುತ್ತಾನೆ.

**ಏತೇನ ಮುರುಮಾಕ್ರಮ್ಯ ದೈತ್ಯಂ ಪಂಚಜನಂ ತಥಾ ।**
**ನಿಷ್ಕ್ರಮ್ಯ ಶೈಲ ಸಂಘಾತಾನ್ ನಿಸುಂದಃ ಸಗಣೋ ಹತಃ ॥ 41 ॥**
**ನರಕಶ್ಚ ಹತೋ ಭೌಮಃ ಕುಂಡಲೇ ಚಾಹೃತೇ ಶುಭೇ ।**
**ಪ್ರಾಪ್ತಂ ಚ ದಿವಿ ದೇವೇಷು ಕೇಶವೇನ ಮಹದ್ಯಶಃ ॥ 42 ॥**

ಪ್ರಬಲರಾದ ಅನೇಕ ದೈತ್ಯ ಸಂಘವನ್ನು ನಿಗ್ರಹಿಸಿದನಲ್ಲದೆ ಪ್ರಸಿದ್ಧನಾದ ಭೂಮಿಪುತ್ರನಾದ ನರಕಾಸುರನನ್ನೂ ಕೊಂದು, ಅವನು ಅಪಹರಿಸಿ ತಂದಿದ್ದ ಅದಿತಿಯ ಕಿವಿಯೋಲೆಯೆರಡನ್ನೂ ಅದಿತಿಗೆ ನೀಡಿ ಸಂತೋಷ ಪಡಿಸಿದನು. ಹೀಗಾಗಿ ಕೇಶವನು ದೇವಲೋಕದಲ್ಲಿಯೂ ದೇವತೆಗಳಿಂದಲೂ ಮಹಾಯಶಸ್ಸನ್ನು ಗಳಿಸಿರುವನು.

ಯಾದವರೇ! ನೀವೆಲ್ಲರೂ ಶ್ರೀಕೃಷ್ಣನ ಬಾಹುಬಲವನ್ನಾಶ್ರಯಿಸಿ ಶತ್ರು ಭಯ ಶತ್ರು ಪೀಡೆಗಳಿಂದ ಮುಕ್ತರಾಗಿರುವಿರಿ. ಆದ್ದರಿಂದ ನೀವೆಲ್ಲರೂ ನಿರ್ಭೀತರಾಗಿ ನಿರ್ಮತ್ಸರರಾಗಿ ವಿವಿಧ ಯಜ್ಞ ಯಾಗಾದಿಗಳಿಂದ ಶ್ರೀಕೃಷ್ಣನನ್ನು ಸಂತೋಷಪಡಿಸಿರಿ.

ಧೀಮಂತನಾದ ಶ್ರೀಕೃಷ್ಣನು ದೇವತೆಗಳ ಮಹಾಕಾರ್ಯವನ್ನು ಸಾಧಿಸಿ ಕೊಟ್ಟಿರುವನು. ನಿಮಗೆಲ್ಲ ಪ್ರಿಯವಾದ ಈ ಶ್ರೀಕೃಷ್ಣನ ಮಹಿಮೆಯನ್ನು ನಿಮ್ಮೆಲ್ಲರಿಗೂ ಹೇಳಿದ್ದೇನೆ. ಇದನ್ನು ಕೇಳಿದ ನಿಮಗೆಲ್ಲ ಮಂಗಳವಾಗಲಿ.

ಯಾದವರೇ! ನಿಮಗೆಲ್ಲರಿಗೂ ಇಷ್ಟವಾದ ಕಾರ್ಯವನ್ನೇ ನಾನೂ ಆಲಸ್ಯವಿಲ್ಲದೆ ಮಾಡುವೆನು. ನಾನು ನಿಮ್ಮವನೆಂದು ತಿಳಿಯಿರಿ.

ನೀವೆಲ್ಲರೂ ನನಗೆ ಪ್ರೀತಿಪಾತ್ರರಾದ್ದರಿಂದಲೇ ನಾನು ನಿಮ್ಮಲ್ಲಿಯೆ ಒಬ್ಬನಾಗಿದ್ದೇನೆ ಎಂದು ದೇವೇಂದ್ರನು ಶ್ರೀಕೃಷ್ಣನನ್ನು ಸಂಬೋಧಿಸಿ ಹೇಳುವಂತೆ ನನ್ನೊಡನೇ ಹೇಳಿ ಕಳುಹಿಸಿರುವನು.

**ಯತ್ರ ಧೀಃ ಶ್ರೀಃ ಸ್ಥಿತಾ ತತ್ರ ಯತ್ರ ಶ್ರೀಸ್ತತ್ರ ಸಂನತಿಃ ।**
**ಸಂನತಿರ್ಧೀಸ್ತಥಾ ಶ್ರೀಶ್ಚ ನಿತ್ಯಂ ಕೃಷ್ಣೇ ಮಹಾತ್ಮನಿ ॥ 43 ॥**

ಎಲ್ಲಿ ಜ್ಞಾನಬಲವಿರುವುದೋ ಅಲ್ಲಿಯೇ ಸಂಪತ್ತಿರುವುದು. ಎಲ್ಲಿ ಸಂಪತ್ತಿರುವುದೋ ಅಲ್ಲಿಯೇ ವಿನಯವಿರುತ್ತದೆ. ಮಹಾನುಭಾವನಾದ ಶ್ರೀಕೃಷ್ಣನಲ್ಲಿ ವಿನಯ, ಬುದ್ಧಿಬಲ, ಸಂಪತ್ತುಗಳು ನಿತ್ಯವೂ ಮನೆ ಮಾಡಿದೆ.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ**
**ನಾರದರಿಂದ ಶ್ರೀಕೃಷ್ಣ ಮಹಿಮಾ ವರ್ಣನೆ ಎಂಬಲ್ಲಿ**
**ನೂರೊಂದನೆಯ ಅಧ್ಯಾಯ ಸಮಾಪ್ತಿ**

# ಅಥ ದ್ವೇ ಅಧಿಕಶತತಮೋಽಧ್ಯಾಯಃ

## ನರಕಾಸುರನ ದರ್ಪಶಾಂತಿ

**ಸಾಧಿತಾಃ ಮೌರವಾಃ ಪಾಶಾಃ ನಿಸುಂದನರಕೌ ಹತೌ ।**
**ಕುತಃ ಕ್ಷೇಮ್ಯಃ ಪುನಃ ಪಂಥಾಃ ಪುರಂ ಪ್ರಾಗ್ ಜ್ಯೋತಿಷಂ ಪ್ರತಿ ॥ 1 ॥**
**ಶೌರಿಣಾ ಪೃಥಿವೀಪಾಲಾಃ ತ್ರಾಸಿತಾಃ ಸ್ಪರ್ಧಿನೋ ರಣೇ ।**
**ಧನುಷಶ್ಚ ನಿನಾದೇನ ಪಾಂಚಜನ್ಯ ಸ್ವನೇನ ಚ ॥ 2 ॥**

ದೇವರ್ಷಿ ನಾರದರು ಯಾದವರನ್ನುದ್ದೇಶಿಸಿ ಪುನಃ ಶ್ರೀಕೃಷ್ಣನ ಮಹಿಮೆಗಳನ್ನು ಹೇಳಲಾರಂಭಿಸಿದರು.

ಯಾದವರೇ! ಶ್ರೀಕೃಷ್ಣನು ಮುರ[1]ನೆಂಬ ದೈತ್ಯನಿಂದ ನಿರ್ಮಿತವಾದ ಆರು ಸಾವಿರ ಕತ್ತಿಯ ಅಲಗಿನಂತಿರುವ ಪಾಶಗಳನ್ನು ಕತ್ತರಿಸಿ ಹಾಕಿದನು.

---

1. **ಮುರಪಾಶ :**
ಮುರಾಸುರನು ಶಂಖದೈತ್ಯನ ಮಗ. ಇವನಿಗೆ ಐದು ತಲೆಗಳಿದ್ದು ಜಲಸ್ತಂಭನ ವಿದ್ಯೆಯಿಂದಾಗಿ ಜಲದಡಿಯಲ್ಲಿಯೆ ವಾಸ. ಇವನಿಗೆ ಏಳುಸಾವಿರ ಮಕ್ಕಳಿದ್ದು. ಏಳು ಮಂದಿ ಪ್ರಧಾನರು. ಇವರನ್ನು ಶ್ರೀಕೃಷ್ಣ ಕೊಲ್ಲುತ್ತಾನೆ. ಉಳಿದವರನ್ನು ಗರುಡ ಕೊಂದು ಹಾಕುತ್ತಾನೆ.
**ನರಕಾಸುರ**ನಿಗೆ ಬ್ರಹ್ಮನ ಅವಧ್ಯತ್ವ ವರವಿತ್ತು. ಪರಾಜಿತನಾಗಲಾರೆ ಎಂಬ ವರವು ಇತ್ತು. ನರಕನಿಗೆ ಪೀಠ, ಮುರ, ನಿಶುಂಭ, ಹಯಗ್ರೀವ, ಪಂಚಜನರೆಂಬ ಶೂರರಾದ ಮಂತ್ರಿಗಳಿದ್ದರು. ಇವರನ್ನು ಲೋಕಪಾಲಕರೆಂದು ನಿಯಮಿಸಿ, ತಾನು ಬ್ರಹ್ಮದೇವನೆಂದು ಬೀಗುತ್ತಿದ್ದ. '**ಅಹಂ ಬ್ರಹ್ಮಾಸ್ಮಿ**' ಎಂದುಪಾಸನೆ ಇವನದು.
ನರಕನಿಗೆ ಹೊರಗೆ ಗಿರಿದುರ್ಗ, ಒಳಗೆ ಜಲದುರ್ಗ, ಅದರೊಳಗೆ 6 ಸಾವಿರ ಪಾಶಗಳು, ಇವನ ಮಂತ್ರಿಗಳಿಗೂ ಅವಧ್ಯತ್ವ ವರವಿತ್ತು. ಈ ದುರ್ಗಗಳಿಗೆ ಅಭೇದ್ಯತ್ವ

ನಿಶುಂಭ ಅಥವಾ ನಿಸುಂದ ಹಾಗೂ ನರಕನನ್ನು ಕೊಂದು ಪ್ರಾಗ್‌ಜ್ಯೋತಿಷಪುರಕ್ಕೆ ನಡೆದಾಡುವ ಮಾರ್ಗ ಸುಗಮಗೊಳಸಿದನು.

ತನ್ನೊಂದಿಗೆ ಸ್ಪರ್ಧಿಸಲು ಬಂದ ರಾಜರನ್ನು ಧನುಷ್ಟಂಕಾರದಿಂದಲೂ ಪಾಂಚಜನ್ಯ ಶಂಖದ ನಿನಾದದಿಂದಲೂ ಭಯಗೊಳಸಿದನು.

**ರುಗ್ಮಿಣಂ ಯುಧಿ ನಿರ್ಜಿತ್ಯ ಮಹಾಬಲಪರಾಕ್ರಮಮ್ ।**
**ರುಕ್ಮಿಣೀಮಾಜಹಾರಾಶು ಕೇಶವೋ ವೃಷ್ಣಿಪುಂಗವಃ ॥ 3 ॥**

ಭೀಷ್ಮಕನ ಪುತ್ರಿಯಾದ ರುಕ್ಮಿಣಿಗೆ ಒಪ್ಪಿಗೆ ಇಲ್ಲದ ಶಿಶುಪಾಲನಿಗೆ ಕೊಟ್ಟು ವಿವಾಹ ಮಾಡಿಸುವ ಸಿದ್ಧತೆಯಲ್ಲಿದ್ದ ರುಗ್ಮಿಯನ್ನು ಯುದ್ಧದಲ್ಲಿ ಪರಾಭವಗೊಳಸಿ, ಸೂರ್ಯನಂತೆ ಹೊಳೆಯುವ ರಥದಲ್ಲಿ ರುಕ್ಮಿಣಿಯನ್ನು ಅಪಹರಿಸಿ ತಂದನು.

ನಂತರ ಶಂಖಚಕ್ರಾದಿಯುಕ್ತ ಶ್ರೀಕೃಷ್ಣನು ರುಕ್ಮಿಣಿಯನ್ನು ಮೂಲಮಾಧವನಲ್ಲಿ ವಿವಾಹವಾದನು.

ಜಾರೂಥೀನಗರದಲ್ಲಿ ಶ್ರೀಕೃಷ್ಣನು ಆಹ್ವೃತಿ ಮತ್ತು ಭೀಷ್ಮಕರಾಜನ ಸೋದರನಾದ ಕ್ರಥನ ಮಗನಾದ ಕ್ರಾಥನನ್ನೂ, ಶಿಶುಪಾಲನನ್ನೂ, ದಂತವಕ್ತ್ರನನ್ನೂ ಶತಧನ್ವನನ್ನೂ ಯುದ್ಧದಲ್ಲಿ ಸೋಲಿಸಿ ಓಡಿಸಿದನು.

---

ವರವಿತ್ತು. ಇಂತಹ ಸಮೃದ್ಧವಾದ **'ಪ್ರಾಗ್ ಜ್ಯೋತಿಷ'** ಪುರವನ್ನೇ ನೀಡಿದ್ದ ಬ್ರಹ್ಮದೇವ. [ಈಗಿನ ಅಸ್ಸಾಂ]
ವರಾಹನು ಭೂಮಿಯನ್ನು ಉದ್ಧರಿಸುತ್ತಿರುವಾಗ ಅವನ ಸ್ಪರ್ಶದಿಂದ ಭೂದೇವಿ ಪಡೆದ ಪುತ್ರ ನರಕಾಸುರ. ಇವನಲ್ಲಿ ಕರ್ಣನ ಆವೇಶ. ವೈಷ್ಣವಾಸ್ತ್ರ ಭೂದೇವಿಯು ಪಂಚಭೂತಗಳಲ್ಲಿ ಒಂದಾಗಿದ್ದ ಭೂಮಿಯು. ಭೂರೂಪ ವಿಶೇಷವಾಗಿ ಆವಿಷ್ಟವಾಗಿತ್ತು. ಈ ನರಕನಲ್ಲಿ ವಾಯುದೇವನೂ ಸೇರಿದ್ದ. ಭಗವಂತನ ಅಂಗಸಂಗ ಲಕ್ಷ್ಮಿ ಇದ್ದರೆ ಮಾತ್ರ. ಹೀಗಾಗಿ ಪ್ರಕೃತ್ಯಭಿಮಾನಿನಿ ಭೂರೂಪವಿತ್ತು. ದೃಪ್ತ ನರಕನ ಕಾಟ ತಾಳಲಾರದೆ ಶ್ರೀಕೃಷ್ಣನಿಗೆ ಇಂದ್ರನು ಮೊರೆ ಹೋದಾಗ ಆತನು ದ್ವಾರಕೆಯಿಂದ ವಾಯುವ್ಯ ದಿಕ್ಕಿನಲ್ಲಿರುವ ಪುರಕ್ಕೆ ಹೋಗಿ ಗಿರಿದುರ್ಗವನ್ನು ಗದೆಯಿಂದಲೂ, ಜಲದುರ್ಗವನ್ನು ವಾಯವ್ಯಾಸ್ತ್ರದಿಂದಲೂ ಒಣಗಿಸಿ, ಮುರಪಾಶವನ್ನು ನಂದಕ ಖಡ್ಗದಿಂದ ಕತ್ತರಿಸಿ ಹಾಕಿದನು. ಐವರು ಮಂತ್ರಿಗಳ ಮುರ-ನಿಶುಂಭ ಚಕ್ರದಿಂದ ಶಿರಚ್ಛೇದನ ಮಾಡಿದನು. ಹೀಗೆ ದುರ್ಗಗಳೆಲ್ಲವನ್ನೂ ನಾಶ ಮಾಡಿದ್ದರಿಂದ ಅವನ ನಗರ ಪ್ರಾಗ್ ಜ್ಯೋತಿಷಪುರಕ್ಕೆ ಮಾರ್ಗವೂ ಸುಗಮವಾಯಿತು.
**ಗಿರಿಂ ದುರ್ಗಂ ಗದಯಾ ನಿರ್ಬಿಭೇದ**
**ವಾಯವ್ಯಾಸ್ತ್ರೇಣ ಉದಕಂ ಶೋಷಯಿತ್ವಾ**
**ಚಕರ್ತ ಖಡ್ಗೇನ ಮುರಸ್ಯ ಪಾಶಾನ್** ॥ – *ತಾ.ನಿ. 20/94*

**ಚಾರೂಥ್ಯಾಮಾಹ್ವತಿ: ಕ್ರಾಥ: ಶಿಶುಪಾಲಶ್ಚ ನಿರ್ಜಿತ: ।**
**ವಕ್ರಶ್ಚ ಸಹ ಸೈನ್ಯೇನ ಶತಧನ್ವಾಶ್ಚ ನಿರ್ಜಿತ: ॥ 4 ॥**
**ಪರ್ವತಾನಾಂ ಸಹಸ್ರಂ ಚ ಚಕ್ರೇಣ ಪುರುಷೋತ್ತಮ: ।**

ಇಂದ್ರದ್ಯುಮ್ನರಾಜ, ಕಾಲಯವನನ್ನು ಕೊಂದನು. ಮಾಯಾವಿಯಾದ ಸೌಭದೇಶಾಧಿಪತಿ ಸಾಲ್ವ ಸನಾದರು ಗಗನದಲ್ಲಿ ನಿಂತು ತನ್ನ ಮಾಯೆಯಿಂದಾಗಿ ಕೃಷ್ಣನೊಂದಿಗೆ ಯುದ್ಧ ಮಾಡುತ್ತಾ ದೊಡ್ಡ ದೊಡ್ಡ ಬಂಡೆಗಳನ್ನು, ಬಾಣಗಳನ್ನೂ ಮಳೆಯಂತೆ ವರ್ಷಿಸುತ್ತಿದ್ದಾಗ ಶ್ರೀಕೃಷ್ಣನು ತನ್ನ ಚಕ್ರದಿಂದಲೇ ಆ ಪರ್ವತಗಳನ್ನು ಪುಡಿ ಮಾಡಿ, ಸಾಲ್ವನನ್ನೂ ಕೊಂದು ಹಾಕಿದನು. ಅವನ ಮಂತ್ರಿ ದ್ಯುಮತ್ಸೇನನನ್ನೂ ಕೊಂದನು.

**ಗೋಪತಿ: ತಾಲಕೇತುಶ್ಚ ನಿಹತೌ ಶಾಂರ್ಗಧನ್ವ ನಾ ।**
**ಅಕ್ಷಪ್ರಪತನೇ ಚೈವ ಡಿಂಭೋ ಹಂಸಶ್ಚ ದಾನವೌ ॥ 5 ॥**
**ಉಭೌ ತಾವಪಿ ಕೃಷ್ಣೇನ ಸಾನುಗೌ ವಿನಿಪಾತಿತೌ ॥ 6 ॥**

ಇದಲ್ಲದೆ ಮಹೇಂದ್ರ ಶಿಖರದಲ್ಲಿದ್ದ ಇರಾವತೀಯೆಂಬ ನಗರದಲ್ಲಿ ಅಗ್ನಿಸೂರ್ಯರಂತೆ ಪ್ರಜ್ವಲಿಸುವ ಕಾಂತಿವುಳ್ಳ ಗೋಪತಿ ಎಂಬ ಶಿಬಿಪುತ್ರನನ್ನೂ, ತಾಲಕೇತುವನ್ನೂ ಕೊಂದು ಹಾಕಿದನು.

ಹಂಸ ಡಿಭಿಕ[2]ರೆಂಬ ದೈತ್ಯರನ್ನು ಅಕ್ಷಪ್ರಪತನವೆಂಬಲ್ಲಿ ಅವರ ಅನುಯಾಯಿಗಳಾದ ಭೂತಗಳು, ಹಿಡಿಂಬ ಸಹಿತರಾಗಿ ಕೊಂದು ಹಾಕಿದನು.

---

2. **ಹಂಸ–ಡಿಭಿಕ** : ಸಾಲ್ವ ದೇಶದ ರಾಜನಾದ ಬ್ರಹ್ಮದತ್ತನು ಶಿವನ ವರದಿಂದಾಗಿ ಹಂಸಡಿಭಿಕರನ್ನು ಮಕ್ಕಳನ್ನಾಗಿ ಪಡೆದನು. ಶಿವನ ವರದಿಂದಾಗಿ ಅಜೇಯರು ಅವಧ್ಯರು ಇವರಿಗೆ ಮಹೋದರ – ಕುಂಡಧಾರಿಗಳೆಂಬ ಎರಡು ಭೂತಗಳನ್ನೂ ನೀಡಿದ್ದ. ಈ ವರದಿಂದಾಗಿ ಹಂಸ ಡಿಭಿಕರು ದುರ್ವಾಸರ ಕೌಪೀನಾದಿಗಳನ್ನೂ ಕಿತ್ತು ನಾಶ ಮಾಡಿದ್ದರು. ದುರ್ವಾಸರು ನಿಮ್ಮನ್ನು ಕೃಷ್ಣನೆ ಶಿಕ್ಷಿಸುತ್ತಾನೆ ಎಂದು ದ್ವಾರಕೆಗೆ ಹೋದರು. ಶ್ರೀಕೃಷ್ಣನು ಹೊಸದಾದ ರೇಶಿಮೆ ಕೌಪೀನಗಳನ್ನು ಕೊಟ್ಟು ಸತ್ಕರಿಸಿದ.
ಶ್ರೀಕೃಷ್ಣನು ಪುಷ್ಕರಕ್ಕೆ ಹೋಗಿದ್ದಾಗ ಹಂಸ ಡಿಭಿಕರು ಅಲ್ಲಿಗೆ ಬಂದರು. ಹಂಸ ಡಿಭಿಕರಿಗೆ ಹತ್ತು ಅಕ್ಷೌಹಿಣೀ ಸೈನ್ಯವಿತ್ತು. ವಿಚಕ್ರನೆಂಬ ಅವರ ಮಿತ್ರನಲ್ಲಿ ಆರು ಅಕ್ಷೌಹಿಣಿ ಸೈನ್ಯವಿತ್ತು. ಹಿಡಿಂಬನೆಂಬ ರಾಕ್ಷಸನು ಇವರ ಮಿತ್ರನಾಗಿದ್ದು ಒಂದು ಅಕ್ಷೌಹಿಣೀ ಸೈನ್ಯವಿತ್ತು. ಯಾದವರು 3 ಅಕ್ಷೌಹಿಣೀ ಮಾತ್ರ ಹೊಂದಿದ್ದರು. ಶ್ರೀಕೃಷ್ಣನು ಹಂಸನನ್ನೂ ಕೊಲ್ಲಲು ವೈಷ್ಣವಾಸ್ತ್ರ ತೆಗೆದ ಕೂಡಲೇ ಹಂಸ ಓಡಿ ಹೋಗಿ ಯಮುನೆಯ ನೀರಿಗೆ ಹಾರಿದಾಗ ಕಾಳಿಯ ಹ್ರದವಾಗಿದ್ದು ಸರ್ಪಕ್ಕೆ ಬಲಿಯಾದ. ಡಿಭಿಕನಾದರೂ ನಾಲಿಗೆಯನ್ನು ಮೂಲ ಸಹಿತ ಕಿತ್ತು ಆತ್ಮಹತ್ಯೆ ಮಾಡಿಕೊಂಡ.

**ದಗ್ಧಾ ವಾರಾಣಸೀ ಚೈವ ಕೇಶವೇನ ಮಹಾತ್ಮನಾ ।**
**ಸರಾಷ್ಟ್ರಃ ಸಾನುಬಂಧಶ್ಚ ಕಾಶೀನಾಮಧಿಪೋ ಹತಃ ॥ 7 ॥**

ವಸುದೇವನು ಕಾಶೀಪುತ್ರಿಯನ್ನು ಕರವೀರೇಶ್ವರನ ಪುತ್ರಿಯನ್ನೂ ವಿವಾಹವಾಗಿ ಅವನಿಂದ ಪೌಂಡ್ರಕ ವಾಸುದೇವ, ಶೃಗಾಲ ವಾಸುದೇವರೆಂಬ ಮಕ್ಕಳು ಹುಟ್ಟಿದರು. ಪೌಂಡ್ರಕನಾದ ಮಾತ್ಸರ್ಯದಿಂದಾಗಿ ಶ್ರೀಕೃಷ್ಣನಂತೆ ತಾನೂ ಚಿನ್ನದ ಗರುಡನ ಮೇಲೆ ಸಂಚರಿಸುತ್ತಾ, ಶ್ರೀವತ್ಸ ಚಿಹ್ನೆಯಂತೆ ಎದೆಯಲ್ಲಿ ಸುಟ್ಟುಕೊಂಡು ನಾನೇ ವಾಸುದೇವನೆಂದು ಮೆರೆದಾಡುತ್ತಿದ್ದನು. ಶ್ರೀಕೃಷ್ಣನು ಅವನನ್ನು ಪರಾಜಯಗೊಳಿಸಿ ಅವನ ಮಾತಾಮಹನಾದ ಕಾಶೀರಾಜನನ್ನೂ ಸಪರಿವಾರವಾಗಿ ಸಂಹರಿಸುತ್ತಿರಲು, ಕಾಶೀರಾಜನ ಪುತ್ರನಾದ ಸುದಕ್ಷಿಣನನ್ನು ಕೊಂದು ಹಾಕಿದನು.

ಈ ಸುದಕ್ಷಿಣನು ತನ್ನ ಪುರೋಹಿತರ ಸಲಹೆಯಂತೆ ಶಿವನನ್ನು ಕುರಿತು ತಪಸ್ಸು ಮಾಡಿ 'ದಕ್ಷಿಣಾಗ್ನಿಯಲ್ಲಿ ಹೋಮ ಮಾಡಿ ಭೂತಾಕಾರದ ದಕ್ಷಿಣಾಗ್ನಿಯಿಂದ ನಿನ್ನ ಅಭೀಷ್ಟ ಪೂರೈಸುವುದು ಎಂದು ಶಿವ ಹೇಳಿದಾಗ ಹಾಗೆಯೆ ಮಾಡಿ ಶಕ್ತಿ ತುಂಬಿಸಿಕೊಂಡು ಯುದ್ಧದಲ್ಲಿ ಚಕ್ರದಿಂದ ಕೊಲ್ಲಲ್ಪಟ್ಟ. ಅಗ್ನಿಯು ದ್ವಾರಕೆಯನ್ನು ಸುಡುತ್ತಿತ್ತು. ಚಕ್ರದಿಂದ ಅದನ್ನು ದೂರ ಅಟ್ಟಿದ. ಆಗ ಅಗ್ನಿಯು ಸುದಕ್ಷಿಣ, ಅವನ ಹೆಂಡತಿ ಮಕ್ಕಳುಗಳನ್ನೇ ಸುಟ್ಟು ಹಾಕಿತು. ಸುದರ್ಶನಚಕ್ರವು ಸುದಕ್ಷಿಣನನ ಕಾಶೀಪಟ್ಟಣವನ್ನೇ ನಾಶ ಮಾಡಿತು.

**ವಿಜಿತ್ಯ ಚ ಯಮಂ ಸಂಖ್ಯೇ ಶರೈಃ ಸಂನತಪರ್ವಭಿಃ ।**
**ಅಥೈಂದ್ರಸೇನಿರಾನೀತಃ ಕೃಷ್ಣೇನಾದ್ಭುತಕರ್ಮಣಾ ॥ 8 ॥**

ಶ್ರೀಕೃಷ್ಣನು ಯುದ್ಧದಲ್ಲಿ ಬಾಣವೃಷ್ಟಿಯಿಂದ ಯಮನನ್ನು ಸೋಲಿಸಿ ಇಂದ್ರಸೇನ ಪುತ್ರನನ್ನು ಬಿಡಿಸಿ ತಂದನು. ಹಾಗೆಯೇ ವರಣನನ್ನೂ ಆತನ ಪರಿವಾರವಾದ ಸರ್ವಜಲಚರ ಜಂತುಗಳನ್ನೂ ಜಯಿಸಿದನು.

## ಪಾರಿಜಾತಾಪಹರಣ

**ಮಹೇಂದ್ರಭವನೇ ಜಾತೋ ದೇವೈರ್ಗುಪ್ತೋ ಮಹಾತ್ಮಭಿಃ ।**
**ಅಚಿಂತಯಿತ್ವಾ ದೇವೇಂದ್ರಂ ಪಾರಿಜಾತದ್ರುಮೋ ಹೃತಃ ॥ 9 ॥**

ಸ್ವರ್ಗದಲ್ಲಿ ಹುಟ್ಟಿ ಬೆಳೆದಿದ್ದ ಹಾಗೂ ಇಂದ್ರಾದಿ ದೇವತೆಗಳಿಂದಲೂ ರಕ್ಷಿತವಾದ ಪಾರಿಜಾತ ವೃಕ್ಷವನ್ನು ಶ್ರೀಕೃಷ್ಣನು ಸತ್ಯಭಾಮೆಯೊಂದಿಗೆ ಲಗ್ಗೆಯಿಟ್ಟು

ದೇವತೆಗಳು ಹಾಗೂ ಇಂದ್ರನನ್ನೂ ಲೆಕ್ಕಿಸದೆ ಪಾರಿಜಾತ ವೃಕ್ಷವನ್ನು ಅಪಹರಿಸಿ ದ್ವಾರಕಾನಗರದ ಅರಮನೆಯ ಮುಂದೆ ಇಟ್ಟನು.

ಮತ್ತೊಂದು ಸಂದರ್ಭದಲ್ಲಿ ಪೌಂಡ್ರನನ್ನೂ, ಪಾಂಡ್ಯನನ್ನೂ, ಕಳಿಂಗ ರಾಜನನ್ನೂ, ಮತ್ಸ್ಯ ರಾಜನನ್ನೂ ವಂಗರನ್ನೂ ಸಂಹರಿಸಿದನು. ಹಾಗೆಯೇ ಯುದ್ಧದಲ್ಲಿ ಮಹಾತ್ಮರಾದ ನೂರೊಂದು ರಾಜರನ್ನು ಗೆದ್ದು ಗಾಂಧಾರ ರಾಜನ ಪುತ್ರಿಯನ್ನು ಸ್ವೀಕರಿಸಿದನು.

## ಶ್ರೀಕೃಷ್ಣ ಪರಾಕ್ರಮ

**ತಥಾ ಗಾಂಡೀವಧನ್ವಾನಂ ಕ್ರೀಡಂತಂ ಮಧುಸೂದನಃ ।**
**ಜಿಗಾಯ ಭಾರತಶ್ರೇಷ್ಠಂ ಕುಂತ್ಯಾಃ ಪ್ರಮುಖತೋ ವಿಭುಃ ॥ 10 ॥**

ಇನ್ನೊಂದು ಸಂದರ್ಭದಲ್ಲಿ ಕುಂತಿಯ ಸಮಕ್ಷಮದಲ್ಲಿಯೇ ಭೀಮ ಅರ್ಜುನರನ್ನು ಹಾಗೂ ಇತರರನ್ನೂ ಯುದ್ಧದಲ್ಲಿ ಗೆದ್ದನು. ಹಾಗೆಯೇ ಮಧುಸೂದನನು ರಥದ ಸಾರಥ್ಯ ವಹಿಸಿ ಅವನಿಂದ ದ್ರೋಣ, ಅಶ್ವತ್ಥಾಮ, ಕೃಪ, ಕರ್ಣ, ಭೀಷ್ಮ, ದುರ್ಯೋಧನಾದಿಗಳನ್ನು ಪರಾಜಯಗೊಳಿಸಿದನು. ಶ್ರೀಕೃಷ್ಣ ಸಾರಥ್ಯದಿಂದಲೇ ಅರ್ಜುನನಿಗೆ ಅತಿರಥ ಮಹಾರಥರನ್ನು ಗೆಲ್ಲುವಂತಾಯಿತು.

ಬಭ್ರುವಿಗೆ ಪ್ರಿಯವನ್ನುಂಟು ಮಾಡುವ ಸಲುವಾಗಿ ಶ್ರೀಕೃಷ್ಣನು ಸೌವೀರ ರಾಜನ ಪುತ್ರಿಯನ್ನೂ ಬಲಾತ್ಕಾರವಾಗಿ ಅಪಹರಿಸಿ ತಂದನು.

ವೇಣುದಾರಿಯೆಂಬ ಯಾದವನ ಆಪತ್ತು ಪರಿಹರಿಸಲು ಅಸ್ತವ್ಯಸ್ತವಾಗಿದ್ದ ಚತುರಂಗ ಬಲ ಸಹಿತವಾಗಿ ತುಂಬಿದ್ದ ಸಮಗ್ರ ಭೂಮಿಯನ್ನೂ ಅನಾಯಾಸವಾಗಿ ಗೆದ್ದನು.

ಶ್ರೀಕೃಷ್ಣನು ತನ್ನ ವಾಮನಾವತಾರದಲ್ಲಿ ತಪಸ್ಸು - ವೀರ್ಯ - ತೇಜಸ್ಸು ಕಾಂತಿಗಳನ್ನು ಹೊಂದಿದ್ದ ಬಲಿರಾಜನ ದೆಶೆಯಿಂದ ಮೂರ್ಲೋಕಾಧಿಪತ್ಯವನ್ನು ಪಡೆದು ಇಂದ್ರದೇವನಿಗಾಗಿ ನೀಡಿದನು.

ಬ್ರಹ್ಮದೇವನ ವರದಿಂದ ಅವಧ್ಯತ್ವ ಹೊಂದಿದ್ದು ವಜ್ರ, ಅಶನಿ, ಗದಾ ಖಡ್ಗಗಳಿಂದ ಸಜ್ಜನರಿಗೆ ಪೀಡೆ ನೀಡುತ್ತಿದ್ದ ದಾನವರಿಂದ ತುಂಬಿದ್ದ ಪ್ರಾಗ್‌ಜ್ಯೋತಿಷಪುರವನ್ನು ಸೂರೆಗೊಳ್ಳಲೆಂದು ಸೇನಾ ಸಹಿತ ಮುತ್ತಿಗೆ ಹಾಕಿದನು.

**ಬಲೇಃ ಪುತ್ರೋ ಮಹಾವೀರ್ಯೋ ಬಾಣೋ ದ್ರವಿಣವತ್ತರಃ ।**
**ಪೀಠಂ ತಥಾ ಮಹಾಬಾಹುಃ ಕಂಸಾಮಾತ್ಯಂ ಜನಾರ್ದನಃ ।**
**ಪೈಠಿಕಂ ಚಾಸಿಲೋಮಾನಂ ನಿಜಘಾನ ಮಹಾಬಲಃ ॥ 11 ॥**

ಶೋಣಿತಪುರದಲ್ಲಿ ಬಾಣಾಸುರನು ಅನಿರುದ್ಧನನ್ನು ಅಪಹರಿಸಿ ನಾಗಪಾಶದಿಂದ ಬಂಧಿಸಿ ಅಡಗಿಸಿದ್ದನು. ಶ್ರೀಕೃಷ್ಣನು ಇದನ್ನು ತಿಳಿದು ಅವನ ಪರಿವಾರವನ್ನೂ ಗೆದ್ದು ಬಾಣನ ಸಾವಿರ ತೋಳುಗಳನ್ನು ಕತ್ತರಿಸಿ ನಾಲ್ಕು ತೋಳುಗಳನ್ನು ಮಾತ್ರ ಉಳಿಸಿದನು. ನಂತರ ಅನಿರುದ್ಧನನ್ನು ಬಿಡಿಸಿಕೊಂಡು ಬಾಣನ ಮಗಳಾದ ಉಷೆಯನ್ನು ಅನಿರುದ್ಧನಿಗೆ ವಿವಾಹ ಮಾಡಿಸಿದನು.

ಹಾಗೆಯೆ ಮಹಾಪರಾಕ್ರಮಿ ಶ್ರೀಕೃಷ್ಣನು ಕಂಸನ ಮಂತ್ರಿಯಾದ ಪೀಠನನ್ನು, ಸುನೀಥನೆಂಬ ತಮ್ಮನನ್ನು, ಸುನೀಥನ ಏಳು ಮಂದಿ ತಮ್ಮಂದಿರನ್ನೂ, ಕೂಟ – ತೋಶಲರೆಂಬ ಇಬ್ಬರು ಮಲ್ಲರನ್ನೂ ಇಪ್ಪತ್ತು ಅಕ್ಷೌಹಿಣೀಯನ್ನೂ ನಾಶ ಮಾಡಿದನು. ಪೀಠನ ಮಗ ಅಸಿಲೋಮನನ್ನೂ ಕೊಂದು ಹಾಕಿದನು.

**ಜೃಂಭಮೈರಾವಣಂ ಚಾಪಿ ವಿರೂಪಂ ಚ ಮಹಾಯಶಾಃ ।**
**ಜಘಾನ ಪುರುಷವ್ಯಾಘ್ರೋ ದೈತ್ಯಂ ಮಾನುಷರೂಪಿಣಮ್ ॥ 12 ॥**

ವಿಕಾರವಾಗಿ ಆಕಳಿಸುತ್ತಾ ಭಯಪ್ರದನೂ ಐರಾವಣನೆಂಬ ದೈತ್ಯನು ಮಾನವ ವೇಷದಿಂದಿದ್ದ. ಅವನನ್ನೂ ಸಂಹರಿಸಿದ ವೀರ ಶ್ರೀಕೃಷ್ಣ.

**ತಥಾ ನಾಗಪತಿಂ ತೋಯೇ ಕಾಲೀಯಂ ಚ ಮಹೌಜಸಮ್ ।**
**ನಿರ್ಜಿತ್ಯ ಪುಂಡರೀಕಾಕ್ಷಃ ಪ್ರೇಷಯಾಮಾಸ ಸಾಗರಮ್ ॥ 13 ॥**

ಯಮುನಾ ನದಿಯ ಆಳವಾದ ಮಡುವಿನಲ್ಲಿ ಕಾಲೀಯ ನಾಗ ವಾಸ ಮಾಡಿದ್ದು, ತನ್ನ ಉಗ್ರವಾದ ವಿಷಜ್ವಾಲೆಯಿಂದ ನೀರನ್ನೆಲ್ಲ ವಿಷಮಯವಾಗಿಸಿದ್ದ. ಈ ವಿಷ ಜಲ ಪಾನದಿಂದ ಗೋಪ ಗೋವುಗಳು ಮೃತವಾಗಿದ್ದವು.

ಶ್ರೀಕೃಷ್ಣನು ಆ ಮಡುವಿಗೆ ಹಾರಿ ಅವನ ಛತ್ರಕಾರವಾಗಿ ಹರಡಿದ ಹೆಡೆಗಳಲ್ಲಿ ತುಳಿದು ವಿಷವನ್ನು ಕಕ್ಕಿಸಿದನು. ನಾಗಪತ್ನಿಯರು ಸೆರಗೊಡ್ಡಲು ಪ್ರಾಣ ನೀಡಿ ರಮಣಕ ದ್ವೀಪದ ಸಮುದ್ರಕ್ಕೆ ಕಳುಹಿಸಿದನು.

## ಮೃತಪೋತ ರಕ್ಷಕ

**ಸಂಜೀವಯಾಮಾಸ ಮೃತಂ ಪುತ್ರಂ ಸಾಂದೀಪಿನೇಸ್ತಥಾ ।**
**ನಿರ್ಜಿತ್ಯ ಪುರುಷವ್ಯಾಘ್ರೋ ಯಮಂ ವೈವಸ್ವತಂ ಹರಿಃ ॥ 14 ॥**

ಕಾಶಿದೇಶದಲ್ಲಿದ್ದು ಮುಂದೆ ಅವಂತಿಗೆ ಬಂದು ನೆಲೆಸಿದ್ದ ಸಾಂದೀಪಿನೀ ಗುರುಗಳನ್ನು ಹೊಂದಿ ಅರವತ್ತನಾಲ್ಕು ದಿನಗಳಲ್ಲಿ ಅರವತ್ತ ನಾಲ್ಕು ಶಾಸ್ತ್ರಗಳನ್ನು ಒಂದು ಬಾರಿ ಕೇಳದ ಮಾತ್ರಕ್ಕೆ ಗ್ರಹಿಸಿದ ಶ್ರೀಕೃಷ್ಣನು ಗುರು ದಕ್ಷಿಣಾ ರೂಪವಾಗಿ ಅವರು ಇಚ್ಛಿಸಿದ್ದ ಮೃತಪುತ್ರನನ್ನು ತಂದು ಕೊಡಲು ಸಮುದ್ರದಲ್ಲಿ ಪಂಚಜನ್ಯನನ್ನು ಕೊಂದು, ಯಮನ ಬಳ ತೆರಳ ಅವನಿಂದ ಪೂಜಿತನಾಗಿ ಗುರುಪುತ್ರನನ್ನು ಬದುಕಿಸಿ ಸಾಂದೀಪಿನಿಗೆ ಅರ್ಪಿಸಿ, ತಾನು ಜಗಜ್ಜನ್ಮಾದಿ ಕಾರಣನೆಂದು ತೋರಿಸಿದ.

ಹೀಗೆ ಮಹಾಪ್ರಭುವಾದ ಶ್ರೀಕೃಷ್ಣನು ದುಷ್ಟಶಿಕ್ಷಣ – ಶಿಷ್ಟರಕ್ಷಣ ಮಾಡಿದನು.

**ನಿಹತ್ಯ ನರಕಂ ಭೌಮಂ ಆಹೃತ್ಯ ಮಣಿಕುಂಡಲೇ ।**
**ದೇವಮಾತುಃ ದದೌ ಚೈವ ಪ್ರೀತ್ಯರ್ಥಂ ವಜ್ರಪಾಣಿನಃ ॥ 15 ॥**

ನರಕಾಸುರನು ವರುಣನ ಶ್ವೇತಚ್ಛತ್ರವನ್ನೂ, ಇಂದ್ರನ ವಿಹಾರ ಸ್ಥಾನವಾದ ಮಣಿಶಿಖರವನ್ನೂ ಇಂದ್ರನ ಐರಾವತವನ್ನೂ, ಅಮೃತ ಸುರಿಸುವ ದೇವಮಾತೆಯ ಕುಂಡಲವನ್ನೂ ಅಪಹರಿಸಿದ್ದ. ದೇವೇಂದ್ರನ ಪ್ರಾರ್ಥನೆಯಂತೆ ಅವನ ಪ್ರೀತಿಗಾಗಿ ಅದಿತಿಯ ದಿವ್ಯಕುಂಡಲಗಳನ್ನೂ, ನರಕನನ್ನು ಕೊಂದು ತಂದು ಅದಿತಿಗೆ ನೀಡಿದನು.

ಹೀಗೆ ಸಮಸ್ತ ಲೋಕಗಳ ಮುಖ್ಯಕರ್ತೃವೂ ಸರ್ವಸ್ವಾಮಿಯೂ ಆದ ಶ್ರೀಕೃಷ್ಣನು ಹಿಂದೆ ಹೇಳದಂತೆ ದೇವದ್ವೇಷಿಗಳಗೆ ಅಸುರರಿಗೆ ಭಯಜನಕ– ನಾಗಿಯೂ, ದೇವತೆಗಳಗೂ ಹಾಗೂ ಸಜ್ಜನರಿಗೂ ಅಭಯಪ್ರದನಾಗಿರುವನು.

ದೇವತೆಗಳ ಪ್ರಯೋಜನಕ್ಕಾಗಿಯೂ ವಿಧಿವತ್ತಾಗಿ ಯಜ್ಞಾದಿಗಳ ಮೂಲಕ ಮಾನವರಲ್ಲಿ ಧರ್ಮವನ್ನು ಆಚರಿಸುವಂತೆ ಮಾಡಿ, ಉತ್ತಮ ಜೀವರಿಗೆ ತಮ್ಮ ಯೋಗ್ಯತೆ ತಕ್ಕಂತೆ ಸ್ಥಾನಗಳನ್ನೂ ನೀಡಿ ತಾನು ಮೂಲರೂಪ ಸೇರುವನು.

## ದ್ವಾರಕಾ ನಿರ್ಮಾಣ

**ಕೃಷ್ಣೋ ಭೋಗವತೀಂ ರಮ್ಯಾಂ ಋಷಿಕಾಂತಾಂ ಮಹಾಯಶಾಃ ।**
**ದ್ವಾರಕಾ ಮಾತ್ಮಸಾತ್ ಕೃತ್ವಾ ಸಮುದ್ರಂ ಗಮಯಿಷ್ಯತಿ ॥ 16 ॥**

ಶ್ರೀಕೃಷ್ಣನು ಭೋಗಭಾಗ್ಯಗಳಿಂದ ಕೂಡಿರುವ, ಋಷಿಗಳಿಗೂ ಇಷ್ಟವಾದ ದ್ವಾರಕೆಯನ್ನು ನಿರ್ಮಿಸಿ, ಯಾದವರನ್ನು ಅಲ್ಲಿರಿಸಿ ನಿರ್ಭಯರನ್ನಾಗಿ ಮಾಡಿ ನಂತರ ಸಮುದ್ರದಲ್ಲಿ ಮುಳುಗಿಸುವನು.

ಅಸಂಖ್ಯಾತ ರತ್ನಗಳಿಂದ ಸಂಪನ್ನನೂ, ನೂರಾರು ಚೈತ್ಯಮಂದಿರ ಪ್ರಾಸಾದಗಳಿಂದ ಶೋಭಿತವೂ, ಯೂಪಸ್ತಂಭಗಳಿಂದ ಕೂಡಿರುವ ದ್ವಾರಕೆಯನ್ನು ಅರಣ್ಯಗಳ ಸಹಿತ ಸಮುದ್ರದಲ್ಲಿ ಮುಳುಗಿಸುವನು.

ವಾಸುದೇವನ ಅಭಿಪ್ರಾಯ ಮನಗಂಡ ಸಮುದ್ರರಾಜನೂ ಕೂಡ ಸೂರ್ಯಲೋಕ ಸದೃಶವಾದ ದ್ವಾರಕೆಯನ್ನು ತನ್ನ ಮಡಿಲಲ್ಲಿರಿಸಿ-ಕೊಳ್ಳುವನು.

ಶ್ರೀಕೃಷ್ಣನಿಂದ ತೊರೆಯಲ್ಪಟ್ಟ ದ್ವಾರಕೆಯಲ್ಲಿ ವಾಸ ಮಾಡಲು ದೇವ ದಾನವ ಮಾನವರಲ್ಲಿ ಯಾರೂ ಸಮರ್ಥರಿಲ್ಲ. ಮುಂದೆ ಹುಟ್ಟಲಾರರು.

ಶ್ರೀಕೃಷ್ಣನೆ ಯಾದವರಿಗಾಗಿ ಉತ್ತಮ ವಿಧಿ ವಿಧಾನ ನಿರೂಪಿಸಿ ಸೂರ್ಯ-ಚಂದ್ರನಲ್ಲಿದ್ದು ಬೆಳಗುವನು.

**ಅಪ್ರಮೇಯಃ ತ್ವಚಿಂತ್ಯಶ್ಚ ಯಥಾ ಕಾಮಚರೋ ವಶೀ ।**
**ಮೋದತ್ಯೇವ ಸದಾಭೂತೈಃ ಬಾಲಃ ಕ್ರೀಡನಕೈರಿವ ॥ 17 ॥**

ಇವನು ಅಪ್ರಮೇಯನು, ಅಚಿಂತ್ಯನು, ಸ್ವೇಚ್ಛೆಯಿಂದ ಸಂಚರಿಸುವವನು. ಜಿತೇಂದ್ರಿಯನು ಸಮಸ್ತರು ಇವನ ವಶದಲ್ಲಿರುವರು. ಬಾಲಕರು ಆಟಿಗೆಗಳಿಂದ ಆಡುವಂತೆ ಬ್ರಹ್ಮಾದಿಗಳಿಂದ ಆಟವಾಡುವನು.

ಇವನ ಸಾಮರ್ಥ್ಯವನ್ನು ಅಳೆಯುವುದು ಅಸಾಧ್ಯ. ಈ ಜಗತ್ತೆಲ್ಲ ಪರಮಾತ್ಮನ ಅಧೀನವಾಗಿದ್ದು ಇವನಿಗಿಂತ ಭಿನ್ನವಾಗಿಲ್ಲವೆಂದು ಹೇಳಲ್ಪಡುತ್ತದೆ.

**ನ ಪ್ರಮಾತುಂ ಮಹಾಬಾಹುಃ ಶಕ್ಯೋಽಯಂ ಮಧೂಸೂದನಃ ।**
**ಪರಂ ಹ್ಯಪರಮೇತದ್ ವಿಶ್ವರೂಪಾನ್ನ ವಿದ್ಯತೇ ॥ 18 ॥**

ಇಂತಹ ಶ್ರೀಕೃಷ್ಣನನ್ನು ಎಂದೂ ಮರೆಯದೆ ಶ್ರದ್ಧಾಭಕ್ತಿಯಿಂದ ಸ್ಮರಿಸುತ್ತಾ ಉದ್ಧಾರ ಹೊಂದಿರಿ.

ವಿಶ್ವವ್ಯಾಪಕನಾದ ಈತನಿಂದ ಬೇರೆಯಾದ ಚೇತನವಾಗಲಿ ಜಡವಾಗಲಿ ಸಮಾನರಾಗಲಿ ಉತ್ತಮರಾಗಲಿ ಇಲ್ಲವೆಂದು ತಿಳಿಯಿರಿ. ಇವನ

ಮಹಿಮೆಗಳನ್ನು ನೂರಾರು ಬಾರಿ ನಾನು ಕೇಳಿದ್ದೇನೆ. ಹೀಗಿದ್ದರೂ ಅವು ಮುಗಿದಿಲ್ಲ.

ಹೀಗೆ ದುಷ್ಟನಿಗ್ರಹ ಶಿಷ್ಟರಕ್ಷಣವನ್ನೂ ಬಾಲರೂಪಿಯಾಗಿ ಮಕ್ಕಳ ನಡುವೆ ಇದ್ದು ಸಂಕರ್ಷಣ ರೂಪ ಬಲರಾಮನಿಂದ ಒಡಗೂಡಿ ಮಾಡಿರುವನು.

ಇದನ್ನು ಸಾಕ್ಷಾತ್ ನಾರಾಯಣಾವತಾರಿಯಾದ ವೇದವ್ಯಾಸರು ತಾವು ಕಂಡು ಹೇಳಿರುವರು! ಎಂದು ಹೇಳಿದರು.

**ಇತಿ ಸಂಸ್ತೂಯ ಗೋವಿಂದಂ ಮಹೇಂದ್ರವಚನಾನ್ ಮುನಿಃ ।**
**ಯದುಭಿಃ ಪೂಜಿತಃ ಸರ್ವೈಃ ನಾರದಃ ತ್ರಿದಿವಂ ಯಯೌ ॥ 19 ॥**

ಜನಮೇಜಯನೆ ! ಮುನಿವರ್ಯರಾದ ನಾರದರು ಮಹೇಂದ್ರನು ಹೇಳಿ ಕಳುಹಿಸಿದಂತೆ ಗೋವಿಂದನ ಗುಣಗಣಗಳನ್ನೂ ಸ್ತುತಿಸಿ ಯಾದವರಿಂದ ಸತ್ಕರಿಸಲ್ಪಟ್ಟವರಾಗಿ ಸ್ವರ್ಗಲೋಕದತ್ತ ಪ್ರಯಾಣ ಮಾಡಿದರು.

ನಂತರ ಮಾಧವನು ತಾನು ಗಳಿಸಿರುವ ಸಂಪತ್ತುಗಳನ್ನು ತಾನೇ ಇಟ್ಟುಕೊಳ್ಳದೆ ಯದು–ಭೋಜ ವಂಶೀಯರಿಗೆ ಹಂಚಿಕೊಟ್ಟು ತನ್ನ ಶ್ರೀಪತಿತ್ವವನ್ನು ವ್ಯಕ್ತಗೊಳಿಸಿದನು.

ಸಮಸ್ತ ಯಾದವರೂ ಸಹ ಶ್ರೀಕೃಷ್ಣನು ನೀಡಿದ ಸಂಪತ್ತನ್ನು ಅವನ ಪ್ರಾಸಾದವೆಂದು ಸ್ವೀಕರಿಸಿ, ಬಲರಾಮ–ಕೃಷ್ಣರನ್ನು ಬಹುವಾಗಿ ಸತ್ಕರಿಸಿ, ದ್ವಾರಕೆಯಲ್ಲಿಯೆ ಸುಖವಾಗಿದ್ದರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ನಾರದರಿಂದ ಶ್ರೀಕೃಷ್ಣನ ಆಗಮ್ಯ ಮಹಿಮಾ ವರ್ಣನೆ ಎಂಬಲ್ಲಿ
ನೂರೆರಡನೆಯ ಅಧ್ಯಾಯ ಸಮಾಪ್ತಿ

# ಅಥ ತ್ರಿಣ್ಯಾಧಿಕಶತತಮೋಽಧ್ಯಾಯಃ

## ಶ್ರೀಕೃಷ್ಣನ ಸಂತಾನ

*ಜನಮೇಜಯ –*

**ಬಹೂನಾಂ ಸ್ತ್ರೀ ಸಹಸ್ರಾಣಾಮಷ್ಟೌ ಭಾರ್ಯಾಃ ಪ್ರಕೀರ್ತಿತಾಃ ।**
**ತಾಸಾಮಪತ್ಯಾನ್ಯಷ್ಟಾನಾಂ ಭಗವಾನ್ ಪ್ರಬ್ರವೀತು ಮೇ ॥ 1 ॥**

*ವೈಶಂಪಾಯನ –*

**ಅಷ್ಟೌಮಹಿಷ್ಯಃ ಪುತ್ರಿಣ್ಯ ಇತಿ ಪ್ರಾಧಾನ್ಯತಃ ಸ್ಮೃತಾಃ ।**
**ಸರ್ವಾ ವೀರಪ್ರಜಾಶ್ಚೈವ ತಾಸ್ವಪತ್ಯಾನಿ ಮೇ ಶ್ರುಣು ॥ 2 ॥**

ಜನಮೇಜಯನು ವೈಶಂಪಾಯನರನ್ನು ಕುರಿತು – ಪೂಜ್ಯರೇ! ಶ್ರೀಕೃಷ್ಣನ ಹದಿನಾರು ಸಾವಿರದ ನೂರೆಂಟು ಮಂದಿ ಪತ್ನಿಯರಲ್ಲಿ ಎಂಟು ಪ್ರಧಾನ ಪಟ್ಟದರಸಿಯರೆಂದಿರುವಿರಿ' ಅವರನ್ನು ಅವರ ಪುತ್ರರನ್ನೂ ತಿಳಸುವವರಾಗಿರಿ ಎಂದನು.

---

1. **ಅಷ್ಟಮಹಿಷಿಯರು :**
1) ಚಂದ್ರಪುತ್ರಿಯಾಗಿದ್ದವಳೇ ಜಾಂಬವತೀಯಾದಳು. ಇವಳಿಗೆ ರೋಹಿಣೀ ಎಂದು ನಾಮಾಂತರ.
2) ನೀಲಾದೇವಿಯು ಹಿಂದೆ ಕವ್ಯವಾಹನ ಪುತ್ರಿಯಾಗಿದ್ದು ಈಗ ಎರಡು ನೀಲಾರೂಪಗಳಿಂದ ಅವತರಿಸಿದ್ದಳು. ನಗ್ನಜಿತ್‌ನ ಮಗಳು ನೀಲೆ, ಕುಂಭಕನ ಮಗಳು ನೀಲೆ. ವಿವಾಹವಾದ ಮೇಲೆ ಇಬ್ಬರೂ ಒಂದೇ ಆದರು.
3) ನಲರೆಂಬ ಪಿತೃದೇವತೆಗಳ ಪುತ್ರಿಯಾಗಿದ್ದ ಭದ್ರದೇವಿಯು ಶ್ರೀಕೃಷ್ಣನ ಸೋದರತ್ತೆಯಾದ ಶ್ರುತಕೀರ್ತಿ ಹಾಗೂ ಕೇಕಯದೇಶದ ಧೃಷ್ಟಕೇತುವಿನ ಮಗಳಾಗಿ ಹುಟ್ಟಿದಳು.

ವೈಶಂಪಾಯನರು ರಾಜನ್! ಕೇಳು. ಶ್ರೀಕೃಷ್ಣನ ಎಂಟು ಮಂದಿ ಪ್ರಧಾನಪತ್ನಿಯರಾದ ರುಗ್ಮಿಣೀ. ಸತ್ಯಭಾಮಾ – ಜಾಂಬವತೀ – ಕಾಳಿಂದೀ – ನೀಲಾ – ಮಿತ್ರವಿಂದ – ಭದ್ರಾ – ಲಕ್ಷಣಾ ಹೀಗೇ ಎಂಟು ಪ್ರಧಾನರು.

## ಶ್ರೀಕೃಷ್ಣನ ಸಂತಾನ

**ಪ್ರದ್ಯುಮ್ನಃ ಪ್ರಥಮಂ ಜಜ್ಞೇ ಶಂಬರಾಂತಕರಃ ಶುಭಃ ।**
**ದ್ವಿತೀಯಶ್ಚಾರುದೇಷ್ಣಶ್ಚ ವೃಷ್ಣಿಸಿಂಹೋ ಮಹಾರಥಃ ॥ 3 ॥**
**ಚಾರುಭದ್ರಃ ಚಾರುಗರ್ಭಃ ಸುದೇಷ್ಣಃ ದ್ರುಮ ಏವ ಚ ।**
**ಸುಷೇಣಃ ಚಾರುಗುಪ್ತಶ್ಚ ಚಾರುವಿಂದಶ್ಚ ವೀರ್ಯವಾನ್ ॥ 4 ॥**
**ಚಾರುಬಾಹುಃ ಕನೀಯಾಂಶ್ಚ ಕನ್ಯಾ ಚಾರುಮತೀ ತಥಾ ।**

ರುಕ್ಮಿಣಿಯ ಪುತ್ರರು – ಪ್ರದ್ಯುಮ್ನ – ಚಾರುದೇಷ್ಣ – ಚಾರುಭದ್ರ – ಚಾರುಗರ್ಭ

---

4) ಅಗ್ನಿಷ್ವಾತ್ತರೆಂಬ ಪಿತೃಗಳ ಪುತ್ರಿಯಾದ ಮಿತ್ರವಿಂದಾದೇವಿಯು ಶ್ರೀಕೃಷ್ಣನ ಸೋದರತ್ತೆಯಾದ ರಾಜಾಧಿದೇವಿ ಹಾಗೂ ಅವಂತೀದೇಶದ ಜಯತ್ಸೇನನ ಪುತ್ರಿಯಾಗಿದ್ದಳು. ವಿಂದನುವಿಂದರು. ಇವಳ ಸಹೋದರರು ದುರ್ಯೋಧನನಿಗೆ ತಂಗಿಯನ್ನು ಕೊಡಲು ಹವಣಿಸಿದ್ದರು.

5) ಹಿಂದಿನ ಜನ್ಮದಲ್ಲಿ ಸೂರ್ಯನ ಮಗಳಾಗಿದ್ದು ಈಗ ಕಾಲಿಂದೀಯೆಂದು ಜನಿಸಿದ್ದಳು.

6) ಲಕ್ಷಣಾಳು ಹಿಂದಿನ ಸೃಷ್ಟಿಯಲ್ಲಿ ಬರ್ಹಿಷದರೆಂಬ ಪಿತೃಪುತ್ರಿಯಾಗಿದ್ದು ಈಗ ಮದ್ರದೇಶದ ಬೃಹತ್ಸೇನನ ಮಗಳಾಗಿದ್ದಳು.

**ಪೃಥಕ್ ಪೃಥಕ್ ತಾಸು ಸುದಶೈವ ಪುತ್ರಕಾನ್ ।**
**ಸ್ವಧತ್ತ ಕನ್ಯಾಮಪಿ ಸರ್ವಶಹ ಪ್ರಭುಃ** ॥ – *ತಾ.ನಿ.20/141*

ಹತ್ತು ಹತ್ತು ಮಂದಿ ಗಂಡು, ಒಂದು ಹೆಣ್ಣು ಮಗು ಎಂದಿರುವರು.
ಹರಿವಂಶದಲ್ಲಿ ನಾಲ್ಕು ಮಂದಿ ಕನ್ಯೆಯರು, ಆರು ಮಂದಿ ಗಂಡು ಸಂತಾನವೆಂದಿದೆ. ಆದರೆ ಭಾಗವತದಲ್ಲಿ ಹತ್ತು ಮಂದಿಯೂ ಗಂಡು ಒಬ್ಬಳೇ ಹೆಣ್ಣು ಮಗಳೆಂದಿದೆ. ಇದೇ ಯುಕ್ತವಾಗಿದೆ.

ಭಾನು, ಸುಭಾನು, ಸ್ವರ್ಭಾನು, ಪ್ರಭಾನು, ಭಾನುಮಂತ, ಚಂದ್ರಭಾನು, ಬೃಹದ್ಭಾನು, ಅತಿಭಾನು, ಶ್ರೀಭಾನು, ಪ್ರತಿಭಾನು, ಭಾನುಮತೀ ಎಂಬ ಕನ್ಯೆ. *[ಭಾಗ. 10/76/10–11]*

**ಏಕೈಕಶಸ್ತಾಃ ಕೃಷ್ಣಸ್ಯ ಪುತ್ರಾನ್ ದಶದಶಾಬಲಾಃ ।**
**ಅಜೀಜನನ್ನನವಮಾನ್ ಪಿತುಃ ಸರ್ವಾತ್ಮ ಸಂಪದಾ** ॥ *–10/76/1*

ಇವರಲ್ಲಿ ಸತ್ಯಭಾಮೆಯ ಮಗ ಭಾನುವು ಸವಿತೃದೇವತೆಯ ಅವತಾರ, ರುಕ್ಮಿಣಿಯಲ್ಲಿ ಅವತರಿಸಿದ ಚಾರುದೇಷ್ಣನು ಗಣಪತಿಯ ಅವತಾರ.

– ಸುದೇಷ್ಣ – ದ್ರುಮ – ಸುಷೇಣ – ಚಾರುಗುಪ್ತ – ಚಾರುವಿಂದ ಚಾರುಬಾಹು, ಚಾರುಮತಿ ಎಂಬ ಕನ್ಯೆ.

**ಜಜ್ಞಿರೇ ಸತ್ಯಭಾಮಾಯಾಂ ಭಾನುಃ ಭೀಮರಥಃ ಕ್ಷುಪಃ ।**
**ರೋಹಿತೋ ದೀಪ್ತಿಮಾನ್ ಚೈವ ತಾಮ್ರಜಾಕ್ಷೋ ಜಲಾಂತಕಃ ॥ 5 ॥**

**ಭಾನುಃ ಭೀಮಲಿಕಾ ಚೈವ ತಾಮ್ರಪರ್ಣೀ ಜಲಂಧಮಾಃ ।**
**ಚತಸ್ರೋ ಜಜ್ಞಿರೇ ತೇಷಾಂ ಸ್ವಸಾರೋ ಗರುಡಧ್ವಜಾತ್ ॥ 6 ॥**

**ಜಾಂಬವತಿಯ ಮಕ್ಕಳು**

**ಜಾಂಬವತ್ಯಾಃ ಸುತೋಜಜ್ಞೇ ಸಾಂಬಃ ಸಮಿತಿಶೋಭನಃ ।**
**ಮಿತ್ರವಾನ್ ಮಿತ್ರವಿಂದಶ್ಚ ಮಿತ್ರವತ್ಯಪಿ ಚಾಂಗನಾ ॥ 7 ॥**

**ಮಿತ್ರಬಾಹುಃ ಸುನೀಥಶ್ಚ ನಾಗ್ನಜಿತ್ಯಾಃ ಪ್ರಜಾಃ ಶೃಣು ।**
**ಭದ್ರಕಾರೋ ಭದ್ರವಿಂದಃ ಕನ್ಯಾ ಭದ್ರವತೀ ತಥಾ ॥ 8 ॥**

**ಸುದತ್ತಾಯಾಂ ತು ಶೈಬ್ಯಾಯಾಂ ಸಂಗ್ರಾಮಜಿದಜಾಯತ ।**
**ಸತ್ಯಜಿತ್ ಸೇನಜಿಚ್ಚೈವ ತಥಾ ಶೂರಃ ಸಪತ್ನಜಿತ್ ॥ 9 ॥**

**ಸುಭೀಮಾಯಾಃ ಸುತೋ ಮಾದ್ರ್ಯಾಃ ವೃಕಾಶ್ವೋವೃಕನಿರ್ವೃತಿಃ ।**
**ಕುಮಾರೋ ವರಕದೀಪ್ತಿಶ್ಚ ಲಕ್ಷ್ಮಣಾಯಾಃ ಪ್ರಜಾಃ ಶೃಣು ॥ 10 ॥**

ಜಾಂಬವತಿಗೆ ಸಾಂಬ, ಸುಮಿತ್ರ, ಪುರುಜಿತ್, ಶತಜಿತ್, ಸಹಸ್ರಜಿತ್, ವಿಜಯ, ಚಿತ್ರಕೇತು, ವಸುಮಾನ್, ದ್ರವಿಡ, ಕ್ರತು, ಮಿತ್ರವತೀ ಕನ್ಯೆ. ಸುಮಿತ್ರನಿಗೆ ಮಿತ್ರವಾನ್ ಎಂದು, ಪುರುಜಿತ್‌ಗೆ ಮಿತ್ರವಿಂದನೆಂದು, ಶತಜಿತ್‌ಗೆ ಮಿತ್ರಬಾಹು ಎಂದು, ವಿಜಯನಿಗೆ ಸಹಸ್ರಜಿತ್ತೆಂದು, ಪುರುಜಿತ್‌ಗೆ ಸುನೀಥನೆಂದು ನಾಮಾಂತರಗಳು.

ನೀಲೆಯೆಂಬ ಎರಡು ರೂಪದಿಂದಿದ್ದ ನೀಲೆಗೆ ನಾಗ್ನಜಿತಿ ಭದ್ರಕಾರ, ಭದ್ರವಿಂದ ವೀರ, ಚಂದ್ರ ಅಶ್ವಸೇನ, ವೇಗವಾನ್. ವೃಷ ಆಮ ಶಂಕು ವಸು ಮತ್ತು ಕುಂತಿಯೆಂಬ ಗಂಡು ಮಕ್ಕಳು. ಭದ್ರವತಿಯು ಕನ್ಯೆ.

ಇವರಲ್ಲಿ ವೀರನಿಗೆ ಭದ್ರಕಾರನೆಂದು, ಚಂದ್ರನಿಗೆ ಭದ್ರವಿಂದನೆಂದು ಇಲ್ಲಿ ಹೇಳಿದೆ.

**ಮಿತ್ರವಿಂದೆಯ ಸಂತಾನ** : ಇವಳಿಗೆ ಶೈಬ್ಯಾಯೆಂದೂ ಸುದತ್ತಾಯೆಂದು ಹೆಸರಿದೆ. ವೃಕ, ಹರ್ಷ, ಅನಿಲ, ಗೃಧ್ರವರ್ಧನ, ಉನ್ನಾದ, ಮಹಾಶ, ಪಾವನ, ವಹ್ನಿ, ಕ್ಷುಧಿ ಇವಳಿಗೆ ಹರಿವಂಶದಲ್ಲಿ ಸುದತ್ತಾ ಎಂದಿದೆ. ಸಂಗ್ರಾಮಜಿತ್, ಸತ್ಯಜಿತ್, ಸೇನಜಿತ್, ಸಪತ್ನಜಿತ್ ಎಂಬ ನಾಲ್ವರನ್ನು ಹೆಸರಿಸಿದೆ.

**ಕಾಳಿಂದಿ** : ಸೂರ್ಯಪುತ್ರಿಯಾದ ಕಾಳಿಂದಿಯಲ್ಲಿ ಅಶ್ರುತ, ಶ್ರುತಸಂಮಿತ, ವೃಷ, ವೀರ, ಸುಬಾಹು, ಭದ್ರ, ಶಾಂತಿ, ದರ್ಶ, ಪೂರ್ಣಮಾಸ ಹಾಗೂ ಸೋಮಕರೆಂಬ ಹತ್ತು ಮಕ್ಕಳು. ಅಶ್ರುತನನ್ನು ತನ್ನ ಮತ್ತೊಬ್ಬ ಪತ್ನಿಗೆ ನೀಡಿದನು.

**ಲಕ್ಷಣಾ ಸಂತಾನ** : ಇವಳಿಗೆ ಲಕ್ಷ್ಮಣಾಯೆಂದೂ ಹೆಸರಿದೆ. ಇವಳು ಮದ್ರರಾಜನ ಮಗಳು. ಇವಳಿಗೆ ಸುಭೀಮಾ ಎಂದು ಹೆಸರಿದೆ.

ಇವಳಲ್ಲಿ ಗಾತ್ರವಾನ್, ಗಾತ್ರ ಗುಪ್ತ, ಗಾತ್ರವಿಂದ, ಪ್ರಘೋಷ, ಸಿಂಹಬಲ, ಊರ್ಧ್ವಗ, ಮಹಾಶಕ್ತಿ, ಪ್ರಬಲ, ಸಹಸ್, ಅಪರಿಜಿತ್ ಎಂದು ಹತ್ತು ಮಂದಿ ಪುತ್ರರು, ಗಾತ್ರವತೀಯೆಂಬ ಕನ್ಯೆಯೂ ಇದ್ದಳು.

**ಬೃಹತ್ಯಾಂ ತು ಗದಂ ಪ್ರಾಹುಃ ಶೈಬ್ಯಾಯಾಮಂಗದಂ ಸುತಮ್ ।**
**ಉತ್ಪನ್ನಂ ಕುಮುದಂ ಚೈವ ಶ್ವೇತಂ ಶ್ವೇತಾ ತಥಾಂಗನಾ ॥ 11 ॥**

ಶ್ರೀಕೃಷ್ಣನಿಗೆ ಬೃಹತೀ ಎಂಬ ಹೆಸರಿನ ಪತ್ನಿಯಿದ್ದಳು. ಅವಳಲ್ಲಿ ಗದನೆಂಬ ಮಗನಾದನು. ಶೈಬ್ಯೆಯಲ್ಲಿ ಶ್ವೇತಾ ಎಂಬ ಹೆಸರಿನ ಕನ್ಯೆ ಹಾಗೂ ಅಂಗದ, ಕುಮುದ ಹಾಗೂ ಶ್ವೇತ ಎಂಬ ಮೂರು ಗಂಡು ಮಕ್ಕಳಾದರು.

ಶ್ರೀಕೃಷ್ಣನಿಗೆ ಸುದೇವಾ ಎಂಬ ಪತ್ನಿಯಲ್ಲಿ ಅಗಾವಹ, ಸುಮಿತ್ರ, ಶುಚಿ, ಚಿತ್ರರಥ, ಚಿತ್ರಸೇನ ಎಂಬ ಐವರು ಗಂಡು ಮಕ್ಕಳು ಹಾಗೂ ಚಿತ್ರಾ, ಚಿತ್ರವತೀ ಎಂಬ ಕನ್ಯೆಯರು ಹುಟ್ಟಿದರು.

ಶ್ರೀಕೃಷ್ಣನಿಗೆ ಕೌಶಿಕೀಯೆಂಬ ಪತ್ನಿಯಲ್ಲಿ ವನಸ್ತಂಬ, ಸ್ತಂಬವನ, ನಿವಾಸನ, ಅವನಸ್ತಂಬ ಎಂಬ ನಾಲ್ವರು ಪುತ್ರರೂ, ಸ್ತಂಬವತೀಯೆಂಬ ಕನ್ಯೆಯೂ ಹುಟ್ಟಿದರು.

ಸುತಸೇಮಾ ಎಂಬ ಪತ್ನಿಯಲ್ಲಿ ಉಪಸನ್ನ, ಶಂಕು, ವಜ್ರಾಂಶು, ಕ್ಷಿಪ್ರರೆಂಬ ಪುತ್ರರಾದರು. ಯೌಧಿಷ್ಠಿರೀಯೆಂಬ ಪತ್ನಿಯಲ್ಲಿ ಯುಧಿಷ್ಠಿರ, ಕಪಾಲಿ, ಗರುಡರೆಂಬ ಮೂವರು ಮಕ್ಕಳಾದರು.

**ಏವಮಾದೀನಿ ಪುತ್ರಾಣಾಂ ಸಹಸ್ರಾಣಿ ನಿಬೋಧಂ ಮೇ ।**
**ದಶಾಯುತಂ ಸಮಾಖ್ಯಾತಾ ವಾಸುದೇವಸ್ಯ ತೇ ಸುತಾಃ ॥ 12 ॥**
**ಅಯುತಾನಿ ತಥಾऽಷ್ಟೌ ಶೂರಾಃ ರಣವಿಶಾರದಾಃ ।**

ಹೀಗೆ ಶ್ರೀಕೃಷ್ಣನಿಗೆ ಸಾವಿರಾರು ವೀರರಾದ ಮಕ್ಕಳು ಜನಿಸಿದರು. ಒಟ್ಟು ಲಕ್ಷ ಎಂಭತ್ತು ಸಾವಿರ ಮಕ್ಕಳಿದ್ದರೆಂದು ಕೇಳಿದ್ದೇನೆ.[2]

ಜನಮೇಜಯನೇ, ಹೀಗೆ ನಾನು ನಿನಗೆ ಶ್ರೀಕೃಷ್ಣನ ಸಂತಾನವನ್ನು ವರ್ಣಿಸಿರುವೆನು.

**ಪ್ರದ್ಯುಮ್ನಸ್ಯ ಸುತೋಜಜ್ಞೇ ವೈದರ್ಭ್ಯಾಂ ರಾಜಸತ್ತಮಃ ।**
**ಅನಿರುದ್ಧೋ ರಣೇऽರುದ್ಧೋ ಜಜ್ಞೇ ಸ ಮೃಗಕೇತನಃ ॥ 13 ॥**

ಪ್ರದ್ಯುಮ್ನನಿಗೆ ವಿದರ್ಭರಾಜ ಪುತ್ರಿಯಾದ ರುಗ್ಮವತಿಯಲ್ಲಿ ಅನಿರುದ್ಧನೆಂಬ ಮಗನಾದನು. ಯುದ್ಧದಲ್ಲಿ ಅವನ ಗತಿಯನ್ನೂ ಯಾರಿಂದಲೂ ತಡೆಯಲಾಗುತ್ತಿದ್ದಿಲ್ಲ. ಅವನ ಧ್ವಜದಲ್ಲಿ ಮೃಗದ ಚಿಹ್ನೆಯಿತ್ತು.

**ರೇವತ್ಯಾಂ ಬಲದೇವಸ್ಯ ಜಜ್ಞಾತೇ ನಿಶರೋಲ್ಮುಕೌ ॥ 14 ॥**

ಬಲದೇವನಿಗೆ ರೇವತಿಯಲ್ಲಿ ನಿಶಠ ಹಾಗೂ ಉಲ್ಮುಕರೆಂಬ ಇಬ್ಬರು ಪುತ್ರರು. ವಸುದೇವನಿಗೆ ಸುತನು ಹಾಗೂ ಸುತಾರಾ ಎಂಬ ಇಬ್ಬರು ಪತ್ನಿಯರಿದ್ದರು. ಇವರೇ ಕಾಶಿರಾಜನ ಮಗಳು ಹಾಗೂ ಕರವೀರೇಶ್ವರನ ಮಗಳು.

ಇವರಿಬ್ಬರೂ ಕ್ರಮವಾಗಿ ದಿತಿ ಹಾಗೂ ದನುಗಳು. ಹಿಂದೆ ನಾನೇ ದೇವರೆಂದು ಹೇಳುತ್ತಿದ್ದ ವೇನನೇ ಪೌಂಡ್ರಕವಾಸುದೇವನಾಗಿ ಕಾಶಿರಾಜನ ಮಗಳು ಸುತನುವಿನಲ್ಲಿ ಹುಟ್ಟಿದ. ಮಧುದೈತ್ಯನ ಮಗ ಧುಂಧುವು ಕರವೀರೇಶ್ವರನ ಮಗಳು ಸುತಾರಾಳಲ್ಲಿ ಶೃಗಾಲ ವಾಸುದೇವನಾಗಿ ಹುಟ್ಟಿದ. ಇವನಿಗೆ ಕಪಿಲಯೆಂದೂ ಹೆಸರಿತ್ತು.

ವಸುದೇವನಿಗೆ ನಾಲ್ಕನೆಯ ವರ್ಣದ ಭಾರ್ಯೆಯಿದ್ದಳು. ಅವಳಲ್ಲಿ 'ಜರಾ' ಎಂಬ ಮಗನಾದನು. ಇವನೇ ನಿಷಾದರಿಗೆ ಪ್ರಭುವಾದನು.

---

2. ಭಾಗವತದಲ್ಲಿ ಶ್ರೀಕೃಷ್ಣನ ಮಕ್ಕಳ ತಾಯಿಂದರೆ ಹದಿನಾರು ಸಾವಿರಕ್ಕಿಂತಲೂ ಅಧಿಕರಿದ್ದರು. ಅವರಲ್ಲಿ ಕೃಷ್ಣನ ಮಕ್ಕಳು, ಮೊಮ್ಮಕ್ಕಳ ಸಂಖ್ಯೆ ಕೋಟಿಯನ್ನೂ ಮೀರಿದ್ದಿತು ಎನ್ನಲಾಗಿದೆ.
**ಏತೇಷಾಂ ಪುತ್ರಪೌತ್ರಾಶ್ಚ ಬಭೂವುಃ ಕೋಟಿಶೋ ನೃಪ ॥** *–ಭಾಗ–10/76/19*

ಸಾಂಬನಿಗೆ ಕಾಶ್ಯಾ ಎಂಬುವಳಲ್ಲಿ ಸುಪಾರ್ಶ್ವನೂ ಜನಿಸಿದನು. ಅನಿರುದ್ಧನಿಗೆ ಸಾನು ಎಂಬುವನಾದನು. ಸಾನುವಿನ ಮಗನೇ ವಜ್ರನು. ಇವನಿಗೆ ಪ್ರತಿರಥನು, ಪ್ರತಿರಥನಿಗೆ ಸುಚಾರುವು, ಹುಟ್ಟಿದನು.

ವೃಷ್ಣಿಯ ಕಿರಿಯ ಮಗನೇ ಅನಮಿತ್ರನು. ಇವನಿಗೆ 'ಶಿನಿ'ಯು ಮಗನಾದನು. ಶಿನಿಗೆ ಸತ್ಯಕನು ಮಗನಾದನು. ಸತ್ಯಕನ ಪುತ್ರನೇ ಸಾತ್ಯಕಿಯು. ಇವನು ಕೃಷ್ಣಪಕ್ಷಾಭಿಮಾನಿಯು. ಗರುಡಾಂಶಯುಕ್ತನಾಗಿ ಜನಿಸಿದನು. ಇವನಿಗೆ ಯುಯುಧಾನ ಎಂದು ನಾಮಾಂತರ.

ಸಾತ್ಯಕಿಯ ಮಗ ಅಸಂಗ, ಅವನ ಮಗ ಮಣಿ, ಇವನಿಗೆ ಯುಗಂಧರ. ಹೀಗೆ ಇವರ ವಂಶಾವಳಿಯು ಸಮಾಪ್ತವಾಗುತ್ತದೆ.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ**
**ಶ್ರೀಕೃಷ್ಣ ಸಂತಾನ ವರ್ಣನ ಎಂಬಲ್ಲಿ**
**ನೂರಮೂರನೆಯ ಅಧ್ಯಾಯ ಸಮಾಪ್ತಿ**

# ಅಥ ಚತುರಧಿಕಶತತಮೋಽಧ್ಯಾಯಃ

## ಪ್ರದ್ಯುಮ್ನನ ಜನನ

*ಜನಮೇಜಯ ಉವಾಚ –*

**ಯ ಏಷ ಭವತಾ ಪೂರ್ವಂ ಶಂಬರಘ್ನ ಇತ್ಯುದಾಹೃತಃ ।**
**ಪ್ರದ್ಯುಮ್ನಃ ಸ ಕಥಂ ಜಜ್ಞೇ ಶಂಬರಂ ತದ್ ಬ್ರವೀಹಿ ಮೇ ॥ 1 ॥**

ವೈಶಂಪಾಯನರೇ! ತಾವು ಈ ಮೊದಲು ಪ್ರದ್ಯುಮ್ನನು ರುಕ್ಮಿಣಿಯ ಮಗನೆಂದು ಹೇಳಿದ್ದೀರಿ. ಅವನು ಶಂಬರಾಂತಕನೆಂದೂ ಹೇಳಿದಿರಿ. ಪ್ರದ್ಯುಮ್ನನು ಶಂಬರಾಸುರನನ್ನು ಹೇಗೆ ಸಂಹಾರ ಮಾಡಿದನೆಂದು ನನಗೆ ತಿಳಿಸಿರಿ.

*ವೈಶಂಪಾಯನ –*

**ರುಕ್ಮಿಣ್ಯಾಂ ವಾಸುದೇವಸ್ಯ ಲಕ್ಷ್ಮ್ಯಾಂ ಕಾಮೋ ಧೃತವ್ರತಃ ।**
**ಶಂಬರಾಂತಕರೋ ಜಜ್ಞೇ ಪ್ರದ್ಯುಮ್ನಃ ಕಾಮ ದರ್ಶನಃ ॥ 2 ॥**

**ಸನತ್ಕುಮಾರ ಇತಿ ಯಃ ಪುರಾಣೇ ಪರಿಗೀಯತೇ ।**

ವಾಸುದೇವನಿಗೆ ಲಕ್ಷ್ಮ್ಯಾತ್ಮಕಳಾಗಿದ್ದ ರುಕ್ಮಿಣಿಯಲ್ಲಿ ಮನ್ಮಥನೆ ಪ್ರದ್ಯುಮ್ನ ರೂಪದಲ್ಲಿ ಜನ್ಮ ತಾಳಿದನು. ಅವನು ಸನತ್ಕುಮಾರನಾಗಿದ್ದನು.

1. ಸನತ್ಕುಮಾರ : ಪ್ರದ್ಯುಮ್ನನು ಮನ್ಮಥನ ಅವತಾರ. ಹೀಗಾಗಿ ಮಹಾಸುಂದರ. ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಈ ವ್ಯೂಹದಲ್ಲಿ ಮೂರನೇ ರೂಪ ಪ್ರದ್ಯುಮ್ನನ ಆವೇಶವಿರುವನು.
**ಚತುಸ್ತನೋಃ ಹರೇಃ ಪ್ರಭೋಃ ತೃತೀಯರೂಪ ಸಂಯುತಃ ।**
**ತತಸ್ತದಾಹ್ವಯೋಽಭವತ್ ॥**

**ತಂ ಸಪ್ತರಾತ್ರೇ ಸಂಪೂರ್ಣೇ ನಿಶೀಥೇ ಸೂತಿಕಾಗೃಹಾತ್ ।**
**ಜಹಾರ ಕೃಷ್ಣಸ್ಯ ಸುತಂ ಶಿಶುಂ ವೈ ಕಾಲಶಂಬರಃ ॥ 3 ॥**

ಪ್ರದ್ಯುಮ್ನನು ಹುಟ್ಟಿದ ಏಳನೆಯ ದಿವಸದ ರಾತ್ರಿ[2] ಕಾಲಶಂಬರ[3]ನು ಸೂತಿಕಾಗೃಹದಿಂದ ಪ್ರದ್ಯುಮ್ನನನ್ನು ಅಪಹರಿಸಿ ಶಂಬರನಿಂದ ಅಪರಾಧ ಮಾಡಿಸಿ ಪ್ರದ್ಯುಮ್ನನ ಕೈಯಿಂದ ಕೊಲ್ಲಿಸಲು ಏನೂ ತಿಳಿಯದವನಂತೆ ನಟಿಸಿದ್ದ. ಆದ್ದರಿಂದಲೇ ಶಂಬರನನ್ನು ನಿಗ್ರಹಿಸಲಿಲ್ಲ.

**ವಿದಿತಂ ತಸ್ಯ ಕೃಷ್ಣಸ್ಯ ದೇವಮಾಯಾನುವರ್ತಿನಃ ।**
**ತತೋ ನ ನಿಗೃಹೀತಃ ಸ ದಾನವೋ ಯುದ್ಧ ದುರ್ಮದಃ ॥ 4 ॥**

ಶಂಬರಾಸುರನಿಗೆ ರೂಪ ಗುಣವತಿಯಾದ ಮಾಯವತಿ[4]ಯೆಂಬ ಭಾರ್ಯೆಯಿದ್ದಳು. ಅವಳಿಗೆ ಸಂತಾನವಾಗಿರಲಿಲ್ಲ. *[ಅನಪತ್ಯಾತು*

---

ಈ ಹಿಂದೆ ರುದ್ರನ ಅಗ್ನಿಗೆ ದಗ್ಧವಾಗಿದ್ದ ಕಾಮನು ಪುನಃ ಶರೀರವನ್ನು ಪಡೆಯಲು ವಾಸುದೇವನನ್ನಾಶ್ರಯಿಸಿದನು. ತಂದೆ ಶ್ರೀಕೃಷ್ಣನಂತೆ ಸೌಂದರ್ಯ ಸೌಶೀಲ್ಯ ಸುಗುಣಗಳಲ್ಲಿ ಇರುತ್ತಿದ್ದನು. ಇವನು ತಂದೆಗೆ ಎಷ್ಟು ಹೋಲುತ್ತಿದ್ದನೆಂದರೆ ಕೃಷ್ಣ ಪತ್ನಿಯರೆಲ್ಲರೂ ಅವನನ್ನು ಕೃಷ್ಣನೆಂದೆ ಭ್ರಮಿಸಿ ಅಲ್ಲಲ್ಲಿಯೆ ಅಡಗಿದರು.
**ತಂ ದೃಷ್ಟ್ವಾ ಜಲದಶ್ಯಾಮಂ ಪೀತಕೌಶೇಯವಾಸಸಂ ।**
**ಕೃಷ್ಣಂ ಮತ್ವಾ ಸ್ತ್ರಿಯೋ ಭೀತಾಃ ನಿಲಿಲ್ಯುಸ್ತತ್ರ ತತ್ರ ಹ** ॥ – *ಭಾಗವತ*

2. **ತಂ ಶಂಬರಃ ಕಾಮರೂಪೀ ಹತ್ವಾ ತೋಕ ಮನಿರ್ದಶಮ್** ॥ *–ಭಾಗ–10/68/5*
ಹರಿವಂಶದಲ್ಲಿ ಏಳನೇ ದಿವಸದ ರಾತ್ರಿ ಶಂಬರಾಸುರನು ಪ್ರದ್ಯುಮ್ನನನ್ನು ಅಪಹರಿಸಿದ ಎಂದಿದೆ. ಭಾಗವತವು ಹತ್ತು ದಿವಸ ಮುಗಿಯದ ಮಗುವನ್ನು ಎಂದಿದೆ. ಹತ್ತು ದಿವಸದ ಒಳಗೆ ಎಷ್ಟನೇ ದಿನ? ಎಂಬ ಶಂಕೆಯನ್ನು ಹರಿವಂಶ 'ಏಳು' ಎಂದಿದೆ.

3. **ಶಂಬರಾಸುರ** : ಶಂಬರಾಸುರನು ದನುವಿನ ಮಗ. ವಿಪ್ರಚಿತ್ತಿ ಇವನ ಅಣ್ಣ. ಮಾಯಾಯುದ್ಧದಲ್ಲಿ ಚತುರ. ಶಂಬರನು ಈ ಮಾಯೆಯಿಂದಲೇ ವೇಷ ಬದಲಾಯಿಸಿಕೊಂಡು ಸೂತಿಕಾಗೃಹ ಪ್ರವೇಶಿಸಿ ಮಗುವನ್ನು ಎತ್ತಿಕೊಂಡು ಸಮುದ್ರದಲ್ಲಿ ಬಿಸಾಡಿದ.
ನಾರದರು – ಕೃಷ್ಣನಿಂದ ರುಕ್ಮಿಣಿಯಲ್ಲಿ ಜನಿಸುವ ಮಗನೆ ನಿನಗೆ ಮಾರಕ ಎಂದು ಹಿಂದೆಯೇ ಹೇಳಿದ್ದರು. ಪ್ರದ್ಯುಮ್ನ ಹುಟ್ಟಿದ ಮೇಲೂ "ನಿನ್ನ ಮೃತ್ಯು ಹುಟ್ಟಿರುವನು" ಎಂದಿದ್ದರು.

4. ಹರಿವಂಶವು – ಅಪಹರಿಸಿದ ಮಗುವನ್ನು ಎತ್ತಿಕೊಂಡು ತನ್ನ ಮಗವೆಂದೆ ತಿಳಿದು ತನ್ನ ಪತ್ನಿಯಂತೆ ಮತ್ತೊಂದು ರೂಪದಿಂದ ಇದ್ದ ಮಾಯಾವತಿಗೆ ಕೊಟ್ಟನೆಂದಿದೆ. ಸಮುದ್ರಕ್ಕೆ ಹಾಕಿದ್ದು, ಮೀನು ನುಂಗಿದ್ದು ಮೀನನ್ನು ಬೆಸ್ತರು ಶಂಬರನಿಗೆ ನೀಡಿದ್ದು, ಅದನ್ನು ಸೀಳಿದಾಗ ಪ್ರದ್ಯುಮ್ನ ಇದ್ದಿರುವ ವಿಚಾರಾದಿಗಳು ಇಲ್ಲಿ ಹೇಳಿಲ್ಲವಾದರೂ ಶ್ರೀಮದಾಚಾರ್ಯರು ಭಾಗವತ [10/68]ದ ಆಧಾರದಿಂದ ತಾತ್ಪರ್ಯನಿರ್ಣಯದಲ್ಲಿ ಹೇಳಿದ್ದಾರೆ. [ತಾ.ನಿ. 17/184–185]. ಅದನ್ನು ಇಲ್ಲಿ ಸೇರಿಸಿಕೊಳ್ಳಬಹುದು.

*ಭಾರ್ಯಾऽಸೀತ್].* ಇವಳು ಮನ್ಮಥನ ಪತ್ನಿಯಾದ ರತಿಯೇ. ದ್ರೌಪದಿಗೆ ಪಂಚಭೃತ್ರ್ಯಗಳೆಂದು ಬ್ರಹ್ಮ ದೇವರು ಹೇಳಿದಾಗ ಅಪಹಾಸ್ಯ ಮಾಡಿದ್ದ ಫಲವಾಗಿ ಅಸುರನಿಂದ ದೂಷಿತಳಾಗು ಎಂಬ ಶಾಪದಿಂದಾಗಿ ಶಂಬರನಿಗೆ ಪತ್ನಿಯಾಗಿದ್ದಳು. ಆದರೂ ಮಾಯೆಯಿಂದಾಗಿ ತನ್ನಂತೆ ಇರುವ ಮತ್ತೊಂದು ಮಾಯಾವತಿ ರೂಪದಿಂದ ಶಂಬರನೊಂದಿಗೆ ಇದ್ದಳು. ನಿಜರೂಪದಲ್ಲಿ ತನ್ನ ಶೀಲ ಕಾಪಾಡಿಕೊಂಡಿದ್ದು ಶಿವನು ಹೇಳಿದಂತೆ ಪ್ರದ್ಯುಮ್ನ ಬರುವನೆಂದು ತಿಳಿದು ಅವನಿಗಾಗಿ ಕಾಯುತ್ತಿದ್ದಳು. ನಾರದರು ಮೀನಿನ ಉದರದಲ್ಲಿದ್ದ ಮಗು ನಿನ್ನ ಪತಿಯೆ ಎಂದಿದ್ದರು.

**ದದೌ ಸ ವಾಸುದೇವಸ್ಯ ಪುತ್ರಂ ಪುತ್ರಮಿವಾತ್ಮಜಮ್ ।**
**ತಸ್ಯಾ ಮಹಿಷ್ಯಾಃ ಮಾಯಿನ್ಯಾಃ ದಾನವಃ ಕಾಲಚೋದಿತಃ ॥ 5 ॥**
**ಮಾಯವತೀ ತು ತಂ ದೃಷ್ಟ್ವಾ ಸಂಪ್ರಹೃಷ್ಟತನೂರುಹಾ ।**
**ಹರ್ಷೇಣ ಮಹತಾ ಯುಕ್ತಾ ಪುನಃ ಪುನರುದೈಕ್ಷತ ॥ 6 ॥**

ಶಂಬರನು ಕಾಲಪ್ರೇರಿತನಾಗಿ ಶ್ರೀಕೃಷ್ಣನ ಮಗುವನ್ನು ತನ್ನ ಮಗುವೆಂದೇ ಭಾವಿಸಿ, ಅದರ ಸಂರಕ್ಷಣೆಯ ಭಾರವನ್ನು ಮಾಯಾವತಿಗೆ ಅರ್ಪಿಸಿದನು.

ಶಂಬರಾಸುರನು ಮಾಯಾವತಿಯನ್ನು ತನಗೆ ರುಚಿರುಚಿ ಅಡಿಗೆ ಮಾಡಲೆಂದು ನಿಯಮಿಸಿಕೊಂಡಿದ್ದನು.[5] ಹಾಗಾಗಿ ಅಡಿಗೆಯ ಮೀನು ಹಾಗೂ ಮಗುವು ಇವಳ ಕೈ ಸೇರಿತು.

ಮಾಯವತಿಯು ಸುಂದರ ಮಗುವನ್ನು ನೋಡುತ್ತಿದ್ದಂತೆ ಈ ಮಗುವು ಯಾರದಾಗಿರಬಹುದೆಂಬ ಸಂದೇಹವುಂಟಾಯಿತು. ಕೂಡಲೇ ನಾರದರು ಬಂದು ರುಕ್ಮಿಣಿಯಲ್ಲಿ ಕಾಮನು ಪ್ರದ್ಯುಮ್ನನಾಗಿ ಹುಟ್ಟಿದ್ದು ಮೊದಲಾದ ಸಮಗ್ರ ವಿಷಯ ತಿಳಿಸಿದರು. ಮಾಯಾವತಿಯೂ ಸಹ ಕಾಮನ ಪತ್ನಿ ರತಿದೇವಿಯೇ ಆಗಿದ್ದಳು. ಹಿಂದಿನ ಜನ್ಮ ಸ್ಮರಣೆವುಂಟಾಗಿ ರುದ್ರನೇತ್ರಾಗ್ನಿಯಿಂದ ದಗ್ಧನಾದ ಕಾಮನೆ ಇವನೆಂದು ತಿಳಿದು ಆನಂದ ಹೊಂದಿದಳು.

**ಅಯಂ ಭಗವತಾ ಪೂರ್ವಂ ದೇವದೇವೇನ ಶೂಲಿನಾ ।**
**ಖೇದಿತೇನ ಕೃತೋऽನಂಗೋ ದೃಷ್ಟೋ ಜಾತ್ಯಂತರೇ ಮಮ ॥ 7 ॥**

5. ನಿರೂಪಿತಾ ಶಂಬರೇಣ ಸಾ ಸೂಪೌದನ ಸಾಧನೇ ॥ –*ಭಾಗ. 10/68/11*

ಈತನು ಪೂರ್ವಜನ್ಮದಲ್ಲಿ ಲೋಕಪೂಜ್ಯನಾದ ಶಿವನು ತಪಸ್ಸನ್ನಾಚರಿಸುತ್ತಿದ್ದಾಗ ಈ ಮನ್ಮಥನ ಬಾಣಬಿಡುವಿಕೆಯೆಂಬ ಚೇಷ್ಟೆಯಿಂದಾಗಿ ಖೇದಗೊಂಡು ಶಿವನು ಇವನನ್ನು ನೇತ್ರಾಗ್ನಿಯಿಂದ ಸುಟ್ಟು ಅನಂಗನನ್ನಾಗಿ ಮಾಡಿದನು. ಈ ಅನಂಗನಾದ ನನ್ನ ಪತಿಯನ್ನೇ ಇಂದು ಇಲ್ಲಿ ಶಿಶುರೂಪಿಯಾಗಿ ಕಾಣುತ್ತಿದ್ದೇನೆ.

**ಕಥಮಸ್ಯ ಸ್ತನಂ ದಾಸ್ಯೇ ಮಾತೃಭಾವೇನ ಜಾನತೀ ।**
**ಭರ್ತುಃ ಭಾರ್ಯಾ ತ್ವಹಂ ಭೂತ್ವಾ ವಕ್ಷ್ಯೇವಾ ॥ 8 ॥**

**ಏವಂ ಸಂಚಿಂತ್ಯ ಮನಸಾ ಧಾತ್ರ್ಯಾಸ್ತಂ ಸ ಸಮರ್ಪಯತ್ ।**
**ರಸಾಯನಪ್ರಯೋಗೈಶ್ಚ ಶೀಘ್ರಮೇವ ವ್ಯವರ್ಧಯತ್ [6] ॥ 9 ॥**

ಈ ರಹಸ್ಯ ತಿಳಿದಿರುವ ನಾನು ಈ ಶಿಶುವಿನ ಮಾತ್ರವಾಗಿ ಈ ಶಿಶುವಿಗೆ ಹೇಗೆ ತಾನೆ ಸ್ತನ್ಯಪಾನ ಮಾಡಿಸಲಿ? ಪ್ರಾಣಕಾಂತನ ಪತ್ನಿಯಾಗಿದ್ದು ಕಂದನೆಂದು ಹೇಗೆ ಕರೆಯಲಿ? ಹೀಗೆ ವಿಧವಿಧವಾಗಿ ವಿಚಾರಿಸುತ್ತಾ ಕಡೆಗೆ ಆ ಮಗುವನ್ನು ಪತಿಗೆ ತಾನು ತಾಯಾಗಿ ಸ್ತನಪಾನ ಮಾಡಿಸದೆ, 'ಕಂದ!' ಎಂದೂ ಕರೆಯದೆ ದಾದಿಯ ಕೈಲಿ ಕೊಟ್ಟು ಅವಳ ಹಾಲಿನಿಂದಲೂ, ರಸಾಯನ ದ್ರವ್ಯಗಳಿಂದಲೂ ಪತಿಯನ್ನು ಬೆಳೆಸಿದಳು. ನಾಲ್ಕೇ ವರ್ಷಗಳಲ್ಲಿ ನಾಲ್ಕು ವರ್ಷದ ಮಗು ಹದಿನಾರು ವಯಸ್ಸಿನವನಾದ.

ಧಾತ್ರಿಯ ಮೂಲಕವಾಗಿ ಮಾಯವತಿಯ ಗುಣಗಳನ್ನು ತಿಳಿದ ಪ್ರದ್ಯುಮ್ನನು ಮಾಯಾವತಿಯೇ ತನ್ನ ತಾಯಿಯೆಂದು ಭ್ರಮಿಸಿದನು.

ಮಾಯಾವತಿಯು ಪ್ರದ್ಯುಮ್ನನನ್ನು ರಸಾಯನಾದಿಗಳಿಂದ ಸಂಪೂರ್ಣ ಯೌವ್ವನವಂತನಂತೆ ಮಾಡಿದಳು.

## ಪ್ರದ್ಯುಮ್ನ ಯುವಕನಾದ

**ಸಾ ಚ ತಂ ವರ್ಧಯಾಮಾಸ ಕಾರ್ಷ್ಣಿಂ ಕಮಲಲೋಚನಮ್ ।**
**ಮಾಯಾಶ್ಚಾಸ್ಮೈ ದದೌ ಸರ್ವಾಃ ದಾನವೀಃ ಕಾಮಮೋಹಿತಾ ॥ 10 ॥**

ಯುವಕನಾದ ಪ್ರದ್ಯುಮ್ನನ ರೂಪಲಾವಣ್ಯಗಳು ಸ್ತ್ರೀಯರ ಮನಸ್ಸಿನಲ್ಲಿ ಶೃಂಗಾರರಸವನ್ನು ಉಕ್ಕೇರುಸುತ್ತಿದ್ದನು. ಕಮಲಕೋಮಲವಾದ

6. ರಸಾಯನೈಃ ಕುಮಾರಕಂ ವ್ಯವರ್ಧಯದ್ ರತಿಃ ಪತಿಮ್ ।
ಸಪೂರ್ಣಯೌವ್ವನೋಽಭವತ್ ಚತುರ್ಭಿರೇವ ವತ್ಸರೈಃ ॥ *–ತಾ.ನಿ.17/191*

ವಿಶಾಲನೇತ್ರಗಳು, ಆಜಾನುಬಾಹು ಆಗಿದ್ದ ಪ್ರದ್ಯುಮ್ನನು ಮನುಷ್ಯ ಲೋಕದಲ್ಲಿಯೇ ಅತ್ಯಂತ ಸುಂದರನಾಗಿದ್ದನು. ಇವನನ್ನು ನೋಡಿ ಕಾಮಮೋಹಿತಳಾದ ಮಾಯಾದೇವಿಯು ಸಮಸ್ತ ದಾನವೀ ಮಾಯೆಗಳನ್ನು ಹೇಳಿಕೊಟ್ಟಳು.

ಯುವಕ ಪ್ರದ್ಯುಮ್ನನು ಕಾಮನಂತೆಯೇ ತೋರುತ್ತಿದ್ದು ನಾರಿಯರ ಮನೋಭಿಪ್ರಾಯಗಳನ್ನು ತಿಳಿಯುತ್ತಿದ್ದ ಹಾಗೂ ಅಸ್ತ್ರಶಸ್ತ್ರಪ್ರವೀಣನೂ ಆಗಿದ್ದನು.

**ತಂ ಸಾ ಮಾಯಾವತೀ ಕಾಂತಂ ಕಾಮಯಾಮಾಸ ಕಾಮಿನೀ ।**

ಮಾಯಾವತಿಯೂ ಸಹ ತನ್ನ ಪತಿಯೆಂದೆ ಭಾವಿಸಿ ಕಟಾಕ್ಷವೀಕ್ಷಣ, ನಾಚಿಕೆಯಿಂದ ಕೂಡಿರುವ ಮಂದಹಾಸ, ಹುಬ್ಬುಹಾರಿಸುವುದು ಮೊದಲಾದ ಸುರತಕ್ರೀಡಾ ಲಕ್ಷಣಗಳಿಂದ ತನ್ನನ್ನು ಪ್ರಚೋದನೆಗೊಳಿಸುತ್ತಿದ್ದ ಮಾಯವತಿಗೆ ಹೀಗೆಂದನು.

**ಮಾತೃಭಾವಂ ವ್ಯತಿಕ್ರಮ್ಯ ಕಿಮೇವಂ ವರ್ತಸೇಽನ್ಯಥಾ ।**
**ಅಹೋ ದುಷ್ಟಸ್ವಭಾವಾಸಿ ಸ್ತ್ರೀತ್ವೇ ಚಪಲಮಾನಸಾ ॥ 11 ॥**

**ಯಾ ಪುತ್ರಭಾವಮುತ್ಸೃಜ್ಯ ಮಯಿ ಲೋಭಾತ್ ಪ್ರವರ್ತಸೇ ।**

ದೇವಿ! ನೀನಾದರೂ ನನಗೆ ತಾಯಿಗೆ ಸಮಾನಳು. ಆದರೆ ನೀನೀಗ ನಿನ್ನ ಮಾತೃಭಾವವನ್ನು ತೊರೆದು ಕಾಮಿನಿಯಂತೆ ನನ್ನಲ್ಲಿ ಹಾವಭಾವಗಳನ್ನು ತೋರಿಸುತ್ತಿರುವೆ. ನಿನ್ನ ಸ್ವಭಾವವು ಬಹಳ ದುಷ್ಟವಾಗಿರುವಂತೆ ತೋರುತ್ತಿದೆ. ನಿನ್ನ ಮನಸ್ಸು ಸ್ತ್ರೀತ್ವವನ್ನವಂಬಿಸಿ ಬಹಳ ಚಂಚಲವಾಗಿರುತ್ತದೆ.

ನಿನ್ನ ಮಗನಾದ ನನ್ನಲ್ಲಿ ನಿನ್ನ ಶೀಲ ಸ್ವಭಾವಗಳಲ್ಲಿ ವೈಪರೀತ್ಯ ಹೇಗಾಯಿತು? ನನಗೆ ಯಥಾರ್ಥ ತಿಳಿಯಬೇಕಿದೆ. ಸ್ತ್ರೀಯರ ಸ್ವಭಾವವು ಮಿಂಚಿನಂತೆ ಚಂಚಲವಾಗಿದ್ದು ಪುರುಷರೊಡನೇ ತಾತ್ಕಾಲಿಕ ಆಸಕ್ತಿ ಹೊಂದಿರುತ್ತಾರೆ.

## ರತಿಯ ಕಾಮಭಾವ

**ಯದಿ ತೇಽಹಂ ಸುತಃ ಸೌಮ್ಯೇ ಯದಿ ವಾ ನಾತ್ಮಜಃ ಶುಭೇ ।**
**ಕಥಿತಂ ತತ್ತ್ವಮಿಚ್ಛಾಮಿ ಕಿಮಿದಂ ತೇ ಚಿಕೀರ್ಷಿತಮ್ ॥ 12 ॥**

ಶುಭಾಂಗಿ ನಾನು ನಿನ್ನ ಮಗನಾಗಿದ್ದರೆ ಅದನ್ನಾದರೂ ಹೇಳು. ಹಾಗಿಲ್ಲವಾದರೆ ನಾನಾರೆಂದು ಯಥಾರ್ಥ ತಿಳಿಸು. ನೀನು ನನ್ನನ್ನು ಕಂಡು ಕಾಮವಿಕಾರ–ಕ್ಕೊಳಗಾಗುತ್ತಿರುವುದನ್ನು ಕಂಡು ನನಗೆ ಸಂಶಯವೇರ್ಪಡುತ್ತಿದೆ.

**ಪ್ರಿಯಂ ಪ್ರೋವಾಚ ವಚನಂ ವಿವಿಕ್ತೇ ಕೇಶವಾತ್ಮಜಮ್ ।**
**ನ ತ್ವಂ ಮಮ ಸುತಃ ಕಾಂತ ನಾಪಿ ತೇ ಶಂಬರಃ ಪಿತಾ ॥ 13 ॥**
**ರೂಪವಾನಸಿ ವಿಕ್ರಾಂತಸ್ತ್ವಂ ಜಾತ್ಯಾ ವೃಷ್ಣಿನಂದನಃ ।**
**ಪುತ್ರಸ್ತ್ವಂ ವಾಸುದೇವಸ್ಯ ರುಕ್ಮಿಣ್ಯಾನಂದ ವರ್ಧನಃ ॥ 14 ॥**

ಕಾಮಮೋಹಿತಳಾದ ಮಾಯಾವತಿಯು ಏಕಾಂತದಲ್ಲಿ ಪ್ರದ್ಯುಮ್ನನಿಗೆ ಹೀಗೆಂದಳು. ಪ್ರಾಣಪ್ರಿಯನೇ ನೀನು ನನ್ನ ಮಗನೂ ಅಲ್ಲ. ಶಂಬರನು ನಿನ್ನ ತಂದೆಯೂ ಅಲ್ಲ. ನೀನು ಹುಟ್ಟಿನಿಂದಲೇ ಸುಂದರನೂ ಪರಾಕ್ರಮಿಯೂ ಆಗಿದ್ದು ರುಕ್ಮಿಣಿಯಲ್ಲಿ ವಾಸುದೇವನಿಂದ ಜನಿಸಿದ ಪುತ್ರನಾಗಿರುವೆ.[7]

ನೀನು ಏಳು ದಿವಸ ತುಂಬುವುದರೊಳಗೆ ಶಂಬರನು ಸೂತಿಕಾಗೃಹದಿಂದ ಅಪಹರಿಸಿಕೊಂಡು ಸಮುದ್ರದಲ್ಲಿ ಹಾಕಿದನು. ಸಮುದ್ರದಲ್ಲಿದ್ದ ಮೀನೊಂದು ನಿನ್ನನ್ನು ನುಂಗಿತು. ಆ ಮೀನು ಬೆಸ್ತರ ಮೂಲಕ ನನ್ನ ಮನೆ ಸೇರಿತು. ಮೀನಿನ ಉದರದಲ್ಲಿದ್ದ ನಿನ್ನನ್ನು ನಾನು ಪಡೆದುಕೊಂಡೆ.

**ಸಾ ಚ ತೇ ಕರುಣಂ ಮಾತಾ ತ್ವಾಂ ಬಾಲಮನುಶೋಚತೀ ।**
**ಅತ್ಯರ್ಥಂ ತಪ್ಯತೇ ವೀರ ವಿವತ್ಸಾ ಸೌರಭೀಯಥಾ ॥ 15 ॥**

ಈ ನಿನ್ನ ತಾಯಿಯಾದ ರುಕ್ಮಿಣಿಯೂ ಬಾಲಕನಾದ ನಿನ್ನ ವಿಷಯದಲ್ಲಿ ಪರಿತಪಿಸುತ್ತಿದ್ದಾಳೆ. ಮಗುವನ್ನು ಕಳೆದುಕೊಂಡ ನಿನ್ನ ತಾಯಿಯು ತನ್ನ ಮರಿಯನ್ನು ಕಳೆದುಕೊಂಡ ತಾಯಿ ಹಕ್ಕಿಯಂತೆಯೂ, ಕರುವನ್ನೂ ಕಳೆದುಕೊಂಡ ಹಸುವಿನಂತೆಯೂ ಕೊರಗುತ್ತಿದ್ದಾಳೆ.

**ವೀರ ನೈವಂವಿಧಾನ್ ಪುತ್ರಾನ್ ದಾನವಾ ಜನಯಂತಿ ಹಿ ।**
**ಅತೋಽಹಂ ಕಾಮಯಾಮಿ ತ್ವಾಂ ನ ಹಿ ತ್ವಂ ಜನಿತೋ ಮಯಾ ॥ 16॥**

ಪ್ರಾಣಕಾಂತನೇ! ನೀನು ಕೃಷ್ಣ ಕುಮಾರನಾಗಿರುವೆ. ನಿನ್ನಂತಹ ಸುರದ್ರೂಪಿ ಮಕ್ಕಳನ್ನು ದಾನವರು ಪಡೆಯಲಾರರು. ನಾನು ನಿನ್ನನ್ನು ಹಡೆದವಳಲ್ಲ. ನಾನು ನಿನ್ನ ಅಧಿಕೃತ ಪತ್ನಿಯಾದ ರತಿಯಾಗಿರುವೆನು. ನೀನಾದರೂ ಕಾಮದೇವನಾಗಿರುವೆ. ಹೀಗಾಗಿ ನಾನು ನಿನ್ನನ್ನು ಕಾಮಿಸುತ್ತಿರುವೆ. ನಿನ್ನ ಸುಂದರ ರೂಪದಿಂದಾಗಿ ನಾನು ಮುಗ್ಧಳಾಗಿದ್ದೇನೆ.

---

7. ಉವಾಚ ಕಾರ್ಷ್ಣಿರಂಬ ತೇ ಕುಚೇಷ್ಟಿತಂ ಕಥಂ ತ್ವಿತಿ ॥ *–ತಾ.ನಿ.17/192*

ವೃಷ್ಣಿನಂದನನೇ! ನಾನು ನನ್ನ ಮನಸ್ಸಿನಲ್ಲಿರುವುದನ್ನು ಹೇಳಿದ್ದೇನೆ. ನನ್ನ ಮನಸ್ಸಿನಲ್ಲಿರುವುದನ್ನು ನಡೆಸಿಕೊಡುವುದು ನಿನಗೆ ಯೋಗ್ಯವಾಗಿದೆ.

**ಯಥಾ ನ ಮಮ ಪುತ್ರಸ್ತ್ವಂ ನ ಪುತ್ರಃ ಶಂಬರಸ್ಯ ಚ ।**
**ಏಷ ತೇ ಕಥಿತಃ ಸರ್ವಃ ಸದ್ಭಾವಸ್ತ್ವಮಿ ಯೋ ಮಮ ॥ 17 ॥**

ಈ ಶಂಬರನು ಮಹಾಮಾಯಾವೀ. ನೂರಾರು ಮಾಯೆಗಳನ್ನು ಬಲ್ಲವನು. ಸಾಮಾನ್ಯರಿಂದ ಅಜೇಯನಾಗಿರುವನು. ಇವನನ್ನು ಮೋಹನವೇ ಮೊದಲಾದ ಮಾಯೆಗಳಿಂದಲೇ ಸಂಹರಿಸಬೇಕಾಗಿದೆ. ಹೀಗೆಂದು ಸಮಸ್ತ ಮಾಯೆಗಳನ್ನು ನಾಶ ಮಾಡಬಲ್ಲ ಪರಶುರಾಮ ದೇವತಾಕವಾದ ಮಾಯಾಮಂತ್ರಗಳನ್ನು ಪ್ರದ್ಯುಮ್ನನಿಗೆ ನೀಡಿದಳು.[8]

## ಶಂಬರನ ಧ್ವಜ ಪತನ

ಮಾಯಾವತಿಯು ಹೇಳಿದ ಸಕಲ ವಿಷಯವನ್ನು ಕೇಳಿದ ಪ್ರದ್ಯುಮ್ನನು ಅತ್ಯಂತ ಕ್ರುದ್ಧನಾಗಿ ತನ್ನ ಹೆಸರನ್ನು ಶಂಬರನಿಗೆ ಪರಿಚಯಿಸುತ್ತಲೇ ಶಂಬರನನ್ನು ಯುದ್ಧಕ್ಕೆ ಕರೆದನು.

ಶಂಬರನೇ! ಕೇಶವನ ಪುತ್ರನನ್ನು ಅಪಹರಿಸಿಯೂ ನಿರ್ಭಯನಾಗಿದ್ದಾನೆ. ನಾನೀಗ ಮಹಾಭಯವುಂಟು ಮಾಡುವೆ.

**ಕಥಂ ವಾ ಕ್ರೋಧಮಾಗಚ್ಛೇತ್ ವಧ್ಯತೇ ವ ಕಥಂ ಮಯಾ ॥ 18 ॥**

ಪ್ರದ್ಯುಮ್ನನು ಇವನಿಗೆ ನನ್ನ ಮೇಲೆ ಕೋಪವುಂಟಾಗಲು ನಾನೇನು ಮಾಡಬೇಕು? ನಾನು ಇವನನ್ನು ಕೊಲ್ಲುವುದಾದರೂ ಹೇಗೆ? ಹೀಗೆಂದು ಆಲೋಚಿಸಿ,

**ಅಸ್ತಿಚಾಸ್ಯ ಧ್ವಜಂ ಚಿತ್ರಂ ಸಿಂಹಕೇತು ವಿಭೂಷಿತಮ್ ।**
**ಏತದುನ್ಮಥ್ಯ ಪಾತಿಷ್ಯೇ ಭಲ್ಲೇನ ನಿಶಿತೇನ ಚ ॥ 19 ॥**

ಶಂಬರಾಸುರನ ಬಳಿ ಬಂದು ವಿಚಿತ್ರವಾದ ಸಿಂಹದ ಚಿಹ್ನೆಯಿರುವ ಪತಾಕೆಯು ಬಹಿರ್ದ್ವಾರದ ಮೇಲ್ಭಾಗದಲ್ಲಿ ಮೇರುವಿನಂತೆ ಹಾರಾಡುತ್ತಿದೆ. ಇದನ್ನೂ ನಾನು ನನ್ನ ಚೂಪಾದ ಬಾಣದಿಂದ ಕೆಳಗೆ ಕೆಡುವುತ್ತೇನೆ.

---

8. 1) ದದೌ ಚ ಮಂತ್ರ ಮುತ್ತಮಂ ಸಹಸ್ರಮಾಯಿ ನಾಶನಮ್ ।
ಭೃಗೂತ್ಥ ರಾಮದೈವತಂ ರತಿಃ ಹರೇಃ ಸುತಾಯ ಸಾ ॥ –ತಾ.ನಿ. *17/194*
2) ಪ್ರಭಾಷ್ಯೈವಂ ದದೌ ವಿದ್ಯಾಂ ಪ್ರದ್ಯುಮ್ನಾಯ ಮಹಾತ್ಮನೇ ।
ಮಾಯಾವತೀ ಮಹಾಮಾಯಾ ಸರ್ವಮಾಯಾವಿನಾಶಿನೀಮ್ ॥–ಭಾಗ *10/68/19*

ಧ್ವಜವು ಪತನವಾಯಿತೆಂದು ತಿಳಿದ ಕೂಡಲೇ ಶಂಬರನು ಕೋಪದಿಂದ ಯುದ್ಧಕ್ಕೆ ಬರುವನು. ನಾನು ಅವನನ್ನು ಕೊಂದು ದ್ವಾರಕೆಗೆ ಹಿಂತಿರುಗುತ್ತೇನೆ. ಹೀಗೆ ಹೇಳುತ್ತಾ ಶಂಬರನ ಮಹಾಧ್ವಜವನ್ನು ಕತ್ತರಿಸಿ ಕೆಳಗೆ ಬೀಳಿಸಿದನು. ಪ್ರದ್ಯುಮ್ನನು ಧ್ವಜವನ್ನು ಕತ್ತರಿಸಿದ ವಿಷಯ ತಿಳಿದ ಶಂಬರನು ತನ್ನ ಮಕ್ಕಳಿಗೆ ಹೀಗೆ ಆಜ್ಞಾಪಿಸಿದನು.

**ಜಿಘಾಂಸಧ್ವಂ ಮಹಾವೀರಾಃ ರೌಕ್ಮಿಣೇಯಂ ತ್ವರಾನ್ವಿತಾಃ ॥ 20 ॥**

ಮಕ್ಕಳೇ ! ಈ ಕೂಡಲೇ ನೀವೆಲ್ಲರೂ ಹೋಗಿ ಪ್ರದ್ಯುಮ್ನನನ್ನು ಕೊಂದು ಹಾಕಿರಿ ಎಂದು.

ನನಗೆ ವಿಪ್ರಿಯ ಮಾಡಿರುವ ಅವನ ಮುಖ ನೋಡಲೂ ನಾನು ಇಚ್ಛಿಸುವುದಿಲ್ಲ.

## ಶಂಬರನ ಪುತ್ರರ ಯುದ್ಧೋದ್ಯೋಗ

ಶಂಬರಾಸುರನ ಆದೇಶ ಕೇಳಿದ ಕೂಡಲೆ ಪ್ರದ್ಯುಮ್ನನನ್ನು ಕೊಲ್ಲಲು ಪರಮಹೃಷ್ಟರಾಗಿ ಯುದ್ಧ ಭೂಮಿಗೆ ಹೊರಟರು.

ಚಿತ್ರಸೇನ, ಅತಿಸೇನ, ವಿಷ್ವಕ್ಸೇನ, ಶ್ರುತಸೇನ, ಸುಷೇಣ, ಸೋಮಸೇನ, ಗದ, ಮನ ಸೇನಾನಿ ಮೊದಲಾದ ಪುತ್ರರು ಹೊರಟರು. ಅವರೆಲ್ಲರೂ ಕ್ರೋಧ ವಶರಾಗಿ ಚಕ್ರ ತೋಮರ ಶೂಲ ಪಟ್ಟಿಶ ಕೊಡಲಿ ಮೊದಲಾದ ಅಯುಧ ಹಿಡಿದು ಪ್ರದ್ಯುಮನನ್ನು ಯುದ್ಧಕ್ಕೆ ಅಹ್ವಾನಿಸುತ್ತಾ ನಿಂತರು.

ನಂತರ ಪ್ರದ್ಯುಮ್ನ - ಶಂಬರನ ಮಕ್ಕಳಿಗೂ ಅತ್ಯಂತ ಘೋರವಾದ ಯುದ್ಧವೆರ್ಪಟ್ಟಿತು.

ಇಂದ್ರಾದಿ ದೇವತೆ ತಮ್ಮ ಪರಿವಾರದೊಂದಿಗೆ ಯುದ್ಧ ನೋಡಲು ಆಕಾಶದಲ್ಲಿ ಬಂದು ನೆರೆದರು.

ತುಂಬುರು ನಾರದ ಹಾಹಾ ಹೂಹೂ ಗಂಧರ್ವರು ಯುದ್ಧವನ್ನು ವೀಕ್ಷಿಸುತ್ತಿದ್ದರು. ಇಂದ್ರನ ದ್ವಾರಪಾಲಕನಾದ ಗಂಧರ್ವನು ಪ್ರದ್ಯುಮ್ನನ ಯುದ್ಧ ವೈಖರಿಯನ್ನು ಇಂದ್ರದೇವನಿಗೆ ವಿವರಿಸಿ ಹೇಳುತ್ತಿದ್ದನು.

**ಶಂಬರಸ್ಯ ಶತಂ ಪುತ್ರಾಃ ಏಕಃ ಕೃಷ್ಣಸ್ಯ ಚಾತ್ಮಜಃ ।**
**ಬಹೂನಾಂ ಯುದ್ಧ್ಯತಾಮೇಷಃ ಕಥಂ ವಿಜಯಮಾಪ್ನುಯಾತ್ ॥ 21 ॥**

ದೇವೇಂದ್ರನೇ ! ಶಂಬರನ ಮಕ್ಕಳು ನೂರು ಮಂದಿ ಇರುವರು.

ಪ್ರದ್ಯುಮ್ನನಾದರೂ ಒಬ್ಬನೆ ಇರುವನು. ಏಕಾಂಗಿಯಾದ ಪ್ರದ್ಯುಮ್ನನು ಬಹುಮಂದಿ ಶಂಬರ ಪುತ್ರರನ್ನು ಹೇಗೆ ಗೆಲ್ಲುವನು ಎಂದು ಗಂಧರ್ವನು ಇಂದ್ರನನ್ನು ಪ್ರಶ್ನಿಸಿದನು.

ಇಂದ್ರದೇವನು ನಗುತ್ತಾ – ಪ್ರದ್ಯುಮ್ನನೆಂದರೆ ಯಾರು? ಎಂದು ತಿಳಿದಿರುವಿ?

**ಕಾಮೋಽಯಂ ಪೂರ್ವದೇಹೇತು ಹರಕ್ರೋಧಾಗ್ನಿನಾ ಹತಃ ।**
**ರತ್ಯಾ ಪ್ರಸಾದಿತೋ ದೇವಃ ಕಾಮಪತ್ನ್ಯಾ ತ್ರಿಲೋಚನಃ ॥ 22 ॥**
**ವಿಷ್ಣುಃ ಮಾನುಷ ದೇಹಸ್ತು ದ್ವಾರಕಾಯಾಂ ಭವಿಷ್ಯತಿ ।**
**ತಸ್ಯ ಪುತ್ರತ್ವಮಸ್ಯೈವ ಭವಿಷ್ಯತಿ ನ ಸಂಶಯಃ ॥ 23 ॥**

## ಶಂಬರಾಸುರ ಯುದ್ಧ

ಪ್ರತಿಹಾರಿ! ಈ ಪ್ರದ್ಯುಮ್ನನು ಹಿಂದೆ ಮನ್ಮಥನಾಗಿದ್ದವನು. ಶಿವನ ತಪೋಭಂಗ ಮಾಡಿ ದೇಹ ಕಳೆದುಕೊಂಡ. ರತಿಯಾದರೂ ಶಿವನನ್ನು ಆರಾಧಿಸಿ ಮೆಚ್ಚಿಸಿದಳು. ಪ್ರಸನ್ನನಾದ ಶಿವನು ಈ ವರ ನೀಡಿದನು.

ಭೂಭಾರಹರಣಕ್ಕಾಗಿ ಅವತರಿಸಿದ ಮಹಾವಿಷ್ಣುವು ದ್ವಾರಕೆಯಲ್ಲಿ ಮಾನವನಾಗಿ ಅವತರಿಸುತ್ತಾನೆ. ನಿನ್ನ ಪತಿಯು ಅವನ ಮಗನಾಗಿ ಅವತರಿಸುವನೆಂದು. ಇವನೇ ಶಂಬರಾಸುರನನ್ನು ಸಂಹರಿಸುವನು.

ಶಂಬರನು ಏಳನೇ ದಿನವೇ ಶಂಬರನು ಮಗುವನ್ನು ಅಪಹರಿಸುವನು. ರತೀದೇವಿ! ನೀನೀಗಲೇ ಶಂಬರನ ಮನೆಗೆ ಹೋಗು. ಮಾಯಾವತಿಯೆಂಬ ನಾಮದಿಂದ ಅವನ ಭಾರ್ಯೆಯಂತೆ ಇರು. ಮಾಯೆಯಿಂದ ನಿನ್ನ ನಿಜರೂಪ ಮರೆ ಮಾಡಿ ಶಂಬರನನ್ನು ಮೋಹಗೊಳಿಸು.

**ತತ್ರ ತ್ವಮಾತ್ಮನಃ ಕಾಂತಂ ಬಾಲರೂಪಂ ವಿದರ್ಧಯ ।**
**ಪ್ರಾಪ್ತ ಯೌವನ ದೇಹಸ್ತು ಶಂಬರಂ ನಿಹನಿಷ್ಯತಿ ॥ 24 ॥**

ನೀನು ಬಾಲಕನ ರೂಪದಲ್ಲಿ ಲಭಿಸುವ ಮಗುವೆ ನಿನ್ನ ಪತಿ ಕಾಮದೇವ. ಅವನನ್ನು ಯೌವ್ವನ ಯುಕ್ತನನ್ನಾಗಿ ಬೆಳೆಸು. ಯುವಕನಾದ ಅವನು ಶಂಬರನನ್ನು ಸಂಹರಿಸುವನು. ಶಂಬರಾಸುರನ ಮರಣವಾದ ಮೇಲೆ ನೀನು ಮತ್ತು ಪ್ರದ್ಯುಮ್ನರು ನಾನು ಪಾರ್ವತಿಯೊಂದಿಗೆ ರಮಿಸುವಂತೆ ದ್ವಾರಕೆಯಲ್ಲಿ

ರಮಿಸುವಿರಿ. ಹೀಗೆ ಹೇಳಿದ ಶಿವನು ಕೈಲಾಸ ಸೇರಿದನು. ರತಿಯೂ ಸಹ ಶಿವನಿಗೆ ನಮಸ್ಕರಿಸಿ ಶಂಬರನ ಮನೆಗೆ ಹೋಗಿ ಕಾಲ ನಿರೀಕ್ಷಣೆ ಮಾಡುತ್ತಿದ್ದಳು.

**ಏವಮೇಷಃ ಮಹಾಬಾಹುಃ ಶಂಬರಂ ನಿಹನಿಷ್ಯತಿ ॥ 25 ॥**

ಹೀಗೆ ಪ್ರದ್ಯುಮ್ನನೆ ಪುತ್ರರಿಂದ ಸಹಿತ ಶಂಬರನನ್ನು ಸಂಹರಿಸುತ್ತಾನೆ.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ ಪ್ರದ್ಯುಮ್ನ ಶಂಬರಾಸುರ ಪುತ್ರರೊಂದಿಗೆ ಯುದ್ಧ ಎಂಬಲ್ಲಿ ನೂರನಾಲ್ಕನೆಯ ಅಧ್ಯಾಯ ಸಮಾಪ್ತಿ**

## ಅಥ ಪಂಚಾಧಿಕಶತತಮೋಽಧ್ಯಾಯಃ

### ಪ್ರದ್ಯುಮ್ನನು ಮಂತ್ರಿಗಳನ್ನು ಕೊಂದದ್ದು

**ತತಃ ಪ್ರವೃದ್ಧಂ ಯುದ್ಧಂ ತು ತುಮುಲಂ ರೋಮಹರ್ಷಣಮ್ ।**
**ಶಂಬರಸ್ಯ ತು ಪುತ್ರಾಣಾಂ ರುಕ್ಮಿಣ್ಯಾ ನಂದನಸ್ಯ ಚ ॥ 1 ॥**

ರಾಜನೇ! ಶಂಬರನ ಪುತ್ರನಿಗೂ ಪ್ರದ್ಯುಮ್ನನಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು.

ದೈತ್ಯರೆಲ್ಲರೂ ಒಟ್ಟಾಗಿ ನಾನಾ ವಿಧ ಆಯುಧಗಳನ್ನು ಪ್ರದ್ಯುಮ್ನನ ಮೇಲೆ ಪ್ರಯೋಗಿಸಿದರು.

ಪ್ರದ್ಯುಮ್ನನಾದರೂ ಶತ್ರುಗಳಿಂದ ಪ್ರಯೋಗಿಸಲ್ಪಟ್ಟ ಆಯುಧಗಳ ವಿರುದ್ಧವಾಗಿ ಒಂದೊಂದನ್ನು ಐದೈದು ಬಾಣಗಳಿಂದ ಕತ್ತರಿಸಿ ಹಾಕಿದನು. ಶಂಬರಪುತ್ರರು ಅವನನ್ನು ಸಂಹರಿಸಲೇಬೇಕೆಂಬ ಹಠದಿಂದ ಬಾಣಗಳ ಮಳೆಗರೆದರು. ಪ್ರದ್ಯುಮ್ನನಾದರೂ ಶಂಬರಾಸುರನ ಹತ್ತು ಮಂದಿ ಪುತ್ರರನ್ನು ಧನುರ್ಬಾಣಗಳಿಂದಲೇ ಕೊಂದು ಹಾಕಿದನು.

**ಶಂಬರಸ್ಯ ಜಘಾನಾಶಂ ದಶಪುತ್ರಾನ್ ಮಹೋಜಸಃ ।**

ಮತ್ತೊಂದು ಭಲ್ಲಾಯುಧದಿಂದ ಚಿತ್ರಸೇನನ ತಲೆಯನ್ನು ಹಾರಿಸಿದ. ಪುನಃ ಉಳಿದ ಪುತ್ರರೆಲ್ಲರೂ ಬಿಲ್ಲಿಗೆ ಬಾಣಾನುಸಂಧಾನ ಮಾಡಿ ಒಟ್ಟಿಗೆ ಬಾಣ ಬಿಟ್ಟರು. ಪ್ರದ್ಯುಮ್ನನು ಲೀಲಾಜಾಲವಾಗಿ ಅವರ ಶಿರಸ್ಸನ್ನು ಕತ್ತರಿಸಿ ಹಾಕಿದ.

**ಹತಂ ಪುತ್ರಶತಂ ಶ್ರುತ್ವಾ ಶಂಬರಃ ಕ್ರೋಧಮಾದಧೇ ॥ 2 ॥**

ತನ್ನ ರಥವನ್ನು ಸಿದ್ಧಪಡಿಸಲು ಸೂತನಿಗೆ ಹೇಳಿದನು. ಸಾರಥಿಯು ಆದೇಶ

ಶಿರಸಾ ಮಾನ್ಯ ಮಾಡಿದನು. ಶಂಬರನು ಮೃತ್ಯುವಿನಿಂದ ಪ್ರೇರತನಾಗಿ ಧನುರ್ಬಾಣಗಳಿಂದ ಯುದ್ಧಕ್ಕೆ ಹೊರಟನು. ತನ್ನೊಂದಿಗೆ ಮಹತ್ತರವಾದ ಸೇನಾವಾಹಿನಿ ಹಾಗೂ ದುರ್ಧರ, ಕೇತುಮಾಲೀ – ಶತ್ರುಹಂತಾ – ಪ್ರಮರ್ದನರೆಂಬ ನಾಲ್ವರು ಮಂತ್ರಿಗಳಿಂದ ಯುದ್ಧಕ್ಕೆ ಹೊರಟ.

**ದಶನಾಗ ಸಹಸ್ರಾಣಿ ರಥನಾಂ ದ್ವೇ ಶತೇ ತಥಾ ।**
**ಹಯಾನಾಂ ಚಾಷ್ಟಸಾಹಸ್ರೈಃ ಪ್ರಯುತೈಶ್ಚ ಪದಾತಿನಾಮ್ ॥ 3 ॥**

ಶಂಬರನ ರಥವು ಸಾವಿರ ಮೃಗಗಳಿಂದಲೂ, ಹಾವುಗಳೇ ನೊಗದ ಹಗ್ಗದಂತೆಯೂ, ಹುಲಿಚರ್ಮದಿಂದ ರಥವನ್ನು ಹೊದ್ದಿಸಿದ್ದರು.

ಹತ್ತು ಸಾವಿರ ಗಜಬಲದಿಂದಲೂ, ಇನ್ನೂರು ರಥಿಕರಿಂದಲೂ, ಎಂಟು ಸಾವರಿ ಕುದುರೆ ಸವಾರರಿಂದಲೂ, ಹತ್ತು ಲಕ್ಷ ಪದಾತಿಗಳಿಂದಲೂ ಕೂಡಿ ಶಂಬರನು ಯುದ್ಧಕ್ಕೆ ಬಂದನು.

**ಪ್ರಯಾತಸ್ಯ ತು ಸಂಗ್ರಾಮೇ ಉತ್ಪಾತಾ ಬಹವೋಽಭವನ್ ।**

ಶಂಬರನು ಯುದ್ಧಕ್ಕೆ ಹೋಗುತ್ತಿದ್ದಂತೆ ದಾನವರ ವಿನಾಶವನ್ನು ಸೂಚಿಸುವ ಉತ್ಪಾತಗಳು ಕಂಡುಬಂದವು.

ಗಗನದಲ್ಲಿ ರಣಹದ್ದುಗಳು ಚಕ್ರವಾಕಗಳು ತುಂಬಿದ್ದವು. ಮೇಘಗಳು ವಿಲಕ್ಷಣವಾಗಿ ಗರ್ಜಿಸಿದವು. ಆಕಾಶದಿಂದ ಮಿಂಚುಗಳು ಸಿಡಿಲುಗಳು ಬಿದ್ದವು.

ಹೆಣ್ಣು ನರಿಗಳು ಊಳಿಟ್ಟವು. ದಾನವರ ರಥದ ಧ್ವಜದ ಮೇಲೆ ಗೃಧ್ರಪಕ್ಷಿಯು ರಕ್ತಪಿಪಾಸೆಯಿಂದ ಕೂತಿತ್ತು.

ರುಂಡವಿಲ್ಲದ ಮುಂಡಗಳು ದಾನವ ರಥಗಳ ಮುಂದೆ ಬಿದ್ದಿರುವಂತೆ ಕಂಡವು. ಸೂರ್ಯನು ಕಾಂತಿಗುಂದಿದ್ದನು. ಶಂಬರನ ಎಡಗಣ್ಣು ಅದುರಿದವು. ಹಾಗೆಯೇ ಶಂಬರನ ತಲೆ ಮೇಲೆ ಕಾಗೆಯು ಕುಳಿತು ಅನಿಷ್ಟ ಸೂಚಿಸಿತು. ಎಡಭುಜ ಕಂಪಿಸಿದವು. ಕುದುರೆಗಳು ಸಂಭ್ರಾತವಾದವು. ಕಲ್ಲು–ಬೆಂಕಿ – ಮಳೆ ಬಿದ್ದಿತು. ಉಲ್ಕೆಗಳು ಬಿದ್ದವು. ಸಾರಥಿಯ ಕೈಯ್ಯಲ್ಲಿದ್ದ ಚಾಟಿ ಕೆಳಗೆ ಬಿದ್ದಿತು. ಆದರೂ ಇವುಗಳನ್ನು ಲೆಕ್ಕಿಸದೆ ಯುದ್ಧಕ್ಕೆ ಮುನ್ನುಗಿದ.

**ಧ್ವಾಂಕ್ಷೋ ಮೂರ್ಧ್ನಿ ನಿಪತಿತಃ ಶಂಬರಸ್ಯ ಸುರಾರಿಣಃ ।**
**ಏತಾನಚಿಂತಯಿತ್ವಾ ತು ಉತ್ಪಾತಾನ್ ಸಮುಪಸ್ಥಿತಾನ್ ॥ 4 ॥**

**ಪ್ರಯಯೌ ಶಂಬರಃ ಕ್ರುದ್ಧಃ ಪ್ರದ್ಯುಮ್ನವಧಕಾಂಕ್ಷಯಾ ॥ 5 ॥**

## ಶಂಬರ–ಪ್ರದ್ಯುಮ್ನ ಕಾಳಗ

ಶಂಬರನು ಕೋಪಾವಿಷ್ಟನಾಗಿ ಯುದ್ಧಕ್ಕೆ ಹೊರಟಾಗ ಬೇರೀ ಮೃದಂಗ ಶಂಖ ಪಣವ (ಸಣ್ಣ ತಮಟೆ) ಆನಕ ದುಂದುಭಿ ಮೊದಲಾದ ರಣವಾದ್ಯಗಳು ಮೊಳಗಿದವು.

ಆ ಶಬ್ಧದಿಂದಾಗಿ ಭಯಪಟ್ಟ ಮೃಗಪಕ್ಷಿಗಳು ದಿಕ್ಕಿಲ್ಲದೆ ಓಡಿ ಹೋದವು. ಯುದ್ಧ ಭೂಮಿಯಲ್ಲಿ ಏಕಾಂಗಿಯಾದರೂ ಸ್ಥೈರ್ಯದಿಂದಿದ್ದ ಪ್ರದ್ಯುಮ್ನನು ಇವನನ್ನು ಕೊಲ್ಲುವ ಬಗೆ ಯೋಚಿಸುತ್ತಾ ನಿಂತಿದ್ದನು.

**ರಣಮಧ್ಯೇ ಸ್ಥಿತಃ ಕಾರ್ಷ್ಣಿಃ ಚಿಂತಯನ್ ನಿಧನಂ ರಿಪೋಃ ।**
**ಕ್ರುದ್ಧಃ ಶರಸಹಸ್ರೇಣ ಪ್ರದ್ಯುಮ್ನಂ ಸಮತಾಡಯತ್ ॥ 6 ॥**

**ಸಂಪ್ರಾಪ್ತಾನ್ ಚೈವ ತಾನ್ ಬಾಣಾನ್ ಚಿಚ್ಛೇದ ಕೃತಹಸ್ತವತ್ ।**
**ಪ್ರದ್ಯುಮ್ನೋ ಧನುರಾದಾಯ ಶರವರ್ಷಂ ಮುಮೋಚ ಹ ॥ 7 ॥**

ಶಂಬರನು ಪ್ರದ್ಯುಮ್ನನ ಮೇಲೆ ಸಾವಿರಾರು ಬಾಣಗಳನ್ನು ಪುಂಖಾನು ಪುಂಖವಾಗಿ ವರ್ಷಿಸಿದನು. ಪ್ರದ್ಯುಮ್ನನಾದರು ಗುರಿತಪ್ಪದೆ ಬಾಣಗಳನ್ನು ಹೊಡೆಯಲು ಅಭ್ಯಾಸ ಮಾಡಿದವನಂತೆ ಎಲ್ಲಾ ಬಾಣಗಳನ್ನು ಕ್ಷಣ ಕಾಲದಲ್ಲಿಯೇ ಕತ್ತರಿಸಿದನು.

ಮಾತ್ರವಲ್ಲದೆ ಶಂಬರನ ಸೈನ್ಯದಲ್ಲಿ ಒಬ್ಬರನ್ನೂ ಬಿಡದೆ ಬಾಣಗಳಿಗೆ ಅತಿಥ್ಯ ನೀಡುತ್ತಿದ್ದನು. ಶತ್ರುಗಳು ಬೆದರಿ ಓಡಿ ಹೋದರು.

ಶಂಬರನು ತನ್ನ ಸೈನ್ಯವೆಲ್ಲ ಭಯಗ್ರಸ್ತರಾಗಿ ಓಡುತ್ತಿರುವುದನ್ನು ನೋಡಿ ಮಂತ್ರಿಗಳನ್ನು ಕರೆದು ಮಂತ್ರಿಗಳೇ! ಈ ಕೂಡಲೇ ಹೋಗಿ ಕೃಷ್ಣಪುತ್ರನನ್ನು ಕೊಂದು ಹಾಕಿರಿ ಎಂದು ಗುಡುಗಿದ.

**ನೋಪೇಕ್ಷಣೀಯಃ ಶತ್ರುರ್ವೈ ವಧ್ಯತಾಂ ಕ್ಷಿಪ್ರಮೇಷ ವೈ ।**
**ಉಪೇಕ್ಷಿತ ಇವ ವ್ಯಾಧಿಃ ಶರೀರಂ ನಾಶಯೇದ್ ಧ್ರುವಮ್ ॥ 8 ॥**

ಶರೀರದಲ್ಲಿರುವ ವ್ಯಾಧಿಯನ್ನು ಉಪೇಕ್ಷಿದಲ್ಲಿ ಇಡೀ ಶರೀರವನ್ನೇ ಕಬಳಿಸುವುದೋ ಹಾಗೆ ಇವನನ್ನು ಉಪೇಕ್ಷಿಸಿದರೆ ನಮ್ಮನ್ನೆ ನುಂಗುವನು. ಇವನನ್ನು ಉಪೇಕ್ಷಿಸದೆ ಕೊಂದು ಹಾಕಿರಿ ಎಂದ.

## ಪ್ರದ್ಯುಮ್ನ-ಮಂತ್ರಿಗಳ ಯುದ್ಧ

**ದುರ್ಧರಂ ಪಂಚವಿಂಶತ್ಯಾ ಕೇತುಮಾಲಿಂ ತ್ರಿಷಷ್ಟಿಭಿಃ ।**
**ಸಪ್ತತ್ಯಾ ಶತ್ರು ಹಂತರಂ ದ್ವ್ಯಶೀತ್ಯಾ ತು ಪ್ರಮರ್ದನಮ್ ॥ 9 ॥**

ಅನಂತರ ಸೇನಾಧಿಪತಿಗಳು ಹಾಗೂ ಮಂತ್ರಿಗಳು ಅವನ ಆಜ್ಞೆಯಂತೆ ಆಯುಧಪಾಣಿಗಳಾಗಿ ಪ್ರದ್ಯುಮ್ನನನ್ನು ಕೊಲ್ಲಲು ಮುಂದಾದರು.

ಮಕರಕೇತನ ಪ್ರದ್ಯುಮ್ನನು ಧೃತಿಗೆಡದೆ ನಿಂತನು. ಅವನಾದರೂ ಮಂತ್ರಿಗಳಲ್ಲಿ ದುರ್ಧರನೆಂಬ ಮಂತ್ರಿಗೆ ಇಪ್ಪತ್ತೈದು ಬಾಣಗಳನ್ನೂ ಕೇತುಮಾಲಿಯನ್ನು ಅರವತ್ತಮೂರು ಬಾಣಗಳಿಂದಲೂ ಶತ್ರುಹಂತಾ ಎಂಬ ಮಂತ್ರಿಯ ಮೇಲೆ ಎಪ್ಪತ್ತು ಬಾಣಗಳನ್ನು, ಪ್ರಮರ್ದನನೆಂಬುವನ ಮೇಲೆ ಎಂಭತ್ತೆರಡು ಬಾಣ ಬಿಟ್ಟು ಘಾಸಿಗೊಳಿಸಿದನು.

ಮಂತ್ರಿಗಳೆಲ್ಲರೂ ಈ ಪೋರನ ಮೇಲೆ ಕ್ರುದ್ಧರಾಗಿ ಒಬ್ಬೊಬ್ಬರೂ ಅರವತ್ತು ಬಾಣಗಳನ್ನು ಪ್ರದ್ಯುಮ್ನನ ಮೇಲೆ ಪ್ರಯೋಗಿಸಿದರು. ಅವುಗಳನ್ನೂ ಪ್ರದ್ಯುಮ್ನನು ಕತ್ತರಿಸಿದನು. ಹಾಗೂ ಅರ್ಧಚಂದ್ರಾಕೃತಿಯ ಬಾಣದಿಂದ ದುರ್ಧರನ ಸಾರಥಿ, ಕುದುರೆಗಳು ಕಡಿವಾಣ, ಛತ್ರ, ಧ್ವಜ, ದಂಡಗಳನ್ನು ಕ್ರಮೇಣ ಕತ್ತರಿಸಿ, ಇನ್ನೊಬ್ಬರ ರಥದಲ್ಲಿ ಯುದ್ಧ ಮಾಡುತ್ತಿದ್ದ ದುರ್ಧರನ ಹೃದಯವನ್ನೇ ಭೇದಿಸಿದನು. ಅವನು ಪುಣ್ಯಕ್ಷೀಣಗ್ರಹದಂತೆ ರಥದಿಂದ ಕೆಳಕ್ಕುರುಳಿದನು.

ಕೇತುಮಾಲಿಯು ಬಾಣಗಳನ್ನೂ ಪ್ರದ್ಯುಮ್ನನಿಗೆ ಹೊಡೆದಾಗ ಪ್ರದ್ಯುಮ್ನನು ಅವನ ಮೇಲೆ ವರ್ಷಾ ಕಾಲದಲ್ಲಿ ಮೇಘಗಳು ಪರ್ವತಗಳ ಮೇಲೆ ವರ್ಷಿಸುವಂತೆ ಪ್ರದ್ಯುಮ್ನನ ಮೇಲೆ ಪ್ರಯೋಗಿಸಿದನು.

**ಪರ್ವತಂ ವಾರಿಧಾರಾಭಿಃ ಪ್ರಾವೃಷೀವ ಯಥಾಘನಃ ।**
**ಸ ವಿದ್ಧೋ ದಾನವಾಮಾತ್ಯಃ ಪ್ರದ್ಯುಮ್ನೇನ ಧನುಷ್ಮತಾ ॥ 10 ॥**

ಕೇತುಮಾಲಿಯು ಪ್ರದ್ಯುಮ್ನನ ಮೇಲೆ ಚಕ್ರವನ್ನೇ ಪ್ರಯೋಗಿಸಿದಾಗ ಚಕ್ರದ ಮಹಿಮೆ ತಿಳಿದಿದ್ದ ಪ್ರದ್ಯುಮ್ನನು ಹಾರಿ ಅದನ್ನು ತಡೆದು ಹಿಡಿದು ಆ ಚಕ್ರದಿಂದಲೇ ಕೇತುಮಾಲಿಯ ತಲೆ ಹಾರಿಸಿದನು.

**ತೇನೈವ ತಸ್ಯ ಚಿಚ್ಛೇದ ಕೇತುಮಾಲೇಃ ಶಿರಸ್ತದಾ ।**

ರುಕ್ಮಿಣೀ ಪುತ್ರನ ಈ ಸಾಹಸ ನೋಡಿದ ಇಂದ್ರನು ಗಂಧರ್ವರೊಂದಿಗೆ

ಪುಷ್ಪವೃಷ್ಟಿ ಮಾಡಿದನು. ಕೇತುಮಾಲಿಯು ಮೃತನಾದ ಮೇಲೆ ಶತ್ರುಹಂತಾ ಹಾಗೂ ಪ್ರಮರ್ದನರೆಂಬ ಮಂತ್ರಿಗಳು ಸೈನ್ಯದಿಂದ ಕೂಡಿ ಪ್ರದ್ಯುಮ್ನನನ್ನು ಎದುರಿಸಿದರು. ಗದಾಯುಧತೋಮ ಕೊಡಲಿಗಳಿಂದ ಪ್ರಸ್ತರಗಳಿಂದಲೂ ಅವನ ಮೇಲೆ ಯುದ್ಧ ಮಾಡಿದರು. ಕಾರ್ಷ್ಣಿಯು ಕೈ ಚಳಕದಿಂದ ಅವುಗಳನ್ನು ನಾಶ ಮಾಡಿ ಮುಂದೆ ಸಾವಿರಾರು ಗಜಗಳನ್ನೂ ಮಾಹುತರನೂ ಕುದುರೆ ಪದಾತಿಗಳನ್ನೂ ಕೊಂದು ಹಾಕಿದನು.

ಇದರಿಂದಾಗಿ ಒಂದು ರಕ್ತದ ನದಿಯೇ ಹರಿಯಿತು. ಮುತ್ತಿನಹಾರಗಳೇ ತೆರೆಗಳು, ಮೇದಸ್ಸು ಕೊಬ್ಬು ಎಲುಬುಗಳು ಕೆಸರಿನಂತಾದವು.

ಛತ್ರಗಳೇ ದ್ವೀಪಗಳು, ಕಿರೀಟಾದಿಗಳು ಆಮೆಗಳಂತೆ ತೋರಿದವು.

ಶತ್ರುಗಳು ಶತ್ರುಹಂತನನ್ನೆ ಬೆಂಬಲಿಸುತ್ತಾ ನಿರಂತರ ಬಾಣ ಪ್ರಯೋಗ ಮಾಡುತ್ತಿದ್ದರು. ಆದರೂ ಪ್ರದ್ಯುಮ್ನನು ಧೃತಿಗೆಡಲಿಲ್ಲ ಹಾಗೂ ಶಕ್ತಿಯೆಂಬ ಮಹಾಯುಧವನ್ನು ಶತ್ರುಹಂತನ ಮೇಲೆ ಎಸೆದನು. ಆ ಶಕ್ತಿಯು ಶತ್ರು ಹಂತನನ್ನು ಸೀಳಿ ಹಾಕಿತು.

ಶತ್ರು ಹಂತನು ಸತ್ತದ್ದನ್ನು ನೋಡಿದ ಪ್ರಮರ್ದನನೂ ಮುಸಲಾಯುಧವನ್ನು ಹಿಡಿದು, ಎಲೋ ದುರಾತ್ಮ! ನನ್ನೊಂದಿಗೆ ಯುದ್ಧ ಮಾಡು. ನನ್ನ ಏಟನ್ನು ತಿಂದು ನೀನು ಜೀವಿಸಲಾರೆ. ನಿನ್ನ ತಂದೆ ನಮ್ಮ ಕುಲಕ್ಕೆ ಕಂಟಕಪ್ರಾಯನು. ಅವನ ಮಗನಾದ ನಿನ್ನನ್ನು ಉಳಿಸಲಾರೆ. ನೀನು ಸತ್ತರೆ ದೇವತೆಗಳೆಲ್ಲ ಸತ್ತಂತೆ. ನಿನ್ನ ರಕ್ತದಿಂದ ಶಂಬರಾಸುರನ ಮಕ್ಕಳಿಗೆ ರಕ್ತತರ್ಪಣ ನೀಡುವೆ ಎಂದು ಹೇಳುತ್ತಾ ಪರಿಘಾಯುಧದಿಂದ ಪ್ರದ್ಯುಮ್ನನನ್ನು ಹೊಡೆದನು.

**ಇತ್ಯುಕ್ತ್ವಾ ಪರಿಘೇಣಾಸು ತಾಡಯದ್ ರುಕ್ಮಿಣೀಸುತಮ್ ।**
**ತಾಡಿತೋ ಹಿ ಮಹಾತೇಜೋ ರೌಕ್ಮಿಣೇಯಃ ಪ್ರತಾಪವಾನ್ ॥ 11 ॥**

ಪ್ರದ್ಯುಮ್ನನಾದರೂ ಪರಿಘಾಯುಧದಿಂದ ಸ್ವಲ್ಪ ವಿಚಲಿತನಾದರೂ ತನ್ನ ತೋಳುಗಳಿಂದ ರಥವನ್ನೇ ಎತ್ತಿ ನೆಲಕ್ಕೆ ಅಪ್ಪಳಿಸಿ ಪುಡಿ ಮಾಡಿದನು. ಶತ್ರುಹಂತನು ಕೆಳಗೆ ಹಾರಿ ಪ್ರಸಿದ್ಧ ಗದೆಯೊಂದನ್ನು ಬೀಸಿ ಎಸೆದನು.

ಅದೇ ಗದೆಯನ್ನೆ ಪ್ರಮರ್ದನನು ಹೊಡೆದನು. ಪ್ರಮರ್ದನನು ಮೃತನಾದ. ಇವನು ಮೃತನಾದದ್ದನ್ನು ನೋಡಿದ ಶತ್ರು ಸೈನಿಕರು ಸಿಂಹವನ್ನು ನೋಡಿದ ಗಜಗಳು ಓಡುವಂತೆ ದಿಕ್ಕಾಪಾಲಾಗಿ ಹೋದರು. ನಾಯಿಯನ್ನು ನೋಡಿ ಕುರಿಗಳ ಹಿಂಡು ಓಡುವಂತೆ ಓಡಿ ಹೋದರು.

**ಸಾರಮೇಯಂ ಯಥಾ ದೃಷ್ಟ್ವಾಽವಿಗಣೋ ವೈ ಪಲಾಯತೇ ।**
**ನ ಶಕ್ತಾಃ ಪ್ರಮುಖೇ ಸ್ಥಾತುಂ ಸಿಂಹತ್ರಾಸಾದ್ ಗಜಾ ಇವ ॥ 12 ॥**

ಪ್ರದ್ಯುಮ್ನನ ಭಯದಿಂದ ಪೀಡಿತವಾದ ಶತ್ರುಸೇನೆಯೂ ಗಾಯದಿಂದ ರಕ್ತದಿಂದ ಕೆಂಪಾದ ವಸ್ತ್ರವುಳ್ಳದ್ದಾಗಿ ತಲೆ ಬಿಚ್ಚಿಕೊಂಡು ಅಲಂಕಾರ ರಹಿತ ರಜಸ್ವಲೆಯಂತೆ ಸಂಕುಚಿತವಾಯಿತು.

ಕಾಮಬಾಣ ಪೀಡಿತ ಸ್ತ್ರೀಯು ಭಯದಿಂದಾಗಿ ರತಿಯಲ್ಲಿ ಆಸಕ್ತಳಾಗಿ ನಿಶ್ವಾಸ ಬಿಡುತ್ತಾ ರಮಣನ ಮುಂದೆಯೂ ನಿಲ್ಲಲೂ ಬಯಸದೆ ತನ್ನ ಸ್ವಸ್ಥಾನಕ್ಕೆ ಮರಳುವಂತೆ ಸೈನ್ಯೆಯು ಸ್ವಸ್ಥಾನಕ್ಕೆ ಮರಳಿದವು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ ಪ್ರದ್ಯುಮ್ನ ಶಂಬರಾಸುರನ ಮಂತ್ರಿಗಳನ್ನು ಕೊಂದಿದ್ದು ಎಂಬಲ್ಲಿ ನೂರೈದನೆಯ ಅಧ್ಯಾಯ ಸಮಾಪ್ತಿ**

# ಅಥ ಷಡಾಧಿಕಶತತಮೋಽಧ್ಯಾಯಃ

**ಶಂಬರಸ್ತು ತತಃ ಕ್ರುದ್ಧಃ ಸೂತಮಾಹ ವಿಶಾಂಪತೇ ।**
**ಶತ್ರು ಪ್ರಮುಖತೋ ವೀರ ರಥಂ ಮೇ ವಾಹಯ ದ್ರುತಮ್ ॥ 1 ॥**

ವೈಶಂಪಾಯನರು ರಾಜನಿಗೆ ರಾಜನೇ! ತನ್ನ ಮಂತ್ರಿಗಳನ್ನೆಲ್ಲ ಕೊಂದ ಪ್ರದ್ಯುಮ್ನನ ಮೇಲೆ ಅತಿಕ್ರುದ್ಧನಾಗಿ ತನ್ನ ಸಾರಥಿಗೆ, ಸಾರಥಿ ತನ್ನ ರಥವನ್ನು ಶತ್ರುವಿನ ಸಮ್ಮುಖದಲ್ಲಿರಿಸು ಎಂದನು.

ಸಾರಥಿಯು ರಥವನ್ನು ಶತ್ರುವಿನ ಮುಂದೆ ನಿಲ್ಲಿಸಿದನು. ಪ್ರದ್ಯುಮ್ನನಾದರೂ ಅವನನ್ನು ಕೋಪಗೊಳಸುತ್ತಾ ಅವನ ಮರ್ಮಭೇದಕ ಬಾಣಗಳಂದ ನೋಯಿಸಿದನು. ಈ ಪೆಟ್ಟಿನಿಂದ ಶಂಬರನು ಮೋಹಗೊಂಡು ರಥದ ಧ್ವಜಸ್ತಂಭವನ್ನು ಆಧರಿಸಿ ಚೇತರಿಸಿಕೊಂಡನು. ತನ್ನ ಧನುಸ್ಸಿನಿಂದ ಸಪ್ತನಾರಾಚಗಳಂದ ಕಾರ್ಷ್ಣಿಗೆ ಹೊಡೆದನು. ಪ್ರದ್ಯುಮ್ನನಾದರೂ ಎಪ್ಪತ್ತು ಬಾಣಗಳಂದ ಶಂಬರನನ್ನು ಹೊಡೆದನು. ಪರ್ವತದ ಮೇಲೆ ನಿರಂತರ ವೃಷ್ಟಿಧಾರೆಗಳಂತೆ ಬಾಣಗಳ ಮಳೆಯೆ ಶಬರನ ಮೇಲೆ ಸುರಿಯಿತು. ಅವನ ಬಾಣಗಳಂದ ದಿಕ್ಕುವಿದಿಕ್ಕುಗಳೂ ಅಂಧಕಾರಮಯವಾದವು. ಸೂರ್ಯನೆ ಕಾಣದಾದ.

**ಅಂಧಕಾರಿಕೃತಂ ವ್ಯೋಮ ದಿನಕರ್ತಾ ನ ದೃಶ್ಯತೇ ।**
**ತತೋಽಂಧಕಾರ ಮುತ್ಸಾರ್ಯ ವೈದ್ಯುತಾಸ್ತ್ರೇಣ ಶಂಬರಃ ॥ 2 ॥**

ಸೂರ್ಯನೆ ಕಾಣದಂತಾಗಿ ಅಂಧಕಾರವೇರ್ಪಟ್ಟಾಗ ಶಂಬರನು ವೈದ್ಯುತಾಸ್ತ್ರವನ್ನು ಪ್ರಯೋಗಿಸಿ ಅಂಧಕಾರವನ್ನು ಹೋಗಲಾಡಿಸಿ ಕಾರ್ಷ್ಣಿಯ ರಥದ ಮೇಲೂ ಬಾಣ ಮಳೆಗರೆದನು.

ಪ್ರದ್ಯುಮ್ನನು ಶತ್ರುವಿನಿನ ಅಸ್ತ್ರಗಳನ್ನೆಲ್ಲ ಕತ್ತರಿಸಿದನು. ಇದರಿಂದ ಕೋಪದಿಂದ ಶಂಬರ ಮಾಯಮಯ ಯುದ್ಧವನ್ನಾರಂಭಿಸಿದನು.

ದ್ರುಮವರ್ಷಂ ಮುಮೋಚಾಥ ಮಾಯಯಾ ಕಾಲಶಂಬರಃ ।
ಆಗ್ನೇಯಾಸ್ತ್ರಂ ಮುಮೋಚಾಥ ತೇನ ವೃಕ್ಷಾನ್ ಅನಾಶಯತ್ ॥ 3 ॥

ಶಂಬರನ ಮಾಯೆಯಿಂದಾಗಿ ಪ್ರದ್ಯುಮ್ನನ ಮೇಲೆ ವೃಕ್ಷಗಳು ಮೇಲಿಂದ ಬೀಳಲಾರಂಭಿಸಿದವು. ಆ ವೃಕ್ಷದ ಮಳೆಯನ್ನು ಮಹಾಮಾಯಾವಿಯಾದ ಪ್ರದ್ಯುಮ್ನನ ಆಗ್ನೇಯಾಸ್ತ್ರದಿಂದ ಸುಟ್ಟು ಹಾಕಿದನು.

ಭಸ್ಮೀಭೂತೇ ವೃಕ್ಷವರ್ಷೇ ಶೀಲಾಸಂಘಾತ ಮುತ್ಸೃಜತ್ ।
ಪ್ರದ್ಯುಮ್ನಸ್ತಂ ತಂ ವಾಯವ್ಯೈಃ ಪ್ರೋತ್ಸಾರಯತ ಸಂಯುಗೇ ॥ 4 ॥

ಮರಗಳು ಆಗ್ನೇಯಾಸ್ತ್ರದಿಂದ ಬೂದಿಯಾಗುತ್ತಿರಲು ಶಂಬರನು ಬಂಡೆಗಳ ಮಳೆಗರೆದನು. ಪ್ರತಿಯಾಗಿ ಪ್ರದ್ಯುಮ್ನನು ವಾಯವ್ಯಾಸ್ತ್ರದಿಂದ ಪರ್ವತ ಮಳೆಯನ್ನು ದೂರ ಮಾಡಿದನು.

ತತೋ ಮಾಯಾಂ ಪರಾಂ ಚಕ್ರೇ ದೇವಶತ್ರುಃ ಪ್ರತಾಪವಾನ್ ।
ಸಿಂಹಾನ್ ವ್ಯಾಘ್ರಾನ್ ವರಾಹಾಂಶ್ಚ ತರಕ್ಷೂನ್ ಋಕ್ಷವಾನರಾನ್ ॥ 5 ॥
ಮುಮೋಚ ಧನುರಾನಮ್ಯ ಪ್ರದ್ಯುಮ್ನಸ್ಯ ರಥೋಪರಿ ।

ಶಂಬರನು ತನ್ನ ಧನುಸ್ಸನ್ನು ಬಗ್ಗಿಸಿದ, ಕೂಡಲೇ ಸಾವಿರಾರು ಸಿಂಹಗಳು ಹುಲಿಗಳು ವರಾಹಗಳು ಕರಡಿ ಕೋತಿಗಳು ಆನೆಗಳನ್ನೂ ಪ್ರದ್ಯುಮ್ನನ ರಥದ ಮೇಲೆ ನುಗ್ಗಿಸಿದನು.

ಗಂಧರ್ವಾಸ್ತ್ರೇಣ ಚಿಚ್ಛೇದ ಸರ್ವಾನ್‌ಸ್ತಾನ್ ಖಂಡಶಸ್ತದಾ ॥ 6 ॥

ಪ್ರದ್ಯುಮ್ನನು ಇದಕ್ಕೆ ಪ್ರತಿಯಾಗಿ ಗಂಧರ್ವಾಸ್ತ್ರ ಪ್ರಯೋಗಿಸಿ ಆ ಮಾಯಾ ಜಂತುಗಳನ್ನೆಲ್ಲ ತುಂಡರಿಸಿದನು.

ಶಂಬರನು ಅರವತ್ತು ವರ್ಷದ ಗಂಡ್ಥಳಗಳಿಂದ ಮದರಸ ಸುರಿಸುತ್ತಿರುವ ಬಲಿಷ್ಠವಾದ ನೂರಾರು ಆನೆಗಳನ್ನು ಸೃಷ್ಟಿಸಿದ. ಪ್ರದ್ಯುಮ್ನನಾದರೂ ಸಿಂಹರೂಪವಾದ ಮಾಯೆಯಿಂದಾಗಿ ಸಾವಿರಾರು ಸಿಂಹಗಳು ಕಾಣಿಸಿದವು. ಸಿಂಹ ಕಂಡ ಕೂಡಲೇ ಮಾಯಾ ಗಜಗಳು ಕಣ್ಮರೆಯಾದವು.

ತಾಂ ದೃಷ್ಟ್ವಾ ಮೋಹಿನೀಂ ನಾಮ ಮಾಯಾಂ ಮಯವಿನಿರ್ಮಿತಮ್ ।
ಸಂಜ್ಞಾನಾಸ್ತ್ರೇಣ ತು ಪ್ರದ್ಯುಮ್ನೋ ನಾಶಯಾಮಾಸ ವೀರ್ಯವಾನ್ ॥ 7॥

ದಾನವೋತ್ತಮನು ಸಮ್ಮೋಹಿನಿ ಎಂಬ ಮಾಯೆಯನ್ನು ಸೃಷ್ಟಿಸಿದನು. ಮಯಾಸುರ ನಿರ್ಮಿತವೂ ಸರ್ವರನ್ನೂ ಮೋಹಾವಸ್ಥೆಗೆ ಸೆಳೆದೊಯ್ಯುವ ಈ ಮೋಹಿನಿಯನ್ನು ವಿಜ್ಞಾನಾಸ್ತ್ರದಿಂದ ಶಾಂತಿಗೊಳಿಸಿದನು.

## ಶಂಬರನಿಂದ ಪನ್ನಗೀ ಮಾಯೆ

**ಸೈಂಹೀಂ ಮಾಯಾಂ ಮಹತೇಜಾಃ ಸೋಽಸೃಜದ್ ದಾನವೇಶ್ವರಃ ।**
**ಅಸ್ತ್ರಂ ಗಾಂಧರ್ವಮಾದಾಯ ಶರಭಾನ್ ಅಸೃಜತ್ ತದಾ ॥ 8 ॥**

ಕಾಲಶಂಬರನು ಸಿಂಹ ಮಾಯೆಯನ್ನು ಸೃಷ್ಟಿಸಿದಾಗ ಸಿಂಹಗಳು ಗುಂಪು ಗುಂಪಾಗಿ ತನ್ನ ಮೇಲೆ ಬೀಳುತ್ತಿರುವುದನ್ನು ನೋಡಿ, ಗಾಂಧವಾಸ್ತ್ರದಿಂದ ಎಂಟು ಕಾಲಿನ ಸಿಂಹಕ್ಕೂ ಸ್ವಪ್ನದಂತಿರುವ ಶರಭಗಳನ್ನು ಸೃಷ್ಟಿಸಿದನು. ಕೋರೆಹಲ್ಲುಗಳೇ ಆಯುಧವಾಗಿಯುಳ್ಳ ಈ ಶರಭಗಳು ಸಿಂಹಗಳನ್ನು ಗಾಳಿಯು ಮೇಘಗಳನ್ನು ಚದುರಿಸುವಂತೆ ಓಡಿಸಿಬಿಟ್ಟವು.

**ತೇಽಷ್ಟಾಪದಾ ಬಲೋದಗ್ರಾಃ ನಖದಂಷ್ಟ್ರಾಯುಧಾ ರಣೇ ।**
**ಸಿಂಹಾನ್ ವಿದ್ರಾವಯಾಮಾಸುಃ ವಾಯುಃ ಜಲಧರಾನಿವ ॥ 9 ॥**

ಪ್ರದ್ಯುಮ್ನನಿಂದ ಸೃಷ್ಟ ಶರಭಗಳಿಂದ ತನ್ನ ಮಾಯಾ ಸಿಂಹಗಳು ಕಣ್ಮರೆಯಾದಾಗ ಶಂಬರನು ಚಿಂತೆಗೀಡಾದನು.

**ಅಹೋ ಮೂರ್ಖ ಸ್ವಭಾವೋಽಹಂ ಯನ್ಮಯಾ ನ ಹತಃ ಶಿಶುಃ ।**

ಇವನನ್ನು ನಾನು ಹೇಗೆ ಕೊಲ್ಲಲಿ? ಶಿಶುವಾಗಿರುವಾಗಲೇ ಇವನನ್ನು ಕೊಲ್ಲದೆ ಯುವಕನಾಗುವ ತನಕ ಬೆಳೆಯಲು ಬಿಟ್ಟಿದ್ದೆ ನನ್ನ ಮೂರ್ಖತನ.

ಈಗಲಾದರೂ ಇವನು ಯುವಕನೂ ಮಾಯಾಸ್ತ್ರ ವಿದ್ಯೆಯಲ್ಲಿ ಪರಿಣತನೂ ಆಗಿದ್ದು ಇವನನ್ನು ಕೊಲ್ಲುವುದು ಹೇಗೆ? ಆಹಾ ತಿಳಿಯಿತು. ನನ್ನ ಬಳಿ ಮಹಾಶಿವನು ನೀಡಿರುವ ಸರ್ಪಗಳಿಂದ ಕೂಡಿರುವ ಪನ್ನಗೀ ಮಾಯೆಯಿದೆ. ಅದನ್ನು ಬಿಟ್ಟು ಇವನಿಗೊಂದು ಗತಿ ತೋರಿಸುತ್ತೇನೆ.

**ಮಾಯಾ ಸಂ ತಿಷ್ಠತೇ ತೀವ್ರಾ ಪನ್ನಗೀ ನಾಮ ಭೀಷಣಾ ।**
**ದತ್ತ ಮೇ ದೇವದೇವೇನ ಹರೇಣ ಅಸುರ ಘಾತಿನಾ ॥ 10 ॥**

ಈ ಪನ್ನಗೀ ಮಾಯೆಯಿಂದ ಪ್ರದ್ಯುಮ್ನನು ನಾಶವಾಗುವುದು ನಿಶ್ಚಯವೆಂದು ಬಗೆದು ಪನ್ನಗೀ ಮಾಯೆಯನ್ನು ಸೃಷ್ಟಿಸಿದ. ಇದರಿಂದಾಗಿ ಪ್ರದ್ಯುಮ್ನನ ರಥಕುದುರೆ ಸೂತಗಳಿಂದ ಸಹಿತ ಪ್ರದ್ಯುಮ್ನ ಸರ್ಪಗಳಿಂದ ಬಂಧಿಸಲ್ಪಟ್ಟನು.

**ಬಧ್ಯಮಾನಂ ತದಾ ದೃಷ್ಟ್ವಾ ಆತ್ಮಾನಂ ವೃಷ್ಣಿವಂಶಜಃ ।**
**ಮಾಯಾಂ ಸ ಚಿಂತಯಮಾಸ ಸೌಪರ್ಣೀಂ ಸರ್ಪನಾಶಿನೀಮ್ ॥ 11 ॥**

ಸರ್ಪಗಳಿಂದ ತಾನು ಬಂಧಿತನಾದ ವಿಷಯ ತಿಳಿದು ಸೌಪರ್ಣೀ ಮಾಯೆಯನ್ನು ಚಿಂತಿಸಿದನು. ಕೂಡಲೇ ಅಸಂಖ್ಯಾತ ಗರುಡ ಪಕ್ಷಿಗಳು ಬಂದವು. ಗರುಡಪಕ್ಷಿಗಳ ಆಗಮನದಿಂದ ಸರ್ಪಗಳೆಲ್ಲವೂ ಕಾಣದೆ ಮಾಯವಾದವು. ಗಾರುಡೀ ವಿದ್ಯೆಯಿಂದ ಶಂಬರನ ಪನ್ನಗೀ ಮಾಯೆ ಮಾಯವಾಗುತ್ತಿದ್ದಂತೆ ಇಂದ್ರಾದಿ ದೇವತೆಗಳು ಬಹುವಾಗಿ ಪ್ರಶಂಸೆಗೈದರು.

**ಸಾಧು ವೀರ ಮಹಾಬಾಹೋ ರುಕ್ಮಿಣ್ಯಾನಂದವರ್ಧನ ।**
**ಯತ್ ತ್ವಯಾ ಧರ್ಷಿತಾ ಮಾಯಾ ತೇನ ಸ್ಮ ಪರಿತೋಷಿತಾಃ ॥ 12 ॥**

ಶಂಬರನ ಅಸ್ತ್ರಗಳಿಗೆಲ್ಲ ಪ್ರದ್ಯುಮ್ನನು ಪ್ರತ್ಯಸ್ತ್ರಗಳಿಂದ ನಾಶ ಮಾಡುತ್ತಿದ್ದದ್ದನ್ನು ಕಂಡು ಅತಿ ವ್ಯಗ್ರನಾದ ಶಂಬರನು ತನ್ನ ತಪಸ್ಸಿನಿಂದ ಮೆಚ್ಚಿದ ಪರಮೇಶ್ವರನ ಅರ್ಧಾಂಗಿನಿಯಾದ ಪರ್ವತ ರಾಜಕುವರಿ ನೀಡಿದ ಮಹಾಮುದ್ಗರಾ-ಯುಧವೊಂದನ್ನು ಚಿಂತಿಸಿದ.

**ಮಾಯಾಂತಕರಣಂ ನಾಮ ಸರ್ವಾಸುರ ವಿನಾಶನಮ್ ।**
**ಅನೇನ ದಾನವೌ ರೌದ್ರೌ ಬಲಿನೌ ಕಾಮರೂಪಿಣೌ ।**
**ಶುಂಭಶ್ಚೈವ ನಿಶಂಭಶ್ಚ ಸಗಣೌ ಸೂದಿತೌ ಮಯಾ ॥ 13 ॥**

ಇದನ್ನು ದೇವ ಮಾನವ ದಾನವರಾರೂ ಯುದ್ಧದಲ್ಲಿ ಎದುರಿಸಲಾಗದ್ದು, ಇದನ್ನು ಪಾರ್ವತಿಯು ತಾನು ದುಷ್ಕರ ತಪಸ್ಸನ್ನು ಮಾಡಿ ತನ್ನ ಶರೀರದಿಂದಲೇ ಸೃಷ್ಟಿಸಿದ್ದಳು. ಮಾಯಾಂತಃಕರಣವೆಂಬ ಈ ಮುದ್ಗರಾಯುಧವು ಸಮಸ್ತ ದೈತ್ಯರನ್ನು ನಿಗ್ರಹಿಸಬಹುದು. ಪಾರ್ವತಿಯು ಸಹ ಶುಂಭ-ನಿಶುಂಭರನ್ನು ಕೊಲ್ಲುವಾಗ ಇದರಿಂದಲೇ ಕೊಂದು ಹಾಕಿದ್ದಳು.

ಪಾರ್ವತಿಯು ಈ ವಿಷಯ ಹೇಳುತ್ತಾ ಪ್ರಾಣಸಂಶಯವಿದ್ದಾಗ ಮಾತ್ರ ಇದನ್ನು ಪ್ರಯೋಗಿಸಬೇಕು ಎಂದು ಹೇಳಿದ್ದಳು. ಈಗ ಮಾಯಾಂತ-ಕರಣವೆಂಬ ಮುದ್ಗರಾಯುಧ ಪ್ರಯೋಗಿಸುತ್ತೇನೆ ಎಂದು ನಿಶ್ಚೈಯಿಸಿದನು. ಇವನ ನಿಶ್ಚಯ ತಿಳಿದ ದೇವೇಂದ್ರ ನಾರದರಿಗೆ ಹೀಗೆಂದನು.

**ಸಂಬೋಧಯ ಮಹಾಬಾಹುಂ ಪೂರ್ವಜಾತಿಂ ಚ ಮೋಕ್ಷಯ ।**
**ವೈಷ್ಣವಾಸ್ತ್ರಂ ಪ್ರಯಚ್ಛಾಸ್ಮೈ ವಧಾರ್ಥಂ ಶಂಬರಸ್ಯ ಚ ॥ 14 ॥**

ನಾರದರೇ! ನೀವೀಗ ಪ್ರದ್ಯುಮ್ನನ ಬಳಿ ಸಾರಿ ಅವನಿಗೆ ಹಿಂದಿನ ಜನ್ಮದ ಸ್ಮರಣೆಯಾಗುವಂತೆ ಮಾಡಿರಿ. ಹಾಗೆ ಶಂಬರಾಸುರನನ್ನು ಕೊಲ್ಲಲು ಈ ವೈಷ್ಣವಾಸ್ತ್ರ ಹಾಗೂ ಈ ಅಭೇದ್ಯ ಕವಚವನ್ನೂ ಕೊಡಿರಿ ಎಂದು.

**ತ್ವಂ ವೃಷ್ಣಿ ವಂಶ ಜಾತೋಽಸಿ ರುಕ್ಮಿಣ್ಯಾಗರ್ಭಸಂಭವಃ ।**

ನಾರದರು ಪ್ರದ್ಯುಮ್ನನಿರುವ ಆಕಾಶದಲ್ಲಿಯೆ ನಿಂತು ಕುಮಾರ! ಇತ್ತ ನೋಡು! ದೇವೇಂದ್ರನು ನನ್ನನ್ನು ನಿನ್ನ ಬಳಿ ಕಳುಹಿಸಿದ್ದಾನೆ. ನೀನು ನಿನ್ನ ಪೂರ್ವಜನ್ಮವನ್ನು ಸ್ಮರಿಸಿಕೊ. ನೀನು ಕಾಮದೇವನೇ ಆಗಿದ್ದು ಶಿವನ ಕ್ರೋಧಾಗ್ನಿಯಿಂದ ದಗ್ಧನಾಗಿದ್ದು ಪ್ರಸ್ತುತ ವೃಷ್ಣಿ ವಂಶದಲ್ಲಿ ಜನಿಸಿರುವೆ. ಶ್ರೀಕೃಷ್ಣನಿಂದ ರುಕ್ಮಿಣಿಯಲ್ಲಿ ಜನಿಸಿದ ಪ್ರದ್ಯುಮ್ನನೆಂದು ಖ್ಯಾತನಾಗಿರುವೆ.

**ಆಹೃತ್ಯ ಶಂಬರೇಣ ತ್ವಮಿಹಾನೀತೋಽಸಿ ಮಾನದ ॥ 15 ॥**

**ಯೈಷಾ ಮಾಯಾವತೀ ನಾಮ ಭಾರ್ಯಾ ವೈ ಶಂಬರಸ್ಯ ತು ।**
**ರತಿಂ ತಾಂ ವಿದ್ಧಿ ಕಲ್ಯಾಣೀಂ ತವ ಭಾರ್ಯಾಂ ಪುರಾತನೀಂ ॥ 16 ॥**

ನೀನು ಏಳು ದಿವಸನಾಗಿರುವಾಗಲೇ ಶಂಬರನು ಅಪಹರಿಸಿದ ಮಾಯವತಿಯು ಶಂಬರನ ಭಾರ್ಯೆಯಂತೆ ಇದ್ದು ಅವಳು ನಿನ್ನ ಪೂರ್ವದಲ್ಲಿದ್ದ ರತಿದೇವಿಯೇ ನಿನ್ನನ್ನು ಕಾಪಾಡಲೆಂದೆ ಇಲ್ಲಿರುವಳು.

**ಮಾಯಾಂ ಶರೀರಜಾಂ ತಸ್ಯ ಮೋಹನಾರ್ಥಂ ದುರಾತ್ಮನಃ ।**
**ರತೇಃ ಸಂಪಾದನಾರ್ಥಾಯ ಪ್ರೇಷಯತ್ಯನಿಶಂ ತದಾ ॥ 17 ॥**

ಶಂಬರನ ಹೆಂಡತಿಯಾಗಿದ್ದರೂ ತನ್ನ ಶೀಲವನ್ನು ಚೆನ್ನಾಗಿ ಕಾಪಾಡಿಕೊಂಡಿದ್ದಾಳೆ. ಅವನ ಪತ್ನಿಯಂತೆ ಇದ್ದು ತನ್ನ ಮಾಯೆಯಿಂದ ಜನಿಸಿದ ಮಾಯವತಿಯೆಂಬ ಸ್ತ್ರೀಯನ್ನು ಅವನ ರತಿಗಾಗಿ ಶಂಬರನ ಬಳಿಗೆ ಕಳುಹಿಸುವಳು. ನಿನ್ನ ಪತ್ನಿ ರತಿಯು ಇಲ್ಲಿಯೆ ಇರುವಳು. ವೈಷ್ಣವಾಸ್ತ್ರದಿಂದ ಶಂಬರನನ್ನು ಕೊಂದು ರತಿಯೊಂದಿಗೆ ದ್ವಾರಕೆ ಸೇರು.

**ಗೃಹಾಣ ವೈಷ್ಣವಂ ಚಾಸ್ತ್ರಂ ಕವಚಂ ಚ ಮಹಾಪ್ರಭಮ್ ।**
**ಶಕ್ರೇಣ ತವ ಸಂಗೃಹ್ಯ ಪ್ರೇಷಿತಂ ಶತ್ರುಸೂದನ ॥ 18 ॥**

ಇದೋ ತೆಗೆದುಕೋ! ಇಂದ್ರದೇವನು ನಿನಗಾಗಿ ಕಳುಹಿಸಿದ ವೈಷ್ಣವಾಸ್ತ್ರ ಹಾಗೂ ಮಹಾಪ್ರಭೆವುಳ್ಳ ಕವಚ. ಇದರಿಂದ ಶತ್ರುವನ್ನು ಕೊಂದು ಹಾಕು. ನನ್ನ ಇನ್ನೊಂದು ಮಾತು ಕೇಳು. ಏನೆಂದರೆ,

**ಶೃಣು ಮೇ ಅಪರಂ ವಾಕ್ಯಂ ಕ್ರಿಯತಾಮವಿಶಂಕಯಾ ।**
**ಅಸ್ಯ ದೇವರಿಪೋಃ ತಾತ ಮುದ್ಗರೋ ನಿತ್ಯಮೂರ್ಜಿತಃ ॥ 19 ॥**
**ತದಸ್ತ್ರ ಪ್ರತಿಘಾತಾರ್ಥಂ ದೇವೀಂ ತ್ವಂ ಸ್ಮರ್ತುಮರ್ಹಸಿ ॥ 20 ॥**

ನನ್ನ ಮಾತು ಕೇಳು! ನಿಶ್ಶಂಕೆಯಿಂದ ನಾನು ಹೇಳಿದ್ದನ್ನು ಮಾಡು. ವತ್ಸ! ಶಂಬರನ ಬಳಿಯಿರುವ ಮುದ್ಗರಾಯುಧ ಸಾಮಾನ್ಯವಾದದ್ದಲ್ಲ. ನಿತ್ಯವೂ ಶತ್ರುಗಳನ್ನು ನಾಶ ಮಾಡುವ ಸಾಮರ್ಥ್ಯವುಳ್ಳದ್ದು. ಇದನ್ನು ಎದುರಿಸಲು ದೇವ ದಾನವರಿಂದಲೂ ಸಾಧ್ಯವಿಲ್ಲ. ಪಾರ್ವತಿಯ ಅನುಗ್ರಹವಾಗದೆ ಈ ಮಹಾಸ್ತ್ರದ ನಿವಾರಣೆ ಅಶಕ್ಯ. ಆದ್ದರಿಂದ ಪಾರ್ವತಿಯ ಅನುಗ್ರಹಕ್ಕಾಗಿ ಅವಳನ್ನು ಸ್ತುತಿ ಮಾಡು ಎಂದು ಹೇಳಿ ನಾರದರು ಹೊರಟು ಹೋದರು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ ನಾರದರಿಂದ ಪೂರ್ವಜನ್ಮಸ್ಮರಣೆ ಹಾಗೂ ವೈಷ್ಣವಾಸ್ತ್ರ ಕವಚ ದಾನ ಎಂಬಲ್ಲಿ ನೂರ ಆರನೆಯ ಅಧ್ಯಾಯ ಸಮಾಪ್ತಿ**

## ಅಥ ಸಪ್ತಾಧಿಕಶತತಮೋಽಧ್ಯಾಯಃ

### ಪ್ರದ್ಯುಮ್ನನಿಂದ ಶಂಬರನ ವಧೆ

**ಶಂಬರಸ್ತು ತತಃ ಕ್ರುದ್ಧೋ ಮುದ್ಗರಂ ತಂ ಸಮಾದಧೇ ।**
**ಮುದ್ಗರೇ ಗೃಹ್ಯಮಾಣೇ ತು ದ್ವಾದಶಾರ್ಕಾಃ ಸಮುತ್ಥಿತಾಃ ॥ 1 ॥**

ಜನಮೇಜಯನೇ! ಅನಂತರ ಶಂಬರಾಸುರನು ಕ್ರುದ್ಧನಾಗಿ ಪಾರ್ವತೀದೇವಿಯು ಅನುಗ್ರಹಿಸಿದ್ದ ಮುದ್ಗರಾಯುಧವನ್ನು ತೆಗೆದನು. ಮುದ್ಗರಾಯುಧವನ್ನೆತ್ತಿಕೊಂಡಾಗಲೇ ಅದರ ಕಾಂತಿಯಿಂದಾಗಿ ದ್ವಾದಶಾದಿತ್ಯರು ಏಕಕಾಲದಲ್ಲಿ ಹುಟ್ಟಿದಂತಾಯಿತು. ಪರ್ವತಗಳು ಭೂಮಿಯು ಕಂಪಿಸಿತು. ಅನೇಕ ಉತ್ಪಾತಗಳು ತಲೆದೋರಿದವು. ಉಲ್ಕೆಗಳು ಉದುರಿದವು. ರಕ್ತದ ಮಳೆ ಹರಿಯಿತು. ಪ್ರದ್ಯುಮ್ನನು ರಥದಿಂದಿಳದು ಪಾರ್ವತಿದೇವಿಯನ್ನು ಸ್ತುತಿಸಿದನು.

ದೇವಿ ಕಾತ್ಯಾಯನೀ ಶತ್ರುವಿನಾಶಿನೀ. ಗೌರೀ ಶಿವಪ್ರಿಯೆ ಕಾಲರಾತ್ರಿಯೇ ಕುಮಾರಿ, ಶುಂಭ ನಿಶುಂಭ ಮರ್ದಿನಿ! ವನದುರ್ಗೆ! ಮಿಧ್ಯಾಚಲವಾಸಿನಿ! ಭದ್ರದುರ್ಗಭೇದಕಳೇ! ರಣದುರ್ಗೆ ರಣಪ್ರಿಯೆ, ಮಹಾದೇವಿ ಅಜಿತೆ ಅಪರಾಜಿತೆ ತ್ರಿಶೂಲಧಾರಿಣಿ! ಮಹಿಷಾಸುರಮರ್ದಿನಿ! ನಿನಗಾಗಿ ಸಾವಿರಾರು ಪ್ರಣಾಮಗಳು. ಈ ಸಂಗ್ರಾಮದಲ್ಲಿ ನನ್ನನ್ನು ಜಯಶೀಲನನ್ನಾಗಿ ಮಾಡು.

**ರಕ್ಷ ಮಾಂ ದೇವಿ ಸತತಂ ಸಂಗ್ರಾಮೇ ವಿಜಯಂ ಕುರು ।**

ಹೀಗೆ ಸ್ತುತಿಸಿದಾಗ ಪಾರ್ವತಿಯು ಸಂತುಷ್ಟಳಾದಳು. ನಿನಗೇನು ವರಬೇಕೋ ಕೇಳು! ಎಂದಾಗ.

**ಯದಿ ತ್ವಂ ತುಷ್ಟಾಽಸಿ ದೀಯತಾಂ ಮೇ ಯದೀಪ್ಸಿತಮ್ ।**
**ಯತ್ ತ್ವಯಾ ಮುದ್ಗರೋ ದತ್ತಃ ಶಂಬರಸ್ಯಾತ್ಮಸಂಭವಃ ॥ 2 ॥**
**ಏಷ ಮೇ ಗಾತ್ರ ಮಾಸಾದ್ಯ ಮಾಲಾ ಪದ್ಮವತೀ ಭವೇತ್ ॥ 3 ॥**

ಪ್ರದ್ಯುಮ್ನನು ಅಮ್ಮ! ನೀನು ಪ್ರಸನ್ನಳಾಗಿದ್ದರೆ ಸಮಸ್ತ ಶತ್ರುಗಳಿಂದಲೂ ನನಗೆ ಜಯವಾಗುವ ವರವನ್ನು ನೀಡುವವಳಾಗು ಇನ್ನೊಂದು ವರ ನಿನ್ನ ಶರೀರದಿಂದ ಜನಿಸಿರುವ ಆ ಮುದ್ಗರಾಯುಧವು ನನ್ನ ಶರೀರವನ್ನು ಸ್ಪರ್ಶಿಸಿದ ಕೂಡಲೇ ಅದು ಕಮಲದ ಮಾಲೆಯಾಗಲಿ ಎಂದಾಗ ಹಾಗೆ ಆಗಲಿ ಎಂದಳು.

ಇತ್ತ ಶಂಬರನು ಮುದ್ಗರವನ್ನು ಹಿಡಿದು ಅತೀ ವೇಗದಿಂದ ತಿರುಗಿಸುತ್ತಾ ದೇವೀದತ್ತವಾದ ಮುದ್ಗರವನ್ನು ಪ್ರದ್ಯುಮ್ನನ ಹೃದಯಕ್ಕೆ ಬಲವಾಗಿ ಎಸೆದನು.

**ಮುದ್ಗರಂ ತಂ ಗೃಹೀತ್ವಾ ತು ಶಂಬರಃ ಕ್ರೋಧ ಮೂರ್ಛಿತಃ ।**
**ಭ್ರಾಮಯಿತ್ವಾ ಚ ಚಿಕ್ಷೇಪ ಪ್ರದ್ಯುಮ್ನೋರಸಿ ವೀರ್ಯವಾನ್ ॥ 4 ॥**

ಆ ಮುದ್ಗರಾಯುಧವು ಪಾರ್ವತಿಯ ಪ್ರಸಾದದಿಂದಾಗಿ ಪ್ರದ್ಯುಮ್ನನ ಬಳಿ ಬರುತ್ತಿದ್ದಂತೆಯೇ ಪದ್ಮಮಾಲೆಯಾಗಿ ಅವನ ಕಂಠವನ್ನಲಂಕರಿಸಿತು. ಕೂಡಲೇ ದೇವಗಂಧರ್ವಾದಿಗಳು ಅವನನ್ನು ಪ್ರಶಂಸಿಸಿದರು.

ಮುದ್ಗರಾಯುಧವು ಪುಷ್ಪಮಾಲೆಯಾಗಿ ಕೊರಳು ಅಲಂಕೃತವಾದಂತೆಯೇ ನಾರದರಿಂದ ತರಲ್ಪಟ್ಟ ವೈಷ್ಣವಾಸ್ತ್ರ ಹಿಡಿದು ಪ್ರದ್ಯುಮ್ನನು ಹೀಗೆಂದನು.

**ಯದ್ಯಹಂ ರುಕ್ಮಿಣೀಪುತ್ರಃ ಕೇಶವಸ್ಯಾತ್ಮಜೋ ಹ್ಯಹಮ್ ।**
**ತೇನ ಸತ್ಯೇನ ಬಾಣೇನ ಜಹಿ ತ್ವಂ ಶಂಬರಂ ರಣೇ ॥ 5 ॥**

ಉತ್ತಮವಾದ ಅಸ್ತ್ರವೇ! ನಾನು ರುಕ್ಮಿಣೀ ಗರ್ಭ ಸಂಭೂತನೇ ಆಗಿದ್ದು ಶ್ರೀಕೃಷ್ಣನ ಪುತ್ರನಾಗಿದ್ದು ನಿಜವಾದರೆ ಸತ್ಯಭೂತವಾದ ಈ ಅಸ್ತ್ರವು ಈ ದುಷ್ಟ ಶಂಬರನನ್ನು ಕೊಂದು ಹಾಕಲಿ.

ಹೀಗೆ ಹೇಳುತ್ತಾ ಶ್ರೀಕೃಷ್ಣನನ್ನು ಮನಸ್ಸಿನಲ್ಲಿ ಚಿಂತಿಸಿ ವಿಳಂಬಿಸದೆ ವೈಷ್ಣವಾಸ್ತ್ರ ಹೂಡಿದ ಬಾಣವನ್ನು ಬಲವಾಗಿ ಸೆಳೆದು ಶತ್ರುವಿನೆಡೆಗೆ ಗುರಿಯಿಟ್ಟು ಹೊಡೆದನು.

**ಹೃದಯಂ ಶಂಬರಸ್ಯಾಥ ಭಿತ್ವಾ ಧರಣೀಮಾಗತಃ ।**
**ನ ಚಾಸ್ಯ ಮಾಂಸಂ ನ ಸ್ನಾಯುಃ ನಾಸ್ತಿ ನ ತ್ವಚ್ ನ ಶೋಣಿತಮ್ ॥ 6॥**
**ಸರ್ವಂ ತದ್ ಭಸ್ಮಸಾದ್ ಭೂತಂ ವೈಷ್ಣವಾಸ್ತ್ರಸ್ಯ ತೇಜಸಾ ॥ 7 ॥**

ಪ್ರದ್ಯುಮ್ನನು ಪ್ರಯೋಗಿಸಿದ ವೈಷ್ಣವಾಸ್ತ್ರ ಪ್ರಭಾವದಿಂದಾಗಿ ಮೂರು ಲೋಕವನ್ನೂ ದಹಿಸಿ ಹಾಕುವಂತೆ ಶಂಬರನ ಹೃದಯವನ್ನೇ ಭೇದಿಸಿ ಕೆಳಗೆ ಬಿದ್ದಿತು. ಅದರ ಪ್ರಭಾವದಿಂದಾಗಿ ಶಂಬರನ ದೇಹಮಾಂಸವಾಗಲಿ, ಸ್ನಾಯು, ಅಸ್ಥಿ, ಚರ್ಮಗಳು ರಕ್ತ ಯಾವುದೂ ಉಳಿಯದೆ ಸರ್ವವೂ ಭಸ್ಮವಾಯಿತು.

ಇದರಿಂದ ಸಮಸ್ತ ದೇವತಾಗಣ ಸಂತುಷ್ಟವಾಯಿತು. ಮುಕ್ತಕಂಠದಿಂದ ಅವನನ್ನು ಪ್ರಶಂಸಿಸಿತು. ಪ್ರದ್ಯುಮ್ನನು ರತಿರೂಪಳಾದ ಮಾಯವತಿಯನ್ನು ಕಂಡು ಸಂತುಷ್ಟನಾದನು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ ಪ್ರದ್ಯುಮ್ನನಿಂದ ಶಂಬರನ ಸಂಹಾರ ಎಂಬಲ್ಲಿ ನೂರಏಳನೆಯ ಅಧ್ಯಾಯ ಸಮಾಪ್ತಿ**

# ಅಥ ಅಷ್ಟಾಧಿಕಶತತಮೋಽಧ್ಯಾಯಃ

## ಪ್ರದ್ಯುಮ್ನನ ದ್ವಾರಾವತೀ ಪ್ರವೇಶ

**ಸಮಾಪ್ತಮಾಯೋ ಮಾಯಜ್ಞೋ ವಿಕ್ರಾಂತಃ ಸಮರೇಽವ್ಯಯಃ ।**
**ಅಷ್ಟಮ್ಯಾಂ ನಿಹತೋ ಯುದ್ಧೇ ಮಾಯಾವೀ ಕಾಲಶಂಬರಃ ॥ 1 ॥**

ಜನಮೇಜಯನೇ! ಯುದ್ಧದಲ್ಲಿ ಸೋಲನ್ನೆ ಅರಿಯದ ಮಹಾಮಾಯಾ ಯುದ್ಧ ಪ್ರವೀಣನಾದ ಶಂಬರಾಸುರನು ಅಷ್ಟಮಿತಿಥಿಯಂದು ಪ್ರದ್ಯುಮ್ನನಿಂದ ಮೃತನಾದನು.

ಪ್ರದ್ಯುಮ್ನನಾದರೂ ಋಕ್ಷವಾನೆಂಬ ನಗರದಲ್ಲಿ ಅಸುರನನ್ನು ಸಂಹರಿಸಿ ಮಾಯಾವತಿಯಿಂದೊಡಗೂಡಿ ಗಗನ ಮಾರ್ಗದಲ್ಲಿ ಕೃಷ್ಣಪಾಲಿತವಾದ ದ್ವಾರಕೆಗೆ ಹೊರಟನು.

**ಆಜಗಾಮ ಪುರೀಂ ರಮ್ಯಾಂ ರಕ್ಷಿತಾಂ ತೇಜಸಾ ಪಿತುಃ ।**
**ಮಾಯಾವತ್ಯಾ ಸಹ ತಯಾ ರೂಪವಾನಿವ ಮನ್ಮಥಃ ॥ 2 ॥**

ಮಾಯಾವತಿಯಿಂದ ಕೂಡಿ ಸಾಕ್ಷಾತ್ ಕಾಮದೇವನಂತಿರುವ ಪ್ರದ್ಯುಮ್ನನು ಆಕಾಶಮಾರ್ಗವಾಗಿ ತೆರಳುತ್ತಾ ಕೃಷ್ಣನ ಅಂತಃಪುರದ ಬಳಿ ಇಳಿದನು.

**ತಂ ವಿನೀತಮುಖಂ ದೃಷ್ಟ್ವಾ ಲಜ್ಜಮಾನಂ ಪದೇ ಪದೇ ।**
**ಅಭವನ್ ಸ್ನಿಗ್ಧ ಸಂಕಲ್ಪಾಃ ಸರ್ವಾಸ್ತಾಃ ಕೃಷ್ಣಯೋಷಿತಃ ॥ 3 ॥**

ಹೀಗೆ ಬಂದಿರುವ ಪ್ರದ್ಯುಮ್ನನನ್ನು ನೋಡಿದ ಕೃಷ್ಣ ರಮಣೀಯರೆಲ್ಲರೂ ಶ್ರೀಕೃಷ್ಣನೆ ಬಂದನೆಂದು ಭ್ರಮಿಸಿ ನಾಚಿಕೆಯಿಂದ ಅಲ್ಲಲ್ಲಿಯೇ ಅಡಗಿ ಕುಳಿತರು. ನಂತರ ಕೃಷ್ಣನಿಗಿಂತಲೂ ಸ್ವಲ್ಪ ವೈಲಕ್ಷಣ್ಯವನ್ನು ಕಂಡು ಪರಮಾನಂದಭರಿತರಾದರು.

**ರುಕ್ಮಿಣೀ ಚೈವ ತಂ ದೃಷ್ಟ್ವಾ ಶೋಕಾರ್ತಾ ಪುತ್ರಗೃರ್ಧಿನೀ ।**
**ಸಪತ್ನೀಶತ ಸಂಕೀರ್ಣಾ ಸಖಾಪ್ತಾ ವಾಕ್ಯಮಭ್ರವೀತ್ ॥ 4 ॥**

ಆ ಸಮಯದಲ್ಲಿಯೇ ಅಸಿತಾಪಾಂಗಳಾದ ಮಧುರಭಾಷಿಣಿಯಾದ ರುಕ್ಮಿಣಿಯು ಅಲ್ಲಿಗೆ ಬಂದಳು. ನೂರಾರು ಸವತಿಯರು ರುಕ್ಮಿಣಿಯೊಂದಿಗೆ ಬಂದಿದ್ದರು. ಇವರನ್ನು ನೋಡಿದ ಕೂಡಲೇ ಕಳೆದು ಹೋಗಿದ್ದ ಮಗನ ಸ್ಮರಣೆಗೆ ಬಂತು. ಎದೆಯಲ್ಲಿ ಅಕ್ಕರೆಯ ಹಾಲುಕ್ಕಿತು. ದುಃಖದಿಂದ ಕೂಡಿದ ರುಕ್ಮಿಣಿಯು ಹೀಗೆಂದಳು.

**ಯಾದೃಕ್ ಸ್ವಪ್ನೋ ಮಯಾದೃಷ್ಟೋ ನಿಶಾಯಾಂ ಯೌವನೇ ಗತೇ ।**
**ಕಂಸಾರಿಣಾ ಮಯಾನೀಯ ದತ್ತಂ ಸಾಹಾರವಲ್ಲವಮ್ ॥ 5 ॥**

ನಿನ್ನೆ ರಾತ್ರಿಯಲ್ಲಿ ನಾನೊಂದು ಸ್ವಪ್ನವನ್ನು ಕಂಡೆ. ಸ್ವಪ್ನದಲ್ಲಿ ಕಂಸಾರಿಯು ಚಂದ್ರನ ಕಿರಣದಂತೊಪ್ಪುವ ಮುತ್ತಿನ ಸರದಿಂದ ಕೂಡಿದ ಉತ್ತಮ ಹಾರವನ್ನು ನನಗಿತ್ತಿರುವನು.

ಅಷ್ಟು ಮಾತ್ರವಲ್ಲ ಶ್ರೀಕೃಷ್ಣನೇ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ನನ್ನ ಕುತ್ತಿಗೆಗೆ ಆ ಹಾರವನ್ನು ಅಲಂಕರಿಸಿದನು.

**ಶ್ಯಾಮಾ ಸುಚಾರುವೇಷಾ ಸ್ತ್ರೀ ಶುಕ್ಲಾಂಬರ ವಿಭೂಷಿತಾ ।**
**ಪದ್ಮಹಸ್ತಾ ನಿರೀಕ್ಷಂತೀ ಪ್ರವಿಷ್ಟಾ ಮಮ ವೇಶ್ಮನಿ ॥ 6 ॥**

ಶ್ಯಾಮಲವರ್ಣದಿಂದ ವಿಶಿಷ್ಟ ಸುಂದರ ಕೇಶಪಾಶವುಳ್ಳ ಹಾಗೂ ಶುಭ್ರವಾದ ವಸ್ತ್ರಾಲಂಕೃತಳಾದ ಸ್ತ್ರೀಯೊಬ್ಬಳು ತನ್ನ ಕೈಯಲ್ಲಿ ಪದ್ಮವನ್ನು ಧರಿಸಿ ನನ್ನನ್ನು ನೋಡುತ್ತ ನನ್ನ ಮನ ಪ್ರವೇಶಿಸಿದಳು.

ಅನಂತರ ಆಕೆಯು ನನ್ನನ್ನು ತನ್ನೊಂದಿಗೆ ಕರೆದೊಯ್ದು ಸುಗಂಧ ನಿರ್ಮಲ ಜಲದಲ್ಲಿ ಸ್ನಾನ ಮಾಡಿಸಿ ಪದ್ಮಮಾಲೆಯನ್ನು ತಂದು ನನ್ನ ಶಿರಸ್ಸನ್ನು ಆಘ್ರಾಣಿಸುತ್ತಾ ನನಗೆ ಕೊಟ್ಟಳು.

ನಂತರ ಸಖೀ ಜನರಿಂದ ಸುತ್ತುವರೆಯಲ್ಪಟ್ಟ ಆ ಕುಮಾರನನ್ನು ನೋಡಿ ರತ್ನ ಪ್ರಾಯನಾಗಿರುವ ಈ ಕುವರ ಯಾರ ಪುತ್ರನಾಗಿರುವನು. ಈ ದೀರ್ಘಾಯುವನ್ನು ಪಡೆದ ತಾಯಿ ನಿಜವಾಗಿಯೂ ಧನ್ಯಳಾಗಿರುವಳು. ಕಂದನೇ! ಸಾಕ್ಷಾತ್ ಮನ್ಮಥನಂತೆ ಕಂಗೊಳಸುತ್ತಿರುವ ನಿನ್ನಂತಹ ಜೀವ ಪುತ್ರನನ್ನು ಪಡೆದ ಭಾಗ್ಯವತಿಯೆ ಆಗಿರುವಳು.

**ಕಿಮರ್ಥಂ ಚಾಂಬುದಶ್ಯಾಮಃ ಸಭಾರ್ಯಸ್ತ್ವಿಹಾಗತಃ ।**
**ಅಸ್ಮಿನ್ ವಯಸಿ ಸುವ್ಯಕ್ತಂ ಪ್ರದ್ಯುಮ್ನೋ ಮಮ ಪುತ್ರಕಃ ॥ 7 ॥**

ನಿನ್ನ ಕಾಂತೆಯಿಂದ ಕೂಡಿ ನೀಲಮೇಘಶ್ಯಾಮನಾದ ನೀನಾರು? ಇಲ್ಲಿಗೇಕೆ ಬಂದಿರುವೆ? ಬಲಿಷ್ಠನಾದ ಯಮನು ನನ್ನ ಮಗುವನ್ನು ಕೊಂಡು ಹೋಗದಿದ್ದಲ್ಲಿ ನನ್ನ ಕಂದನೂ ನಿನ್ನ ಹಾಗೆ ಈ ವಯಸ್ಸಿನಲ್ಲಿಯೇ ಇರುತ್ತಿದ್ದ. ಖಂಡಿತಾ ನೀನು ಕೃಷ್ಣನ ಕುಮಾರನೆ ಆಗಿರುವಿ.

ನನ್ನ ಅನಿಸಿಕೆ ಎಂದೂ ಸುಳ್ಳಾಗದು. ನೀನು ಶ್ರೀಕೃಷ್ಣನ ಚಕ್ರ ಚಿಹ್ನೆಯ ಹೊರತುಪಡಿಸಿ ಉಳಿದೆಲ್ಲ ಚಿಹ್ನೆಗಳಿಂದಲೂ ನೀನೂ ಕೃಷ್ಣನನ್ನೆ ಹೋಲುತ್ತಿರುವುದನ್ನು ನಾನು ಬಲ್ಲೆನು. ನಿನ್ನ ಮುಖಭಾವ ಶ್ರೀಕೃಷ್ಣನ ಮುಖಭಾವದಂತೆಯೇ ಇದೆ.

**ಮುಖಂ ನಾರಾಯಣಸ್ಯೇವ ಕೇಶಾಃ ಕೇಶಾಂತ ಏವ ಚ ।**
**ಊರೂ ವಕ್ಷೋ ಭುಜೌ ತುಲ್ಯೌ ಹಲಿನಃ ಶ್ವಶುರಸ್ಯ ಚ ॥ 8 ॥**

ಕೇಶಪಾಶಗಳು ತೊಡೆಗಳ ಎದೆಯೂ ಭುಜಗಳೂ ಶ್ರೀಕೃಷ್ಣನನ್ನೆ ಹೋಲುತ್ತಿವೆ. ನಿನ್ನ ದೇಹವೆಲ್ಲವೂ ಕೃಷ್ಣನಂತೆ ಸಲ್ಲಕ್ಷಣೋಪೇತವಾಗಿದೆ. ಹೀಗಾಗಿ ನೀನಾರುಯೆಂಬುದನ್ನು ಹೇಳು ಎಂದಳು.

**ಏತಸ್ಮಿನ್ನಂತರೇ ಕೃಷ್ಣಃ ಸಹಸಾ ಪ್ರವಿವೇಶ ಹ ।**
**ನಾರದಸ್ಯ ವಚಃ ಶ್ರುತ್ವಾ ಶಂಬರಸ್ಯ ವಧಂ ಪ್ರತಿ ॥ 9 ॥**

ಈ ಸಂದರ್ಭದಲ್ಲಿಯೇ ನಾರದರಿಂದ ಶಂಬರಾಸುರನ ಸಂಹಾರ ತಿಳಿದ ಶ್ರೀಕೃಷ್ಣನು ಅರಮನೆಗೆ ಬಂದನು. ಅಲ್ಲದೆ ಮನ್ಮಥನ ಲಕ್ಷಣಗಳಿಂದ ಕೂಡಿರುವ ತನ್ನ ಜ್ಯೇಷ್ಠ ಪುತ್ರನನ್ನೂ ತನ್ನ ಸೊಸೆಯಾದ ಮಾಯಾವತಿಯನ್ನೂ ಕಂಡು ಸಂತೋಷದಿಂದ ಹೀಗೆಂದನು.

**ಅಯಂ ಚ ದೇವೀ ಸಂಪ್ರಾಪ್ತಃ ಸುತಶ್ಚಾಪಧರಸ್ತವ ।**
**ಅನೇನ ಶಂಬರಂ ಹತ್ವಾ ಮಾಯಾ ಯುದ್ಧ ವಿಶಾರದಃ ॥ 10 ॥**

**ಸತೀ ಚೇಯಂ ಶುಭಾಸಾಧ್ವೀ ಭಾರ್ಯಾ ವೈ ತನಯಸ್ಯ ಚ ॥ 11 ॥**

ದೇವಿ ರುಕ್ಮಿಣಿ! ಧನುರ್ಧಾರಿಯಾಗಿ ಬಂದಿರುವ ಈ ಕುಮಾರನು ನಿನ್ನ ಮಗನೇ ಈತನೆ ಮಹಾಮಾಯಾವಿ ಶಂಬರನನ್ನು ಅಂತಗೊಳಿಸಿದವನು. ಇವಳಾದರೂ ನಿನ್ನ ಮಗನ ಪತ್ನಿಯಾಗಿರುವಳು, ಮಹಾಪತಿವ್ರತೆಯು. ಇವಳು

ಶಂಬರನ ಪತ್ನಿಯಾಗಿದ್ದಳೆಂದು ವ್ಯಥೆ ಪಡಬೇಡ. ಶಿವನ ಕ್ರೋಧಾಗ್ನಿಗೆ ಬಲಿಯಾದ ಮನ್ಮಥನು ಅನಂಗನಾದಾಗ ರತಿಯು ಬ್ರಹ್ಮದೇವನ ಶಾಪದಿಂದ ಶಂಬರನ ಮನೆಯಲ್ಲಿದ್ದರೂ ಶಂಬರನಿಗೆ ಎಂದು ರತಿ ನೀಡುವ ಪತ್ನಿಯಾಗಿರಲಿಲ್ಲ. ಮಾಯೆಯಿಂದ ಮಾಯವತಿಯೆಂಬ ರೂಪದಿಂದ ಶಂಬರನನ್ನು ಮೋಹಗೊಳಿಸಿದ್ದಳು. ಇವಳು ಶುದ್ಧಳು. ಈ ಸೊಸೆಯನ್ನು ಮನೆ ತುಂಬಿಸಿಕೋ ಎಂದನು.

**ಪ್ರವೇಶಯೈನಾಂ ಭವನಂ ಪೂಜ್ಯಾಂ ಜ್ಯೇಷ್ಠಾಂ ಸ್ನುಷಾಂ ತವ ।**
**ಚಿರಂ ಪ್ರಣಷ್ಟಂ ಚ ಸುತಂ ಭಜಸ್ವ ಪುನರಾಗತಮ್ ॥ 12 ॥**

ಕೃಷ್ಣನ ಮಾತಿನಿಂದ ರುಕ್ಮಿಣಿಯು ಸಂತುಷ್ಟಳಾದಳು. ಎಂದೋ ಕಳೆದುಕೊಂಡ ನನ್ನ ಪುತ್ರರತ್ನವನ್ನು ಪುನಃ ಮನದನ್ನೆಯೊಂದಿಗೆ ನೋಡುವಂತಾಯಿತು.

ಮುಕುಂದಕಂದನೇ ಕಂದರ್ಪನೇ! ಪುನಃ ಪ್ರಿಯೆಯಿಂದ ಕೂಡಿಕೊಂಡೆ ಗೃಹಪ್ರವೇಶ ಮಾಡು ಎಂದಳು.

ನಂತರ ಪ್ರದ್ಯುಮ್ನನು ತಂದೆ ತಾಯಿ, ಬಲದೇವ ಸವಿನಯದಿಂದ ಪಾದಾಭಿವಾದನ ಮಾಡಿದನು. ಶ್ರೀಕೃಷ್ಣನು ಮಗನನ್ನು ಬಾಚಿ ತಬ್ಬಿಕೊಂಡು ಶಿರವನ್ನಾಘ್ರಾಣಿಸಿದನು.

ತನಗೆ ನಮಸ್ಕರಿಸಿದ ಸೊಸೆಯನ್ನು ಎಬ್ಬಿಸಿ ಆಲಿಂಗನೆ ಮಾಡಿದಳು. ಪ್ರೀತಿಯಿಂದಾಗಿ ಕಂಠವು ಗದ್ಗದವಾಯಿತು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವ ಉತ್ತರಾರ್ಧದಲ್ಲಿ
ಪ್ರದ್ಯುಮ್ನನ ಗೃಹಪ್ರವೇಶ ಎಂಬಲ್ಲಿ
ನೂರೆಂಟನೆಯ ಅಧ್ಯಾಯ ಸಮಾಪ್ತಿ

# ಅಥ ನವಾಧಿಕಶತತಮೋಽಧ್ಯಾಯಃ

## ಬಲರಾಮನಿಂದ ಪ್ರದ್ಯುಮ್ನನಿಗೆ ಆಹ್ನಿಕ ಸ್ತೋತ್ರ ಉಪದೇಶ

*ವೈಶಂಪಾಯನ ಉವಾಚ –*

**ಅತ್ರಾಶ್ಚರ್ಯಾತ್ಮಕಂ ಸ್ತೋತ್ರಂ ಆಹ್ನಿಕಂ ಜಯತಾಂ ವರ ।**
**ಪ್ರದ್ಯುಮ್ನೇ ದ್ವಾರಕಾಂ ಪ್ರಾಪ್ತೇ ಹತ್ವಾ ತಂ ಕಾಲ ಶಂಬರಮ್ ॥ 1 ॥**
**ಬಲದೇವೇನ ರಕ್ಷಾರ್ಥಂ ಪ್ರೋಕ್ತಮಾಹ್ನಿಕ ಮುಚ್ಯತೇ ।**
**ಯಜ್ಜಪ್ತ್ವಾ ತು ನೃಪಶ್ರೇಷ್ಠ ಸಾಯಂ ಪೂತಾತ್ಮತಾಂ ವ್ರಜೇತ್ ॥ 2 ॥**
**ಕೀರ್ತಿತಂ ಬಲದೇವೇನ ವಿಷ್ಣುನಾ ಚೈವ ಕೀರ್ತಿತಮ್ ।**
**ಧರ್ಮಕಾಮೈಶ್ಚ ಮುನಿಭಿಃ ಋಷಿಭಿಃ ಚಾಪಿ ಕೀರ್ತಿತಮ್ ॥ 3 ॥**
**ಕರ್ಹಿಚಿದ್ ರುಗ್ಮಿಣೀಪುತ್ರೋ ಹಲಿನಾ ಸಂಯುತೋ ಗೃಹೇ ।**
**ಉಪವಿಷ್ಟಃ ಪ್ರಣಮ್ಯಾಥ ತಮುವಾಚ ಕೃತಾಂಜಲಿಃ ॥ 4 ॥**

ವೈಶಂಪಾಯನರು ಜನಮೇಜಯನಿಗೆ ಹೇಳುವರು – ಜನಮೇಜಯ! ಪ್ರದ್ಯುಮ್ನನು ಕಾಲಶಂಬರನನ್ನು[1] ಸಂಹರಿಸಿ ಪತ್ನಿಯಿಂದೊಡಗೂಡಿ ದ್ವಾರಕೆಗೆ ಬಂದನು. ಬಲರಾಮನಾದರೂ ಪ್ರದ್ಯುಮ್ನನ ರಕ್ಷಾರ್ಥವಾಗಿ 'ಆಹ್ನಿಕ'ವೆಂಬ ಸ್ತೋತ್ರವನ್ನು ಉಪದೇಶಿಸಿದನು. ಈ ಆಹ್ನಿಕ ಸ್ತೋತ್ರವನ್ನು ಸಾಯಂಕಾಲದಲ್ಲಿ ಆವೃತ್ತಿ ಮಾಡುವ ವ್ಯಕ್ತಿಯು ಪವಿತ್ರೀಕೃತ ಗಾತ್ರನಾಗುವನು.

1. ಕಾಲಶಂಬರ – ಶಂಬರನು ಕಶ್ಯಪ–ದನುವಿನ ಪುತ್ರ. ಮಹಾಮಾಯಾವಿ ಮಹಾದಾನವರಲ್ಲಿ ಎರಡನೆಯವ. ಪ್ರದ್ಯುಮ್ನ ಇವನನ್ನು ಕೊಂದು ಹಾಕಿದ.

ಈ ಸ್ತೋತ್ರವನ್ನು ಮೊದಲು ಶ್ರೀಕೃಷ್ಣನು ಪಠಿಸಿದ್ದನು. ಇವನಿಂದ ಬಲರಾಮ ದೇವನು ಪಡೆದು ಕೀರ್ತಿಸಿದನು. ಧರ್ಮಜ್ಞರಾದ ಋಷಿಮುನಿಗಳೆಲ್ಲರೂ ಇದನ್ನು ಪುರಶ್ಚರಣ ಮಾಡುತ್ತಿರುವರು.

ಒಂದು ದಿನ ದ್ವಾರಕೆಯ ಅರಮನೆಯಲ್ಲಿ ಪ್ರದ್ಯುಮ್ನನು ಬಲದೇವನೊಂದಿಗೆ ಕುಳಿತುಕೊಂಡಿದ್ದನು. ದೊಡ್ಡಪ್ಪನಿಗೆ ಕೈಮುಗಿದು ಹೀಗೆಂದನು.

*ಪ್ರದ್ಯುಮ್ನ ಉವಾಚ –*

**ಕೃಷ್ಣಾನುಜ ಮಹಾಭಾಗ ರೋಹಿಣೀತನಯ ಪ್ರಭೋ ।**
**ಕಿಂಚಿತ್ ಸ್ತೋತ್ರಂ ಮಮ ಬ್ರೂಹಿ ಯಜ್ಜಪ್ತ್ವಾ ನಿರ್ಭಯೋಽಭವಮ್ ॥ 5 ॥**

'ಬಲರಾಮನೇ! ನೀನು ಶ್ರೀಕೃಷ್ಣ ಅಣ್ಣನೆನಿಸಿದ ಮಹಾಭಾಗ್ಯಶಾಲಿಯಾಗಿರುವೆ. ರೋಹಿಣಿಯ ಉದರಾದ್ರಿಯಿಂದ ಆವಿರ್ಭವಿಸಿದ ಚಂದ್ರಮನೆ ನೀನು. ನನಗೆ ನಿರಂತರ ಶತ್ರುಗಳಿಂದ ಯುದ್ಧವೇರ್ಪಡುತ್ತಿರುತ್ತದೆ. ಅದಕ್ಕಾಗಿ ನನಗೆ ನಿರ್ಭಯತೆವುಂಟಾಗಲು ಯಾವುದಾದರೂ ಒಂದು ಸ್ತೋತ್ರವನ್ನು ಉಪದೇಶಿಸು' ಎಂದನು.

ಆಗ ಬಲದೇವನು ಪ್ರದ್ಯುಮ್ನನಿಗೆ ಭಯಪರಿಹಾರಕ ಸ್ತೋತ್ರವನ್ನು ಉಪದೇಶಿಸಿದನು.

## ಆಹ್ನಿಕ ಸ್ತೋತ್ರ

**ಸುರಾಸುರಗುರುರ್ಬ್ರಹ್ಮಾ ಪಾತು ಮಾಂ ಜಗತಃ ಪತಿಃ ।**
**ಅಥೋಽಂಹಕಾರ ವಷಟ್ಕಾರೌ ಸಾವಿತ್ರೀ ವಿಧಯ ಸ್ತ್ರಯಃ ॥ 6 ॥**

**ಋಚೋ ಯಜೂಂಷಿ ಸಾಮಾನಿ ಛಂದಾಂಸ್ಯಾಥರ್ವಣಾನಿ ಚ ।**
**ಚತ್ವಾರ ಸ್ವಖಿಲಾ ವೇದಾಃ ಸಹರಸ್ಯಾಃ ಸವಿಸ್ತರಾಃ ॥ 7 ॥**

**ಪುರಾಣ ಮಿತಿಹಾಸಶ್ಚ ಖಿಲಾನ್ಯುಪಖಿಲಾನಿ ಚ ।**
**ಅಂಗಾನ್ಯುಪಾಂಗಾನಿ ತಥಾ ವ್ಯಾಖ್ಯಾತಾನಿ ಚ ಪಾಂತು ಮಾಮ್ ॥ 8 ॥**

**ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ ।**
**ಇಂದ್ರಿಯಾಣಿ ಮನೋ ಬುದ್ಧಿಸ್ತಥಾ ಸತ್ವಂ ರಜಸ್ತಮಃ ॥ 9 ॥**

**ವ್ಯಾನೋದಾನೌ ಸಮಾನಶ್ಚ ಪ್ರಾಣೋಽಪಾನಶ್ಚ ಪಂಚಮಃ ।**
**ವಾಯವಃ ಸಪ್ತ ಚೈವಾನ್ಯೇ ಯೇಷ್ವಾಯತ್ತಾಮಿದಂ ಜಗತ್ ॥ 10 ॥**
**ಮರೀಚಿರತ್ರಿರಂಗಿರಾಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ।**
**ಭೃಗುರ್ವಸಿಷ್ಠೋ ಭಗವಾನ್ ಪಾಂತು ತೇ ಮಾಂ ಮಹರ್ಷಯಃ ॥ 11 ॥**

ಇಂದ್ರಾದಿ ದೇವತೆಗಳು - ಪ್ರಹ್ಲಾದಾದಿ ವಾಯುಭಕ್ತರಿಗೂ ಗುರುವಾದ ಬ್ರಹ್ಮದೇವನು ನನ್ನನು ರಕ್ಷಿಸಲಿ. ಓಂಕಾರ, ವಷಟ್ಕಾರ, ಸಾವಿತ್ರೀ ಪ್ರತಿಪಾದ್ಯರೂ ಶಾಸ್ತ್ರವಿಧಿಗಳು, ಋಗ್ ಯಜರ್ ಸಾಮಾಥರ್ವಾದಿ ನಾಲ್ಕು ವೇದಗಳು, ಇತಿಹಾಸಾದಿತ್ರಯ, ಪುರಾಣಾದಿಗಳು, ಖಿಲ-ಉಪಖಿಲಗಳು ಅಂಗ-ಉಪಾಂಗ ಹಾಗೂ ವೇದವ್ಯಾಖ್ಯಾನ ಸೂತ್ರಗಳು, ಅದರ ವ್ಯಾಖ್ಯಾನ ಭಾಷ್ಯಗಳು ನನ್ನನ್ನು ಪಾಲಿಸಲಿ.

ಭೂಮಿ, ನೀರು, ವಾಯು, ಆಕಾಶ, ಅಗ್ನಿ ದೇವತೆಗಳು, ಇಂದ್ರಿಯಾಭಿಮಾನಿ ದೇವತೆಗಳು, ಮನೋಭಿಮಾನಿ ಗರುಡಶೇಷರುದ್ರಾದಿಗಳು, ಬುದ್ಧಿ ಅಭಿಮಾನಿ ಉಮಾದಿಗಳು, ಸತ್ವ ರಜಸ್ ತಮೋಗುಣಾಭಿಮಾನಿಗಳು, ಪ್ರಾಣಾಪಾನ ವ್ಯಾನೋದಾನ ಸಮಾನರೆಂಬ ಮುಖ್ಯಪ್ರಾಣ ಮಂತ್ರಗಳೂ ಹಾಗೂ ನಾರಾಯಣಾದಿ ಪಂಚರೂಪಗಳೂ ನನ್ನನ್ನು ಕಾಪಾಡಲೀ.

ಸಮಸ್ತ ಜಗತ್ತನ್ನೂ ತನ್ನ ಅಂಕೆಯಲ್ಲಿಟ್ಟುಕೊಂಡಿರುವ ಪ್ರವಹವೆ[2] ಮೊದಲಾದ ಸಪ್ತವಾಯುಗಳು ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ಭೃಗು, ವಸಿಷ್ಠ ಈ ಸಪ್ತರ್ಷಿಗಳು[3] ರಕ್ಷಿಸಲಿ.

---

2. *ಪ್ರವಹಾದಿಗಳು :* ಈ ಏಳು ವಾಯುಗಳು ಭೂಮಿಯಿಂದ ಧ್ರುವಮಂಡಲದವರೆಗೂ ಇರುವರು.
   1) ಆವಹಃ - ಭೂಯಿಂದ - ಮೇಘಮಂಡಲದವರೆಗೂ
   2) ಪ್ರವಹಃ - ಮೇಘದಿಂದ - ಸೂರ್ಯಮಂಡಲದವರೆಗೂ
   3) ಉದ್ವಹಃ - ಸೂರ್ಯನಿಂದ - ಚಂದ್ರ ಮಂಡಲದವರೆಗೂ
   4) ಸಂವಹಃ - ಚಂದ್ರನಿಂದ - ನಕ್ಷತ್ರ ಮಂಡಲದವರೆಗೂ
   5) ವಿವಹಃ - ನಕ್ಷತ್ರದಿಂದ - ಗ್ರಹ ಮಂಡಲದವರೆಗೂ
   6) ಪರಾವಹಃ - ಗ್ರಹದಿಂದ - ಸಪ್ತರ್ಷಿ ಮಂಡಲದವರೆಗೂ
   7) ಶಂಯುಃ - ಸಪ್ತರ್ಷಿಯಿಂದ - ಧ್ರುವಮಂಡಲದವರೆಗೂ ಇರುವರು.
   ಇವರೆಲ್ಲರೂ 18ನೇ ಕಕ್ಷೆಯಲ್ಲಿ ಮರುದ್ಗಣದಲ್ಲಿ ಗಣಿತರಾಗಿರುವರು.
3. **ಈ ಸಪ್ತರ್ಷಿಗಳು** - ವೈವಸ್ವತಮನು - ವಿಶ್ವಾಮಿತ್ರ ಈ ನವ, ಮಂದಿ, ಅಗ್ನಿ-ಪ್ರಸೂತಿ-ಭೃಗುಗಳಿಕ್ಕಿಂತ ಸ್ವಲ್ಪ ಅವರರಾಗಿದ್ದು ಹದಿನಾರನೇ ಕಕ್ಷ್ಯೆಯಲ್ಲಿ ಪರಿಗಣಿತ-ರಾಗುವರು.

**ಕಶ್ಯಪಾದ್ಯಾಶ್ಚ ಮುನಯಶ್ಚತುರ್ದಶ ದಿಶೋ ದಶ ।**
**ನರನಾರಾಯಣೌ ದೇವೌ ಸಗಣೌ ಪಾಂತು ಮಾಂ ಸದಾ ॥ 12 ॥**

**ರುದ್ರಾಶ್ಚೈಕಾದಶ ಪ್ರೋಕ್ತಾ ಆದಿತ್ಯಾ ದ್ವಾದಶೈವ ತು ।**
**ಅಷ್ಟೌ ಚ ವಸವೋ ದೇವಾ ಅಶ್ವಿನೌ ದ್ವೌ ಪ್ರಕೀರ್ತಿತೌ ॥ 13 ॥**

ಕಶ್ಯಪರೇ ಮೊದಲಾದ ಋಷಿಗಳು, ಹತ್ತು ದಿಕ್ಕುಗಳ ದೇವತೆಗಳು, ಧರ್ಮ-ಮೂರ್ತಿಗಳಿಂದ ಆವಿರ್ಭವಿಸಿದ ನರ ನಾರಾಯಣರು, ತಮ್ಮ ಗಣದಿಂದ ಸಹಿತ ರಕ್ಷಿಸಲಿ.

ದ್ರೋಣ ಪ್ರಾಣ ಧ್ರುವ- ಅರ್ಕ ದೋಷ ವಸು ವಿಭಾವಸುಗಳೆಂಬ 4 ವಸುಗಳು, ರೈವತ - ಅಜ-ಭವ-ಭೀಮ-ವಾಮ- ಉಗ್ರ- ವೃಷಾಕಪಿ - ಅಜೈಕಪಾತ್ ಮೊದಲಾದ ಏಕಾದಶ ರುದ್ರರೂ, ವಿವಸ್ವಾನ್ ಅರ್ಯಮಾ ಪೂಷಾ ತ್ವಷ್ಟಾ-ಭಗ- ಮಿತ್ರ ಶಕ್ರ - ಉರುಕ್ರಮರೆಂಬ ದ್ವಾದಶಾದಿತ್ಯರೂ, ನಾಸತ್ಯ-ದಸ್ರರೆಂಬ ಅಶ್ವನೀಕುಮಾರರು ಹೀಗೆ ಒಟ್ಟು 33 ದೇವತೆಗಳು ರಕ್ಷಿಸಲಿ.

**ಹ್ರೀಃ ಶ್ರೀರ್ಲಕ್ಷ್ಮೀಃ ಸ್ವಧಾ ಪುಷ್ಟಿರ್ಮೇಧಾ ತುಷ್ಟಿಃ ಸ್ಮೃತಿರ್ಧೃತಿಃ ।**
**ಅದಿತಿರ್ದಿತಿ ರ್ದನುಶ್ಚೈವ ಸಿಂಹಿಕಾ ದೈತ್ಯಮಾತರಃ ॥ 14 ॥**

ಲಜ್ಜೆ ಎಂಬ ಅರ್ಥ ನೀಡುವ ಹ್ರೀ ಎಂಬ ಲಕ್ಷ್ಮೀದೇವಿಯು, ಶ್ರೀದೇವಿ, ಲಕ್ಷ್ಮೀದೇವಿ, ಸ್ವಧಾದೇವಿ, ಮೇಧಾ, ತುಷ್ಟಿ, ಸ್ಮೃತಿ, ಧೃತಿ, ದೇವಮಾತೆ ಅದಿತಿ, ದಿತಿ, ದನು, ಸಿಂಹಿಕಾ ಇವರು ರಕ್ಷಿಸಲಿ.

**ಹಿಮವಾನ್ ಹೇಮಕೂಟಶ್ಚ ನಿಷಧಃ ಶ್ವೇತಪರ್ವತಃ ।**
**ಋಷಭಃ ಪಾರಿಯಾತ್ರಶ್ಚ ವಿಂಧ್ಯೋ ವೈಡೂರ್ಯಪರ್ವತಃ ॥ 15 ॥**

**ಸಹೋದಯಶ್ಚ ಮಲಯೋ ಮೇರು ಮಂದರ ದರ್ದುರಾಃ ।**
**ಕ್ರೌಂಚ ಕೈಲಾಸ ಮೈನಾಕಾಃ ಪಾಂತು ಮಾಂ ಧರಣೀಧರಾಃ ॥ 16 ॥**

ಹಿಮಾಲಯನು ಹೇಮಕೂಟ ನಿಷಧ ಶ್ವೇತಗಿರಿ, ಋಷಭಗಿರಿ, ಪಾರಿಯಾತ್ರ, ವಿಂಧ್ಯ ವೈಡೂರ್ಯಪರ್ವತ, ಸಹ್ಯಾದ್ರಿ, ಮಲಯ, ಮೇರು ಮಂದರ, ದರ್ದುರ, ಕ್ರೌಂಚ ಕೈಲಾಸ ಮೈನಾಕ ಪರ್ವತಾಭಿಮಾನಿಗಳು ರಕ್ಷಿಸಲಿ.

**ಶೇಷಶ್ಚ ವಾಸುಕಿಶ್ಚೈವ ವಿಶಾಲಾಕ್ಷಶ್ಚ ತಕ್ಷಕಃ ।**
**ಏತೇ ಚಾನ್ಯೇ ಚ ಬಹವೋ ಯೇ ಚಾನ್ಯೇ ನಾನುಕೀರ್ತಿತಾಃ ॥ 17 ॥**

**ಧೂಧರಾಃ ಸತ್ಯಧರ್ಮಾಣಃ ಪಾಂತು ಮಾಂ ಭುಜಗೇಶ್ವರಾಃ ॥ 18 ॥**

ಸರ್ಪಗಳಲ್ಲಿ ಶೇಷ, ವಾಸುಕೀ, ವಿಶಾಲಾಕ್ಷ, ತಕ್ಷಕ, ಐಲಾಪತ್ರ, ಶುಕ್ಲವರ್ಣ, ಕಂಬಲ, ಅಶ್ವತರ, ಹಸ್ತಿಭದ್ರ, ಪಿಟರಕ, ಕರ್ಕೋಟಕ, ಧನಂಜಯ, ಪೂರಣಕ, ಕರವೀರಕ, ಸುಮನಾಸ್ಯ, ದಧಿಮುಖ, ಶೃಂಗಾರಪಿಂಡಕ, ಮಣಿನಾಗ, ಅಧಿಕರ್ಣ, ಹಾರಿದ್ರಕ ಮೊದಲಾದ ಸರ್ಪಗಳು ರಕ್ಷಿಸಲಿ. ಇಲ್ಲಿ ಹೆಸರಿಸದೆ ಇರುವ ಭೂಭಾರ ವಹಿಸಿರುವ ಸಕಲ ಸರ್ಪಗಳೂ ನನ್ನನ್ನು ರಕ್ಷಿಸಲಿ.

**ಸಮುದ್ರಾಃ ಪಾಂತು ಚತ್ವಾರೋ ಗಂಗಾ ಚ ಸರಿತಾಂ ವರಾ ।**
**ಸರಸ್ವತೀ ಚಂದ್ರಭಾಗಾ ಶತದ್ರುಃ ದೇವಿಕಾ ಶಿವಾ ॥ 19 ॥**
**ದ್ವಾರಾವತೀ ವಿಪಾಶಾ ಚ ಸರಯೂರ್ಯಮುನಾ ತಥಾ ।**
**ಏತಾಶ್ಚಾನ್ಯಾಶ್ಚ ಸರಿತೋ ಯಾಶ್ಚಾನ್ಯಾ ನಾನುಕೀರ್ತಿತಾಃ ।**
**ಉತ್ತರಾಪಥಗಾಮಿನ್ಯಃ ಸಲಿಲೈಃ ಸ್ನಪಯಂತು ಮಾಮ್ ॥ 20 ॥**

ನಾಲ್ಕು ಸಮುದ್ರಗಳು, ಗಂಗಾ ಸರಸ್ವತೀ, ಚಂದ್ರಭಾಗಾ,[4] ಶತದ್ರು,[5] ದೇವಿಕಾ–ಶಿವಾ– ದ್ವಾರಾವತೀ ವಿಪಾಶಾ ಸರಯೂ[6] ಯಮುನಾ ಕಲ್ಮಾಷೀ ರಥೋಷ್ಮಾ ಬಾಹುದಾ ಹಿರಣ್ಯದಾ ಪ್ಲಕ್ಷಾ ಇಕ್ಷುಮತೀ ಸ್ರವಂತೀ ಬೃಹದ್ರಥಾ ಚರ್ಮಣ್ವತೀ, ವಧೂಸರಾ ಇವೇ ಮೊದಲಾದ ಉತ್ತರಾಪಥದಲ್ಲಿ ಹರಿಯುವ ವೇಣೀ–ಗೋದಾವರಿ – ಸೀತಾ ಕಾವೇರೀ ಕೌಂಕಣಾವತೀ – ಕೃಷ್ಣಾ, ವೇಣಾ – ಶುಕ್ತಿಮತೀ – ತಮಸಾ – ತಾಮ್ರಪರ್ಣೀ ಜ್ಯೋತಿರಥಾ – ಉತ್ಪಲಾ – ಉದುಂಬರಾವತೀ – ವೈತರಿಣೀ – ವಿದರ್ಭಾ – ನರ್ಮದಾ ವಿತಸ್ತಾ ಭೀಮರಥೀ – ಐಲಾ ಕಾಲಂದೀ ಗೋಮತೀ ಶೋಣ ಭದ್ರಾ ಇವೇ ಮೊದಲಾದ ನದಿಗಳು ನನಗೆ ಸ್ನಾನ ಮಾಡಿಸಲಿ.

---

4. **ಚಂದ್ರಭಾಗಾ** : ಚಂದ್ರಭಾಗಾ ನದಿಯು ಹಿಮಾಲಯದಲ್ಲಿ ಹುಟ್ಟುತ್ತದೆ. ಬ್ರಹ್ಮದೇವನು ಚಂದ್ರನನ್ನು ಎರಡು ಭಾಗ ಮಾಡಿ, ಶಿವ ಹಾಗೂ ನಕ್ಷತ್ರಗಳಿಗೂ ನೀಡಿದನು. ಈ ಶಿಖರ ಹಾಗೂ ಅಲ್ಲಿ ಹುಟ್ಟುವ ನದಿಗೂ ಚಂದ್ರಭಾಗಾ ಎಂದಾಯಿತು. – ಮಹಾ/ *ಬೀ/9ಅ*
5. **ಶತದ್ರು** : ಹೈಮವತೀ ನದಿಯೆಂದು ಹೆಸರಿತ್ತು. ವಿಶ್ವಾಮಿತ್ರರ ಕಾಟ ತಾಳಲಾರದೆ ಈ ನದಿಯಲ್ಲಿ ಪ್ರಾಣ ಕಳೆದುಕೊಳ್ಳಲು ಬಿದ್ದಾಗ ಬ್ರಹ್ಮಹತ್ಯೆವುಂಟಾಗುವುದೆಂಬುದು ಹೆದರಿ ನೂರು ಭಾಗವಾಗಿ ಹರಿದಳು. ಶತ + ದ್ರು ಗತೌ ಧಾತು. [ಭೀ – 9]
6. **ಸರಯೂ** : ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿದ್ದಾಗ ನೀರಿಗಾಗಿ ಭೂಮಿಗೆ ಬಾಣಬಿಟ್ಟನು. ಇದು ಭೂಮಿಯೊಳಗೆ ಹೋಗಿ ಮಾನಸ ಪರ್ವತವನ್ನು ಭೇದಿಸಿತು. ಅಲ್ಲಿಂದಲೇ ನೀರು ಹರಿದು ಬಂದಿತು. ಶರದಿಂದ ಬಂದಿದ್ದು ಶರಯೂ ಆಗಿ ಸರಯೂ ಆಗಿದೆ. –ಆನಂದರಾಮಾ

ಪಶ್ಚಿಮ ದಿಕ್ಕಿನಲ್ಲಿ ಹರಿಯುವ ಕ್ಷಿಪ್ರಾ – ಚರ್ಮಣ್ವತೀ ಮಹೀ ಶುಭ್ರವತೀ ಸಿಂಧು ವೇತ್ರ ವತೀ ವೇತ್ರವತೀ – ಚಾಪದಾಸೀ ಊರ್ಮಿಲಾ ಚಿತ್ರಘ್ನೀ ಇಂದುಮಾಲಾ ಉಮಾ ಗುರುನದೀ ತಾಪೀ ವಿಮಲಾ ವಿಮಲೋದಾ ಮತ್ತ ಗಂಗಾ ಪಯಸ್ವಿನೀ ಮೊದಲಾದ ನದಿಗಳು ಅಭಿಷೇಚಿಸಲಿ. ಪೂರ್ವದಿಕ್ಕಿಗೆ ಹರಿಯುವ ಗಂಗೆಯು ನನ್ನ ಪಾಪ ಪರಿಹರಿಸಲಿ.

**ಪ್ರಭಾಸಂ ಚ ಪ್ರಯಾಗಂ ಚ ನೈಮಿಷಂ ಪುಷ್ಕರಾಣಿ ಚ ।**
**ಗಂಗಾತೀರ್ಥಂ ಕುರುಕ್ಷೇತ್ರಂ ಶ್ರೀಕಂಠಂ ಗೌತಮಾಶ್ರಮಮ್ ॥ 21 ॥**

**ರಾಮಹ್ರದಂ ವಿಶಸನಂ ರಾಮತೀರ್ಥಂ ತಥೈವ ಚ ।**
**ಗಂಗಾದ್ವಾರಂ ಕನಖಲಂ ಸೋಮೋ ವೈ ಯತ್ರ ಚೋತ್ಥಿತಃ ।**
**ಕಪಾಲಮೋಚನಂ ತೀರ್ಥಂ ಜಂಬೂಮಾರ್ಗಂ ಚ ವಿಶ್ರುತಮ್ ॥ 22 ॥**

**ದಶಾಶ್ವಮೇಧಿಕಂ ಚೈವ ಪುಣ್ಯಾಶ್ರಮ ವಿಭೂಷಿತಮ್ ।**
**ಬದರೀ ಚೈವ ವಿಖ್ಯಾತಾ ನರ ನಾರಾಯಣಾಶ್ರಮಃ ।**
**ವಿಖ್ಯಾತಂ ಫಲ್ಗುತೀರ್ಥಂ ಚ ತೀರ್ಥ ಚಂದ್ರವಟಂ ತಥಾ ।**
**ಕೋಕಾಮುಖಂ ಪುಣ್ಯತಮಂ ಗಂಗಾಸಾಗರಮೇವ ಚ ॥ 23 ॥**

**ಮಾಂ ಪ್ಲಾವಯಂತು ಸಲಿಲೈಃ ಯಾನಿಮೇ ಕೀರ್ತಿತಾನಿ ವೈ ॥ 24 ॥**

ಪ್ರಭಾಸ, ಪ್ರಯಾಗ ನೈಮಿಷ–ಪುಷ್ಕರ ಗಂಗಾತೀರ್ಥ ಕುರುಕ್ಷೇತ್ರ ಶ್ರೀಕಂಠಕ್ಷೇತ್ರ – ಗೌತಮಾಶ್ರಮ ಪರಶುಕುಂಡ ವಿಶಸನತೀರ್ಥ – ರಾಮತೀರ್ಥ ಗಂಗಾದ್ವಾರ (ಹರಿದ್ವಾರ) ಕಪಾಲಮೋಚನ (ಕಾಶೀ) ದಶಾಶ್ವಮೇಧ ಬದರೀತೀರ್ಥ ನರನಾರಾಯಣಾಶ್ರಮ ಫಲ್ಗುತೀರ್ಥ (ಗಯಾ) ಕೋಕಾಮುಖ ಗಂಗಾಸಾಗರ (ಕೋಲ್ಕತ್ತಾ) ಮೊದಲಾದ ತೀರ್ಥಗಳೆಲ್ಲವೂ ನನ್ನನ್ನು ಪವಿತ್ರಗೊಳಿಸಲಿ.

**ಧರ್ಮಾರ್ಥ ಕಾಮ ವಿಷಯೋ ಯಶಃ ಪ್ರಾಪ್ತಿಃ ಶಮೋ ದಮಃ ।**
**ವರುಣೇಶೋಽಥ ಧನದೋ ಯಮೋ ನಿಯಮ ಏವ ಚ ॥ 25 ॥**

**ಯಕ್ಷಾಃ ಪಿಶಾಚಾ ಗಂಧರ್ವಾಃ ಕಿನ್ನರಾಃ ಸಿದ್ಧಚಾರಣಾಃ ।**
**ನಕ್ಷತ್ರಾಣಿ ಗ್ರಹಾಶ್ಚೈವ ಋತವಃ ಶಿಶಿರಾದಯಃ ॥ 26 ॥**

**ರುದ್ರಾಣೀ ಭದ್ರಕಾಲೀ ಚ ಭದ್ರಾ ಜ್ಯೇಷ್ಠಾ ಚ ವಾರುಣೀ ।**
**ಆರ್ಯಾ ಕುಹೂ ಸಿನೀವಾಲೀ ಭೀಮಾ ಚಿತ್ರರಥೀ ರತಿಃ ।**
**ಗೋನಂದಾ ದೇವಪತ್ನೀ ಚ ಮಾಂ ರಕ್ಷಂತು ಸಬಾಂಧವಮ್ ॥ 27 ॥**

ಧರ್ಮಾರ್ಥ ಕಾಮಮೋಕ್ಷಗಳನ್ನು ಚಿತ್ತರಿಸುವ ಶಾಸ್ತ್ರಗಳು, ಶಮ ದಮ ಕೀರ್ತಿಗಳಸಿದ ವರುಣ ರುದ್ರ ಕುಬೇರ ಯಮಧರ್ಮರು ರಕ್ಷಿಸಲಿ. ಯಮ ನಿಯಮಗಳು - ಕ್ರೋಧಮೋಹಗಳು - ಕ್ಷಮಾಧೃತಿಗಳು, ವಿದ್ಯುತ್ ಮೇಘಗಳು, ಓಷಧಿಲತೆಗಳು, ಪ್ರಮಾದ ಉನ್ಮಾದಗಳು, ಯಕ್ಷರಾಕ್ಷಸಾದಿಗಳು ಹಿಂಸ್ರಪ್ರಾಣಿಗಳು - ಪ್ರಿಯವಿಗ್ರಹಗಳು - ಲಂಬೋದರರು - ಮರದ್ಗಣಗಳು - ಕಲಾ ತ್ರುಟಿ ಲವಕ್ಷಣಗಳು - ಋತುಗಳು, ಮಾಸ-ದಿನ-ರಾತ್ರಿಗಳು, ಸೂರ್ಯಚಂದ್ರರು, ರುದ್ರಾಣೀ ಭದ್ರಕಾಲೀ ಜ್ಯೇಷ್ಠಾ ವಾರುಣೀ ಕಾಲೀ ಶಾಂಡಿಕಾ ಕುಹೂ ಸಿನೀವಾಲೀ ಕೂಷ್ಮಾಂಡೀ ರತೀ ಕಾತ್ಯಾಯನೀ ಗೋನಂದಾ ಇವರೆಲ್ಲ ಬಂಧುಬಾಂಧವರಿಂದ ಸಹಿತ ನನ್ನನ್ನು ರಕ್ಷಿಸಲಿ.

**ನಾನಾಭರಣ ವೇಷಾಶ್ಚ ನಾನಾರೂಪಾಂಕಿತಾನನಾಃ ।**
**ನಾನಾದೇಶ ವಿಚಾರಿಣ್ಯೋ ನಾನಾಶಾಸ್ತ್ರೋಪಶೋಭಿತಾಃ ॥ 28 ॥**

**ಮೇದೋ ಮಜ್ಜಾಪ್ರಿಯಾಶ್ಚೈವ ಮದ್ಯಮಾಂಸವಸಾ ಪ್ರಿಯಾಃ ।**
**ಮಾರ್ಜಾರ ದ್ವೀಪಿ ವಕ್ತ್ರಾಶ್ಚ ಗಜ ಸಿಂಹನಿಭಾನನಾಃ ॥ 29 ॥**

**ಪಿಂಗಾಕ್ಷಾ ಪಿಂಗಕೇಶಾಶ್ಚ ತತೋಽನ್ಯಾ ಲೂನಮೂರ್ಧಜಾಃ ।**
**ಊರ್ಧ್ವಕೇಶ್ಯಃ ಕೃಷ್ಣಕೇಶ್ಯಃ ಶ್ವೇತಕೇಶ್ಯಸ್ತಥಾವರಾಃ ।**
**ನಾಗಾಯುತ ಬಲಾಶ್ಚೈವ ವಾಯುವೇಗಾಸ್ತಥಾಪರಾಃ ॥ 30 ॥**

**ಏಕಹಸ್ತಾಃ ಏಕಪಾದಾಃ ಏಕಾಕ್ಷಾಃ ಪಿಂಗಲಾ ಮತಾಃ ।**
**ಬಹುಪುತ್ರಾಲ್ಪಪುತ್ರಾಶ್ಚ ದ್ವಿಪುತ್ರಾಃ ಪುತ್ರಮಂಡಿಕಾಃ ॥ 31 ॥**

ನಾನಾಭರಣ ಧರಿಸಿರುವವರೂ ನಾನಾ ಪ್ರಕಾರ ಚಿತ್ರಗಳನ್ನು ಧರಿಸಿದವರೂ, ನಾನಾದೇಶ ಸಂಚಾರಿಗಳೂ ನಾನಾ ಶಾಸ್ತ್ರಾಧ್ಯಯನ ಮಾಡಿದವರೂ ಮಜ್ಜೆ ಮದ್ಯ ಮಾಂಸ ವಸಾಭಕ್ಷಕರೂ, ಬೆಕ್ಕು ಹುಲಿ ಆನೇ ಸಿಂಹ ಹದ್ದು ರಣಹದ್ದು ಕಾಗೆ ಕ್ರೌಂಚ ಇವೆ ಮೊದಲಾದ ತಲೆ ಹೊಂದಿರುವ ಯಮಭಟರುಗಳೂ, ಸರ್ಪಯಜ್ಞೋಪನೀತಿಗಳೂ, ಚರ್ಮವಸ್ತ್ರಧಾರಿಗಳೂ ಭೇರೀನಾದ ಕಂಠಿಗಳು, ಮಾತ್ಸರ್ಯ ಕ್ರೋಧಾದಿಗಳುಳ್ಳವರೂ ನಿಮಿರಿ ನಿಂತ ಕೂದಲುಳ್ಳವರು, ಕಪ್ಪಾದ

ಕೇಶವುಳ್ಳವರೂ, ಶ್ವೇತಕೇಶಿಗಳೂ ಹತ್ತು ಸಾವಿರ ಆನೆ ಬಲವುಳ್ಳವರೂ, ವಾಯುವೇಗಿಗಳು, ಒಂದು ಕೈಕಾಲು ಕಣ್ಣುಳ್ಳುವರು, ಬಹುಸಂತಾನ-ವುಳ್ಳವರೂ, ಮಿತಸಂತಾನಿಗಳೂ, ಇಬ್ಬರು ಮಕ್ಕಳನ್ನು ಹೊಂದಿದವರೂ, ಮಕ್ಕಳನ್ನು ಅಲಂಕರಿಸುವವರೂ ಮುಖಮುಂಡೀ ಖಿಡಾಲೀ ಪೂತನಾ – ವೇತಾಲೀ ರೇವತೀ ಮೊದಲಾದ ಬಾಲಗ್ರಹಗಳೂ, ಪ್ರಿಯಹಾಸ್ಯರೂ ಪ್ರಿಯಕ್ರೋಧರೂ ಪ್ರಿಯವಸ್ತ್ರಧರಿಸಿದವರೂ ರಾತ್ರಿಂಚರರು ಮೊದಲಾದವರು ನನ್ನನ್ನು ರಕ್ಷಿಸುತ್ತಿರಲಿ.

**ಪಿತಾಮಹ ಮುಖೋದ್ಭೂತಾಃ ರೌದ್ರಾಃ ರುದ್ರಾಂಗ ಸಂಭವಾಃ ।**
**ಕುಮಾರಸ್ವೇದಜಾಶ್ಚೈವ ಜ್ವರಾ ವೈ ವೈಷ್ಣವಾದಯಃ ॥ 32 ॥**
**ನಕ್ತಂಚರಾಃ ಕೇಸರಿಣೋ ದಂಷ್ಟ್ರಿಣಃ ಪ್ರಿಯವಿಗ್ರಹಾಃ ।**
**ಪಿನಾಕ ವಜ್ರ ಮುಸಲ ಬ್ರಹ್ಮದಂಡಾಯುಧ ಪ್ರಿಯಾಃ ॥ 33 ॥**
**ವಾಪೀಕೂಪ ತಡಾಗೇಷು ಸಮುದ್ರೇಷು ಸರಿತ್ಸು ಚ ।**
**ಶ್ಮಶಾನ ಶೈಲ ವೃಕ್ಷೇಷು ಶೂನ್ಯಾಗಾರ ನಿವಾಸಿನಃ ॥ 34 ॥**
**ಏತೇಗ್ರಹಾಶ್ಚ ಸತತಂ ರಕ್ಷಂತು ಮಮ ಸರ್ವತಃ ॥ 35 ॥**

ಬ್ರಹ್ಮದೇವನ ಮುಖದಿಂದ ಜನಿಸಿದವರು, ರುದ್ರ ಅಂಗ ಜನ್ಯರಾದವರು ಸ್ಕಂದದೇವನ ಬೆವರಿನಿಂದ ಹುಟ್ಟಿದವರು ವೈಷ್ಣವ ಶೈವ ಜ್ವರಗಳು. ಮಹಾಭಯಂಕರರು – ಕ್ರೋಧರಹಿತರು, ಕ್ರೂರ ಸ್ವಭಾವ – ಶಾಂತಸ್ವಭಾವದವರು ರಾತ್ರಿಂಚರರು – ಕುತ್ತಿಗೆಯಲ್ಲಿ ಕೂದಲುಳ್ಳವರು, ಕೋರೆಹಲ್ಲುಗಳ್ಳವರೂ, ಜೋತು ಬಿದ್ದಿರುವ ಉದರದವರು, ಕೈಯ್ಯಲ್ಲಿ ಶಕ್ತಿ ಶೂಲ ಪರಿಘ ಪ್ರಾಸ ಗುರಾಣಿ ಪಿನಾಕ ಧನಸ್ಸು, ವಜ್ರ ಮುಸಲಾದಿ ಆಯುಧ ಹೊಂದಿರುವವರು.

ಬ್ರಹ್ಮದಂಡಧಾರಿಗಳು, ಕಮಂಡಲುಧಾರಿಗಳು, ಕರ್ಣಗಳಲ್ಲಿ ಕುಂಡಲ, ಭುಜಗಳಲ್ಲಿ ಕೇಯೂರ, ಧರಿಸಿದವರೂ, ವಿಚಿತ್ರಮಾಲ್ಯಾಂಬರಧಾರಿಗಳೂ ಆನೆ ಒಂಟೆ ಕುದುರೆ ಕರಡಿ ಬೆಕ್ಕು ಸಿಂಹ ಹಂದಿ ಗೂಬೆ ನರಿ ಮೃಗ ಇಲಿ ಮೊದಲಾದ ಪ್ರಾಣಿಮುಖರೂ ರಕ್ಷಿಸಲಿ.

ಹಾಗೆಯೆ ಮಹಾಗಣಪತಿ, ನಂದೀಶ್ವರ ಮಹಾಬಲೀ ಮಹಾಕಾಲ ಲೋಕ ಭಯಂಕರ, ಗೋಪಾಲ ಭೃಂಗರೀಟ, ಗಣೇಶ್ವರ ವಾಮದೇವ ಘಂಟಾಕರ್ಣ

**ರುದ್ರಾಣೀ ಭದ್ರಕಾಲೀ ಚ ಭದ್ರಾ ಜ್ಯೇಷ್ಠಾ ಚ ವಾರುಣೀ ।**
**ಆರ್ಯಾ ಕುಹೂ ಸಿನೀವಾಲೀ ಭೀಮಾ ಚಿತ್ರರಥೀ ರತಿಃ ।**
**ಗೋನಂದಾ ದೇವಪತ್ನೀ ಚ ಮಾಂ ರಕ್ಷಂತು ಸಬಾಂಧವಮ್ ॥ 27 ॥**

ಧರ್ಮಾರ್ಥ ಕಾಮಮೋಕ್ಷಗಳನ್ನು ಬಿತ್ತರಿಸುವ ಶಾಸ್ತ್ರಗಳು, ಶಮ ದಮ ಕೀರ್ತಿಗಳಸಿದ ವರುಣ ರುದ್ರ ಕುಬೇರ ಯಮಧರ್ಮರು ರಕ್ಷಿಸಲಿ. ಯಮ ನಿಯಮಗಳು – ಕ್ರೋಧಮೋಹಗಳು – ಕ್ಷಮಾಧೃತಿಗಳು, ವಿದ್ಯುತ್ ಮೇಘಗಳು, ಓಷಧಿಲತೆಗಳು, ಪ್ರಮಾದ ಉನ್ಮಾದಗಳು, ಯಕ್ಷರಾಕ್ಷಸಾದಿಗಳು ಹಿಂಸ್ರಪ್ರಾಣಿಗಳು – ಪ್ರಿಯವಿಗ್ರಹಗಳು – ಲಂಬೋದರರು – ಮರದ್ಗಣಗಳು – ಕಲಾ ತ್ರುಟಿ ಲವಕ್ಷಣಗಳು – ಋತುಗಳು, ಮಾಸ–ದಿನ–ರಾತ್ರಿಗಳು, ಸೂರ್ಯಚಂದ್ರರು, ರುದ್ರಾಣೀ ಭದ್ರಕಾಲೀ ಜ್ಯೇಷ್ಠಾ ವಾರುಣೀ ಕಾಲೀ ಶಾಂಡಿಕಾ ಕುಹೂ ಸಿನೀವಾಲೀ ಕೂಷ್ಮಾಂಡೀ ರತೀ ಕಾತ್ಯಾಯನೀ ಗೋನಂದಾ ಇವರೆಲ್ಲ ಬಂಧುಬಾಂಧವರಿಂದ ಸಹಿತ ನನ್ನನ್ನು ರಕ್ಷಿಸಲಿ.

**ನಾನಾಭರಣ ವೇಷಾಶ್ಚ ನಾನಾರೂಪಾಂಕಿತಾನನಾಃ ।**
**ನಾನಾದೇಶ ವಿಚಾರಿಣ್ಯೋ ನಾನಾಶಾಸ್ತ್ರೋಪಶೋಭಿತಾಃ ॥ 28 ॥**
**ಮೇದೋ ಮಜ್ಜಾಪ್ರಿಯಾಶ್ಚೈವ ಮದ್ಯಮಾಂಸವಸಾ ಪ್ರಿಯಾಃ ।**
**ಮಾರ್ಜಾರ ದ್ವೀಪಿ ವಕ್ತ್ರಾಶ್ಚ ಗಜ ಸಿಂಹನಿಭಾನನಾಃ ॥ 29 ॥**
**ಪಿಂಗಾಕ್ಷಾ ಪಿಂಗಕೇಶಾಶ್ಚ ತತೋಽನ್ಯಾ ಲೂನಮೂರ್ಧಜಾಃ ।**
**ಊರ್ಧ್ವಕೇಶ್ಯಃ ಕೃಷ್ಣಕೇಶ್ಯಃ ಶ್ವೇತಕೇಶ್ಯಸ್ತಥಾವರಾಃ ।**
**ನಾಗಾಯುತ ಬಲಾಶ್ಚೈವ ವಾಯುವೇಗಾಸ್ತಥಾಪರಾಃ ॥ 30 ॥**
**ಏಕಹಸ್ತಾಃ ಏಕಪಾದಾಃ ಏಕಾಕ್ಷಾಃ ಪಿಂಗಲಾ ಮತಾಃ ।**
**ಬಹುಪುತ್ರಾಲ್ಪಪುತ್ರಾಶ್ಚ ದ್ವಿಪುತ್ರಾಃ ಪುತ್ರಮಂಡಿಕಾಃ ॥ 31 ॥**

ನಾನಾಭರಣ ಧರಿಸಿರುವವರೂ ನಾನಾ ಪ್ರಕಾರ ಚಿತ್ರಗಳನ್ನು ಧರಿಸಿದವರೂ, ನಾನಾದೇಶ ಸಂಚಾರಿಗಳೂ ನಾನಾ ಶಾಸ್ತ್ರಾಧ್ಯಯನ ಮಾಡಿದವರೂ ಮಜ್ಜೆ ಮದ್ಯ ಮಾಂಸ ವಸಾಭಕ್ಷಕರೂ, ಬೆಕ್ಕು ಹುಲಿ ಆನೇ ಸಿಂಹ ಹದ್ದು ರಣಹದ್ದು ಕಾಗೆ ಕ್ರೌಂಚ ಇವೆ ಮೊದಲಾದ ತಲೆ ಹೊಂದಿರುವ ಯಮಭಟರುಗಳೂ, ಸರ್ಪಯಜ್ಞೋಪನೀತಿಗಳೂ, ಚರ್ಮವಸ್ತ್ರಧಾರಿಗಳೂ ಭೇರೀನಾದ ಕಂಠಿಗಳು, ಮಾತ್ಸರ್ಯ ಕ್ರೋಧಾದಿಗಳುಳ್ಳವರೂ ನಿಮಿರಿ ನಿಂತ ಕೂದಲುಳ್ಳವರು, ಕಪ್ಪಾದ

ಕೇಶವುಳ್ಳವರೂ, ಶ್ವೇತಕೇಶಿಗಳೂ ಹತ್ತು ಸಾವಿರ ಆನೆ ಬಲವುಳ್ಳವರೂ, ವಾಯುವೇಗಿಗಳು, ಒಂದು ಕೈಕಾಲು ಕಣ್ಣುಳ್ಳುವರು, ಬಹುಸಂತಾನ-ವುಳ್ಳವರೂ, ಮಿತಸಂತಾನಿಗಳೂ, ಇಬ್ಬರು ಮಕ್ಕಳನ್ನು ಹೊಂದಿದವರೂ, ಮಕ್ಕಳನ್ನು ಅಲಂಕರಿಸುವವರೂ ಮುಖಮುಂಡೀ ಖಿಡಾಲೀ ಪೂತನಾ – ವೇತಾಲೀ ರೇವತೀ ಮೊದಲಾದ ಬಾಲಗ್ರಹಗಳೂ, ಪ್ರಿಯಹಾಸ್ಯರೂ ಪ್ರಿಯಕ್ರೋಧರೂ ಪ್ರಿಯವಸ್ತ್ರಧರಿಸಿದವರೂ ರಾತ್ರಿಂಚರರು ಮೊದಲಾದವರು ನನ್ನನ್ನು ರಕ್ಷಿಸುತ್ತಿರಲಿ.

**ಪಿತಾಮಹ ಮುಖೋದ್ಭೂತಾಃ ರೌದ್ರಾಃ ರುದ್ರಾಂಗ ಸಂಭವಾಃ ।**
**ಕುಮಾರಸ್ವೇದಜಾಶ್ಚೈವ ಜ್ವರಾ ವೈ ವೈಷ್ಣವಾದಯಃ ॥ 32 ॥**
**ನಕ್ತಂಚರಾಃ ಕೇಸರಿಣೋ ದಂಷ್ಟ್ರಿಣಃ ಪ್ರಿಯವಿಗ್ರಹಾಃ ।**
**ಪಿನಾಕ ವಜ್ರ ಮುಸಲ ಬ್ರಹ್ಮದಂಡಾಯುಧ ಪ್ರಿಯಾಃ ॥ 33 ॥**
**ವಾಪೀಕೂಪ ತಡಾಗೇಷು ಸಮುದ್ರೇಷು ಸರಿತ್ಸು ಚ ।**
**ಶ್ಮಶಾನ ಶೈಲ ವೃಕ್ಷೇಷು ಶೂನ್ಯಾಗಾರ ನಿವಾಸಿನಃ ॥ 34 ॥**
**ಏತೇಗ್ರಹಾಶ್ಚ ಸತತಂ ರಕ್ಷಂತು ಮಮ ಸರ್ವತಃ ॥ 35 ॥**

ಬ್ರಹ್ಮದೇವನ ಮುಖದಿಂದ ಜನಿಸಿದವರು, ರುದ್ರ ಅಂಗ ಜನ್ಯರಾದವರು ಸ್ಕಂದದೇವನ ಬೆವರಿನಿಂದ ಹುಟ್ಟಿದವರು ವೈಷ್ಣವ ಶೈವ ಜ್ವರಗಳು. ಮಹಾಭಯಂಕರರು – ಕ್ರೋಧರಹಿತರು, ಕ್ರೂರ ಸ್ವಭಾವ – ಶಾಂತಸ್ವಭಾವದವರು ರಾತ್ರಿಂಚರರು – ಕುತ್ತಿಗೆಯಲ್ಲಿ ಕೂದಲುಳ್ಳವರು, ಕೋರೆಹಲ್ಲುಗಳ್ಳವರೂ, ಜೋತು ಬಿದ್ದಿರುವ ಉದರದವರು, ಕೈಯ್ಯಲ್ಲಿ ಶಕ್ತಿ ಶೂಲ ಪರಿಘ ಪ್ರಾಸ ಗುರಾಣಿ ಪಿನಾಕ ಧನಸ್ಸು, ವಜ್ರ ಮುಸಲಾದಿ ಆಯುಧ ಹೊಂದಿರುವವರು.

ಬ್ರಹ್ಮದಂಡಧಾರಿಗಳು, ಕಮಂಡಲುಧಾರಿಗಳು, ಕರ್ಣಗಳಲ್ಲಿ ಕುಂಡಲ, ಭುಜಗಳಲ್ಲಿ ಕೇಯೂರ, ಧರಿಸಿದವರೂ, ವಿಚಿತ್ರಮಾಲ್ಯಾಂಬರಧಾರಿಗಳೂ ಆನೆ ಒಂಟೆ ಕುದುರೆ ಕರಡಿ ಬೆಕ್ಕು ಸಿಂಹ ಹಂದಿ ಗೂಬೆ ನರಿ ಮೃಗ ಇಲಿ ಮೊದಲಾದ ಪ್ರಾಣಿಮುಖರೂ ರಕ್ಷಿಸಲಿ.

ಹಾಗೆಯೆ ಮಹಾಗಣಪತಿ, ನಂದೀಶ್ವರ ಮಹಾಬಲೀ ಮಹಾಕಾಲ ಲೋಕ ಭಯಂಕರ, ಗೋಪಾಲ ಭೃಂಗರೀಟಿ, ಗಣೇಶ್ವರ ವಾಮದೇವ ಘಂಟಾಕರ್ಣ

ಕಪಾಲೀ ಜಂಭಕ, ಶತ್ರುತಾಪನ – ಸ್ಥೂಣಾಕರ್ಣ ಉಲ್ಕಾಮಾಲೀ ಜ್ವಾಲಾಮಾಲೀ ಮೊದಲಾದ ಇನ್ನೂ ಅನೇಕ ಲಕ್ಷಲಕ್ಷ ಗಣಗಳು ನನ್ನನ್ನು ರಕ್ಷಿಸಲಿ.

ನಾರದರು ಪರ್ವತರು, ಗಂಧರ್ವಾಪ್ಸರಸರು, ಆಧಿವ್ಯಾದಿ ದೇವತೆಗಳು, ಅಗಸ್ತ್ಯ ಗಾಲವ ಗಾರ್ಗ್ಯ ಶಕ್ತಿ, ಧೌಮ್ಯ ಪರಾಶರ, ಕೃಷ್ಣಾತ್ರೇಯ ಅಸಿತ, ದೇವಲ, ಬಲ ಬೃಹಸ್ಪತಿ, ಉತಥ್ಯ, ಮಾರ್ಕಂಡೇಯರು, ವ್ಯಾಸರು, ಜೈಮಿನಿ, ಮಾಠರ ವಿಶ್ವಾಮಿತ್ರ ವಸಿಷ್ಠ ಜೈಮಿನಿಗಳು ಲೋಮಶರು ಉತ್ತಂಕ ರೈಭ್ಯ ಪೌಲೋಮ, ದ್ವಿತ, ತ್ರಿತ ಮೇದಾತಿಥಿ ಯವಕ್ರೀತ ಕುಶಿಕ ಗೌತಮಿ ಸಂವರ್ತ ಋಷ್ಯಶೃಂಗ ಸ್ವಸ್ತ್ಯಾತ್ರೇಯ, ವಿಭಾಂಡಕ ಋಚೀಕ ಜಮದಗ್ನಿ ಔರ್ವ ಭರದ್ವಾಜ ಸ್ಥೂಲಶಿರಸ್ ಕಶ್ಯಪ ಪುಲಹ ಕ್ರತು, ಕಣ್ವ ಅಷ್ಟಾವಕ್ರ ದಧೀಚಿ, ಶ್ವೇತಕೇತು, ಉದ್ದಾಲಕ, ಶೃಂಗೀ ಗೌರಮುಖ ಶಮೀಕ ಇವರೇ ಮೊದಲಾದ ಋಷಿವರ್ಯರು ನನಗೆ ಶಾಂತಿವುಂಟು ಮಾಡುವವರಾಗಲಿ.

ತ್ರಯೋಽಗ್ನಯಃ ತ್ರಯೋ ವೇದಾಃ ತ್ರೈವಿದ್ಯಾಃ ಕೌಸ್ತುಭೋ ಮಣಿಃ ।
ಉಚ್ಚೈಃಶ್ರವಾ ಹಯಃ ಶ್ರೀಮಾನ್ ವೈದ್ಯೋ ಧನ್ವಂತರಿರ್ಹರಿಃ ॥ 36 ॥
ಅಮೃತಂ ಗೌಃ ಸುಪರ್ಣಶ್ಚ ದಧಿ ಗೌರಾಶ್ಚ ಸರ್ಷಪಾಃ ।
ಶುಕ್ಲಾಃ ಸಮನಸಃ ಕನ್ಯಾಃ ಶ್ವೇತಚ್ಛತ್ರಂ ಯವಾಕ್ಷತಾಃ ।
ದೂರ್ವಾ ಹಿರಣ್ಯಂ ಗಂಧಾಶ್ಚ ವಾಲವ್ಯಜನಮೇವ ಚ ॥ 37 ॥
ತಥಾಽಪ್ರತಿಹತಂ ಚಕ್ರಂ ಮಹೋಕ್ಷಶ್ಚಂದನಂ ವಿಷಮ್ ॥ 38 ॥
ಶ್ವೇತೋ ವೃಷಃ ಕರೀ ಮತ್ತಃ ಸಿಂಹೋ ವ್ಯಾಘ್ರೋ ಹಯೋ ಗಿರಃ ।
ಪೃಥಿವೀ ಚೋದ್ಧೃತಾ ಲಾಜಾ ಬ್ರಾಹ್ಮಣಾ ಮಧು ಪಾಯಸಮ್ ।
ಸ್ವಸ್ತಿಕೋ ವರ್ಧಮಾನಶ್ಚ ನಂದ್ಯಾವರ್ತಃ ಪ್ರಿಯಂಗವಃ ॥ 39 ॥
ಶ್ರೀಫಲಂ ಗೋಮಯಂ ಮತ್ಸ್ಯೋ ದುಂದುಭಿಃ ಪಟಹಸ್ವನಃ ।
ಋಷೀಪತ್ನ್ಯಶ್ಚ ಕನ್ಯಾಶ್ಚ ಶ್ರೀಮದ್‌ಭದ್ರಾಸನಂ ಧನುಃ ।
ರೋಚನಾ ರುಚಕಶ್ಚೈವ ನದೀನಾಂ ಸಂಗಮೋದಕಮ್ ॥ 40 ॥
ಸುಪರ್ಣಾಃ ಶತಪತ್ರಾಶ್ಚ ಚಕೋರಾ ಜೀವಜೀವಿಕಾಃ ।
ನಂದೀಮುಖೋ ಮಯೂರಶ್ಚ ಬದ್ಧ ಮುಕ್ತಾಮಣಿಧ್ವಜಾಃ ॥ 41 ॥

**ಆಯುಧಾನಿ ಪ್ರಶಸ್ತಾನಿ ಕಾರ್ಯ ಸಿದ್ಧಕರಾಣಿ ಚ ॥ 42 ॥**

ತ್ರೇತಾಗ್ನಿಗಳು, ತ್ರಯಿ ವೇದಗಳು, ಮೂರು ವಿದ್ಯೆಗಳು, ಬ್ರಹ್ಮಾಭಿಮನ್ಯ ಮಾನವಾದ ಕೌಸ್ತುಭ ಮಣಿಯು, ಉಚ್ಚೈಃಶ್ರವ ಕುದುರೆ, ವೈದ್ಯ ಧನ್ವಂತರಿಯು, ಅವನಿಂದ ತರಲ್ಪಟ್ಟ ಅಮೃತವು, ಕಾಮಧೇನು, ಗರುಡ, ದಧಿ, ಬಿಳಿಸಾಸುವೆ, ಬಿಳಿಕುಸುಮಗಳು, ಕನ್ಯೆಯರು, ಶ್ವೇತಛತ್ರ, ಅಕ್ಷತೆಕಾಳು, ಗರಿಕೆ, ಸುವರ್ಣ ಗಂಧ, ಚಮರ, ಶ್ರೀಹರಿಯ ಚಕ್ರ, ನಂದೀಶ್ವರ, ಚಂದನವೃಕ್ಷ, ವಿಷವು, ಬಿಳಿಎತ್ತು, ಮದ್ದಾನೆ, ಸಿಂಹಹುಲಿ ಕುದುರೆ ಪರ್ವತ ಪೃಥಿವೀ, ಅರಳು, ಬ್ರಾಹ್ಮಣರು, ಮಧು, ಪಾಯಸ, ಸ್ವಸ್ತಿಕ ಚಿಹ್ನೆ ನಂದಿಬಟ್ಟಲು, ಪ್ರಿಯಂಗುಧಾನ್ಯ(ನವಣೆ), ಬಿಲ್ವಪತ್ರೆ, ಶ್ರೀಫಲ ಗೋಮಯ, ಮೀನು, ದುಂದುಭಿ, ಭೇರಿ ತಾಡನ, ಋಷಿ ಪತ್ನಿಯರು, ಋಷಿಕನ್ಯೆಯರು, ಭದ್ರಾಸನ, ಧನಸ್ಸು, ಗೋರೋಚನ, ರುಚಕ (ಮಾದಳ) – ನದಿಸಂಗಮ, ಕಮಲ, ಚಕೋರಪಕ್ಷಿ, ಜೀವಜೀವಕ, ನಂದೀಮುಖ, ಮಯೂರ, ಮುತ್ತುನಿಂದ ಅಲಂಕೃತ ಧ್ವಜ, ಶ್ರೇಷ್ಠ ಆಯುಧಗಳು ಇವುಗಳು ನನ್ನನ್ನು ಸರ್ವದಾ ರಕ್ಷಿಸಲಿ.

**ಪುಣ್ಯಂ ವೈ ವಿಗತ ಕ್ಲೇಶಂ ಶ್ರೀಮದ್ವೈ ಮಂಗಲಾನ್ವಿತಮ್ ।**
**ರಾಮೇಣೋದಾಹೃತಂ ಪೂರ್ಣಮಾಯುಃ ಶ್ರೀಜಯಕಾಂಕ್ಷಿಣಾ ॥ 43 ॥**

**ಯ ಇದಂ ಶ್ರಾವಯೇದ್ ವಿದ್ವಾನ್ ತಥೈವ ಶ್ರುಣುಯಾನ್ನರಃ ।**
**ಮಂಗಲಾಷ್ಟಶತಂ ಸ್ನಾತೋ ಜಪನ್ ಪರ್ವಣಿ ಪರ್ವಣಿ ॥ 44 ॥**

**ವಧ ಬಂಧ ಪರಿಕ್ಲೇಶಂ ವ್ಯಾಧಿಶೋಕ ಪರಾಭವಮ್ ।**
**ನ ಚ ಪ್ರಾಪ್ನೋತಿ ವೈಕಲ್ಯಂ ಪರತ್ರೇಹ ಚ ಶರ್ಮದಮ್ ॥ 45 ॥**

ಹಿಂದೆ ಬಲರಾಮನು ಆಯುರಾರೋಗ್ಯ ವಿಜಯಗಳಿಗಾಗಿ ಈ ಪವಿತ್ರವಾದ ಕ್ಲೇಶಹರ ಸ್ತೋತ್ರ ಪಾರಾಯಣ ಮಾಡಿದ್ದನು. ಇದನ್ನು ಪರ್ವಕಾಲಗಳಲ್ಲಿ ಸ್ನಾನ ಮಾಡಿ ಶೂಚಿರ್ಭೂತನಾದ ಪುರುಷನು ನೂರೆಂಟು ಬಾರಿ ಪಠಿಸುವುದು ಅಥವಾ ಶ್ರವಣ ಮಾಡುವುದನ್ನು ಮಾಡಿದರೆ ವಧ, ಬದ್ಧನು ಮುಕ್ತನಾಗುವನು, ವಧ ಭಯದಿಂದ ಪಾರಾಗುವನು. ವ್ಯಾಧಿಯ ನಿಮಿತ್ತ ಶೋಕವಾಗಲಿ ಇರುವುದಿಲ್ಲ. ಎಂದೂ ವೈಕಲ್ಯ ಹೊಂದಲಾರ. ಇಹ-ಪರಗಳೆರಡರಲ್ಲೂ ಭುಕ್ತಿಮುಕ್ತಿ ನೀಡುವುದು.

ಇದು ಧನ್ಯತೆ ಯಶಸ್ಸು ಆಯುಷ್ಯ ನೀಡುವುದು. ಇದೊಂದು ನಮಕ ಚಮಕದ

ಅರ್ಥಾನುವಾದವಾಗಿದೆ. ಸ್ವರ್ಗಪ್ರದವೂ ಪುಣ್ಯಪ್ರದವೂ ಸಂತಾನ ನೀಡುವುದೂ ಆಗಿದೆ. ಮೇಧಾಶಕ್ತಿ ಜನಕವೂ ಸರ್ವರೋಗ ಪ್ರಶಮನವೂ ತಮ್ಮ ಕೀರ್ತಿ ಪತಾಕೆಯನ್ನು ದಿಗಂತರ ವ್ಯಾಪಿಸುವಂತೆ ಮಾಡುತ್ತದೆ.

**ಶ್ರದ್ದಧಾನೋ ದಯೋಪೇತೋ ಯಃ ಪಠೇದಾತ್ಮವಾನ್ ನರಃ ।**
**ಸರ್ವಪಾಪ ವಿಶುದ್ಧಾತ್ಮಾ ಲಭತೇ ಚ ಶುಭಾಂ ಗತಿಮ್ ॥ 46 ॥**

ದಯಾಮಯನಾದ ವ್ಯಕ್ತಿಯು ಇದನ್ನು ಶ್ರದ್ಧೆಯಿಂದ ಪಠಿಸಿದ್ದಾದರೆ ಅವನು ಸಮಸ್ತ ಪಾಪಗಳನ್ನು ಕಳೆದುಕೊಂಡು ವಿಶುದ್ಧಾತ್ಮನಾಗಿ ಶುಭಗತಿಯನ್ನು ಹೊಂದುವನು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ**
**ಬಲರಾಮನಿಂದ ಪ್ರದ್ಯುಮ್ನನಿಗೆ ಆಹ್ನಿಕಸ್ತೋತ್ರ ಉಪದೇಶವೆಂಬಲ್ಲಿ**
**ನೂರೊಂಭತ್ತನೆಯ ಅಧ್ಯಾಯ ಸಮಾಪ್ತಿ**

## ಅಥ ದಶಾಧಿಕಶತತಮೋಽಧ್ಯಾಯಃ

### ಸಾಂಬನ ಉತ್ಪತ್ತಿ – ವಿದ್ಯಾಭ್ಯಾಸ – ಕೃಷ್ಣಮಹಿಮೆ

*ವೈಶಂಪಾಯನ ಉವಾಚ –*

**ಹೃತೋ ಯದೈವ ಪ್ರದ್ಯುಮ್ನಃ ಶಂಭರೇಣಾತ್ಮಘಾತಿನಾ ।**
**ಮಾಸೇಽಸ್ಮಿನ್ನೇವ ಸಾಂಬಸ್ತು ಜಾಂಬವತ್ಯಾಮಜಾಯತ ॥ 1 ॥**

**ಬಾಲ್ಯಾತ್ ಪ್ರಭೃತಿ ರಾಮೇಣ ಶಸ್ತ್ರೇಷು ವಿನಿಯೋಜಿತಃ ।**
**ರಾಮಾದನಂತರಶ್ಚೈವ ಮಾನಿತಃ ಸರ್ವವೃಷ್ಣಿಭಿಃ ॥ 2 ॥**

**ಜಾತಮಾತ್ರೇ ತತಃ ಕೃಷ್ಣಃ ಶುಭಾಂ ತಾಮವಸತ್ ಪುರೀಮ್ ।**
**ನಿಹಿತಾಮಿತ್ರ ಸಾಮಂತಃ ಶಕ್ರೋದ್ಯಾನಂ ಯಥಾಮರಃ ॥ 3 ॥**

ಯಾವಾಗ ಹರಿದ್ವೇಷಿ ಶಂಬರಾಸುರನು ಪ್ರದ್ಯುಮ್ನನನ್ನು ಅಪಹರಿಸಿಕೊಂಡು ಹೋದನೋ ಅದೇ ತಿಂಗಳಲ್ಲಿಯೇ ಶ್ರೀಕೃಷ್ಣನ ಮತ್ತೊಬ್ಬ ಪತ್ನಿಯಾದ ಜಾಂಬವತಿಯು ಸಾಂಬನಿಗೆ ಜನ್ಮವಿತ್ತಳು.

ಬಾಲ್ಯದಿಂದಲೇ ಆ ಮಗುವಿಗೆ ಬಲರಾಮದೇವನು ಅಸ್ತ್ರ-ಶಸ್ತ್ರಾದಿಗಳ ತರಬೇತು ನೀಡಿದನು. ಇದರಿಂದಾಗಿ ಸಾಂಬನು ಅದ್ವಿತೀಯನಾಗಿ ಬಲರಾಮನ ನಂತರ ಸಾಂಬನೇ ಅಸ್ತ್ರಶಸ್ತ್ರ ಪಾರಂಗನೆಂದು ಸರ್ವ ಯಾದವರಿಂದಲೂ ಮಾನಿತನಾಗಿದ್ದನು.

ಸಾಂಬನು ಜನಿಸಿದ ನಂತರ ಶ್ರೀಕೃಷ್ಣನು ತನಗೆ ಶತ್ರುಗಳಾದ ಸಾಮಂತ ರಾಜರೆಲ್ಲರನ್ನೂ ನಿಗ್ರಹಿಸಿ, ಇಂದ್ರನು ನಂದನವನದಲ್ಲಿರುವಂತೆ ದ್ವಾರಕೆಯಲ್ಲಿ ವಾಸಿಸುತ್ತಿದ್ದನು.

ಇಂದ್ರದೇವನೂ ಸಹ ಯಾದವರ ಐಶ್ವರ್ಯವನ್ನು ನೋಡಿ, ತನ್ನ ಸಂಪತ್ತನ್ನು ದ್ವೇಷಿಸತೊಡಗಿದನು. ಶ್ರೀಕೃಷ್ಣನ ಭಯದಿಂದಾಗಿ ಆಗಿನ ಕಾಲದ ರಾಜರೆಲ್ಲರ ಮನಸ್ಸಿನಲ್ಲಿಯೂ ಶಾಂತಿಯಿರುವುದಿಲ್ಲ.

**ಕಸ್ಯಚಿತ್ ತ್ವಥ ಕಾಲಸ್ಯ ಪುರೇ ವಾರಣಸಾಹ್ವಯೇ ।**
**ದುರ್ಯೋಧನಸ್ಯ ಯಜ್ಞೇ ವೈ ಸಮೀಯುಃ ಸರ್ವಪಾರ್ಥಿವಾಃ ॥ 4 ॥**
**ತಾಂ ಶ್ರುತ್ವಾಮಾಧವೀಂ ಲಕ್ಷ್ಮೀಂ ಸಪುತ್ರಂ ಚ ಜನಾರ್ದನಮ್ ।**
**ಪುರೀಂ ದ್ವಾರಾವತೀಂ ಚೈವ ನಿವಿಷ್ಟಾಂ ಸಾಗರಾಂತರೇ ॥ 5 ॥**
**ಶ್ರಿಯಂ ದ್ರುಷ್ಟುಂ ಹೃಷೀಕೇಶಮಾಜಗ್ಮುಃ ಕೃಷ್ಣಮಂದಿರಮ್ ॥ 6 ॥**

ಒಂದು ಬಾರಿ ಹಸ್ತಿನಾವತಿಯಲ್ಲಿ ದುರ್ಯೋಧನನು ಒಂದು ಯಜ್ಞ ಮಾಡಲುಪಕ್ರಮಿಸಿ ಭೂಮಂಡಲದ ರಾಜಾಧಿರಾಜರೆಲ್ಲರನ್ನೂ ಆಹ್ವಾನಿಸಿದ್ದನು. ಇದಕ್ಕಾಗಿ ಬಂದು ನೆರೆದಿದ್ದ ಅವರೆಲ್ಲರೂ ದ್ವಾರಕೆಯಲ್ಲಿ ಅಪಾರಸಂಪತ್ತು ತುಂಬಿ ಹೋಗಿದ್ದ ವಿಚಾರ ಕೇಳಿ ತಿಳಿದರು. ಹಾಗೂ ಪುತ್ರರಿಂದ ಸಹಿತನಾದ ಶ್ರೀಕೃಷ್ಣನು ದ್ವಾರಕೆಯ ಸಮುದ್ರದಲ್ಲಿ ಹೇಗಿರುವನೆಂದು ನೋಡಬೇಕೆಂದು ಕುತೂಹಲ ಹೊಂದಿ ತಮ್ಮ ಆಕಾಂಕ್ಷೆಯನ್ನು ದೂತನ ಮೂಲಕ ಶ್ರೀಕೃಷ್ಣನಿಗೆ ತಿಳಿಸಿ, ಅವನ ಅನುಮತಿ ನೀಡಿದ ಮೇಲೆ ದ್ವಾರಕೆಯಲ್ಲಿರುವ ದಿವ್ಯ ಮಂದಿರಕ್ಕೆ ಬಂದರು.

**ದುರ್ಯೋಧನ ಮುಖಾಃ ಸರ್ವೇ ಧೃತರಾಷ್ಟ್ರವಶಾನುಗಾಃ ।**
**ಪಾಂಡವ ಪ್ರಮುಖಾಶ್ಚೈವ ಧೃಷ್ಟದ್ಯುಮ್ನಾದಯೋ ನೃಪಾಃ ॥ 7 ॥**
**ಪಾಂಡ್ಯಾಶ್ಚೋಲ ಕಲಿಂಗೇಶಾಃ ಬಾಹ್ಲಿಕಾಃ ದ್ರಾವಿಡಾ ಖಶಾಃ ।**
**ಅಕ್ಷೌಹಿಣೀ ಪ್ರಕರ್ಷಂತೋ ದಶ ಚಾಷ್ಟೌ ಚ ಭೂಮಿಪಾಃ ॥ 8 ॥**

ಧೃತರಾಷ್ಟ್ರನ ಅಧೀನರಾದ ದುರ್ಯೋಧನಾದಿಗಳು, ಪಾಂಡವರೇ ಮೊದಲಾದವರು, ಪಾಂಡ್ಯರು, ಚೋಲ, ಕಲಿಂಗರು, ಬಾಹ್ಲಿಕ, ದ್ರಾವಿಡರು, ಖಶನಾಯಕರೂ – ಹದಿನೆಂಟು ಅಕ್ಷೌಹಿಣೀ ಅಧಿಪತಿಯಾದ ಶ್ರೀಕೃಷ್ಣನಿಂದ ಪರಿಪಾಲಿಸಲ್ಪಟ್ಟ ದ್ವಾರಕೆಗೆ ಬಂದರು.

**ತೇ ಪರ್ವತಂ ರೈವತಕಂ ಪರಿವಾರ್ಯಾವನೀಶ್ವರಾಃ ।**
**ವಿವಿಶುಃ ಯೋಜನಾಖ್ಯಾಸು ಸ್ವಾಸು ಸ್ವಾಸು ಚ ಭೂಮಿಷು ॥ 9 ॥**

**ಸ ತೇಷಾಂ ನರದೇವಾನಾಂ ಮಧ್ಯಸ್ಥೋ ಮಧುಸೂದನಃ ।**
**ವ್ಯರಾಜತ ಯದುಶ್ರೇಷ್ಠಃ ಶರದೀವ ದಿವಾಕರಃ ॥ 10 ॥**

**ಸ ತತ್ರ ಸಮುದಾಚಾರಂ ಯಥಾಸ್ಥಾನಂ ಯಥಾವಯಃ ।**
**ಕೃತ್ವಾ ಸಿಂಹಾಸನೇ ಕೃಷ್ಣಃ ಕಾಂಚನೇ ನಿಷಸಾದ ಹ ॥ 11 ॥**

ಯದುಪುರಿಗೆ ಬಂದಿದ್ದ ರಾಜ ಮಹಾರಾಜರೆಲ್ಲರೂ ದ್ವಾರಕೆಯ ಹತ್ತಿರವಿರುವ 'ರೈವತಕ' ಪರ್ವತದ ಸುತ್ತಲೂ ಚತುರ್ದಿಕ್ಕುಗಳಲ್ಲಿ ತಮಗಾಗಿ ನಿರ್ದಿಷ್ಟ ಒಂದು ಯೋಜನ ವಿಶಾಲ ಭೂ ಪ್ರದೇಶಗಳಲ್ಲಿರುವ ವಸತಿ ಗೃಹಗಳಲ್ಲಿ ಪ್ರವೇಶಿಸಿದರು. ರಾಜರೆಲ್ಲರೂ ಬಂದಿರುವುದನ್ನು ಕಂಡು ಕಮಲಾಕ್ಷನು ಸಮಸ್ತ ಯಾದವರೊಂದಿಗೆ ಕೂಡಿ ರಾಜರ ಬಳಿಗೆ ಹೋದನು. ಅವನು ಕಾಂತಿಯಿಂದ ಶರತ್ಕಾಲದ ಸೂರ್ಯನಂತೆ ಬೆಳಗಿದನು [**ಶರದೀವ ದಿವಾಕರಃ**].

ನಂತರ ಆ ರಾಜರೆಲ್ಲರ ಯೋಗ್ಯತೆ ವಯಸ್ಸಿಗೆ ತಕ್ಕಂತೆ ಅವರೆಲ್ಲರನ್ನೂ ಗೌರವಿಸಿದನು. ತಾನೂ ಸುವರ್ಣಮಯ ಸಿಂಹಾಸನವನ್ನಲಂಕರಿಸಿದನು. ಶ್ರೀಕೃಷ್ಣ ಕೂತ ನಂತರ ರಾಜರುಗಳೂ ತಮ್ಮ ತಮ್ಮ ಆಸನಗಳಲ್ಲಿ ಆಸೀನರಾದರು.

ಈ ಸಭೆಯು ಈ ಸಮಯದಲ್ಲಿ ದೇವಾಸುರನ್ನೊಳಗೊಂಡ ಬ್ರಹ್ಮದೇವನ ಸಭೆಯಂತೆ ಕಂಗೊಳಸಿತು. [**ಸದಸಿ ಬ್ರಹ್ಮಣೋ ಯಥಾ**]

ರಾಜಾಧಿರಾಜರ, ಯಾದವರ ಚಿತ್ರವಿಚಿತವಾದ ಮಾತುಗಳು ಶ್ರೀಕೃಷ್ಣನು ಕೇಳುತ್ತಿರುವಂತೆ ಕೇಳ ಬರುತ್ತಿದ್ದವು. ಇದೇ ಸಮಯದಲ್ಲಿಯೇ ಮೇಘರವದಂತೆ ವಾಯುವು ಜೋರಾಗಿ ಬೀಸುತ್ತಾ ಮಿಂಚು ಗುಡುಗು ಸಿಡಿಲುಗಳಿಂದಲೂ ಯುಕ್ತವಾದದ್ದಾಗಿ ಮೇಘಚ್ಛನ್ನದಿನದಂತೆ ಕಂಡು ಬಂದಿತು.

### ನಾರದರ ಆಗಮನ

**ತದ್ ದುರ್ದಿನತಲಂ ಭಿತ್ವಾ ನಾರದಃ ಪ್ರತ್ಯದೃಶ್ಯತ ।**
**ಸಂವೇಷ್ಟಿತ ಜಟಾಭಾರಃ ವೀಣಾಸಕ್ತೇನ ಬಾಹುನಾ ॥ 12 ॥**

**ನಾರದೋಽಗ್ನಿಶಿಖಾಕಾರಃ ಶ್ರೀಮಾನ್ ಶಕ್ರ ಸಖೋ ಮುನಿಃ ।**
**ತದದ್ಭುತಂ ಮಹಾಮೇಘಂ ವ್ಯಪಾಕೃಷ್ಯತ ದುರ್ದಿನಮ್ ॥ 13 ॥**

**ಆಸನಸ್ಥಂ ಯದುಶ್ರೇಷ್ಠ ಮುವಾಚ ಮುನಿರವ್ಯಯಮ್ ॥ 14 ॥**

ಈ ದುರ್ದಿನದಂತೆ ಮಾಡುತ್ತಿದ್ದ ಮೇಘಗಳ ಮಧ್ಯದಲ್ಲಿ ನಾರದರು ಕಂಡುಬಂದರು. ತಲೆಯಲ್ಲಿ ಸಿರಿಮುಡಿ ಜಟೆ, ಕೈಯ್ಯಲ್ಲಿ ಮಹತೀ ವೀಣೆ ನುಡಿಸುತ್ತಾ, ಸಮುದ್ರದಂತೆ ಗಂಭೀರ ಮುಖ ಮುದ್ರೆ, ಅಗ್ನಿಜ್ವಾಲೆಯಂತೆ ದುರ್ದರ್ಷರೂ, ಇಂದ್ರದೇವನ ಮಿತ್ರರೂ ಆದ ನಾರದರು ರಾಜಸಭೆಯ ಮಧ್ಯದಲ್ಲಿ ಗಗನತಲದಿಂದ ಇಳಿದು ಬಂದರು.

ನಾರದರು ಭೂಮಿಗೆ ಬರುತ್ತಲೇ ದುರ್ದಿನ ಹೋಗಿ ಸುದಿನವಾಯಿತು. ನಾರದರು ರಾಜರ ಮಧ್ಯಭಾಗಕ್ಕೆ ಬಂದು ಸಿಂಹಾಸನದಲ್ಲಿ ಆಸೀನನಾಗಿದ್ದ ಕಮಲಾಸನ ಪಿತನಾದ ನಾಶರಹಿತ ಶ್ರೀಕೃಷ್ಣನಿಗೆ ಹೀಗೆ ಹೇಳಿದನು.

## ಧನ್ಯಾಶ್ಚರ್ಯ ವೃತ್ತಾಂತ

**ಆಶ್ಚರ್ಯಂ ಖಲು ದೇವಾನಾಮೇಕಸ್ತ್ವಂ ಪುರುಷೋತ್ತಮಃ ।**
**ಧನ್ಯಶ್ಚಾನ ಮಹಾಬಾಹೋ ಲೋಕೇ ನಾನ್ಯೋಽಸ್ತಿ ಕಶ್ಚನ ॥ 15 ॥**
**ಏವಮುಕ್ತಃ ಸ್ಮಿತಂ ಕೃತ್ವಾ ಪ್ರತ್ಯುವಾಚ ಮುನಿಂ ಪ್ರಭುಃ ।**
**ಆಶ್ಚರ್ಯಶ್ಚೈವ ಧನ್ಯಶ್ಚ ದಕ್ಷಿಣಾಭಿಃ ಸಹೇತ್ಯಹಮ್ ॥ 16 ॥**

ಮಹಾಬಾಹುವಾದ ಕೃಷ್ಣನೇ! ದೇವತೆಗಳಲ್ಲಿ ನೀನೊಬ್ಬನೆ ಪುರುಷೋತ್ತಮ–ನಾಗಿರುವೆ. ನಿನಗೆ ಸಮಾನರು ಯಾರೂ ಇಲ್ಲ. ಇದರಿಂದಾಗಿ ನೀನೇ ಆಶ್ಚರ್ಯ! ನೀನೇ ಧನ್ಯನು' ಎಂದು ಎರಡು ಪದಗಳಿಂದ ನಾರದರು ಕೃಷ್ಣನಿಗೆ ಹೇಳಿದಾಗ ಶ್ರೀಕೃಷ್ಣನು ದಕ್ಷಿಣಾದೇವಿಯೆನಿಸಿದ ಈ ರುಕ್ಮಿಣಿಯೊಂದಿಗೂ ಸಹ ನಾನು ಆಶ್ಚರ್ಯ ಹಾಗೂ ಧನ್ಯನೆಂದನು.[1]

---

1. 1) **ಏವಂ ಕೃಷ್ಣೇ ದ್ವಾರಕಾ ಮಧ್ಯಸಂಸ್ಥೇ ಗಿರಿಂ ಭೂಪಾಃ ರೈವತಕಂ ಸಮಾಯಯುಃ। ದುರ್ಯೋಧನಾದ್ಯಾಃ ಪಾಂಡವಾಶ್ಚೈವ ಸರ್ವೇ ನಾನಾದೇಶ್ಯಾ ಯೇ ಚ ಭೂ ಪಾಲ ॥**
– *ಸಂಜ್ಞಾಃ*
ದ್ವಾರಕೆಯ ಪೂರ್ವಾದಿ ನಾಲ್ಕೂ ದಿಕ್ಕುಗಳಲ್ಲಿ ರೈವತಕ, ಲತಾವೇಷ್ಟ, ಸುರಕ್ಷ, ವೇಣುಮಂತಗಳೆಂಬ ನಾಲ್ಕು ಕ್ರೀಡಾಪರ್ವತಗಳಿದ್ದವು. ಪೂರ್ವದ ರೈವತಕ ಶ್ರೇಷ್ಠವಾದದ್ದು.
2) ಈ ಪರ್ವತ ಋತವಾಗ್‌ಯೆಂಬ ಮುನಿಯ ಶಾಪದಿಂದ ರೇವತೀ ನಕ್ಷತ್ರ ಇಲ್ಲಿ ಬಿದ್ದಿದ್ದರಿಂದ ರೈವತವೆಂದಾಯಿತು. ಈ ಪರ್ವತವು ಈಗ ಗುಜರಾತಿನ ಜುನಾಗಡವೆಂಬಲ್ಲಿರುವ **'ಗಿರ್ನಾರ್ ಪರ್ವತ'** ರೈವತವೆಂದೂ ಕರೆಯುವರು.
3) ಆಶ್ಚರ್ಯ ಧನ್ಯಯೆಂದರೆ – **ಆ = ಸಮಂತಾತ್**, ಎಲ್ಲೆಡೆಯಿಂದಲೂ, **ಶ್ಚರ್ಯಾಃ**

**ಕೃಷ್ಣ ಪರ್ಯಾಪ್ತವಾಕ್ಯೋಽಸ್ಮಿ ಗಮಿಷ್ಯಾಮಿ ಯಥಾಗತಮ್ ।**
**ಗುಹ್ಯಂ ಮಂತ್ರಮಜಾನಂತೋ ವಚನಂ ನಾರದೇರಿತಮ್ ॥ 17 ॥**

**ಆಶ್ಚರ್ಯಮಿತ್ಯಭಿಹಿತಂ ಧನ್ಯೋಽಸ್ಮೀತಿ ಚ ಮಾಧವ ।**
**ದಕ್ಷಿಣಾಭಿಃ ಸಹೇತ್ಯೇವಂ ಪ್ರಯುಕ್ತೇಽಪಿ ಚ ನಾರದೇ ॥ 18 ॥**

**ಕಿಮೇತನ್ನಾಭಿಜಾನೀಮೋ ದಿವ್ಯಂ ಮಂತ್ರಪದಂ ಮಹತ್ ॥ 19 ॥**

ಶ್ರೀಕೃಷ್ಣನು ಹೀಗೆ ಹೇಳುತ್ತಿರಲು ನಾರದರು ಶ್ರೀಕೃಷ್ಣನನ್ನು ಕುರಿತು ನನಗೆ ಬೇಕಾದ ಉತ್ತರ ಲಭಿಸಿದೆ. ನಾನು ಹೋಗಿ ಬರುತ್ತೇನೆ ಎಂದಾಗ ನಾರದರಾಡಿದ ಮಂತ್ರದಂತಹ ಮಾತಿನ ಅಭಿಪ್ರಾಯ ತಿಳಿಯಲಾರದ ನೆರೆದಿದ್ದ ರಾಜರುಗಳು – ಶ್ರೀಕೃಷ್ಣನೇ! ನಾರದರು ನಿನ್ನನ್ನು ಆಶ್ಚರ್ಯ ಧನ್ಯ ಎಂದರು. ನೀನಾದರೂ ದಕ್ಷಿಣಾಭಿ ಸಾಕು ಎಂದೆ. ಈ ಒಗಟಿನ ಅರ್ಥ ನಮಗೆ ತಿಳಿಯಲಿಲ್ಲ. ಇದರರ್ಥ ನಾವು ತಿಳಿಯಲು ಯೋಗ್ಯವಾಗಿದ್ದರೆ ಅದರ ಗೂಢಾರ್ಥವನ್ನು ನಮಗೆ ತಿಳಿಸು ಎಂದು.

ರಾಜರುಗಳು ಹೀಗೆ ಪ್ರಾರ್ಥಿಸಲು ಕೃಷ್ಣನು – ರಾಜೇಂದ್ರರೇ! ನೀವು ಇದರರ್ಥ ತಿಳಿಯಲಿಚ್ಛಿಸಿದರೆ ನಾರದರೆ ಇದನ್ನು ವಿವರಿಸುವರು ಎಂದು ಹೇಳಿ, ನಾರದರಿಗೆ ಇದರರ್ಥ ತಿಳಿಸಿ ಎಂದನು.

*ನಾರದ ಉವಾಚ –*

**ಶ್ರೋಯತಾಂ ಭೋ ನೃಪಶ್ರೇಷ್ಠಾಃ ಯಾವಂತಃ ಸ್ಥ ಸಮಾಗತಾಃ ।**
**ಅಸ್ಯ ಕೃಷ್ಣಸ್ಯ ಮಹತೋ ಯಥಾ ಪಾರಮಹಂ ಗತಃ ॥ 20 ॥**

---

= ಸುಖ ಲಾಭಕ್ಕಾಗಿ ಪ್ರಯತ್ನ ಮಾಡುವ ಜೀವರು. ಅವರನ್ನು ಪ್ರವರ್ತಿಸುವವನೇ ಆಶ್ಚರ್ಯನು.
**ಧನ್ಯನೆಂದರೆ – ಧ** = ಜಗತ್ತನ್ನೆ ತಮ್ಮ ಅಂಕೆಯಲ್ಲಿಟ್ಟುಕೊಂಡು ಧರಿಸುವ ಇತರ ದೇವತೆಗಳನ್ನು, **ನಿ** = ಚೆನ್ನಾಗಿ, **ಯ** = ದೂರ ತೊಲಗಿಸುವುದರಿಂದ ಧನ್ಯನು. ಶ್ರೀಕೃಷ್ಣನಾದರೂ ದಕ್ಷಭಾಗದಲ್ಲಿ ಸ್ವಾಮಿಯಿಂದ ಕೂಡಿರುವುದರಿಂದ ದಕ್ಷಿಣಾ–ನಾಮಕಳಾದ ರುಕ್ಮಿಣೀಯಿಂದ ಕೂಡಿಯೇ ನಾನು ಆಶ್ಚರ್ಯ ಧನ್ಯನು. ಈ ನನ್ನ ರುಗ್ಮಿಣೀ ರೂಪಳಾದ ರಮಾದೇವಿಯೂ ಬ್ರಹ್ಮಾದಿಗಳಿಗಿಂತ ಉತ್ತಮಳು ಹಾಗೂ ಧನ್ಯಳು. ಆಗಿರುವುದು ಆಶ್ಚರ್ಯಳು ಧನ್ಯಳೆಂದನು.
**ಇತ್ಯಾಶ್ಚರ್ಯೋ ಧನ್ಯ ಇತ್ಯೇವ ಶಬ್ದದ್ವಯೇ ತೂಕ್ತೇ ವಾಸುದೇವಸ್ತಮಾಹ ।**
**ದಕ್ಷಿಣಾಭಿಸ್ಸಾಕಂ ಇತ್ಯೇವ ಕೃಷ್ಣಂ ಪಪ್ರಚ್ಛುರೇತತ್ ಕಿಮಿತಿ ವದೇತಿಃ** ॥ –*ತಾ.ನಿ.20/65*

4) **ನಾರಾಯಣೋ ಮುನಿಮೂಚೇ ವದೇತಿ ಶೃಣುಧ್ವಮಿತ್ಯಾಹ ಸ ನಾರದೋಽಪಿ** ॥

**ಅಹಂ ಕದಾಚಿದ್ ಗಂಗಾಯಾಸ್ತೀರೆ ತ್ರಿಷವಣಾತಿಥಿಃ ।**
**ಚರಾಮ್ಯೇಕಃ ಕ್ಷಪಾಪಾಯೇ ದೃಶ್ಯಮಾನೇ ದಿವಾಕರೇ ॥ 21 ॥**
**ಅಪಶ್ಯಂ ಗಿರಿಕೂಟಾಭಂ ಕಪಾಲದ್ವಯದೇಹಿನಮ್ ।**
**ಮಮ ಏಣಾಕೃತಿಂ ಕೂರ್ಮಂ ಗಜಚರ್ಮಚಯೋಪಮ್ ॥ 22 ॥**
**ಸೋಽಹಂ ತಂ ಪಾಣಿನಾ ಸ್ಪೃಷ್ಟ್ವಾ ಪ್ರೋಕ್ತವಾನ್ ಜಲಚಾರಿಣಮ್ ।**
**ತ್ವಮಾಶ್ಚರ್ಯ ಶರೀರೋಽಸಿ ಕೂರ್ಮ! ಧನ್ಯೋಽಸಿ ಮೇ ಮತಃ ॥ 23 ॥**

ನಾರದರೆ! ನೀವು ನನಗೆ ಹೇಳಿದ ಮಾತನ್ನು, ಆ ಮಾತಿಗೆ ಪ್ರತಿಯಾಗಿ ಹೇಳಿದ ಉತ್ತರವನ್ನೂ ಅದರ ಅಂತರಾಭಿಪ್ರಾಯವನ್ನು ಈ ರಾಜರಿಗೆ ತಿಳಿಸಿ ಎಂದಾಗ, ನಾರದರು – ರಾಜರೇ! ಕೇಳಿರಿ, ತ್ರಿಷವಣ ಸ್ನಾನದ ಆಚಾರವ್ರತವುಳ್ಳ ನಾನೊಂದು ದಿನ ಗಂಗಾನದಿಯ ತೀರದಲ್ಲಿ ಏಕಾಂಗಿಯಾಗಿ ಸಂಚರಿಸುತ್ತಿದ್ದೆ. ಒಂದು ದಿನ ರಾತ್ರಿಯು ಕಳೆಯುತ್ತಿರುವ ಸಮಯ ಪ್ರಾತಃಕಾಲದಲ್ಲಿ ಒಂದು ಬೃಹದಾಕಾರದ ಕೂರ್ಮವನ್ನು ನೋಡಿದೆನು. ಅದಾದರೂ ಪರ್ವತ ಸದೃಶ ದೇಹ, ನಾಲ್ಕು ಕಾಲುಗಳು, ನೀರಿನಿಂದ ಆರ್ದ್ರವಾದ ಪಾದಗಳು ಎರಡು ಯೋಜನ ಉದ್ದವಾಗಿತ್ತು.

ನಾನು ಅದನ್ನು ಮುಟ್ಟಿ ನೀನು ಆಶ್ಚರ್ಯವುಂಟು ಮಾಡುವ ಶರೀರ ಹೊಂದಿರುವೆ. ನೀನೇ ಧನ್ಯನೆಂದು ನನ್ನ ಅಭಿಪ್ರಾಯ ಕೂರ್ಮರಾಜನೇ! ನೀನು ಎರಡು ಕಪಾಲಗಳ ಸಂಯೋಜನೆಯಂತಿದ್ದು ಅಭೇದ್ಯ ಕವಚ ಹೊಂದಿದ್ದು ನಿರ್ಭಯದಿಂದ ಸಂಚರಿಸುವೆಯಲ್ಲವೆ? ಇದರಿಂದಾಗಿ ನೀನೇ ಆಶ್ಚರ್ಯ ಧನ್ಯನು ಎಂದರು.[2]

---

2. **ಕೂರ್ಮೋ ದೃಷ್ಟಃ ವಿಷ್ಣುಪದ್ಯಾಂ ಮಯೋಕ್ತಃ ತ್ವಮುತ್ತಮೋ ನಾಸ್ತಿ ಸಮಸ್ತಮೇತಿ। ಊಚೇ ಗಂಗಾಮುತ್ತಮಾಂ ಸಾ ಜಲೇಶ ಮುಮಾಮೂಚೇ ಪೃಥಿವೀ ನಮಿಕಾಂ ಸಃ ॥** ನಾರದರು ಗಂಗೆಯಲ್ಲಿದ್ದ ಮಹಾಕೂರ್ಮ ನೋಡಿ ನೀನು ಉತ್ತಮನು, ನಿನಗೆ ಸಮರಾರಿಲ್ಲ ಎಂದರು. ಅದು ನನಗಿಂತ ನನಗೆ ಆಶ್ರಯ ನೀಡಿದ ಗಂಗೆಯೇ ಶ್ರೇಷ್ಠಳೆಂದಿತು. ಗಂಗೆಯು ತನ್ನ ಪತಿ ವರುಣನು ಉತ್ತಮ ಎಂದಳು. ವರುಣನು ಪೃಥಿವೀ ಉತ್ತಮಳೆಂದನು. ಪೃಥಿವೀಯೆಂದರೆ ಪ್ರಸಿದ್ಧಳಾದ್ದರಿಂದ ಪೃಥಿವೀನಾಮಕ ಉಮಾದೇವಿಯು.
ನಾರದರು ಕೂರ್ಮನನ್ನು ಆಶ್ಚರ್ಯ ಧನ್ಯನೆಂದರೆ, ನಿನ್ನ ಕೆಳಗಡೆ ಇರುವವರಿಗಿಂತಲೂ ನೀನು ಉತ್ತಮನೆಂದೆ ನಾರದರ ಅಭಿಪ್ರಾಯ ಕೂರ್ಮನಾದರೂ ಗಂಗೆಗಿಂತಲೂ ಅವರನಾದ ಪುಷ್ಕರನೆಂಬ ಕರ್ಮಾಭಿಮಾನಿಯು.

**ಸ ಮಾಮುವಾಚಾಂಬುಸರಃ ಕೂರ್ಮೋ ಮಾನುಷವತ್ ಸ್ವಯಮ್ ।**
**ಕಿಮಾಶ್ಚರ್ಯಂ ಮಯಿ ಮುನೇ ಧನ್ಯಶ್ಚಾಹಂ ಕಥಂ ವಿಭೋ ॥ 24 ॥**
**ಗಂಗೇಯಂ ನಿಮ್ನಗಾ ಧನ್ಯಾ ಕಿಮಾಶ್ಚರ್ಯಮತಃ ಪರಮ್ ।**
**ಯತ್ರಾಹಮಿವ ಸತ್ವಾನಿ ಚರಂತ್ಯಯುತಶೋ ದ್ವಿಜಃ ॥ 25 ॥**

ನನ್ನ ಮಾತನ್ನು ಕೇಳದ ನೀರಿನಲ್ಲಿ ಸಂಚಾರ ಮಾಡುವ ಕೂರ್ಮವು ಮನುಷ್ಯರಂತೆ ಮಾತನಾಡುತ್ತಾ ನನ್ನನ್ನೆ ಪ್ರಶ್ನಿಸಿತು.

ನಾರದರೇ! ನನ್ನಲ್ಲಿ ಆಶ್ಚರ್ಯವುಂಟು ಮಾಡುವ ಸಂಗತಿ ಏನಿದೆ? ಈ ಗಂಗಾನದಿಯಾದರೂ ನನ್ನಂತಹ ಸಾವಿರಾರು ಜಲಚರಗಳಿಗೆ ಆಶ್ರಯ ನೀಡಿರುವಳು. ಅವಳು ನಿಜವಾಗಿಯೂ ಆಶ್ಚರ್ಯಳು ಧನ್ಯಳೆಂದಿತು.

**ಸೋಽಹಂ ಕುತೂಹಲಾವಿಷ್ಟೋ ನದೀಂ ಗಂಗಾಮುಪಸ್ಥಿತಃ ।**
**ಧನ್ಯಾಸಿ ತ್ವಂ ಸರಿಚ್ಛ್ರೇಷ್ಠೇ ನಿತ್ಯಮಾಶ್ಚರ್ಯ ಭೂಷಿತಾ ॥ 26 ॥**
**ಯ ತ್ವಮೇವಂ ಮಹಾದೇಹೈಃ ಶ್ವಾಸದೈರುಪಶೋಭಿತಾ ।**
**ಹ್ರಾದಿನೀ ಸಾಗರಂ ಯಾಸಿ ರಕ್ಷಂತೀ ತಾಪಸಾಲಯಾನ್ ॥ 27 ॥**

---

ಕೂರ್ಮನಾದರೂ ತನಗೆ ಆಶ್ರಯ ನೀಡಿದ ಗಂಗೆಯನ್ನೆ ಉತ್ತಮನೆಂದನು. ಗಂಗೆಯಾದರೂ ತನಗೆ ಪತಿಯಾದ್ದರಿಂದ ಸಮುದ್ರರಾಜನಾದ ವರುಣನನ್ನೇ ಉತ್ತಮಳೆಂದಳು. ವರುಣನಾದರೂ ತನಗೆ ಮಾತೃಸ್ಥಾನೀಯಳಾದ ಪೃಥಿವೀ ಎಂದು ಕರೆಯಲ್ಪಡುವ ಉಮಾದೇವಿಯನ್ನೆ ಉತ್ತಮನೆಂದನು.
ಉಮೆಯಾದರೂ ತನ್ನ ಪತಿ ಹಾಗೂ ಪತಿಗೆ ಸಮಾನರಾಗಿ ಪರರನ್ನು ಅವನ = ರಕ್ಷಣೆ ಮಾಡುವರೆಂಬ ಕಾರಣದಿಂದ ಪರ್ವತ ನಾಮಕರಾದ ಗರುಡ ಶೇಷ ರುದ್ರರನ್ನೆ ಉತ್ತಮಳೆಂದಳು. ಶಿವ ಶೇಷ ಗರುಡರು ಬ್ರಹ್ಮದೇವನನ್ನೆ ಉತ್ತಮನೆಂದರು. ಬ್ರಹ್ಮದೇವನಾದರೂ ವೇದಾಭಿಮಾನಿನಿಯಾದ ವಿಷ್ಣುವಿನ ಪತ್ನಿಯಾದ ಲಕ್ಷ್ಮೀದೇವಿ-ಯನ್ನೇ ಉತ್ತಮಳೆಂದನು.
ನಾರದರು ವೇದಾಭಿಮಾನಿ ರಮೆಯ ಸಮೀಪ ಹೋಗಿ ನೀನು ಉತ್ತಮಳೆಂದರು. ಅವಳು ಶ್ರೀಕೃಷ್ಣನೇ ನನಗಿಂತಲೂ ಶ್ರೇಷ್ಠನಾಗಿರುವನು. ಅವನಿಗೆ ಸದೃಶರಿಲ್ಲ ಅಧಿಕರಂತೂ ಇಲ್ಲವೆ ಇಲ್ಲ.
**ವಿಷ್ಣ್ವಾವಿಷ್ಟಾ ಯಜ್ಞನಾಮ್ನಿ ತದಂಕಸ್ಥಿತಾ ಸೋಚಿ ಕೇಶವೋ ಹ್ಯುತ್ತಮೋಽಲಮ್ । ನ ತತ್ಸಮಶ್ಚಾಭ್ಯಧಿಕಃ ಕುತಃ ಸ್ಯಾದ್ ।**
ಹೀಗೆ ಕೂರ್ಮ ಶರೀರ – ಗಂಗಾಜಲ – ಸಮುದ್ರಜಲ – ಪೃಥಿವೀ – ಪರ್ವತಗಳು – ಮಹತತ್ತ್ವ – ವೇದ – ಯಜ್ಞ – ದಕ್ಷಿಣೆಗಳು ಶ್ರೇಷ್ಠವೆಂದು ಜಡತಾರತಮ್ಯವನ್ನು ತಿಳಿಸಿದಂತಾಯಿತು. ಹೀಗೆ ಅಭಿಮಾನಿಗಳನ್ನಿಟ್ಟುಕೊಂಡಾಗ ದೇವತಾ ತಾರತಮ್ಯವನ್ನು ಹೇಳಿದಂತಾಯಿತು.

ಆಮೆ ಹೇಳಿದ ಮಾತನ್ನು ಕೇಳಿ ಗಂಗೆಯ ಬಳಿ ಸಾರಿ ನದಿಗಳಲ್ಲೆಲ್ಲ ನೀನು ಶ್ರೇಷ್ಠಳಾಗಿರುವಿ. ನೀನು ಮಹಾದೇಹಗಳುಳ್ಳ ಗಜಾದಿ ಪ್ರಾಣಿಗಳಿಂದ ಸೇವಿಸಲ್ಪಡುವಿ. ನಿನ್ನ ಶುಭಜಲದಿಂದ ನಿನ್ನ ತೀರದಲ್ಲಿರುವ ತಾಪಸರ ಆಶ್ರಮಗಳನ್ನು ರಕ್ಷಿಸುತ್ತಾ, ಅನೇಕ ತೀರ್ಥಗಳನ್ನು ಮೈಗೂಡಿಸಿಕೊಂಡು ಸಮುದ್ರ ಸೇರುವೆ ನೀನೇ ಧನ್ಯಳೆಂದು ಹೇಳಿದೆನು.

ಹೀಗೆ ಹೇಳಿದಾಗ ಗಂಗೆಯು ನಿಜರೂಪದಿಂದ ಮೈದೋರಿ ಮುನಿಯೇ! ನಾನೇನು ಧನ್ಯಳಲ್ಲ. ಆಶ್ಚರ್ಯ ವಸ್ತುಗಳೂ ನನ್ನಲ್ಲಿಲ್ಲ. ಸತ್ಯಪರಾಯಣನಾದ ನಿನ್ನ ಈ ಮಾತು ನನ್ನಲ್ಲಿ ಬಾಧಿತವು.

**ಯತ್ರಾಹಮಿವ ವಿಸ್ತೀರ್ಣಾಃ ಶತಶೋ ಯಾಂತಿ ನಿಮ್ನಗಾಃ ।**
**ನಾಹಂ ಧನ್ಯಾ ದ್ವಿಜಶ್ರೇಷ್ಠ! ನೈವಾಶ್ಚರ್ಯೋಪಶೋಭಿತಾಃ ॥ 28 ॥**
**ಸರ್ವಾಶ್ಚರ್ಯಕರೋ ಲೋಕೇ ಧನ್ಯಶ್ಚೈವಾರ್ಣವೋ ದ್ವಿಜ ॥ 29 ॥**

ಈ ಲೋಕದಲ್ಲಿ ಸರ್ವಾಶ್ಚರ್ಯಕರನಾದವನು ನನ್ನಂತಹ ವಿಸ್ತಾರವಿರುವ ನೂರಾರು ನದಿಗಳಿಗೆ ಆಶ್ರಯದಾತನಾದ ಹಾಗೂ ಪತಿಯಾಗಿರುವನೂ ಸಮುದ್ರರಾಜನಾದ ವರುಣನೆ, ಧನ್ಯನು, ಆಶ್ಚರ್ಯನು.

**ಸೋಽಹಂ ತ್ರಿಪಥಗಾವಾಕ್ಯಂ ಶ್ರುತ್ವಾರ್ಣವಮುಪಸ್ಥಿತಃ ।**
**ಆಶ್ಚರ್ಯಂ ಖಲು ಲೋಕಾನಾಂ ಧನ್ಯಶ್ಚಾಸಿ ಮಹಾರ್ಣವ ॥ 30 ॥**
**ಯೇನ ಖಲ್ವಸಿ ಯೋನಿಸ್ತ್ವಮಂಭಸಾಂ ಸಲಿಲೇಶ್ವರಃ ।**
**ಸ್ಥಾನೇ ತ್ವಾಂ ವಾರಿವಾಹಿನ್ಯಃ ಸಂತೋಲೋಕಪಾವನಾಃ ॥ 31 ॥**
**ಇಮಾಃ ಸಮಭಿಗಚ್ಛಂತಿ ಪತ್ನ್ಯೋ ಲೋಕ ನಮಸ್ಕೃತಾಃ ।**

ಯದುಪುಂಗವರೇ! ಗಂಗೆಯ ಮಾತನ್ನು ಕೇಳಿ ಸಮುದ್ರನ ಬಳಿ ಬಂದು ಸರ್ವಲೋಕಗಳಲ್ಲಿಯೂ ನೀನೊಬ್ಬನೆ ಆಶ್ಚರ್ಯನು. ನೀನು ಜಲಗಳಿಗೆ ಕಾರಣನೂ ಪತಿಯೂ ಆಗಿರುವೆ. ಸಕಲಲೋಕಗಳನ್ನೆ ಪಾವನಗೊಳಿಸುವ ನದಿಗಳೆಲ್ಲವೂ ರಮಣನಾದ ನಿನ್ನನ್ನೆ ಸೇರುತ್ತವೆ.

ಹೀಗೆ ಹೇಳಿದಾಗ ಸಮುದ್ರನಾದರೂ ವಾಯುವಿನಿಂದ ಪ್ರೇರಿತನಾಗಿ ಅಗಾಧ ಜಲರಾಶಿಯನ್ನು ಸೀಳಿಕೊಂಡು ಮೇಲೆದ್ದು ಬಂದನು.

**ವಸುಧೇಯಂ ಮುನೇ ಧನ್ಯಾ ಯತ್ರಾಽಹಮುಪರಿ ಸ್ಥಿತಃ ।**
**ಋತೇ ಚ ಪೃಥಿವೀಂ ಲೋಕೇ ಕಿಮಾಶ್ಚರ್ಯಮತಃ ಪರಮ್ ॥ 32 ॥**

ನಾರದರೇ ! ಹೀಗೆಂದು ನೀನೆಲ್ಲಿಯೂ ಹೇಳಬಾರದು. ನಾನು ಯಾವುದೇ ಆಶ್ಚರ್ಯಕ್ಕೂ ಆಶ್ರಯನಾಗಿಲ್ಲ. ನಾನು ಯಾರನ್ನು ಆಶ್ರಯಿಸಿಕೊಂಡು ಇರುವೆನೋ ಅಂತಹ ಭೂದೇವಿಯೇ ಆಶ್ಚರ್ಯಳು ಪೃಥಿವಿಗಿಂತ ಆಶ್ಚರ್ಯ ಯಾವುದಿದೆ? ಎಂದು ಪೃಥಿವೀ ನಾಮಕಳಾದ ಪಾರ್ವತೀದೇವಿಯನ್ನೆ ಆಶ್ಚರ್ಯಳು ಎಂದನು.

**ಕೌತೂಹಲ ಸಮಾವಿಷ್ಟಃ ಹ್ಯಬ್ರುವಂ ಜಗತೋ ಗತಿಮ್ ।**
**ಧರಿತ್ರಿ ದೇಹಿನಾಂ ಯೋನೇ ಧನ್ಯಾ ಖಲ್ವಸಿ ಶೋಭನೇ ॥ 33 ॥**
**ಆಶ್ಚರ್ಯಂ ಚಾಪಿ ಭೂತೇಷು ಮಹತ್ಯಾ ಕ್ಷಮಯಾ ಯುತೇ ।**

ಧರಿತ್ರಿಯೇ! ಸಮಸ್ತ ಪ್ರಾಣಿಗಳಗೂ ಉತ್ಪತ್ತಿ ಸ್ಥಾನಳಾಗಿ ಅತ್ಯಂತ ಕ್ಷಮಾಯುಕ್ತಳಾಗಿದ್ದು ಕ್ಷಮಾಭಾವವು ನಿನ್ನಿಂದಲೇ ಪ್ರಕಟವಾಗಿದೆ. ಆಕಾಶಗಾಮಿಗಳೂ ನಿನ್ನ ಮೇಲೆ ಕರ್ಮ ಮಾಡಬೇಕಾಗಿರುವುದರಿಂದ ನೀನೇ ಆಶ್ಚರ್ಯ ಧನ್ಯಳು ಎಂದರು.

ಯಾದವರೇ! ಹೀಗೆ ನನ್ನ ಸ್ತೋತ್ರ ವಾಕ್ಯಗಳಂದ ಕ್ಷೋಭೆಗೊಂಡ ಧರಿತ್ರಿಯು ಧೈರ್ಯದಿಂದ ನನ್ನ ಮುಂದೆ ಪ್ರತ್ಯಕ್ಷಳಾಗಿ – ಕಲಹಪ್ರಿಯ ನಾರದರೇ! ನಾನು ಧನ್ಯಾಶ್ಚರ್ಯಳಲ್ಲ. ಕ್ಷಮೆ ಇದ್ದರೂ ಅದು ಬೇರೆಯವರಿಂದ ಬಂದದ್ದು. ನನ್ನ ಸ್ವಂತದ್ದಲ್ಲ.

**ಏತೇ ಧನ್ಯಾಃ ದ್ವಿಜಶ್ರೇಷ್ಠ! ಪರ್ವತಾಃ ಧಾರಯಂತಿ ಮಾಮ್ ।**
**ಆಶ್ಚರ್ಯಾಣಿ ಹಿ ದೃಶ್ಯಂತೇ ಏತೇಲೋಕಸ್ಯ ಹೇತವಃ ॥ 34 ॥**

ನಿಜವಾದ ಸಂಗತಿಯೆಂದರೆ ನನ್ನನ್ನೆತ್ತಿ ಧರಿಸಿರುವ, ನನ್ನನ್ನು, ಸೌಪರ್ಣೀ ವಾರುಣಿಯರನ್ನು ನಿರಂತರ ರಕ್ಷಿಸುವುದರಿಂದ = ಪರಾವನಾತ್ = ಪರ್ವತನಾಮಧೇಯರಾದ ಶಿವಶೇಷ ಗರುಡರೇ ಆಶ್ಚರ್ಯ ಧನ್ಯರು ಎಂದರು.

ಯಾದವರೇ! ಭೂದೇವಿನಾಮಕ ಪಾರ್ವತಿಯ ಮಾತಿನಂತೆ ನಾನು ಪರ್ವತ ನಾಮಕ ಶಿವಶೇಷ ಗರುಡರ ಬಳ ಬಂದು "ಪರ್ವತಗಳೇ! ನೀವೆಲ್ಲರೂ ಧನ್ಯರೂ ಆಗಿರುವಿರಿ" ಭೂದೇವಿಯನ್ನೆ ಧರಿಸಿರುವ ನೀವು ಅನೇಕ ರೀತಿಯ ರತ್ನಗಳಗೆ ಆಶ್ರಯರು. ಹೀಗಾಗಿ ಆಶ್ಚರ್ಯರಾಗಿರುವಿರಿ. ಎಂದೆನು.

**ಧನ್ಯಾ ಭವಂತೋ ದೃಶ್ಯಂತೇ ಬಹ್ವಾಶ್ಚರ್ಯಾಶ್ಚ ಭೂಧರಾಃ ।**
**ಕಾಂಚನಸ್ಯಾಗ್ರರತ್ನಸ್ಯ ಧಾತೂನಾಂ ಚ ವಿಶೇಷತಃ ॥ 35 ॥**

ಸ್ಥಾವರ ಪ್ರಾಣಿಗಳಲ್ಲಿ ಶ್ರೇಷ್ಠವೂ, ಅರಣ್ಯಗಳಿಗೆ ಶೋಭೆಯನ್ನುಂಟು ಮಾಡುವ ಪರ್ವತ ಶ್ರೇಷ್ಠರಾದ ಶಿವಾದಿಗಳು ಹೀಗೆಂದರು–

**ಬ್ರಹ್ಮರ್ಷೇ ನ ವಯಂ ಧನ್ಯಾ ನಾಪ್ಯಾಶ್ಚರ್ಯಾಣಿ ಸಂತಿ ನಃ ॥ 36 ॥**
**ಬ್ರಹ್ಮಾ ಪ್ರಜಾಪತಿರ್ಧನ್ಯಃ ಸರ್ವಾಶ್ಚರ್ಯಃ ಸುರೇಶ್ವಪಿ ॥ 37 ॥**

ಬ್ರಹ್ಮರ್ಷಿಗಳೇ ! ತಾವು ಹೇಳಿದಂತೆ ನಾವು ಧನ್ಯರೂ ಅಲ್ಲ. ನಮ್ಮಲ್ಲಿ ಆಶ್ಚರ್ಯಕರ ಯಾವ ವಸ್ತುವೂ ಇಲ್ಲ. ಇದರಿಂದಾಗಿ ಸರ್ವಾಶ್ಚರ್ಯನೆಂದರೆ ಚತುರ್ಮುಖ ಬ್ರಹ್ಮನೇ ಸರಿ.

ಪರ್ವತಗಳು ಹೀಗೆಂದಾಗ ಸಕಲ ಯಕ್ಷರಕ್ಷೋ ದೇವತಾದಿ ಉತ್ಪತ್ತಿ ಕಾರಣನೂ ನಾಶರಹಿತನೂ ಆದ ಚತುರ್ಮುಖನ ಬಳಿ ಬಂದು ಪರ್ವತಗಳ ಮಾತಿಗೆ ಇವನಲ್ಲಿ ಸಾರ್ಥಕತೆ ನೋಡಬಹುದೆಂದು ಅವನನ್ನು ಸಮೀಪಿಸಿ, ಅವನಿಗೆ ತಲೆಬಾಗಿ ನಮಸ್ಕರಿಸಿ ಹೀಗೆಂದೆನು.

**ಸೋಽಹಂ ವಾಕ್ಯ ಸಮಾಪ್ತ್ಯರ್ಥಂ ಶ್ರಾವಯೇ ಪದ್ಮಯೋನಿಜಮ್ ।**
**ಆಶ್ಚರ್ಯಂ ಭಗವಾನೇಕೋ ಧನ್ಯೋಽಸಿ ಜಗತೋ ಗುರುಃ ॥ 38 ॥**
**ನ ಕಿಂಚಿದನ್ಯತ್ ಪಶ್ಯಾಮಿ ಭೂತಂ ಯದ್ ಭವತಾ ಸಮಮ್ ।**
**ತ್ವತ್ತಃ ಸರ್ವಮಿದಂ ಜಾತಂ ಜಗತ್ ಸ್ಥಾವರಜಂಗಮಮ್ ॥ 39 ॥**

ಜಗತ್ತಿಗೆಲ್ಲ ನೀನೊಬ್ಬನೇ ಆಶ್ಚರ್ಯನು. ಸಕಲ ಚರಾಚರ ಪ್ರಪಂಚಕ್ಕೆ ಗುರುವಾದ ನಿನಗೆ ಇದು ಯುಕ್ತವೆ. ನಿನಗೆ ಸಮಾನನಾದ ವ್ಯಕ್ತಿ ಇನ್ನೊಬ್ಬರಿಲ್ಲ. ಭೂತೇಂದ್ರಿಯ ನಿಯಾಮಕರಾದ ದೇವದಾನವರೆಲ್ಲರೂ ನಿನ್ನಿಂದಲೇ ಜನ್ಮ ಪಡೆದವರು. ಇದರಿಂದಾಗಿ ನೀನೆ ಅಶ್ಚರ್ಯನೂ ಧನ್ಯನೂ ಆಗಿರುವೆ.

ಹೀಗೆಂದಾಗ ಲೋಕಪಿತಾಮಹನು,

**ಧನ್ಯಾಶ್ಚರ್ಯಾಶ್ರಿತೈಃ ವಾಕ್ಯೈಃ ಕಿಂ ಮಾಂ ನಾರದ ಭಾಷಸೇ ।**
**ಆಶ್ಚರ್ಯಂ ಪರಮಂ ವೇದ ಧನ್ಯಾ ವೇದಾಶ್ಚ ನಾರದ ॥ 40 ॥**
**ಯೇ ಲೋಕಾನ್ ಧಾರಯಂತಿ ಸ್ಮ ವೇದಃ ತತ್ತ್ವಾರ್ಥದರ್ಶಿನಃ ॥ 41 ॥**

ನಾರದನೇ! ಈ ಲೋಕದಲ್ಲಿ ಧನ್ಯತೆ ಆಶ್ಚರ್ಯತೆಗಳನ್ನು ನನಗೇಕೆ ಹೇಳುತ್ತಿರುವೆ? ನಾನು ಧನ್ಯನಲ್ಲ ಆಶ್ಚರ್ಯನೂ ಅಲ್ಲ.

ಪರಮಾಶ್ಚರ್ಯಗಳೆಂದರೆ ವೇದಾಭಿಮಾನಿನಿಯಾದ ವಿಷ್ಣು ಪತ್ನಿ ಮಹಾಲಕ್ಷ್ಮೀದೇವಿಯೇ ಆಗಿರುವಳು. ಲಕ್ಷ್ಮೀದೇವಿಯು ಒಬ್ಬಳೆ ಆದರೂ ಬಹುರೂಪವಿದ್ದದ್ದರಿಂದ ವೇದಾಃ ಎನ್ನಲಾಗಿದೆ.

ಯದುಪುಂಗವರೇ! ಬ್ರಹ್ಮದೇವನ ಮಾತಿನಂತೆ ವೇದಗಳನ್ನು ಅಂದರೆ ವೇದಾಭಿಮಾನಿನಿ ಲಕ್ಷ್ಮೀದೇವಿಯನ್ನು ಹೊಂದಿ ಹೀಗೆಂದನು.

**ಧನ್ಯಾ ಭವಂತಃ ಪುಣ್ಯಾಶ್ಚ ನಿತ್ಯಮಾಶ್ಚರ್ಯ ಭೂಷಿತಾಃ ।**
**ಆಧಾರಾಶ್ಚೈವ ವಿಪ್ರಾಣಾಮೇವ ಮಾಹ ಪ್ರಜಾಪತಿಃ ॥ 42 ॥**

ವೇದಾಭಿಮಾನಿ ದೇವತೆಗಳೇ! ನೀವು ಧನ್ಯರು ಆಶ್ಚರ್ಯರು. ಬ್ರಾಹ್ಮಣರಿಗಂತೂ ನೀವೇ ಆಧಾರ. ನಿಮ್ಮನ್ನು ಉಪಾಸಿಸುವ ಬ್ರಹ್ಮದೇವನೇ ಹೀಗೆ ಹೇಳಿರುವನು. ಹೀಗಾಗಿ ನಿಮಗಿಂತ ಶ್ರೇಷ್ಠರು ಯಾರು ಇರುವುದಿಲ್ಲ.

**ಪ್ರತ್ಯೂಚುಸ್ತೇ ತತೋ ವಾಕ್ಯಂ ವೇದಾ ಮಾಮಭಿತಃ ಸ್ಥಿತಾಃ ।**
**ಆಶ್ಚರ್ಯಾಶ್ಚೈವ ಧನ್ಯಾಶ್ಚ ಯಜ್ಞಾಶ್ಚಾತ್ಮಪರಾಯಣಾಃ ॥ 43 ॥**
**ಯಜ್ಞಾರ್ಥೇ ಚ ವಯಂ ಸೃಷ್ಟಾಃ ಧಾತ್ರಾ ಯೇನ ಸ್ಮ ನಾರದ ।**
**ತದಸ್ಮಾಕಂ ಪರೋ ಯಜ್ಞೋ ನ ವಯಂ ಸ್ವವಶೇ ಸ್ಥಿತಾಃ ॥ 44 ॥**
**ಸ್ವಯಂಭುವಃ ಪರಾ ವೇದಾಃ ವೇದಾನಾಂ ಕ್ರತವಃ ಪರಾಃ ।**

ಯಾದವರ್ಯರೇ! ನಾನು ವೇದಗಳಿಗೆ ಹೇಳಿದಾಗ ನನ್ನ ಸುತ್ತಲೂ ನಿಂತ ಒಬ್ಬಳೇ ಆದರೂ ಋಗ್ವೇದಾದಿ ನಾಲ್ಕು ವೇದಾಭಿಮಾನಿನಿಯಾಗಿ ಬಹುರೂಪವಾಗಿರುವ ರಮೆ ಹೇಳಿದಳು–

ಪರಮಾತ್ಮನನ್ನು ಉದ್ದೇಶಿಸಿ ನಡೆಸುವ ಯಜ್ಞಗಳು ಧನ್ಯವಾಗಿವೆ. ನಾನು 'ಜ್ಞ'ನೆಂದು ಪ್ರಸಿದ್ಧ ನಾರಾಯಣನೊಂದಿಗೆ ಇದ್ದು ಯಜ್ಞ ಕ್ರಿಯೆಗೆ ಅಭಿಮಾನಿನಿಯಾಗಿರುವೆನು. ಇದಕ್ಕಾಗಿ 'ಜ್ಞ'ನ ಜೊತೆಗೆ ಯ = ಜೊತೆಗೆ ಯುತಳಾದವಳು. ಇದಕ್ಕಾಗಿ ನಾನು ಯಜ್ಞ ನಾಮಕಳು. ವೇದಕ್ಕಿಂತಲೂ ವೇದದ ಫಲವಾದ ಯಜ್ಞಕ್ಕೆ ಶ್ರೇಷ್ಠತೆ. ವೇದಕ್ಕಿಂತಲೂ ಅದಕ್ಕೆ ಅಭಿಮಾನಿನಿಯಾದ ಯಜ್ಞರೂಪಕ್ಕೆ ಧನ್ಯತೆ ಹೆಚ್ಚಿದೆ.

ನಂತರ ನಾರದರು ವೇದಾಭಿಮಾನಿ ರೂಪದಿಂದ ಯಜ್ಞಾಭಿಮಾನಿ ರೂಪಕ್ಕೆ ತಿರುಗಿ ಯಜ್ಞರೂಪ ಲಕ್ಷ್ಮೀ ಹೀಗೆ ಹೇಳಿದೆನು.

**ಭೋಃಯಜ್ಞಾಃ ಪರಮಂ ತೇಜೋ ಯುಷ್ಮಾಸು ಖಲು ಲಕ್ಷ್ಯತೇ ।**
**ಬ್ರಹ್ಮಣಾಭಿಹಿತಂ ವಾಕ್ಯಂ ಯಚ್ಚ ವೇದೈರುದೀರಿತಮ್ ।**
**ಆಶ್ಚರ್ಯಮನ್ಯಲ್ಲೋಕೋಽಸ್ಮಿನ್ ಭವದ್ಭ್ಯೋ ನಾವಗಮ್ಯತೇ ॥ 45 ॥**

ಯಜ್ಞಾಭಿಮಾನಿಗಳೇ! ನೀವು ನಿಶ್ಚಿತವಾಗಿಯೂ ಧನ್ಯರು. ನಿಮ್ಮನ್ನು ಬಿಟ್ಟು ಮತ್ತೊಂದು ವಸ್ತು ಇರುವುದಿಲ್ಲ ಎಂದಾಗ, ಯಜ್ಞಾಭಿಮಾನಿಯು ಆಶ್ಚರ್ಯ ಶಬ್ಧವಾಗಲೀ ಧನ್ಯರೆಂಬ ಶಬ್ದವಾಗಲೀ ನಮ್ಮಲ್ಲಿ ಇರುವುದಿಲ್ಲ. ನಮ್ಮ ಅಭಿಪ್ರಾಯದಂತೆ ಆಶ್ಚರ್ಯಕ್ಕೆ ಧನ್ಯತೆಗೆ ಶ್ರೀಹರಿಯೇ ಸ್ಥಾನನಾಗಿರುವನು.

**ಆಶ್ಚರ್ಯಶಬ್ಧೋ ನಾಸ್ಮಾಸು ಧನ್ಯಶಬ್ಧೋಽಪಿ ವಾ ಮುನೇ ।**
**ಆಶ್ಚರ್ಯ ಪರಮಂ ವಿಷ್ಣುಃ ಸ ಹ್ಯಸ್ಮಾಕಂ ಪರಾಗತಿಃ ॥ 46 ॥**

ಶ್ರೀಹರಿಯೇ ಸರ್ವಾಶ್ಚರ್ಯಮಯನಾಗಿರುವನು. ಆಶ್ಚರ್ಯ ಶಬ್ದವಾಗಲಿ ಧನ್ಯವೆಂಬ ಶಬ್ದವಾಗಲಿ ನಮ್ಮಲ್ಲಿ ಇಲ್ಲವೆ ಇಲ್ಲ. ಶ್ರೀಮನ್ಮಹಾವಿಷ್ಣುವೆ ಸಕಲ ಶಬ್ದಗಳಿಗೆ ಮುಖ್ಯ ಆಶ್ರಯನಾಗಿರುವನು. ಅವನೇ ಒಂದು ಮಹಾಶ್ಚರ್ಯನಷ್ಟೆ! ನಮ್ಮೆಲ್ಲರಿಗೂ ಪರಮಗತಿಯಾಗಿರುವನು.

ಹೋಮಾದಿಗಳಲ್ಲಿ ಹೋಮಿಸುವ ಹವಿರಾದಿ ಭಾಗಗಳನ್ನು ನಾವು ಆಸ್ವಾದಿಸುತ್ತಿರುವುದೂ ಸಹ ಲೋಕವ್ಯಾಪ್ತನಾದ ಶ್ರೀಹರಿಯೇ ನಮಗೆ ನೀಡುವನು.[3] [ಅವನು ನಮಗೆ ನೀಡುವ ಭಿಕ್ಷೆ ಅದು.]

ಯಾದವರೇ ! ಹೀಗೆ ಯಜ್ಞಾಭಿಮಾನಿಯು ಹೀಗೆ ಹೇಳಿದಾಗ ನಾನು ವಿಷ್ಣುವಿನ ಶ್ರೇಷ್ಠತೆ ತಿಳಿಯಲು ಭೂಮಂಡಲಕ್ಕೆ ಬಂದಿರುವೆ. ನಿಮ್ಮಿಂದ ಸಮಾವೃತನಾಗಿ ಕುಳಿತಿರುವ ಈ ಶ್ರೀಕೃಷ್ಣನೇ ಮಹಾ ಆಶ್ಚರ್ಯನು. ಇದನ್ನು ತಿಳಿಸಲೆಂದೇ ನಾನು '**ಆಶ್ಚರ್ಯೋಽಸಿ ಧನ್ಯೋಽಸಿ**' ಎಂದೆನು.[4]

---

3. **ಭಿಕ್ಷಾಚರ್ಯಾಂ ಚರಂತಿ ।**
4. **ಆಶ್ಚರ್ಯೋ ಭಗವಾನ್ ವಿಷ್ಣುಃ ಯಸ್ಮಾನ್ ನೈತಾದೃಶಃ ಕ್ವಚಿತ್ ।**
ಆಶ್ಚರ್ಯವೆಂದರೆ ಸ್ವತಂತ್ರನೆಂದರ್ಥ. ಆಶ್ಚರ್ಯವೆಂಬುದು ಸ್ವೋಪಮಾನ ರೂಪವಾದದ್ದು ಪರೋಪಮಾನವಾದದ್ದಲ್ಲ. **'ಗಗನಂ ಗಗನಾಕಾರಂ'** ಇದ್ದಂತೆ **ಆಶ್ಚರ್ಯಂ ಅನಿತ್ಯೇ** ಎಂಬ ಪಾಣಿನಿ ಸೂತ್ರದಲ್ಲಿ ಅಪರೂಪವಾದ ವಸ್ತುವಿನಲ್ಲಿಯೇ ಆಶ್ಚರ್ಯ ಶಬ್ದವನ್ನು ನಿಪಾತ ಮಾಡಿದ್ದಾನೆ. ಭಗವಂತನು ಅತ್ಯಂತ ದುರ್ಲಭ-ನೆಂದರ್ಥ. – *ಗೀ.ಭಾ. 2/29*

**ಪ್ರತ್ಯುಕ್ತೋಽಹಂ ಅನೇನಾದ್ಯ ವಾಕ್ಯಸ್ಯಾಸ್ಯ ಯದುತ್ತರಮ್ ।**
**ದಕ್ಷಿಣಾಭಿಃ ಸಹೇತ್ಯೇವಂ ಪರ್ಯಾಪ್ತಂ ವಚನಂ ಮಮ ॥ 47 ॥**

**ಯಜ್ಞಾನಾಂ ಹಿ ಗತಿರ್ವಿಷ್ಣುಃ ಸರ್ವೇಷಾಂ ಸಹದಕ್ಷಿಣಃ ।**
**ದಕ್ಷಿಣಾಭಿಃ ಸಹೇತ್ಯೇವಂ ಪ್ರಶ್ನೋ ಮಮ ಸಮಾಪ್ತವಾನ್ ॥ 48 ॥**

ಶ್ರೀಕೃಷ್ಣನೇ! ನೀನು ಆಶ್ಚರ್ಯ ಧನ್ಯನೆಂದು ಎಂದಾಗ ಇದಕ್ಕೆ ಉತ್ತರ ಶ್ರೀಕೃಷ್ಣನು ಹೇಳಿದ್ದನ್ನು ನೀವೆಲ್ಲರೂ ಕೇಳಿರುವಿರಿ. '**ದಕ್ಷಿಣಾಭಿಃ ಸಾಕಂ ಅಹಂ ಧನ್ಯೋಽಸ್ಮಿ**' ಎಂದನಷ್ಟೆ. ಇದರರ್ಥ – 'ನಾನು ನನ್ನ ತೊಡೆಯಲ್ಲಿ ರಮಾದೇವಿ ಇರುವಾಗ ಮಾತ್ರವೆ ಅವಳಿಗಿಂತ ಸದಾ ಉತ್ತಮನೆಂದಲ್ಲ, ಕಿಂತು ಯಾವಾಗ ಅವಳು ನನ್ನ ಎಡಭಾಗದ ಅರ್ಧವಾಗಿ ದಕ್ಷಿಣಾನಾಮಕಳಾಗಿರುವೋ ಆಗಲೂ ಅವಳಿಗಿಂತ ನಾನೇ ಉತ್ತಮ ಹಾಗೂ ಪರಿಪೂರ್ಣನೆಂದು' ಅವನಭಿಪ್ರಾಯ.

ನಾನು ಅವಳ ಬಲಭಾಗದಲ್ಲಿರುವುದರಿಂದಲೂ, ಯಜ್ಞದಲ್ಲಿ ನೀಡುವ ಗೋ ಅಶ್ವಾದಿ ನಾನಾ ರೀತಿಯ ದಕ್ಷಿಣೆಗಳಿಗೆ ಅಭಿಮಾನಿನಿಯಾದ್ದರಿಂದಲೂ ಅವಳು ದಕ್ಷಿಣಾನಾಮಕಳಾಗಿದ್ದಾಳೆ. ಹೀಗೆ '**ದಕ್ಷಿಣಾಭಿಃ ಸಾಕಂ**'[5] ಎನ್ನುವಾಗ ದಕ್ಷಿಣಾದೇವಿಯರ ಸರ್ವೋತ್ತಮತ್ವವನ್ನೂ ಸೂಚಿಸಿದ್ದಾನೆ ಎಂದು ನಾರದರು ಹೇಳಿದರು.

**ಯಜ್ಞಾನಾಂ ಹಿ ಗತಿರ್ವಿಷ್ಣುಃ ಸರ್ವೇಷಾಂ ಸಹದಕ್ಷಿಣಃ ।**
**ದಕ್ಷಿಣಾಭಿಃ ಸಹೇತ್ಯೇವಂ ಪ್ರಶ್ನೋ ಮಮ ಸಮಾಪ್ತವಾನ್ ॥ 49 ॥**

**ಕೂರ್ಮೇಣಾಭಿಹಿತಂ ಪೂರ್ವಂ ಪಾರಂಪರ್ಯಾದಿಹಾಗತಮ್ ।**
**ಸದಕ್ಷಿಣೇಽಸ್ಮಿನ್ ಪುರುಷೇ ತದ್ವಾಕ್ಯಂ ಪ್ರತಿಪಾದಿತಮ್ ॥ 50 ॥**

5. **ದಕ್ಷಿಣಾಭಿಃ ಸಾಕಂ** : ಈ ವಾಕ್ಯವನ್ನು ಶ್ರೀಕೃಷ್ಣನಿಗೆ ಅನ್ವಯಿಸಿದಾಗ ರಮಾಸಹಿತವಾಗಿ ಬ್ರಹ್ಮಾದಿ ಸಕಲ ಪ್ರಪಂಚಕ್ಕಿಂತ ಉತ್ತಮನೆಂದೂ, ರಮಾದೇವಿಯಾದರೂ ಶ್ರೀಕೃಷ್ಣನನ್ನು ಹೊರತು ಉಳಿದ ಬ್ರಹ್ಮಾದಿಗಳಿಂದ ಉತ್ತಮಳೆಂದು ಸಿದ್ಧವಾಗುವುದು.
ಲಕ್ಷ್ಮೀದೇವಿಯು ವೇದಾಭಿಮಾನಿ, ಯಜ್ಞಾಭಿಮಾನಿ, ದಕ್ಷಿಣಾಭಿಮಾನಿ ಎಂದು ಮೂರು ರೂಪಗಳಿದ್ದರೂ ಅಭೇದವೆ ಹೊರತು ಭೇದವಿರುವುದಿಲ್ಲ. ಆದರೂ ಲೋಕದೃಷ್ಟಿಯಿಂದ ವೇದಾಭಿಮಾನಿ ರೂಪ ಶ್ರೀಹರಿಗೆ ದೂರವಿದೆ. ದೂರದಲ್ಲಿಯೆ ನಿಂತು ಶ್ರುತಿಗೀತಾದಿಗಳನ್ನು ಗಾನ ಮಾಡುತ್ತಿರುತ್ತಾಳೆ. ಯಜ್ಞಾಭಿಮಾನಿಯಾದರೂ ಶ್ರೀಹರಿಯ ತೊಡೆಯಲ್ಲಿಯೆ ಇರುವಳು. ದಕ್ಷಿಣಾಭಿಮಾನಿಯಾದರೂ ಹರಿಯ ಎಡಭಾಗದ ಅರ್ಧದಲ್ಲಿ ಸೇರಿ ಹೋಗಿ ಹರಿಯನ್ನು ಆಲಿಂಗಿಸಿದ್ದಾಳೆ. ಆದ್ದರಿಂದ ಉತ್ತರೋತ್ತರ ಸುಖಾಭಿವೃದ್ಧಿಯಾಗುವುದರಿಂದ 'ದಕ್ಷಿಣಾ' ಶ್ರೇಷ್ಠ ಎನ್ನಲಾಗಿದೆ. – *ಭಾ.ತಾ. – 11/16/12*

ದಕ್ಷಿಣೆಯಿಂದ ಸಹಿತನಾದ ವಿಷ್ಣುವೆ ಸಮಸ್ತ ಯಜ್ಞಗಳಿಗೂ ಪರಮಾಶ್ರಯನಾಗಿರುವನು. ಇದನ್ನು ಶ್ರೀಕೃಷ್ಣನು '**ದಕ್ಷಿಣಾಭಿಃ ಸಾಕಂ**' ಎಂದು ಹೇಳಿದ್ದರಿಂದ ಹರಿಯು ಸರ್ವೋತ್ತಮನೆಂದು ಜಗತ್ತಿಗೆ ಸಾರಬೇಕೆಂಬ ನನ್ನ ಉದ್ದೇಶ ಪೂರ್ತಿಯಾಯಿತು. ಮೊದಲು ನದಿಯ ತೀರದ ಕೂರ್ಮದಿಂದಾರಂಭಿಸಿ ಯಜ್ಞಾಂತವಾಗಿ ಉತ್ತಮತ್ವ ಪ್ರತಿಪಾದಿತವಾಯಿತು.

ವೇದಯಜ್ಞ ದಕ್ಷಿಣಾದೇವಿಯರೂ ಸೇರಿದಂತೆ ಶ್ರೀಹರಿಯು ಸಮಸ್ತ ಜಗತ್ತಿಗಿಂತಲೂ ಉತ್ತಮನು. ಅವನ ಸಾಮರ್ಥ್ಯಾಂಶಗಳಲ್ಲಿ ಒಂದಂಶದಷ್ಟು ದಕ್ಷಿಣಾದೇವಿಯರಿಗೆ ಇರುವುದಿಲ್ಲ. ಇತರರೆಲ್ಲರಿಗಿಂತ ದಕ್ಷಿಣಾದೇವಿಯು ಉತ್ತಮಳು. ಆ ದಕ್ಷಿಣೆಯೇ ಈ ರುಕ್ಮಿಣೀದೇವಿ. ಆ ವಿಷ್ಣುವೆ ಶ್ರೀಕೃಷ್ಣ. ಆ ದಕ್ಷಿಣೆಗಿಂತ ಶ್ರೀಕೃಷ್ಣ ಉತ್ತಮನೆಂದು ತಿಳಿಯಿರಿ.

ರಾಜರೇ ! **ದಕ್ಷಿಣಾಭಿಃ ಸಾಕಂ** ಎಂಬುದರ ವಿವರಣೆ ಕೇಳಿದಿರಿ. ಅದೆಲ್ಲವನ್ನೂ ಆಮೂಲಗ್ರವಾಗಿ ತಿಳಿಸಿದ್ದಾಯಿತು. ನಾನಿನ್ನು ಹೋಗಿ ಬರುತ್ತೇನೆ ಎಂದು ಹೇಳುತ್ತಾ ನಾರದರು ಸ್ವರ್ಗಾಭಿಮುಖವಾಗಿ ಹೊರಟರು.

ನಾರದರು ಹೊರಟ ಮೇಲೆ ಧನ್ಯಾಶ್ಚರ್ಯ ಉಪಾಖ್ಯಾನ ಕೇಳಿ ಆಶ್ಚರ್ಯ ಪಟ್ಟ ರಾಜರುಗಳು ತಮ್ಮ ಸೈನ್ಯ ವಾಹನಗಳೊಂದಿಗೆ ತಮ್ಮ ತಮ್ಮ ದೇಶಗಳಿಗೆ ಹೋದರು.

ಜನಾರ್ದನನೂ ಸಹ ಅಗ್ನಿ ಸದೃಶರಾದ ಯದುವೀರರೊಂದಿಗೆ ತನ್ನ ಅರಮನೆ ಸೇರಿದನು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಧನ್ಯಾಶ್ಚರ್ಯೋಪಾಖ್ಯಾನದಲ್ಲಿ
ನೂರಹತ್ತನೆಯ ಅಧ್ಯಾಯ ಸಮಾಪ್ತಿ

ವಿಷ್ಣುಪರ್ವ 111 ವಿಷ್ಣುಪರ್ವ

# ಅಥ ಏಕಾದಶಾಧಿಕಶತತಮೋಽಧ್ಯಾಯಃ

*ಜನಮೇಜಯ ಉವಾಚ –*

**ಭೂಯ ಏವ ಮಹಾಬಾಹೋ ಕೃಷ್ಣಸ್ಯ ಜಗತಾಂ ಪತೇಃ ।**
**ಮಾಹಾತ್ಮ್ಯಂ ಶ್ರೋತುಮಿಚ್ಛಾಮಿ ಪರಮಂ ದ್ವಿಜಸತ್ತಮ ॥ 1 ॥**

ವೈಶಂಪಾಯನರನ್ನುದ್ದೇಶಿಸಿ ಜನಮೇಜಯ ರಾಜನು – ಗುರುಗಳೇ ! ಜಗನ್ನಾಥನಾದ ಶ್ರೀಕೃಷ್ಣನ ಮಹಿಮೆಯನ್ನು ಕೇಳಲಿಚ್ಛಿಸುವೆನು. ಶ್ರೀಕೃಷ್ಣನ ಮಹಾತ್ಮೆಯನ್ನು ಅವನ ಅಮಾನುಷ ಕಾರ್ಯಗಳನ್ನು ನಾನು ಎಷ್ಟು ಕೇಳಿದರೂ ತೃಪ್ತಿಯೆಂಬುದೇ ಇಲ್ಲದಂತಾಗಿದೆ. ಆ ಪುರಾಣ ಪುರುಷನ ಮಹಿಮೆ ಮತ್ತಷ್ಟು ಹೇಳಿ ಎಂದನು.

*ವೈಶಂಪಾಯನ ಉವಾಚ –*

**ನಾಂತಃ ಶಕ್ಯಃ ಪ್ರಭಾವಸ್ಯ ವಕ್ತುಂ ವರ್ಷಶತೈರಪಿ ।**
**ಗೋವಿಂದಸ್ಯ ಮಹಾರಾಜ ಶ್ರೂಯತಾಮಿದಮದ್ಭುತಮ್ ॥ 2 ॥**

ಜನಮೇಜಯನೇ! ಗೋವಿಂದನ ಮಹಿಮೆಯನ್ನು ಅವನ ಅಮಾನುಷ ಕಾರ್ಯಗಳನ್ನು ನೂರಾರು ವರ್ಷ ವ್ಯಾಖ್ಯಾನಿಸಿದರೂ ಮುಗಿಯಲಾರದ ಸಂಗತಿ. ಆದರೂ ನಿನ್ನ ಕೋರಿಕೆಯನ್ನು ಮನ್ನಿಸಿ ಅವನ ಮಹಿಮಾದ್ಯೋತಕ ಪ್ರಸಂಗವನ್ನು ಹೇಳುವೆ ಕೇಳು ಎಂದರು.

**ಶರತಲ್ಪೇ ಶಯಾನೇನ ಭೀಷ್ಮೇಣ ಪರಿಚೋದಿತಃ ।**
**ಗಾಂಡಿವಧನ್ವಾ ಬೀಭತ್ಸುಃ ಮಾಹಾತ್ಮ್ಯಂ ಕೇಶವಸ್ಯ ಯತ್ ॥ 3 ॥**

**ರಾಜ್ಞಾಂ ಮಧ್ಯೇ ಮಹಾರಾಜ ಜ್ಯೇಷ್ಠಂ ಭ್ರಾತರಮಬ್ರವೀತ್ ॥ 4 ॥**

ಭೀಷ್ಮಾಚಾರ್ಯರು ಶರತಲ್ಪದಲ್ಲಿ ಮಲಗಿದ್ದರು. ಆಗ ಭೀಷ್ಮರು ಶ್ರೀಕೃಷ್ಣ ಮಹಿಮೆಯನ್ನು ಚಿತ್ರಿಸಲು ಅರ್ಜುನನಿಗೆ ಪ್ರೇರೇಪಿಸಿದನು. ಅವನ ಅಣತಿಯಂತೆ ಅರ್ಜುನನು ರಾಜರ ಮಧ್ಯದಲ್ಲಿದ್ದ ಜಿತಾಮಿತ್ರನಾದ ಧರ್ಮರಾಜನಿಗೆ ಹೇಳಿದನು. ಅದನ್ನೇ ನಿನಗೆ ನಾನೂ ಹೇಳುತ್ತೇನೆ ಎಂದ ವೈಶಂಪಾಯನರು ಹೇಳಲುಪಕ್ರಮಿಸಿದರು.

**ಪುರಾಹಂ ದ್ವಾರಕಾಂ ಯಾತಃ ಸಂಬಂಧೀನ್ ಅವಲೋಕಕಃ ।**
**ನ್ಯವಸಂ ಪೂಜಿತಸ್ತತ್ರ ಭೋಜ ವೃಷ್ಣ್ಯಂಧಕೋತ್ತಮೈಃ ॥ 5 ॥**

ಹಿಂದೆ ಒಂದು ದಿನ ನಾನು ಬಂಧುಗಳನ್ನು ನೋಡಿಕೊಂಡು ಬರಲು ದ್ವಾರಕೆಗೆ ಹೋಗಿದ್ದೆ. ಭೋಜ ವೃಷ್ಣಿ–ಅಂಧಕರೊಂದಿಗೆ ಸತ್ಕೃತನಾಗಿ ಕೆಲವು ಕಾಲ ಅಲ್ಲಿಯೆ ನೆಲೆಸಿದ್ದೆನು. ಒಂದು ದಿನ ಧರ್ಮಿಷ್ಠನೂ ಮಹಾಬಾಹೂ ಆದ ಶ್ರೀಕೃಷ್ಣನು ಶಾಸ್ತ್ರವಿಧಿಯಂತೆ ಒಂದು ದಿವಸದಲ್ಲಿ ಮಾಡಿ ಮುಗಿಸಬಹುದಾದ ಸೋಮಯಾಗಕ್ಕೆ ದೀಕ್ಷಿತನಾದನು.[1]

**ತತೋ ದೀಕ್ಷಿತ ಮಾಸೀನಮಭಿಗಮ್ಯ ದ್ವಿಜೋತ್ತಮಃ**
**ಕೃಷ್ಣಂ ವಿಜ್ಞಾಪಯಾಮಾಸ ತ್ರಾಹಿ ತ್ರಾಹೀತಿ ಚಾಬ್ರವೀತ್ ॥ 6 ॥**
**ರಕ್ಷಾಧಿಕಾರೋ ಭವತಃ ಪರಿತ್ರಾಯಸ್ವ ಮಾಂ ವಿಭೋ ।**
**ಚತುರ್ಥಾಂಶಂ ಹಿ ಧರ್ಮಸ್ಯ ರಕ್ಷಿತಾ ಲಭತೇ ಫಲಮ್ ॥ 7 ॥**

ಹೀಗೆ ದೀಕ್ಷೆಗೊಂಡಿರುವ ಯಾಗ ಶಾಲೆಗೆ ಬ್ರಾಹ್ಮಣನೊಬ್ಬ ಕೈಯ್ಯಲ್ಲಿ ಹುಲ್ಲುಕಡ್ಡಿ ಹಿಡಿದು ಕೃಷ್ಣನಿಗೆ "ತ್ರಾಹಿ–ತ್ರಾಹಿ"– ರಕ್ಷಿಸು ಕಾಪಾಡು ಎಂದು ಅರಚಿದ.

ಕೃಷ್ಣನೇ! ನಿನಗೆ ನಮ್ಮನ್ನು ರಕ್ಷಿಸುವ ಭಾರವಹಿಸಿರುವೆ. ನನ್ನನ್ನು ರಕ್ಷಿಸು. ಆಪತ್ತಿನಲ್ಲಿ ಯಾರು ರಕ್ಷಿಸುವರೋ ಅವನಿಗೆ ರಕ್ಷಿತನ ಮಾಡುವ ಧರ್ಮಕಾರ್ಯದಲ್ಲಿ ನಾಲ್ಕನೆ ಒಂದಂಶ ಪುಣ್ಯಭಾಗಿಯಾಗುವನು ಎಂದು ವಿಜ್ಞಾಪಿಸಿದನು.

ಅದಕ್ಕೆ ಪ್ರತಿಯಾಗಿ ಶ್ರೀಕೃಷ್ಣನು ಹೀಗೆ ಹೇಳುವನು.

---

1. **ದೀಕ್ಷಿತ:**
ಶ್ರೀಕೃಷ್ಣನು ಮಹಾಶ್ವಮೇಧವನ್ನು ಏಕಾಹದಲ್ಲಿ ಮಾಡಿದನು. ಅಶ್ವಮೇಧದ ಕುದುರೆಯು ಒಂದೇ ಯಾಮಕ್ಕೆ ಹಿಂತಿರುಗಿತು. ಅದು ಕೃಷ್ಣ ನಿರ್ಮಿತವಾಗಿದ್ದು ದಿನಂಪ್ರತಿ ಲಕ್ಷ ಯೋಜನ ಸಂಚಾರ ಯೋಗ್ಯವಾಗಿತ್ತು.

**ನ ಭೇತವ್ಯಂ ದ್ವಿಜಶ್ರೇಷ್ಠ! ರಕ್ಷಾಮಿ ತ್ವಾಂ ಕುತೋ ಭಯಮ್ ।**
**ಬ್ರೂಹಿ ತತ್ತ್ವೇನ ಭದ್ರಂ ತೇ ಯದ್ಯಪಿ ಸ್ಯಾತ್ ಸುದುಷ್ಕರಮ್ ॥ 8 ॥**

ಬ್ರಾಹ್ಮಣೊತ್ತಮನೇ! ನೀನು ಭಯ ಪಡಬೇಕಾದ ಕಾರಣವಿಲ್ಲ. ನಾನು ನಿನ್ನ ನ್ನು ರಕ್ಷಿಸುವೆ. ನಿನಗೆ ಬಂದ ಭಯವಾದರೂ ಏನೆಂದು ಹೇಳು. ಆ ಭಯವನ್ನು ಹೋಗಲಾಡಿಸುವುದು ಅತ್ಯಶಕ್ಯವಾದರು ಅದನ್ನು ನಾನು ಪರಿಹರಿಸುತ್ತೇನೆ. ನಿನಗೆ ಯಾವುದರಿಂದ ಭಯವೆಂದು ಹೇಳು ಎಂದನು.

**ಜಾತೋ ಕುತೋ ಮಹಾಬಾಹೋ ಪುತ್ರೋ ಮೇ ಹ್ರಿಯತೇಽನಘ ।**
**ತ್ರಯೋ ಹೃತಾಶ್ಚತುರ್ಥಂ ತ್ವಂ ಕೃಷ್ಣ! ರಕ್ಷಿತು ಮರ್ಹತಿ ॥ 9 ॥**

ಯಾವಾಗಲೂ ನನ್ನ ಮಕ್ಕಳು ಹುಟ್ಟುತ್ತಾರೆ. ಹುಟ್ಟಿದ ಕೂಡಲೇ ಅದೃಶ್ಯ-ರಾಗುತ್ತಾರೆ. ನಾನೀಗಾಗಲೇ ಮೂರು ಪುತ್ರರನ್ನು ಕಳೆದುಕೊಂಡಿದ್ದೇನೆ. ಈಗ ನಾಲ್ಕನೆಯ ಮಗು ಹುಟ್ಟಲಿರುವುದು. ಇದನ್ನಾದರೂ ನನಗೆ ಉಳಿಸಿಕೊಡು ಎಂದು ಬೇಡಿದ.[2]

**ತತೋ ಮಾಮಾಹ ಗೋವಿಂದೋ ದೀಕ್ಷಿತೋಽಹಂ ಕ್ರತಾವಿತಿ ।**
**ರಕ್ಷಾ ಚ ಬ್ರಾಹ್ಮಣೇ ಕಾರ್ಯಾ ಸರ್ವಾವಸ್ಥಾಗತೈರಪಿ ॥ 10 ॥**
**ಶ್ರುತ್ವಾಽಹಮೇವಂ ಕೃಷ್ಣಸ್ಯ ವಚೋಽವೋಚಂ ನರಾಧಿಪ ।**
**ಮಾಂ ನಿಯೋಜಯ ಗೋವಿಂದ ರಕ್ಷಿಷ್ಯೇಽಹಂ ದ್ವಿಜಂ ಭಯಾತ್॥ 11 ॥**

ಬ್ರಾಹ್ಮಣನು ಹೀಗೆ ತನ್ನ ಅಳಲನ್ನು ತೋಡಿಕೊಳ್ಳುತ್ತಿರಲು ಶ್ರೀಕೃಷ್ಣನು ಅಲ್ಲಿಯೆ ನಿಂತಿದ್ದ ನನಗೆ ಹೀಗೆಂದನು. ಅರ್ಜುನ, ನಾನು ಈಗ ಯಜ್ಞ ದೀಕ್ಷೆ-ಯಲ್ಲಿರುವೆನು. ಬ್ರಾಹ್ಮಣನ ರಕ್ಷಣೆಯೂ ಅಗತ್ಯವಾಗಿದೆ ಎಂದಾಗ, ಆ ಮಾತನ್ನು ಕೇಳಿದ ಅರ್ಜುನನು – ನಾನು ನಿನ್ನ ಮಕ್ಕಳನ್ನು ಕಾಪಾಡುತ್ತೇನೆ ಎಂದು ಹೇಳಿ, ಗೋವಿಂದನೇ! ಬ್ರಾಹ್ಮಣನ ರಕ್ಷಣೆಗೆ ನನ್ನನ್ನು ನಿಯೋಜಿಸು ಎಂದನು.

**ಇತ್ಯುಕ್ತಃ ಸ ಸ್ಮಿತಂ ಕೃತ್ವಾ ಮಾಮುವಾಚ ಜನಾರ್ದನಃ ।**
**ರಕ್ಷಸೀತ್ಯೇವಮುಕ್ತಸ್ತು ವ್ರೀಡಿತೋಽಸ್ಮಿ ನರಾಧಿಪ ॥ 12 ॥**

ಬ್ರಾಹ್ಮಣನಾದರೂ ಕೃಷ್ಣ ಬಲರಾಮ ಪ್ರದ್ಯುಮ್ನರೇ ರಕ್ಷಿಸಲು ಪ್ರಯತ್ನ

2. ಅಹಂ ಹಿ ಪಾಮಿ ತೇ ಸುತಾನ್ । –ತಾ. ನಿ. – *21/16*

ಮಾಡಲಿಲ್ಲ. ಅಂದರೆ ರಕ್ಷಿಸುವೆ ಎಂದು ಆಶ್ವಾಸನೇ ನೀಡದಿರುವಾಗ ನೀನ್ಹೇಗೆ ಆಶ್ವಾಸನೆ ನೀಡುವೆ? ಎಂದ. ಆಗ ಅರ್ಜುನನು ಬಲಿಷ್ಠ ಅಸುರದೂಷಿತನಾಗಿ ಗಾಂಡೀವವು[3] ಯಾರ ಧನುಸ್ಸೋ ಅಂತಹ ಅರ್ಜುನ ನಾನಾಗಿದ್ದೇನೆ. ಹೊರತು ಸಂಕರ್ಷಣನಾಗಲಿ ಕೃಷ್ಣನಾಗಲಿ ಕಾರ್ಷ್ಣಿಯಾಗಲಿ ಅಲ್ಲವೆಂದು ತಿಳಿ ಎಂದನು.

ಬ್ರಾಹ್ಮಣನೇ! ಖಾಂಡವ ವನದಲ್ಲಿ ದೇವತೆಗಳನ್ನು ಗೆದ್ದಿರುವೆ. ನಿವಾತ ಕವಚರನ್ನು ಮುಂದೆ ಗೆಲ್ಲುವುದು ನಿಶ್ಚಿತ ಎಂದ.

ನಾನು ಹೀಗೆ ಹೇಳಿದಾಗ ಶ್ರೀಕೃಷ್ಣನು ನಸುನಗುತ್ತಾ ತ್ವಂ ರಕ್ಷಸಿ? ನೀನು ರಕ್ಷಿಸುವೆಯಾ? ಎಂದಾಗ ಅವನ ಮಾತನ್ನು ಕೇಳಿ ನನಗೆ ತಡೆಯಲಾರದ ಅವಮಾನವಾಯಿತು.[4]

**ತತೋ ಮಾಂ ವ್ರೀಡಿತಂ ಮತ್ವಾ ಪುನರಾಹ ಜನಾರ್ದನಃ ।**
**ಗಮ್ಯತಾ ಕೌರವಶ್ರೇಷ್ಠ ಶಕ್ಯತೇ ಯದಿ ರಕ್ಷಿತುಮ್ ॥ 13 ॥**

ಅರ್ಜುನನು ಅವಮಾನಿತನಾಗಿದ್ದಾನೆಂದು ತಿಳಿದು ಕೃಷ್ಣನು ಪುನಃ ಅರ್ಜುನನೇ! ನಿನಗೆ ಬ್ರಾಹ್ಮಣನ ಶಿಶುವನ್ನು ರಕ್ಷಿಸುವ ವಿಶ್ವಾಸವಿದ್ದರೆ ನೀನಲ್ಲಿಗೆ ಹೋಗಬಹುದು. ನಿನ್ನೊಂದಿಗೆ ವೃಷ್ಣ್ಯಂಧಕರೆಲ್ಲರೂ ಬರಲಿ. ಬ್ರಾಹ್ಮಣ ಶಿಶುವನ್ನು ರಕ್ಷಿಸಲಿ.

ಹೀಗೆಂದಾಗ ವೃಷ್ಣ್ಯಂಧಕರೆಲ್ಲರನ್ನೂ ಮುಂದೆ ಮಾಡಿಕೊಂಡು ರಕ್ಷಣೆಗಾಗಿ ಹೋದೆನು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಬ್ರಾಹ್ಮಣ ಶಿಶು ರಕ್ಷಣೆ ಎಂಬಲ್ಲಿ
ನೂರಹನ್ನೊಂದನೆಯ ಅಧ್ಯಾಯ ಸಮಾಪ್ತಿ

---

3. ನಾಹಂ ಸಂಕರ್ಷಣೋ ಬ್ರಹ್ಮನ್ ನ ಕೃಷ್ಣಃ ಕಾರ್ಷ್ಣಿರೇವ ವಾ ।
ಅಹಂ ಹಿ ಅರ್ಜುನೋ ನಾಮ ಗಾಂಡೀವಂ ಯಸ್ಯ ವೈ ಧನುಃ ॥ *–ಭಾಗ. 10/89/33*
ತದಾ ಜಗದ ಫಲ್ಗುನಃ ಅಸುರೈಃ ವಿದೂಷಿತಾತ್ಮನಾ ।
ನ ವಿಪ್ರ ತಾದೃಶೋಽಸ್ಮ್ಯಹಂ ಯಥೈವ ಕೇಶವಾದಯಃ ॥ – *ತಾ.ನಿ. 21/18*
4. ವಿಲಜ್ಜಮಾನಮಿಕ್ಷ್ಯ ತಂ ಜಗಾದ ಕೇಶವೋಽರಿಹಾ ।
ವ್ರಜೇತಿ ಸ ಪ್ರತಿಶ್ರವಂ ಚಕಾರ ಹಾಪ್ಯರಕ್ಷಣೇ ॥

# ಅಥ ದ್ವಾದಶಾಧಿಕಶತತಮೋಽಧ್ಯಾಯಃ

*ಅರ್ಜುನ ಉವಾಚ –*

**ಮುಹೂರ್ತೇನ ವಯಂ ಗ್ರಾಮಂ ತಂ ಪ್ರಾಪ್ಯ ಭರತರ್ಷಭ ।**
**ವಿಶ್ರಾಂತವಾಹನಾಃ ಸರ್ವೇ ನಿವಾಸಾಯೋಪ ಸಂಸ್ಥಿತಾಃ ॥ 1 ॥**

ಅರ್ಜುನನು– ಯುಧಿಷ್ಠಿರನೇ ಶ್ರೀಕೃಷ್ಣನಿಂದ ಬೀಳ್ಕೊಂಡು ಮುಹೂರ್ತ ಮಾತ್ರ ಕಾಲದಲ್ಲಿ ಬ್ರಾಹ್ಮಣನ ಗ್ರಾಮಕ್ಕೆ ಹೋಗಿ ಅಲ್ಲಿ ಉಳಿದುಕೊಳ್ಳುವ ವ್ಯವಸ್ಥೆ ಮಾಡಿಕೊಂಡೆವು. ನಮ್ಮ ವಾಹನಗಳೂ ವಿರಾಮ ಪಡೆದವು.

ನಾನು ಗ್ರಾಮದ ಮಧ್ಯದಲ್ಲಿ ಇದ್ದೆನು. ಮಹಾವೃಷ್ಟಿ ಸೈನ್ಯವು ನನ್ನನ್ನು ಸುತ್ತುವರೆದು ನಿಂತಿತ್ತು.

**ತತಃ ಶಕುನಯೋ ದೀಪ್ತಾ ಮೃಗಾಶ್ಚ ಕ್ರೂರಭಾಷಿಣಃ ।**
**ದೀಪ್ತಾಯಾಂ ದಿಶಿ ವಾಶಂತೋ ಭಯಮಾವೇದಯಂತಿ ಮೇ ॥ 2 ॥**

ಈ ಸಮಯದಲ್ಲಿ ಅತ್ಯಂತ ಪ್ರಕಾಶಮಾನವಾಗಿ ಬೆಳಗುತ್ತಿದ್ದ ದಿಕ್ಕುಗಳಲ್ಲಿ ಬಾಯಲ್ಲಿ ಬೆಂಕಿಯನ್ನುಗುಳುವ ಪಕ್ಷಿಗಳು ವಿಕಾರವಾಗಿ ಕೂಗಿಕೊಳ್ಳುತ್ತಿದ್ದವು. ಭಯಂಕರ ಗರ್ಜನೆ ಮಾಡುವ ಮೃಗಗಳೂ ಸಹ ವಿಚಿತ್ರವಾಗಿ ಕೂಗುತ್ತಾ ಮುಂದೆ ಬರಲಿರುವ ಆಪತ್ತನ್ನು ಸೂಚಿಸುತ್ತಿದ್ದವು.

ಸೂರ್ಯನು ಕಾಂತಿಹೀನನಾಗಿದ್ದನು. ಆಕಾಶದಿಂದ ಮಹಾಉಲ್ಕೆಯು ಭೂಮಿಗೆ ಬಂದು ಅಪ್ಪಳಿಸಿತು. ಇದರಿಂದಾಗಿ ಭೂಮಿಯೂ ನಡುಗಿದಳು. ರೋಮಾಂಚಕರವಾಗಿಯೂ, ಭಯಂಕರವಾಗಿಯೂ ಇದ್ದ ಮಹೋತ್ಪಾತ–ವನ್ನು ನೋಡಿದ ಸಾತ್ಯಕಿ ಮೊದಲಾದ ವೀರರು ಯುದ್ಧಕ್ಕೆ ಸನ್ನದ್ಧರಾಗಿರಲು

ತಿಳಿಸಿದರು. ರಥಗಳೂ ಸೈನಿಕರೆಲ್ಲರೂ ಸನ್ನದ್ಧರಾಗಿ ನಿಂತರು. ನಾನೂ ಸಹ ಯುದ್ಧಕ್ಕೆ ಸನ್ನದ್ಧನಾಗಿ ನಿಂತೆನು. ಅರ್ಧರಾತ್ರಿ ಕಳೆಯಿತು.

ಅದೇ ವೇಳೆಯಲ್ಲಿ ಭಯದಿಂದ ವ್ಯಾಕುಲತೆ ಹೊಂದಿದ್ದ ಬ್ರಾಹ್ಮಣನು ಭಯದಿಂದ ಕಂಪಿಸುತ್ತಾ ನಮ್ಮಲ್ಲಿಗೆ ಬಂದನು.

**ಕಾಲೋಽಯಂ ಸಮನುಪ್ರಾಪ್ತಃ ಬ್ರಾಹ್ಮಣ್ಯಾಃ ಪ್ರಸವಸ್ಯ ಮೇ ।**
**ತಥಾ ಭವಂತಃ ತಿಷ್ಠಂತು ನ ಭವೇದ್ ವಂಚನಂ ಯಥಾ ॥ 3 ॥**

**ಮುಹೂರ್ತಾದೇವ ಚಾಶ್ರೌಷಂ ಕೃಪಣಂ ರುದಿತಸ್ವನಮ್ ।**
**ತಸ್ಯ ವಿಪ್ರಸ್ಯ ಭವನೇ ಹ್ರಿಯತೇಽಹ್ರಿಯತೇತಿ ಚ ॥ 4 ॥**

**ಅಥಾಕಾಶೇ ಪುನಃ ವಾಚಮಶ್ರೌಷಂ ಬಾಲಕಸ್ಯ ವೈ ।**
**ಊಂಹೇತಿ ಹ್ರಿಯಮಾಣಸ್ಯ ನ ಚ ಪಶ್ಯಾಮಿ ರಾಕ್ಷಸಮ್ ॥ 5 ॥**

**ವಿಷ್ಟಂಭಿತೌ ದಿಶಃ ಸರ್ವಾ ಹೃತ ಏವ ಸ ಬಾಲಕಃ ॥ 6 ॥**

ಧರ್ಮರಾಜನೇ! ಬ್ರಾಹ್ಮಣನು ನನ್ನ ಪತ್ನಿಯು ಪ್ರಸವವಾಗುವ ಕಾಲ ಸಮೀಪಿಸಿದೆ. ಈ ಬಾರಿಯೂ ನನಗೆ ಮಗು ದಕ್ಕದ ಹಾಗೆ ಮಾಡದಿರಿ. ಆ ರೀತಿ ಜಾಗ್ರತೆ ವಹಿಸಿರಿ! ಎಂದು ಹೋದ ಅಲ್ಪಕಾಲದಲ್ಲಿಯೇ ಬ್ರಾಹ್ಮಣನ ಮನೆಯೊಳಗಿಂದ ದೀನವಾಗಿ ಅಳುವ ಶಬ್ದವನ್ನು ಕೇಳಿದೆ. ಮಗುವು ಅಪಹೃತವಾಗಿ ಹೋಯಿತು. ಮಗುವನ್ನು ಕಾಣುತ್ತಿಲ್ಲವಲ್ಲ ಎಂದು ಜೋರಾಗಿ ಕೂಗಿಕೊಳ್ಳುವುದನ್ನು ನಾನು ಕೇಳಿದೆ.

ನಾನು ಕೂಡ ಮಗುವು 'ಊಂಹು, ಊಂಹು' ಎಂದು ದುಃಖದಿಂದ ಗೋಳಾಡುತ್ತಿರುವ ಶಬ್ದವನ್ನು ಕೇಳಿದೆ. ಬಲರಾಮ, ಪ್ರದ್ಯುಮ್ನ, ಅನಿರುದ್ಧ ಹೊರತು ಉಳಿದ ಯಾದವ ವೀರರಿದ್ದರೂ, ಅರ್ಜುನನು ಬಾಣಾಸ್ತ್ರಗಳಿಂದ ಪ್ರಸೂತಿ ಗೃಹವನ್ನು ದಿಗ್ಬಂಧನ ಮಾಡಿದ್ದರೂ ಕ್ಷಣದಲ್ಲಿ ಮಗು ಮರೆಯಾಯಿತು.

## ಬ್ರಾಹ್ಮಣನ ಕೋಪ ಕಠಿಣನಿಂದೆ

**ಬ್ರಾಹ್ಮಣೋಽಽರ್ತ ಸ್ವರಂ ಕೃತ್ವಾ ಹೃತೇ ತಸ್ಮಿನ್ ಕುಮಾರಕೇ ।**
**ವಾಚಃ ಸ ಪರುಷಾಃ ತೀವ್ರಾಃ ಶ್ರಾವಯಮಾಸ ಮಾಂ ತದಾ ॥ 7 ॥**

**ಮಾಮೇವಂ ಹಿ ವಿಶೇಷೇಣ ಬ್ರಾಹ್ಮಣಃ ಪ್ರತ್ಯಭಾಷತ ।**
**ರಕ್ಷಿಷ್ಯಾಮಿತಿ ಚೋಕ್ತಂ ತೇ ನ ಚ ರಕ್ಷಿತವಾನಸಿ ॥ 8 ॥**

**ವೃಥಾ ತ್ವಂ ಸ್ಪರ್ಧಸೇ ನಿತ್ಯಂ ಕೃಷ್ಣೇನಾಮಿತಬುದ್ಧಿನಾ ।**
**ಯದಿ ಸ್ಯಾದಿಹ ಗೋವಿಂದೋ ನೈತದತ್ಯಾಹಿತಂ ಭವೇತ್ ॥ 9 ॥**

**ಯಥಾ ಚತುರ್ಥಂ ಧರ್ಮಸ್ಯ ರಕ್ಷಿತಾ ಲಭತೇ ಫಲಮ್ ।**
**ಪಾಪಸ್ಯಾಪಿ ತಥಾ ಮೂಢ ಭಾಗಂ ಪ್ರಾಪ್ನೋತ್ಯರಕ್ಷಿತಾ ॥ 10 ॥**

ಆ ಬಾಲಕನು ಅಪಹೃತನಾಗುತ್ತಿದ್ದಂತೆ ಬ್ರಾಹ್ಮಣನು ದುಃಖಾತಿರೇಕದಿಂದ ಆರ್ತನಾದ ಮಾಡುತ್ತಾ ನನ್ನನ್ನು ಅತಿ ಕಠೋರ ಮಾತುಗಳಿಂದ ನಿಂದಿಸಿದನು. ವೃಷ್ಣಿವೀರರೆಲ್ಲರೂ ಭ್ರಷ್ಟ ಸಂಕಲ್ಪರಾದರು. ದುರ್ಮತಿಯೇ! ಮಗುವನ್ನು ರಕ್ಷಣೆ ಮಾಡುತ್ತೇನೆಂದು ಕೊಚ್ಚಿಕೊಂಡೆ. ಆದರೆ ನಿನ್ನಿಂದ ರಕ್ಷಿಸಲಾಗಲಿಲ್ಲ. ನಾನು ಹೇಳುವ ಮಾತನ್ನಾದರೂ ಕೇಳು. ನೀವು ಶ್ರೀಕೃಷ್ಣನೊಂದಿಗೆ ವೃಥಾ ಸ್ಪರ್ಧಿಸುತ್ತಿರುವೆ. ನೀನು ಖಂಡಿತವಾಗಿಯೂ ಅವನಿಗೆ ಸಮನಾಗಲಾರೆ. ಶ್ರೀಕೃಷ್ಣನೆ ಇಲ್ಲಿ ಇದ್ದಿದ್ದರೆ ಈ ಅನಾಹುತ ತಪ್ಪುತ್ತಿತ್ತು. ಹೇಗೆ ಯಾವ ರೀತಿಯಲ್ಲಿ ದುರ್ಬಲರನ್ನು ರಕ್ಷಿಸಿ ಧರ್ಮ ಮಾಡಲು ಅನುವು ಮಾಡಿದವನಿಗೆ ಧರ್ಮದ ನಾಲ್ಕನೇ ಒಂದು ಭಾಗ ಪುಣ್ಯಫಲ ಹೊಂದುವನೋ ಹಾಗೆಯೆ ರಕ್ಷಿಸುವೆನೆಂದು ಹೇಳಿ ರಕ್ಷಿಸದಿದ್ದವನ ಪಾಪದಲ್ಲಿ ನಾಲ್ಕನೆ ಒಂದು ಭಾಗ ದುಷ್ಫಲ ಅವನಿಗೆ ಬಂದೇ ತೀರುತ್ತದೆ.

ರಕ್ಷಿಸುವೆನೆಂದು ಪ್ರತಿಜ್ಞೆ ಮಾಡಿ ರಕ್ಷಿಸದೆ ಇರುವ ನಿನಗೆ ಈ ಮಹಾಧನುಸ್ಸಾದ ಗಾಂಡೀವವು ವ್ಯರ್ಥ, ನಿನ್ನ ಶೌರ್ಯ ಪರಾಕ್ರಮ ಯಶಸ್ಸು ಎಲ್ಲವೂ ವ್ಯರ್ಥವಾಗಿ ಹೋಯಿತು.

**ಅಕಿಂಚಿದುಕ್ತ್ವಾ ತಂ ವಿಪ್ರಂ ತತೋಽಹಂ ಪ್ರಸ್ಥಿತಸ್ತಥಾ ।**
**ಸಹ ವೃಷ್ಣ್ಯಂಧಕಸುತೈಃ ಯತ್ರ ಕೃಷ್ಣೋ ಮಹಾದ್ಯುತಿಃ ॥ 11 ॥**

ಯುಧಿಷ್ಠಿರನೇ! ಇಷ್ಟು ಮರ್ಮಭೇದಕ ನಿಷ್ಠುರ ನುಡಿಯನ್ನಾಡುತ್ತಿದ್ದರೂ ಅದಕ್ಕೆ ಪ್ರತ್ಯುತ್ತರಿಸಲು ಸಮರ್ಥನಾಗದ ನಾನು ಯಾದವರೊಂದಿಗೆ ಶ್ರೀಕೃಷ್ಣನನ್ನು ನೋಡಲು ದ್ವಾರಕೆಗೆ ಹೋದೆನು. ದುಃಖಗೊಂಡಿರುವ ನಮ್ಮನ್ನು ಶ್ರೀಕೃಷ್ಣನು ನೋಡಿದನು.

ಆ ವೇಳೆಗೆ ಬ್ರಾಹ್ಮಣನೂ ಅಲ್ಲಿಗೆ ಬಂದು ಪುನಃ ನಿಂದಾವಚನ-ಗಳನ್ನಾಡಲಾರಂಭಿಸಿದನು.

**ಮೌಢ್ಯಂ ಪಶ್ಯತ ಮೇ ಯೋಽಹಂ ಶ್ರದ್ದಧೇ ಕ್ಲೀಬಕತ್ಥನಂ ।**
**ನ ಪ್ರದ್ಯುಮ್ನೋ ನಾನಿರುದ್ಧೋ ನ ರಾಮೋ ನ ಚ ಕೇಶವಃ ॥ 12 ॥**
**ಯತ್ರ ಶಕ್ತಾಃ ಪರಿತ್ರಾತುಂ ಕೋಽನ್ಯಸ್ತವನೇಶ್ವರಃ ।**
**ಧಿಗರ್ಜುನಂ ವೃಥಾವಾಚಂ ಧಿಗ್ ಆತ್ಮಶ್ಲಾಘಿನೋ ಧನುಃ ।**
**ದೈವೋಪಸೃಷ್ಟಿಯೋಃ ಮೌಢ್ಯಾದ್ ಆನಿನೀಷತಿ ದುರ್ಮತಿಃ ॥ 13 ॥**

ನನ್ನ ಮೂರ್ಖತೆಯನ್ನಾದರೂ ನೋಡಿರಿ – ಈ ನಪುಂಸಕನ ಒಣ ಮಾತಿನಲ್ಲಿ ನಾನು ವಿಶ್ವಾಸನ್ನಿರಿಸಿದೆನು. ಪ್ರದ್ಯುಮ್ನ, ಅನಿರುದ್ಧ, ಬಲರಾಮ, ಕೃಷ್ಣರೂ ಯಾವ ಮಗುವನ್ನು ರಕ್ಷಿಸುವ ವಿಷಯದಲ್ಲಿ ಪ್ರಯತ್ನ ಮಾಡಲಿಲ್ಲವೋ ಅಂತಹ ಮಗು ರಕ್ಷಣೆಯನ್ನು ಬೇರಾರು ಮಾಡಲು ಶಕ್ತರು. ಈ ವೃಥಾಭಾಷಿಯೂ ಆತ್ಮಶ್ಲಾಘನೆ ಮಾಡಿಕೊಳ್ಳುವ ಶ್ರೀಕೃಷ್ಣನೆಂಬ ದೈವವೂ ಕೈಬಿಟ್ಟಿರುವ ಅರ್ಜುನನಿಗೆ ಧಿಕ್ಕಾರ! ಧಿಕ್ಕಾರವಿರಲಿ.

### ಅರ್ಜುನನ ಅಗ್ನಿಪ್ರವೇಶ

**ಏವಂ ಶಪತಿ ವಿಪ್ರರ್ಷೌ ವಿದ್ಯಮಾಸ್ಥಾಯ ವೈಷ್ಣವೀಮ್ ।**
**ಯಯೌ ಸಂಯಮಿನೀಂ ವೀರೋ ಯತ್ರಾಸ್ತೇ ಭಗವಾನ್ ಯಮಃ॥ 14 ॥**
**ವಿಪ್ರಾಪತ್ಯಮಚಕ್ಷಾಣಃ ತತಃ ಐಂದ್ರೀಮಗಾತ್ ಪುರೀಮ್ ।**
**ಆಗ್ನೇಯಾಂ ನೈರ್ಋತೀಂ ಸೌಮ್ಯ ಮುದೀಚೀಂ ವಾರುಣೀಂ ತಥಾ ॥15॥**
**ಅಗ್ನಿಂ ವಿವಿಕ್ಷುಃ ಕೃಷ್ಣೇನ ಪ್ರದ್ಯುಮ್ನೇನ ನಿಷೇಧಿತಃ ।**
**ದರ್ಶಯೇ ದ್ವಿಜಸೂನುಂ ತೇ ಮಾಮವಜ್ಞಾತ್ಮಾನಮಾತ್ಮನಾ ॥ 16 ॥**

ಬ್ರಾಹ್ಮಣನು ಅರ್ಜುನನನ್ನು ಹೀಗೆ ಶಪಿಸುತ್ತಿರುವಾಗಲೇ ಅರ್ಜುನನು ಯಮನ ಸಂಯಮಿನೀಪಟ್ಟಣ, ಇಂದ್ರಲೋಕ, ಅಗ್ನಿ ನಿರ್ಋತಿ, ಸೋಮ ವಾಯು ವರುಣ ಲೋಕಗಳನ್ನು, ಪಾತಾಳ ಅಂತರಿಕ್ಷಾದಿ ಲೋಕಗಳನ್ನು ಮಗುವಿಗಾಗಿ ಶೋಧಿಸಿದ. ಆದರೆ ಮಗುವನ್ನು ಕಾಣದೆ ನಿರಾಶನಾಗಿ ಶ್ರೀಕೃಷ್ಣನ ಬಳಿಗೆ ಬಂದು, **'ವಹ್ನಿಂ ಪ್ರವೇಕ್ಷ್ಯೇಽಶಕ್ತಶ್ಚೇದ್'** ಎಂದು ತಾನು ಮಾಡಿದ ಪ್ರತಿಜ್ಞೆಯಂತೆ ಬೆಂಕಿಗೆ ಹಾರಲು ಉದ್ಯುಕ್ತನಾದನು. ಈ ರೀತಿಯಾಗುವುದೆಂದು ತಿಳಿದೆ ಬಲರಾಮಾದಿಗಳಿಗೆ ಅಪಕೀರ್ತಿ ತಪ್ಪಿಸಲೆಂದೆ ಅವರನ್ನು ಅರ್ಜುನನೊಂದಿಗೆ ಕಳಿಸಲಿಲ್ಲ. ಬೆಂಕಿಗೆ ಹಾರಲು ತಯಾರಾಗಿರುವ ಕಿರೀಟಿಯನ್ನು ಶ್ರೀಕೃಷ್ಣ ಪ್ರದ್ಯುಮ್ನರು ತಡೆದರು. ಅವನಿಗೆ ಸಮಾಧಾನ ಹೇಳುತ್ತಾ – ಅರ್ಜುನನೇ,

ನಿನ್ನನ್ನೇ ನೀನೇ ನಿಂದಿಸಿಕೊಳ್ಳಬೇಡ. ಬ್ರಾಹ್ಮಣ ಬಾಲಕನನ್ನು ನಿನಗೆ ನಾನು ತೋರಿಸುವೆ. ನಿನ್ನ ಕೀರ್ತಿಯು ದಿಗಂತ ವ್ಯಾಪ್ತವಾಗಿಸುತ್ತೇನೆ.

**ರಥ ಸಜ್ಜುಗೊಳಸಲು ದಾರುಕನಿಗೆ ಆದೇಶ**

ದಾರುಕನೇ! ಈ ಕೂಡಲೇ ಸುಗ್ರೀವ, ಶೈಬ್ಯ, ಮೇಘಪುಷ್ಪ, ಬಲಾಹಕಗಳೆಂಬ ಕುದುರೆಗಳನ್ನು ರಥಕ್ಕೆ ಹೂಡಿ ಪ್ರಯಾಣಕ್ಕೆ ರಥ ಸಿದ್ಧಗೊಳಸು ಎಂದನು.

## ಅನಂತಾಸನಕ್ಕೆ ಪ್ರಯಾಣ

**ಆರೋಪ್ಯ ಬ್ರಾಹ್ಮಣಂ ಕೃಷ್ಣೋ ಹ್ಯವರೋಪ್ಯ ಚ ದಾರುಕಮ್ ।**
**ಪ್ರಯಾತಾಃ ಸ್ಮ ದಿಶಂ ಸೌಮ್ಯಮುದೀಚೀಂ ಕೌರವರ್ಷಭ ॥ 17 ॥**

ರಥ ಸಜ್ಜಾಗುತ್ತಲೇ ರಥದಲ್ಲಿ ಅರ್ಜುನನ್ನು ಬ್ರಾಹ್ಮಣನನ್ನೂ ಕುಳ್ಳರಿಸಿಕೊಂಡು ದಾರುಕನನ್ನು ಇಳಸಿ, ಅರ್ಜುನನಿಗೆ ರಥವನ್ನು ನಡೆಸಲು ಆದೇಶಿಸಿದನು. ಹೀಗೆ ಮೂವರು ಸೋಮನ ದಿಕ್ಕಾದ ಉತ್ತರದಿಕ್ಕಿಗೆ ಹೊರಟೆವು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಅನಂತಾಸನ ಪ್ರಯಾಣ ಎಂಬಲ್ಲಿ
ನೂರಹನ್ನೆರಡನೆಯ ಅಧ್ಯಾಯ ಸಮಾಪ್ತಿ

# ಅಥ ತ್ರಯೋದಶಾಧಿಕಶತತಮೋಽಧ್ಯಾಯಃ

*ಅರ್ಜುನ ಉವಾಚ –*

**ತತಃ** ಪರ್ವತಜಾಲಾನಿ ಸರಿತಶ್ಚ ವನಾನಿ ಚ ।
ಅಪಶ್ಯಂ ಸಮತಿಕ್ರಮ್ಯ ಸಾಗರಂ ವರುಣಾಲಯಮ್ ॥ 1 ॥
**ತತೋ**ಽರ್ಘ್ಯಮುದಧಿಃ ಸಾಕ್ಷಾದ್ ಉಪನೀಯ ಜನಾರ್ದನಂ ।
ಸ ಪ್ರಾಂಜಲಿಃ ಸಮುತ್ಥಾಯ ಕಿಂ ಕರೋಮೀತಿ ಚಾಬ್ರವೀತ್ ॥ 2 ॥

ಶ್ರೀಕೃಷ್ಣನು, ಬೆಂಕಿಗೆ ಹಾರಲಿರುವ ನನ್ನನ್ನು ತಡೆದು, ನನ್ನೊಂದಿಗೆ ಬ್ರಾಹ್ಮಣನನ್ನೂ ಜೊತೆಗೆ ದೊಡ್ಡ ರಥವನ್ನೇರಿಸಿ, ನಾವೆಲ್ಲ ಉತ್ತರ ದಿಕ್ಕಿಗೆ ಪ್ರಯಾಣ ಮಾಡಿದೆವು. ಹಲವಾರು ಪರ್ವತಗಳನ್ನೂ, ನದಿಗಳನ್ನೂ, ಅರಣ್ಯಗಳನ್ನೂ ದಾಟಿಕೊಂಡು ಹೋದೆವು. ಅಲ್ಲಿ ವರುಣನ ನಿವಾಸ ಸ್ಥಾನವಾದ ಸಮುದ್ರ ನೋಡಿದೆವು. ಆಗ ಸಮುದ್ರ ರಾಜನೇ ಸಾಕ್ಷಾತ್ತಾಗಿ ಶ್ರೀಕೃಷ್ಣನನ್ನು ಎದುರುಗೊಂಡು ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿ, ಕೈಜೋಡಿಸಿ ನಿಂತು – ಸ್ವಾಮಿಯೇ ! ನನ್ನಿಂದ ನಿನಗೆ ಯಾವ ಕಾರ್ಯವಾಗಬೇಕೆಂದು ಕೇಳಿದನು. ಶ್ರೀಕೃಷ್ಣನು ಗೌರವ ಸ್ವೀಕರಿಸಿ ಹೀಗೆಂದನು.

ರಥ ಪಂಥಾನಮಿಚ್ಛಾಮಿ ತ್ವಯಾ ದತ್ತಂ ನದೀಪತೇ ।
ಪ್ರಸೀದ ಭಗವನ್ ನೈವಮ್ ಅನ್ಯೋಽಪ್ಯೇವಂ ಗಮಿಷ್ಯತಿ ॥ 3 ॥
ತ್ವಯ್ಯೇವ ಸ್ಥಾಪಿತಃ ಪೂರ್ವಮಗಾದೋಽಸ್ಮಿ ಜನಾರ್ದನ ।
ಅನ್ಯೋಽಪ್ಯೇವಂ ಗಮಿಷ್ಯಂತಿ ರಾಜಾನೋ ದರ್ಪಮೋಹಿತಾಃ ॥ 4 ॥

ಸಮುದ್ರರಾಜನೇ! ನಿನ್ನ ಮೂಲಕ ನನ್ನ ರಥ ಹೋಗುವಂತೆ ನನಗೆ ದಾರಿ ಮಾಡಿಕೊಡೆಂದು ಅಪೇಕ್ಷಿಸುತ್ತೇನೆ ಎಂದಾಗ ಸಮುದ್ರನು ಬದ್ಧಾಂಜಲಿಯಾಗಿ ಕೃಷ್ಣನೇ! ಪ್ರಸನ್ನನಾಗು. ನೀನು ಹೇಳಿದಂತೆ ರಥಮಾರ್ಗಕ್ಕೆ ಅವಕಾಶ ನೀಡಿದರೆ ಬೇರೆಯವರೂ ಸಹ ಆ ಹಾದಿಯಲ್ಲಿ ಹೋಗುವುದನ್ನು ಪ್ರಾರಂಭಿಸಬಹುದು. ಆಗ ನಿನ್ನಿಂದ ನನಗೆ ನೀಡಿದ ಅಗಾಧತೆಗೆ ಬೆಲೆಯೆಲ್ಲಿ? ನನ್ನ ಅಪಾರತೆಗೆ ಗತಿ ಏನು? ಮುಂದೆ ದುರಹಂಕಾರಿ ರಾಜರೆಲ್ಲರೂ ನನಗೆ ಮಾರ್ಗ ಮಾಡಿಕೊಡು ಎಂದು ಹೇಳಿ ಒತ್ತಾಯಿಸುತ್ತಾರೆ. ಆದ್ದರಿಂದ ಇದನ್ನು ವಿಚಾರಿಸಿ ನಿನಗೆ ಯಾವುದು ಯೋಗ್ಯವೆನಿಸುತ್ತದೆಯೋ ಅದನ್ನು ಮಾಡು ಎಂದನು.

**ಬ್ರಾಹ್ಮಣಾರ್ಥಂ ಮದರ್ಥಂ ಚ ಕುರು ಸಾಗರ ಮದ್ವಚಃ ।**
**ಮದೃತೇ ನ ಪುಮಾನ್ ಕಶ್ಚಿದ್ ಅನ್ಯಸ್ತ್ವಾಂ ಧರ್ಷಯಿಷ್ಯತಿ ॥ 5 ॥**
**ಅಭಿಶಾಪಭಯಾದ್ ಭೀತೋ ಬಾಢಮೇವಂ ಭವಿಷ್ಯತಿ ।**

ಸಮುದ್ರನೇ! ಬ್ರಾಹ್ಮಣನ ಕಾರ್ಯಕ್ಕಾಗಿ ನನಗಾಗಿಯಾದರೂ ನೀನು ರಥಕ್ಕೆ ಮಾರ್ಗವನ್ನು ಕಲ್ಪಿಸು. ಬೇರೆಯವರು ಈ ಮಾರ್ಗದಲ್ಲಿ ಹೋಗುವರೆಂಬ ಭಯಬೇಡ. ನನ್ನ ಹೊರತಾಗಿ ನಿನ್ನನ್ನು ಅತಿಕ್ರಮಿಸಲೂ ಯಾರಿಗೂ ಸಾಧ್ಯವಾಗುವುದಿಲ್ಲ ಎಂದಾಗ, ಸಮುದ್ರನು ಶಾಪ ನೀಡಬಹುದೆಂಬ ಭಯದಿಂದ 'ಹಾಗೆ ಆಗಲಿ' ಎಂದು ಹೇಳಿ – ಶ್ರೀಕೃಷ್ಣನೇ!

ನೀನು ಯಾವ ಮಾರ್ಗದಲ್ಲಿ ಹೋಗಬೇಕೆಂದಿಚ್ಛಿಸಿರುವಿಯೋ ಆ ಮಾರ್ಗದ ನೀರನ್ನು ನಾನು ಬತ್ತಿಸಿ ಬಿಡುತ್ತೇನೆ. ನೀನು ರಥದಲ್ಲಿ ಕುಳಿತು ಪ್ರಯಾಣಿಸಬಹುದು [**ಶೋಚಯಿಷ್ಯೇಷ ಮಾರ್ಗಂ ತೇ**].

**ಜಲಂ ಸ್ತಂಭಯ ಸಾಧೋ ತ್ವಂ ತತೋ ಯಾಸ್ಯಾಮ್ಯಹಂ ರಥೀ ।**
**ನ ಚ ಕಶ್ಚಿತ್ ಪ್ರಮಾಣಂ ತೇ ರತ್ನಾನಾಂ ವೇತ್ಸ್ಯತೇ ನರಃ ॥ 6 ॥**

ಹೀಗೆಂದಾಗ ಕೃಷ್ಣನು ನಾನು ಹಿಂದೆಯೇ ನೀನು ಯಾವಾಗಲೂ ಒಣಗಿ ಹೋಗಬಾರದೆಂದು ವರ ನೀಡಿರುವನಷ್ಟೆ! ಅದಕ್ಕಾಗಿ ನೀನು ನೀರನ್ನು ಬತ್ತಿಸಬೇಡ. ಹಾಗಾದಲ್ಲಿ ಜನರು ನಿನ್ನಲ್ಲಿರುವ ಅಪಾರ ಸಂಪತ್ತನ್ನು ತಿಳಿದುಬಿಡುವರು. ಅದಕ್ಕಾಗಿ ನಾನು ಪ್ರಯಾಣಿಸುವ ಮಾರ್ಗವನ್ನು ಸ್ವಲ್ಪಕಾಲ

ಸ್ತಂಭಿಸಿರು. ನಾನು ಆ ಸ್ತಂಭಿತವಾದ ನೀರಿನ ಮೇಲೆಯೆ ಪ್ರಯಾಣ ಮಾಡುವೆನು. ಹೀಗಾದಲ್ಲಿ ಜನರು ನಿನ್ನ ಸಂಪತ್ತು ತಿಳಿಯಲಾರರು.

**ಸ್ತಂಭಿತೇನ ತಥಾ ಭೂಮೌ ಮಣಿವರ್ಣೇನ ಭಾಸ್ವತಾ ।**
**ತತೋऽರ್ಣವಂ ಸಮುತ್ತೀರ್ಯ ಕುರೂನಪ್ಯುತ್ತರಾನ್ ವಯಮ್ ॥ 7 ॥**
**ತತಸ್ತು ಪರ್ವತಾಃ ಸಪ್ತ ಕೇಶವಂ ಸಮುಪಸ್ಥಿತಾಃ ।**

ಹೀಗೆ ಹೇಳಿದಾಗ ಸಮುದ್ರರಾಜನು ನೀರನ್ನು ಸ್ತಂಭಿಸಿ ಗಟ್ಟಿ ಮಾಡಿದನು. ಶ್ರೀಕೃಷ್ಣನು ಅದರ ಮೇಲೆ ಪ್ರಯಾಣ ಮಾಡಿದರು (ದೆವು) ದಾರಿಯಲ್ಲಿ ಉತ್ತರಕುರುದೇಶ ಅಲ್ಲಿಂದ ಗಂಧಮಾದನ ಪರ್ವತದಾಟಿ, ಮುಂದೆ ಜಯಂತ, ವೈಜಯಂತ, ನೀಲ, ರಜತ ಪರ್ವತ, ಮಹಾಮೇರು ಕೈಲಾಸ, ಇಂದ್ರಕೂಟ ಎಂಬ ಸಪ್ತಕುಲ ಪರ್ವತಗಳನ್ನು ಸಮೀಪಿಸಿದಾಗ ಈ ಪರ್ವತಾಭಿಮಾನಿಗಳು ಮೈದೋರಿ – ನಾವು ನಿನಗೆ ಯಾವ ಕಾರ್ಯ ಮಾಡಬೇಕು ಆದೇಶಿಸು ಎಂದರು. ಶ್ರೀಕೃಷ್ಣನು ಅವರ ಸತ್ಕಾರ ಸ್ವೀಕರಿಸಿ ಹೀಗೆಂದನು –

**ತಾನುವಾಚ ಹೃಷೀಕೇಶಃ ಪ್ರಣಾಮಾವನತಾನ್ ಸ್ಥಿತಾನ್ ।**
**ವಿವರಂ ಗಚ್ಛತೋ ಮೇऽದ್ಯ ರಥಮಾರ್ಗಃ ಪ್ರದೀಯತಾಮ್ ॥ 8 ॥**

ಪರ್ವತಾಭಿಮಾನಿಗಳೇ! ಗೂಢವಾದ ಪ್ರದೇಶಕ್ಕೆ ಹೋಗಲಿರುವ ನನಗೆ ರಥಮಾರ್ಗ ನೀಡಿರಿ ಎಂದಾಗ, ಪರ್ವತಾಭಿಮಾನಿಗಳು ರಥ ಹೋಗಲು ಮಾರ್ಗವನ್ನು ಮಾಡಿಕೊಟ್ಟು ಅದೃಶ್ಯರಾದರು.

**ಅಸಕ್ತಂ ಚ ರಥೋ ಯಾತಿ ಮೇಘಜಾಲೇಷ್ವಂಶುಮಾನ್ ।**
**ಸಪ್ತ ದ್ವೀಪಾನ್ ಸಸಿಂಧುಶ್ಚ ಸಪ್ತ ಸಪ್ತ ಗಿರೀನಥ ॥ 9 ॥**

ಮೇಘಜಾಲದ ಮಧ್ಯದಲ್ಲಿರುವ ಸೂರ್ಯನು ಮೇಘಗಳಿಗೆ ಸಂಪರ್ಕವಿಲ್ಲದೆ ಚಲಿಸುವಂತೆ ಯಾವುದೇ ಪ್ರತಿಬಂಧಕವಿಲ್ಲದೆ ರಥವು ಸಾಗುತ್ತಿತ್ತು. ಸಪ್ತದ್ವೀಪ, ಸಪ್ತಸಮುದ್ರಗಳನ್ನೂ, ಸಪ್ತ ದ್ವೀಪಗಳಲ್ಲಿದ್ದ ಏಳೇಳು ಕುಲ ಪರ್ವತಗಳನ್ನು ಅತಿಕ್ರಮಿಸಿ ಲೋಕಲೋಕ ಪರ್ವತಕ್ಕೆ ಬಂದಿತು.

### ಕತ್ತಲೆಯನ್ನು ಕತ್ತರಿಸಿದ ಚಕ್ರ

**ಅಥ ಪರ್ವತಭೂತಂ ತತ್ ತಿಮಿರಂ ಸಮುಪದ್ಯತ ।**
**ತದಾಸಾದ್ಯ ಮಹಾರಾಜ! ನಿಷ್ಪ್ರಯತ್ನಾ ಹಯಾಃ ಸ್ಥಿತಾಃ ॥ 10 ॥**

**ತತಃ ಚಕ್ರೇಣ ಗೋವಿಂದಃ ಪಾಟಯಿತ್ವಾ ತಮಸ್ತದಾ ।**
**ಆಕಾಶಂ ದರ್ಶಯಾಮಾಸ ರಥಪಂಥಾನ ಮುತ್ತಮಮ್ ॥ 11 ॥**

ಲೋಕಾಲೋಕ ಪರ್ವತ ದಾಟಿದ ಮೇಲೆ ರಥವು ಗಾಢಾಂಧಕಾರವನ್ನು ಪ್ರವೇಶಿಸಿತು. ಕುದುರೆಗಳು ದುಃಖದಿಂದ ರಥವನ್ನೆಳೆಯುತ್ತಿದ್ದವು. ಅಂಧಕಾರವು ಕೆಸರಿನಂತೆ ಕಾಣುತ್ತಿತ್ತು. ಆ ತಮಸ್ಸಾದರೂ' ಮುಂದೆ ಹೋದಂತೆ ಪರ್ವತದಂತೆ ಕಾಣಿಸಿತು. ಈಗ ಕುದುರೆಗಳು ಮುಂದೆ ಹೋಗದೆ ನಿಂತವು. ರಥಚಕ್ರಗಳು ಕೆಲವೆಡೆ ಕೆಸರಿನಂತಿದ್ದ ಕತ್ತಲ್ಲಲ್ಲಿ ಹೂತು ಹೋದವು. ಕೆಲವು ಕಡೆ ಪರ್ವತಗಳಂತೆ ದಾರಿಗೆ ಅಡ್ಡಕಟ್ಟಿ ನಿಂತಿತ್ತು. ಆಗ ಸಾವಿರಾರು ಸೂರ್ಯರಂತೆ ಪ್ರಖರ ಕಾಂತಿವುಳ್ಳ ಸುದರ್ಶನ ಚಕ್ರದಿಂದ ದಾರಿಗೆ ಅಡ್ಡವಾಗಿದ್ದ ಕತ್ತಲೆಯನ್ನು ಸೀಳ ಆಕಾಶ ತೋರಿಸಿದ, ಹಾಗೆ ಸೀಳುತ್ತಾ ದಾರಿ ಮಾಡಿಕೊಂಡು ಮುಂದೆ ಸಾಗಿದ.

ಚಕ್ರಾಯುಧದಿಂದ ಕತ್ತಲೆಯನ್ನು ಸೀಳ ಆಕಾಶ ತೋರಿಸಿದ ನಂತರ ನನ್ನ ಭಯ ಪರಿಹರಿಯಿತು. ನಾನು ಮುಂದೆ ಜೀವನ ಮಾಡಬಹುದೆಂಬ ಆಸೆ ಚಿಗುರಿತು.

## ಅನಂತಾಸನ ದೇವರ ದರ್ಶನ

**ತತಸ್ತೇಜಃ ಪ್ರಜ್ವಲಿತಮಪಶ್ಯಂ ತತ್ ತದಂ ಬರೇ ।**
**ಸರ್ವಲೋಕಂ ಸಮಾವಿಶ್ಯ ಸ್ಥಿತಂ ಪುರುಷವಿಗ್ರಹಮ್ ॥ 12 ॥**
**ತಂ ಪ್ರವಿಷ್ಟೋ ಹೃಷಿಕೇಶಃ ದೀಪ್ತಂ ತೇಜೋನಿಧಿಂ ತದಾ ।**
**ರಥ ಏವ ಸ್ಥಿತಶ್ಚಾಹಂ ಸ ಚ ಬ್ರಾಹ್ಮಣ ಸತ್ತಮಃ ॥ 13 ॥**

ಅನಂತರ ಅರ್ಜುನನು ಆಕಾಶದಲ್ಲಿ ಜಾಜ್ವಲ್ಯಮಾನವಾಗಿದ್ದ ತೇಜಸ್ಸನ್ನು ನೋಡಿದ. ಅದು ಪುರುಷನ ಆಕಾರದಲ್ಲಿದ್ದು ಸಕಲಲೋಕ ವ್ಯಾಪಿಸಿತ್ತು. ಶ್ರೀಕೃಷ್ಣನು ಅರ್ಜುನ ಹಾಗೂ ಬ್ರಾಹ್ಮಣನನ್ನು ಅಮುಕ್ತ ಸ್ಥಾನದಲ್ಲಿಯೆ ನಿಲ್ಲಿಸಿ,

---

1. ತಮಸ್ಸು :
ತಾರ್ಕಿಕರು ತಮಸ್ಸನ್ನು ತೇಜೋಭಾವವೆನ್ನುವರು. ಇದು ಅಪ್ರಾಮಾಣಿಕ. ಭಾಗವತ–ಹರಿವಂಶಗಳಲ್ಲಿ ತಮಸ್ಸನ್ನು ಹರಿಯು ಕತ್ತರಿಸಿದನೆಂದಿದೆ. ತೇಜೋಭಾವವಾದರೆ ಕತ್ತರಿಸುವುದು ಹೇಗೆ? ಆದ್ದರಿಂದ ತಮಸ್ಸು ಕೂಡ ದ್ರವ್ಯವೆ ಎಂದಿದ್ದಾರೆ ವ್ಯಾಸರಾಜರು. *ತರ್ಕತಾಂ – ಪರಿಚ್ಛೇದ – 2.*
**ತಮಸಃ ಚಕ್ರವಿದಾರ್ಯತ್ವ – ಪಂಕತ್ವ – ಪರ್ವತತ್ವಾದ್ಯುಕ್ತ್ಯಾ ಕಾಠಿಣ್ಯಾದಿ ಪ್ರತಿತೇಶ್ಚ॥**

ತಾನೊಬ್ಬನೇ ಮುಕ್ತಸ್ಥಾನದಲ್ಲಿದ್ದ ಆ ದಿವ್ಯ ತೇಜಸ್ಸಾದ ಮುಕ್ತ ಸ್ಥಾನದಲ್ಲಿದ್ದ ತನ್ನ ಮೂಲರೂಪದಲ್ಲಿ ಸೇರಿದ.

## ಬ್ರಾಹ್ಮಣ ಪುತ್ರರ ಆನಯನ

**ಸ ಮುಹೂರ್ತಾತ್ ತತಃ ಕೃಷ್ಣೋ ನಿಶ್ಚಕ್ರಾಮ ತದಾ ಪ್ರಭುಃ ।**
**ಚತುರೋ ಬಾಲಕಾನ್ ಗೃಹ್ಯ ಬ್ರಾಹ್ಮಣಸ್ಯಾತ್ಮಜಾನ್ ತದಾ ॥ 14 ॥**
**ತ್ರಯಃ ಪೂರ್ವಂ ಹೃತಾ ಯೇ ಚ ಸದ್ಯೋಜಾತಶ್ಚ ಬಾಲಕಃ ।**
**ಪ್ರದದೌ ಬ್ರಾಹ್ಮಣಾಯಾಥ ಪುತ್ರಾನ್ ಸರ್ವಾನ್ ಜನಾರ್ದನಃ ॥ 15 ॥**

ಶ್ರೀಕೃಷ್ಣನು ತನ್ನದೇ ಆದ ಒಂದೇ ರೂಪದಿಂದ ಮುಹೂರ್ತಕಾಲ ಐಕ್ಯ ಹೊಂದಿದ್ದು ಅವತಾರ – ಮೂಲ ರೂಪಗಳಿಗೆ ಭೇದವಿಲ್ಲವೆಂದು ಬೋಧಿಸುತ್ತಾ ತಾನು ಎಂಟು ಭುಜಗಳಿಂದ ಅಲಂಕೃತವೂ ದಿವ್ಯಭೂಷಣಭೂಷಿತವೂ, ಸರ್ವದಾ ಅತ್ಯುನ್ನತ ಗುಣಖನಿಯೂ ಆಗಿದ್ದು ಸಾವಿರ ಹೆಡೆಗಳಿರುವ ಶೇಷ ಪರ್ಯಂಕದಲ್ಲಿ ಕುಳಿತಿದ್ದು ದಿವ್ಯ ಪೀತಾಂಬರ ಧರಿಸಿ ಅನಂತ ಸೂರ್ಯಕಾಂತಿಯಿಂದ ಬೆಳಗುತ್ತಿದ್ದ ಮೂಲರೂಪದಿಂದ ಹೊರಬಂದ.

ಶ್ರೀಕೃಷ್ಣನು ಹೊರಬರುವಾಗ ಹಿಂದೆ ಮೃತರಾಗಿದ್ದ ಮೂವರು ಮಕ್ಕಳನ್ನೂ ಈಗ ತಾನೇ ಜನಿಸಿ ಅದೃಶ್ಯವಾಗಿದ್ದ ಮಗು ಹೀಗೆ ಒಟ್ಟು ನಾಲ್ಕು ಮಕ್ಕಳನ್ನು ಬ್ರಾಹ್ಮಣನಿಗೆ ನೀಡಿದನು.

ಬ್ರಾಹ್ಮಣನಾದರೂ ಮೃತವಾಗಿದ್ದ ತನ್ನ ನಾಲ್ವರೂ ಮಕ್ಕಳನ್ನು ನೋಡಿ ಪರಮಾನಂದಭರಿತನಾದನು. ಆ ವಿಪ್ರ ಪುತ್ರರಾದರೂ ನಂದ – ಸುನಂದಾದಿಗಳಾಗಿದ್ದರು. ಇವರು ಅಮುಕ್ತಸ್ಥಾನದಲ್ಲಿದ್ದ ದ್ವಾರಪಾಲಕರು. ಇವರನ್ನು ಶಿಶುರೂಪದಲ್ಲಿಯೆ ತಂದಿದ್ದು ಅದ್ಭುತಶಕ್ತಿ. ಶ್ರೀಕೃಷ್ಣನು ಅರ್ಜುನನ ಅಹಂಕಾರ ಕಳೆಯಲೆಂದೆ ಬ್ರಾಹ್ಮಣನ ಮಕ್ಕಳನ್ನು ಅನಂತಾಸನದಲ್ಲಿಟ್ಟಿದ್ದ. ಅರ್ಜುನನ ಮೇಲಿನ ಪ್ರೀತಿಯಿಂದ ಜ್ಞಾನ ನೀಡಿ ಅನುಗ್ರಹಿಸಿದ.

**ತತಃ ಸ್ಮ ದ್ವಾರಕಾಂ ಪ್ರಾಪ್ತಾಃ ಕ್ಷಣೇನ ನೃಪಸತ್ತಮ ।**
**ಅಸಂಪ್ರಾಪ್ತೇಽರ್ಧದಿವಸೇ ವಿಸ್ಮಿತೋಽಹಂ ಪುನಃ ಪುನಃ ॥ 16 ॥**

ಅರ್ಜುನನು ಧರ್ಮಜನಿಗೆ ರಾಜನ್ ! ನಾವು ಬ್ರಾಹ್ಮಣರು ನಾಲ್ಕು ಮಕ್ಕಳು ರಥದಲ್ಲಿ ಕುಳಿತು ಯಾವ ಮಾರ್ಗದಿಂದ ಎಲ್ಲಿಗೆ ಹೋಗಿದ್ದೆವೋ ಅದೇ

ಮಾರ್ಗದಲ್ಲಿ ಹಿಂತಿರೆಗಿದವು. ಈ ಘಟನೆ ನೆನೆದಾಗಲೆಲ್ಲ ಆಶ್ಚರ್ಯವಾಗುತ್ತಲೇ ಇತ್ತು.

**ಸಪುತ್ರಂ ಭೋಜಯಿತ್ವಾ ತು ದ್ವಿಜಂ ಕೃಷ್ಣೋ ಮಹಾಯಶಾಃ ।**
**ಧನೇನ ವರ್ಷಯಿತ್ವಾ ಚ ಗೃಹಂ ಪ್ರಾಸ್ಥಾಪಯದ್ ತದಾ ॥ 17 ॥**

ಶ್ರೀಕೃಷ್ಣನಾದರೂ ಅ ನಾಲ್ವರು ಪುತ್ರರಿಂದ ಸಹಿತ ಬ್ರಾಹ್ಮಣನಿಗೆ ಭೋಜನ ಮಾಡಿಸಿ, ಅವನಿಗೆ ಹಣದ ಮಳೆಗರೆದ. ಮುಂದೆ ಅವನನ್ನು ಮನೆಗೆ ಕಳುಹಿಸಿಕೊಟ್ಟ.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ದ್ವಿಜಪುತ್ರಾನಯನವೆಂಬಲ್ಲಿ
ನೂರಹದಿಮೂರನೆಯ ಅಧ್ಯಾಯ ಸಮಾಪ್ತಿ

# ಅಥ ಚತುರ್ದಶಾಧಿಕಶತತಮೋಽಧ್ಯಾಯಃ

## ಶ್ರೀಕೃಷ್ಣನ ಸ್ವರೂಪ ನಿರೂಪಣೆ

*ಅರ್ಜುನ ಉವಾಚ –*

**ತತಃ ಕೃಷ್ಣೋ ಭೋಜಯಿತ್ವಾ ಶತಾನಿ ಸುಬಹೂನಿ ಚ ।**

**ವಿಪ್ರಾಣಾಮೃಷಿಕಲ್ಪಾನಾಂ ಕೃತಕೃತ್ಯೋಽಭವತ್ ತದಾ ॥ 1 ॥**

**ತತಃ ಸಹ ಮಯಾ ಶ್ರುತ್ವಾ ವೃಷ್ಣಿ ಭೋಜೈಶ್ಚ ಸರ್ವಶಃ ।**

**ವಿಚಿತ್ರಾಶ್ಚ ಕಥಾ ದಿವ್ಯಾಃ ಕಥಯಮಾಸ ಭಾರತ ॥ 2 ॥**

ಅರ್ಜುನನು ಧರ್ಮರಾಜನಿಗೆ ಶ್ರೀಕೃಷ್ಣನ ಮಹಿಮೆಯನ್ನು ಚಿತ್ತರಿಸುತ್ತಾ ಮಕ್ಕಳನ್ನು ತಂದು ನೀಡಿದ ಶ್ರೀಕೃಷ್ಣನು ನೂರಾರು ಋಷಿಪ್ರಾಯರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ತಾನು ಕೃತಕೃತ್ಯನಾದೆನೆಂದು ತೋರಿಸಿಕೊಂಡನು.

ಬ್ರಾಹ್ಮಣರ ಭೋಜನವಾದ ನಂತರ ನನ್ನೊಂದಿಗೆ ಸಕಲ ಯಾದವ-ರಿಂದೊಡಗೂಡಿ ಕುಳಿತು ಶ್ರೀಕೃಷ್ಣನೂ ಭುಂಜಿಸಿದನು. ನಂತರ ಚಿತ್ರವಿಚಿತ್ರ ಕಥೆಗಳನ್ನು ಹೇಳಲುಪಕ್ರಮಿಸಿದನು.

ಕಥೆಯು ಮುಗಿಯುತ್ತಿರುವಂತೆಯೇ ನಾನು, ಜನಾರ್ದನನನ್ನು ತಾನು ನೋಡಿದ ಪರ್ವತಗಳು, ನೀರನ್ನು ಸ್ತಂಬಗೊಳಸುವಿಕೆ, ಪರ್ವತಗಳಲ್ಲಿ ಸುರಂಗಮಾರ್ಗ ಮೊದಲಾದ ಅತ್ಯಮಾನುಷ ವ್ಯಾಪಾರಗಳ ಪರಿಚಯ ನನಗೆ ಮಾಡಿಸು ಎಂದು.

**ಕಥಂ ಸಮುದ್ರಃ ಸ್ತಬ್ಧೋದಃ ಕೃತಸ್ತು ಕಮಲೇಕ್ಷಣ ।**
**ಪರ್ವತಾನಾಂ ಚ ವಿವರಂ ಕೃತಂ ತತ್ ಕಥಮಚ್ಯುತ ॥ 3 ॥**

**ತಮಸ್ತಚ್ಚ ಕಥಂ ಘೋರಂ ಘನಂ ಚಕ್ರೇಣ ಪಾಟಿತಮ್ ।**
**ತಚ್ಚ ತತ್ ಪರಮಂ ತೇಜಃ ಪ್ರವಿಷ್ಟೋಽಸಿ ಕಥಂ ಚ ತತ್ ॥ 4 ॥**

**ಕಿಮರ್ಥಂ ತೇನ ತೇ ಬಾಲಾಃ ತದಾ ಚಾಪಹೃತಾಃ ಪ್ರಭೋ ।**
**ಯಚ್ಚ ತೇ ದೀರ್ಘಮಧ್ವಾನಂ ಸಂಕ್ಷಿಪ್ತಂ ತತ್ ಕಥಂ ಪುನಃ ॥ 5 ॥**

**ಕಥಂ ಚಾಲ್ಪೇನ ಕಾಲೇನ ಜಾತಂ ನಃ ತದ್ ಗತಾಗತಮ್ ।**
**ಏತತ್ ಸರ್ವಂ ಯಥಾವೃತ್ತಂ ಆಚಕ್ಷ್ವ ಮಮ ಕೇಶವ ॥ 6 ॥**

ಶ್ರೀಕೃಷ್ಣನೇ! ನೀನು ಸಮುದ್ರದ ನೀರನ್ನು ಸ್ತಂಬನಗೊಳಿಸಿದ್ದು, ಪರ್ವತಗಳಲ್ಲಿ ವಿವರವುಂಟು ಮಾಡಿದ್ದು, ಘನಘೋರ ಕತ್ತಲೆಯನ್ನು ಚಕ್ರದಿಂದ ಸೀಳ ಮಾರ್ಗ ಮಾಡಿದ್ದು, ಅನಂತಾಸನದಲ್ಲಿದ್ದ ಮೂಲ ತೇಜಸ್ಸಿನಲ್ಲಿ ನೀನು ಪ್ರವೇಶಿಸಿದ್ದು, ಹೇಗೆಂದು ತಿಳಿಸು. ಇದಲ್ಲದೆ ಆ ಮೂಲ ತೇಜಸುಳ್ಳ ಪುರುಷ ಬ್ರಾಹ್ಮಣನ ಮಕ್ಕಳನ್ನು ಅಪಹರಿಸಿದ್ದು ಏಕೆ? ಲಕ್ಷೋಪಲಕ್ಷ ಯೋಜನ ಮಾರ್ಗದಲ್ಲಿರುವ ಅನಂತಾಸನವನ್ನು ಕೇವಲ ಅರ್ಧ ದಿನದಲ್ಲಿ ಹೋಗಿ ಬಂದದ್ದು ಹೇಗೆ? ಮಾರ್ಗ ಸಂಕ್ಷೇಪವಾದದ್ದು ಹೇಗೆಂದು ತಿಳಿಸು.

*ವಾಸುದೇವ ಉವಾಚ –*

**ಮದ್ದರ್ಶನಾರ್ಥಂ ತೇ ಬಾಲಾ ಹೃತಾಸ್ತೇನ ಮಹಾತ್ಮನಾ ।**
**ವಿಪ್ರಾರ್ಥಮೇಷ್ಯತೇ ಕೃಷ್ಣೋ ನಾಗಚ್ಛೇದನ್ಯಥೇತಿ ಹ ॥ 7 ॥**

**ಬ್ರಹ್ಮ ತೇಜೋಮಯಂ ದಿವ್ಯಂ ಮಹದ್ ಯದ್ ದೃಷ್ಟವಾನಸಿ ।**
**ಅಹಂ ಚ ಭರತಶ್ರೇಷ್ಠ ಮತ್ತೇಜಸ್ತತ್ ಸನಾತನಮ್ ॥ 8 ॥**

**ಪ್ರಕೃತಿಃ ಸ ಮಮ ಪರಾ ವ್ಯಕ್ತಾವ್ಯಕ್ತ ಸನಾತನೀ ।**
**ಯಾಂ ಪ್ರವಿಶ್ಯ ಭವಂತೀಹ ಮುಕ್ತಾಃ ಯೋಗವಿದುತ್ತಮಾಃ ॥ 9 ॥**

ಅರ್ಜುನನ ಪ್ರಶ್ನೆಗಳಿಗೆ ವಾಸುದೇವನು ಉತ್ತರಿಸಿದನು –

ಅರ್ಜುನನೇ ಕೇಳು ಅಸುರಾವೇಶದಿಂದಾಗಿ ನನ್ನ ಸ್ವರೂಪ ದರ್ಶನವಿಲ್ಲದ ನಿನಗೆ ಯಥಾರ್ಥ ಸ್ವರೂಪ ಜ್ಞಾನ ನೀಡಲೆಂದೆ ಅನಂತಾಸನ ರೂಪಿಯಾದ ನಾನೆ ಮಕ್ಕಳನ್ನು ಅಪಹರಿಸಿದ್ದೆ. ಬ್ರಾಹ್ಮಣರ ಪುತ್ರರನ್ನು ರಕ್ಷಿಸಲು ಶ್ರೀಕೃಷ್ಣ

ಬರುವುದು ಖಂಡಿತ. ಬೇರೆ ಯಾವುದೇ ಉಪಾಯದಿಂದಲೂ ಶ್ರೀಕೃಷ್ಣನನ್ನು ತಮ್ಮಲ್ಲಿಗೆ ಬರಿಸಿಕೊಳ್ಳಲು ಸಾಧ್ಯವಿಲ್ಲ. ಹೀಗಾಗಿ ಬ್ರಾಹ್ಮಣ ಪುತ್ರರನ್ನು ಅನಂತಾಸನ ರೂಪದಿಂದ ಅಪಹರಿಸಿದ್ದೆ.

ನೀನು ವಿಷ್ಣುಧಾಮದಲ್ಲಿ ನೋಡಿದ ವಿಷ್ಣುರೂಪವನ್ನು ಮುಕ್ತ ಬ್ರಹ್ಮಾದಿಗಳು ಆರಾಧಿಸುತ್ತಾರೆ. ಇದೊಂದು ಅಪ್ರಾಕೃತ ಸ್ಥಾನವೆನಿಸಿದ ಮುಕ್ತ ಸ್ಥಾನ. ಇಲ್ಲಿ ನೀನು ನೋಡಿದ ಸಹಸ್ರ ಫಣಾಶಯನದಲ್ಲಿ ರಮೆಯಿಂದ ಕೂಡಿರುವ ರೂಪ ನನ್ನದೆ ಆದ ಸನಾತನ ರೂಪವೆಂದೆ ತಿಳಿ. ಇದೆಲ್ಲವೂ ನನ್ನ ಪ್ರಕೃತಿ ಅಂದರೆ ನನ್ನ ಇಚ್ಛೆಯು. ಸ್ವಭಾವ ಕರ್ಮಾದಿಗಳಿಗೂ ನನ್ನ ಇಚ್ಛೆಯೇ ಕಾರಣವಾಗಿದೆ. ಈ ಕಾರ್ಯಕಾರಣಾತ್ಮಕವಾದ ಈ ಸನಾತನ ಇಚ್ಛೆಯನುಸರಿಸಿಯೆ ಜ್ಞಾನಿಗಳು ಮುಕ್ತರಾಗುವರು.

ಈ ಪರಬ್ರಹ್ಮ ವಸ್ತುವು ಶುದ್ಧಾತ್ಮ ತತ್ತ್ವಜ್ಞಾನಿಗಳಿಗೂ (ಸಾಂಖ್ಯಾನಾಂ) ಭಗವತ್ತತ್ತ್ವಜ್ಞಾನ ಸಾಧನವನ್ನು ಬಲ್ಲವರು ಮಾತ್ರ ಈ ಪರಮಾತ್ಮನನ್ನು ಹೊಂದಬಲ್ಲರು. ಈ ತೇಜಸ್ಸು ಸರ್ವಜಗತ್ತಿಗಿಂತಲೂ ಅತ್ಯಂತ ವಿಲಕ್ಷಣ.

ಅನಂತಾಸನದಲ್ಲಿ ನೀನು ನೋಡಿದ ನಿಬಿಡ ತೇಜಸ್ಸನ್ನು ನನ್ನದೆ ಇನ್ನೊಂದು ಸ್ವರೂಪವೆಂದು ತಿಳಿ. ಸಮುದ್ರ ನೋಡಿರುವಿ, ಅದರ ಸ್ತಂಬನ ನೋಡಿರುವೆ. ಸಮುದ್ರಿಕ್ತ ಗುಣವುಳ್ಳವನಾದ್ದರಿಂದಲೂ ಸಮುದ್ರ ನೆನಿಸಿದವನು ನಾನೇ, ಶತ್ರುಗಳನ್ನು ಚಲಿಸದಂತೆ ಸ್ತಂಭಿಸುವುದರಿಂದ ಸ್ತಂಭನೆನಿಸುವ ನಾನೇ ಜಲದ ನೀರನ್ನು ಸ್ತಂಭಿಸಿರುವೆ. ನಿಮಿತ್ತ ವರುಣನು.[1]

**ಅಹಂ ತಮೋ ಘನೀಭೂತಮಹಮೇವ ಚ ಪಾಟಕಃ ।**
**ಅಹಂ ಚ ಕಾಲೇ ಭೂತಾನಾಂ ಧರ್ಮಶ್ಚಾಹಂ ಸನಾತನಃ ॥ 10 ॥**

**ಚಂದ್ರಾದಿತ್ಯೌ ಮಹಾಶೈಲಾಃ ಸರಿತಶ್ಚ ಸರಾಂಸಿ ಚ ।**
**ಚತಸ್ರಶ್ಚ ದಿಶಃ ಸರ್ವಾಃ ಮಮೈವಾತ್ಮಾ ಚತುರ್ವಿಧಃ ॥ 11 ॥**

**ಚಾತುರ್ವರ್ಣ್ಯಂ ಮತ್ ಪ್ರಸೂತಂ ಚತುರಾಶ್ರಮ್ಯಮೇವ ಚ ।**
**ಚಾತುರ್ವಿಧ್ಯಸ್ಯ ಕರ್ತಾಹಮಿತಿ ಬುಧ್ಯಸ್ವ ಭಾರತ ॥ 12 ॥**

1. ಪ್ರಕೃತಿಃ – ಈಶ್ವರೇಚ್ಛಾಪ್ರಕೃತಿಃ, ಪ್ರಕೃತಿಃ ವಾಸನೇತ್ಯೇವ ತವೇಚ್ಛಾ ಅನಂತ ಕಥ್ಯತೇ ।
ಸಾಂಖ್ಯಂ – ಸಮ್ಯಕ್ ತತ್ತ್ವದೃಶಿಃ ಸಾಂಖ್ಯಮ್ । ಯೋಗಃ ತತ್ಸಾಧನಂ ಸ್ಮೃತಮ್ ।
ಸಮುದ್ರ – ಸಮುದ್ರಿಕ್ತೋ ಅನ್ಯೇಭ್ಯಃ ಸಮುದ್ರೇಕಾತ್ ಸಮುದ್ರಸ್ತು – ಐ.ಭಾಂ.
ಕಾಲಃ – ಕಲಿತಸಂಪೂರ್ಣಗುಣತ್ವಾತ್ ಕಾಲಃ ಜನಾರ್ದನಃ ।

ಪರ್ವತಗಳೂ ನಾನೆ ಆಗಿರುವೆನು. ನಾನು ಪರ್ವತನಾಮಕನಾಗಿ ಪರ್ವತಗಳಲ್ಲಿರುವುದರಿಂದ ಪರ್ವತಗಳಾಗಿವೆ. ಪರ್ವತಗಳನ್ನು ಭೇದಿಸಿ ಸುರಂಗ ಮಾಡಿದವನೂ ನಾನೆಂದು ತಿಳಿದ. ಕೆಸರಿನಂತಿರುವ ಕತ್ತಲೆಯನ್ನು ನೋಡಿದೆಯಷ್ಟೆ ಅಂಧಕಾರವೂ ನಾನೇ ಆಗಿರುವೆನು. ಘನೀಭೂತ ಕತ್ತಲೆಯನ್ನು ಭೇದಗೊಳಿಸಿದವನೂ ನಾನೇ, ಶತ್ರು ಸಂಹಾರಕನೂ, ಗುಣಪೂರ್ಣನೂ, ಜ್ಞಾನಸ್ವರೂಪನೂ ಆಗಿರುವ ನಾನೆ ಕಾಲನಾಮಕನು.

ಸರ್ವಸಂಹಾರಕನಾದ್ದರಿಂದಲೂ ಕಾಲವಾಚ್ಯನು ನಾನೆ. ಸರ್ವಧಾರಣ ಸಮರ್ಥನಾದ್ದರಿಂದ ಧರ್ಮನೂ ನಾನೆ. ಸರ್ವರ ಹವಿಸ್ಸುಗಳನ್ನು ಸ್ವೀಕರಿಸುವುದರಿಂದಲೂ, ಸರ್ವರಿಗೂ ಆದಿಯಾದ್ದರಿಂದಲೂ, ಕಾರಣನೂ ವ್ಯಾಪ್ತನೂ ನಿಯಾಮಕನಾದ್ದರಿಂದಲೂ ಆದಿತ್ಯನಾಮಕನಾಗಿರುವೆನು. ಪೂರ್ಣಸುಖರೂಪನಾದ್ದರಿಂದ ಚಂದ್ರಶಬ್ದ ವಾಚ್ಯನು ಮಹಾಶೈಲಗಳು, ಸರಿತ್ತುಗಳು, ಸರೋವರಗಳು, ನಾಲ್ಕೂ ದಿಕ್ಕುಗಳೂ ನನ್ನಿಂದ ಹುಟ್ಟಿದ್ದರಿಂದ ನಾಲ್ಕೂ ರೂಪಗಳೆನಿಸಿವೆ.[2]

ಬ್ರಾಹ್ಮಣಾದಿ ನಾಲ್ಕು ವರ್ಣಗಳ ಜನರುಗಳು ಅವರವರಿಗೆ ಯೋಗ್ಯವಾದ ಸತ್ವಾದಿ ಗುಣಗಳು ಶಮದಮಾದಿಗಳಿಂದ ಯುಕ್ತರಾಗಿಯೇ ನನ್ನಿಂದ ಹುಟ್ಟಿರುತ್ತಾರೆ. ಬ್ರಾಹ್ಮಣಾದಿ ವರ್ಣಗಳೂ, ಅಂಡಜ ಸ್ವೇದಜ – ಜರಾಯುಜ – ಉದ್ಭಿಜವೆಂಬ ನಾಲ್ಕು ರೀತಿಯ ಪ್ರಾಣಿಗಳ ಸೃಷ್ಟಿಕರ್ತನೂ ನಾನೇ.

ಇದಲ್ಲದೆ – ಬ್ರಹ್ಮದೇವನು, ಬ್ರಾಹ್ಮಣರು, ಅವರ ಅಖಂಡಿತಜ್ಞಾನ, ನಿರವಧಿಕ ಉತ್ತಮನಾದ್ದರಿಂದ, ಶಶ್ವದೇಕ ಪ್ರಕಾರನಾದ್ದರಿಂದಲೂ ಸತ್ಯನು. ಉ= ಸಂಸಾರವನ್ನು ಗ್ರಾಸ ಮಾಡುವುದರಿಂದಲೂ, ಉ = ಶಿವನನ್ನು ನೃಸಿಂಹನಾಗಿ ನುಂಗುವವನು, ಉಗ್ರನು, ಬ್ರಹ್ಮಾದಿಗಳಿಗಿಂತ ಅತ್ಯಂತ ಗುಣಪೂರ್ಣ–ನಾದ್ದರಿಂದ ಬೃಹತ್ತಮನು.

---

2. ಆದಿತ್ಯಃ – ಆದಾನಾದ್ ಹವಿಷಾಂ ಸದಾ ।
ಆದೇಃ ಆದಿತ್ಯ ನಾಮಕಃ ।
ಆದಿತ್ವಾದಾದಿಃ, ತತತ್ವಾತ್, ನಿಯಾಮಕತ್ವಾಚ್ಚ ಆದಿತ್ಯಃ ॥
ಚಂದ್ರಃ – ಚಂದ್ರಃ ಪರಃ ಸುಖಮ್ ।
ಸತ್ಯಂಃ – ಸತ್ಯಂ ಜಗತ್ ಯಾಪಯತೀತಿ ।
ಸರ್ವದೈಕಪ್ರಕಾರತ್ವಾತ್ ಸತ್ಯಂ ಬ್ರಹ್ಮ ॥

**ಶ್ರೇಯಸ್ತೇಽಹಂ ಮಹಾಬಾಹೋ ಪ್ರಿಯೋ ಮೇಽಸಿ ಧನಂಜಯ ।**
**ತೇನ ತೇ ಕಥಯಿಷ್ಯಾಮಿ ನಾನ್ಯಥಾ ವಕ್ತುಮುತ್ಸಹೇ ॥ 13 ॥**
**ಅಹಂ ಯಜೂಂಷಿ ಸಾಮಾನಿ ಋಚಶ್ಚಾಥರ್ವಣಾನಿ ಚ ।**
**ಋಷಯೋ ದೇವತಾ ಯಜ್ಞಾಃ ಮತ್ತೇಜೋ ಭರತರ್ಷಭ ॥ 14 ॥**

ಅರ್ಜುನನೇ! ನನಗೆ ನೀನೆಂದರೆ ಪ್ರಿಯ, ನಿನಗೆ ನಾನೆಂದರೆ ಎಲ್ಲಿಲ್ಲದ ಆದರ. ಹೀಗಾಗಿ ರಹಸ್ಯ ವಿಷ್ಯವನ್ನು ಹೇಳುತ್ತಿದ್ದೇನೆ.

ಅರ್ಚಿತನಾಗಿ ಪೂಜ್ಯನಾದ್ದರಿಂದ ಋಕ್, ಯಾಜ್ಯನಾದ್ದರಿಂದ ಯಜುವು. ಸರ್ವರೂಪಗಳಲ್ಲಿಯೂ ಸಮನಾದ್ದರಿಂದ ಸಾಮನಾಮಕನು. ಋಷಿಗಳು ದೇವತೆಗಳು ಯಜ್ಞಗಳು ಇವು ನನ್ನ ತೇಜಸ್ಸಿನಿಂದ ಆವಿರ್ಭೂತಗಳಾಗಿವೆ. ಪೃಥಿವ್ಯಾದಿ ಪಂಚಭೂತಗಳು, ಚಂದ್ರಾದಿತ್ಯಾದಿ ಗ್ರಹಗಳು, ಅಹೋರಾತ್ರ, ಪಕ್ಷ-ಮಾಸ - ಋತುಗಳು - ಮುಹೂರ್ತಗಳು, ಕಲೆಗಳು ಕ್ಷಣಗಳು, ಸಂವತ್ಸರಗಳು, ಮಂತ್ರಗಳು, ಸಕಲಶಾಸ್ತ್ರಗಳು, ವಿದ್ಯೆಗಳು, ತಿಳಿಯಲ್ಪಡ-ಬೇಕಾದದ್ದೆಲ್ಲವೂ ನನ್ನಿಂದಲೇ ಪ್ರಾದುರ್ಭೂತವಾಗಿವೆ.

ಜಗತ್ತಿನ ಸೃಷ್ಟಿ ಸಂಹಾರಾದಿಗಳು ನನ್ನಿಂದಲೇ, ಸ್ಥೂಲ ಸೂಕ್ಷ್ಮ ಪ್ರಪಂಚವು, ಸ್ಥೂಲ ಸೂಕ್ಷ್ಮ ಪ್ರಪಂಚವಿಲಕ್ಷಣನಾದ ನನ್ನಿಂದಲೇ.[3]

ಅರ್ಜುನನು ಧರ್ಮಜನಿಗೆ ರಾಜನೇ! ಪ್ರಸನ್ನನಾದ ಶ್ರೀಕೃಷ್ಣನು ತನ್ನ ಸ್ವರೂಪವನ್ನು ಹೇಳಿದ ಮೇಲೆ ನನ್ನ ಮನಸ್ಸೆಲ್ಲವೂ ಅವನಲ್ಲಿಯೆ ಆಸಕ್ತವಾಯಿತು. ನಾನು ಸಜ್ಜನರಿಂದ ಕೇಳಿದ, ಪ್ರತ್ಯಕ್ಷ ನೋಡಿದ ಮಹಿಮೆಯನ್ನು ನಿನಗೆ ತಿಳಿಸಿದ್ದೇನೆ.

**ಏತಚ್ಛ್ರುತ್ವಾ ಕುರುಶ್ರೇಷ್ಠೋ ಧರ್ಮರಾಜೋ ಯುಧಿಷ್ಠಿರಃ ।**
**ಪೂಜಯಾಮಾಸ ಧರ್ಮಾತ್ಮಾ ಗೋವಿಂದಂ ಪುರುಷೋತ್ತಮಂ ॥ 15 ॥**
**ವಿಸ್ಮಿತಶ್ಚಾಭವದ್ ರಾಜಾ ಸಹ ಸರ್ವೈಃ ಸಹೋದರೈಃ ॥ 16 ॥**

---

3. ತದೇವರ್ತಂ ತದು ಸತ್ಯಮಾಹುಃ ತದೇವಬ್ರಹ್ ಪರಮಂ ಕವೀನಾಮ್ ।
ತದೇವಾಗ್ನಿಃ ತದ್ವಾಯುಃ ತತ್ಸೂರ್ಯಃ ತದು ಚಂದ್ರಮಾಃ ।
ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ।
ಕಲಾಃ ಮುಹೂರ್ತಾಃ ಕಾಷ್ಠಾಶ್ಚಾಹೋರಾತ್ರಾಶ್ಚ ಸರ್ವಶಃ ।
ಅರ್ಧಮಾಸಾಃ ಮಾಸಾ ಋತವಃ ಸಂವತ್ಸರಶ್ಚ ಕಲ್ಪಂತಾಮ್ ।

ವೈಶಂಪಾಯನರು – ರಾಜನೆ, ಧರ್ಮರಾಜನು ಅರ್ಜುನನ ಬಾಯಿಂದ ಶ್ರೀಕೃಷ್ಣನ ಮಹಿಮೆಯನ್ನು ಕೇಳಿ ಆಶ್ಚರ್ಯಚಕಿತನಾಗಿ ಗೋವಿಂದನನ್ನು ಮೊದಲಿಗಿಂತಲೂ ಅಧಿಕವಾಗಿ ಗೌರವಿಸಿದನು. ಅಲ್ಲಿಗೆ ಆಗಮಿಸಿದ್ದ ರಾಜಾಧಿರಾಜರೂ, ಅವನ ತಮ್ಮಂದಿರೂ ಆಶ್ಚರ್ಯ ಹೊಂದಿ ತಲೆಬಾಗಿದರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಶ್ರೀಕೃಷ್ಣಮಹಿಮೋಪದೇಶವೆಂಬಲ್ಲಿ
ನೂರಹದಿನಾಲ್ಕನೆಯ ಅಧ್ಯಾಯ ಸಮಾಪ್ತಿ

## ಅಥ ಪಂಚದಶಾಧಿಕಶತತಮೋಽಧ್ಯಾಯಃ

### ಸಂಕ್ಷೇಪ ಶ್ರೀಕೃಷ್ಣ ಮಹಿಮೆ

*ಜನಮೇಜಯ ಉವಾಚ –*

**ಭೂಯ ಏವ ದ್ವಿಜಶ್ರೇಷ್ಠ ಯದುಸಿಂಹಸ್ಯ ಧೀಮತಃ ।**
**ಕರ್ಮಾಣ್ಯ ಪರಿಮೇಯಾಣಿ ಶ್ರೋತುಮಿಚ್ಛಾಮಿ ತತ್ತ್ವತಃ ॥ 1 ॥**

ವೈಶಂಪಾಯನರೇ, ಶ್ರೀಕೃಷ್ಣನ ಅದ್ಭುತ ಅಪಾರ ಮಹಿಮೆಗಳನ್ನು ಯಥಾವತ್ತಾಗಿ ಕೇಳಬಿಚ್ಛಿಸುವೆ. ಅವನ ಮಹಿಮೆಗಳೆಲ್ಲವೂ ಅದ್ಭುತಗಳೇ ಅದನ್ನು ತಿಳಿಸಿರಿ ಎಂದನು.

*ವೈಶಂಪಾಯನ ಉವಾಚ –*

**ಬಹೂನ್ಯಾಶ್ಚರ್ಯಭೂತಾನಿ ಕೇಶವಸ್ಯ ಮಹಾತ್ಮನಃ ।**
**ಕಥಿತಾನಿ ಮಹಾಬಾಹೋ ನಾಂತಂ ಶಕ್ಯಂ ಹಿ ಕರ್ಮಣಾಮ್ ॥ 2 ॥**

**ಅವಶ್ಯಂ ಹಿ ಮಯಾ ವಾಚ್ಯಂ ಲೇಶಮಾತ್ರೇಣ ಭಾರತ ।**

ಜನಮೇಜಯನೇ! ನಾನು ಕೇಶವನ ಅದ್ಭುತ ಮಹಿಮೆಗಳನ್ನು ತಿಳಿಸಿರುವೆ. ವಿಸ್ತಾರವಾಗಿ ಹೇಳಿದರೂ ಅವು ಮುಗಿಯದಷ್ಟಿವೆ. ಆದ್ದರಿಂದ ಸಂಕ್ಷೇಪವಾಗಿ ಚಿತ್ರರಿಸುವೆ ಕೇಳು ಎಂದರು.

**ದ್ವಾರವತ್ಯಾಂ ನಿವಸತಾ ಯದುಸಿಂಹೇನ ಧೀಮತಾ ।**
**ರಾಷ್ಟ್ರಾಣಿ ನೃಪಮುಖ್ಯಾನಾಂ ಕ್ಷೋಭಿತಾನಿ ಮಹಾತ್ಮನಾಮ್ ॥ 3 ॥**

**ಯದೂನಾಮಂತರಪ್ರೇಪ್ಸುಃ ವಿಚಕ್ರೋ ದಾನವೋ ಹತಃ ।**
**ಪುರಂ ಪ್ರಾಗ್‌ಜ್ಯೋತಿಷಂ ಗತ್ವಾ ಪುನಸ್ತೇನ ಮಹಾತ್ಮನಾ ॥ 4 ॥**
**ಸಮುದ್ರಮಧ್ಯೆ ದುಷ್ಟಾತ್ಮಾ ನರಕೋ ದಾನವೋ ಹತಃ ।**
**ವಾಸವಂ ಚ ರಣೇ ಜಿತ್ವಾ ಪಾರಿಜಾತೋ ಹೃತೋ ಬಲಾತ್ ॥ 5 ॥**

ಶ್ರೀಕೃಷ್ಣನು ದ್ವಾರಕೆಯಲ್ಲಿದ್ದಾಗ ರಾಷ್ಟ್ರ ಕ್ಷೋಭೆವುಂಟು ಮಾಡುವ ದೈತ್ಯ ಪ್ರಾಯರಾದ ರಾಜರನ್ನು ನಿಗ್ರಹಿಸಿದನು. ಅವರಲ್ಲಿ 'ವಿಚಕ್ರ' ದಾನವನು ಯಾದವರಲ್ಲಿಯೇ ಅಂತಃಕಲಹ ಮಾಡುವಂತೆ ಪ್ರಯತ್ನಿಸುತ್ತಿದ್ದನು. ಅವನನ್ನು ಕೊಂದು ಹಾಕಿದನು. ಪ್ರಾಗ್‌ಜ್ಯೋತಿಷಪುರಕ್ಕೆ ಹೋಗಿ ಗಿರಿದುರ್ಗ ಜಲದುರ್ಗಗಳಿಂದ ಅವಧ್ಯನೆನಿಸಿದ್ದ ನರಕಾಸುರನನ್ನು ಕೊಂದು ಹಾಕಿದನು.

ಪಾರಿಜಾತಪಹರಣ ಕಾಲದಲ್ಲಿ ಇಂದ್ರದೇವನನ್ನೂ ಪರಾಭವಗೊಳಿಸಿ ಬಲಾತ್ಕಾರದಿಂದ ಪಾರಿಜಾತವೃಕ್ಷವನ್ನು ತಂದನು. ಕರೂಷಾಧಿಪತಿ ದಂತ ವಕ್ತ್ರನು ಹಾಗೂ ಶತಾಪರಾಧವೆಸಗಿದ ಶಿಶುಪಾಲನು ಕೃಷ್ಣನಿಂದ ಸಂಹೃತರಾದರು.

ಬಲಿಚಕ್ರವರ್ತಿಯ ಮಗನಾದ ಸಾವಿರ ತೋಳಿನ ಬಾಣಾಸುರನು ಶಂಕರನಿಂದ ರಕ್ಷಿಸಲ್ಪಡುತ್ತಿದ್ದನು. ಅವನನ್ನು ಯುದ್ಧದಲ್ಲಿ ಕೊಲ್ಲದೆ ಪರಾಭವಗೊಳಿಸಿ ಜೀವಸಹಿತ ಬಿಟ್ಟನು.

ಮೇರುಪರ್ವತದಲ್ಲಿ ಅಗ್ನಿದೇವನೊಂದಿಗೆ ಯುದ್ಧ ಮಾಡಿ ಸೋಲಿಸಿದನು. ಸೌಭವಿಮಾನದಲ್ಲಿ ಕುಳಿತು ಸಂಚರಿಸುವ ಸಾಲ್ವನನ್ನು ಕೃಷ್ಣನು ಕೊಂದು ಹಾಕಿದನು. ಗುರುಪುತ್ರನನ್ನು ಅಪಹರಿಸಿ ಸಮುದ್ರದಲ್ಲಿ ಅಡಗಿದ್ದ ಪಂಚಜನನನ್ನು ಕೊಂದು ಪಾಂಚಜನ್ಯ ಶಂಖವನ್ನು ತನ್ನಧೀನ ಮಾಡಿಕೊಂಡನು. ಹಯಗ್ರೀವಾಸುರನೂ ಇವನಿಂದಲೆ ಪ್ರಾಣತೆತ್ತನು.

ಜರಾಸಂಧನನ್ನು 18 ಬಾರಿ ಯುದ್ಧ ಮಾಡಿ ಪರಾಭವಗೊಳಿಸಿ, ಭೀಮನಿಂದ ಕೊಲ್ಲಿಸಿ ಅವನಧೀನದಲ್ಲಿದ್ದ ರಾಜರೆಲ್ಲರನ್ನೂ ಮೋಚನಗೊಳಿಸಿದನು.

ರಥದಲ್ಲಿ ಒಬ್ಬನೇ ಹೋಗಿ ಗಾಂಧಾರ ರಾಜರನ್ನು ಸೋಲಿಸಿ ಅವನ ರಾಜಕುಮಾರಿಯನ್ನು ತಂದನು.

**ಧ್ರಷ್ಟರಾಜ್ಯಾಶ್ಚ ಶೋಕಾರ್ತಾಃ ಪಾಂಡವಾಃ ಪರಿರಕ್ಷಿತಾಃ ।**
**ದಾಹಿತಂ ಚ ವನಂ ಘೋರಂ ಪುರುಹೂತಸ್ಯ ಖಾಂಡವಮ್ ॥ 6 ॥**

ರಾಜ್ಯಭ್ರಷ್ಟರಾಗಿದ್ದು ಶೋಕದಲ್ಲಿದ್ದ ಪಾಂಡವರನ್ನು ರಕ್ಷಿಸಿದನು. ಇಂದ್ರನಿಂದ ಪರಿರಕ್ಷಿತವಾಗಿದ್ದ ಖಾಂಡವವನ್ನು ಅರ್ಜುನನೊಂದಿಗೆ ಸೇರಿ ಭಸ್ಮ ಮಾಡಿಸಿದನು. ಅಗ್ನಿಯು ಪ್ರತಿಯಾಗಿ ಗಾಂಢೀವ ಧನಸ್ಸನ್ನು ನೀಡಿದನು.

ಕುರು-ಪಾಂಡವರಿಗೆ ಯುದ್ಧ ತಡೆಯಲು ತಾನೇ ಸಂಧಿಗಾಗಿ ದೂತನಾಗಿ ಹೋದನು. ಭಾರತ ಯುದ್ಧ ಮುಗಿದ ಮೇಲೆ ನಿನ್ನ ಐದೂ ಮಕ್ಕಳನ್ನು ತಂದು ಒಪ್ಪಿಸುವೆನೆಂದು ಅವರಿಗೇನೂ ಆಗದಂತೆ ರಕ್ಷಿಸಿ ತಂದೊಪ್ಪಿಸಿದನು.

ಓತಿಕ್ಯಾತದ ಜನ್ಮದಲ್ಲಿದ್ದ ನೃಗರಾಜನನ್ನು ಶಾಪದಿಂದ ಮುಕ್ತಗೊಳಿಸಿದನು. ಕಾಲಯವನನನ್ನು ಉಪಾಯದಿಂದ ಕೊಲ್ಲಿಸಿದನು. ಮಹಾವೀರ್ಯ-ವಂತರಾಗಿದ್ದು ಮೈಂದ-ವಿವಿಧರೆಂಬ ಕಪಿಮುಖ್ಯರನ್ನು ಜಾಂಬವಂತನನ್ನೂ ಪರಾಜಯಗೊಳಿಸಿದನು. ಸಾಂದೀಪನೀ ಗುರುಗಳ ಪುತ್ರನನ್ನು ಹಾಗೂ ನಿನ್ನ ತಂದೆ ಮೃತರಾಗಿದ್ದರು. ಅವರನ್ನು ಜೀವಂತಗೊಳಿಸಿದನು. ಅನೇಕ ರಾಜರನ್ನು ಸಂಹರಿಸುವ ಅನೇಕ ಯುದ್ಧಗಳಾದವು. ಆದರೆ ಎಲ್ಲಾ ಯುದ್ಧಗಳಲ್ಲಿಯೂ ಸೋಲೆ ಕಾಣದ ಅಸಾಮಾನ್ಯ ವೀರನೆಂದರೆ ಶ್ರೀಕೃಷ್ಣನು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಶ್ರೀಕೃಷ್ಣನ ಮಹಿಮೆ ಎಂಬಲ್ಲಿ
ನೂರಹದಿನೈದನೆಯ ಅಧ್ಯಾಯ ಸಮಾಪ್ತಿ

# ಅಥ ಷೋಡಶಾಧಿಕಶತತಮೋಽಧ್ಯಾಯಃ

## ಬಾಣಾಸುರ ವೃತ್ತಾಂತ

*ಜನಮೇಜಯ ಉವಾಚ –*

**ಭೂಯ ಏವ ಮಹಾಬಾಹೋಃ ಯದುಸಿಂಹಸ್ಯ ಧೀಮತಃ ।**
**ಕರ್ಮಾಣ್ಯ ಪರಿಮೇಯಾಣಿ ಶ್ರುತಾನಿ ದ್ವಿಜಸತ್ತಮ ॥ 1 ॥**
**ಯತ್ ತ್ವಯಾ ಕಥಿತಂ ಪೂರ್ವಂ ಬಾಣಂ ಪ್ರತಿ ಮಹಾಸುರಮ್ ।**
**ಕಥಂ ಚ ದೇವದೇವಸ್ಯ ಪುತ್ರತ್ವಮಸುರೋ ಗತಃ ॥ 2 ॥**
**ಯೋಽಭಿಗುಪ್ತಃ ಸ್ವಯಂ ಬ್ರಹ್ಮನ್ ಶಂಕರೇಣ ಮಹಾತ್ಮನಾ ।**
**ಸಹವಾಸಂ ಗತೇನೈವ ಸಗಣೇನ ಗುಹೇನ ಇತು ॥ 3 ॥**
**ಬಲೇಃ ಬಲವತಃ ಪುತ್ರೋ ಜ್ಯೇಷ್ಠೋ ಭ್ರಾತೃಶತಸ್ಯ ಯಃ ।**
**ವೃತೋ ಬಾಹುಸಹಸ್ರೇಣ ದಿವ್ಯಾಸ್ತ್ರಶತಧಾರಿಣಾ ॥ 4 ॥**
**ಅಸಂಖ್ಯೈಶ್ಚ ಮಹಾಕಾಯೈಃ ಮಹಾಬಲಶತೈಃ ವೃತಃ ।**
**ವಾಸುದೇವೇನ ಸ ಕಥಂ ಬಾಣಃ ಸಂಖ್ಯೇ ಪರಾಜಿತಃ ॥ 5 ॥**

ಜನಮೇಜಯನು ವೈಶಂಪಾಯನರನ್ನು ಗುರುಗಳೇ, ರುದ್ರದೇವನಿಂದ ಅಭಿರಕ್ಷಿತನಾದ ಬಲಿಯ ಪುತ್ರನನ್ನು ಶ್ರೀಕೃಷ್ಣನು ಪರಾಜಯಗೊಳಿಸಿದನೆಂದು ಹೇಳಿದಿರಿ. ಅದನ್ನು ವಿಸ್ತಾರವಾಗಿ ಕೇಳಲು ಇಚ್ಛಿಸುವೆ.

ಬಾಣಾಸುರನು ದೇವಾಧಿದೇವನಾದ ರುದ್ರದೇವನ ಪುತ್ರ ಹೇಗಾದನು?

ಬಾಣಾಸುರನನ್ನು ಮಹಾತ್ಮನಾದ ರುದ್ರದೇವನೂ ಅವನ ಜೊತೆಗೆ ಇದ್ದ ಸ್ಕಂಧದೇವನೂ ರಕ್ಷಿಸುತ್ತಿದ್ದರು. ಬಲಿಯ ನೂರು ಪುತ್ರರಲ್ಲಿ ಜ್ಯೇಷ್ಠನೂ, ದಿವ್ಯಾಸ್ತ್ರಗಳನ್ನು ಹೊಂದಿದ್ದು, ಸಾವಿರ ತೋಳುಗಳಿಂದ ಯುಕ್ತನಾಗಿದ್ದು, ಲೆಕ್ಕವಿಲ್ಲದಷ್ಟು ಬಲಿಷ್ಠ ಸೈನ್ಯದಿಂದ ಕೂಡಿ ಯುದ್ಧವನ್ನಪೇಕ್ಷಿಯೇ ಬಂದಿದ್ದ ಬಾಣಾಸುರನು ಕೃಷ್ಣನಿಂದ ಹೇಗೆ ಸೋತು ಪ್ರಾಣಾವಶೇಷನಾಗಿ ಉಳಿಸಲ್ಪಟ್ಟನೆಂದೂ ನನಗೆ ತಿಳಿಸಿರಿ ಎಂದನು.

*ವೈಶಂಪಾಯನ ಉವಾಚ–*

**ಶೃಣುಷ್ವಾವಹಿತೋ ರಾಜನ್ ಕೃಷ್ಣಸ್ಯಾಮಿತ ತೇಜಸಃ ।**
**ಮನುಷ್ಯಲೋಕೇ ಬಾಣೇನ ಯಥಾಭೂದ್ ವಿಗ್ರಹೋ ಮಹಾನ್ ॥ 6 ॥**

**ವಾಸುದೇವೇನ ಯತ್ರಾಸೌ ರುದ್ರಸ್ಕಂಧ ಸಹಾಯವಾನ್ ।**
**ಬಲಿಪುತ್ರೋ ರಣಶ್ಲಾಘೀ ಜಿತ್ವಾ ಜೀವನ್ ವಿಸರ್ಜಿತಃ ॥ 7 ॥**

ಜನಮೇಜಯನೇ, ಭೂಲೋಕದಲ್ಲಿ ಮಹಾಸಾಮರ್ಥ್ಯಶಾಲಿಯಾದ ಶ್ರೀಕೃಷ್ಣನಿಗೆ ಬಾಣಾಸುರನಿಗೂ ನಡೆದ ಘೋರ ಯುದ್ಧವನ್ನು ಹೇಳುವೆ ಕೇಳು.

**ದೃಷ್ಟ್ವಾ ವಪುಃ ಕುಮಾರಸ್ಯ ಕ್ರೀಡತಶ್ಚ ಮಹಾತ್ಮನಃ ।**
**ಬಲಿಪುತ್ರೋ ಮಹಾವೀರ್ಯೋ ವಿಸ್ಮಯಂ ಪರಮಂ ಗತಃ ॥ 8 ॥**

**ತಸ್ಯಬುದ್ಧಿಃ ಸಮುತ್ಪನ್ನಾ ತಪಶ್ಚರ್ತುಂ ಸುದುಷ್ಕರಮ್ ।**
**ರುದ್ರಸ್ಯಾರಾಧನಾರ್ಥಾಯ ದೇವಸ್ಯ ಸ್ಯಾಂ ಯಥಾ ಸುತಃ ॥ 9 ॥**

ರಾಜನೇ, ಹಿಂದೆ ಶಿವಪುತ್ರನಾದ ಷಣ್ಮುಖನು ಕ್ರೀಡಾಸಕ್ತನಾಗಿದ್ದನು. ಆಗಲೇ ಬಲಿಯ ಪುತ್ರನಾದ ಬಾಣನು ಅವನ ಸುಂದರ ರೂಪವನ್ನು ನೋಡಿ ಆಶ್ಚರ್ಯಚಕಿತನಾದನು. ಸ್ಕಂಧನಂತೆಯೇ ತಾನೂ ಶಿವ ಪಾರ್ವತಿಯರ ಪುತ್ರನಾಗಲು ಇಚ್ಛಿಸಿ, ರುದ್ರನನ್ನುದ್ದೇಶಿಸಿ ಉಗ್ರ ತಪಸ್ಸನ್ನಾಚರಿಸಿದನು. ಅತಿಘೋರ ತಪಸ್ಸಿನಿಂದ ಶರೀರವು ಒಣಗಿತು. ಅಹಂಭಾವವೂ ಮೊಳೆಯಿತು. ತಾನೇ ಮಹಾತಪಸ್ವಿಯೆಂಬ ಭಾವನೆ ಹೊಂದಿದನು.

ಬಾಣನ ತಪಸ್ಸಿನಿಂದ ಸಂತುಷ್ಟನಾದ ರುದ್ರದೇವನು ಅವನಿಗೆ ಕಾಣಿಸಿಕೊಂಡು **'ವರಂ ವರಯ ಭದ್ರಂತೇ ಯತ್ತೇ ಮನಸಿ ವರ್ತತೇ'** ಎಂದನು.

ಅದಕ್ಕೆ ಬಾಣಾಸುರನು,

**ದೇವ್ಯಾಃ ಪುತ್ರತ್ವಮಿಚ್ಛಾಮಿ ತ್ವಯಾ ದತ್ತಂ ತ್ರಿಲೋಚನ ।**

ನೀನು ಪ್ರೀತನಾಗಿದ್ದರೆ – ನಾನು ಪಾರ್ವತಿಯ ಮಗನಾಗಲು ಬಯಸುವೆ ರುದ್ರದೇವನು ಹಾಗೆ ಆಗಲೆಂದು ಹೇಳಿ ಪಾರ್ವತಿಗೆ ಹೀಗೆ ಹೇಳಿದನು.

**ಕನೀಯಾನ್ ಕಾರ್ತಿಕೇಯಸ್ಯ ಪುತ್ರೋಽಯಂ ಪ್ರತಿಗೃಹ್ಯತಾಮ್ ॥ 10 ॥**

ಪಾರ್ವತಿ! ಬಾಣನನ್ನು ನಿನ್ನ ಪುತ್ರನನ್ನಾಗಿ ಸ್ವೀಕರಿಸು, ಇನ್ನು ಮುಂದೆ ಇವನು ಸ್ಕಂಧನ ಚಿಕ್ಕ ತಮ್ಮನೆಂದು ಭಾವಿಸು ಎಂದು.

ಪಾರ್ವತಿಯೇ! ಯಾವ ಶೋಣಿತಪುರದಲ್ಲಿ ಅಗ್ನಿಕುಮಾರನಾಗಿ ಸ್ಕಂಧನು ಆವಿರ್ಭವಿಸಿದನೋ ಅದೇ ಸ್ಥಳವೆ ಬಾಣಾಸುರನ ರಾಜಧಾನಿಯಾಗಲಿ. ಈ ಪಟ್ಟಣವು 'ಶೋಣಿತಪುರೀ' ಎಂದು ಪ್ರಸಿದ್ಧವಾಗುತ್ತದೆ. ನನ್ನಿಂದ ರಕ್ಷಿತ–ವಾಗಿರುವ ಈ ಬಾಣಾಸುರನನ್ನು ಯಾರೂ ಗೆಲ್ಲಲಾರರು.

**ಮಯಾಭಿಗುಪ್ತಂ ಶ್ರೀಮಂತಂ ನ ಕಶ್ಚಿತ್ ಪ್ರಸಹಿಷ್ಯತಿ ।**

ರುದ್ರದೇವನು ಹೀಗೆ ವರ ನಿಡಿದ ನಂತರ ಬಾಣನು ಶೋಣಿತಪುರದಲ್ಲಿಯೇ ವಾಸ ಮಾಡುತ್ತಿದ್ದನು. ರಾಜ್ಯವನ್ನಾಳುತ್ತಲೆ ರುದ್ರ ವರದಿಂದ ದರ್ಪಿಷ್ಠನಾಗಿ ಸಕಲ ದೇವತೆಗಳನ್ನೂ ಕ್ಷೋಭೆಗೊಳಗಾಗಿಸಿದ.

ಸಾವಿರ ಬಾಹುಗಳಿಂದಲೂ ವೀರ್ಯಮದದಿಂದಲೂ ದೇವತೆಗಳನ್ನು ಕಡೆಗಣಿಸುತ್ತಾ ಅವರೊಂದಿಗೆ ಯುದ್ಧ ಸಿದ್ಧತೆಯನ್ನು ಮಾಡಿದನು.

**ಧ್ವಜಂ ಚಾಸ್ಯ ದದೌ ಪ್ರೀತಃ ಕುಮಾರೊ ಹ್ಯಗ್ನಿ ತೇಜಸಾಮ್ ।**
**ವಾಹನಂ ಚೈವ ಬಾಣಸ್ಯ ಮಯೂರಂ ದೀಪ್ತತೇಜಸಮ್ ॥ 11 ॥**

ಬಾಣಾಸುರನ ವಿಷಯದಲ್ಲಿ ಪ್ರಸನ್ನನಾದ ಸ್ಕಂಧನು ಅಗ್ನಿತೇಜೋಪಮವಾದ ಧ್ವಜವನ್ನೂ, ತನ್ನ ವಾಹನ ಮಯೂರವನ್ನು ನೀಡಿದನು.

ಮಹಾದೇವನಿಂದ ರಕ್ಷಿತನಾಗಿರುವ ಬಾಣನೊಂದಿಗೆ ದೇವಗಂಧರ್ವ ಯಕ್ಷಪನ್ನಿಗರಾಗಲಿ ಯುದ್ಧ ಮಾಡಲು ಬೆದರಿದರು. ಬಾಣಾಸುರನಾದರೂ ಯುದ್ಧಕಾಂಕ್ಷಿಯಾಗಿಯೆ ಇರುತ್ತಿದ್ದನು.

ಒಂದು ಬಾರಿ ಬಾಣಾಸುರನು ರುದ್ರದೇವನನ್ನು ನಮಸ್ಕರಿಸಿ ಅಭಿವಾದನ ಮಾಡುತ್ತಾ ಹೀಗೆಂದನು.

**ಅಸಕೃನ್ನಿರ್ಜಿತಾ ದೇವಾ ಸಸಾಧ್ಯಾಃ ಸಮರುದ್ಗಣಾಃ ।**

ರುದ್ರದೇವನೇ! ನಿನ್ನ ಆಶ್ರಯದಲ್ಲಿರುವ ನಾನು ಮದಾಭಿಮಾನದಿಂದ ಕೂಡಿದ್ದು ಸಾಧ್ಯಗಣವನ್ನೂ, ಮರುದ್ಗಣವನ್ನೂ ದೇವತೆಗಳನ್ನೂ ಸೋಲಿಸಿರುವೆನು. ಪರಾಜಿತರಾಗಿರುವ ದೇವಾದಿಗಳು ಈ ಪ್ರದೇಶಕ್ಕೆ ಬಂದು ಸುಖವಾಗಿ ವಾಸ ಮಾಡುತ್ತಿರುವರು. ಸ್ವರ್ಗದಲ್ಲಿಯೂ ಸುಖವಾಗಿರುವರು.

**ತೇ ಪರಾಜಯ ಸಂತ್ರಸ್ತಾಃ ನಿರಾಶಾಃ ಮತ್ಪರಾಜಯೇ ॥ 12 ॥**

ಇನ್ನು ಮುಂದೆ ನನ್ನೊಂದಿಗೆ ಯುದ್ಧ ಮಾಡುವ ಗೋಜಿಗೆ ಬರಲಾರರು. ಯುದ್ಧ ಮಾಡಲು ನನಗೆ ಪ್ರತಿಯೋಧರೆ ಇಲ್ಲದಂತಾಗಿ ನಾನು ನಿರಾಶನಾಗಿದ್ದೇನೆ.

**ಅಯುಧ್ಯತಃ ವೃಥಾ ತೇಷಾಂ ಬಾಹೂನಾಂ ಧಾರಣಂ ಮಮ ।**

ಯುದ್ಧಾವಕಾಶವೆ ಇಲ್ಲದ ನನಗೆ ಈ ಸಾವಿರ ಬಾಹುಗಳು ಭಾರವಾಗಿವೆ. ನನ್ನೊಂದಿಗೆ ಯುದ್ಧ ಮಾಡಲು ಯಾರಾದರೂ ಲಭಿಸುವರೇ ಎಂದು ಹೇಳು. ಬಾಣಾಸುರನ ಮಾತನ್ನು ಕೇಳಿ ರುದ್ರದೇವನು ಜೋರಾಗಿ ನಕ್ಕು ಹೀಗೆಂದನು.

**ಭವಿತಾ ಬಾಣ! ಯುದ್ಧಂ ವೈ ಯಥಾ ತಚ್ಛೃಣು ದಾನವ ॥ 13 ॥**

**ಧ್ವಜಸ್ಯಾಸ್ಯ ಯದಾ ಭಂಗಸ್ತವ ತಾತ ಭವಿಷ್ಯತಿ ।**
**ಸ್ವಸ್ಥಾನೇ ಸ್ಥಾಪಿತಸ್ಯಾಥ ತದಾ ಯುದ್ಧಂ ಭವಿಷ್ಯತಿ ॥ 14 ॥**

ಬಾಣಾಸುರನೇ ನಿರಾಶನಾಗಬೇಡ. ನಿನಗೆ ಯುದ್ಧ ಆತಿಥ್ಯವು ಲಭಿಸುತ್ತದೆ. ಯಾವಾಗ? ನಿನ್ನ ಧ್ವಜವು ಯಾವಾಗ, ಮುರಿದು ಬೀಳುವುದೋ ಆಗ ನಿನಗೆ ಯುದ್ಧಕ್ಕೆ ಅವಕಾಶ ಲಭಿಸುತ್ತದೆ ಎಂದನು.

ಈ ಮಾತನ್ನು ಕೇಳಿದ ಬಾಣನಿಗೆ ಪರಮಾನಂದವಾಯಿತು. ಅದೃಷ್ಟವಶಾತ್ ನಾನು ನನ್ನ ಸಾವಿರ ತೋಳುಗಳನ್ನು ವ್ಯರ್ಥವಾಗಿ ಧಾರಣೆ ಮಾಡುತ್ತಿಲ್ಲ. ಅದೃಷ್ಟದಿಂದಲೇ ಪುನಃ ನಾನು ಸಹಸ್ರಾಕ್ಷನನ್ನು ಯುದ್ಧದಲ್ಲಿ ಪರಾಭವ–ಗೊಳಿಸುವೆನು.

**ದಿಷ್ಟ್ಯಾ ಸಹಸ್ರಾಕ್ಷಮಹಂ ವಿಜೇತಾ ಪುನರಾಹವೇ ।**

ಹೀಗೆ ಹೇಳುತ್ತಾ ನೇತ್ರಗಳಿಂದ ಆನಂದಭಾಷ್ಪ ಸುರಿಸುತ್ತಾ, ಐದುನೂರು ಬಾರಿ ಕೈಜೋಡಿಸುತ್ತಾ ದಂಡಾಕಾರ ಪಾದಗಳಿಗೆ ಬಿದ್ದನು.

ರುದ್ರದೇವನು ಅವನನ್ನು ಹಿಡಿದು ಎಬ್ಬಿಸುತ್ತಾ – ಬಾಣನೇ, ನಿನ್ನ ಸಾವಿರ ತೋಳುಗಳ ಬಲಕ್ಕೆ ಅನುರೂಪನಾದ, ನಿನ್ನ ಪರಾಕ್ರಮಾನುರೂಪ ಪರಾಕ್ರಮವುಳ್ಳ ಶ್ರೇಷ್ಠ ಕುಲದಲ್ಲಿ ಜನಿಸಿರುವ ವೀರನೊಂದಿಗೆ ನೀನು ಯುದ್ಧ ಮಾಡಲಿರುವೆ.

ಶಂಕರನ ಈ ಕರ್ಣ ಸುಖಕರ ಮಾತನ್ನು ಕೇಳಿದ ಬಾಣನು ನಮಸ್ಕರಿಸಿ ಹೊರಟು, ತನ್ನ ಧ್ವಜ ಸ್ಥಾಪಿಸಿದ ಭವನಕ್ಕೆ ತೆರಳಿದನು. ಸಿಂಹಾಸನದಲ್ಲಿ ಕುಳಿತು ಬಾಣಾಸುರನು ಜೋರಾಗಿ ಅಟ್ಟಹಾಸ ಮಾಡುತ್ತಾ ತನ್ನ ಮಂತ್ರಿ ಕುಂಭಾಂಡಕನಿಗೆ ಹೀಗೆ ಹೇಳಿದನು.

**ಅಭಿಪ್ರಾಪ್ಸ್ಯಾಮ್ಯಹಂ ಯುದ್ಧಂ ಮನಸಃ ತುಷ್ಟಿವರ್ಧನಮ್ ॥ 15 ॥**

ಕುಂಭಾಂಡನೇ! ನಿನಗೆ ಅತ್ಯಂತ ಪ್ರಿಯವಾದ ವಿಚಾರ ಹೇಳುವೆ. ಇದು ನಿನಗೂ ಇಷ್ಟವಾದದ್ದೆ. ಮಂತ್ರಿಯಾದರೂ ಅದೇನೆಂದು ಹೇಳುವವನಾಗು. ದೇವದೇವನಿಂದ ಉತ್ತಮ ವರ ಲಭ್ಯವಾಯಿತೆ? ಅಥವಾ ನಿನಗೆ ಅನರ್ಘ್ಯ ವಸ್ತು ಪ್ರಾಪ್ತವಾಯಿತೇ, ಅಥವಾ ಶೂಲಪಾಣಿಯು ಮೂರ್ಲೋಕಾಧಿಪತ್ಯ ಕೊಟ್ಟನೆ, ಇಂದ್ರನೇನಾದರೂ ನಿನ್ನ ಭಯದಿಂದ ಪಾತಾಳ ಸೇರಿದನೆ? ದಿತಿಪುತ್ರರು ವಿಷ್ಣು ಭಯದಿಂದ ಮುಕ್ತರಾದರೆ? ಅಥವಾ ದೈತ್ಯರೆಲ್ಲರೂ ರಕ್ಷಕನಾದ ನಿನ್ನ ಬಲದಿಂದ ಸ್ವರ್ಗದಲ್ಲಿರಲು ಹೊರಟು ಹೋದರೆ?

ವಿಷ್ಣುವಿನಿಂದ ಪರಾಜಿತನಾಗಿ ಸುತಲದಲ್ಲಿರುವ ನಿನ್ನ ತಂದೆ ಸಮುದ್ರ ವಿವರದಿಂದ ಮೇಲೆ ಬಂದು ತ್ರೈಲೋಕ್ಯಾಧಿಪತ್ಯ ವಹಿಸಿದೆನೆ. ವಿರೋಚನ ಪುತ್ರನಾದ ಬಲಿಯು ಪುನಃ ಮೊದಲಿನಂತೆಯೇ ದಿವ್ಯಾಭರಣಭೂಷಿತನಾಗಿ ದಿವ್ಯಾಸ್ತ್ರ ಧರಿಸುವುದನ್ನು ನಾವು ಕಾಣಬಹುದೆ?

ಮೂರು ಹೆಜ್ಜೆ ನೆಪದಲ್ಲಿ ಛಲದಿಂದ ಮೂರು ಲೋಕಗಳನ್ನು ಆಕ್ರಮಿಸಿದ ಲೋಕಗಳನ್ನು ದೇವತೆಗಳೆಲ್ಲರನ್ನೂ ಸೋಲಿಸಿ ಪುನಃ ಪಡೆದು-ಕೊಳ್ಳುತ್ತೇವೆಯೆ? ಯಾರ ಘೋಷವು ಮೇಘನಾದದಂತೆ ಗಂಭೀರವೊ ಅಂತಹ ನಾರಾಯಣನನ್ನು ಪುನಃ ಯುದ್ಧದಲ್ಲಿ ಗೆಲ್ಲುತ್ತೇವೆಯೆ?

ನಿನ್ನ ಆನಂದ ಉತ್ಸಾಹ ನೋಡುತ್ತಿದ್ದರೆ ಈಗ ನಾನು ಹೇಳಿದ್ದರಲ್ಲಿ ಯಾವುದಾದರೊಂದು ನಡೆದಿರಲೇಬೇಕು?

ಅಥವಾ ಈಶ್ವರಾನುಗ್ರಹ ಹಾಗೂ ಕಾರ್ತಿಕೇಯನ ಬೆಂಬಲದಿಂದ ನಮ್ಮೆಲ್ಲರಿಗೂ ರಾಜ್ಯ ಸಂಪತ್ತು ದೊರೆಯುವುದೇ? ಹೇಳು ಎಂದನು.

**ಚಿರಾತ್ ಪ್ರಭೃತಿ ಕುಂಭಾಂಡ ! ನ ಯುದ್ಧಂ ಪ್ರಾಪ್ಯತೇ ಮಯಾ ।**

ಕುಂಭಾಂಡನೇ! ನನಗೆ ಬಹುದಿವಸಗಳಿಂದಲೂ ಯಾರೊಂದಿಗೂ ಯುದ್ಧ ಮಾಡುವ ಅವಕಾಶವೆ ಇರಲಿಲ್ಲ. ಇದಕ್ಕಾಗಿ ನಿರಾಶನಾಗಿದ್ದ ನಾನು ಶಿವನನ್ನು ಸಂತೋಷಪಡಿಸಿ ನನ್ನ ವಾಂಛೆಯನ್ನು ಶಿವನ ಮುಂದೆ ಹೇಳಿದೆ. ನನಗೆ ಯಾರೊಂದಿಗಾದರೂ ಯುದ್ಧ ಮಾಡುವ ಅವಕಾಶ ಲಭಿಸುವುದೆ ಎಂದಾಗ ಬಾಣನೆ! ನಿನ್ನಲ್ಲಿರುವ ಮಯೂರಧ್ವಜವು ಮುರಿದುಬಿದ್ದಾಗ ನಿನಗೆ ಯುದ್ಧದ ಅವಕಾಶ ಲಭಿಸುತ್ತದೆ ಎಂದ. ಇದನ್ನು ನಿನಗೆ ತಿಳಿಸಲೆಂದೆ ನಿನ್ನಲ್ಲಿಗೆ ಬಂದೆ ಎಂದಾಗ ಕುಂಭಾಂಡನು–

**ಅಹೋ ನ ಶೋಭನಂ ರಾಜನ್ ಯದೇವಂ ಭಾಷಸೇ ವಚಃ ॥ 16 ॥**

ರಾಜನೇ! ಈ ನಿನ್ನ ಮಾತು ಪರಿಣಾಮದಲ್ಲಿ ಕೆಟ್ಟ ಪರಿಣಾಮ ಬೀರುವುದೆಂದು ನನಗೆನಿಸುತ್ತಿದೆ.

ಹೀಗೆ ಅವರಿಬ್ಬರೂ ಮಾತನಾಡುತ್ತಿರುವಾಗಲೆ ಇಂದ್ರದೇವನ ವಜ್ರಾಯುಧದಿಂದ ಹೊಡೆಯಲ್ಪಟ್ಟದ್ದಕ್ಕಾಗಿ ಬಾಣನ ಮಯೂರ ಧ್ವಜವು ಕೆಳಗುರುಳಿತು.

**ಧ್ವಜಃ ಪಪಾತ ವೇಗೇನ ಶಕ್ರಾಶನಿ ಸಮಾಹತಃ ।**

ತನ್ನ ಧ್ವಜವು ಮುರಿದು ಬಿದ್ದದ್ದನ್ನು ನೋಡಿದ ಬಾಣಾಸುರನು ತನಗೆ ಯುದ್ಧ ಮಾಡುವ ಅವಕಾಶ ಸಮೀಪಿಸಿತೆಂದು ಸಂತೋಷ ಹೊಂದಿದನು.

ಇಂದ್ರದೇವನ ವಜ್ರಾಹುತಿಯಿಂದ ಭೂಮಿಯು ಕಂಪಿಸಿತು ಭೂಮಿಯೊಳಗಿದ್ದ ಮಾರ್ಜಾರವು ಆರ್ತನಾದ ಮಾಡತೊಡಗಿತು.

ಇಂದ್ರದೇವನು ಶೋಣಿತ ಮಳೆಯನ್ನು ಸುರಿಸುತ್ತಾ ಶೋಣಿತಪುರವೆಂಬ ನಾಮ ಸಾರ್ಥಕಗೊಳಿಸಿದನು. ಅದೇ ಸಮಯದಲ್ಲಿಯೇ ಮಹಾಉಲ್ಕೆಯು ಸೂರ್ಯನನ್ನು ಭೇದಿಸಿ ಭೂಮಿಯ ಮೇಲೆ ಬಿದ್ದಿತು. ಸೂರ್ಯನು ಭರಣಿ ನಕ್ಷತ್ರವನ್ನು ಪೀಡಿಸಲಾರಂಭಿಸಿದನು. ಗಿಡಗಳು ರಕ್ತಹರಿಸಿದವು. ಗ್ರಹಣ ಕಾಲವಲ್ಲದಿದ್ದರೂ ರಾಹುವು ಸೂರ್ಯನನ್ನು ಕಬಳಿಸಿದ. ಸಿಡಿಲುಗಳು

ಸಿಡಿದವು. ಧೂಮಕೇತುವು ದಕ್ಷಿಣ ದಿಕ್ಕನ್ನು ಆಶ್ರಯಿಸಿದನು. ನಿರಂತರ ಬಿರುಗಾಳಿ ಬೀಸಿತು. ಸೂರ್ಯಮಂಡಲ ಬಿಳಿ, ಕೆಂಪು, ಕಪ್ಪು ಬಣ್ಣಗಳಿಂದ ಆವರಿಸಲ್ಪಟ್ಟಿತು.

ಕುಜನು ವಕ್ರಗತಿಯಿಂದ ಕೃತ್ತಿಕಾ ನಕ್ಷತ್ರವನ್ನು ಪ್ರವೇಶಿಸಿದ್ದನು. ಇವೆಲ್ಲವೂ ಬಾಣಾಸುರನ ಜನ್ಮನಕ್ಷತ್ರವಾದ ರೋಹಿಣಿಯನ್ನು ಭಯಪಡಿಸುವಂತಿತ್ತು. ಚೈತ್ರವೃಕ್ಷವು ಬಲಿಷ್ಠವಾಗಿದ್ದೂ ಮುರಿದುಬಿತ್ತು. ಇಷ್ಟೆಲ್ಲ ಉತ್ಪಾತಗಳು ಕಂಡುಬಂದರೂ ಬಾಣಾಸುರನು ಕಂಡೂ ಕಾಣದಂತಿದ್ದನು.

*ಕುಂಭಾಂಡಕ ಉವಾಚ –*

**ಉತ್ಪಾತಾ ಹ್ಯತ್ರ ದೃಶ್ಯಂತೇ ಕಥಯಂತೋ ನ ಶೋಭನಮ್ ।**
**ತವ ರಾಜ್ಯವಿನಾಶಾಯ ಭವಿಷ್ಯಂತಿ ನ ಸಂಶಯಃ ॥ 17 ॥**

ರಾಜನೇ! ನಮ್ಮಲ್ಲಾಗುತ್ತಿರುವ ಉತ್ಪಾತಗಳು ಶುಭಸೂಚಕಗಳಲ್ಲ. ಇವೆಲ್ಲವೂ ನಿನ್ನ ರಾಜ್ಯವನ್ನು ನಾಶ ಮಾಡಲೆಂದೇ ಕಾಣಿಸುತ್ತಿವೆ. ನಿನ್ನ ದುನ್ಮಯದಿಂದಾಗಿ ಮಂತ್ರಿಗಳಾದ ನಾವೆಲ್ಲರೂ, ಸೇವಕ ಬಂಧು ಬಾಂಧವರು ಮೃತರಾಗುವುದು ನಿಶ್ಚಿತ. ನಿನ್ನ ದುರಭಿಮಾನದಿಂದಾಗಿ ಯುದ್ಧಕ್ಕಾಗಿ ಗರ್ಜಿಸುತ್ತಿರುವೆ ಎಂದು ಹೇಳಿದರೂ ಬಾಣನು ಗಮನಕೊಡದೆ,

**ರಾಜಾ ಪ್ರಮಾದೀ ದುರ್ಬುದ್ಧಿಃ ಜಿತಕಾಶೀ ಮಹಾಸುರಃ ।**
**ಯುದ್ಧಮೇವಾಭಿಲಷತೇ ನ ದೋಷಾನ್ ಮನ್ಯತೇ ಮದಾತ್ ॥ 18 ॥**

ರಾಜನೀಗ ಮಹಾಪ್ರಮಾದಕ್ಕೆ ಪಣತೊಟ್ಟಿದ್ದಾನೆ. ದುರ್ಬುದ್ಧಿಯಾದ ಇವನು ಸರ್ವರನ್ನೂ ಜಯಿಸುವ ಹಂಬಲ ಹೊತ್ತಿರುವಂತಿದೆ. ಉತ್ಪಾತಗಳಿಂದ ಸೂಚಿಸಲ್ಪಟ್ಟ ವಿನಾಶವು ಮಿಥ್ಯಾವಾಗುವುದಿಲ್ಲ. ಇದನ್ನು ಸುಳ್ಳು ಮಾಡುವ ಉಪಾಯವೂ ಇಲ್ಲ.

ಈ ನಮ್ಮ ಪಟ್ಟಣದಲ್ಲಿ ರುದ್ರದೇವನ, ಸ್ಕಂಧದೇವನ ದಿವ್ಯೋಪಸ್ಥಿತಿಯೇನೋ ಇದೆ. ಇಷ್ಟರಿಂದಲೇ ಈ ಉತ್ಪಾತಗಳು ಶಾಂತವಾಗಲಾರವು. ಬಾಣನಿಗೆ ಶಿವಸ್ಕಂಧರು ಪ್ರಾಣಪ್ರಿಯರು, ಗುಹ-ರುದ್ರರಿಗೆ ಬಾಣನೂ ಪ್ರಾಣಸಖನೆ, ಆದರೂ ದರ್ಪದಿಂದ ತನ್ನ ನಾಶಕ್ಕಾಗಿ ರುದ್ರನನ್ನು ಯುದ್ಧ ವರ ಬೇಡಿರುವನು. ಬಾಣನಿಗೆ ಸಹಾಯಕ್ಕೆ ನಿಂತರೆ ಇಂದ್ರೋಪೇಂದ್ರಾದಿಗಳೂ ಸಹ ಶಿವನನ್ನೂ ಎದುರಿಸಲಾರರು.

**ಭವಿಷ್ಯತಿ ಮಹಾಯುದ್ಧಂ ಸರ್ವದೈತ್ಯ ವಿನಾಶನಮ್ ।**

ಮಹಾದೇವನ ವರದಂತೆ ಯುದ್ಧವಾಗುವುದಂತೂ ನಿಶ್ಚಿತ. ಇದರಲ್ಲಿ ಸರ್ವದೈತ್ಯರ ಮಾರಣಹೋಮ ನಡೆಯುತ್ತದೆ.

**ಯೇ ಹಿ ದೇವೈಃ ವಿರುದ್ಧ್ಯಂತೇ ಪುಣ್ಯಕರ್ಮಭಿರಾಹವೇ ।**
**ಯಥಾ ಬಲಿರ್ನಿಯಮಿತಸ್ತಥಾ ತೇ ಯಾಂತಿ ಸಂಕ್ಷಯಮ್ ॥ 19 ॥**

ಯಾರು ಯುದ್ಧದಲ್ಲಿ ಪುಣ್ಯಕರ್ಮಿಗಳಾದ ದೇವತೆಗಳನ್ನು ವಿರೋಧಿ-ಸುವರೋ ಅವರು ಬಲಿಚಕ್ರವರ್ತಿಯಂತೆ ಬಲಿಯಾಗುವುದು ನಿಶ್ಚಿತವೆ. ಅಥವಾ ಬಂಧಿಲಸ್ಪಡುವರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಕುಂಭಾಂಡಕನ ಹಿತೋಪದೇಶ ಎಂಬಲ್ಲಿ
ನೂರಹದಿನಾರನೆಯ ಅಧ್ಯಾಯ ಸಮಾಪ್ತಿ

# ಅಥ ಸಪ್ತದಶಾಧಿಕಶತತಮೋಽಧ್ಯಾಯಃ

## ಉಷಾ ವೃತ್ತಾಂತ

*ವೈಶಂಪಾಯನ ಉವಾಚ –*

**ಕ್ರೀಡಾ ವಿಹಾರೋಪಗತಃ ಕದಾಚಿದಭವದ್ ಭವಃ ।**
**ದೇವ್ಯಾಸಹ ನದೀತೀರೇ ರಮ್ಯೇ ಶ್ರೀಮತಿ ಸ ಪ್ರಭುಃ ॥ 1 ॥**

ಜನಮೇಜಯನೇ ಕೇಳು, ಒಂದು ಬಾರಿ ರುದ್ರದೇವನು ಗಂಗೆಯ ತೀರದ ರಮಣೀಯ ಪ್ರಾಂತದಲ್ಲಿ ಉಮೆಯೊಡನೆ ಕ್ರೀಡೆಯಲ್ಲಿ ತೊಡಗಿದ್ದನು. ಸರ್ವರ್ತು ಅಲಂಕೃತವೂ ಸುಂದರವೂ ಆದ ವನದಲ್ಲಿ ಸಾವಿರಾರು ಗಂಧರ್ವಾಪ್ಸರಸೆಯರು ವಿಹರಿಸುತ್ತಿದ್ದರು.

ಪಾರಿಜಾತ, ಸಂತಾನಕಗಳೆಂಬ ಕಲ್ಪವೃಕ್ಷ ಪುಷ್ಪಗಳಿಂದ ಸುಗಂಧಿತವೂ, ವೇಣಾವೀಣಾ ಮೃದಂಗಾದಿ ವಾದ್ಯಗಳಿಂದ ಮಧುರಧ್ವನಿವುಳ್ಳದ್ದೂ ಆಗಿರುವ ಅಲ್ಲಿ ಅಪ್ಸರಸೆಯರ ಮಧುರ ಮಂಜಲಗಾನ ಮೆರಗು ನೀಡಿತ್ತು.

**ದೇವದೇವಂ ಸುವಪುಷಂ ಸ್ರಗ್ವಿಣಂ ರಕ್ತವಾಸಸಮ್ ।**
**ಶ್ರೀಮಹೇಶಂ ದೇವದೇವಮರ್ಚಯಂತಿ ಮನೋರಮಮ್ ॥ 2 ॥**

ಸುಂದರ ಶರೀರನು, ಪುಷ್ಪಮಾಲೆ ಧರಿಸಿದ, ರಕ್ತವಸ್ತ್ರ ಧರಿಸಿದ ಪರಮಶಿವನನ್ನು ಅಪ್ಸರೆಯರು ಪೂಜಿಸುತ್ತಿದ್ದರು. ಅಂತಹವರಲ್ಲಿ ಚಿತ್ರಲೇಖೆಯೆಂಬ ಅಪ್ಸರೆಯು ಪಾರ್ವತೀ ವೇಷಧರಿಸಿ ಶಿವನನ್ನು ಪ್ರಸನ್ನಗೊಳಿಸಿದಳು.

**ಭವಂ ಪ್ರಸಾದಯಾಮಾಸ ದೇವೀ ಚ ಪ್ರಾಹಸತ್ ತದಾ ।**

ಈ ದೃಶ್ಯ ನೋಡಿ ಪಾರ್ವತಿಯು ಗಟ್ಟಿಯಾಗಿ ನಕ್ಕಳು. ಇತರ ಅಪ್ಸರಸೆಯರೂ ನಕ್ಕರು.

**ಭವಸ್ಯ ಪಾರ್ಷದಾ ದಿವ್ಯಾ ನಾನಾರೂಪಾ ಮಹೌಜಸಃ ।**
**ಮಹಾದೇವಸ್ಯ ರೂಪೇಣ ತಚ್ಚಿಹ್ನಂ ರೂಪಮಾಸ್ಥಿತಾಃ ॥ 3 ॥**

ರುದ್ರರ ಪಾರ್ಷದರಲ್ಲಿ ಕಾಮರೂಪಿಗಳಾದ ಕೆಲವರು ರಹಸ್ಯ ಸ್ಥಳಗಳಿಗೆ ಹೋಗಿ ಮಹಾದೇವನಂತೆ ವೇಷಧರಿಸಿ ಬಂದರು.

ಅವರಂತೆ ಅಪ್ಸರೆಯರೂ ಸಹ ಪಾರ್ವತಿಯಂತೆ ವೇಷ ಧರಿಸಿ ಬಂದರು. ಇವರ ತನ್ನಂತಹ ವೇಷಧರಿಸಿದ್ದನ್ನು ನೋಡಿ ಜೋರಾಗಿ ನಕ್ಕಳು. ಇತರರೂ ನಕ್ಕರು. ಇದರಿಂದ ಶಿವನೂ ಸಂತುಷ್ಟಮನಸ್ಕನಾದನು.

**ಬಾಣಸ್ಯ ದುಹಿತಾ ಕನ್ಯಾ ತತ್ರೋಷಾ ನಾಮ ಭಾಮಿನೀ ।**
**ಧನ್ಯಾ ಹಿ ಭರ್ತೃಸಹಿತಾ ರಮತ್ಯೇವಂ ಸಮಾಗತಾ ॥ 4 ॥**

ಬಾಣಾಸುರನಿಗೆ ಉಷೆಯೆಂಬ ಪುತ್ರಿಯಿದ್ದಳು. ದೇವೀಪ್ಯಮಾನನಾದ ರುದ್ರದೇವನು ಪಾರ್ವತಿಯೊಂದಿಗೆ ಜಲಕ್ರೀಡೆಯಾಡುವುದನ್ನು ನೋಡಿದಳು. ರುದ್ರನಾದರೂ ಪಾರ್ವತಿಗೆ ಪ್ರಿಯವುಂಟು ಮಾಡಲೆಂದು ಅನೇಕ ರೂಪಧರಿಸಿ ಅವಳೊಂದಿಗೆ ಕ್ರೀಡಿಸಿದನು. ಉಷೆಯ ಮನಸ್ಸಿನಲ್ಲಿ ಹೀಗೆಂದಳು.

ಪ್ರಿಯನಾದ ಪತಿಯೊಂದಿಗೆ ಈ ರೀತಿಯಲ್ಲಿ ಕ್ರೀಡಿಸುತ್ತಿರುವ ಈ ಪಾರ್ವತೀದೇವಿಯು ನಿಜವಾಗಲೂ ಧನ್ಯಳು ಎಂದು.

ಮನೋಭಿಮಾನಿನಿ ಉಮೆಯು ಉಷೆಯ ಭಾವಾಂತರಂಗ ಅರಿತಳು. ಹೀಗೆಂದಳು.

**ಉಷೇ ತ್ವಂ ಶೀಘ್ರಮಪ್ಯೇವಂ ಭರ್ತ್ರಾ ಸಹ ರಮಿಷ್ಯಸಿ ।**
**ವೈಶಾಖೇ ಮಾಸಿ ಹರ್ಮ್ಯಸ್ಥಾಂ ದ್ವಾದಶ್ಯಾಂ ತ್ವಾಂ ದಿನಕ್ಷಯೇ ॥ 5 ॥**
**ರಮಯಿಷ್ಯತಿ ಯಃ ಸ್ವಪ್ನೇ ಸ ತೇ ಭರ್ತಾ ಭವಿಷ್ಯತಿ ॥ 6 ॥**
**ಸ್ವಪ್ನಯೋಗೇನ ಕಲ್ಯಾಣಿ ವ್ರತಲೋಪೋ ನ ವಿದ್ಯತೇ ॥ 7 ॥**

ಉಷೆಯೇ - ಶಿವನು ನನ್ನೊಂದಿಗೆ ವಿಹರಿಸಿರುವಂತೆ ನೀನೂ ಸಹ ನಿನ್ನ

ಪತಿಯಿಂದ ಶೀಘ್ರದಲ್ಲಿಯೇ ರಮಿಸುವೆ ಎಂದಾಗ ಉಷೆಯು '**ಭರ್ತಾ ರಂಸ್ಯೆ ಕದಾ ಸಹ**' ಎಂಬ ಭಾವ ತೋರಿದಾಗ ವೈಶಾಖ ಮಾಸದ ದ್ವಾದಶಿಯಂದು ರಾತ್ರಿ ಕಾಲದಲ್ಲಿ ನೀನು ಉಪ್ಪರಿಗೆಯಲ್ಲಿ ಮಲಗಿರುವಾಗ ಸ್ವಪ್ನದಲ್ಲಿ ಯಾರು ನಿನ್ನೊಂದಿಗೆ ರಮಿಸುವನೋ ಅವನೇ ನಿನಗೆ ಪತಿಯಾಗುವನು. ಸ್ವಪ್ನದಲ್ಲಿ ರಮಿಸಿದ್ದಾದ್ದರಿಂದ ನಿನ್ನ ಕನ್ಯಾತ್ವಕ್ಕೆ ಭಂಗವಿಲ್ಲ ಎಂದಾಗ ಸಂತೋಷದಿಂದ ಅಲ್ಲಿಂದ ಹೊರಟು ಹೋದಳು. ನಂತರ ಅನೇಕ ಅಪ್ಸರೆಯರು,

**ಭವಿಷ್ಯತ್ಯಚಿರೇಣೈವ ದೇವ್ಯಾ ವಚನ ಕಲ್ಪಿತಃ ।**

ಉಷೆಯೇ! ಪಾರ್ವತಿದೇವಿಯು ವರವಿತ್ತಂತೆ ನಿನಗೆ ಅತಿ ಶೀಘ್ರದಲ್ಲಿಯೇ ಪತಿಯು ಲಭಿಸುವನಷ್ಟೇ! ದೇವಿಯ ಮಾತು ಸುಳ್ಳಾಗಲಾರದಷ್ಟೇ! ಎಂದರು. ಉಷೆಯಾದರೂ ಅವರ ಮಾತನ್ನು ಆದರಿಸುತ್ತಾ ಸಮಯಕ್ಕಾಗಿ ಹಾತೊರೆಯುತ್ತಿದ್ದಳು.

ಪಾರ್ವತಿಯೊಂದಿಗೆ ವಿಹಾರ ಮಾಡುತ್ತಲೇ ಕೆಲವು ದಿವಸಗಳು ಕಳೆದವು. ಬಂದವರೆಲ್ಲ ಹಿಂದಿರುಗಿದರು. ಪಾರ್ವತಿದೇವಿಯೂ ಅದೃಶ್ಯಳಾದಳು.

ಅಂದಿನಿಂದ ಪ್ರಾರಂಭಿಸಿ ಉಷೆಯು ಕಾಮಮೋಹಿತಳಾದಳು. ಪಾರ್ವತಿಯ ವರವನ್ನು ಚಿಂತಿಸುತ್ತಾ ಪತಿಯ ಸಂಗಮವನ್ನು ಕಾದು ನೋಡುತ್ತಿದ್ದಳು. ಈ ಚಿಂತೆಯಲ್ಲಿ ನಿದ್ರೆಯೂ ಬರುತ್ತಿರಲಿಲ್ಲ. ಊಟವೂ ಬೇಡವಾಯಿತು. ಗಂಧಧಾರಣೆ ತಿರಸ್ಕರಿಸಿ, ಚಂದ್ರಮನನ್ನು ನಿಂದಿಸಿದಳು. ಸಖಿಯರು ನಾನಾ ವಿಧ ಪೋಷಣೆ ಮಾಡತೊಡಗಿದರು. ಕಣ್ಣಲ್ಲಿ ಯಾವಾಗಲೂ ನೀರು ತುಂಬಿ ಬರುತ್ತಿತ್ತು. ಆಕಳಿಕೆ, ಆಯಾಸಗಳಿಂದ ಬಳಲಿದಳು. ತೂಕಡಿಸುತ್ತಿದ್ದಳು. ಅವಳ ದುಃಖದ ನಿಮಿತ್ತವೇನೆಂದು ಪುನಃ ಪುನಃ ಕೇಳಲಾರಂಭಿಸಿದಳು.

**ಕಾ ವ್ಯಥಾ ಕಿಂ ಶರೀರಂ ತೇ ಕಿಮಿದಂ ತವ ಭಾಮಿನಿ ।**
**ಕಿಂ ತುಭ್ಯಂ ರೋಚತೇ ದೇವಿ ತದಾಖ್ಯಾಹಿ ವರಾನನೇ ॥ 8 ॥**

ನಿನಗಿರುವ ದುಃಖವೆಂತಹುದು. ಇದಕ್ಕೆ ಏನು ಕಾರಣ, ನಿನ್ನ ಸುಂದರ ಶರೀರ ಹೀಗೇಕಾಗಿದೆ? ನಿನಗೇನು ಇಷ್ಟ ಹೇಳು ಎಂದರು.

ನಿನಗೇನು ಕಡಮೆಯಾಗಿದೆ? ನಿನ್ನ ತಂದೆ ಬಲಿಚಕ್ರವರ್ತಿಯ ಜ್ಯೇಷ್ಠಪುತ್ರನು, ಮಹಾವೀರನೂ, ಪ್ರತಿಸ್ಪರ್ಧಿರಹಿತನು, ಅವನ ಈ ಶೋಣಿತಪುರ ವೈಭವದಲ್ಲಿ

ಅಮರಾವತಿಯನ್ನೂ ಜಯಿಸಿದೆ. ಶಿವನೇ ಶೂಲಹಸ್ತನಾಗಿ ನಿಂತಿರುವನು. ಪಾರ್ವತಿಯೂ ನಿನ್ನ ತಂದೆಯನ್ನು ತನ್ನ ಮಗನೆಂದೆ ಭಾವಿಸಿದ್ದಾಳೆ. ಪೂರ್ಣಚಂದ್ರನಂತಿರುವ ನಿನ್ನ ಮುಖ ಮೋಡ ಕವಿದ ಚಂದ್ರನಂತಾಗಿದೇಕೆ? ಭೋಜನ ತಯಾರಾಗಿದೆ ಊಟಕ್ಕೇಳು, ತಾಂಬೂಲ ನಿನಗೆ ಅತಿಪ್ರಿಯವಷ್ಟೆ ಅದನ್ನಾದರೂ ಸ್ವೀಕರಿಸು ಎಂದರು.

ಹೀಗೆ ಆಹಾರ ನೀರು ಬಿಟ್ಟಿರುವ ಸಂಗತಿ ಅರಮನೆಯಲ್ಲಿ ಕೋಲಾಹಲ-ವೆಬ್ಬಿಸಿತು. ದಾಸಿಯರೆಲ್ಲರೂ ಮಹಾರಾಣಿಯ ಬಳಿ ಸಾಗಿ, ಮಹಾರಾಣಿಯೇ-

**ರಾಜಪುತ್ರೀ ಯದಾ ದೇವಿ ಸಮಾಯಾತಾ ಗೃಹೇ ಸತೀ ।**
**ಜಲಕ್ರೀಡಾವಿಹಾರಾಚ್ಚ ಮೂಕೀವ ಪರಿಲಕ್ಷ್ಯತೇ ॥ 9 ॥**
**ವಿಚಾರ್ಯ ಭಿಷಜೋ ದೇವಿ ದಿಶ್ಯಂತಾಂ ಕಷ್ಟಶಾಂತಯೇ ॥ 10 ॥**

ರಾಜಕುಮಾರಿಯು ಜಲಕ್ರೀಡಾ ನಂತರ ಮನೆಗೆ ಬಂದಾಗನಿಂದಲೂ ಹೀಗೆ ಮೂಕಿಯಂತೆಯೇ ತೋರುತ್ತಾಳೆ. ಯಾರೊಂದಿಗೂ ಮಾತುಕತೆಯಿಲ್ಲ

**ಕೋ ಮೋಹಃ ಕಿಮಿದಂ ಮೌನಂ ಕಃ ಸ್ವಾಪೋ ಮ್ಲಾನತಾ ಕಥಮ್ ।**

ಇವಳಿಗೇನಾಗಿದೆ ಏನಿದು ಮೋಹ, ಮಹಾಮೌನವೇನು, ಯಾವಾಗಲೂ ಮಲಗಿರುವುದೇಕೆ? ಬಾಡಿಹೋದ ಮುಖವೇನಿದು, ಇತ್ಯಾದಿ ವಿಷಯಗಳನ್ನು ಪರಿಶೀಲಿಸಿ ವೈದ್ಯರ ಮೂಲಕ ಕಷ್ಟಪರಿಹಾರೋಪಾಯ ಮಾಡಿರಿ ಎಂದರು.

**ಇತಿ ಶ್ರುತ್ವಾ ತದಾ ದೇವೀ ಸತ್ವರಾ ಹಂಸಗಾಮಿನೀ ।**
**ಕಿಮಸ್ತಿ ತವ ಕಲ್ಯಾಣಿ ಕಾ ವ್ಯಥಾ ತವ ವರ್ತತೇ ।**
**ಏತೇ ವೈದ್ಯಾಃ ಸಮಾಗತ್ಯ ಪೃಚ್ಛಂತಿ ಭವತೀಂ ಹಿ ತತ್ ॥ 11 ॥**

ಸೇವಕಿಯರ ಮಾತನ್ನು ಕೇಳಿ ಕೂಡಲೇ ಉಷೆಯಿದ್ದ ಸ್ಥಳಕ್ಕೆ ಧಾವಿಸಿ ಬಂದಳು. ಮಗಳ ಕೈ ಹಿಡಿದು ಬೆರಳುಗಳನ್ನು ನಿಧಾನವಾಗಿ ನೆಟ್ಟಿಗೆ ಬರಿಸಿದಳು. ಮಗಳೇ! ಏನಾಗಿದೆ ನಿನಗೆ, ಯಾವುದರ ಚಿಂತೆ, ವೈದ್ಯರೆಲ್ಲರೂ ಬಂದಿರುವರು. ನಿನ್ನ ಸ್ಥಿತಿಗೆ ವಿಚಾರ ಮಾಡುತ್ತಿರುವರು. ವೈದ್ಯರು ರಾಣಿಯನ್ನು ಕುರಿತು – ನಮಗೆ ತಿಳಿದಿರುವಂತೆ ಜಲಕ್ರೀಡೆಗೆ ಹೋಗಿದ್ದಾಗ ಶಿವಪಾರ್ವತಿಯರ ಜಲಕೇಳೀ ನೋಡಿರುವಳು. ಈ ದೃಶ್ಯವೆ ಇವಳನ್ನು ಈ ಸ್ಥಿತಿಗೆ ತಂದಿರಬಹುದೆಂದು ನಮ್ಮ ಅನಿಸಿಕೆ.

ಶ್ರಮದಿಂದಾಗಿ ಶರೀರ ಬಳಲಿದೆ. ಆಕಳಿಕೆ, ತೂಕಡಿಕೆ ಬರುತ್ತಿವೆ. ಇದಕ್ಕಾಗಿ ಭಯಪಡುವುದು ಬೇಡ ಎಂದರು.

ಮಹಾರಾಣಿಯು ವೈದ್ಯರೇ, ಇವಳ ಜ್ವರ ತಾಪವೆಷ್ಟಿದೆಯೆಂದರೆ ಇವಳ ಶೈತ್ಯಕ್ಕಾಗಿ ಹಚ್ಚಿದ್ದ ಚಂದನವು ಅತ್ಯುಷ್ಣವಾಗಿದೆ. ಬಾಯಾರುತ್ತಿದ್ದಾಳೆ. ಜ್ವರ ಬಾಧಿಸುತ್ತಿದೆ. ಇವೆಲ್ಲ ಯಾವ ರೋಗ ಲಕ್ಷಣವೆಂದು ತಿಳಿದು ಹೇಳಿರಿ, ಇವಳ ಪ್ರಲಾಪವಾದರೂ ಏತಕ್ಕಾಗಿ ತಿಳಿಯಿರಿ.

ಮಹಾರಾಣಿಯೇ! ಕ್ರೀಡಾವಿಹಾರಕ್ಕೆಂದು ಹೋಗಿದ್ದಾಗ ಅಪ್ರತಿಮ ಲಾವಣ್ಯವತಿಯಾದ ಉಷಾದೇವಿಗೆ ದೃಷ್ಟಿ ತಾಕಿದೆಯಷ್ಟೆ ಬೇರೇನೂ ಇಲ್ಲ.

**ರೂಪೇಣಾಪ್ರತಿಮಾ ದೇವೀ ರಾಜಪುತ್ರೀ ಚ ಭಾಮಿನೀ ।**
**ದೃಷ್ಟಿಪಾತಃ ಕೃತಸ್ತಾಭಿಃ ತೇನ ಪುತ್ರ್ಯಾಂ ವ್ಯಥಾಭವತ್ ॥ 12 ॥**
**ರಕ್ಷಾಮಂತ್ರೈಃ ತಥಾ ಪೀತೈಃ ಸರ್ಷಪೈಸ್ತಾಂ ಕುಮಾರಿಕಾಮ್ ।**
**ಪಾನೀಯೈಃ ಅಭಿಷೇಕೇಣ ಪರಾ ಶಾಂತಿರ್ಭವಿಷ್ಯತಿ ॥ 13 ॥**

ಇದಕ್ಕಾಗಿ ಬಿಳಿಸಾಸಿವೆಯನ್ನು ರಕ್ಷಾಮಂತ್ರಗಳಿಂದ ಅಭಿಮಂತ್ರಿಸಿ ದೃಷ್ಟಿ-ತೆಗೆಯುವುದು ಹಾಗೂ ಅಭಿಮಂತ್ರಿತ ನೀರಿನಿಂದ ಅಭಿಷೇಕ ಮಾಡಿಸುವುದು ಇವುಗಳಿಂದ ದೃಷ್ಟಿ ಪರಿಹಾರವಾಗುತ್ತದೆ.

ಜನಮೆಜಯನೇ! ಹೀಗೆ ಹೇಳಿ, ರಾಜವೈದ್ಯರು ಹೊರಡಲುವಾದರು. ಹೊರಡುವಾಗ ಅವರು –

**ಸೂಚಯಂತಃ ಪುನಃ ಸರ್ವೇ ಕಾಮಾಭಿಪ್ರಾಯಜಾಂ ವ್ಯಥಾಮ್ ।**

ಮನ್ಮಥಜನಿತವಾದ ವ್ಯಥೆಯಿದ್ದರೂ ಇರಬಹುದು ಎಂದು ಹೇಳಿ ಹೊರಟರು.

ರಾಣಿಯು ಮಗಳ ಅಭಿಪ್ರಾಯ ಹೊರತೆಗೆಯಲು ಪುನಃ ಕೇಳಿದಳು. ಏನಾಯಿತು ನಿನಗೆ ಎಂದು ಉಷೆಯು ಅಳುತ್ತಾ, ನಾಚಿಕೆಯಿಂದ ಹೀಗೆ ಹೇಳಿದಳು.

**ಮಾತರ್ನ ರೋಚತೇ ನಿತ್ಯಂ ಭಾಷಣಂ ನ ಚ ಭೋಜನಮ್ ।**

ತಾಯಿಯೇ! ನನಗೆ ಯಾರೊಂದಿಗೂ ಮಾತನಾಡಲು ಇಷ್ಟವಾಗುತ್ತಿಲ್ಲ. ಭೋಜನದ ಮೇಲೆ ಪ್ರೀತಿಯಿಲ್ಲ. ಯಾವ ಉತ್ಸವವೂ ನನಗೆ ಬೇಕಾಗುತ್ತಿಲ್ಲ ಎಂದು ಹೇಳಿ ಸುಮ್ಮನಾದಳು.

ಇವಳ ಮಾತನ್ನು ಕೇಳುತ್ತಿದ್ದ ಇವಳ ಸಖಿಯರು – ಹೀಗೆಂದುಕೊಂಡರು.

**ಲಜ್ಜಾನುಕಾರಿ ನಾರೀಣಾಂ ಯೌವನಂ ಹಿ ಭವೇದಿತಿ ।**
**ಇಯಂ ಚ ರಾಜಕನ್ಯಾ ಹಿ ಭರ್ತೃಯೋಗ್ಯಾ ಕಿಮುಚ್ಯತೇ ॥ 14 ॥**

ಯೌವನದಲ್ಲಿ ಸ್ತ್ರೀಯರಿಗೆ ನಾಚಿಕೆ ಸಹಜವಾಗಿರುತ್ತದೆ. ಇವಳಾದರೂ ಯೋಗ್ಯಭರ್ತನನ್ನು ಪಡೆಯಬಹುದಾದ ಯೌವನದಲ್ಲಿದ್ದಾಳೆ.

ಇವಳೇನು ಹೇಳಿಯಾಳು. ನಾಚಿಕೆಯಿಂದಾಗಿ ತನ್ನ ಬಯಕೆ ಹೇಳಲಾಗುತ್ತಿಲ್ಲ. ಇವಳು ಸದ್ಯದಲ್ಲಿಯೇ ಯೋಗ್ಯಪತಿಯನ್ನು ಪಡೆಯುವಳು ಎಂದರು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ**
**ಉಷೆಯ ಮದನ ತಾಪ ಎಂಬಲ್ಲಿ**
**ನೂರಹದಿನೇಳನೆಯ ಅಧ್ಯಾಯ ಸಮಾಪ್ತಿ**

# ಅಥ ಅಷ್ಟದಶಾಧಿಕಶತತಮೋಽಧ್ಯಾಯಃ

## ಉಷೆಯ ಸ್ವಪ್ನದಲ್ಲಿ ಪ್ರಿಯತಮನ ಸಂಗಮ

*ವೈಶಂಪಾಯನ ಉವಾಚ –*

**ತತ್ರಸ್ಥಾಃ ಪರಮಾ ನಾರ್ಯಃ ಚಿತ್ರೇಣ ಪರಮಾದ್ಭುತಾಃ ।**
**ತತೋ ಹರ್ಮ್ಯೇ ಶಯಾನಾಂ ತು ವೈಶಾಖೇ ಮಾಸಿ ಭಾಮಿನೀಮ್॥ 1 ॥**
**ದ್ವಾದಶ್ಯಾಂ ಶುಕ್ಲಪಕ್ಷಸ್ಯ ಸಖೀಗಣವೃತಾಂ ತದಾ ।**
**ಯಥೋಕ್ತಃ ಪುರುಷಃ ಸ್ವಪ್ನೇ ರಮಯಾಮಾಸ ತಾಂ ಶುಭಾಮ್ ॥ 2 ॥**

ಜನಮೇಜಯನೆ, ಶೋಣಿತಪುರದಲ್ಲಿದ್ದ ಅನೇಕ ರೂಪವತಿಯರಾದ ನಾರಿಯರು ಚಿತ್ರಕಲೆಯಲ್ಲಿ ಅದ್ಭುತವಾದ ಯೋಗ್ಯತೆ ಸಂಪಾದಿಸಿದ್ದರು.

ವೈಶಾಖಮಾಸ ಶುಕ್ಲ ದ್ವಾದಶಿಯಂದು ಸಖಿಯರಿಂದೊಡಗೂಡಿ ಉಷಾದೇವಿಯು ಉಪ್ಪರಿಗೆಯಲ್ಲಿ ಮಲಗಿದ್ದಳು. ಸ್ವಪ್ನದಲ್ಲಿ ಪಾರ್ವತಿದೇವಿಯು ಹೇಳಿದ್ದಂತೆ ಸುಂದರನಾದ ಕೃಷ್ಣನ ಮೊಮ್ಮಗನಾದ ಅನಿರುದ್ಧನು ಅವಳೊಂದಿಗೆ ರಮಿಸತೊಡಗಿದನು.

ಪರಪುರುಷನು ತನ್ನನ್ನು ಸ್ಪರ್ಶ ಮಾಡುತ್ತಿರುವುದನ್ನು ಮೊದಲು ಅವನಿಂದ ಬಿಡಿಸಿಕೊಳ್ಳಲು ಪಯತ್ನಿಸಿದಳಾದರೂ ದೇವಿಯ ಮಾತನ್ನು ನೆನಪಿಸಿಕೊಂಡು ಹಾಗೂ ಸ್ತ್ರೀ ಸ್ವಭಾವಕ್ಕೆ ಕಟ್ಟು ಬಿದ್ದು ಅವನೊಡನೆ ಸಮಾಗಮ ಮಾಡಿದಳು.

ಪರಪುರುಷ ಸಂಪರ್ಕವೇರ್ಪಟ್ಟದ್ದರಿಂದ ದುಃಖ ಹಾಗೂ ಭಯದಿಂದ ಅಳುತ್ತಾ ಝುಗನೆದ್ದ ಅವಳನ್ನು ಚಿತ್ರಲೇಖೆಯು ಸಮಾಧಾನಿಸಿದಳು.

**ಉಷೇ! ಮಾ ಭೈಃ ಕಿಮೇವಂ ತ್ವಂ ರುದತೀ ಪರಿತಪ್ಯಸೇ ।**
**ಬಲೇಃ ಸುತಸುತಾ ತ್ವಂ ಚ ಪ್ರಖ್ಯಾತಾ ಕಿಂ ಭಯಾನ್ವಿತಾ ॥ 3 ॥**

ಸಖಿ, ಉಷೆ! ಏತಕ್ಕಾಗಿ ನೀನು ಪರಿತಪಿಸುತ್ತಿರುವೆ. ಬಲಿಚಕ್ರವರ್ತಿಯ ಮಗನಾದ ಬಾಣನ ಮಗಳಿಗೆ ಭಯವೆ? ನಿನ್ನ ತಂದೆ ದೇವತೆಗಳಿಗೂ ಭಯಂಕರನು. ಅವನನ್ನಾಶ್ರಯಿಸಿದ ನಿನಗೆ ಯಾರ ಭಯ?

ಏಳು! ಇಂತಹ ಪ್ರಾಸಾದಗಳ ಭಯಕ್ಕೆ ಸ್ಥಾನವಿಲ್ಲ. ಇಂದ್ರದೇವನು ಸೇನಾಸಹಿತನಾಗಿ ಹಲವಾರು ಬಾರಿ ಆಕ್ರಮಣ ಮಾಡಲು ಪ್ರಯತ್ನಿಸುತ್ತಿದ್ದನು. ಆದರೆ ಬಾಣಾಸುರನು ಪುರಪ್ರದೇಶದ ಮೊದಲೆ ಪರಾಭವಗೊಳಿಸುತ್ತಿದ್ದನು.

ಚಿತ್ರಲೇಖೆಯ ಮಾತಿನಿಂದ ಸಮಾಧಾನ ಹೊಂದಿದ ಉಷೆಯು ತಾನು ಸ್ವಪ್ನದಲ್ಲಿ ಕಂಡ ಯುವಕನನ್ನು ಯಥಾವತ್ತಾಗಿ ಬಣ್ಣಿಸಿದಳು.

**ಏವಂ ಸಂಧರ್ಷಿತಾ ಸಾಧ್ವೀ ಕಥಂ ಜೀವಿತುಮುತ್ಸಹೇ ।**
**ಏವಂ ಸಂದೂಷಣಕರೀ ವಂಶಸ್ಯಾಸ್ಯ ಮಹೌಜಸಃ ॥ 4 ॥**
**ಶ್ರೇಯೋ ಹಿ ಮರಣಂ ಮಹ್ಯಂ ನ ಮೇ ಶ್ರೇಯೋಽದ್ಯ ಜೀವಿತಮ್ ॥ 5॥**

ಸಖಿ ಚಿತ್ರಲೇಖೆಯೇ! ನಾನು ಇಷ್ಟು ದಿವಸ ಕನ್ಯೆಯಾಗಿಯೆ ಅರಮನೆಯಲ್ಲಿ ಬೆಳೆದೆ. ಆದರೆ ನಾನಿಂದು ಪರಪುರುಷನ ಸಂಗದಿಂದಾಗಿ ನನ್ನ ಕನ್ಯಾತ್ವವನ್ನು ಕಳೆದುಕೊಂಡಿರುವೆನು. ಸತೀತ್ವದಿಂದ ಭ್ರಷ್ಟಳಾದ ನಾನು ರಾಕ್ಷಸ ವಂಶಕ್ಕೆ ಕಳಂಕ ತಂದಿರುವ ನಾನು ಜೀವಿಸಲು ಅರ್ಹಳಲ್ಲ.

ನಾನು ಸ್ವಪ್ನದಲ್ಲಿ ನೋಡಿದ ಪುರುಷನೊಬ್ಬನನ್ನು ಬಯಸಿದ್ದು ನಿಜವಾದರೂ ಸ್ವಪ್ನದಲ್ಲಿ ಬಂದು ಜಾಗ್ರತ್ಕಾಲೀನ ಸಂಗಮದಂತೆ ಶೀಲ ಅಪಹರಿಸುವನೆಂದು ನಾನು ತಿಳಿದಿರಲಿಲ್ಲ.

**ನಿಶಾಯಾಂ ಜಾಗ್ರತೀವಾಹಂ ನೀತಾ ಕೇನ ದಶಾಮಿಮಾಮ್ ।**

ನನ್ನ ಶೀಲ ಹರಿಸಿದ ಆ ವ್ಯಕ್ತಿ ಯಾರೆಂದು ತಿಳಿಯದಾಗಿದೆ. ಅವನಿಗಾದರೂ ನನ್ನ ಶೀಲ ಹೇಗೆ ಅಪಹರಿಸಿದ. ಕುಲಕ್ಕೆ ದುಃಖದಾಯಿನಿಯೂ, ಕುಲಕಳಂಕಿಯೂ ಆದ ನಾನು ಜೀವಿಸಿರುವಲ್ಲಿ ಅರ್ಥವಿಲ್ಲ.

ಹೀಗೆ ಅನಾಥೆಯಂತೆ ರೋದಿಸುತ್ತಿರುವ ರಾಜಪುತ್ರಿಯನ್ನು ನೋಡಿ ಕಣ್ಣೀರಿಡುತ್ತಾ, ಸಖಿ,

**ದುಷ್ಟೇನ ಮನಸಾ ದೇವಿ ಶುಭಂ ವ ಯದಿ ವಾಶುಭಮ್ ।**
**ಕ್ರಿಯತೇ ನ ಚ ತೇ ಸುಭ್ರು ಕಿಂಚಿದ್ ದುಷ್ಟಂ ಮನಃ ಶುಭೇ ॥ 6 ॥**

ದೇವಿ! ದುಷ್ಟಭಾವನೆಯಿಂದ ಮಾಡಿದ ಶುಭಾಶುಭ ಕಾರ್ಯಗಳು ಅನಿಷ್ಟವನ್ನೆ ನೀಡುತ್ತದೆ. ನೀನು ದುಷ್ಟಭಾವದಿಂದ ಯಾವ ತಪ್ಪನ್ನು ಮಾಡಿರುವುದಿಲ್ಲ.

**ಪ್ರಸಭಂ ದೈವಸಂಯೋಗಾದ್ ಯದಿ ಭುಕ್ತಾಸಿ ಭಾಮಿನಿ ।**
**ಸ್ವಪ್ನಯೋಗೇನ ಕಲ್ಯಾಣಿ ವ್ರತಲೋಪೋನ ವಿದ್ಯತೇ ॥ 7 ॥**
**ವ್ಯಭಿಚಾರೇಣ ತೇ ದೇವಿ ನಾಸ್ತಿ ಕಶ್ಚಿದ್ ವ್ಯತಿಕ್ರಮಃ ।**
**ನ ಚ ಸ್ವಪ್ನ ಕೃತೋ ದೋಷೋ ಮರ್ತ್ಯಲೋಕೇಽಸ್ತಿ ಸುಂದರಿ ॥ 8 ॥**

ದೈವಯೋಗದಿಂದ ಪರಪುರುಷನು ಸ್ವಪ್ನದಲ್ಲಿ ನಿನ್ನನ್ನು ಭೋಗಿಸಿದ್ದರೂ ನಿನ್ನ ಸತೀತ್ವಭಂಗವೇರ್ಪಡುವುದಿಲ್ಲ. ಸ್ವಪ್ನದಲ್ಲಿ ಮಾಡಿದ ದೋಷಗಳಿಗೆ ಪಾಪಲೋಕವಾಗುವುದಿಲ್ಲ.

**ಮನಸಾ ಚೈವ ವಾಚಾ ಚ ಕರ್ಮಣಾ ಚ ವಿಶೇಷತಃ ।**
**ದುಷ್ಟಾಯಾ ತ್ರಿಭಿರೇತೈಸ್ತು ಪಾಪಾ ಸಾಪ್ರೋಚ್ಯತೇ ಬುಧೈಃ ॥ 9 ॥**

ಯಾವ ನಾರಿಯು ಕಾಯ ಮನಸಾ ವಾಚಾವೆಂಬ ತ್ರಿಕರಣಗಳಿಂದ ವಿಶೇಷವಾಗಿ ದೂಷಿತಳೋ ಅವಳು ಪಾಪಿಯೆನಿಸುವಳು.

ನೀನಾದರೂ ಮಲಗಿ ನಿದ್ರಿಸಿರುವಾಗ ಇಂತಹ ಅವಸ್ಥೆ ಹೊಂದಿರುವೆ-ಯಾದ್ದರಿಂದ ನಿನ್ನ ದೋಷವೇನೂ ಇಲ್ಲಿಲ್ಲ. ದುಷ್ಟಭಾವನೆಯಿಂದ ದುಷ್ಟ ಕಾರ್ಯ ಮಾಡಿದವಳು 'ಅಸತೀ' ಎನಿಸಲಿ ನೀನು ಅಂತಹವಲ್ಲ.

ಸತಿಶಿರೋಮಣಿಯೇ, ಕಾಲವು ದುರತಿಕ್ರಮವು. ಅದನ್ನು ಮೀರಲು ಯಾರಿಗೂ ಸಾಧ್ಯವಿಲ್ಲವು ಎಂದು ಸಖಿಯರೆಲ್ಲರೂ ಹೇಳಿದರೂ ರೋದಿಸುತ್ತಲೇ ಇದ್ದಳು. ಕುಂಭಾಂಡನ ಮಗಳಾದ ಚಿತ್ರಲೇಖೆಯು ಪುನಃ ಹೇಳಿದಳು.

**ತ್ಯಜ ಶೋಕಂ ವಿಶಾಲಾಕ್ಷಿ ಅಪಾಪಾ ತ್ವಂ ವರಾನನೇ ।**
**ಶ್ರುತಂ ಮೇ ಯದಿದಂ ವಾಕ್ಯಂ ಯಥಾತಥ್ಯೇನ ತಚ್ಛೃಣು ॥ 10 ॥**

ವಿಶಾಲಾಕ್ಷಿಯೇ ದುಃಖಪಡಬೇಡ. ನೀನು ಸರ್ವಥಾ ಪಾಪರಹಿತಳಾಗಿರುವೆ.

ನಾನು ಈ ಹಿಂದೆ ಯಾವ ಮಾತನ್ನು ಕೇಳಿದ್ದನೊ ಅದನ್ನೆ ನಿನಗೆ ಹೇಳುವೆನು ಕೇಳು.

ದೇವದೇವನ ಸಮೀಪದಲ್ಲಿದ್ದ ನಿನ್ನ ಪತಿಯ ಬಗ್ಗೆ ಯೋಚಿಸುತ್ತಿದ್ದೆ. ಪಾರ್ವತಿಯು – ವೈಶಾಖ ಶುಕ್ಲ ದ್ವಾದಶೀ ರಾತ್ರಿ ಅರಮನೆಯಲ್ಲಿ ಮಲಗಿರುವ ನೀನು ಅಳುತ್ತಿದ್ದರೂ ಕೊಸರಿಕೊಳ್ಳುತ್ತಿದ್ದರೂ ನಿನ್ನನ್ನು ಉಪಭೋಗಿಸುವವನೇ ಅಂತಹ ಶೂರನೇ ನಿನ್ನ ಪತಿಯಾಗುವನೆಂದು ಹೇಳಿದಳಷ್ಟೆ. ಅವಳ ಮಾತಿನಂತೆಯೆ ನಡೆದಿದೆ. ಇದಕ್ಕೆ ರೋದಿಸಬೇಡ.

ಇದರಿಂದಾಗಿ ಸಮಾಧಾನ ಮನಸ್ಕಳಾದ ಉಷೆಯು – ಶಿವನ ಭಾರ್ಯೆ ಪಾರ್ವತಿ ಹೇಳಿದಂತೆ ಕನಸಿನಲ್ಲಿ ಬಂದಿದ್ದ ಆ ಶೂರನೇ ನನ್ನ ಪತಿಯಾಗುವುದಾದರೆ ಸರಿಯಾದೀತು. ಆದರೆ ಅವನು ಎಲ್ಲಿರುವನು ಎಂದು ತಿಳಿಯುವುದಾದರೂ ಹೇಗೆ ಆಲೋಚಿಸಿ ಎಂದಳು.

ಆಗ ಚಿತ್ರಲೆಖೆಯು – ಆ ಯುವಕನ ಕುಲ, ಕೀರ್ತಿ, ಪೌರುಷವಾವುದೂ ನಾವು ತಿಳಿದಿಲ್ಲ. ಯುವಕನು ಯಾರೆಂದು ತಿಳಿದರೆ ಸಾಧ್ಯವಾದೀತು.

ಆದರೂ ಅವನು ಮಾಡಿರುವ ಅಸಾಮಾನ್ಯ ಕಾರ್ಯದಿಂದ ಸ್ವಲ್ಪ ಊಹಿಸಬಹುದು. ಆ ಯುವಕನಂತೂ ಪರಾಕ್ರಮಿಯೆ ಆಗಿರಬೇಕು. ಹಾಗಿಲ್ಲದಿದ್ದರೆ ಒಬ್ಬನೇ ಶತ್ರುಗಳಿಂದ ಅಭೇದ್ಯ ಈ ರಾಕ್ಷಸಪುರಕ್ಕೆ ಬಂದು ನಿನ್ನರಮನೆ ಪ್ರವೇಶಿಸಿ ನಿನ್ನ ಭೋಗಿಸುವುದೆಂತು?

ಆದಿತ್ಯರು ವಸುಗಳು ರುದ್ರಾದಿಗಳೆ ಈ ಅಭೇದ್ಯಪುರವನ್ನು ಪ್ರವೇಶಿಸಲಾರರು. ಈ ಯುವಕನಾದರೂ ಪ್ರವೇಶಿಸಿದ್ದರಿಂದ ಅವರಿಗಿಂತ ನೂರುಪಟ್ಟು ಪರಾಕ್ರಮಿವಿರಲೇಬೇಕು.

ಉಷೆಯೇ! ಅಂತಹ ಪರಾಕ್ರಮಿಯನ್ನು ಪತಿಯನ್ನಾಗಿ ಪಡೆಯುವ ನೀನೇ ಧನ್ಯಳು. ಈಗ ನಾವು ವಿಚಾರಿಸಬೇಕಾದದ್ದು ಇವನು ಯಾರ ಪುತ್ರನು, ಅವನ ನಾಮಧೇಯವೇನು. ಅವನು ಯಾವ ಕುಲಾಲಂಕಾರನು ಎಂದು.

ಉಷೆಯು – ಇದೆಲ್ಲ ನನಗೆ ಹೇಗೆ ತಿಳಿದೀತು? **ಕಥಂ ಜ್ಞಾಸ್ಯಾಮ್ಯಹಂ** ಎಂದಾಗ ರಾಮಾ ಎಂಬ ಮತ್ತೊಬ್ಬ ಸಖಿಯು – ಉಷೆಯೇ! ಈ ಚಿತ್ರಲೇಖೆ ಸಂಧಿವಿಗ್ರಹಾದಿ ಕಾರ್ಯ ನಿಪುಣಳು. ಮೂರ್ಲೋಕದಲ್ಲಿ ನಡೆಯುವ

ವೃತ್ತಾಂತವೆಲ್ಲವನ್ನೂ ಬಲ್ಲವಳು. ಚಿತ್ರಲೇಖೆಯು ವಸ್ತ್ರದ ಮೇಲೆ ರಾಜಕುಮಾರ ಚಿತ್ರವನ್ನೆಲ್ಲ ಕಲ್ಪನೆಯಿಂದಲೇ ಬರೆಯಬಲ್ಲಳು. ಅವಳನ್ನೆ ಕೇಳು ಎಂದಾಗ ಉಷೆಯು ಸಂತೋಷ ಹೊಂದಿ ಚಿತ್ರಲೇಖೆಯನ್ನೆ ಶರಣು ಹೊಂದಿದಳು. ಅವಳಾದರೂ ಉಷಾದೇವಿಗೆ ಅವಳ ಕಾರ್ಯ ಮಾಡಿಯೇ ಮಾಡುತ್ತೇನೆ ಎಂದು ಆಶ್ವಾಸನೆ ನೀಡಿದಳು. ಉಷೆಯು –

**ಭರ್ತಾರಂ ಯದಿ ಮೇಽದ್ಯ ತ್ವಂ ನಾನಯಿಷ್ಯಸಿ ಮತ್ ಪ್ರಿಯಮ್ ।**
**ತ್ಯಕ್ಷ್ಯಾಮ್ಯಹಂ ತತಃ ಪ್ರಾಣಾನ್ ಅಚಿರಾತ್ ತನುಮಧ್ಯಮೆ ॥ 11 ॥**

ಚಿತ್ರಲೇಖೆಯೇ, ನೀನು ಹೇಳಿದಂತೆ ಪದ್ಮಪಲಾಯತಾಕ್ಷನಾದ ನನ್ನ ಪತಿಯನ್ನು ಕರೆದು ತೋರಿಸದಿದ್ದರೆ ಕೂಡಲೆ ಪ್ರಾಣತ್ಯಾಗ ಮಾಡುವುದು ಖಂಡಿತವು.

ಉಷೆಯೆ, ನಿನ್ನ ಚಿತ್ತಾಪಹಾರಿಯಾದ ಪತಿಯ ಕುಲಾದಿಗಳು ಯಾವುದೂ ನನಗೆ ತಿಳಿದಿಲ್ಲವಾದರೂ ಅವನನ್ನು ಹುಡುಕಬಹುದಾಗಿದೆ.

**ದೇವ ದಾನವ ಯಕ್ಷಾಣಾಂ ಗಂಧರ್ವೋರಗರಕ್ಷಸಾಮ್ ।**
**ಯೇ ವಿಶಿಷ್ಟಾಃ ಪ್ರಭಾವೇಣ ರೂಪೇಣಾಭಿಜನೇನ ಚ ॥ 12 ॥**

**ಯಥಾ ಪ್ರಭಾವಂ ತಾನ್ ಸರ್ವಾನ್ ಆಲಿಖಿಷ್ಯಾಮ್ಯಹಂ ಸಖಿ ।**
**ಮನುಷ್ಯಲೋಕೇ ಯೇ ಚಾಪಿ ಪ್ರವರಾ ಲೋಕವಿಶ್ರುತಾಃ ।**
**ಸಪ್ತರಾತ್ರೇಣ ತೇ ಭೀರು! ದರ್ಶಯಿಷ್ಯಾಮಿ ತಾನಹಮ್ ॥ 13 ॥**

ಸಖಿಯೇ! ನಿನ್ನ ಬಯಕೆ ಪೂರ್ಣವಾಗುವ ಉಪಾಯವನ್ನು ಹೇಳುವೆ ಕೇಳು. ನಾನು ಚಿತ್ರಗಳನ್ನು ಬರೆಯುವುದರಲ್ಲಿ ನಿಸ್ಸೀಮಳು. ಅದಕ್ಕಾಗಿಯೇ ನಾನು 'ಚಿತ್ರಲೇಖೆ' ನಾನು ದೇವ ದಾನವ ಯಕ್ಷ ಗಂಧರ್ವೋರಗ ರಾಕ್ಷಸರಲ್ಲಿ ಯಾರು ಯಾರು ಅತ್ಯಂತ ಪರಾಕ್ರಮ ಪ್ರಭಾವಗಳಿಂದ ಜಗನ್ಮಾನ್ಯರೋ, ರೂಪ–ಕುಲದಿಂದಲೂ ವಿಶಿಷ್ಟತೆ ಪಡೆದಿರುವ ಅವರ ಭಾವಚಿತ್ರಗಳೆಲ್ಲವನ್ನೂ ಬರೆದು ತೋರಿಸುತ್ತೇನೆ. ಹಾಗೆಯೇ ಮನುಷ್ಯಲೋಕದಲ್ಲಿ ಪ್ರಖ್ಯಾತ ಗುಣಗಳುಳ್ಳವರ ಚಿತ್ರಗಳನ್ನೂ ಬರೆದು ತೋರಿಸುತ್ತೇನೆ. ಕೇವಲ ಸಪ್ತದಿನಗಳಲ್ಲಿ ನಾನು ಅವರ ಚಿತ್ರಗಳೆಲ್ಲವನ್ನೂ ಬರೆದುಕೊಡುವೆ. ಆ ಚಿತ್ರಗಳಲ್ಲಿ ನಿನ್ನ ಪತಿಯಾಗುವ ಯುವಕನದ್ದೂ ಇರುತ್ತದೆ ಎಂದಾಗ ಉಷೆಯು,

**ಕ್ರಿಯತಾಮೇವಮಿತ್ಯಾಹ ಚಿತ್ರಲೇಖಾಂ ಸಖೀಂ ಪ್ರಿಯಾಮ್ ।**

ಸಂತುಷ್ಟಳಾಗಿ ಹಾಗೆಯೆ ಮಾಡು ಎಂದಳು.

ಚಿತ್ರಲೇಖೆಯು ಚಿತ್ರ ಬರೆಯಲು ಪ್ರಾರಂಭಿಸಿದಳು. ಸಪ್ತರಾತ್ರಿಗಳಲ್ಲಿ ಮೂರ್ಲೋಕದಲ್ಲಿ ಪ್ರಖ್ಯಾತರಾದ ದೇವಗಂಧರ್ವಾದಿಗಳ ಚಿತ್ರಗಳನ್ನು ಚಿತ್ರಿಸಿ ಉಷೆಯ ಬಳ ಬಂದಳು. ಚಿತ್ರಗಳಿದ್ದ ಬಟ್ಟೆಯ ಸುರುಳಿಯನ್ನು ಭೂಮಿಯಲ್ಲಿ ಹರಡಿ, ಅಯಾಾಯ ಚಿತ್ರದಲ್ಲಿರುವವರ ಕುಲಗೋತ್ರಗಳನ್ನು ವಿವರಿಸತೊಡಗಿದಳು.

**ಏತೇ ದೇವೇಷು ಯೇ ಮುಖ್ಯಾಸ್ತಥಾ ದಾನವವಂಶಜಾಃ ।**
**ಕಿನ್ನರೋರಗ ಯಕ್ಷಾಣಾಂ ರಾಕ್ಷಸಾನಾಂ ಸಮಂತತಃ ॥ 14 ॥**
**ಮನುಷ್ಯಾಣಾಂ ಚ ಸರ್ವೇಷಾಂ ಯೇ ಚಾನ್ಯೇ ಭೋಗಿನಃ ಸ್ಮೃತಾಃ ।**
**ತಾನೇತಾನ್ ಪಶ್ಯ ಸರ್ವಾಂಸ್ತ್ವಂ ಯಥೈವ ಲಿಖಿತಾನ್ ಮಯಾ ॥ 15 ॥**

ಸಖಿಯೇ, ಇವೆಲ್ಲವೂ ದೇವತೆಗಳು ದಾನವ ಶ್ರೇಷ್ಠರು, ಕಿನ್ನರೋರಗ ಯಕ್ಷಶ್ರೇಷ್ಠರ ಚಿತ್ರಪಟಗಳು. ಇದೋ ನೋಡು, ಮನುಷ್ಯರಲ್ಲಿ ವಿಶಿಷ್ಟರಾದವರ ಭಾವಚಿತ್ರಗಳು ಇಲ್ಲಿವೆ. ನಿನ್ನ ಪತಿಯು ಸಾಧಾರಣನಾಗಿರಲಾರ. ವಿಶಿಷ್ಟನೆ ಆಗಿದ್ದಾನು. ಇಲ್ಲಿ ಬರೆದಿರುವ ಚಿತ್ರಗಳಲ್ಲಿ ಅವನ ಚಿತ್ರಪಟವೂ ಇದ್ದೆ ಇರುತ್ತದೆ. ನೋಡು.

**ಯಸ್ತೇ ಭರ್ತಾ ಯಥಾರೂಪಃ ಸ ಮಯಾ ಲಿಖಿತಃ ಸಖಿ ।**
**ತಂ ತ್ವಂ ಪ್ರತ್ಯಭಿಜಾನೀಹಿ ಸ್ವಪ್ನೇ ಯಂ ದೃಷ್ಟವತ್ಯಸಿ ॥ 16 ॥**

ಉಷೆಯೇ! ನಿನ್ನ ಪತಿಯ ಯಥಾವತ್ತಾದ ಚಿತ್ರವನ್ನು ಬರೆದಿರುತ್ತೇನೆ. ಸ್ವಪ್ನದಲ್ಲಿ ನೀನು ನೋಡಿದ ಪುರುಷಶ್ರೇಷ್ಠನನ್ನು ಈ ಚಿತ್ರಪಟಗಳಲ್ಲಿ ಗುರುತಿಸಿ ಹೇಳು ಎಂದಳು.

ಉಷಾದೇವಿಯಾದರೂ ವಿಕಸಿತ ನೇತ್ರಗಳಿಂದ ಕ್ರಮವಾಗಿ ದೇವ–ದಾನವ ಗಂಧರ್ವ–ವಿದ್ಯಾಧರ ಶ್ರೇಷ್ಠರ ಚಿತ್ರಗಳನ್ನು ನೋಡುತ್ತಾ, ಮುಂದೆ ಮನುಷ್ಯಲೋಕದ ಪುರುಷ ಶ್ರೇಷ್ಠರ ಚಿತ್ರವನ್ನೂ ನೋಡುತ್ತಾ ಯದುವಂಶೀಯರ ಭಾವಚಿತ್ರಗಳನ್ನೂ, ಯದುಕುಲತಿಲಕನಾದ ಶ್ರೀಕೃಷ್ಣನ ಚಿತ್ರವನ್ನು ಆಸಕ್ತಿಯಿಂದ ವೀಕ್ಷಿಸಿದಳು.

**ತತ್ರಾನಿರುದ್ಧಂ ದೃಷ್ಟ್ವಾ ಸ ವಿಸ್ಮಯೋತ್ಫುಲ್ಲಲೋಚನಾ ।**
**ಉವಾಚ ಚಿತ್ರಲೇಖಾಂ ತಾಮಯಂ ಚೌರಃ ಸ ವೈ ಸಖಿ ॥ 17 ॥**

ಕೃಷ್ಣನ ಮೊಮ್ಮಗನಾದ ಅನಿರುದ್ಧನ ಚಿತ್ರಪಟ ನೋಡುತ್ತಿದ್ದಂತೆಯೇ ಸಖಿ ಚಿತ್ರಲೇಖೆ! ನಾನು ಮಲಗಿದ್ದಾಗ ಸ್ವಪ್ನದಲ್ಲಿ ಬಂದು ನನ್ನನ್ನು ಭೋಗಿಸಿ ಶೀಲಹರಣಗೈದ ಕಳ್ಳ ಇವನೆ ಎಂದಳು. ಚಿತ್ರಲೇಖೆಯೇ,

**ಚಿತ್ರಲೇಕೇ ವದಸ್ವೈನಂ ತತ್ವತೋ ಮಮ ಶೋಭನೇ ।**
**ಕುಲಶೀಲಾಭಿಜನತೋ ನಾಮ ಕಿಂ ಚಾಸ್ಯ ಭಾಮಿನಿ ॥ 18 ॥**

ಶೋಭನಳೇ! ಇವನಾರು? ಇವನ ಕುಲ ಶೀಲಗಳೇನು? ಇವನ ವಂಶೀಯರು ಯಾರು? ಇವನ ಶುಭನಾಮವೇನು? ಇದೆಲ್ಲ ನನಗೆ ತಿಳಿಸು. ನಂತರ ನಾನು ಮುಂದೇನು ಮಾಡಬೇಕೆಂದು ನಿಶ್ಚೈಯಿಸುತ್ತೇನೆ ಎಂದಾಗ, ಚಿತ್ರಲೇಖೆಯೂ

**ಅಯಂ ತ್ರೈಲೋಕ್ಯನಾಥಸ್ಯ ನಪ್ತಾ ಕೃಷ್ಣಸ್ಯ ಧೀಮತಃ ।**
**ಭರ್ತಾ ತವ ವಿಶಾಲಾಕ್ಷಿ ಪ್ರಾದ್ಯುಮ್ನಿಃ ಭೀಮವಿಕ್ರಮಃ ॥ 19 ॥**

**ನ ಹ್ಯಸ್ತಿ ತ್ರಿಷು ಲೋಕೇಷು ಸದೃಶೋಽಸ್ಯ ಪರಾಕ್ರಮೇ ।**

ಉಷೆಯೇ! ನಿನ್ನ ಕೈ ಹಿಡಿಯುವ ಈ ಯುವಕನು – ಮೂರು ಲೋಕ ಒಡೆಯನಾದ ಶ್ರೀಕೃಷ್ಣನ ಮೊಮ್ಮಗನು, ಪ್ರದ್ಯುಮ್ನನ ಪುತ್ರನು. ಪರಾಕ್ರಮದಲ್ಲಿ ಇವನಿಗೆ ಸದೃಶರು ಮೂರ್ಲೋಕದಲ್ಲಿಯೂ ಇರಲಾರರು. ಪರ್ವತಗಳನ್ನೆ ಕಿತ್ತೆಸೆಯುವ ಪರಾಕ್ರಮ ಅದರಿಂದಲೇ ಶತ್ರುಗಳನ್ನು ನಾಶ ಮಾಡಬಲ್ಲ ಶೂರನು.

**ಧನ್ಯಾಸ್ಯನು ಗೃಹಿತಾಸಿ ಯಸ್ಯಾಸ್ತೇ ಯದುಪುಂಗವಃ ।**
**ತ್ರ್ಯಕ್ಷಪತ್ನ್ಯಾ ಸಮಾದಿಷ್ಟಃ ಸದೃಶಃ ಸಜ್ಜನಃ ಪತಿಃ ॥ 20 ॥**

ಉಷಾದೇವಿಯೇ! ನೀನು ನಿಜವಾಗಿಯೂ ಧನ್ಯಳು. ತ್ರ್ಯಂಬಕನ ಪತ್ನಿ ಪಾರ್ವತಿದೇವಿಯ ಸಂಪೂರ್ಣಾನುಗ್ರಹಕ್ಕೆ ಪಾತ್ರಳಾಗಿರುವೆ. ಪಾರ್ವತಿ-ದೇವಿಯು ಪರಮಯೋಗ್ಯನೂ, ಯದುಶ್ರೇಷ್ಠನೂ ಆದ ಅನಿರುದ್ಧನನ್ನು ಪತಿಯಾಗಿ ನೀಡಿರುವಳು. ಇವನು ನಿನಗೆ ಯೋಗ್ಯಪತಿಯು.

**ಅಂತರಿಕ್ಷಚರಾ ಚ ತ್ವಂ ಯೋಗಿನೀ ಕಾಮರೂಪಿಣೀ ।**
**ಉಪಾಯಸ್ಯಾಸ್ಯ ಕುಶಲಾ ಕ್ಷಿಪ್ರಮಾನಯ ಮೇ ಪ್ರಿಯಮ್ ॥ 21 ॥**

ಉಷಾದೇವಿಯು ಚಿತ್ರಲೇಖೆಗೆ ಹೀಗೆಂದಳು –

ನನಗೆ ನಿನ್ನನ್ನು ಹೊರತು ಬೇರೆ ಆಶ್ರಯದಾತರು ಯಾರಿರುವರು? ನೀನೆ ನನಗೆ ಪರಮಾಶ್ರಯ. ನೀನು ಆಕಾಶದಲ್ಲಿ ಸಂಚರಿಸುವ ಮತ್ತು ಬಹುರೂಪ ಹೊಂದುವ ಸಾಮರ್ಥ್ಯವುಳ್ಳವಳಾಗಿರುವಿ. ನನ್ನ ಪ್ರಿಯಪತಿಯನ್ನು ಶೀಘ್ರವಾಗಿ ಇಲ್ಲಿಗೆ ಕರೆತರಲಾರೆಯಾ? ಪತಿ–ಪತ್ನಿಯರ ಸಮಾಗಮವಾಗಲು ಯಾವ ಮಾರ್ಗವನ್ನವಲಂಬಿಸಬೇಕೆಂದೂ ತಿಳಿಸು.

ಭವೇದಾಪತ್ಸು ಯನ್ಮಿತ್ರಂ ತನ್ಮಿತ್ರಂ ಶಸ್ಯತೇ ಬುಧೈಃ ।

ಆಪತ್ತಿಗಾದವನೆ ಮಿತ್ರನಷ್ಟೆ! ಆಪತ್ತಿನಲ್ಲಿ ಸಹಾಯಹಸ್ತ ನೀಡಿದವನೇ ನಿಜವಾದ ಮಿತ್ರನೆಂದು ವಿದ್ವಾಂಸರ ಅನಿಸಿಕೆ. ನಾನು ಮನ್ಮಥಾವೇಶಕ್ಕೊಳಗಾಗಿದ್ದೇನೆ. ಪಂಚಶರನು ತನ್ನ ಕುಸುಮಶರಗಳಿಂದ ಪ್ರಾಣ ತೆಗೆಯುವ ಮೊದಲೇ ಈ ಪ್ರಾಣ ಕುಸುಮ ರಕ್ಷಿಸು.

ಕಾಮಾಭಿಭೂತಳಾದ ಉಷೆಯು ಹೇಳಿದ ಮಾತುಗಳನ್ನು ಕೇಳಿ ಚಿತ್ರಲೇಖೆಯು ಹೇಳುವಳು.

ಯಥಾ ಬಾಣಸ್ಯ ನಗರೀ ರಕ್ಷ್ಯತೇ ದೇವಿ ಸರ್ವಶಃ ।
ದ್ವಾರಕಾಪಿ ತಥಾ ಭೀರು ದುರಾಧರ್ಷಾ ಸುರೈರಪಿ ॥ 22 ॥
ಶೈಲ ಪ್ರಾಕಾರ ಪರಿಖಾ ದುರ್ಗ ಮಾರ್ಗ ಪ್ರವೇಶಿನೀ ।
ಸಪ್ತ ಪ್ರಾಕಾರ ರಚಿತಾ ಪರ್ವತೈಃ ಧಾತು ಮಂಡಿತೈಃ ॥ 23 ॥

ಕಲ್ಯಾಣಿ! ಬಾಣಾಸುರನ ಪಟ್ಟಣವು ಶತ್ರುಗಳಿಂದ ದುರಾಸದವಾಗಿರುವಂತೆ ದ್ವಾರಕೆಯೂ ಸಹ ಭಟರಿಂದ ಸರ್ವದಾ ರಕ್ಷಿಸಲ್ಪಟ್ಟು ಪ್ರವೇಶ ಕಷ್ಟ ಸಾಧ್ಯವಾಗಿದೆ. ದೇವತೆಗಳೂ ಯಾದವರ ದ್ವಾರಕೆಯನ್ನು ಅತಿಕ್ರಮಿಸಲಾರರು. ದ್ವಾರಾವತಿಯ ಮುಖ್ಯದ್ವಾರವು ಲೋಹದ ಬಾಗಿಲುಗಳಿಂದ ರಚಿಸಿದ್ದು ಸುಭದ್ರವಾಗಿದೆ. ಪ್ರವೇಶ ದ್ವಾರವೂ ಸಹ ಗುಪ್ತವಾಗಿದೆ ಹಾಗೂ ಸೈನಿಕರಿಂದ ಗುಪ್ತವಾಗಿದೆ.

ವಿಶ್ವಕರ್ಮ ನಿರ್ಮಿತ ದ್ವಾರಕೆಯನ್ನು ರಕ್ಷಿಸಲು ಸಮುದ್ರವೆ ಜಲದುರ್ಗವಾಗಿದೆ. ಸುತ್ತಲೂ ಇರುವ ಪರ್ವತಗಳೇ ಕೋಟೆಯಂತೆ ಇವೆ. ಅದರ ಮಾರ್ಗವು ದುರ್ಗಮ. ಏಳು ಪರ್ವತಗಳು ಪ್ರಾಕಾರಗಳಾಗಿವೆ. ಇಂತಹ ಸುಭದ್ರ

ಕೋಟೆಯಲ್ಲಿ ಸುಭದ್ರವಾಗಿರುವ ಅನಿರುದ್ಧನನ್ನು ಕರೆತರಬೇಕೆಂಬ ಈ ನಿನ್ನ ಆಸೆಯನ್ನು ತ್ಯಜಿಸಿ, ನನ್ನನ್ನು, ನಿನ್ನ ತಂದೆಯನ್ನು ನಿನ್ನನ್ನು ರಕ್ಷಿಸಿಕೋ ಎಂದಳು.

## ಚಿತ್ರಲೇಖೆ ಯೋಗಶಕ್ತಿ

*ಉಷೋವಾಚ –*

**ತವ ಯೋಗ ಪ್ರಭಾವೇಣ ಶಕ್ಯಂ ತತ್ರ ಪ್ರವೇಶನಮ್ ।**
**ತಸ್ಮಾದ್ ದೌತ್ಯೇನ ಮೇ ಗಚ್ಛ ಜೀವಂತೀಂ ಮಾಂ ಯದೀಚ್ಛಸಿ ॥ 24 ॥**

ಉಷೆಯು ಹೇಳುವಳು – ಚಿತ್ರಲೇಖೆಯೆ! ನೀನು ಹೇಳಿದ್ದು ಸರಿ, ದ್ವಾರಕೆಯು ಅನ್ಯರಿಂದ ಪ್ರವೇಶ ದುಸ್ಸಾಧ್ಯವೇ ಸರಿ. ಆದರೆ ಯೊಗಶಕ್ತಿಯನ್ನು ಹೊಂದಿರುವ ನೀನು ಆ ದ್ವಾರಕೆಯನ್ನು ಪ್ರವೇಶಿಸಬಹುದು.

ಪ್ರಿಯಸಖಿ! ನಾನೇನು ಹೆಚ್ಚು ಹೇಳಲಾರೆ! ನನ್ನ ನಿಶ್ಚಿತವಾದ ಮಾತನ್ನು ಕೇಳು – ಮದನ ಜನಕನ ಪೌತ್ರನೂ ನಿಷ್ಕಕಲಂಕ ಚಂದ್ರನಿಂದೊಪ್ಪುವ ಅನಿರುದ್ಧನನ್ನು ಈ ಸದನದಲ್ಲಿ ತೋರದಿದ್ದರೆ ನಾನು ಯಮಸದನ ಸೇರುವುದು ನಿಶ್ಚಿತವು.

ಒಳ್ಳೆಯ ದೂತನಿಂದಲೇ ಕಷ್ಟಕರಕಾರ್ಯಗಳೆಲ್ಲವೂ ಕೈಗೂಡುತ್ತವೆ. ನಾನು ಬದುಕಿರಬೇಕೆಂದಿದ್ದರೆ ನೀನು ನನ್ನ ದೂತಿಯಾಗಿ ಹೋಗು. ನನ್ನ ಪ್ರಿಯತಮನನ್ನು ಕೂಡಲೇ ಕರೆದು ತಾ.

**ಜೀವಿತಸ್ಯ ಹಿ ಸಂದೇಹಂ ಕ್ಷಯಂ ಚೈವ ಕುಲಸ್ಯ ಚ ।**
**ಕಾಮಾರ್ತಾ ಹಿ ನ ಪಶ್ಯಂತಿ ಕಾಮಿನ್ಯೋ ಮದವಿಕ್ಲವಾಃ ॥ 25 ॥**

ಪ್ರಾಣ ಹೋಗುವ ಪರಿಸ್ಥಿತಿ ಬರುವುದಾದರೂ, ತನ್ನ ಕುಲ ನಾಶದ ಅಂಚನ್ನು ಹೊಂದುವುದಾದರೂ ಕಾಮಾರ್ತ ಕಾಮಿನಿಯರು ಕಾಮಪೀಡಿತರಾಗಿ ಇದಾವುದನ್ನೂ ಗಣನೆಗೆ ತೆಗೆದುಕೊಳ್ಳಲಾರರಷ್ಟೆ! ಕಾಮಾರ್ತಳಾದ ನನಗೆ ಶ್ರೀಕೃಷ್ಣನ ಪೌತ್ರನನ್ನು ಪಡೆಯುವುದಾದರೆ ನಾನು ಯಾವುದನ್ನೂ ಲೆಕ್ಕಿಸೆನು. ಆದ್ದರಿಂದ ಸಾಧ್ಯವಾದಷ್ಟು ಬೇಗನೆ ಅನಿರುದ್ಧನನ್ನು ನನ್ನೊಂದಿಗೆ ಹೊಂದಿಸು.

ಚಿತ್ರಲೇಖೆಯು – ಸಖಿಯೇ ಅಮೃತಸದೃಶವಾದ ಮಾತುಗಳು ನನ್ನ ನ್ನು ಕಾರ್ಯಶೀಲಳನ್ನಾಗಿ ಮಾಡುತ್ತಿವೆ.

**ಏಷಾ ಗಚ್ಛಾಮ್ಯಹಂ ಭೀರು ಕ್ಷಿಪ್ರಂ ವೈ ದ್ವಾರಕಾಂ ಪುರೀಮ್ ॥ 26 ॥**

ಸಖಿಯೇ! ಇದೋ ನೋಡು! ನಿನ್ನ ಕಾರ್ಯಕ್ಕಾಗಿಯೇ ಈಗಲೇ ದ್ವಾರಕೆಗೆ ಹೊರಡುವೆ. ಯೋಗಶಕ್ತಿಯಿಂದ ದ್ವಾರಕೆಗೆ ಪ್ರವೇಶಿಸಿ ಮಹಾಬಾಹುವಾದ ಅನಿರುದ್ಧನನ್ನು ನಿನ್ನ ಭರ್ತೃವನ್ನು ಕರೆತರುವೆನು.

ಜನಮೇಜಯನೇ! ಚಿತ್ರಲೇಖೆ ತೆಗೆದುಕೊಂಡ ನಿಶ್ಚಿಯವು ಉಷೆಗೆ ಮಂಗಳವೆನಿಸಿದರೂ ದಾನವರಿಗೆ ಅಮಂಗಳ ಹಾಗೂ ಭಯಂಕರವಾಗಿದ್ದಿತು.

**ಸಾ ವಚಸ್ತಸ್ಯಮಶಿವಂ ದಾನವಾನಾಂ ಭಯಾವಹಮ್ ।**

ಚಿತ್ರಲೇಖೆಯು ಇಷ್ಟು ಹೇಳಿ ಕೂಡಲೇ ಅಂತರ್ಧಾನ ಹೊಂದಿದಳು. ಉಷೆಯಾದರೂ ಉಳಿದ ಸಖಿಯರೊಂದಿಗೆ ತನ್ನ ಮನೋರಥ ಸಿದ್ಧಿಯ ಬಗ್ಗೆ ಯೋಚಿಸುತ್ತಾ ಇದ್ದಳು.

**ತೃತೀಯೇ ತು ಮುಹೂರ್ತೇ ಸಾ ನಷ್ಟಾ ಬಾಣಪುರಾತ್ ತದಾ ।**
**ಕ್ಷಣೇನ ಸಮನುಪ್ರಾಪ್ತಾ ದ್ವಾರಕಾಂ ಕೃಷ್ಣಪಾಲಿತಾಮ್ ॥ 27 ॥**

ಚಿತ್ರಲೇಖೆಯಾದರೂ ಮೂರನೇ ಮುಹೂರ್ತದಲ್ಲಿ ಬಾಣನ ಪಟ್ಟಣದಿಂದ ಅದೃಶ್ಯಳಾಗಿ ಮನೋವೇಗದಿಂದ ಕ್ಷಣದಲ್ಲಿ ದ್ವಾರಕೆಗೆ ಬಂದಳು. ದ್ವಾರಕೆಯಾದರೂ ಕೈಲಾಸ ಶಿಖರಗಳಂತಿದ್ದ ಪ್ರಾಸಾದಗಳಿಂದಲೂ ಶೋಭಿಸುತ್ತಿತ್ತು. ದ್ವಾರಕೆಯು ಸಮುದ್ರ ಮಧ್ಯದಲ್ಲಿದ್ದು ಆಕಾಶದಲ್ಲಿರುವ ತಾರೆಯಂತೆ ಶೋಭಿಸುತಿತ್ತು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಉಷೆಯ ಕಥೆ ಎಂಬಲ್ಲಿ
ನೂರಹದಿನೆಂಟನೆಯ ಅಧ್ಯಾಯ ಸಮಾಪ್ತಿ

## ಅಥ ಏಕೋನವಿಂಶತ್ಯುತ್ತರಶತತಮೋऽಧ್ಯಾಯಃ

### ಚಿತ್ರಲೇಖಾ-ನಾರದರ ಭೇಟಿ

*ವೈಶಂಪಾಯನ ಉವಾಚ –*

**ಅಥ ದ್ವಾರವತೀಂ ಪ್ರಾಪ್ಯ ಸ್ಥಿತಾ ಸಾ ಭವನಾಂತಿಕೇ ।**
**ಪ್ರವೃತ್ತಿ ಹರಣಾರ್ಥಾಯ ಚಿತ್ರಲೇಖಾ ವ್ಯಚಿಂತಯತ್ ॥ 1 ॥**

ಜನಮೇಜಯನೇ! ಕೇಳು, ದ್ವಾರಕೆಯನ್ನು ತಲುಪಿದ ಚಿತ್ರಲೇಖೆಯು ಅರಮನೆಯ ಬಳಿ ನಿಂತು ಅನಿರುದ್ಧನಿಗೆ ವಿಷಯ ತಿಳಿಸುವುದು ಹೇಗೆಂದು ಆಲೋಚಿಸುತ್ತಿದ್ದಳು.

**ಅಪಶ್ಯನ್ನಾರದಂ ತತ್ರ ಧ್ಯಾಯಂತಮುದಕೇ ಮುನಿಮ್ ॥ 2 ॥**

ಇದೇ ಸಮಯದಲ್ಲಿ ಅಕಸ್ಮಾತ್ ಸಮುದ್ರ ತೀರದಲ್ಲಿ ಧ್ಯಾನಾಸಕ್ತನಾಗಿದ್ದ ನಾರದಮುನಿಯನ್ನು ಕಂಡು ಹರ್ಷಿತಳಾದಳು. ಅವರನ್ನು ಸಮೀಪಿಸಿ ಅಭಿವಂದಿಸಿ, ಅಧೋಮುಖಳಾಗಿ ನಿಂತಳು. ಅವಳಿಗೆ ಆಶೀರ್ವದಿಸಿದ ನಾರದರು – '**ಕಿಮರ್ಥಮಿಹ ಸಂಪ್ರಾಪ್ತಾ**' ಏತಕ್ಕಾಗಿ ಇಲ್ಲಿಗೆ ಬಂದಿರುವೆ? ಎಂದರು.

ನಾರದರೆ! ನಾನು ಉಷಾದೇವಿಯ ದೌತ್ಯಕಾರ್ಯ ಹೊಂದಿ ಇಲ್ಲಿಗೆ ಬಂದಿರುವೆನು. ಅನಿರುದ್ಧನನ್ನು ಇಲ್ಲಿಂದ ಕೊಂಡೊಯ್ಯುವುದೇ ಉದ್ದೇಶ.

**ನಗರೇ ಶೋಣಿತಪುರೇ ಬಾಣೋ ನಾಮ ಮಹಾಸುರಃ ।**
**ತಸ್ಯ ಕನ್ಯಾ ವರಾರೋಹಾ ನಾಮ್ನಾ ಉಷೇತಿ ಚ ವಿಶ್ರುತಾ ॥ 3 ॥**

ನಾರದರೆ ಶೋಣಿತಪುರವನ್ನಾಳುವ ಬಾಣಾಸುರ ತಮಗೆ ತಿಳಿದೆ ಇದೆ. ಅವನ ಮಗಳು ಉಷಾ ಎಂದು. ಅವಳು ಪ್ರದ್ಯುಮ್ನನ ಪುತ್ರ ಅನಿರುದ್ಧನಲ್ಲಿ ಅನುರಕ್ತಳಾಗಿದ್ದಾಳೆ. ಪಾರ್ವತಿಯ ವರದಿಂದಾಗಿ ಅನಿರುದ್ಧನೆ ಅವಳಿಗೆ ಪತಿಯಾಗಬೇಕಿದೆ. ಅದಕ್ಕಾಗಿ ಅನಿರುದ್ಧನನ್ನು ಕರೆದೊಯ್ಯಲು ಅವಳ ದೂತಿಯಾಗಿ ಬಂದಿರುವೆ.

**ತತ್ರೋಪಾಯಂ ಚ ಭಗವನ್ ಚಿಂತಿತುಂ ವೈ ತ್ವಮರ್ಹಸಿ ।**
**ಯಥಾ ಹ್ಯುಷಾ ಲಭೇತ್ ಕಾಂತಂ ಮಮ ಚೈವಾಭಯಂ ಭವೇತ್॥ 4 ॥**

ಪೂಜ್ಯ ನಾರದರೇ! ನನ್ನ ಉದ್ಧೇಶ ಸಫಲವಾಗಲು ಯಾವುದಾದರೂ ಉಪಾಯ ಹೇಳಿರಿ. ನಾನು ಅನಿರುದ್ಧನನ್ನು ಶೋಣಿತಪುರಕ್ಕೆ ಕರೆದೊಯ್ದ ಮೇಲೆ ಶ್ರೀಕೃಷ್ಣನಿಗೆ ಈ ವಾರ್ತೆ ತಿಳಿಸಿರಿ.

**ಅವಶ್ಯಂ ಭವಿತಾ ಚೈವ ಕೃಷ್ಣೇನ ಸಹ ವಿಗ್ರಹಃ ।**
**ಬಾಣಸ್ಯ ಸುಮಹಾನ್ ಸಂಖ್ಯೆ ದಿವ್ಯೋ ಹಿ ಸ ಮಹಾಸುರಃ ॥ 5 ॥**

ಇದೇ ಕಾರಣಕ್ಕಾಗಿ ಶ್ರೀಕೃಷ್ಣನಿಗೂ ಮಹಾಸುರ ಬಾಣನಿಗೂ ಘೋರ ಯುದ್ಧ ನಡೆಯುವುದು. ಸಹಸ್ರಬಾಹುವಿನ ದರ್ಪಿಷ್ಠನಾದ ಬಾಣಾಸುರನನ್ನು ಅನಿರುದ್ಧ ಗೆಲ್ಲಲಾರ. ಆದರೆ ಶ್ರೀಕೃಷ್ಣನಿಗೆ ಅವನನ್ನು ಗೆಲ್ಲುವ ಸಾಮರ್ಥ್ಯವಿದೆ. ಈ ವಿಷಯವನ್ನು ಶ್ರೀಕೃಷ್ಣನಿಗೆ ಹೇಗೆ ತಿಳಿಸುವುದೆಂದು ತಿಳಿಯಲೆಂದೇ ನಾನು ನಿಮ್ಮ ಬಳಿ ಬಂದಿರುತ್ತೇನೆ.

**ತ್ವತ್ ಪ್ರಸಾದಾಚ್ಚ ಭಗವನ್ ನ ಮೇ ಕೃಷ್ಣಾದ್ ಭಯಂ ಭವೇತ್ ।**
**ಸ ಹಿ ತತ್ತ್ವಾರ್ಥದೃಷ್ಟಿಸ್ತು ಅನಿರುದ್ಧಃ ಕಥಂ ಹ್ರಿಯೇತ್ ॥ 6 ॥**

ನಾರದರೆ, ತಮ್ಮ ಅನುಗ್ರಹದಿಂದಾಗಿ ನನಗೆ ಶ್ರೀಕೃಷ್ಣನಿಂದ ಭಯವಿಲ್ಲ. ಇದಲ್ಲದೆ ಸರ್ವಜ್ಞ ಶ್ರೀಕೃಷ್ಣನಿಗೆ ತಿಳಿಯದ ಯಾವ ವಿಷಯವೂ ಇಲ್ಲ. ಆದರೂ ಶ್ರೀಕೃಷ್ಣನು ಕೋಪಗೊಂಡನೆಂದರೆ ಮೂರ್ಲೋಕವನ್ನೂ ಸುಡಬಲ್ಲವ. ದೇವರ್ಷಿಗಳೇ! ಅನಿರುದ್ಧನನ್ನು ಕರೆದೊಯ್ಯಲು ಬೇಕಾದ ಸಲಹೆ ನೀಡಿರಿ.

**ಪೌತ್ರಶೋಕಾಭಿಸಂತಪ್ತಃ ಶಾಪೇನ ಸ ದಹೇತ ಮಾಮ್ ।**

ಮೊಮ್ಮಗನನ್ನು ಕಾಣದೆ ಶೋಕದಿಂದ ನನಗೆ ಶಾಪ ನೀಡಿಯಾದರೂ ನನ್ನನ್ನು ದಹಿಸಿಯಾನು? ನಾನು ಏನು ಮಾಡಿದರೆ ಒಳ್ಳೆಯದೆಂದು ತಿಳಿಸಿರಿ.

**ಇತ್ಯೇವಮುಕ್ತಃ ಭಗವಾಂಶ್ಚಿತ್ರ ಲೇಖಾಂ ಸ ನಾರದಃ ।**
**ತ್ವಯಾ ನೀತೇಽನಿರುದ್ಧೇ ತು ಕನ್ಯಾವೇಶ್ಮಪ್ರವೇಶಿತೇ ।**
**ಯದಿ ಯುದ್ಧಂ ಭವೇತ್ ತತ್ರ ಸ್ಮರ್ತವ್ಯೋಽಹಂ ಶುಚಿಸ್ಮಿತೇ ॥ 7 ॥**

ಜನಮೇಜಯನೇ! ಚಿತ್ರಲೇಖೆಯು ನಾರದರನ್ನು ಹೀಗೆ ಪ್ರಾರ್ಥಿಸಿದಾಗ ಚಿತ್ರಲೇಖೆ! ನೀನು ಭಯಪಡುವ ಕಾರಣವಿಲ್ಲ. ನಾನು ಹೇಳುವ ಮಾತನ್ನು ಕೇಳು. ನೀನು ಅನಿರುದ್ಧನನ್ನು ಅಪರಿಸಿಕೊಂಡು ಹೋಗಿ ಕನ್ಯಾಂತಃ ಪುರ ಸೇರಿಸು. ಈ ಕಾರಣದಿಂದಾಗಿ ಯುದ್ಧವೇರ್ಪಟ್ಟರೆ ನನ್ನನ್ನು ಸ್ಮರಿಸಿಕೋ. ಯುದ್ಧವನ್ನು ನೋಡಲು ನನಗೆ ಬಹಳ ಇಷ್ಟ. ಲೋಕಕಲ್ಯಾಣಕ್ಕಾಗಿ ನಾನು ಮಾಡಿಸುವ ಪ್ರವೃತ್ತಿಯೂ ದೃಢವಾಗುತ್ತದೆ.

## ನಾರದರಿಂದ ಚಿತ್ರಲೇಖೇಗೆ ತಾಮಸೀ ವಿದ್ಯಾದಾನ

**ಗೃಹ್ಯತಾಂ ತಾಮಸೀ ವಿದ್ಯಾ ಸರ್ವಲೋಕ ಪ್ರಮೋಹಿನೀ ।**

ಚಿತ್ರಲೇಖೆಯೇ! ಸಕಲ ಲೋಕ ಜನರನ್ನೂ ಮೋಹಗೊಳಿಸುವ ಈ ತಾಮಸೀ ವಿದ್ಯೆಯನ್ನು ಸ್ವೀಕರಿಸು, ಎಂದಾಗ ಅವಳು ಹಾಗೆ ಆಗಲಿ ಎಂದು ತಾಮಸೀ ವಿದ್ಯೆಯನ್ನು ಅವರಿಂದ ಪಡೆದಳು. ನಂತರ ನಾರದರಿಗೆ ಅಭಿವಂದಿಸಿ ಆಕಾಶಮಾರ್ಗದಲ್ಲಿ ಅನಿರುದ್ಧನಿರುವ ಅರಮನೆಗೆ ಹೋದಳು.

**ತತೋ ದ್ವಾರವತೀಮಧ್ಯೇ ಕಾಮಸ್ಯ ಭವನಂ ಮಹತ್ ।**
**ತತ್ ಸಮೀಪೋನಿರುದ್ಧಸ್ಯ ಭವನಂ ಸಾ ವಿವೇಶ ಹ ॥ 8 ॥**

ದ್ವಾರಕಾಪಟ್ಟಣದ ಮಧ್ಯಭಾಗದಲ್ಲಿ ಕಾಮನವತಾರಿ ಪ್ರದ್ಯುಮ್ನನ ಶುಭಮಂದಿರವಿತ್ತು. ಅದರ ಸಮೀಪವೇ ಅನಿರುದ್ಧನ ಮನೆಯಿತ್ತು. ಸುಂದರವೂ, ನಾನಾರತ್ನಗಳಿಂದ ಸುಶೋಭಿತವೂ, ಮುತ್ತು ಮಾಣಿಕ್ಯ ಹವಳಗಳಿಂದ ಅಲಂಕೃತವಾಗಿತ್ತು. ಅನಿರುದ್ಧನಿದ್ದ ಅರಮನೆಗೆ ಶೀಘ್ರವಾಗಿ ಪ್ರವೇಶಿಸಿದಳು. ಅನಿರುದ್ಧನಾದರೂ ಚಂದ್ರನಂತೆ ಸುಂದರನಾಗಿದ್ದು, ನಕ್ಷತ್ರಗಳ ಮಧ್ಯೆ ಚಂದ್ರನಿರುವಂತೆ ಅನೇಕ ಶ್ರೇಷ್ಠನಾರಿಯರ ಮಧ್ಯದಲ್ಲಿದ್ದನು. ವರಸಿಂಹಾಸನದಲ್ಲಿದ್ದು ಧನಾಧ್ಯಕ್ಷ ಕುಬೇರನಂತೆ ಕಂಡುಬರುತ್ತಿದ್ದ, ಗಾಯಕರ ಗಾಯನ, ವಾದ್ಯಗಳು ನಡೆಯುತ್ತಿದ್ದವು. ಅವನಿಗಾದರೂ ಇದರ ಮೇಲೆ ಗಮನವಿದ್ದಿಲ್ಲವೆಂಬುದನ್ನು ಚಿತ್ರಲೇಖೆ ಗಮನಿಸಿದಳು.

**ನ ಚಾಸ್ಯ ಮನಸಸ್ತುಷ್ಟಿಂ ಚಿತ್ರಲೇಖಾ ಪ್ರಪಶ್ಯತಿ ।**
**ವ್ಯಕ್ತಮಸ್ಯ ಹಿ ತತ್ ಸ್ವಪ್ನೋ ಹೃದಯೇ ಪರಿವರ್ತತೇ ॥ 9 ॥**

ಅನಿರುದ್ಧನಿಗೆ ಭೋಗ- ಮಧುಪಾನ- ನೃತ್ಯಾದಿಗಳಲ್ಲಿ ಆಸಕ್ತಿ ಇರಲಿಲ್ಲ. ಸ್ವಪ್ನವನ್ನೇ ಯೋಚಿಸುತ್ತಿರುವಂತಿತ್ತು. ಅವಳಿಗೆ ಭಯವು ದೂರ ಸರಿಯಿತು.

ಚಿತ್ರಲೇಖೆಯು ಅಂತರ್ಹಿತಳಾಗಿಯೇ ಇದ್ದು ಅನಿರುದ್ಧನನ್ನು ಅಪಹರಿಸುವ ಸಲುವಾಗಿ ನಾರದರು ನೀಡಿದ ತಾಮಸೀ ವಿದ್ಯೆಯನ್ನು ಅವನ ಮೇಲೆ ಪ್ರಯೋಗಿಸಿ ಅವನನ್ನು ಮುಚ್ಚಿಬಿಟ್ಟಳು.

ಆಕಾಶದಿಂದ ಕೂಡಲೆ ಆಗಮಿಸಿ ಅನಿರುದ್ಧನೊಂದಿಗೆ ಸುಮಧುರ ಮಾತನ್ನು ಹೇಳಿದಳು.

**ಅಪಿ ತೇ ಕುಶಲಂ ವೀರ ಸರ್ವತ್ರ ಯದುನಂದನ ।**
**ಶೃಣುಷ್ವ ತ್ವಂ ಮಹಾಬಾಹೋ ವಿಜಪ್ತಿಂ ಮೇ ರತೀಸುತ ॥ 10 ॥**

ಅನಿರುದ್ಧನೊಂದಿಗೆ ಮಾತಾಡುವ ಮೊದಲು ಅವನಿಗೆ ತನ್ನನ್ನು ನೋಡುವ ದಿವ್ಯದೃಷ್ಟಿಯನ್ನು ನೀಡಿ ನಂತರ – ವೀರನೇ! ನೀನು ಕುಶಲವಾಗಿರುವೆ ತಾನೆ? ರತಿಕುಮಾರ! ನಾನು ಹೇಳುವ ವಿಜ್ಞಾಪನೆಯನ್ನು ಕೇಳು. ಇದು ಉಷಾದೇವಿಯ ಮಾತು. ನೀನು ಅವಳನ್ನು ಸ್ವಪ್ನದಲ್ಲಿ ಕಂಡು ಅವಳನ್ನು ಕೂಡಿದೆ. ಅವಳಾದರೂ ನಿನ್ನನ್ನೆ ಪತಿಯೆಂದು ನಿಶ್ಚಯ ಮಾಡಿದ್ದಾಳೆ. ಅವಳೆ ನನ್ನನ್ನು ನಿನ್ನಲ್ಲಿಗೆ ಕಳುಹಿಸಿರುವಳು. ಯಾವಾಗಲೂ ನಿನ್ನದೆ ಧ್ಯಾನ. ನಿನ್ನ ದರ್ಶನಾಕಾಂಕ್ಷಿಯಾಗಿ ಬಹಳ ಪರಿತಪಿಸುತ್ತಿದ್ದಾಳೆ.

ನಿನ್ನ ಮನದಲ್ಲಿ ಸಾವಿರಾರು ಸುಂದರಿಯರಿದ್ದರೂ ನಿನಗಾಗಿಯೇ ಜೀವ ಹಿಡಿದಿರುವ ಉಷೆಯನ್ನು ವರಿಸುವುದು ಯೋಗ್ಯವಾಗಿದೆ. ನಿನ್ನ ಲಾಭ ದುರ್ಲಭವಾದರೆ ಅವಳು ಜೀವದಿಂದುಳಿವುದು ದುರ್ಲಭ. ಈ ನಿನ್ನ ಉಷೆಯ ವಿವಾಹಕ್ಕೆ ಪಾರ್ವತಿದೇವಿಯ ವರ ಮುದ್ರೆಯೂ ಇದೆ.

**ಚಿತ್ರಪಟ್ಟಂ ಮಯಾದತ್ತಂ ತ್ವಚ್ಚಿಹ್ನಂ ದೃಶ್ಯ ಜೀವತಿ ।**
**ಉಷಾ ತೇ ಪತತೇ ಮೂರ್ಧ್ನಾ ವಯಂ ಚ ಯದುನಂದನ ॥ 11 ॥**

ಸುಂದರನೇ! ನಾನು ನಿನ್ನ ಚಿತ್ರ ಬರೆದು ಅವಳಿಗೆ ನೀಡಿರುವೆ. ಅದನ್ನು

ನೋಡುತ್ತಾ ಜೀವ ಹಿಡಿದುಕೊಂಡಿದ್ದಾಳೆ. ಅವಳಲ್ಲಿ ದಯೆ ಮಾಡು. ಉಷೆಯು ತಲೆಬಾಗಿ ನಿನಗೆ ನಮಸ್ಕರಿಸುತ್ತಿರುವಳು. ನಾವೂ ಅಷ್ಟೆ. ವೀರನೇ! ಉಷಾದೇವಿಯ ಹುಟ್ಟು ಕುಲ ಶೀಲಾದಿಗಳು ತಿಳಿಯಬೇಕೆ? ಹಾಗಾದರೆ ಕೇಳು.

**ವೈರೋಚನಸುತೋ ವೀರೋ ಬಾಣೋ ನಾಮ ಮಹಾಸುರಃ ।**

ಪ್ರಹ್ಲಾದನ ಮಗ ವಿರೋಚನ. ಅವನ ಪುತ್ರನೆ ಮಹಾದಾನಿಯಾದ ಬಲಿಚಕ್ರವರ್ತಿ. ಅವನ ಮಗನೆ ವೀರನಾದ ಬಾಣಾಸುರ. ಬಾಣಾಸುರನ ಮಗಳ ಹೆಸರೇ ಉಷಾ. ಅವಳ ಉಸಿರೇ ಅನಿರುದ್ಧ.

ಚಿತ್ರಲೇಖೆಯ ಮಾತುಗಳನ್ನು ಕೇಳಿ ಅನಿರುದ್ಧನು ಹೇಳುವನು –

**ದೃಷ್ಟಾ ಸ್ವಪ್ನೇ ಮಯಾ ಸಾ ಹಿ ತನ್ಮತ್ತಃ ಶ್ರುಣು ಶೋಭನೇ ।**
**ರೂಪಂ ಕಾಂತಿಂ ಮತಿಂ ಚೈವ ಸಂಯೋಗಂ ರುದಿತಂ ತಥಾ ॥ 12 ॥**

ನಾನು ಉಷೆಯ ರೂಪಸಿರಿ, ಕಾಂತಿ ಬುದ್ಧಿ ರತಿಸುಖಗಳಿಂದ ಮೋಹಿತ-ನಾಗಿದ್ದೇನೆ. ಚಿತ್ರಲೇಖೆಯೇ! ನೀನು ನನ್ನ ಸಖ್ಯವನ್ನು ಬಯಸುವುದಾದರೆ, ನಾನು ನಿನ್ನ ಅನುಗ್ರಹ ಪಾತ್ರನಾಗಿದ್ದರೆ ನನ್ನನ್ನು ಈ ಕೂಡಲೇ ಉಷೆಯ ತಾಣಕ್ಕೆ ಕರೆದೊಯ್ಯುವವಳಾಗು.

ಪ್ರಿಯೆಯ ಸಂಗಮ ಬಯಸಿರುವ ನಾನು ಕಾಮಾರ್ತನಾಗಿ ದುಃಖಿತ-ನಾಗಿದ್ದೇನೆ. ನಾನು ಅಂಜಲಿಬದ್ಧನಾಗಿ ನಿನ್ನನ್ನು ಬೇಡುತ್ತಿರುವೆ ನನ್ನ ಕನಸನ್ನು ನನಸಾಗಿಸು.

**ಸಫಲೋಽದ್ಯ ಮಮ ಕ್ಲೇಶಃ ಸಖ್ಯಾ ಮೇ ಯತ್ ಪ್ರಯಾಚಿತಮ್ ।**

ಜನಮೇಜಯನೇ! ಅನಿರುದ್ಧನು ಹೇಳಿದ ಮಾತನ್ನು ಕೇಳಿದ ಚಿತ್ರಲೇಖೆಯು ನಾನಿಷ್ಟು ಕಷ್ಟಪಟ್ಟದ್ದು ಸಾರ್ಥಕವಾಯಿತು. ನನ್ನ ಪ್ರಿಯಸಖಿ ಬೇಡಿದ ವಸ್ತುವು ನನಗೆ ಸಿಕ್ಕಿದಂತಾಯಿತು.

**ಹರ್ಮ್ಯೇ ಸ್ತ್ರೀಗಣಮಧ್ಯಸ್ಥಂ ಕೃತ್ವಾ ಚಾಂತರ್ಹಿತಂ ತದಾ ।**
**ಉತ್ಪಪಾತ ಗೃಹೀತ್ವಾ ಸಾ ಪ್ರಾದ್ಯುಮ್ನಿಂ ಯುದ್ಧದುರ್ಮದಮ್ ॥ 13 ॥**

ಚಿತ್ರಲೇಖೆಯು ಮಹಡಿಯ ಮೇಲೆ ಸ್ತ್ರೀಯರ ಮಧ್ಯೆ ಕುಳಿತಿದ್ದ ಅನಿರುದ್ಧನನ್ನು

ತಾಮಸೀ ವಿದ್ಯೆಯಿಂದಾಗಿ ಯಾರಿಗೂ ತಿಳಿಯದಂತೆ ಗಗನಕ್ಕೇ ಹಾರಿದಳು. ಮನೋವೇಗದಿಂದ ಶೋಣಿತಪುರಕ್ಕೆ ಬಂದಳು. ಕಾಮರೂಪಿಣಿಯಾದ ಚಿತ್ರಲೇಖೆಯು ಮಾಯೆಯಿಂದ ಅದೃಶ್ಯನನ್ನಾಗಿ ಮಾಡಿ ಉಷಾದೇವಿಯ ಅರಮನೆಗೆ ಒಯ್ದಳು. ರಹಸ್ಯದಲ್ಲಿ ಉಷೆಗೆ ಅವನನ್ನು ತೋರಿಸಿದಳು.

**ಉಷಾಯಾಃ ದರ್ಶಯಚ್ಚೈನಂ ಚಿತ್ರಾಭರಣ ಭೂಷಿತಮ್ ।**

ಅನಿರುದ್ಧನನ್ನು ನೋಡಿದ ಉಷೆಯ ನೇತ್ರಗಳು ವಿಕಸಿತ ಕಮಲದಂತಾದವು. ಉಪ್ಪರಿಗೆಯಲ್ಲಿಯೇ ಉಷೆಯು ಪ್ರಿಯತಮನಿಗೆ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದಳು. [**ತಮರ್ಘ್ಯೇಣ ಯಾದವಂ ಸಮಪೂಜಯತ್**]

ತನ್ನ ಮನೋರಥವನ್ನು ಈಡೇರಿಸಿಕೊಟ್ಟ ಚಿತ್ರಲೇಖೆಯನ್ನು ಸಂತೋಷದಿಂದ ಆಲಿಂಗಿಸಿದಳು. ಅವಳ ಕಾರ್ಯ ಪ್ರಶಂಸಿಸುವ ಮಾತುಗಳಿಂದ ಅವಳನ್ನು ಸಂತೋಷಪಡಿಸಿದಳು.

**ಸಖೀದಂ ವೈ ಕಥಂ ಕಾರ್ಯಂ ಗುಹ್ಯಕಾರ್ಯವಿಶಾರದೇ ।**
**ಗುಹ್ಯೇ ಕೃತೇ ಭವೇತ್ ಸ್ವಸ್ತಿ ಪ್ರಕಾಶೇ ಜೀವಿತಕ್ಷಯಃ ॥ 14 ॥**

ಸಂತೋಷದ ಮರುಕ್ಷಣದಲ್ಲಿಯೇ ಭಯದಿಂದ ಆಕುಲಗೊಂಡು – ಸಖಿ! ಈ ವಿಷಯವನ್ನು ಗುಪ್ತವಾಗಿ ಇಡುವುದು ಹೇಗೆಂದು ಚಿಂತೆಯಾಗಿದೆ. ರಹಸ್ಯವಾಗಿ ಉಳಿದರೆ ಎಲ್ಲರಿಗೂ ಕ್ಷೇಮ. ಬಹಿರಂಗವಾದರೆ ಸರ್ವನಾಶ. ಗುಹ್ಯಕಾರ್ಯವಿಶಾರದೆಯಾದ ನೀನೆ ಮಾರ್ಗ ತೋರಿಸಬೇಕು.

ಸಖಿಯ ಮಾತನ್ನು ಕೇಳಿದ ಚಿತ್ರಲೇಖೆಯು,

ಪುರುಷ ಪ್ರಯತ್ನದಿಂದ ಮಾಡಿದ ಕಾರ್ಯವನ್ನು ದೈವವು ಕ್ಷಣದಲ್ಲಿ ಹಾಳು ಮಾಡುವುದನ್ನು ನೋಡಿ ಕೇಳಿದ್ದೇವೆ.

**ಕೃತಂ ಪುರುಷಕಾರೇಣ ದೈವಂ ನಾಶಯತೇ ಕ್ಷಣಾತ್ ।**

ಪಾರ್ವತಿದೇವಿಯು ನಿನಗೆ ನೀಡಿರುವ ವರಪ್ರಸಾದವು ನಿನಗೆ ಅನುಕೂಲವಾಗುವುದಾದರೆ ಈ ರಹಸ್ಯ ಕಾರ್ಯವನ್ನು ಯಾವನೂ ತಿಳಿಯಲಾರ. [**ಮಯಾಕೃತಂ ಗುಹ್ಯಂ ನ ಕಶ್ಚಿತ್ ಜ್ಞಾಯತೇ ನರಃ**].

ಈ ಮಾತಿನಿಂದ ಉಷೆಗೆ ಧೈರ್ಯ ಬಂದಿತು. ನಿನ್ನ ಮಾತು ಯುಕ್ತಿಯುಕ್ತವಾಗಿದೆ ಎಂದು ಹೇಳಿ – ಅನಿರುದ್ಧನಿಗೆ ಹೀಗೆಂದಳು.

ಅದೃಷ್ಟವಶಾತ್ ಸ್ವಪ್ನ ದುಷ್ಟನಾಗಿದ್ದ ಚೋರನು ಈಗ ಸುಂದರ ಪತಿಯ ರೂಪದಲ್ಲಿ ಬಂದಿರುವನು - ಪ್ರಿಯನೇ!

ಸ್ತ್ರೀಯರ ಹೃದಯ ಸ್ವಾಭಾವಿಕವಾಗಿಯೇ ಮೃದುವಾಗಿರುತ್ತದೆಯಾದ್ದರಿಂದ ನಾನು ನಿನ್ನನ್ನು ಕೇಳುತ್ತಿದ್ದೇನೆ. ನೀನು ಎಲ್ಲಾ ರೀತಿಯಿಂದಲೂ ಆರೋಗ್ಯವಂತನಾಗಿರುವೆಯಷ್ಟೆ? **[ಹೃದಯಂ ಮೃದು ಸ್ತ್ರೀಣಾಂ]**

ಅನಿರುದ್ಧನು - ಉಷೆಯ ಅರ್ಥವತ್ತಾದ ಮಾತನ್ನು ಕೇಳಿ ಶುಭಕರವೂ ಸಮಧುರವೂ ಆದ ಮಾತನ್ನಾಡಿದನು. ಆನಂದಾಶ್ರುವಿನಿಂದ ತುಂಬಿದ್ದ ನೇತ್ರ ಜಲವನ್ನು ತನ್ನ ಕೈಯಿಂದ ದೂರ ಮಾಡುತ್ತಾ - ವರಾರೋಹಳೇ!

**ಕುಶಲಂ ಮೇ ವರಾರೋಹೇ ಸರ್ವತ್ರ ಮಿತಭಾಷಿಣಿ ॥ 15 ॥**

ನಿನ್ನ ಪ್ರೀತಿ, ಪ್ರಸನ್ನತೆಗಳಿಂದ ನಾನು ಸರ್ವಪ್ರಕಾರದಿಂದಲೂ ಕುಶಲ-ನಾಗಿರುವೆ. ನಿನಗೀಗ ಪ್ರಿಯವುಂಟು ಮಾಡುವ ಮಾತನ್ನು ಹೇಳುತ್ತೇನೆ ಕೇಳು.

ಪ್ರಿಯಸಖಿಯೇ ! ನಾನು ಹಿಂದೆಂದೂ ಈ ದೇಶವನ್ನು ನೋಡಿದ್ದೆ ಇಲ್ಲ. ಸ್ವಪ್ನದಲ್ಲಿ ಒಂದು ಬಾರಿ ನೋಡಿದ ಕನ್ಯಾಗಾರವನ್ನು ಈಗ ನಿಜದಲ್ಲಿ ಕಾಣುತ್ತಿರುವೆನು ನಿನ್ನ ಒಳ್ಳೆಯ ಗುಣ, ನಿರ್ವ್ಯಾಜ ಪ್ರೇಮದಿಂದಾಗಿಯೇ ನಾನಿಲ್ಲಿ ಬಂದಿರುವೆನು.

ತ್ರ್ಯಂಬಕನ ಅರ್ಧಾಂಗಿ ಅಂಬಿಕೆ ನೀಡಿದ ವರ ಎಂದೂ ಮಿಥ್ಯೆಯಾಗಲಾರದು.

**ನ ಚ ತದ್ ರುದ್ರಪತ್ನ್ಯಾ ವೈ ಮಿಥ್ಯಾ ವಾಕ್ಯಂ ಭವಿಷ್ಯತಿ ।**

ನಿನ್ನಲ್ಲಿಗೆ ಬಂದ ನನ್ನ ಮೇಲೆ ಕೃಪೆದೋರು ಎಂದಾಗ ಸಂತುಷ್ಟಳಾದ ಉಷೆಯು ತನ್ನ ಪ್ರಿಯತಮನೊಂದಿಗೆ ರಹಸ್ಯ ಸ್ಥಾನಕ್ಕೆ ಹೋದಳು. ನಂತರ ಅವರಿಬ್ಬರೂ ಗಾಂಧರ್ವ ವಿವಾಹವನ್ನನುಸರಿಸಿ ವಿವಾಹವಾದರು.

**ತತಶ್ಚ ಉದ್ವಾಹ ಧರ್ಮೇಣ ಗಾಂಧರ್ವೇಣ ಸಮೀಯತುಃ ।**
**ಅನ್ಯೋನ್ಯಂ ರಮತುಸ್ತೌತು ಚಕ್ರವಾಕೌ ಯಥಾ ದಿವಾಃ ॥ 16 ॥**

ಪರಸ್ಪರ ಪ್ರೀತಿಯಿಂದ ಚಕ್ರವಾಕಗಳಂತೆ ಹಗಲಿರುಳು ರಮಿಸಿದರು. ಉಷೆಯು

ಗುಣವಂತನಾದ ಅನಿರುದ್ಧನೊಂದಿಗೆ ವಿವಾಹಾನಂತರ ನಾಲ್ಕು ತಿಂಗಳುಗಳ ಕಾಲ ರಹಸ್ಯವಾಗಿ ರಮಿಸಿದಳು. [**ಚತ್ವಾರೋ ಮಾಸಾಃ ವ್ಯತೀಯು**].

ಅನಿರುದ್ಧನೊಡನೆ ರಹಸ್ಯವಾಗಿ ನಡೆಯುತ್ತಿರುವ ವಿಷಯ ಬಾಣಾಸುರನಿಗೆ ತಿಳಿಯಲಿಲ್ಲ. ಆದರೆ ಬಾಣಾಸುರನ ಕನ್ಯಾಂತಃ ಪುರ ರಕ್ಷಕರು ಈ ವಿಷಯವನ್ನು ಪತ್ತೆ ಹಚ್ಚಿ ಬಾಣಾಸುರನಿಗೆ ತಿಳಿಸಿದರು.

**ಉಷಯಾ ಸಹ ಸಂಯುಕ್ತೋ ವಿಜ್ಞಾತೋ ಬಾಣರಕ್ಷಿಭಿಃ ।**

ಈ ವಿಷಯದಿಂದ ಅತ್ಯುಗ್ರನಾದ ಬಾಣಾಸುರನು ಅನಿರುದ್ಧನನ್ನು ಸೆರೆಹಿಡಿಯಲೆಂದು ಕಿಂಕರಸೈನ್ಯವೆಂಬ ದಳವನ್ನೆ ಕಳುಹಿಸಿದನು.

**ಗಚ್ಛಧ್ವಂ ಸಹಿತಾಃ ಸರ್ವೇ ಹನ್ಯತಾಮೇವ ದುರ್ಮತಿಃ ।**
**ಯೇನ ನಃ ಕುಲಚಾರಿತ್ರ್ಯಂ ದೂಷಿತಂ ದೂಷಿತಾತ್ಮನಾ ॥ 17 ॥**

ಕಿಂಕರರೇ! ನೀವೆಲ್ಲರೂ ಹೋಗಿ ದುರ್ಮತಿಯಾದ ಅನಿರುದ್ಧನನ್ನು ಕೊಂದು ಹಾಕಿರಿ. ಆ ದುಷ್ಟನು ನಮ್ಮ ಕುಲವನ್ನೇ ಕಲಂಕ ಮಾಡಿರುವನು. ಉಷೆಯನ್ನು ಅತಿಕ್ರಮಿಸಿದ ಇವನು ನಮ್ಮನ್ನು ಧಿಕ್ಕರಿಸಿದಂತೆಯೇ! ನಾವು ಕಾಲು ತೊಳೆದು ಕನ್ಯಾದಾನ ಮಾಡಿಕೊಡದೆಯೇ ತಾನೇ ನಮ್ಮ ಕನ್ಯೆಯನ್ನು ಪ್ರಾಣಿಗ್ರಹಣ ಮಾಡಿರುವನು.

**ಅಹೋ ವೀರ್ಯಮಹೋ ಧೈರ್ಯಮಹೋ ಧಾರ್ಷ್ಟ್ಯಂ ಚ ದುರ್ಮತೇಃ।**

ಎಂತಹ ಧೈರ್ಯ, ಏನು ವೀರ್ಯ, ಏನು ಧಾರ್ಷ್ಟ್ಯತೆ ಆ ದುರ್ಮತಿಯದು. ಬಾಲಿಶನಾದ ಆ ಬಾಲಕನು ನಮ್ಮ ಪುರಕ್ಕೆ ಮಾತ್ರವಲ್ಲ ಅಂತಃಪುರಕ್ಕೂ ಕಾಲಿಟ್ಟಿದ್ದಾನೆ. ಹೀಗೆ ಹೇಳಿ ಅವನೊಂದಿಗೆ ಯುದ್ಧ ಹೂಡಲು ಆದೇಶಿಸಿದನು.

### ಅನಿರುದ್ಧ –ಕಿಂಕರರ ಯುದ್ಧ

ಮಹಾಬಲಿಷ್ಠರೂ ಯುದ್ಧೋತ್ಸಾಹಿಗಳೂ ಆದ ಕಿಂಕರ ಸೈನಿಕರು ಕವಚಾದಿಗಳನ್ನು ಧರಿಸಿ ಯುದ್ಧಕ್ಕೆ ಹೊರಟರು. ಅನಿರುದ್ಧನನ್ನು ಕೊಲ್ಲಬೇಕೆಂದೇ ನಿಶ್ಚಯಿಸಿ ನಾನಾಶ್ತ್ರಪ್ರಹರಣರಾಗಿ ಸರ್ವಪ್ರಹರಣಾಯುಧನ ಮೊಮ್ಮಗನ ಮೇಲೆ ಬಿದ್ದನು.

ಈ ಯುದ್ಧೋದ್ಯೋಗ ನೋಡಿ ಉಷೆಯು ಕಂಬನಿ ಸುರಿಸಿದಳು. ಅವನಿಗೆ

ಕೇಡಾಗಬಹುದೆಂದು ಭಯಪಟ್ಟಳು. ಅನಿರುದ್ಧನು ಭಯದಿಂದ ನಡುಗುತ್ತಿರುವ ಕಾಂತೆಯನ್ನು ನೋಡಿ ಹೀಗೆಂದನು.

**ಅಭಯಂ ತೇಽಸ್ತು ಸುಶ್ರೋಣಿ ಮಾ ಭೈಸ್ತ್ವಂ ಹಿ ಮಯಿ ಸ್ಥಿತೇ ।**
**ಆಗಚ್ಛತಿ ನ ಮೇ ಚಿಂತಾ ಭೀರು! ಪಶ್ಯಾದ್ಯ ವಿಕ್ರಮಮ್ ॥ 18 ॥**

ನಾನು ನಿನಗೆ ಅಭಯ ನೀಡುತ್ತಿರುವೆನು! ಭಯಪಡಬೇಕಾದ ಕಾರಣವಿಲ್ಲ. ಸಂತೋಷಪಡುವ ಕಾಲದಲ್ಲಿ ದುಃಖಬೇಡ. ನೋಡು ನನ್ನ ಪರಾಕ್ರಮ. ಬಾಣನ ಸಮಗ್ರ ಸೇನಾವಾಹಿನಿ ಬಂದರೂ ನನಗೆ ಚಿಂತೆಯಿಲ್ಲ. ಅನಿರುದ್ಧನು ತನ್ನೆಡೆಗೆ ಆಗಮಿಸುತ್ತಿರುವ ಸೈನ್ಯದ ಕೋಲಾಹಲ ಕೇಳುತ್ತಾ ಇದೇನಿದು ಎಂದು ಹೇಳುತ್ತಾ ಕೂಡಲೇ ಎದ್ದು ನಿಂತನು.

ವಿಶಾಲವಾದ ಅರಮನೆಯ ಸುತ್ತಲೂ ನಾನಾ ವಿಧ ಪ್ರಹರಣ ಧರಿಸಿ ಯುದ್ಧೋನ್ಮತ್ತರಾದ ಸೈನಿಕರು ನಿಂತಿದ್ದರು. ಇದನ್ನು ನೋಡಿ ತನ್ನ ದಂತಗಳನ್ನು ಕಟಕಟನೆ ಕಡಿಯುತ್ತಾ ಔಡು ಕಚ್ಚಿದನು. *[ಅದಶತ್ ದಶನಚ್ಛದಮ್].*

ಶತ್ರುಗಳಿದ್ದ ಕಡೆಗೆ ವೇಗವಾಗಿ ಧಾವಿಸಿದನು.

ಬಾಣಾಸುರನ ಸೈನಿಕರು ಅನಿರುದ್ಧನೊಂದಿಗೆ ಯುದ್ಧ ಸಿದ್ಧತೆಯಲ್ಲಿರುವುದನ್ನು ನೋಡಿ ನಾರದರನ್ನು ಸ್ಮರಿಸಿದಳು. ರೆಪ್ಪೆ ತೆಗೆಯುವುದರೊಳಗೆ ನಾರದರು ಕಾಣಿಸಿದರು. *[ನಿಮೇಷಮಾತ್ರೇಣ ಸಂಪ್ರಾಪ್ತೋ].*

ಅಂತರಿಕ್ಷದಲ್ಲಿಯೆ ನಿಂತು ಅನಿರುದ್ಧನಿಗೆ ಹೀಗೆಂದನು.

**ಮಾಂ ಭಯಂ ಸ್ವಸ್ತಿ ತೇ ವೀರ ಪ್ರಾಪ್ತೋಽಸ್ಮ್ಯದ್ಯ ಪುರಂ ತವ ।**

ವೀರನೇ, ನಾನು ನಿನ್ನ ಮುಂದೆ ಇರುವೆನು. ಯಾವುದೇ ಭಯಬೇಡ. ನಿನಗೆ ಮಂಗಳವಾಗಲಿ ಎಂದು.

ಬಂದ ನಾರದರಿಗೆ ಅನಿರುದ್ಧನು ತಲೆಬಾಗಿ ನಮಸ್ಕರಿಸಿದನು. ಯುದ್ಧ ಸನ್ನದ್ಧನಾದನು. ಸೈನಿಕರ ಯುದ್ಧ ಕೋಲಾಹಲ ನೋಡಿ ಯುದ್ಧಕ್ಕೆ ಹೊರಟೆ ಹೋದನು.

## ಸೈನಿಕರ ಪಲಾಯನ

**ತಮಾಪತತಂ ತಂ ಸಂಪ್ರೇಕ್ಷ್ಯ ಸಂದಷ್ಟೌಷ್ಠ ಮಹಾಭುಜಮ್ ।**
**ಪ್ರಾಸಾದಾಚ್ಚಾವರೋಹಂತಂ ಭಯಾರ್ತಾ ವಿಪ್ರ! ದುದ್ರುವುಃ ॥ 19 ॥**

ಯುದ್ಧಕ್ಕಾಗಿ ಕೋಪ ಓಷ್ಠವನ್ನು ಕಚ್ಚುತ್ತಾ ಉಪ್ಪರಿಗೆಯಿಂದ ಇಳಯುತ್ತಿದ್ದ ಯುದ್ಧ ದುರ್ಮದ ಅನಿರುದ್ಧನನ್ನು ನೋಡಿ ಭಯದಿಂದ ಓಡಿ ಹೋದರು. ಅಂತಃಪುರದ ದ್ವಾರದಲ್ಲಿ ನಿಂತೆ ತನ್ನಲ್ಲಿದ್ದ ಪರಿಘಾಯುಧವನ್ನು ಸೈನಿಕರನ್ನು ಕೊಲ್ಲಲು ಅವರ ಮೇಲೆಸೆದ.

ಬಾಣನ ಎಲ್ಲಾ ಸೈನ್ಯದವರು ಅನಿರುದ್ಧನ ಮೇಲೆ ಬಾಣಗಳ ಮಳೆಗರೆದರು, ಗದೆಗಳನ್ನೆಸೆದರು, ಮುಸಲಾಯುಧ, ಶಕ್ತ್ಯಾಯುಧ, ಕತ್ತಿಗಳಿಂದಲೂ ಏಕ ಕಾಲದಲ್ಲಿ ಹೊಡೆದರು. ಹೀಗೆ ಬಾಣಾದಿಗಳಿಂದ ಬಾಣನ ಸೈನ್ಯದವರು ಸುತ್ತಲು ಹೊಡೆಯುತ್ತಿದ್ದರೂ, ಅನಿರುದ್ಧನು ಧೃತಿಗೆಡದೆ ಅಚಲದಂತಿದ್ದನು. ಅವನು ಗ್ರೀಷ್ಮ ಋತುರ್ವಿನಲ್ಲಿ ಘರ್ಜಿಸುವ ಮೇಗಗಳಂತೆ ಘರ್ಜಿಸುತ್ತಾ ಪರಿಘಾಯುಧವನ್ನು ತಿರುಗಿಸುತ್ತಾ ನಿಂತಿದ್ದನು.

**ಸಾಧು ಸಾಧ್ವಿತಿ ವೈ ತತ್ರ ಸೋಽನಿರುದ್ಧಮಭಾಷತ ।**

ಧೃತಿಗೆಡದೆ ಏಕಾಂಗಿಯಾಗಿ ಹೋರಾಡುತ್ತಿದ್ದ ಅನಿರುದ್ಧನನ್ನು ನಾರದರು – ಸಾಧು ಸಾಧು ಬಾಲಕ ಎಂದು ಪ್ರಶಂಸಿಸಿ ಮತ್ತಷ್ಟು ಹುರುಪು ತುಂಬಿದರು. ಅತ್ಯಂತ ಸಾಮರ್ಥ್ಯವುಳ್ಳ ಪರಿಘಾಯುದ್ಧದಿಂದ ಸೈನಿಕರೆಲ್ಲ ಸಂಹೃತ-ರಾಗುತ್ತಿದ್ದರು. ಅವರು ಬಿರುಗಾಳಿಯಿಂದ ಚದುರಿಸಲ್ಪಟ್ಟ ಮೋಡಗಳಂತಾಗಿ ಓಡಲು ಆರಂಭಿಸಿದರು. ವರ್ಷಾಕಾಲದ ಮೇಘಗಳಂತೆ ಗಂಭೀರವಾಗಿ ಗುಡುಗುತ್ತಾ ಪ್ರದ್ಯುಮ್ನ ಪುತ್ರನು ಸೈನಿಕರಿಗೆ ಹೀಗೆಂದ,

**ತಿಷ್ಠಧ್ವಮಿತಿ ಚುಕ್ರೋಶ ದಾನವಾನ್ ಯುದ್ಧದುರ್ಮದಾನ್ ।**

ಪಲಾಯನ ಮಾಡಬೇಡಿರಿ ಎಂದು ಕೂಗಿದನು. ಕೆಲವರು ಅನಿರುದ್ಧನಿಂದ ಪ್ರಹರಿಸಲ್ಪಟ್ಟು ಅನೇಕರು ಜೀವಬಿಟ್ಟರು. ಮತ್ತೆ ಕೆಲವರು ಯುದ್ಧದಲ್ಲಿ ಪರಾಙ್ಮುಖರಾಗಿ ಭಯದಿಂದ ಬಾಣನ ಸಮೀಪ ಓಡಿ ಹೋದರು. ರಕ್ತದಿಂದ ತೋಯ್ದು ಹೋಗಿ ನಿಟ್ಟುಸಿರು ಬಿಡುತ್ತಾ ಸುಖವೆಂಬುದೇ ಇಲ್ಲದಾಗಿತ್ತು.

**ನ ಶರ್ಮ ಲೇಭಿರೇ ದೈತ್ಯಾಃ ಭಯವಿಕ್ಲವಚೇತಸಃ ।**

ಭಯಗೊಂಡಿರುವ ಸೈನಿಕರನ್ನು ನೋಡಿ ಒಗ್ಗಟ್ಟಿನಿಂದ ಒಂದೆ ಕಟ್ಟಿನಂತಿದ್ದು ನೀವೆಲ್ಲ ಯುದ್ಧ ಮಾಡಿರಿ. *[ತ್ರಾಸಮುತ್ಸೃಜ್ಯ ಚೈಕಸ್ಥಾಃ ಯುದ್ಧ್ವಂ].* ಆದರೂ ಭಯದಿಂದ ಅಲ್ಲಿಯೇ ನಿಂತಿದ್ದ ಸೈನಿಕರಿಗೆ ಪುನಃ – "ನೀವೆಲ್ಲರೂ ಯುದ್ಧದುರ್ಮದರ ಲೋಕ ಪ್ರಖ್ಯಾತ ಕೀರ್ತಿ ಹೊಂದಿರುವವರಾಗಿರುವಿರಿ. ಆದರೆ ಯುದ್ಧದಿಂದ ಪಲಾಯನ ಮಾಡುತ್ತಿರುವಿರಿ. ನೀಮ್ಮೆಲ್ಲರ ಮುಂದೆ ಆ ಏಕ ವೀರನು ಏನು ಮಾಡಬಲ್ಲನು?" ಎಂದನು. ಅವನ ಮಾತಿಗೆ ಪ್ರತಿಕ್ರಿಯೆಯನ್ನು ತೋರದೆ ನಿಂತಿದ್ದರು.

**ಭವದ್ಭಿಃ ನ ಮೇ ಕಾರ್ಯಂ ಯುದ್ಧ ಸಾಹಾಯ್ಯಮದ್ಯ ವೈ ।**
**ಅಬ್ರವೀತ್ ಧ್ವಂಸತ ಇತ್ಯೇವ ಮತ್ ಸಮೀಪಾಚ್ಚ ನಶ್ಯತ ॥ 20 ॥**

ನೀವೆಲ್ಲರೂ ಇಲ್ಲಿಂದ ತೊಲಗಿ ಹೋಗಿ. ಮಹಾಪರಾಕ್ರಮಿಯಾದ ನನಗೆ ನಿಮ್ಮ ಸಹಾಯ ಬೇಕಿಲ್ಲ. ಸಾಯಿರಿ – ನನಗೆ ಮುಖ ತೋರಿಸಬೇಡಿ ಎಂದು ಗುಡುಗಿದನು.

ನಂತರ ಬೇರೆ ಹತ್ತು ಸಾವಿರ ಮಂದಿಗೆ ಅನಿರುದ್ಧನ ಮೇಲೆ ಯುದ್ಧ ಮಾಡಿರೆಂದು ಆದೇಶಿಸಿದನು.

**ವ್ಯಾದಿದೇಶ ರಣೇ ಶೂರಾನ್ ಅನ್ಯಾನಯುತಶಃ ಪುನಃ ।**
**ಪ್ರಮಾಥಗಣಭೂಯಿಷ್ಠಂ ವ್ಯಾದಿಷ್ಟಂ ತಸ್ಯ ನಿಗ್ರಹೇ ॥ 21 ॥**

ಅವರೆಲ್ಲರೂ ಪ್ರಮಥಗಣದವರಾಗಿದ್ದು ನಾನಾ ಶಸ್ತ್ರಾಸ್ತ್ರಯುಕ್ತರಾಗಿದ್ದರು. ಕೆಲವರು ಮಳೆಗಾಲದ ಮೇಘದಂತೆಯೂ, ಕೆಲವರು ಮತ್ತಗಜಗಳಂತೆ ಘೀಳಿಡುತ್ತಾ ಭೂಮಿಯ ಮೇಲೆ ನಿಂತಿದ್ದರು.

ಆ ದಾನವರ ಸೈನ್ಯವೆಲ್ಲ ಒಂದುಗೂಡಿತು. ನಿಲ್ಲು! ನಿಲ್ಲು! ಎಂದು ಕೂಗುತ್ತಾ ಅನಿರುದ್ಧನ ಮೇಲೆ ಬಿದ್ದರು. ಆದರೆ ಕೃಷ್ಣನ ಮೊಮ್ಮಗನ ಶೌರ್ಯದ ಮುಂದೆ ನಿಲ್ಲಲಾರದೆ ಆಶ್ಚರ್ಯ ಪಟ್ಟರು.

**ತೇಷಾಮೇವ ಚ ಜಗ್ರಾಹ ಪರಿಘಾಂಸ್ತೋಮರಾನಪಿ ।**

ಅನಿರುದ್ಧನು ಶತ್ರುಗಳ ಸಮೀಪವಿರುವ ತೋಮರಾದಿ ಆಯುಧಗಳನ್ನು ಕಸಿದುಕೊಂಡು ಅವರಿಗೆ ಹೊಡೆಯುತ್ತಿದ್ದನು.

**ಭ್ರಾಂತ–ಮುದ್ಭ್ರಾಂತ ಮಾವಿದ್ಧಮಾಪ್ಲುತಂ ವಿಪ್ಲುತಂ ಪ್ಲುತಮ್ ।**
**ಇತ ಪ್ರಕಾರಾನ್ ದ್ವಾತ್ರಿಂಶದ್ ವಿಚರನ್ ಅಭ್ಯದೃಶ್ಯತ ॥ 22 ॥**

ಅನಿರುದ್ಧನು ಭ್ರಾಂತ– ಉದ್ಭ್ರಾಂತ, ಆವಿದ್ಧ ಆಪ್ಲುತ ವಿಪ್ಲುತ ಪ್ಲುತ ಮೊದಲಾದ ವರಸೆಯಲ್ಲಿರುವ ಮುವತ್ತೆರೆಡು ಪ್ರಕಾರಗಳನ್ನು ತೋರಿಸುತ್ತಾ ಕ್ರೀಡೆಯಾಡುತ್ತಲೆ ಏಕಾಂಗಿಯಾಗಿ ಯುದ್ಧ ಮಾಡುತ್ತಿದ್ದನು. ಇವನನ್ನು ನೋಡಿದ ಸೈನಿಕರಿಗೆ – ಸಾವಿರಾರು ಅನಿರುದ್ಧರು ತಮ್ಮೊಂದಿಗೆ ಯುದ್ಧದಲ್ಲಿ ಮಾಡುತ್ತಿರುವರೇನೊ ಎಂದು ಭ್ರಾಂತರಾದರು.

ಸೈನಿಕರೆಲ್ಲ ಅವನ ಮುಂದೆ ನಿಲ್ಲಲಾರದೆ ಪಲಾಯನ ಮಾಡುತ್ತಾ ಒಬ್ಬರ ಮೇಲೊಬ್ಬರು ಬೀಳುತ್ತಾ ಯುದ್ಧ ಪರಾಙ್ಮುಖರಾದರು. ದೇವತೆಗಳ ಯುದ್ಧ ಎಂದೂ ಬೆನ್ನು ತೋರದೆ ಸತ್ತರೆ ಸ್ವರ್ಗ, ಇದ್ದರೆ ಜಯ ಎಂದು ಹೋರಾಡಿದವರಿಗೆ ಅನಿರುದ್ಧನು ಯಮನಂತೆ ಕಂಡನು. ಕೆಲವರು ರಕ್ತವನ್ನು ಕಾರಿದರು.

ತನ್ನ ಸೈನ್ಯದ ಅತಿರಥ–ಮಹಾರಥರು ನಾಶವಾದದ್ದನ್ನು ನೋಡಿ ಪ್ರಜ್ವಲಿಸುವ ಅಗ್ನಿಯಂತೆ ಉರಿದರು.

**ಬಾಣಃ ಕ್ರೋಧಾತ್ ಪ್ರಜ್ವಲತ ಸಮಿದ್ಧೋಽಗ್ನಿರಿವಾಧ್ವರೇ ।**

ನಾರದರು ಅನಿರುದ್ಧನ ಯುದ್ಧ ನೋಡುತ್ತಾ ಸಾಧು ಸಾಧು ಎನ್ನುತ್ತಲೆ ಇದ್ದರು. ಬಾಣಾಸುರನು ಕೋಪದಿಂದ ಉರಿದು ಹೋದನು. ಬಾಣಾಸುರನು ಕುಂಭಾಂಡನಿಂದ ಸಾರಥ್ಯ ಮಾಡುತ್ತಿರುವ ರಥದಲ್ಲಿ ಕುಳಿತು ಖಡ್ಗವನ್ನು ಝುಳಪಿಸುತ್ತಾ ಅನಿರುದ್ಧನ ಕಡೆಗೆ ಧಾವಿಸಿ ಬಂದನು.

ಈ ಸಮಯದಲ್ಲಿ ನಾರದರು ಸಂತೋಷದಿಂದ ನರ್ತನ ಮಾಡುತ್ತಿದ್ದರು.

**ನಾರದೇ ನೃತ್ಯತಿ ಪ್ರೀತೋ ಹ್ಯನಿರುದ್ಧಸ್ಯ ಸಂಯುಗೇ ।**

ಬಾಣಾಸುರನು ತನ್ನ ಸಾವಿರ ಕೈಗಳಲ್ಲಿ ಪಟ್ಟಿಶ, ಕತ್ತಿ, ಗದೆ, ಶೂಲಾಯುಧ, ಕೊಡಲಿ ಇವೆ ಮೊದಲಾದ ಆಯುಧಗಳನ್ನು ಧರಿಸಿ ಸರ್ವಪ್ರಹರಣಾಯುಧನೆ ಬಂದಂತೆ ತೋರುತ್ತಿತ್ತು. ನೂರಾರು ಧ್ವಜಗಳಿಂದ ಶೋಭಿಸುವ ಇಂದ್ರನಂತೆಯೂ ಕಾಣುತ್ತಿದ್ದನು. ಹತ್ತು ಬೆರಳುಗಳಿಗೂ ರಕ್ಷಣೆಗಾಗಿ ಉಡದ ಚರ್ಮದಿಂದ ರಚಿತ 'ಅಂಗುಲಿತ್ರ' ಧರಿಸಿದ್ದನು. *[ಬದ್ಧ ಗೋಧಾಂಗುಲಿತ್ರೈಶ್ಚ]*.

ಕೋಪದಿಂದ ಅವನ ನೇತ್ರಗಳು ಅಗ್ನಿಯನ್ನು ಹೊರಹಾಕುತ್ತಿದ್ದವು. ಸಿಂಹನಾದ ಮಾಡುತ್ತಾ ಭಯಂಕರ ಧನಸ್ಸನ್ನು ಹಿಡಿದು ಠೇಂಕಾರ ಮಾಡುತ್ತಿದ್ದನು. ತಿಷ್ಠ! ತಿಷ್ಠ! ಎಂದು ಅನಿರುದ್ಧನನ್ನು ಕುರಿತು ಕೂಗಿದನು. ನಿರ್ಭಯನಾದ ಪ್ರದ್ಯುಮ್ನನು ತಿರಸ್ಕಾರ ಪೂರ್ವಕ ನಗಾಡಿದನು.

**ತಸ್ಯ ವಾಜೀಸಹಸ್ರಂ ತು ರಥೇ ಯುಕ್ತಂ ಮಹಾತ್ಮನಃ ।**
**ಪುರಾ ದೇವಾಸುರೇ ಯುದ್ಧೇ ಹಿರಣ್ಯಕಶಿಪೋರಿವ ॥ 23 ॥**

ಬಾಣನ ರಥವು ನಾಲ್ಕು ಸಾವಿರ ಮೊಳವಿದ್ದಿತು. ಸಾವಿರ ಕುದುರೆಗಳನ್ನು ಹೂಡಲಾಗಿತ್ತು. ಕೆಂಪುಧ್ವಜ ಪತಾಕೆಗಳು ಹಾರಾಡುತ್ತಿದ್ದವು.

ಋಷ್ಯವೆಂಬ ಜಿಂಕೆಯ ಚರ್ಮವನ್ನು ಅಲಂಕರಿಸಿದ್ದರು. ಹಿರಣ್ಯಕಶಿಪುವಿನ ರಥದಂತೆ ಶೋಭಿಸಿತ್ತು. ಅನಿರುದ್ಧನಾದರು ಕತ್ತಿ-ಗುರಾಣಿ ಹಿಡಿದು ಹಿರಣ್ಯಕಶಿಪುವನ್ನು ಸಂಹರಿಸುವ ನರಸಿಂಹನಂತೆ ಸ್ವಸ್ಥನಾಗಿ ನಿಂತಿದ್ದನು.

**ಆಪತಂತಂ ದದರ್ಶಾಥ ಖಡ್ಗಚರ್ಮಧರಂ ತದಾ ।**
**ಖಡ್ಗ ಚರ್ಮಧರಂ ತಂ ತು ದೃಷ್ಟ್ವಾ ಬಾಣಃ ಪದಾತಿನಮ್ ॥ 24 ॥**

ಖಡ್ಗ ಚರ್ಮಧರಿಸಿ ತನ್ನನ್ನೆದುರಿಸಲು ಬರುತ್ತಿರುವ ಬಾಣನನ್ನು ಅನಿರುದ್ಧನು ನೋಡಿದನು. ಕತ್ತಿ ಚರ್ಮ ಧರಿಸಿ ಯುದ್ಧ ಸನ್ನದ್ಧನಾಗಿ ನಿಂತಿರುವ ಕವಚವನ್ನೂ ಧರಿಸದ ಅನಿರುದ್ಧನನ್ನು ನೋಡಿ ಇವನನ್ನು ಕೊಲ್ಲುವುದೇನು ಕಷ್ಟವೆಂಬಂತೆ ಸಂತೋಷ ಹೊಂದಿದನು. ಬಾಣಾಸುರನು ಅಜೇಯನೆಂದು ತಿಳಿದಿದ್ದರೂ ಅವನೊಂದಿಗೆ ಯುದ್ಧಕ್ಕೆ ಸನ್ನದ್ಧನಾಗಿದ್ದನು. ಅವನನ್ನು ನೋಡಿದ ಬಾಣನು – ಅವನನ್ನು ಹಿಡಿಯಿರಿ, ಕೊಂದು ಹಾಕಿರಿ ಎಂದು ಕೂಗಾಡಿದನು.

**ವಾಚಂ ಚೋವಾಚ ಸಂಕ್ರುದ್ಧೋ ಗೃಹ್ಯತಾಂ ಹನ್ಯತಾಮಿತಿ ।**

ಅನಿರುದ್ಧನಾದರೂ ನಿರ್ಭಯನಾಗಿದ್ದು, ಭಯಸಂತ್ರಸ್ಥಳಾದ ಉಷೆಯನ್ನು ಸಮಾಧಾನಿಸುತ್ತಿದ್ದನು. ಬಾಣಾಸುರನು ಅನಿರುದ್ಧನನ್ನು ಕೊಲ್ಲಲೆಂದು ಕ್ಷುದ್ರಕವೆಂಬ ಚೂಪಾದ ಬಾಣಗಳನ್ನು ಅನಿರುದ್ಧನಿಗೆ ನಾಲ್ಕೂ ದಿಕ್ಕುಗಳಿಂದಲೂ ಪ್ರಯೋಗಿಸಿದನು. *[ಕ್ಷುದ್ರಕಾಣಾಂ ಶರೌಘಾಣಾಂ ಸರ್ವತಃ ಚಿಕ್ಷೇಪ].*

**ಅನಿರುದ್ಧಸ್ತು ಚಿಚ್ಛೇದ ಕಾಂಕ್ಷಂಸ್ತಸ್ಯ ಪರಾಜಯಮ್ ।**
**ಬಾಣೋಽನಿರುದ್ಧಶಿರಸಿ ಕಾಂಕ್ಷಂಸ್ತಸ್ಯ ರಣೇ ವಧಮ್ ॥ 25 ॥**

ಅನಿರುದ್ಧನಿಗೆ ಬಾಣನನ್ನು ಪರಾಜಯಗೊಳಿಸಬೇಕೆಂಬ ಹಂಬಲವಿದ್ದರೆ ಬಾಣಾಸುರನಿಗೆ ಅನಿರುದ್ಧನನ್ನು ಕೊಂದು ಹಾಕುವ ಹಂಬಲವಿತ್ತು. ಅನಿರುದ್ಧನು ಬಾಣಗಳನ್ನು ತನ್ನ ಗುರಾಣಿಯಿಂದಲೇ ತನಗೆ ತಗಲದಂತೆ ತಡೆದು, ಕತ್ತಲೆಯನ್ನು ಪರಿಹರಿಸುತ್ತಾ ಉದಯವಾಗುವ ಬಾಲ ಸೂರ್ಯನಂತೆ ಕಂಡನು.

ಕಾಡಿನಲ್ಲಿರುವ ಮೃಗರಾಜನು ಮತ್ತೇರಿದ ಗಜವನ್ನು ನಿರ್ಭಯವಾಗಿ ಎದುರಿಸುವಂತೆ ಅನಿರುದ್ಧನು ಬಾಣಾಸುರನನ್ನೆದುರಿಸಿ ನಿಂತನು.

**ಸಿಂಹಃ ಪ್ರಮುಖತೋ ದೃಷ್ಟ್ವಾ ಗಜಮೇಕಂ ಯಥಾವನೇ ।**

ಬಾಣಾಸುರನಾದರೋ, ಕ್ರೋಧದಿಂದ ಪ್ರಾದ್ಯುಮ್ನಿಯನ್ನು ಮರ್ಮಭೇದಕ ಬಾಣಗಳಿಂದ ಪ್ರಹರಿಸಿದನು. ಅನಿರುದ್ಧನು ಗಾಯಗೊಂಡು ಕತ್ತಿಹಿಡಿದು ಬಾಣನನ್ನು ಅಕ್ರಮಿಸಲು ನುಗ್ಗಿಬಂದನು. ಪುನಃ ಅನಿರುದ್ಧನನ್ನು ನಿಶಿತ ಶರಗಳಿಂದ ಅನಿರುದ್ಧನನ್ನು ಹೊಡೆದಾಗ ಬಹಳವಾಗಿ ಗಾಯಗೊಂಡನು. ಬಾಣನ ಬಾಣಗಳಿಂದಲೂ ಆಚ್ಛಾದಿತವಾದ ಅನಿರುದ್ಧನ ಅಂಗಾಂಗಗಳೆಲ್ಲವೂ ರಕ್ತಸಿಕ್ತವಾಗಿದ್ದವು. ಆದರೂ ಪ್ರತೀಕಾರ ಮಾಡಲು ನುಗ್ಗಿದ ಪ್ರಾದ್ಯುಮ್ನಿಗೆ ಕತ್ತಿಮುಸಲ – ತೋಮರ – ಶೂಲಾದಿಗಳಿಂದ ಹೊಡೆಯುತ್ತಿದ್ದರೂ ಲೆಕ್ಕಿಸದೆ ಬಾಣಾಸುರನ ರಥಕ್ಕೆ ಹಾರಿ ರಥದ ಈಶಾದಂಡವನ್ನು ಮುರಿದು ಹಾಕಿದನು. ಕತ್ತಿಯಿಂದ ಬಾಣನ ಅಶ್ವಗಳನ್ನು ಗತಪ್ರಾಣಗಳಾಗಿ ಮಾಡಿದನು.

**ಜಘಾನ ಚಾಶ್ವಾನ್ ಖಡ್ಗೇನ ಬಾಣಸ್ಯ ರಣಮೂರ್ಧನಿ ।**
**ತಂ ಪುನಃ ಶರವರ್ಷೇಣ ಪಟ್ಟಿಶೈಃ ತೋಮರೈರಪಿ ।**
**ಚಕಾರಾಂತರ್ಹಿತಂ ಬಾಣೋ ಯುದ್ಧಮಾರ್ಗವಿಶಾರದಃ ॥ 26 ॥**

**ಶಕ್ತಿಂ ಬಾಣಸ್ತತಃ ಕ್ರುದ್ಧೋ ಘೋರರೂಪಾಂ ಭಯಾನಕಾಮ್ ।**
**ಜಗ್ರಾಹ ಜ್ವಲಿತಾಂ ಘೋರಾಂ ಮಹೋಲ್ಕಾಂ ಜ್ವಲಿತಾಮಿವ ॥ 27 ॥**

ಬಾಣನಾದರೂ ಕೋಪದಿಂದ ಘೋರವಾದ ಶಕ್ತ್ಯಾಯುಧವನ್ನೆತ್ತಿಕೊಂಡನು. ಯಮದಂಡೋಪಮವೂ, ಉಲ್ಕೆಯಂತೆ ಪ್ರಜ್ವಲಿಸುತ್ತಿರುವುದೂ ಆಗಿತ್ತು.

ಅಂತಹ ಶಕ್ತ್ಯಾಯುಧವನ್ನು ಅನಿರುದ್ಧನ ಮೇಲೆ ಪ್ರಯೋಗಿಸಿದನು.

**ತಾಮಪತಂತೀಂ ಸಂಪ್ರೇಕ್ಷ್ಯ ಜೀವಿತಾಂತಕರೀಂ ತದಾ ।**
**ಸೋಽಭಿಪ್ಲುತ್ಯ ತದಾ ಶಕ್ತಿಂ ಜಗ್ರಾಹ ಪುರುಷೋತ್ತಮಃ ॥ 28 ॥**

ಜೀವಿತವನ್ನೇ ನಾಶ ಮಾಡಬಲ್ಲ, ತನ್ನನ್ನು ಕೊಲ್ಲಲು ಬರುತ್ತಿರುವ ಪುರುಷಾಧಮನಿಂದ ಪ್ರಯೋಗಿಸಿದ ಶಕ್ತ್ಯಾಯುಧವನ್ನು ಪುರುಷೋತ್ತಮನಾದ ಪುರುಷೋತ್ತಮ ಪೌತ್ರನು ಹಾರಿ ಕೈಯಲ್ಲಿ ಹಿಡಿದನು.

**ನಿರ್ಬಿಭೇದ ತತೋ ಬಾಣಂ ತಯಾ ಶಕ್ತ್ಯಾ ಮಹಾಬಲಃ ।**
**ಸಾ ಭಿತ್ತ್ವಾ ತಸ್ಯ ದೇಹಂ ವೈ ಪ್ರಾವಿಶದ್ ಧರಣೀತಲಮ್ ॥ 29 ॥**

ಅನಿರುದ್ಧನು ಅದೇ ಕೈಯ್ಯಲ್ಲಿ ಹಿಡಿದಿದ್ದ ಶಕ್ತ್ಯಾಯುಧದಿಂದ ಬಾಣನಿಗೇ ಹೊಡೆದ. ಅದು ಅವನ ದೇಹ ಬಲವಾಗಿ ಬಡಿದು ಭೂಮಿಗೆ ಬಿದ್ದು ಕಾಣದಾಯಿತು.

ಶಕ್ತ್ಯಾಯುಧದ ಬಲವಾದ ಹೊಡೆತದಿಂದ ಬಹಳ ಖತಿಗೊಂಡು ಅವನು ರಥದ ಧ್ವಜದಂಡವನ್ನು ಹಿಡಿದು ಕುಳಿತನು.

ಮೂರ್ಛೆ ಹೊಂದುವುದರಲ್ಲಿದ್ದ ಬಾಣನನ್ನುದ್ಧೇಶಿಸಿ ಕುಂಭಾಂಡಕನು, ರಾಜನೇ! ಈ ನಿನ್ನ ಶತ್ರುವನ್ನೇಕೆ ಉಪೇಕ್ಷೆ ಹೊಂದಿರುವೆ. ನಿನ್ನ ಮಾಯಾಯುದ್ಧ ವಿಶಾರದನಾದ ನೀನು ಮಾಯೆಯಿಂದ ಯುದ್ಧ ಮಾಡಿ ಇವನನ್ನು ಸಂಹರಿಸು. ನೀನು ಇವನನ್ನು ಉಪೇಕ್ಷಿಸಿದರೆ ಇವನು ನಮ್ಮ ನೂರಾರು ಭಟರನ್ನು ಯಮಭಟರಿಗೆ ದಾನ ಮಾಡುವನು ಉಷೆಯನ್ನು ಅಪಹರಿಸಬಹುದು.

ಬಾಣನು ಈ ಮಾತಿನಿಂದ ಕೋಪಗೊಂಡು "ನಾನು ಈಗಲೇ ಇವನನ್ನು ಯಮಸದನಕ್ಕೆ ಅಟ್ಟುವೆನು" ಗರುಡಪಕ್ಷಿಯು ಸರ್ಪವನ್ನು ಹಿಡಿದೊಯ್ಯುವಂತೆ ನಾನೀವನನ್ನು ಅಪಹರಿಸುತ್ತೇನೆ ಎಂದು ಹೇಳಿ–

ತನ್ನ ರಥಾಶ್ವ ಸಾರಥಿಗಳ ಸಹಿತ ಗಂಧರ್ವ ನಗರಿಯಂತೆ ಅದೃಶ್ಯನಾದ.

### ಬಾಣನು ನಾಗಾಸ್ತ್ರದಿಂದ ಬಂಧಿಸಿದ್ದು

**ಗಂಧರ್ವ ನಗರಾಕಾರಃ ತತ್ರೈವಾಂತರದೀಯತ ।**
**ಮುಮೋಚ ವಿಶಿಖಾನ್ ತೀಕ್ಷ್ಣಾನ್ ಛನ್ನೋ ಮಾಯಾಧರೋ ಬಲೀ ॥ 30॥**
**ಪ್ರಾದ್ಯುಮ್ನಿಃ ವಿಶಿಖೈರ್ಬದ್ಧಃ ಸರ್ಪಭೂತೈಃ ಸಮಂತತಃ ॥ 31 ॥**

ಹೀಗೆ ಅದೃಶ್ಯನಾದ ಬಾಣನು ಯಾರಿಗೂ ಕಾಣದೆಯೆ ಅನಿರುದ್ಧನ ಮೇಲೆ ಬಾಣಗಳ ಸುರಿಮಳೆ ಸುರಿದ. ಮಾಯಾ ಯುದ್ಧವನ್ನು ಅವಲಂಬಿಸಿದ್ದಾನೆಂದು ತಿಳಿದ ಅನಿರುದ್ಧನು ದಶದಿಕ್ಕುಗಳಲ್ಲಿಯೂ ಕಣ್ಣು ಹಾಯಿಸಿದನು. ತಾಮಸೀ ವಿದ್ಯೆಯನ್ನುಪಯೋಗಿಸಿ ಸರ್ಪಾತ್ಮಕ ಬಾಣಗಳನ್ನು ಮಳೆಯಂತೆ ಎಲ್ಲಾ ದಿಕ್ಕುಗಳಿಂದಲೂ ಹೊಡೆಯಲ್ಪಟ್ಟ ಅನಿರುದ್ಧನ ದೇಹವು ಸರ್ಪಗಳಿಂದ ಬಂಧಿಸಲ್ಪಟ್ಟಿತು. *[ಪನ್ನಗರಾಶಿಭಿಃ ವೇಷ್ಟಿತಸರ್ವಾಂಗಃ]*

ಸರ್ಪಗಳಿಂದ ಬಂಧಿತನಾದ ಆ ಸರ್ಪಶಯನನ ಮೊಮ್ಮಗನು ಮೈನಾಕವಂತೆ ನಿರ್ಭಯನಾಗಿ ಅಚಲವಾಗಿದ್ದನು. ಮುಖದಿಂದ ವಿಷದ ಜ್ವಾಲೆಗಳನ್ನಗುಳುತ್ತಿದ್ದ ಸರ್ಪಗಳಿಂದ ವೇಷ್ಟಿತನಾಗಿದ್ದು, ಅದರಿಂದ ಬಿಡಿಸಿಕೊಳ್ಳುವ ಪ್ರಯತ್ನ ಮಾಡಲು ಅಶಕ್ತನಾಗಿದ್ದನು. ಆದರೂ ವ್ಯಥೆಯಿಲ್ಲದವನಾಗಿದ್ದನು.

ಈ ಸಮಯದಲ್ಲಿ ಕೋಪಾವಿಷ್ಟನಾಗಿದ್ದ ಬಾಣಾಸುರನು ಕಠೋರವಾದ ಮಾತನ್ನು ಅಸಹನೆಯಿಂದ ಹೇಳಿದನು.

**ಕುಂಭಾಂಡ ವಧ್ಯತಾಂ ಶೀಘ್ರಮಯಂ ವೈ ಕುಲಪಾಂಸನಃ ।**
**ಚಾರಿತ್ರ್ಯಂ ಯೇನ ಮೇ ಲೋಕೇ ದೂಷಿತಂ ದೂಷಿತಾತ್ಮನಾ ॥ 32 ॥**

ಕುಂಭಾಂಡಕನೇ! ನಮ್ಮ ಕುಲವನ್ನು ಚಾರಿತ್ರ್ಯವನ್ನು ಹಾಳು ಮಾಡಿದ ಈ ಕುಲಘಾತಿಯನ್ನು ಈಗಲೇ ಕೊಂದು ಹಾಕು ಎಂದನು.

ಕುಂಭಾಂಡಕನು! ರಾಜನೇ, ನಾನು ಹೇಳುವ ಈ ಮಾತನ್ನು ಆಲಿಸಿರಿ, ಕೊಂದು ಹಾಕುವುದೆ ಪ್ರಧಾನವಲ್ಲ. ಇಂದ್ರನ ಪರಾಕ್ರಮ ಸದೃಶನಾದ ಈ ವೀರ ಯಾರು? ಯಾವುದಕ್ಕಾಗಿ ಇಲ್ಲಿಗೆ ಬಂದಿರುತ್ತಾನೆ. ಎಲ್ಲಿಂದ ಬಂದವನು? ಇವನು ಇಲ್ಲಿಗೆ ಹೇಗೆ ಬಂದ, ಈ ವಿಷಯಗಳನ್ನು ಮೊದಲು ತಿಳಿಯೋಣ.

**ಕ್ರೀಡನ್ನಿವ ಚ ಯುದ್ಧೇಷು ದೃಶ್ಯತೇ ದೇವಸೂನುವತ್ ।**
**ಮಯಾಯಂ ಬಹುಶೋ ರಾಜನ್ ದೃಷ್ಟೋ ಯುಧ್ಯನ್ ಮಹಾರಣೇ ॥ 33 ॥**

ರಾಜನೇ! ನಾನು ರಣರಂಗದಲ್ಲಿ ಯುದ್ಧದ ಸಮಯದಲ್ಲಿ ಹಲವಾರು ಬಾರಿ ಇವನನ್ನೆ ದಿಟ್ಟಿಸಿ ನೋಡಿದ್ದೇನೆ. ಯುದ್ಧರಂಗದಲ್ಲಿಯೂ ಸಹ ಯಾವುದೇ ಭಯವಿಲ್ಲದೆ ದೇವಕುಮಾರನಂತೆ 'ಆಟವೊ' ಎಂಬಂತೆ ಯುದ್ಧ

ಮಾಡುವುದನ್ನು ನೋಡಿದರೆ ಇವನಾರೊ ದೇವತಾಂಶ ಸಂಭೂತನೆ ಇರಬಹುದು. ಮಹಾಬಲಸಂಪನ್ನನೂ, ಧೈರ್ಯಶಾಲಿಯೂ, ಶಸ್ತ್ರಾಸ್ತ್ರ ಪ್ರವೀಣನೂ ಆಗಿರುವ ಇವನಿಗೆ ಮರಣಶಿಕ್ಷೆ ನೀಡಬಾರದು.

**ನಾಯಂ ವಧಕೃತಂ ದೋಷಮರ್ಹತೇ ದೈತ್ಯಸತ್ತಮ ।**
**ಗಾಂಧರ್ವೇಣ ವಿವಾಹೇನ ಕನ್ಯೇಯಂ ತವ ಸಂಗತಾ ॥ 34 ॥**

ಇದಲ್ಲದೆ ದೈತ್ಯವರ್ಯನೇ! ನಿನ್ನ ಮಗಳು ಇವನನ್ನು ಗಾಂಧರ್ವ ವಿಧಿಯಿಂದ ವಿವಾಹವಾಗಿದ್ದಾಳೆ. ಹೀಗಾಗಿ ಬೇರೆಯವರಿಗೆ ವಿವಾಹ ಮಾಡಿಕೊಡ-ಲಾಗುವುದಿಲ್ಲ. ಬೇರೆಯವರು ಇವಳನ್ನು ಸ್ವೀಕರಿಸುವುದೂ ಇಲ್ಲ. ಇದೆಲ್ಲ ವಿಷಯವನ್ನು ವಿಚಾರ ಮಾಡಿ ನಂತರ ವಧಿಸಲು ಯೋಗ್ಯನಾದಲ್ಲಿ ವಧಿಸೋಣ. ನನ್ನನ್ನು ಕೇಳುವುದಾದರೆ ಇವನನ್ನು ಕೊಂದರೆ ಮಹಾದೋಷ ಪ್ರಾಪ್ತವಾಗುತ್ತದೆ. ರಕ್ಷಿಸಿದರೆ ಮಹಾಗುಣ ಪ್ರಾಪ್ತವಾಗುತ್ತದೆ.

ರಾಜನೇ! ನೀನೆ ನೋಡುತ್ತಿರುವೆ ಸರ್ಪಗಳಿಂದ ಬಂಧಿಸಲ್ಪಟ್ಟರೂ ವ್ಯಥೆಯಿಲ್ಲದೆ ಇರುವನು. ನಮ್ಮ ಸೈನ್ಯಬಲ, ಐಶ್ವರ್ಯಾದಿಗಳನ್ನು ಲೆಕ್ಕಿಸುತ್ತಿಲ್ಲ. ಇವನನ್ನು ಬಂಧಿಸದಿದ್ದರೆ ಇವನು ದಾನವರೊಂದಿಗೆ ಮಾತ್ರವಲ್ಲ ದೇವತೆಗಳ ಮೇಲೂ ಯುದ್ಧ ಮಾಡಬಲ್ಲ ಮಹಾಶೌರ್ಯವಂತ.

ವೀರ್ಯ ಪರಾಕ್ರಮಗಳಲ್ಲಿ ನಿನ್ನನ್ನೂ ಮೀರಿರುವನು. ಇವನು ಅಸಾಧಾರಣ ಪರಾಕ್ರಮವಂತನೆ ಆಗಿರಬೇಕು. ಹೀಗಿಲ್ಲವಾದರೆ ಸಹಸ್ರಬಾಹುವಾದ ನಿನ್ನನ್ನು ದ್ವಿಬಾಹು ಯಾವ ರಾಜನು ಯುದ್ಧಕ್ಕೆ ನಿಂತಾನು.

**ಉಚಿತಂ ಯದಿ ತೇ ರಾಜನ್ ಜ್ಞೇಯೋ ವೀರ್ಯಬಲಾನ್ವಿತಃ ।**
**ಕನ್ಯಾಚೇಯಂ ನ ಬಾನ್ಯಸ್ಯ ನ ನಿರ್ಯಾತ್ಯೇತೇನ ಸಂಗತಾ ॥ 35 ॥**

ವೀರ್ಯಬಲಾದಿಗಳಿಂದ ಯುಕ್ತನಾದ ಈ ವೀರನು ಯಾರೆಂದು ತಿಳಿದುಕೋ. ಒಂದು ವೇಳೆ ಮಹಾನುಭಾವರ ವಂಶದಲ್ಲಿ ಜನಿಸಿದ್ದರೆ ನಮಗೆ ಇವನು ಪ್ರಿಯತಮನೆ ಆಗುತ್ತಾನೆ. ನಿನ್ನ ಮಗಳಾದರೂ ಇವನೊಂದಿಗೆ ಉಪಭುಕ್ತಳಾಗಿರುವಾಗ ಪುನಃ ವಿವಾಹ ಮಾಡುವಂತೆಯೂ ಇಲ್ಲ. ಇದೆಲ್ಲ ಕಾರಣದಿಂದ ನೀನು ಅವನನ್ನು ಕೊಲ್ಲಬಾರದು. ಇವನನ್ನು ರಕ್ಷಿಸು ಎಂದನು.

ಬಾಣಾಸುರನು ಕುಂಭಾಂಡಕನ ಯುಕ್ತಿ ಯುಕ್ತ ಮಾತನ್ನಾದರಿಸಿ ಹಾಗೆ ಆಗಲಿ ಎಂದನು. ಅನಿರುದ್ಧನನ್ನು ಅಂಗ ದಳದವರಿಗೆ ನೀಡಿ ಅರಮನೆಗೆ ಹೊರಟು ಹೋದನು.

## ನಾರದರಿಂದ ಶ್ರೀಕೃಷ್ಣನಿಗೆ ಬಂಧಿತ ವಿಷಯ ಪ್ರಸ್ತಾವ

**ಋಷೀಣಾಂ ನಾರದಃ ಶ್ರೇಷೋऽವ್ರಜದ್ ದ್ವಾರವತೀಂ ಪ್ರತಿ ।**

ಮಹಾಬಲಿಷ್ಠನಾದ ಅನಿರುದ್ಧನು ಬಾಣನ ಮಾಯೆಯಿಂದ ಬಂಧಿಸಲ್ಪಟ್ಟದ್ದನ್ನು ತಿಳಿದ ನಾರದರು ಅಕಾಶಮಾರ್ಗವಾಗಿ ದ್ವಾರಕೆಯನ್ನು ತಲುಪಿದರು.

ಇತ್ತ ನಾರದರು ದ್ವಾರಕೆಗೆ ಹೋದ ಕೂಡಲೆ ಅನಿರುದ್ಧನು ಹೀಗೆ ವಿಚಾರಿಸಿದನು. ಈಗ ಮಾಯವಾಗಿರುವ ಬಾಣನು ಪುನಃ ಪುನಃ ಯುದ್ಧಕ್ಕಾಗಿ ಬರಬಹುದು. ನಾರದರು ಶ್ರೀಕೃಷ್ಣನ ಮುಂದೆ ಈ ಎಲ್ಲಾ ವಿಚಾರಗಳನ್ನೂ ಯಥಾರ್ಥವಾಗಿ ತಿಳಿಸುವರು ಎಂದು ಆಲೋಚಿಸುತ್ತಿರುವಾಗಲೇ ಉಷೆಯು ತನ್ನ ಪ್ರಿಯತಮನು ನಾಗಪಾಶಗಳಿಂದ ಬಂಧಿಸಲ್ಪಟ್ಟಿರುವುದನ್ನು ನೋಡಿ, ಕಣ್ಣೀರು ಸುರಿಸುತ್ತಾ ಅಳಲಾರಂಭಿಸಿದಳು. ಅನಿರುದ್ಧನು ಅವಳನ್ನೂ ಸಮಾಧಾನ ಮಾಡಿದನು.

**ಕಿಮಿದಂ ರುದ್ಯತೇ ಭೀರು! ಮಾ ಭೈಸ್ತ್ವಂ ಮೃಗಲೋಚನೇ ।**
**ಪಶ್ಯ ಸುಶ್ರೋಣಿ ಸಂಪ್ರಾಪ್ತಂ ಮತ್ಕೃತೇ ಮಧುಸೂದನಮ್ ॥ 36 ॥**

ಭೀರುವೆ! ಏಕೆ ಸುಮ್ಮನೆ ಅಳುತ್ತಿರುವೆ ಭಯಪಡಬೇಡ! ಬಂಧಿತನಾಗಿರುವ ನನ್ನ ವಿಷಯವನ್ನು ನಾರದರಿಂದ ಕೇಳಿದ ಕೂಡಲೇ ಶ್ರೀಕೃಷ್ಣನು ನನ್ನನ್ನು ಬಂಧನದಿಂದ ಬಿಡುಗಡೆ ಮಾಡಲೆಂದು ಇಲ್ಲಿಗೆ ಬರುವನು.

**ಯಸ್ಯ ಶಂಖಧ್ವನಿಂ ಶ್ರುತ್ವಾ ಬಾಹುಶಬ್ದಂ ಬಲಸ್ಯ ಚ ।**
**ದಾನವಾ ನಾಶಮೇಷ್ಯಂತಿ ಗರ್ಭಾಶ್ಚಾಸುರಯೋಷಿತಾಮ್ ॥ 37 ॥**

ಮೃಗಲೋಚನೆ! ಯಾವ ಶ್ರೀಕೃಷ್ಣನ ಶಂಖಧ್ವನಿಯನ್ನು, ಭುಜಗಳ ಶಬ್ಧವನ್ನೂ ಅವನ ಪರಾಕ್ರಮವನ್ನೂ ಕೇಳಿದ ಮಾತ್ರಕ್ಕೆ ದೇವಾರಿನಾರಿಯರ ಗರ್ಭಸ್ರಾವವಾಗುವುದೋ, ದಾನವರೆಲ್ಲರೂ ನಾಶ ಹೊಂದುವರೋ ಅಂತಹ ಶ್ರೀಕೃಷ್ಣ ನನ್ನ ತಾತನಾಗಿರುವನು.

ವೈಶಂಪಾಯನರು – ರಾಜನ್! ಅನಿರುದ್ಧನು ಹೀಗೆ ಸಮಾಧಾನ ಪಡಿಸುತ್ತಿರಲು ಅವನ ಮೇಲೆ ವಿಶ್ವಾಸ ಹೊಂದಿದಳು. ಆದರೂ ತನ್ನ ತಂದೆಯ ಕ್ರೂರತನಕ್ಕೆ ಬೆದರಿದಳು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಅನಿರುದ್ಧ ಬಂಧನ ಎಂಬಲ್ಲಿ
ನೂರಹತ್ತೊಂಬತ್ತನೆಯ ಅಧ್ಯಾಯ ಸಮಾಪ್ತಿ

# ಅಥ ವಿಂಶತ್ಯಧಿಕಶತತಮೋಽಧ್ಯಾಯಃ

## ಆರ್ಯಾಸ್ತುತಿ – ಬಂಧವಿಮೋಚನೆ

*ವೈಶಂಪಾಯನ ಉವಾಚ –*

**ಯದಾ ಬಾಣಪುರೇ ವೀರಃ ಸೋಽನಿರುದ್ಧಃ ಸಹೋಷಯಾ ।**

**ಸನ್ನಿರುದ್ಧೋ ನರೇಂದ್ರೇಣ ಬಾಣೇನ ಬಲಿಸೂನುನಾ ॥ 1 ॥**

**ತದಾ ದೇವೀಂ ಕೋಟವತೀಂ ರಕ್ಷಾರ್ಥಂ ಶರಣಂಗತಃ ।**

ವೈಶಂಪಾಯನರು – ಜನಮೇಜಯನಿಗೆ – ರಾಜನೇ! ಬಲಿಪುತ್ರನಾದ ಬಾಣನು ಉಷೆಯನ್ನು ಹಾಗೂ ಅನಿರುದ್ಧನನ್ನೂ ನಾಗಾಸ್ತ್ರದಿಂದ ಬಂಧಿಸಿ ಸೆರೆಯಲ್ಲಿಟ್ಟನು. ಅನಿರುದ್ಧನಾದರೂ ತನ್ನ ಬಂಧವಿಮುಕ್ತಿಗಾಗಿ ಕೋಟವತೀಯೆಂಬ ಕೋಟಿ ರಕ್ಷಕಳಾದ ದುರ್ಗಾದೇವಿಯನ್ನು ಸ್ತೋತ್ರ ಮಾಡಿದನು. ಆ ಸ್ತೋತ್ರವನ್ನು ಕೇಳು.

**ಅನಂತಮಕ್ಷಯಂ ದಿವ್ಯಮಾದಿದೇವಂ ಸನಾತನಮ್ ।**

**ನಾರಾಯಣಂ ನಮಸ್ಕೃತ್ಯ ಪ್ರವರಂ ಜಗತಾಂ ಪ್ರಭುಮ್ ॥ 2 ॥**

**ಮಹೇಂದ್ರ ವಿಷ್ಣುಭಗಿನೀಂ ನಮಸ್ಯಾಮಿ ಹಿತಾಯ ವೈ ।**

**ಗೌತಮೀಂ ಕಂಸಭಯದಾಂ ಯಶೋದಾನಂದವರ್ಧಿನೀಮ್ ॥ 3 ॥**

**ಮೇಧ್ಯಾಂ ಗೋಕುಲ ಸಂಭೂತಾಂ ನಂದಗೋಪಸ್ಯ ನಂದಿನೀಮ್ ॥4 ॥**

ಅನಂತನಾಮಕನೂ, ಅಕ್ಷಯನೂ ಬ್ರಹ್ಮಾದಿದೇವನೂ ಸನಾತನನೂ ಆದ

ಜಗನ್ನಾಥ ನಾರಾಯಣನನ್ನು ನಮಸ್ಕರಿಸಿ, ಇಂದ್ರೋಪೇಂದ್ರರ ಭಗಿನಿಯೂ ಕಂಸನಿಗೂ ಭಯಪ್ರದಳಾದವಳೂ, ಯಶೋದಾನಂದ ವೃದ್ಧಿಕಾರಣಿಯೂ ಜ್ಞಾನಿಶ್ರೇಷ್ಠಳೂ ಪವಿತ್ರಳೂ ಗೋಕುಲದಲ್ಲಿ ಆವಿರ್ಭವಿಸಿದವಳೂ ಆದ ನಂದಗೋಪನ ಪುತ್ರಿ ದುರ್ಗೆಯನ್ನು ಹಿತಕ್ಕಾಗಿ ವಂದಿಸುವೆ.

ಪ್ರಜ್ಞಾವಂತಳೂ, ಸರ್ವಸಮರ್ಥಳೂ, ಮಂಗಳಳೂ, ಸೌಮ್ಯಳೂ, ದಾನವಾಂತಕಳೂ, ಸರ್ವಶರೀರದಲ್ಲಿರುವವಳೂ, ಸಮಸ್ತಪ್ರಾಣಿವಂದಿತಳೂ ಆದ ದುರ್ಗೆಯನ್ನು ನಮಿಸುವೆನು.

ನೋಡಲು ಯೋಗ್ಯಳೂ, ಸಕಲಾಭೀಷ್ಟದಾತೆಯೂ, ಮಾಯಾದೇವಿಯೂ, ಸೂರ್ಯಚಂದ್ರಾಗ್ನಿ ಕಾಂತಿವುಳ್ಳವಳೂ, ಸಕಲಜನನಿಯೂ, ಶತ್ರು-ಮೋಹಿನಿಯೂ ಶತ್ರುಶೋಷಕಳೂ, ದೇವ-ಋಷಿ-ಮಾನವರಿಂದಲೂ ಪೂಜ್ಯಳೂ, ಶಾಂತಿಯೂ ಧ್ರುವಳೂ ತಾಯಿಯೂ, ಸಮಸ್ತಾಭೀಷ್ಟ-ದಾಯಕವೂ ಶತ್ರು ಭಯಂಕರಿಯೂ, ಭಕ್ತ ಭಯಭಂಜನಿಯೂ, ಕಾಳದೇವಿಗೆ ಕಾತ್ಯಾಯನೀಯೂ ಆದ ದುರ್ಗೆಗೆ ನಮಸ್ಕಾರಗಳು.

ಶತ್ರುಗಳಿಗೆ ಕಾಲರಾತ್ರಿ ಸ್ವರೂಪಳೂ, ಸೇಚ್ಛಾ ಸಂಚಾರಿಣಿಯೂ, ತ್ರಿನೇತ್ರಳೂ ಪರಬ್ರಹ್ಮನಲ್ಲಿಯೆ ಮನಸ್ಸುಳ್ಳುವಳೂ, ವಿದ್ಯುದಭಿಮಾನಿಯೂ, ಮೇಘದಂತೆ ಗಂಭೀರಧ್ವನಿವುಳ್ಳವಳೂ ವಿಶಾಲಮುಖಿಯನ್ನು ನಮಿಸುವೆ.

ತ್ರಿರ್ಯಕ್ ಪ್ರಾಣಿಗಳಿಗೆ ನಿಯಾಮಕಳೂ, ಕೋಟರಾ ರೇವತೀ ಶಕುನಿ ಮೊದಲಾದ ಬಾಲಗ್ರಹಗಳಿಗೂ ನಿಯಾಮಕಳೂ, ಪಂಚಮೀ, ಷಷ್ಠೀ, ಹುಣ್ಣಿಮೆ ಚತುರ್ದಶಿಗಳಿಗೆ ಅಭಿಮಾನಿಯೂ,

ಇಪ್ಪತ್ತೇಳು ಅಶ್ವಿನ್ಯಾದಿ ನಕ್ಷತ್ರಗಳಿಗಭಿಮಾನಿಯೂ, ಗಂಗಾದಿ ನದಿಗಳ ಮೂಲ ಸ್ರೋತಸ್ಸೂ, ನಗರ, ಉದ್ಯಾನ, ಉಪವನದೇವತೆಯೂ, ಪ್ರಾಸಾದಗಳಿಗೆ ಅಧಿದೇವತೆಯಾದವಳೂ.

ಹ್ರೀಂ ಬೀಜಯುಕ್ತಳೂ, ಶ್ರೀ ಸ್ವರೂಪಿಣಿಯೂ, ಗಂಗಾ, ಗಂಧರ್ವ, ಯೋಗಿನಿಯರಿಗೆ ಸಿದ್ಧಿ ನೀಡುವವಳೂ, ಕೀರ್ತಿ, ಆಶಾ, ದಿಶಾ ಸರಸ್ವತೀ ರೂಪಳೋ ವೇದಗಳಿಗೆ ಮುಖ್ಯಾಭಿಮಾನಿಯೂ, ವೇದಮಾತೆಯಾದ ಗಾಯತ್ರೀ ನಾಮಕಳೂ, ಭಗವಂತನ ಚಿಂತನೆಯಲ್ಲಿರುವವಳೂ, ಸುಖಕ್ಕೆ

ನಿರ್ಯಾಯಕಳೂ, ಅದ್ವಿತೀಯಳೂ, ಅನನೇನಿಸಿದ ವಾಯುವಿಗೆ ಮಾತೃವೂ, ಅನಾದಿ ನಿತ್ಯಳೂ,

ಭಕ್ತರ ಕುಟೀರವಾಸಿನಿಯೂ, ತಾಮಸರಿಗೆ ಮೋಹಕಳೂ (ಮದಿರಾಂ) ದೈತ್ಯರ ಮೇಲೆ ಕ್ರುದ್ಧಳೂ, ಭೂ ಸ್ವರೂಪಳೂ, ಮಲಯಪರ್ವತವಾಸಿನಿಯೂ, ಪ್ರಾಣಿಗಳಿಗೆ ಆಶ್ರಯಳೂ, ಶತ್ರುಭಯಂಕರಿಯೂ, ಬಾಲಗ್ರಹನಿಯಾಮಕಳೂ ಕೆಂಪು ಪುಷ್ಪಪ್ರಿಯಳೂ, ಶತ್ರುಗಳಲ್ಲಿ ನಿರ್ದಯಳೂ, ಕದಂಬವನವಾಸಿನಿಯೂ, ವಿಂಧ್ಯ-ಕೈಲಾಸಾದಿ ಪರ್ವತವಾಸಿನಿಯೂ, ಸಿಂಹರಥವಾಹಿನಿಯೂ, ಬಹುರೂಪಧಾರಿಣಿಯೂ, ವೃಷಭಧ್ವಜಳೂ ಆದ ವರಾಂಗನೆಯನ್ನು ನಮಿಸುವೆ.

ದುಷ್ಪ್ರಾಪ್ಯಳೂ, ದುರ್ಜಯಳೂ, ಕೋಟೆಯಂತೆ ರಕ್ಷಕಳೂ, ಶುಂಭ-ನಿಶುಂಬರಿಗೆ ಭಯಂಕರಳು, ದೇವವರ್ಗ ಪ್ರಿಯೆಯೂ, ಮಹಾದೇವತೆಯೂ, ಇಂದ್ರದೇವನ ತಂಗಿಯೂ ಮಂಗಳದಾಯಿನೀಯೂ ಆದ

ಕಿರಾತರಿಂದ ಪೂಜ್ಯಳು, ಪೀತಾಂಬರಧಾರಿಣಿಯೂ, ಚೋರ ಗುಂಪಿನಿಂದಲೂ ಪೂಜಿಸಲ್ಪಡುವವಳೂ ಆಜ್ಯ-ಸೋಮರಸ ಪಾನವಳೂ, ಸೌಮ್ಯಳೂ,

ನಿಶುಂಬ-ಶುಂಭರನ್ನು ನಾಶ ಮಾಡಿದ, ಜಗತ್ತನ್ನು ಪೋಷಿಸುವ ಪರ್ವತ ಸ್ತನಗಳುಳ್ಳವಳೂ, ಸೇನಾ ತಯಾರಿಗೆ ಮೂಲ ಕಾರಣಳೂ, ಸಿದ್ಧ-ಚಾರಣ ಸೇವಿತಳೂ, ಕುತ್ಸಿತ ಮಾರನಾದ ಸೂತ್ರನಾಮಕನ ಉತ್ಪತ್ತಿ ಕಾರಣಳೂ [ಜಯಾ ನಾಮಕಳೂ] ಅಳಗಿರಿ ಪರ್ವತವಾಸಿಯೂ, ಪಾರ್ವತಿಗೂ ನಿಯಾಮಕಳೂ,

ದೇವತಾಗಣ ಪತ್ನಿಯರಾದ ಐವತ್ತು ಕನ್ಯೆಯರು, ಕದ್ರೂದೇವಿಯ ಸಾವಿರಾರು ಸರ್ಪಗಳು, ಅವರ ಮಕ್ಕಳು ಮೊಮ್ಮಕ್ಕಳು, ಪತ್ನಿಯರು, ಮಾತಾಪಿತೃಗಳು, ಸ್ವರ್ಗದೇವತಾ ಗಣ, ಯಕ್ಷಗಂಧರ್ವ ಸ್ತ್ರೀಯರು, ವಿದ್ಯಾಧರ, ಅಪ್ಸರಾಗಣ ಋಷಿಪತ್ನಿ, ಮಾನವ ಪತ್ನಿಯರಲ್ಲಿ ವಿಶೇಷ ಸನ್ನಿಧಾನವನ್ನಿಟ್ಟವಳು.

ಕಿನ್ನರರು ನಿನ್ನ ಸೇವೆಯಲ್ಲಿರುವರು.

ವೇದಾದಿಗಳಲ್ಲಿ ನಿನ್ನನ್ನು ವರ್ಣಿಸಿದಂತೆ ನೀನಿರುವೆ. ಅಚಿಂತ್ಯಳೂ ಅಪ್ರಮೆಯಳೂ ಅಗಿರುವ ನಿನ್ನನ್ನು ಸ್ತುತಿ ಮಾಡುವೆ.

## ಫಲಸ್ತುತಿ

**ತ್ವತ್ ಪ್ರಸಾದಾದ್ ಅವಿಘ್ನೇನ ಕ್ಷಿಪ್ತಂ ಮುಚ್ಯೇತಬಂಧನಾತ್ ।**
**ಸರ್ವೇಷಾಮೇವ ಬಂಧಾನಾಂ ಮೋಕ್ಷಣಂ ಕರ್ತುಮರ್ಹಸಿ ॥ 5 ॥**

ನಿನ್ನ ಅನುಗ್ರಹದಿಂದ ಕೂಡಲೇ ಬಂಧನದಿಂದ ಮುಕ್ತನಾಗುವನು. ನೀನು ನನ್ನ ಈ ಎಲ್ಲ ಸರ್ಪಬಂಧನವನ್ನು ತೊಲಗಿಸು. ನಿನ್ನ ಈ ನಾಮಗಳಿಂದ ಕೀರ್ತಿಸಿದರೆ ಬ್ರಹ್ಮಾದಿಗಳು, ದಿಗ್ದೇವತೆಗಳು, ನದ್ಯಾದಿಗಳು, ನಾಗ ಪಕ್ಷ, ಸರ್ಪ ಮೊದಲಾದ ಸಕಲ ಚರಾಚರಗಳೆ ಪ್ರೀತವಾಗುತ್ತವೆ.

ಈ ಸ್ತೋತ್ರದಿಂದ ಶ್ರದ್ಧಾಭಕ್ತಿಯಿಂದ ಸ್ತುತಿಸುವವರಿಗೆ ಏಳನೇ ಮಾಸದಲ್ಲಿಯೇ ಫಲ ಲಭಿಸುವುದು ಸಂಶಯವಿಲ್ಲ.

ಹದಿನೆಂಟು ಭುಜಗಳೂ, ದಿವ್ಯಾಭರಣಗಳಿಂದ ಅಲಂಕೃತಳೂ, ರತ್ನಖಚಿತ ಮುಕುಟ ಧಾರಿಣಿಯೂ ಹಾರಯುಕ್ತಳೂ ಆದ ಕಾತ್ಯಾಯನಿಯೇ, ಯಾರು ಈ ಸ್ತುತಿಯಿಂದ ಸ್ತುತಿಸುವರೊ ಅವರಿಗೆ ಇಷ್ಟಾರ್ಥ ನೀಡುವವಳಾಗು.

ತಾಯಿಯೇ ಇದೊ ನಿನಗೆ ನಮಸ್ಕರಿಸುವೆ. ಪ್ರಸನ್ನಳಾಗು ಶ್ರೇಷ್ಠವಾದ ಆಯುಸ್ಸನ್ನು ನೀಡು ಈ ಬಂಧನದಿಂದ ನನ್ನನ್ನು ಮುಕ್ತನನ್ನಾಗಿಸು.

ವೈಶಂಪಾಯನರು - ರಾಜನೇ! ಅನಿರುದ್ಧನು ಆರ್ಯಾಸ್ತುತಿಯಿಂದ ಬ್ರಹ್ಮಾದಿಗಳಿಗೂ ಆರ್ಯಳಾದ ದುರ್ಗೆಯನ್ನು ಸ್ತುತಿಸುತ್ತಿರುವಾಗ ದುರ್ಗಾದೇವಿಯು ಸೆರಮನೆಯಲ್ಲಿಯೇ ಆವಿರ್ಭೂತಳಾದಳು. ಅವನನ್ನು ಬಂಧನದಿಂದ ಬಿಡಿಸಿದಳು. ದೇವಿಯನ್ನು ಯಥೋಚಿತವಾಗಿ ಗೌರವಿಸಿದನು.

ಹೀಗೆ ನಾಗಪಾಶಗಳಿಂದ ಬಂಧಿತನಾದ ಅನಿರುದ್ಧನನ್ನು ವಜ್ರಸದೃಶ ನಾಗಪಾಶದ ಪಂಜರವನ್ನು ಕೈಯಿಂದ ಹೊಡೆದು ಮುಕ್ತವನ್ನಾಗಿಸಿದಳು.

ದೇವಿಯು - ಅನಿರುದ್ಧನೇ! ಬಂಧನದಿಂದ ಮಾತ್ರ ನಾನು ಬಿಡುಗಡೆ ಮಾಡಿರುವೆ. ಸದ್ಯದಲ್ಲಿಯೇ ಶ್ರೀಕೃಷ್ಣನು ಬಂದು ನಿನ್ನನ್ನು ಪೂರ್ಣವಾಗಿ ಬಿಡಿಸುವನು. ಅಲ್ಲಿಯವರೆಗೂ ಸಹನೆ ಇರಲಿ. ಶ್ರೀಕೃಷ್ಣನು ಬಾಣನ ಸಹಸ್ರಬಾಹುಗಳಲ್ಲಿ ಎರಡನ್ನುಳಿಸಿ ಉಳಿದೆಲ್ಲವನ್ನೂ ಕತ್ತರಿಸಿ, ನಿನ್ನನ್ನು ದ್ವಾರಕೆಗೆ ಕರೆದೊಯ್ಯುವನು.

ದೇವಿಯ ಈ ಮಾತಿನಿಂದ ಸಂತುಷ್ಟನಾಗಿ ಇನ್ನೂ ವಿಶೇಷವಾಗಿ ಸ್ತುತಿಸಿದನು.

ವೈಶಂಪಾಯನರು ಜನಮೇಜಯನಿಗೆ,

**ಆರ್ಯಾಸ್ತವಮಿದಂ ಪುಣ್ಯಂ ಯ ಪಠೇತ್ ಸುಸಮಾಹಿತಃ ।**
**ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ।**
**ಬಂಧನಸ್ಥೋಂ ವಿಮುಚ್ಯೇತ ಸತ್ಯಂ ವ್ಯಾಸವಚೋ ಯಥಾ ॥ 6 ॥**

ಆರ್ಯಾಗೀತಿಯನ್ನು ಯಾರು ಭಕ್ತ್ಯಾದರಗಳಿಂದ ಸ್ತುತಿಸುವರೋ ಅವರು ಸರ್ವಪಾಪವಿನಿರ್ಮುಕ್ತರಾಗಿ, ಬಂಧನಗಳನ್ನೆಲ್ಲ ಬಿಡಿಸಿಕೊಂಡು ವಿಷ್ಣುಜ್ಞಾನ ಪಡೆದು ಮುಕ್ತರಾಗುವರು. ಇದು ವ್ಯಾಸರ ಸತ್ಯವಚನ.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ**
**ಆರ್ಯಾಸ್ತವ ಅನಿರುದ್ಧ ಕೃತ ಎಂಬಲ್ಲಿ**
**ನೂರಇಪ್ಪತ್ತನೆಯ ಅಧ್ಯಾಯ ಸಮಾಪ್ತಿ**

# ಅಥ ಏಕವಿಂಶತ್ಯಧಿಕಶತತಮೋಽಧ್ಯಾಯಃ

## ದ್ವಾರಾವತಿಯಲ್ಲಿ ಅನಿರುದ್ಧ ಕಾಣದೆ ದುಃಖ

*ವೈಶಂಪಾಯನ ಉವಾಚ –*

**ತತೋಽನಿರುದ್ಧಸ್ಯ ಗೃಹೆ ರುರುದುಃ ಸರ್ವಯೋಷಿತಃ ।**
**ಪ್ರಿಯಂ ನಾಥಮಪಶ್ಯಂತ್ಯಃ ಕುರರ್ಯ ಇವ ಸಂಘಶಃ ॥ 1 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! ಚಿತ್ರಲೇಖೆಯು ತನ್ನ ತಾಮಸೀ ವಿದ್ಯೆಯಿಂದ ಅನಿರುದ್ಧನನ್ನು ಅಪಹರಿಸಿಕೊಂಡು ಹೋದಾಗ ಅನಿರುದ್ಧನ ಗೃಹದಲ್ಲಿದ್ದ ಸಮಸ್ತ ಸುಂದರಿಯರೂ ತಮ್ಮ ಪ್ರಿಯನನ್ನು ಕಾಣದೆ ಕುರರೀ ಪಕ್ಷಿಗಳಂತೆ ಗುಂಪಾಗಿ ಅಳತೊಡಗಿದರು.

**ಅಹೋ ಧಿಕ್ ಕಿಮಿದಂ ನಾಥನಾಥೇ ಕೃಷ್ಣೇ ವ್ಯವಸ್ಥಿತೇ ।**
**ಅನಾಥಾ ಇವ ಸಂತ್ರಸ್ತಾಃ ರುದಿಮೋ ಭಯಪೀಡಿತಾಃ ॥ 2 ॥**

ನಮಗೆಲ್ಲ ಧಿಕ್ಕಾರ, ಸಮಸ್ತ ಜಗತ್ತಿನ ನಾಥನಾದ ಜಗನ್ನಾಥನಿರಲು ನಾವು ಭಯಪೀಡಿತರಾಗಿ ನಾಥರೆ ಇಲ್ಲದಂತೆ ರೋದಿಸುತ್ತಿರುವೆವು.

ಯಾವ ಶ್ರೀಕೃಷ್ಣನ ಭುಜದಂಡವನ್ನವಲಂಬಿಸಿ ಅಖಂಡ ಆಖಂಡಲಾದಿ ದ್ವಾದಶಾದಿತ್ಯರು, ಮರುತ್ತುಗಳೂ ಸ್ವರ್ಗದಲ್ಲಿ ಸುಖವಾಗಿರುವರೋ, ಇಂತಹ ಭಯಕೃದ್ ಭಯನಾಶನ ನಮ್ಮ ಬಳಿಯಲ್ಲಿಯೇ ಇರುವಾಗಲೇ ನಮ್ಮೆಲ್ಲರಿಗೂ ಭಯವೇರ್ಪಟ್ಟಿರುವುದು ಶೋಚನೀಯ.

**ತಸ್ಯಾನಿರುದ್ಧಃ ಪೌತ್ರಸ್ತು ವೀರಃ ಕೇನಾಪಿ ನೋ ಹೃತಃ ।**

ಶ್ರೀಕೃಷ್ಣನ ಮೊಮ್ಮಗನಾದ ವೀರ ಪ್ರತಾಪಿ ಅನಿರುದ್ಧನನ್ನು ಯಾರೋ ಅಪಹರಿಸಿಕೊಂಡು ಹೋಗಿರುವರು.

**ಅಹೋ ನಾಸ್ತಿ ಭಯಂ ನೂನಂ ತಸ್ಯ ಲೋಕೆ ಸುದುರ್ಮತೇಃ ।**
**ವಾಸುದೇವಸ್ಯ ಯಃ ಕ್ರೋಧಮುತ್ಪಾದಯತಿ ದುಸ್ಸಹಮ್ ॥ 3 ॥**

ಅನಿರುದ್ಧನನ್ನು ಅಪಹರಿಸಿ ಶ್ರೀಕೃಷ್ಣನಿಗೆ ಕ್ರೋಧವುಂಟು ಮಾಡುತ್ತಿರುವ ಆ ದುರ್ಮತಿಗೆ ಭಯವೆ ಇಲ್ಲವೆಂದು ತೋರುತ್ತದೆ.

ಯುದ್ಧದಲ್ಲಿ ವಾಸುದೇವನನ್ನು ಎದುರಿಸುವುದೆಂದರೆ ಬಾಯ್ತೆರೆದು ಕೊಂಡಿರುವ ಮೃತ್ಯುದೇವತೆಯ ಕೋರೆ ಹಲ್ಲುಗಳ ಮೇಲೆ ನಿಂತಂತೆಯೇ. ಇಂತಹ ಅಪ್ರಿಯ ಮಾಡಿ ಸಾಕ್ಷಾತ್ ಇಂದ್ರನೆ ಆದರೂ ಜೀವಸಹಿತ ಇರಲು ಸಾಧ್ಯವೆ?

**ವ್ಯಾದಿತಾಸ್ಯಸ್ಯ ಯೋ ಮೃತ್ಯೋಃ ದಂಷ್ಟ್ರಾಗ್ರೇ ಪರಿವರ್ತತೆ ।**
**ಕಥಂ ಜೀವನ್ ವಿಮುಚ್ಯೇತ ಸಾಕ್ಷಾದಪಿ ಶಚೀಪತಿಃ ॥ 4 ॥**

ಅಯ್ಯೋ ವಿಧಿಯೇ! ಇಂತಹ ಜಗನ್ನಾಥನು ಇರುವಾಗಲೂ ನಮ್ಮ ನಾಥನನ್ನು ಅಪಹರಿಸಿ ನಮ್ಮೆಲ್ಲರನ್ನೂ ಅನಾಥರನ್ನಾಗಿ ಮಾಡಲ್ಪಟ್ಟೆವು. ನಾವೆಲ್ಲರೂ ಪತಿಯಿಲ್ಲದೆ ನರಕಾಧಿಪತಿಯ ಅತಿಥಿಗಳಾದೆವು.

ಜನಮೇಜಯನೇ! ಅನಿರುದ್ಧನ ಪತ್ನಿಯರೆಲ್ಲ ಹೀಗೆ ಗೋಳಾಡುತ್ತಾ ಕಣ್ಣೀರನ್ನು ಸುರಿಸಿದರು. ಇವರ ಸುಂದರ ಮುಖಕಮಲಗಳು ವರ್ಷಾಕಾಲದಲ್ಲಿ ನೀರಿನಿಂದ ತೊಯ್ದ ಕಮಲದಂತಿದ್ದವು. ನೇತ್ರಗಳು ರಕ್ತದಲ್ಲಿ ಅದ್ದಿದಂತೆ ಕೆಂಪಾಗಿದ್ದವು *[ರುಧಿರೇಣಾ ಪ್ಲುತಾನೀವ]*.

ಈ ನಾರಿಯರ ರೋದನ ಶಬ್ಧವು ಎಲ್ಲೆಡೆ ವ್ಯಾಪಿಸಿದ್ದು ಯಾವುದೊ ಘೋರ ಆಪತ್ತು ಬಂದಿರಬಹುದೆಂದು ಯಾದವರೆಲ್ಲರೂ ತಮ್ಮ ಗೃಹಗಳಿಂದ ಸಿಂಹಗಳು ಗುಹೆಗಳಿಂದ ಹೊರಬರುವಂತೆ ಹೊರಬಂದರು. *[ಸಿಂಹಾಃ ಗುಹಾಭ್ಯ ಇವ]*.

**ಗೃಹೇ ಕೃಷ್ಣಾಭಿಗುಪ್ತಾನಾಂ ಕುತೋ ನಃ ಭಯಮಾಗತಮ್ ॥ 5 ॥**

ಕೃಷ್ಣನಿಂದ ಅಭಿರಕ್ಷಿತ ಭವನಗಳಲ್ಲಿ ಭಯವೆಲ್ಲಿಂದ ಬಂತು? ಹೀಗೆ ಯದುವೀರರು ಮಾತನಾಡುತ್ತಿದ್ದರು.

**ಸನ್ನಾಹಭೇರೀ ಕೃಷ್ಣಸ್ಯ ಆಹತಾ ಮಹತೀ ತದಾ ।**

ಯುದ್ಧಕ್ಕೆ ಸಿದ್ಧರಾಗಬೇಕೆಂಬ ನಗಾರಿಯು ಹೊಡೆಯಲ್ಪಡುತ್ತಿತ್ತು. ಈ ಶಬ್ಧದಿಂದ ಯಾದವರೆಲ್ಲರೂ ಒಂದೆಡೆ ಸೇರಿದರು.

ಇದೇನಿದು? ಎಂದು ಕೇಳದವರಿಗೆ ಅನಿರುದ್ಧನನ್ನು ಅಪಹರಿಸಿದ ಸಂಗತಿಯನ್ನು ಕೆಲವರು ತಿಳಿಸಿದರು. ಇದನ್ನು ಕೇಳಿ ಕೋಪದಿಂದ ಉರಿದರು. ಕೃಷ್ಣನ ಅಭಿಪ್ರಾಯವೇನೆಂದು ತಿಳಿಯಲು ನಿಟ್ಟುಸಿರು ಬಿಡುತ್ತಾ ನಿಂತಿದ್ದರು.

ಸಕಲ ಯಾದವರೂ ಆಗಮಿಸಿ ಸುಮ್ಮನೆ ನಿಂತಿರುವಾಗ ವಿಪೃಥುಯೆಂಬ ಯಾದವ ವೀರನು ಶ್ರೀಕೃಷ್ಣನಿಗೆ ಹೀಗೆಂದನು.

**ಕಿಮಿದಂ ಚಿಂತಯಾವಿಷ್ಟಃ ಪುರುಷೇಂದ್ರ ಭವಾನಿಹ ।**
**ತವ ಬಾಹುಬಲಪ್ರಾಣಾಃ ಸ್ವಾಸ್ಥಿತಾಃ ಸರ್ವಯಾದವಾಃ ॥ 6 ॥**

ಶ್ರೀಕೃಷ್ಣನೇ! ಸಮಸ್ತ ಯಾದವರೂ ನಿನ್ನ ಭುಜಬಲತಾವನ್ನು ಆಶ್ರಯಿಸಿ ನಿಂತಿರುವರು. ನೀನೆ ಚಿಂತಾಮಗ್ನನಾದರೆ ಮಾಡುವುದೇನು? ಈ ನಿನ್ನ ಅವಸ್ಥೆ ನೋಡಿ ಅಧೀರರಾದ ನಮ್ಮ ಬಾಂಧವರೆಲ್ಲರೂ ದುಃಖಾರ್ತರಾಗಿ ಸಂತಪ್ತರಾಗಿದ್ದಾರೆ.

ಹೀಗೆ ದುಃಖ ಸಾಗರದಲ್ಲಿ ಮುಳುಗಿರುವ ನಿನ್ನ ಬಂಧುಗಳನ್ನು ನೀನೆ ಉದ್ಧರಿಸಬೇಕು. ಚಿಂತಾಕ್ರಾಂತನಾಗಿ ಈ ಮೌನದಿಂದಿರುವ, ನಿನ್ನ ಭಾವವೇನು? ನಿನ್ನಂತಹವನು ಚಿಂತಿಸುವುದು ಯೋಗ್ಯವಲ್ಲ ಎಂದಾಗ ಶ್ರೀಕೃಷ್ಣನೆಂದನು.

**ವಿಪೃಥೋ ಚಿಂತಯಾವಿಷ್ಟೋ ಹ್ಯೇತತ್ ಕಾರ್ಯಮಚಿಂತಯಮ್ ।**
**ವಿಚಿಂತಯಂಸ್ತ್ವಹಂ ಚಾಸ್ಯ ಕಾರ್ಯಸ್ಯ ನ ಲಭೇ ಗತಿಮ್ ॥ 7 ॥**

ವಿಪೃಥುವೆ! ನಾನು ಈ ಕಾರ್ಯದ ವಿಷಯದಲ್ಲಿ ಚಿಂತಾಮಗ್ನನಾಗಿದ್ದೆನು. ಆದರೆ ನಾನೆಷ್ಟೆ ಆಲೋಚಿಸಿದರೂ ಪರಿಹಾರ ಮಾರ್ಗವು ಹೊಳೆಯುತ್ತಿಲ್ಲ. ನನ್ನ ಚಿಂತೆಯ ಅಭಿಪ್ರಾಯ ಹೀಗಿದೆ.

**ಅನಿರುದ್ಧೇ ಹೃತೇ ವೀರೇ ಪೃಥಿವ್ಯಾಂ ಸರ್ವಪಾರ್ಥಿವಾಃ ।**
**ಅಶಕ್ತಾ ಇತಿ ಮನ್ಯಂತೇ ಸರ್ವಾನಸ್ಮಾನ್ ಸಬಾಂಧವಾನ್ ॥ 8 ॥**

ನಾವೆಲ್ಲರೂ ಇರುವಾಗಲೇ ಅನಿರುದ್ಧನ ಅಪಹರಣವಾಗಿದೆಯಾಗಿ

ಭೂಮಂಡಲದ ರಾಜರೆಲ್ಲರೂ ಬಂಧು ಸಹಿತ ಸರ್ವ ಯಾದವರೂ ದುರ್ಬಲರೆಂದು ಭಾವಿಸುತ್ತಾರೆ.

ಈ ಹಿಂದೆ ನಮ್ಮ ರಾಜ ಆಹುಕನನ್ನು ಶಾಲ್ವರಾಜ ಅಪಹರಿಸಿದ್ದಾಗ ನಾವು ಉಗ್ರವಾಗಿ ಹೋರಾಡಿ ಅವನನ್ನು ಬಿಡಿಸಿಕೊಂಡು ಬಂದೆವು.

**ಪ್ರದ್ಯುಮ್ನಶ್ಚಾಪಿ ನೋ ಬಾಲಃ ಶಂಬರೇಣ ಹೃತೋ ಹ್ಯಭೂತ್ ।**

ಪ್ರದ್ಯುಮ್ನನೂ ಮಗುವಾಗಿರುವಾಗಲೇ ಶಂಬರಾಸುರನು ಅಪಹರಿಸಿದನು. ಯೌವನ ಹೊಂದಿದ ಅವನು ಶಂಬರನನ್ನು ಕೊಂದು ನಮ್ಮಲ್ಲಿಗೆ ಬಂದು ಸೇರಿದನು.

**ಇದಂ ತು ಸುಮಹತ್ ಕಷ್ಟಂ ಪ್ರಾದ್ಯುಮ್ನಿಃ ಕ್ವ ಪ್ರವಾಸಿತಃ ।**
**ಭಸ್ಮನಾ ಗುಂಠಿತಃ ಪಾದೋ ಯೇನ ಮೇ ಮೂರ್ಧ್ನಿ ಪಾತಿತಃ ।**
**ತಸ್ಯಾಹಂ ಸಾನುಬಂಧಸ್ಯ ಹರಿಷ್ಯೇ ಜೀವಿತಂ ರಣೇ ॥ 9 ॥**

ಈ ಎರಡು ಘಟನೆಗಳಿಗಿಂತಲೂ ಈಗಿನ ಘಟನೆ ಬಹಳ ಕಷ್ಟವನ್ನುಂಟು ಮಾಡಿದೆ. ಅನಿರುದ್ಧನು ಎಲ್ಲಿಗೆ ಹೋದ? ಯಾರು ಅವನನ್ನು ಅಪಹರಿಸಿದರು? ಎಲ್ಲಿಗೆ ಅಪಹರಿಸಿ ಹೋದರು. ಇದಾವುದು ತಿಳಿಯದಾಗಿದೆ. ಈ ರೀತಿಯಲ್ಲಿ ಅನಿರುದ್ಧನನ್ನು ಅಪಹರಿಸಿ, ಬೂದಿ ತುಳಿದ ಕಾಲನ್ನು ನನ್ನ ಶಿರಸ್ಸಿನ ಮೇಲಿಟ್ಟ ಆ ಪಾಪಿಯನ್ನು ಬಿಡಲಾರೆ.

ಸಾತ್ಯಕಿಯು ಶ್ರೀಕೃಷ್ಣನನ್ನು ಕುರಿತು – ಅನಿರುದ್ಧನ ಜಾಡನ್ನು ತಿಳಿಯಲು ಗೂಢಚಾರರನ್ನು ನಿಯಮಿಸಬಹುದಲ್ಲವೆ? ಎಂದಾಗ ಕೃಷ್ಣನು ರಾಜನಾದ ಉಗ್ರಸೇನನಿಗೆ 'ರಾಜನೇ! ಬಹಿರಂಗವಾಗಿ ಅಂತರಂಗವಾಗಿ ಕಾರ್ಯ ಮಾಡುವ ದಕ್ಷಚಾರರನ್ನು ಅನಿರುದ್ಧನನ್ನು ಹುಡುಕುವುದಕ್ಕೆ ಕಳುಹಿಸಿಕೊಡು' ಎಂದನು.

ಕೇಶವನ ಮಾತಿನಂತೆ ರಾಜನು ಕೂಡಲೇ ಗೂಢಚಾರರನ್ನು ನಿಯಮಿಸಿದನು. ಗುಪ್ತದಳದವರೇ! ನೀವು ಹೊರಗೆ ಸಾಮಾನ್ಯರಂತೆಯೂ ಒಳಗೆ ಅಂತರ್ಮುಖಿಗಳಾಗಿರುತ್ತಾ ರೈವತಕಗಿರಿ, ಋಕ್ಷವಂತ, ಪ್ರತಿ ಉದ್ಯಾನ–ಗಳಲ್ಲಿಯೂ ಅನಿರುದ್ಧನನ್ನು ಹುಡುಕಿರಿ ಎಂದಾಜ್ಞಾಪಿಸಿದನು.

ಉಗ್ರಸೇನ ಮಹಾರಾಜನ ಸೇನಾಪತಿಯು ಕೃಷ್ಣನಿಗೆ

**ಶೃಣು ಕೃಷ್ಣ ವಚೋ ಮಹ್ಯಂ ರೋಚತೇ ಯದಿ ತೇ ಪ್ರಭೋ ।**

ಶ್ರೀಕೃಷ್ಣನೇ! ನಾನು ಹೇಳುವ ಮಾತು ನಿನಗೆ ಇಷ್ಟವಾದರೆ ಕೇಳುವವನಾಗು.

**ಅಸಿಲೋಮಾ ಪುಲೋಮಾ ಚ ನಿಸುಂದನರಕೌ ಹತೌ ।**
**ಸೌಭಃ ಶಾಲ್ವಶ್ಚ ನಿಹತೌ ಮೈಂದೋ ವಿವಿದ ಏವ ಚ ॥ 10 ॥**
**ಪಾರಿಜಾತಸ್ಯ ಹರಣೇ ಯತ್ ಕೃತಂ ಕರ್ಮ ದುಷ್ಕರಮ್ ॥ 11 ॥**

ವಾಸುದೇವನೇ! ನೀನು ಅಸಿಲೋಮ ಪ್ರಲೋಮ ದೈತ್ಯರನ್ನೂ, ಸುಂದ-ನಿಸುಂದರನ್ನೂ, ಸೌಭವಿಮಾನಾಧಿಪತಿ ಶಾಲ್ವನನ್ನೂ, ಮೈಂದ - ವಿವಿದರನ್ನೂ ಮಹಾದೈತ್ಯನಾದ ಹಯಗ್ರೀವಾಸುರನನ್ನು ಸಂಹರಿಸಿರುವೆ. ಈ ಕಾರ್ಯಗಳನ್ನು ಸಹಾಯಕರನ್ನು ಪಡೆಯದೆ ನೀನೊಬ್ಬನೆ ಮಾಡಿರುವೆ. ನೀನು ಮಾಡಿದ ಪಾರಿಜಾತಾಪಹರಣ ಕಾರ್ಯವಾದರೂ ಇತರ ಕಾರ್ಯ-ಗಳಗಿಂತಲೂ ಮಹಾಕಾರ್ಯವಾಗಿದೆ.

ಐರಾವತದ ಮೇಲೆ ಕುಳಿತು ಠೀವಿಯಿಂದ ಇದ್ದ ಶಕ್ರನನ್ನು ನಿನ್ನ ಬಾಹುವೀರ್ಯದಿಂದಲೇ ಪರಾಜಯಗೊಳಿಸಿದೆ. ಇದರಿಂದಾಗಿ ನಿನ್ನ ಮೇಲೆ ವೈರದಿಂದಾಗಿ ಅವನೇಕೆ ಅನಿರುದ್ಧನನ್ನು ಅಪಹರಿಸಿರಬಹುದು ಎಂದು ಸೇನಪತಿಯ ಮಾತನ್ನು ಕೇಳಿ ಅನಾಧೃಷ್ಟಿಗೆ ಹೀಗೆಂದನು.

**ಸೇನಾನೀಸ್ತಾತಃ ಮಾ ಮೈವಂ, ನ ದೇವಾಃ ಕ್ಷುದ್ರಕರ್ಮಿಣಃ ।**
**ನಾಕೃತಜ್ಞಾ ನ ಚ ಕ್ಲೀಬಾ ನಾವಲಿಪ್ತಾ ನ ಬಾಲಿಶಾಃ ॥ 12 ॥**

ಸೇನಾಪತಿಯೇ! ನಿನ್ನ ಮಾತು ಸರಿಯಿಲ್ಲ. ದೇವತೆಗಳು ಇಂತಹ ನೀಚ ಕರ್ಮ ಮಾಡುವುದಿಲ್ಲ. ದೇವತೆಗಳು ಕೃತಘ್ನರಲ್ಲ. ಹಾಗೆಂದು ನಪುಂಸಕರೂ ಅಲ್ಲ. ಹೇಡಿಗಳೂ ಅಲ್ಲ.

ನಾನು ಯಾವಾಗಲೂ ದೇವತಾಹಿತ ಚಿಂತನೆಯಲ್ಲಿರುವವನು. ಅವರಲ್ಲಿ ವಿಶೇಷ ಪ್ರೇಮವನ್ನು ಇಟ್ಟಿರುವೆ. ಅವರಿಗೆ ಪ್ರಿಯವುಂಟು ಮಾಡುವುದೆ ನನ್ನ ಕಾರ್ಯವಾಗಿರುವಾಗ ನನ್ನಲ್ಲಿ ಈ ವಿಷಯ ವ್ಯವಹಾರ ಮಾಡಲಾರರು.

ದೇವತೆಗಳು ಕ್ಷದ್ಧರಲ್ಲ. ಭಕ್ತರಲ್ಲಿ ಸದಾ ದಯೆ ತೋರುವವರು. ಅವರು ಈ ಕೃತಘ್ನತಾ ಕಾರ್ಯ ಮಾಡಲು ಉದ್ಯುಕ್ತರಾಗಲಾರರು. ನೀನು ಅವರ ಸರಿಯಾದ ಜ್ಞಾನವಿಲ್ಲದೆ ಈ ರೀತಿ ಬಾಲಿಶನಂತೆ ಮಾತನಾಡುತ್ತಿರುವೆ.

**ಕದಾಚಿದಿಹ ಪುಂಶ್ಚಲ್ಯಾ ಅನಿರುದ್ಧೋ ಹೃತೋ ಭವೇತ್ ।**

ಯಾರೋ ಒಬ್ಬ ಪರಪುರುಷರನ್ನೆ ಅರಸುವ ಹಾದರಗಿತ್ತಿಯು ಅವನ ಸೌಂದರ್ಯಕ್ಕೆ ಮರುಳಾಗಿ ಅಪಹರಿಸಿರಬೇಕಷ್ಟೆ. ಇಂದ್ರಸಹಿತ ದೇವತೆಗಳು ಇಂತಹ ಕುಕರ್ಮ ಮಾಡಲಾರರು.

ಜನಮೇಜಯನೇ! ಹೀಗೆ ಅಚಿಂತ್ಯಾದ್ಭುತ ಶಕ್ತಿವುಳ್ಳ ಶ್ರೀಕೃಷ್ಣನು ಸೇನಾಪತಿಗೆ ಹೇಳಿ ಪುನಃ ಚಿಂತಿಸುತ್ತಿರುವಾಗ ಅಕ್ರೂರನು ಹೀಗೆಂದನು.

**ಕೃಷ್ಣಸ್ಯ ವಚನಂ ಶ್ರುತ್ವಾ ತತೋಽಕ್ರೂರೋಽಬ್ರವೀದ್ ವಚಃ ।**
**ಯಚ್ಛಕ್ರಸ್ಯ ಪ್ರಭೋ ಕಾರ್ಯಂ ತದಸ್ಮಾಕಂ ವಿನಿಶ್ಚಿತಮ್ ॥ 13 ॥**
**ಅಸ್ಮಾಕಂ ಚಾಪಿ ಯತ್ ಕಾರ್ಯಂ ತದ್ಧಿ ಕಾರ್ಯಂ ಶಚೀಪತೇಃ ।**

ಶ್ರೀಕೃಷ್ಣನ ಮಧುರವೂ ಅರ್ಥಗರ್ಭಿತವೂ ಆದ ಮಾತನ್ನು ಕೇಳಿ, ಅಕ್ರೂರನು ಪ್ರೀತಿಯುಕ್ತ ಹಾಗೂ ಮಧುರಯುಕ್ತ ಮಾತನ್ನು ಹೇಳಲುಪಕ್ರಮಿಸಿದನು.

ಪ್ರಭೋ! ನಾವೆಲ್ಲರೂ ಇಂದ್ರನಿಗೆ ಯಾವ ಕಾರ್ಯವಾಗಬೇಕಾಗಿರುವುದೋ ಅದನ್ನು ನಮ್ಮ ಕಾರ್ಯವೆಂದೆ ನಾವು ಮಾಡಿಕೊಡುತ್ತಿರುವೆವು. ಅಂದ ಮೇಲೆ, ನಮ್ಮ ಕಾರ್ಯವನ್ನೂ ಅವನ ಕಾರ್ಯವೆಂದು ತಿಳಿದು ನಮ್ಮ ಅನಿರುದ್ಧನನ್ನು ಎಲ್ಲಿದ್ದರೂ ತಂದು ನಮಗೆ ನೀಡುವುದು ಅವನ ಕಾರ್ಯವಾಗಿದೆ.

ದೇವತೆಗಳು ನಮ್ಮನ್ನು ರಕ್ಷಿಸಬೇಕು. ನಾವೂ ದೇವತೆಗಳನ್ನು ಹೋಮಾದಿಗಳಿಂದ ಸಂತೋಷಪಡಿಸಬಹುದು. ನಾವೆಲ್ಲರೂ ದೇವತಾ ಕಾರ್ಯಕ್ಕಾಗಿಯೇ ಮಾನವರಾಗಿ ಅವತರಿಸಿರುವೆವಾದ್ದರಿಂದ ಈ ಪರಸ್ಪರಾವಲಂಬನೆ ಅವಶ್ಯವಾಗಿದೆ ಎಂದನು.

ಶ್ರೀಕೃಷ್ಣನು ಅಕ್ರೂರನಿಗೆ - ಅಕ್ರೂರನೇ! ಪ್ರದ್ಯುಮ್ನ ಪುತ್ರನನ್ನು ದೇವತೆಯಾಗಲಿ, ಗಂಧರ್ವ-ಯಕ್ಷ- ರಾಕ್ಷಸರಾಗಲಿ ಅಪಹರಿಸಿರುವುದಿಲ್ಲ. ದೈತ್ಯ-ದಾನವರಲ್ಲಿ ಕೆಲವು ಪರಪುರುಷರನ್ನು ಕಾಮಿಸುವ ಹಾದರಗಿತ್ತಿಯರಿರುವರು. ಅವರಲ್ಲಿಯೆ ಯಾರೋ ಒಬ್ಬ ಪುಂಶ್ಚಲೀ ಅಪಹರಿಸಿರಬೇಕಷ್ಟೆ.

ಹೀಗೆ ಯದುಕುಲದ್ಯೋತನು ಏನು ನಡೆದಿರಬಹುದೆಂದು ಹೇಳಿದ ಕೂಡಲೇ ಯದುಮಂಡಲದಲ್ಲಿ ಶ್ರೀಕೃಷ್ಣನನ್ನು ಪ್ರಶಂಸಿಸುವ ಹರ್ಷೋದ್ಗಾರ ಗಗನ ಮಂಡಲ ಮುಟ್ಟಿತು. [**ಉದತಿಷ್ಠತ್ ಮಹಾನಾದಃ**].

## ಗೂಢಚಾರರ ಗೂಢಚರ್ಯೆ ವಿಫಲ

**ತೇ ಚಾರಾಃ ಸರ್ವತಃ ಸರ್ವೇ ಸಭಾದ್ವಾರ ಮುಪಾಗತಾಃ ।**
**ಶನೈಃ ಗದ್ಗದಯಾ ವಾಚಾ ಇದಂ ವಚನಮಬ್ರುವನ್ ॥ 14 ॥**

**ಉದ್ಯಾನಾನಿ ಗುಹಾಃ ಶೈಲಾಃ ಸಭಾಃ ನದ್ಯಃ ಸರಾಂಸಿ ಚ ।**
**ಏಕೈಕಂ ಶತಶೋ ರಾಜನ್ ಮಾರ್ಗಿತಂ ನ ಚ ದೃಶ್ಯತೇ ॥ 15 ॥**

ಈ ಮಧ್ಯದಲ್ಲಿ ಅನಿರುದ್ಧನನ್ನು ಹುಡುಕಲು ಹೋಗಿದ್ದ ಉಗ್ರಸೇನನಿಂದ ನಿಯಮಿತರಾಗಿದ್ದ ಗೂಢಭಟರು ಸಭಾದ್ವಾರಕ್ಕೆ ಬಂದು ಹೀಗೆಂದರು.

ರಾಜನ್! ನಾವೆಲ್ಲರೂ ಅನಿರುದ್ಧನಿಗಾಗಿ ಉದ್ಯಾನಗಳು, ಗಿರಿಗಹ್ವರಗಳು, ಪರ್ವತಗಳು, ಧರ್ಮಸತ್ರಗಳು, ನದೀತೀರಗಳು ಸರೋವರ ದಂಡೆಗಳು ಮೊದಲಾದ ಸ್ಥಳಗಳಲ್ಲಿ ನೂರಾರು ಬಾರಿ ಸುತ್ತಾಡಿ ಹುಡುಕಿದೆವು. ಆದರೆ ಅವನು ನಮಗೆ ದೊರೆಯಲಿಲ್ಲ ಎಂದರು,.

ಶ್ರೀಕೃಷ್ಣನು ಕಳುಹಿಸಿದ್ದ ಮತ್ತೊಂದು ಗೂಢಚಾರರು ಪ್ರಭುವೆ! ಭೂಮಂಡಲದಲ್ಲಿರುವ ಸಮಸ್ತ ಪ್ರದೇಶಗಳೆಲ್ಲವೂ ನಮಗೆ ಚಿರಪರಿಚಿತವಾಗಿವೆ. ಅಲ್ಲೆಲ್ಲ ನಾವು ಹೋಗಿ ಅನಿರುದ್ಧನಿಗಾಗಿ ಶೋಧಿಸಿದೆವು. ಆದರೆ ಆ ಪ್ರಾದ್ಯುಮ್ನಿ ಕಾಣಿಸಲೇ ಇಲ್ಲ. ಬೇರೆ ಯಾವುದಾದರೂ ಆದೇಶ ನೀಡಿದರೆ ಅದನ್ನು ಪಾಲಿಸುವೆವು ಎಂದರು.

ಜನಮೇಜಯನೇ! ಅನಿರುದ್ಧನು ಸಿಗದೆ ಇದ್ದದ್ದರಿಂದ ಸರ್ವ ಯಾದವರೂ ದೀನರಾದರು. ಕಂಬನಿ ಸುರಿಸಿದರು. ಕೆಲವರಂತು ಕ್ರೋಧದಿಂದ ತುಟಿಕಚ್ಚಿ ಅಪಹೃತನ ಮೇಲೆ ಸೇಡಿ ತೀರಿಸಿಕೊಂಡರು. ಮತ್ತೆ ಕೆಲವರು ಅನಿರುದ್ಧನು ಸಿಗುವ ಮಾರ್ಗವಾದರೂ ಯಾವುದು ಎಂದು ಪರಸ್ಪರ ಮಾತನಾಡಿ-ಕೊಳ್ಳುತ್ತಿದ್ದರು. ಕೆಲವರು ಶ್ರೀಕೃಷ್ಣ ಹೇಳಿದಂತೆ ಗಣಿಕೆಯೊಬ್ಬಳಿಗೆ ಅವನನ್ನು ಅಪಹರಿಸಿಕೊಂಡು ಹೋಗಲು ಸಾಧ್ಯವಾಯಿತೇ? ಅವಳಾದರೂ ಅವನನ್ನು ಎಲ್ಲಿಗೆ ಕರೆದೊಯ್ದಿರಬಹುದು? ನಮ್ಮ ಚಾಣಾಕ್ಷರಾದ ಗೂಢಚಾರರಿಗೂ ತಿಳಿಯದ ಆ ಪ್ರದೇಶ ಯಾವುದಿರಬಹುದು ಎಂದು ವಿಚಾರಿಸುತ್ತಾ ರಾತ್ರಿಯನ್ನು ಕಳೆದರು.

**ತತಃ ಪ್ರಭಾತೇ ವಿಮಲೇ ಪ್ರಾದುರ್ಭೂತೇ ದಿವಾಕರೇ ।**
**ಪ್ರವಿವೇಶ ಸಭಾಮೇಕೋ ನಾರದಃ ಪ್ರಹಸನ್ನಿವ ॥ 16 ॥**
**ತತಃ ಸ ಜಯಶಬ್ದೇನ ಮಾಧವಂ ಪ್ರತ್ಯಪೂಜಯತ್ ।**

ಅನಂತರ ಸೂರ್ಯೋದಯವಾಗಿ ತನ್ನ ಸುವರ್ಣ ಕಿರಣಗಳನ್ನು ಎಲ್ಲೆಡೆ ಹರಡಿ ಬೆಳಗಾಗಿದ್ದನ್ನು ತಿಳಿಸಿದ. ಅರಮನೆಯಲ್ಲಿ ವಂದಿ ಮಾಗಧರು ಶಂಖ

ಡೊಳ್ಳು ಮೌರಿಗಳು ಮೊಳಗಿದವು. ಆ ಕಾಲಕ್ಕೆ ಸರಿಯಾಗಿ ಬ್ರಹ್ಮಪುತ್ರನಾದ ನಾರದರು ಅರಮನೆಯನ್ನು ಪ್ರವೇಶಿಸಿದರು. ಯಾದವರೊಂದಿಗೆ ಆಸೀನನಾಗಿದ್ದ ಯದುನಂದನಿಗೆ "ಜಯವಾಗಲಿ!" ಎಂದು ಜಯಘೋಷ ಮಾಡಿದರು.

ಉಗ್ರಸೇನಾದಿಗಳು ಬಂದ ಅತಿಥಿಯನ್ನು ಅತ್ಯಾದರ ಪೂರ್ವಕ ಆದರಿಸಿದರು. ಶ್ರೀಕೃಷ್ಣನು ಬೇಜಾರಾಗಿದ್ದವನಂತೆ ತನ್ನನ್ನು ತೋರಿಸುತ್ತಾ ಬಂದ ನಾರದರಿಗೆ ಮಧುಪರ್ಕ ನೀಡಿದ. ತನಗೆ ಯೋಗಾಸನದಲ್ಲಿ ಕುಳಿತ ನಾರದರು ಹೀಗೆಂದರು.

*ನಾರದ ಉವಾಚ –*

**ಕಿಮೇವಂ ಚಿಂತಯಾವಿಷ್ಟಾಃ ನಿಸ್ಸಂಗಾಃ ಗತಮಾನಸಾಃ ।**
**ಉತ್ಸಾಹ ಹೀನಾಃ ಸರ್ವೇ ವೈ ಕ್ಲೀಬಾ ಇವ ಸಮಾಸತೇ ॥ 17 ॥**

ಯಾದವರೇ! ಇದೇನು ಚಿಂತಾಕ್ರಾಂತಾಗಿ ಉತ್ಸಾಹರಹಿತರಾಗಿದ್ದೀರಿ. ನಪುಂಸಕರಂತೆ – ರಣಹೇಡಿಗಳಂತೆ ಅನ್ಯತ್ರ ಮನಸ್ಸನ್ನಿಟ್ಟಿರುವಿರಿ. ಇದೇನು – ಈ ಮಹಾಮೌನ! ಎಂದಾಗ ಶ್ರೀಕೃಷ್ಣನು – ನಾರದರೇ! ನಮ್ಮ ಅನಿರುದ್ಧನನ್ನು ಹಿಂದಿನ ರಾತ್ರಿಯಲ್ಲಿ ಯಾವನೊ ಅಪಹರಿಸಿ-ಕೊಂಡೊಯ್ದಿದ್ದಾನೆ. ಇದಕ್ಕಾಗಿ ನಾವೆಲ್ಲರೂ ಚಿಂತಾಕ್ರಾಂತರಾಗಿದ್ದೇವೆ. ನೀವಾದರೂ ತ್ರಿಲೋಕಸಂಚಾರಿಗಳಾಗಿರುವಿರಿ. ನಿಮ್ಮ ಸಂಚಾರ ಕಾಲದಲ್ಲಿ ಎಲ್ಲಿಯಾದರೂ ಅನಿರುದ್ಧನನ್ನು ನೋಡಿದ್ದರೆ ನಮಗೆ ತಿಳಿಸಿರಿ. ಇದು ನಮಗೆ ಪ್ರಿಯ ವಿಷಯ.

ಈ ಮಾತನ್ನು ಕೇಳಿದ ನಾರದರು ನಗುವಿನ ಹೊನಲು ಸುರಿಸುತ್ತಾ ಅನಿರುದ್ಧನ ವಿಷಯ ತಿಳಿಸತೊಡಗಿದರು.

ಪ್ರಹಸ್ಯೈತದ್ ವಚಃ ಪ್ರಾಹ ಶ್ರೂಯತಾಂ ಮಧುಸೂದನ ।

## ನಾರದರಿಂದ ಯಥಾರ್ಥ ತಿಳಿಯಿತು

ನಿರ್ವೃತ್ತಂ ಸುಮಹದ್ ಯುದ್ಧಂ ದೇವಾಸುರಸಮಂ ಮಹತ್ ।
ಅನಿರುದ್ಧಸ್ಯ ಚೈಕಸ್ಯ ಬಾಣಸ್ಯಾಪಿ ಮಹಾಮೃಧೇ ॥ 18 ॥
ಉಷಾ ನಾಮ ತಸ್ಯ ಸುತಾ ಬಾಣಸ್ಯಾಪ್ರತಿಮೌಜಸಃ ।
ತಸ್ಯಾರ್ಥೇ ಚಿತ್ರಲೇಖಾ ವೈ ಜಹಾರಾಶು ತಮಪ್ಸರಾಃ ॥ 19 ॥

ಶೋಣಿತಪುರದಲ್ಲಿ ಒಂದು ಕಡೆ ಮಹಾಸಮರವೇರ್ಪಡುತ್ತಿತ್ತು. ಅದರಲ್ಲಿ ಒಂದು ಕಡೆ ಒಬ್ಬಂಟಿಗನಾದ ಅನಿರುದ್ಧನಿದ್ದನು. ಮತ್ತೊಂದು ಕಡೆ ಸೈನ್ಯ ಸಮೇತನಾದ ಬಾಣಾಸುರನಿದ್ದನು.

ಅವರಿಬ್ಬರಲ್ಲಿ ಭಯಂಕರ ಯುದ್ಧ ನಡೆಯುತ್ತಿತ್ತು. ಬಾಣಾಸುರನಿಗೆ ಉಷಾವೆಂಬ ಪುತ್ರಿಯಿರುತ್ತಾಳೆ. ಅವಳು ನಿನ್ನ ಮೊಮ್ಮಗನಲ್ಲಿ ಅನುರಕ್ತರಾಗಿದ್ದಾಳೆ. ಚಿತ್ರಲೇಖೆಯು ಉಷೆಯ ಪ್ರಾಣಸಖಿ. ಅವಳು ಪ್ರಾಣಸಖಿಗಾಗಿ ಈ ಪ್ರಾಣಕಾಂತನನ್ನು ಅವಳ ಪ್ರಾಣ ಉಳಿಸಲೆಂದು ಅಪಹರಿಸಿದ್ದಾಳೆ. ಇದು ನಿಜಸಂಗತಿ. ಇದಕ್ಕಾಗಿಯೇ ಅನಿರುದ್ಧ-ಬಾಣರ ಮಧ್ಯ ಬಲೀಂದ್ರರಲ್ಲಿ ಯುದ್ಧದಲ್ಲಿ ಕದನವಾಗುತ್ತಿದೆ.

ಬಾಣಾಸುರನಾದರೂ ತನ್ನ ಯಾವುದೇ ಅಸ್ತ್ರ-ಶಸ್ತ್ರಗಳಿಗೆ ಹಿಮ್ಮೆಟ್ಟದೆ ಅಪ್ರತಿಮ ಪರಾಕ್ರಮದಿಂದ ಹೋರಾಡುತ್ತಿರುವುದನ್ನು ನೋಡಿ ಭಯಗೊಂಡು ಪಶುಗಳನ್ನು ಪಾಶದಿಂದ ಬಿಗಿಯುವಂತೆ ಅನಿರುದ್ಧನನ್ನು ಮಾಯಾ ನಾಗಪಾಶದಿಂದ ಬಂಧಿಸಿಟ್ಟಿರುವನು. ಅವನನ್ನು ಕೊಂದು ಹಾಕುವಂತೆ ಆದೇಶ ಹೊರಡಿಸಿದ ಬಾಣನು, ತನ್ನ ಮಂತ್ರಿ ಕುಂಭಾಂಡಕನ ಸಲಹೆಯ ಮೇರೆಗೆ ನಾಗಪಾಶಬದ್ಧನನ್ನಾಗಿಸಿದ್ದಾನೆ.

## ನಾರದರಿಂದ ಉತ್ತೇಜನ

**ಉತ್ತಿಷ್ಠತು ಭವಾನ್ ಶೀಘ್ರಂ ಯಶಸೇ ವಿಜಯಾಯ ಚ ।**
**ನಾಯಂ ಸಂರಕ್ಷಿತುಂ ಕಾಲಃ ಪ್ರಾಣಾಂಸ್ತಾತಃ ಜಯೈಕ್ಷಿಣಾಮ್ ॥ 20 ॥**

ಶ್ರೀಕೃಷ್ಣನೇ! ವಿಜಯಗಳಿಸಲು, ಅದರ ಮೂಲಕ ಲೋಕದಲ್ಲಿ ಪ್ರಖ್ಯಾತ ಕೀರ್ತಿಯನ್ನು ಪಡೆಯುವ ಸಲುವಾಗಿಯೂ ರಣಯಾತ್ರೆಗಾಗಿ ಹೊರಡು ವಿಜಯಕಾಂಕ್ಷಿಗಳಿಗೆ ಪ್ರಾಣದ ಮೇಲೆ ಅಭಿಮಾನವಿರಲಾರದಷ್ಟೆ? ಎಂದಾಗ ಶ್ರೀಕೃಷ್ಣನು – ಯಾದವ ಸೈನ್ಯಕ್ಕೆ ಆದೇಶ ಹೊರಡಿಸಿದನು. ಯುದ್ಧಕ್ಕಾಗಿ ಅರಮನೆಯಿಂದ ಹೊರಟನು. ಆಗ ವಿಜಯಸೂಚಕಗಳಾದ ಅಕ್ಷತೆ, ಅರಳು, ಗಂಧದ ಚೂರ್ಣಗಳು ಅವನ ಮೇಲೆ ಎರಚಿದರು.

**ನಿರ್ಯಯೌ ಸ ಮಹಾಬಾಹುಃ ಕೀರ್ಯಮಾಣೋ ಜನಾರ್ದನಃ ॥ 21 ॥**

ಈ ರಣಯಾತ್ರೆಗೆ ಹೊರಟ ಶ್ರೀಕೃಷ್ಣನಿಗೆ ನಾರದರು – ಕೃಷ್ಣನೇ! ಈ ಸಮಯದಲ್ಲಿ ಬೇಗನೆ ಹೋಗಬೇಕಿರುವುದರಿಂದ ಹಾಗೂ ಬಾಣನ ಪುರವು

ದುರ್ಗಮ ಪ್ರವೇಶವೂ ಆಗಿರುವುದರಿಂದ ಗರುಡನನ್ನು ಬರಹೇಳುವುದು-ಚಿತವೆಂದು ಹೇಳಿದರು.

**ಸ್ಮರಣಂ ವೈನತೇಯಸ್ಯ ಕರ್ತುಮರ್ಹಸಿ ಮಾಧವ ।**
**ನ ಹ್ಯನ್ಯೇನ ತಮಧ್ವಾನಂ ಶಕ್ಯಂ ಗಂತುಂ ಮಹಾಭುಜ ॥ 22 ॥**
**ಏಕಾದಶ ಸಹಸ್ರಾಣಿ ಯೋಜನಾನಾಂ ಜನಾರ್ದನ ।**

ಕೃಷ್ಣನೇ ! ನೀನು ಪ್ರಯಾಣ ಮಾಡಬೇಕಿರುವ ಮಾರ್ಗವಾದರೂ ಅತಿ ದುರ್ಗಮವೂ ಹನ್ನೊಂದು ಸಾವಿರ ಯೋಜನಗಳಷ್ಟು ದೂರವಿದೆ.

ಗರುಡನಾದರೂ ಮನೋವೇಗವುಳ್ಳವನಾದ್ದರಿಂದ ಅಷ್ಟು ಕ್ರಮಿಸಬಲ್ಲ ಸಮರ್ಥನಾಗಿರುವನು. ಅವನನ್ನು ಸ್ಮರಿಸು. ಅವನು ಏಕಮುಹೂರ್ತದಲ್ಲಿಯೇ ಬಾಣಾಸುರಪುರ ಸೇರಿಸುತ್ತಾನೆ.

ಜನಮೇಜಯ ಕೇಳು, ನಾರದರ ಮಾತನ್ನು ಅನುಮೋದಿಸಿ ಗರುಡನನ್ನು ಸ್ಮರಿಸಿದ ಕೂಡಲೇ ವಾಯುವೇಗದಿಂದ ಬಂದು ಶಿರಸಾಂಜಲಿಯಾಗಿ ನಿಂತು ಹೀಗೆಂದನು. ಪದ್ಮನಾಭನೇ! ನನ್ನನ್ನು ಸ್ಮರಿಸಿಕೊಂಡಿದ್ದೇಕೆ? ನನ್ನ ಕಾರ್ಯವಾದರೂ ಏನು? ಎಂದನು.

**ಪದ್ಮನಾಭ ಮಹಾಬಾಹೋ ಕಿಮರ್ಥಂ ಸಂಸ್ಮೃತೋ ಹ್ಯಹಮ್ ।**

ಪ್ರಭುವೇ! ನಾನು ನನ್ನ ಪಕ್ಷಗಳ ಹೊಡೆತದಿಂದ ಯಾವನ ಸೈನ್ಯ ಪಕ್ಷವನ್ನಾಗಲಿ, ಪುರವನ್ನಾಗಲಿ ಹೊಡೆದು ಪುಡಿ ಮಾಡಲಿ. ನಿನ್ನ ಅನುಗ್ರಹದಿಂದಾಗಿ ನನಗೆ ಅದ್ಭುತ ಶಕ್ತಿಯಿದೆಯೆಂಬುದು ಈ ಲೋಕ ತಿಳಿದಿದೆ.

ಮಹಾಬಾಹುವೇ! ಯಾವ ಮೂರ್ಖ ಮನುಷ್ಯನು ನಿನ್ನ ಗದಾವೇಗವನ್ನೂ, ಸುದರ್ಶನ ಚಕ್ರದ ತೇಜಸ್ಸನ್ನು ತಿಳಿಯದೆ ನಿನ್ನನ್ನು ಕೆಣಕಿರುವನು? ಬಹುಶಃ ದರ್ಪದಿಂದಾಗಿ ಅವನು ಸಾಯುವುದು ನಿಶ್ಚಿತವೆ.

**ಗದಾವೇಗಂ ಚ ತೇ ವೀರ ಚಕ್ರಾಗ್ನಿಂ ಚ ಮಹಾಭುಜ ।**
**ನಾವ ಬುಧ್ಯತಿ ಮೂಢಾತ್ಮಾ ಕೋ ದರ್ಪಾತ್ ನಾಶಮೇಷ್ಯತಿ ॥ 23 ॥**

ಸಿಂಹದ ಮುಖ ಹೊಂದಿರುವ ನೇಗಿಲು ಆಯುಧ ಯಾರಲ್ಲಿರುವುದೋ ಯಾರು ಜಯಸೂಚಕ ವನಮಾಲೆಯನ್ನು ಧರಿಸಿರುವನೋ ಅಂತಹ ಹಲಾಯುಧನು, ಯಾರನ್ನು ತನ್ನ ನೇಗಿಲಿನಿಂದ ಸೆಳೆದು, ಒನಕೆಯಿಂದ

ಅವನ ತಲೆಯನ್ನು ಮಣ್ಣಿನ ಹೆಂಟೆಯಂತೆ ಒಡೆದು ಭೂಮಿಯ ಮೇಲೆ ಬೀಳಿಸಲಿರುವವನು?

**ಕಸ್ಯ ದೇಹಸ್ತು ನಿರ್ಭಿನ್ನೋ ಮೇದಿನೀಂ ಯಾಸ್ಯತಿ ಪ್ರಭೋ ।**

ಮಾಧವನೇ! ನಿನ್ನ ಅಮೋಘವಾದ ಶಂಖಧ್ವನಿಯಿಂದ ಯಾವನ ಪ್ರಾಣಪಕ್ಷಿ ಹಾರಿಹೋಗಲಿದೆ? ನಿನ್ನನ್ನು ಕ್ರೋಧಗೊಳಿಸಿ ಯಮನಿಗೆ ಅತಿಥಿಯಾಗಲು ಸಿದ್ಧನಿರುವ ಆ ಮೂರ್ಖನಾರು ಎಂದನು.

**ಕೋಽಯಂ ಸಪರಿವಾರೋಽದ್ಯ ಯಾಸ್ಯತೇ ಯಮಸಾದನಮ್ ॥ 24 ॥**

ಧೀಮಂತ ಗರುಡನು ಹೀಗೆ ಹೇಳಲು ಶ್ರೀಕೃಷ್ಣನು – ಗರುಡನೇ ಕೇಳು.

**ವಾಸುದೇವೋ ವಚಃ ಪ್ರಾಹ ಶ್ರುಣು ತ್ವಂ ವದತಾಂ ವರ ।**

ಬಲಿಯ ಮಗನಾದ ಬಾಣನು – ನನ್ನ ಮೊಮ್ಮಗನಾದ ಅನಿರುದ್ಧನು ತನ್ನ ಮಗಳೊಂದಿಗೆ ಸಂಬಂಧ ಹೊಂದಿರುವನೆಂಬ ಕಾರಣಕ್ಕಾಗಿ ಅವನನ್ನು ಮಹಾವಿಷಸರ್ಪ ಬಾಣಗಳಿಂದ ಬಂಧಿಸಿ ಶೋಣಿತಪುರದಲ್ಲಿಟ್ಟಿರುವನು. ಅವನನ್ನು ಬಿಡಿಸಿಕೊಂಡು ಬರಲು ನಾನು ನಿನ್ನನ್ನು ಸ್ಮರಿಸಿದೆನು.

**ತಸ್ಯ ಮೋಕ್ಷಾರ್ಥಮಾಹೂತೋ ಮಯಾ ತ್ವಂ ಪತಗೇಶ್ವರ ॥ 25 ॥**

ಗರುಡನೇ! ಹನ್ನೆರಡು ಸಾವಿರ ಯೋಜನ ಶೀಘ್ರವಾಗಿ ಹೋಗಬೇಕಿದೆ. ಇತರರಿಂದ ಅಶಕ್ಯ ಈ ದೂರವನ್ನು ಕ್ರಮಿಸಲು ನೀನೊಬ್ಬನೆ ಸಮರ್ಥ. ನನ್ನನ್ನು ಈ ಕೂಡಲೇ ಶೋಣಿತಪುರಕ್ಕೆ ಕರೆದೊಯ್ಯು.

**ತತ್ರ ಪ್ರಾಪಯ ಮಾಂ ಶೀಘ್ರಂ ಯತ್ರ ಪ್ರಾದ್ಯುಮ್ನಿರಾವಸತ್ ।**

ಗರುಡನೇ! ಇದಲ್ಲದೆ, ವಿದರ್ಭ ದೇಶದ ರಾಜಕುಮಾರಿಯೂ ನಿನಗೆ ಸೊಸೆಯಂತಿರುವವಳೂ ಆದ ರುಕ್ಮಿಣಿಯು ತನ್ನ ಮೊಮ್ಮಗ ನೋಡಬೇಕೆಂದು ಅಕಾಂಕ್ಷಿಸಿರುವಳು. ನೀನು ಪ್ರಸನ್ನನಾದರೆ ಅವಳು ಮೊಮ್ಮಗನನ್ನು ಕಾಣುವಳು.

**ವೈದರ್ಭೀ ತೇ ಸ್ನುಷಾ ವೀರ ರುದತೀ ಪುತ್ರಗೃದ್ಧಿನೀ ।**
**ತ್ವತ್ ಪ್ರಸಾದಾದ್ ಭವತ್ಯೇಷಾ ಪುತ್ರೇಣ ಸಹ ಭಾಮಿನೀ ॥ 26 ॥**

ದೇವತೆಗಳೊಂದಿಗೆ ಯುದ್ಧ ಮಾಡಿ ನಿನ್ನ ತಾಯಿಗಾಗಿ ಅಮೃತವನ್ನು

ಅಪಹರಿಸಿದೆ. ಆಗ ನೀನು ಧ್ವಜನಾಗಿದ್ದು. ನಾನು ಗರುಡಧ್ವಜನೆನಿಸಿದೆ. ಯಾದವರೆಲ್ಲರೂ ನಿನಗೆ ಭಕ್ತರಾಗಿರುವರು. ಆದ್ದರಿಂದ ನಮ್ಮ ಮೈತ್ರಿಯನ್ನೂ ಹಾಗೂ ಭಕ್ತಿಯನ್ನೂ ಗೌರವಿಸಿ ನಮ್ಮ ಕಾರ್ಯಕ್ಕೆ ಸಹಾಯ ಮಾಡು.

ಸರ್ಪಭಕ್ಷಕನೇ! ನಿನ್ನ ವೇಗಕ್ಕೆ ಸಮಾನವಾದ ವೇಗವುಳ್ಳವನು ವಾಯು ಹೊರತು ಮತ್ತೊಬ್ಬರಿರುವುದಿಲ್ಲ. ಇದನ್ನು ಶಪಥಪೂರ್ವಕ ಹೇಳುವೆನು.

ಹಿಂದೆ ನಿನ್ನ ತಾಯಿಯಾದ ವಿನತಾದೇವಿಯು ತನ್ನ ಸವತಿಯಾದ ಕದ್ರೂವಿಗೆ ಪಂಥದಲ್ಲಿ ಸೋತು ದಾಸಿಯಾದಳು. ಆಗ ನೀನೊಬ್ಬನೇ ಏಕಾಂಗಿಯಾಗಿ ಅವಳನ್ನು ದಾಸ್ಯ ವಿಮುಕ್ತನನ್ನಾಗಿ ಮಾಡಿದೆ. ರೆಕ್ಕೆ ಪ್ರಹಾರ ಮಾತ್ರದಿಂದ ಅನೇಕ ಯೋಧರನ್ನು ಸಂಹರಿಸಿರುವೆ.

**ದಾಸೀಭಾವಂ ಗತಾ ಮಾತಾ ಮೋಕ್ಷಿತೈಕಾಕಿನಾ ಪುರಾ ।**
**ಪಕ್ಷವಿಕ್ಷೇಪ ಮಾತ್ರೇಣ ಹತಾ ಯೋಧಾಃ ತ್ವಯಾ ಪುರಾ ॥ 27 ॥**

ಪಕ್ಷಿರಾಜನೇ! ನೀನು ನಮ್ಮೆಲ್ಲರನ್ನೂ ನನ್ನನ್ನೂ ಸಹ ನಿನ್ನ ಭುಜದ ಮೇಲೆ ಕೂಡಿಸಿಕೊಂಡು ಅಗಮ್ಯವಾದ ಶತ್ರುರಾಜ್ಯಕ್ಕೆ ಕರೆದೊಯ್ಯು. ನೀನು ಭಾರದಲ್ಲಿ ಮೇರುಪರ್ವತವೇ ಸರಿ. ನಿನ್ನ ಪರಾಕ್ರಮಕ್ಕೆ ನೀನೇ ಸಾಟಿ ಎಂದನು. ಗರುಡನು ಕೃಷ್ಣನ ಮಾತಿಗೆ ಹೀಗೆಂದನು, ಸರ್ವಸಮರ್ಥ ನಿನಗೆ ನನ್ನ ಸಹಾಯಬೇಕೆ? ನಿನ್ನ ಮಾತು ಅಸುರಮೋಹಕ. ಯಾರೊಬ್ಬನೂ ಜಯಗಳಿಸಲು ನಿನ್ನ ಕೃಪಾಕಟಾಕ್ಷ ಬೇಕು. ನಿನ್ನ ವ್ಯಾಪಾರ ಅದ್ಭುತ. ನಾನು ನಿನ್ನನ್ನು ಸ್ತುತಿಸಬೇಕು. ಆದರೆ ನೀನೆ ನನ್ನನ್ನು ಸ್ತುತಿಸಿ ಜನಜಾಗೃತಿ ಮಾಡುತ್ತಿರುವೆ.

**ಸ್ತೋತವ್ಯಸ್ತ್ವಂ ಮಯಾ ಕೃಷ್ಣ ಸ್ತೌಷಿ ಮಾಂ ತ್ವಂ ಮಹಾಭುಜ ।**
**ವೇದಾಧ್ಯಕ್ಷಃ ಸುರಾಧ್ಯಕ್ಷಃ ಸರ್ವಕಾಮಪ್ರದೋ ಭವಾನ್ ।**
**ಅಮೋಘದರ್ಶನಸ್ತ್ವಂ ಹಿ ವರಾರ್ಥಿಷು ವರಪ್ರದಃ ॥ 28 ॥**

ಸಮಸ್ತವೇದಪ್ರತಿಪಾದ್ಯನೂ, ಸಮಸ್ತ ದೇವತಾಮಂಡಲಕ್ಕೆ ಅಖಂಡ ಮಂಡನನೂ ಸರ್ವಕಾಮನಾಪೂರಕನೂ ಆಗಿರುವ ನಿನ್ನ ದರ್ಶನವೂ ಮೋಘವಾಗುವುದಿಲ್ಲ.

ಚತುರ್ಭುಜವುಳ್ಳ ವಾಸುದೇವಾದಿ ನಾಲ್ಕು ರೂಪಗಳೂ ಚತುರ್ವಿಧ

ಪುರುಷಾರ್ಥ ನೀಡಲು ಸಮರ್ಥವಾಗಿವೆ. ಹೋತೃ, ಅಧ್ವರ್ಯ, ಉದ್ಗಾತೃ, ಯಜಮಾನ ಅಥವಾ ಬ್ರಹ್ಮನೆಂಬ ಋತ್ವಿಕ್ಕುಗಳಲ್ಲಿದ್ದು ಮಾಡುವ ಕರ್ಮಕ್ಕೆ ಕರ್ತೃವಾಗಿರುವಿ. ಚತುರಾಶ್ರಮ ನಿನ್ನಿಂದಲೇ ಪ್ರವೃತ್ತವಾಗಿವೆ. ಚತುರ್ಯುಗ ನೇತರನೂ ನೀನೇ. ಶಂಖ, ಚಕ್ರ ಧನುಸ್ಸನ್ನು ಧರಿಸಿರುವ ವಿಷ್ಣುವೆ ನೀನಾಗಿರುವಿ. ಕೂರ್ಮರೂಪದಿಂದ ಬ್ರಹ್ಮಾಂಡಾಧಾರಕ ನೀನೆ.

ಹಲಾಯುಧ ಮುಸಲ ಧರಿಸಿದ ನೀನು ಸಂಕರ್ಷನಾಗಿದ್ದು ಬಲರಾಮನಲ್ಲಿರುವಿ. ದೇವತೆಗಳಿಗೆ ಸುಖ ನೀಡಲೆಂದೆ ದೇವಕಿಯ ಪುತ್ರನೆನಿಸಿರುವೆ ಚಾಣೂರಾಂಧ್ರ ನಿಷೂದನನೂ, ಕಂಸಾರಿಯೂ ನೀನೆ.

ಗೋವರ್ಧನ ಪರ್ವತವೆತ್ತಿದ ನಿನ್ನ ಕೈಯಿಂದಲೇ ಜಗಜ್ಜಟ್ಟಿಗಳನ್ನು ಸಂಹರಿಸಿರುವೆ. ಮಲ್ಲರಿಗೆ ನೀನೆ ಶಕ್ತಿದಾತನೆಂದು ಅವರೇನು ಬಲ್ಲರು? ಮಹಾಮಲ್ಲನಾದ ಭೀಮಪ್ರಿಯನಲ್ಲವೆ ನೀನು. ಇಷ್ಟಾದರೂ ನೀನು ಪುರುಷೋತ್ತಮನೆ.

ಬ್ರಹ್ಮಣ್ಯನೂ, ಬ್ರಾಹ್ಮಣಪ್ರಿಯನೂ, ವಿಪ್ರರನ್ನೂ ತಿಳಿದವನೂ ವಿಪ್ರಪಾಲಕನೂ, ವರಣೀಯನೂ ದಾಮೋದರನೂ, ಪ್ರಲಂಬ ಜಂಕನೂ, ಕೇಶಿಸೂದನನೂ, ಅಸಿಲೋಮದ್ಯೈತ್ಯ ನಿಗ್ರಹಕನೂ, ರಾವಣಾದಿ ನಿಶಾಚರ ಧ್ವಂಸಕನೂ, ವಾಲಿ ಹಂತಕನಾಗಿ ಸುಗ್ರೀವ ರಾಜ್ಯದಾತೃವೂ, ರಾವಣನನ್ನು ಕೊಂದು ವಿಭೀಷಣ ರಾಜ್ಯದಾತೃವಾಗಿರುವೆ.

ಬಲಿರಾಜನನ್ನು ನಿಗ್ರಹಿಸಿ ಇಂದ್ರನಿಗೆ ರಾಜ್ಯ ನೀಡಿದವನೂ, ಕೌಸ್ತುಭಮಣಿ ಧಾರಕನೂ, ಸ್ಯಮಂತಕಮಣಿ ಹರ್ತೃವೂ, ಭೂಮಿಯನ್ನು ಆವರಿಸಿ ವರುಣನೆಂದೂ, ನದಿಗಳಿಗೆ ಉಗಮಸ್ಥಾನವಾದ ತೀರ್ಥಪಾದನೆನಿಸಿ, ಬೆಸ್ತನ ಮಗಳಾದ ಸತ್ಯವತಿಯ ಮಗನಾಗಿ ಆಕೆಯನ್ನು ಗೌರವಿಸಿದ ದಾಶಾರ್ಹನು.

ಭೂಮಿಯನ್ನೆತ್ತಿದ ಗೋವಿಂದನು. ಅಪಾರ ನೀರಿಗೆ ಆಶ್ರಯನೂ, ಆಕಾಶಶಬ್ದವಾಚ್ಯನೂ ಸಮುದ್ರಮಥನ ಮಾಡಿದವನೂ, ಆನಂದರೂಪಿ ಹರಿಯು ಇಲ್ಲಿ ಸದಾ ಅಭಿವ್ಯಕ್ತನಾದ್ದರಿಂದ ವಿಷ್ಣುಲೋಕಕ್ಕೆ ಸ್ವರ್ಗವೆಂದೂ, ಅದನ್ನೂ ನೀಡುವವನೂ ಸ್ವರ್ಗನೆ. ಸ್ವರ್ಗಲೋಕದಲ್ಲಿ ಸರ್ವದಾ ಸನ್ನಿಹಿತನಾದವನೂ ನೀನೆ. ಮಹಾಮೇಘವೂ ಅದರಿಂದಾಗುವ ಮಳೆಯೂ, ಅದರಿಂದಾಗುವ ಬೀಜಾಂಕುರ ಮೊಳೆಯುವುದೂ ನೀನೇ, ವ್ಯಂಜಕ-ನಾದ್ದರಿಂದ ನೀನೆ ಬೀಜವಾಚ್ಯನು.

ಅಪಹರಿಸಿದೆ. ಆಗ ನೀನು ಧ್ವಜನಾಗಿದ್ದು. ನಾನು ಗರುಡಧ್ವಜನೆನಿಸಿದೆ. ಯಾದವರೆಲ್ಲರೂ ನಿನಗೆ ಭಕ್ತರಾಗಿರುವರು. ಆದ್ದರಿಂದ ನಮ್ಮ ಮೈತ್ರಿಯನ್ನೂ ಹಾಗೂ ಭಕ್ತಿಯನ್ನೂ ಗೌರವಿಸಿ ನಮ್ಮ ಕಾರ್ಯಕ್ಕೆ ಸಹಾಯ ಮಾಡು.

ಸರ್ಪಭಕ್ಷಕನೇ! ನಿನ್ನ ವೇಗಕ್ಕೆ ಸಮಾನವಾದ ವೇಗವುಳ್ಳವನು ವಾಯು ಹೊರತು ಮತ್ತೊಬ್ಬರಿರುವುದಿಲ್ಲ. ಇದನ್ನು ಶಪಥಪೂರ್ವಕ ಹೇಳುವೆನು.

ಹಿಂದೆ ನಿನ್ನ ತಾಯಿಯಾದ ವಿನತಾದೇವಿಯು ತನ್ನ ಸವತಿಯಾದ ಕದ್ರೂವಿಗೆ ಪಂಥದಲ್ಲಿ ಸೋತು ದಾಸಿಯಾದಳು. ಆಗ ನೀನೊಬ್ಬನೇ ಏಕಾಂಗಿಯಾಗಿ ಅವಳನ್ನು ದಾಸ್ಯ ವಿಮುಕ್ತನನ್ನಾಗಿ ಮಾಡಿದೆ. ರೆಕ್ಕೆ ಪ್ರಹಾರ ಮಾತ್ರದಿಂದ ಅನೇಕ ಯೋಧರನ್ನು ಸಂಹರಿಸಿರುವೆ.

**ದಾಸೀಭಾವಂ ಗತಾ ಮಾತಾ ಮೋಕ್ಷಿತೈಕಾಕಿನಾ ಪುರಾ ।**
**ಪಕ್ಷವಿಕ್ಷೇಪ ಮಾತ್ರೇಣ ಹತಾ ಯೋಧಾಃ ತ್ವಯಾ ಪುರಾ ॥ 27 ॥**

ಪಕ್ಷಿರಾಜನೇ! ನೀನು ನಮ್ಮೆಲ್ಲರನ್ನೂ ನನ್ನನ್ನೂ ಸಹ ನಿನ್ನ ಭುಜದ ಮೇಲೆ ಕೂಡಿಸಿಕೊಂಡು ಅಗಮ್ಯವಾದ ಶತ್ರುರಾಜ್ಯಕ್ಕೆ ಕರೆದೊಯ್ಯು. ನೀನು ಭಾರದಲ್ಲಿ ಮೇರುಪರ್ವತವೇ ಸರಿ. ನಿನ್ನ ಪರಾಕ್ರಮಕ್ಕೆ ನೀನೇ ಸಾಟಿ ಎಂದನು. ಗರುಡನು ಕೃಷ್ಣನ ಮಾತಿಗೆ ಹೀಗೆಂದನು, ಸರ್ವಸಮರ್ಥ ನಿನಗೆ ನನ್ನ ಸಹಾಯಬೇಕೆ? ನಿನ್ನ ಮಾತು ಅಸುರಮೋಹಕ. ಯಾರೊಬ್ಬನೂ ಜಯಗಳಿಸಲು ನಿನ್ನ ಕೃಪಾಕಟಾಕ್ಷ ಬೇಕು. ನಿನ್ನ ವ್ಯಾಪಾರ ಅದ್ಭುತ. ನಾನು ನಿನ್ನನ್ನು ಸ್ತುತಿಸಬೇಕು. ಆದರೆ ನೀನೆ ನನ್ನನ್ನು ಸ್ತುತಿಸಿ ಜನಜಾಗೃತಿ ಮಾಡುತ್ತಿರುವೆ.

**ಸ್ತೋತವ್ಯಸ್ತ್ವಂ ಮಯಾ ಕೃಷ್ಣ ಸ್ತೌಷಿ ಮಾಂ ತ್ವಂ ಮಹಾಭುಜ ।**
**ವೇದಾಧ್ಯಕ್ಷಃ ಸುರಾಧ್ಯಕ್ಷಃ ಸರ್ವಕಾಮಪ್ರದೋ ಭವಾನ್ ।**
**ಅಮೋಘದರ್ಶನಸ್ತ್ವಂ ಹಿ ವರಾರ್ಥಿಷು ವರಪ್ರದಃ ॥ 28 ॥**

ಸಮಸ್ತವೇದಪ್ರತಿಪಾದ್ಯನೂ, ಸಮಸ್ತ ದೇವತಾಮಂಡಲಕ್ಕೆ ಅಖಂಡ ಮಂಡನನೂ ಸರ್ವಕಾಮನಾಪೂರಕನೂ ಆಗಿರುವ ನಿನ್ನ ದರ್ಶನವೂ ಮೋಘವಾಗುವುದಿಲ್ಲ.

ಚತುರ್ಭುಜವುಳ್ಳ ವಾಸುದೇವಾದಿ ನಾಲ್ಕು ರೂಪಗಳೂ ಚತುರ್ವಿಧ

ಪುರುಷಾರ್ಥ ನೀಡಲು ಸಮರ್ಥವಾಗಿವೆ. ಹೋತೃ, ಅಧ್ವರ್ಯ, ಉದ್ಗಾತೃ, ಯಜಮಾನ ಅಥವಾ ಬ್ರಹ್ಮನೆಂಬ ಋತ್ವಿಕ್ಕುಗಳಲ್ಲಿದ್ದು ಮಾಡುವ ಕರ್ಮಕ್ಕೆ ಕರ್ತೃವಾಗಿರುವಿ. ಚತುರಾಶ್ರಮ ನಿನ್ನಿಂದಲೇ ಪ್ರವೃತ್ತವಾಗಿವೆ. ಚತುರ್ಯುಗ ನೇತರನೂ ನೀನೇ, ಶಂಖ, ಚಕ್ರ ಧನುಸ್ಸನ್ನು ಧರಿಸಿರುವ ವಿಷ್ಣುವೆ ನೀನಾಗಿರುವಿ. ಕೂರ್ಮರೂಪದಿಂದ ಬ್ರಹ್ಮಾಂಡಾಧಾರಕ ನೀನೆ.

ಹಲಾಯುಧ ಮುಸಲ ಧರಿಸಿದ ನೀನು ಸಂಕರ್ಷನಾಗಿದ್ದು ಬಲರಾಮನಲ್ಲಿರುವಿ. ದೇವತೆಗಳಿಗೆ ಸುಖ ನೀಡಲೆಂದೆ ದೇವಕಿಯ ಪುತ್ರನೆನಿಸಿರುವೆ ಚಾಣೂರಾಂಧ್ರ ನಿಷೂದನನೂ, ಕಂಸಾರಿಯೂ ನೀನೆ.

ಗೋವರ್ಧನ ಪರ್ವತವೆತ್ತಿದ ನಿನ್ನ ಕೈಯಿಂದಲೇ ಜಗಜ್ಜಟ್ಟಿಗಳನ್ನು ಸಂಹರಿಸಿರುವೆ. ಮಲ್ಲರಿಗೆ ನೀನೆ ಶಕ್ತಿದಾತನೆಂದು ಅವರೇನು ಬಲ್ಲರು? ಮಹಾಮಲ್ಲನಾದ ಭೀಮಪ್ರಿಯನಲ್ಲವೆ ನೀನು. ಇಷ್ಟಾದರೂ ನೀನು ಪುರುಷೋತ್ತಮನೆ.

ಬ್ರಹ್ಮಣ್ಯನೂ, ಬ್ರಾಹ್ಮಣಪ್ರಿಯನೂ, ವಿಪ್ರರನ್ನೂ ತಿಳಿದವನೂ ವಿಪ್ರಪಾಲಕನೂ, ವರಣೀಯನೂ ದಾಮೋದರನೂ, ಪ್ರಲಂಬ ಜಂಕನೂ, ಕೇಶಿಸೂದನನೂ, ಅಸಿಲೋಮದ್ಧೈತ್ಯ ನಿಗ್ರಹಕನೂ, ರಾವಣಾದಿ ನಿಶಾಚರ ಧ್ವಂಸಕನೂ, ವಾಲಿ ಹಂತಕನಾಗಿ ಸುಗ್ರೀವ ರಾಜ್ಯದಾತೃವೂ, ರಾವಣನನ್ನು ಕೊಂದು ವಿಭೀಷಣ ರಾಜ್ಯದಾತೃವಾಗಿರುವೆ.

ಬಲಿರಾಜನನ್ನು ನಿಗ್ರಹಿಸಿ ಇಂದ್ರನಿಗೆ ರಾಜ್ಯ ನೀಡಿದವನೂ, ಕೌಸ್ತುಭಮಣಿ ಧಾರಕನೂ, ಸ್ಯಮಂತಕಮಣಿ ಹರ್ತೃವೂ, ಭೂಮಿಯನ್ನು ಆವರಿಸಿ ವರುಣನೆಂದೂ, ನದಿಗಳಿಗೆ ಉಗಮಸ್ಥಾನವಾದ ತೀರ್ಥಪಾದನೆನಿಸಿ, ಬೆಸ್ತನ ಮಗಳಾದ ಸತ್ಯವತಿಯ ಮಗನಾಗಿ ಆಕೆಯನ್ನು ಗೌರವಿಸಿದ ದಾಶಾರ್ಹನು.

ಭೂಮಿಯನ್ನೆತ್ತಿದ ಗೋವಿಂದನು. ಅಪಾರ ನೀರಿಗೆ ಆಶ್ರಯನೂ, ಆಕಾಶಶಬ್ದವಾಚ್ಯನೂ ಸಮುದ್ರಮಥನ ಮಾಡಿದವನೂ, ಆನಂದರೂಪಿ ಹರಿಯು ಇಲ್ಲಿ ಸದಾ ಅಭಿವ್ಯಕ್ತನಾದ್ದರಿಂದ ವಿಷ್ಣುಲೋಕಕ್ಕೆ ಸ್ವರ್ಗವೆಂದೂ, ಅದನ್ನೂ ನೀಡುವವನೂ ಸ್ವರ್ಗನೆ. ಸ್ವರ್ಗಲೋಕದಲ್ಲಿ ಸರ್ವದಾ ಸನ್ನಿಹಿತನಾದವನೂ ನೀನೆ. ಮಹಾಮೇಘವೂ ಅದರಿಂದಾಗುವ ಮಳೆಯೂ, ಅದರಿಂದಾಗುವ ಬೀಜಾಂಕುರ ಮೊಳೆಯುವುದೂ ನೀನೇ, ವ್ಯಂಜಕ-ನಾದ್ದರಿಂದ ನೀನೆ ಬೀಜವಾಚ್ಯನು.

ಮೂರು ಲೋಕಗಳನ್ನು ನಿಗ್ರಹಿಸುವವನೂ, ಕ್ಷಮಾರೂಪ ಕೋಪವುಳ್ಳವನೂ, ತನಗೆ ಬೇಕು ಎಂಬ ಜ್ಞಾನ ನೀಡುವವನೂ, ಸರ್ವಮನೋರಥ ಈಡೇರಿಸುವವನೂ ಸಮ್ಯಕ್ ವರ್ತನೆ, ಇತರ ವರ್ತನೆಗೂ ಪ್ರಲಯನೂ ಆಶ್ರಯನೂ ನೀನೇ ಕಾರಣನು. ಬ್ರಹ್ಮನಲ್ಲಿರುವ ನಿನಗೆ ಬ್ರಹ್ಮನೆಂದೂ, ಸಮಸ್ತ ಪ್ರಾಣಿ ಸ್ವರೂಪ ತಿಳಿದವನೂ, ಸುಂದರರೂಪನೂ, ಮಧುಸೂದನನೂ, ರುದ್ರನೂ, ಮಹಾದೇವನೂ, ಅನಂತಾನಂತ ಗುಣಿಯೂ ಆಗಿರುವ ನೀನು ನನ್ನನ್ನು ಸ್ತುತಿ ಮಾಡುವುದು ಉಚಿತವೆ ಸ್ವಾಮಿ.

**ಚಕ್ಷುಷಾ ಯೇ ತ್ವಯಾ ಘೋರಾಃ ಪ್ರಾಣಿನೋ ಹಿ ನಿರೀಕ್ಷಿತಾಃ ।**
**ಇಹ ಚ ಪ್ರೇತ್ಯ ತೇ ಸರ್ವೇ ಸರ್ವಥಾ ಸ್ವರ್ಗಗಾಮಿನಃ ॥ 29 ॥**

ನಿನ್ನ ಕೋಪಾಗ್ನಿಗೆ ಆಹುತಿಯಾದ ಪ್ರಾಣಿಗಳು, ಘೋರದೈತ್ಯರೂ ಸಹ ಆ ಪಾಪಿಗಳು ಯಮದಂಡದಿಂದ ಸತ್ತಂತೆಯೆ ಸರಿ. ಮುಂದೆ ಅವರು ಪಶುಪ್ರಾಣಿಗಳ ರೂಪವಾದ ತಿರ್ಯಗ್ಯೋನಿಯಲ್ಲಿ ಹುಟ್ಟುವರು.

ಆದರೆ ನೀನು ಯಾವ ಪ್ರಾಣಿಗಳನ್ನು ಪ್ರೀತಿಯಿಂದ ದಯೆಯಿಂದ ನೋಡುವಿಯೋ ಅಂತಹವರು ಈ ಲೋಕ ಹಾಗೂ ಪರಲೋಕದಲ್ಲಿಯೂ ಸುಖವಾಗಿರುವರು. ಆದ್ದರಿಂದ ನಾನು ನಿನ್ನ ಅಧೀನ. ನಿನ್ನ ಆದೇಶವನ್ನು ಪಾಲಿಸುವೆ ಎಂದು ಹೇಳಿ ಪುನಃ "ಶ್ರೀಕೃಷ್ಣನೇ! ನಾನು ಪ್ರಯಾಣಕ್ಕೆ ಸಿದ್ಧನಾಗಿರುವೆ. ನನ್ನ ಮೇಲೆ ಕುಳಿತುಕೊಳ್ಳಬಹುದು" ಎಂದಾಗ,

**ಅಯಮಸ್ಮಿ ಸ್ಥಿತೋ ವೀರ! ಆರುಹಸ್ವ ಮಹಾಬಲ ।**

ಶ್ರೀಕೃಷ್ಣನು, ಗರುಡನೇ! ಶತ್ರುಗಳ ನಾಶಕ್ಕಾಗಿ ಈ ಅರ್ಘ್ಯವನ್ನು ಸ್ವೀಕರಿಸು ಎಂದು ಗರುಡನಿಗೆ ಅರ್ಘ್ಯವನ್ನು ನೀಡಿ, ಗರುಡನ ಭುಜಗಳ ಮೇಲೇರಿ ಕುಳಿತನು.

**ಆರುರೋಹ ಮಹಾಬಾಹುಃ ಸುಪರ್ಣಂ ಪುರುಷೋತ್ತಮಃ ।**
**ಕೃಷ್ಣಕೇಶಃ ಪ್ರವಲಯೋ ವಿಷ್ಣುಃ ಕೃಷ್ಣಶ್ಚ ವರ್ಣತಃ ॥ 30 ॥**

ಪುರುಷೋತ್ತಮನಾದ ಶ್ರೀಕೃಷ್ಣನು ಪಕ್ಷ್ಯುತ್ತಮ ಗರುಡನ ಮೇಲೇರಿದನು. ಕೃಷ್ಣಕೇಶನಾದ ವಿಷ್ಣುವೆ ಈ ಶ್ರೀಕೃಷ್ಣನು ಹಾಗೂ ವರ್ಣದಿಂದಲೂ ಕೃಷ್ಣನೆ ಆಗಿರುವನು. ವರಾಹ ಹಾಗೂ ನೃಸಿಂಹಾವತಾರದಲ್ಲಿ ಎರಡೆರಡು ಕೋರೆಹಲ್ಲುಗಳುಳ್ಳವನೂ, ಚತುರ್ಬಾಹುವೂ ಚತುರ್ವೇದ ಹಾಗೂ ಶಿಕ್ಷಾದಿ

ಆರು ಅಂಗಗಳನ್ನು ತಿಳಿದವನೂ, ಶ್ರೀವತ್ಸಚಿಹ್ನಿತನೂ, ಕಮಲದಂತೆ ನೇತ್ರನೂ, ವರಾಹಾದಿಗಳಲ್ಲಿ ಮೇಲ್ಮುಖನಾಗಿ ನಿಮಿರಿನಿಂತ ರೋಮ–ವುಳ್ಳವನೂ, ಮೃದುವಾದ ಚರ್ಮವುಳ್ಳವನೂ, ಸಮಾನ ಹಾಗೂ ಸುಂದರ ಬೆರಳುಗಳುಳ್ಳವನೂ, ಸಮಾನ ನುಗಳೂ ಹಾಗೂ ಕೆಂಪಾದದ್ದು, ಸ್ನಿಗ್ಧವಾದ ಗಂಭೀರ ಮಾತುಗಳೂ ಪೀನವೃತ್ತವಾದ ಭುಜಗಳು ಜಗದ್ರಕ್ಷಣೆಯಲ್ಲಿಯೇ ಉದ್ಯೋಗಶೀಲವಾದವುಗಳು, ಆಜಾನುಬಾಹುವೂ, ಅರವಿಂದದಂತಿರುವ ಮುಖವು, ಸಿಂಹದ ನಡಿಗೆ, ಸಿಂಹ ಪರಾಕ್ರಮವೂ, ಸಾವಿರಾರು ಸೂರ್ಯರಂತೆ ಕಾಂತಿಯೂ, ವಾಮನನಾದಾಗ ಕಶ್ಯಪರು ನೀಡಿದ ಅಷ್ಟಸಿದ್ಧವುಳ್ಳವನೂ, ಬ್ರಹ್ಮಾದಿ ದೇವತಾ ಪೂಜ್ಯನೂ ಆಗಿದ್ದನು. ಶ್ರೀಕೃಷ್ಣನ ಹಿಂದೆ ಬಲರಾಮನು ಅವನ ಹಿಂದೆ ಪ್ರದ್ಯುಮ್ನನನೂ ಕುಳಿತರು.

### ಅಶರೀರವಾಣಿ

**ಜಯ ಬಾಣಂ ಮಹಾಬಾಹೋ ಯೋ ಚಾಸ್ಯಾನುಗತಾ ರಣೇ ।**
**ನ ಹಿ ತೇ ಪ್ರಮುಖೇ ಸ್ಥಾತುಂ ಕಶ್ಚಿತ್ ಶಕ್ತೋ ಮಹಾಮೃಧೇ ॥ 31 ॥**

ಈ ಮಧ್ಯದಲ್ಲಿ ಅಶರೀರವಾಣಿಯು – ವಾಸುದೇವನೇ! ನೀನು ಯುದ್ಧದಲ್ಲಿ ಬಾಣಾಸುರನನ್ನು ಅವನ ಅನುಯಾಯಿಗಳನ್ನೂ ಪರಾಜಯಗೊಳಿಸು. ಈ ಮಹಾಸಂಗ್ರಾಮದಲ್ಲಿ ನಿನ್ನನ್ನೆದುರಿಸುವವನು ಯಾರೂ ಇರುವುದಿಲ್ಲ.

**ಪ್ರಸಾದೇ ತೇ ಧ್ರುವಾ ಲಕ್ಷ್ಮೀಃ ವಿಜಯಶ್ಚ ಪರಾಕ್ರಮೇ ॥ 32 ॥**
**ವಿಜೇಷ್ಯಸಿ ರಣೇ ಶತ್ರುಂ ದೈತ್ಯೇಂದ್ರಂ ಸಹ ಸೈನಿಕಮ್ ॥ 33**

ನಿನ್ನ ಪ್ರಸಾದ ಗುಣದಲ್ಲಿಯೇ ಜಯಲಕ್ಷ್ಮಿ ಸ್ಥಿರವಾಗಿರುವಳು. ಪರಾಕ್ರಮದಲ್ಲಿ ವಿಜಯಲಕ್ಷ್ಮಿಯಿರುವವಳು. ನೀನು ಈ ಯುದ್ಧದಲ್ಲಿ ಬಾಣಾಸುರನನ್ನು ಅವನ ಸೈನಿಕ ವರ್ಗದವರನ್ನೂ ಗೆಲ್ಲುವೆ? ಎಂದು ಹೇಳಿತು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಶ್ರೀಕೃಷ್ಣನ ಯುದ್ಧೋದ್ಯೋಗ ಎಂಬಲ್ಲಿ
ನೂರಇಪ್ಪತ್ತೊಂದನೆಯ ಅಧ್ಯಾಯ ಸಮಾಪ್ತಿ

ಮೂರು ಲೋಕಗಳನ್ನು ನಿಗ್ರಹಿಸುವವನೂ, ಕ್ಷಮಾರೂಪ ಕೋಪವುಳ್ಳವನೂ, ತನಗೆ ಬೇಕು ಎಂಬ ಜ್ಞಾನ ನೀಡುವವನೂ, ಸರ್ವಮನೋರಥ ಈಡೇರಿಸುವವನೂ ಸಮ್ಯಕ್ ವರ್ತನೆ, ಇತರ ವರ್ತನೆಗೂ ಪ್ರಲಯನೂ ಆಶ್ರಯನೂ ನೀನೇ ಕಾರಣನು. ಬ್ರಹ್ಮನಲ್ಲಿರುವ ನಿನಗೆ ಬ್ರಹ್ಮನೆಂದೂ, ಸಮಸ್ತ ಪ್ರಾಣಿ ಸ್ವರೂಪ ತಿಳಿದವನೂ, ಸುಂದರರೂಪನೂ, ಮಧುಸೂದನನೂ, ರುದ್ರನೂ, ಮಹಾದೇವನೂ, ಅನಂತಾನಂತ ಗುಣಿಯೂ ಆಗಿರುವ ನೀನು ನನ್ನನ್ನು ಸ್ತುತಿ ಮಾಡುವುದು ಉಚಿತವೆ ಸ್ವಾಮಿ.

**ಚಕ್ಷುಷಾ ಯೇ ತ್ವಯಾ ಘೋರಾಃ ಪ್ರಾಣಿನೋ ಹಿ ನಿರೀಕ್ಷಿತಾಃ ।**
**ಇಹ ಚ ಪ್ರೇತ್ಯ ತೇ ಸರ್ವೇ ಸರ್ವಥಾ ಸ್ವರ್ಗಾಮಿನಃ ॥ 29 ॥**

ನಿನ್ನ ಕೋಪಾಗ್ನಿಗೆ ಆಹುತಿಯಾದ ಪ್ರಾಣಿಗಳು, ಘೋರದೈತ್ಯರೂ ಸಹ ಆ ಪಾಪಿಗಳು ಯಮದಂಡದಿಂದ ಸತ್ತಂತೆಯೆ ಸರಿ. ಮುಂದೆ ಅವರು ಪಶುಪ್ರಾಣಿಗಳ ರೂಪವಾದ ತಿರ್ಯಗ್ಯೋನಿಯಲ್ಲಿ ಹುಟ್ಟುವರು.

ಆದರೆ ನೀನು ಯಾವ ಪ್ರಾಣಿಗಳನ್ನು ಪ್ರೀತಿಯಿಂದ ದಯೆಯಿಂದ ನೋಡುವಿಯೋ ಅಂತಹವರು ಈ ಲೋಕ ಹಾಗೂ ಪರಲೋಕದಲ್ಲಿಯೂ ಸುಖವಾಗಿರುವರು. ಆದ್ದರಿಂದ ನಾನು ನಿನ್ನ ಅಧೀನ. ನಿನ್ನ ಆದೇಶವನ್ನು ಪಾಲಿಸುವೆ ಎಂದು ಹೇಳಿ ಪುನಃ "ಶ್ರೀಕೃಷ್ಣನೇ! ನಾನು ಪ್ರಯಾಣಕ್ಕೆ ಸಿದ್ಧನಾಗಿರುವೆ. ನನ್ನ ಮೇಲೆ ಕುಳಿತುಕೊಳ್ಳಬಹುದು" ಎಂದಾಗ,

**ಅಯಮಸ್ಮಿ ಸ್ಥಿತೋ ವೀರ! ಆರುಹಸ್ವ ಮಹಾಬಲ ।**

ಶ್ರೀಕೃಷ್ಣನು, ಗರುಡನೇ! ಶತ್ರುಗಳ ನಾಶಕ್ಕಾಗಿ ಈ ಅರ್ಘ್ಯವನ್ನು ಸ್ವೀಕರಿಸು ಎಂದು ಗರುಡನಿಗೆ ಅರ್ಘ್ಯವನ್ನು ನೀಡಿ, ಗರುಡನ ಭುಜಗಳ ಮೇಲೇರಿ ಕುಳಿತನು.

**ಆರುರೋಹ ಮಹಾಬಾಹುಃ ಸುಪರ್ಣಂ ಪುರುಷೋತ್ತಮಃ ।**
**ಕೃಷ್ಣಕೇಶಃ ಪ್ರವಲಯೋ ವಿಷ್ಣುಃ ಕೃಷ್ಣಶ್ಚ ವರ್ಣತಃ ॥ 30 ॥**

ಪುರುಷೋತ್ತಮನಾದ ಶ್ರೀಕೃಷ್ಣನು ಪಕ್ಷ್ಯುತ್ತಮ ಗರುಡನ ಮೇಲೇರಿದನು. ಕೃಷ್ಣಕೇಶನಾಧ ವಿಷ್ಣುವೆ ಈ ಶ್ರೀಕೃಷ್ಣನು ಹಾಗೂ ವರ್ಣದಿಂದಲೂ ಕೃಷ್ಣನೆ ಆಗಿರುವನು. ವರಾಹ ಹಾಗೂ ನೃಸಿಂಹಾವತಾರದಲ್ಲಿ ಎರಡೆರಡು ಕೋರೆಹಲ್ಲುಗಳುಳ್ಳವನೂ, ಚತುರ್ಬಾಹುವೂ ಚತುರ್ವೇದ ಹಾಗೂ ಶಿಕ್ಷಾದಿ

ಆರು ಅಂಗಗಳನ್ನು ತಿಳಿದವನೂ, ಶ್ರೀವತ್ಸಚಿಹ್ನಿತನೂ, ಕಮಲದಂತೆ ನೇತ್ರನೂ, ವರಾಹಾದಿಗಳಲ್ಲಿ ಮೇಲ್ಮುಖನಾಗಿ ನಿಮಿರಿನಿಂತ ರೋಮ-ವುಳ್ಳವನೂ, ಮೃದುವಾದ ಚರ್ಮವುಳ್ಳವನೂ, ಸಮಾನ ಹಾಗೂ ಸುಂದರ ಬೆರಳುಗಳುಳ್ಳವನೂ, ಸಮಾನ ನುಗಳೂ ಹಾಗೂ ಕೆಂಪಾದದ್ದು, ಸ್ನಿಗ್ಧವಾದ ಗಂಭೀರ ಮಾತುಗಳೂ ಪೀನವೃತ್ತವಾದ ಭುಜಗಳು ಜಗದ್ರಕ್ಷಣೆಯಲ್ಲಿಯೇ ಉದ್ಯೋಗಶೀಲವಾದವುಗಳು, ಆಜಾನುಬಾಹುವೂ, ಅರವಿಂದದಂತಿರುವ ಮುಖವು, ಸಿಂಹದ ನಡಿಗೆ, ಸಿಂಹ ಪರಾಕ್ರಮವೂ, ಸಾವಿರಾರು ಸೂರ್ಯರಂತೆ ಕಾಂತಿಯೂ, ವಾಮನನಾದಾಗ ಕಶ್ಯಪರು ನೀಡಿದ ಅಷ್ಟಸಿದ್ಧವುಳ್ಳವನೂ, ಬ್ರಹ್ಮಾದಿ ದೇವತಾ ಪೂಜ್ಯನೂ ಆಗಿದ್ದನು. ಶ್ರೀಕೃಷ್ಣನ ಹಿಂದೆ ಬಲರಾಮನು ಅವನ ಹಿಂದೆ ಪ್ರದ್ಯುಮ್ನನನೂ ಕುಳಿತರು.

ಅಶರೀರವಾಣಿ

**ಜಯ ಬಾಣಂ ಮಹಾಬಾಹೋ ಯೋ ಚಾಸ್ಯಾನುಗತಾ ರಣೇ ।**
**ನ ಹಿ ತೇ ಪ್ರಮುಖೇ ಸ್ಥಾತುಂ ಕಶ್ಚಿತ್ ಶಕ್ತೋ ಮಹಾಮೃಧೇ ॥ 31 ॥**

ಈ ಮಧ್ಯದಲ್ಲಿ ಅಶರೀರವಾಣಿಯು – ವಾಸುದೇವನೇ! ನೀನು ಯುದ್ಧದಲ್ಲಿ ಬಾಣಾಸುರನನ್ನು ಅವನ ಅನುಯಾಯಿಗಳನ್ನೂ ಪರಾಜಯಗೊಳಿಸು. ಈ ಮಹಾಸಂಗ್ರಾಮದಲ್ಲಿ ನಿನ್ನನ್ನೆದುರಿಸುವವನು ಯಾರೂ ಇರುವುದಿಲ್ಲ.

**ಪ್ರಸಾದೇ ತೇ ಧ್ರುವಾ ಲಕ್ಷ್ಮೀಃ ವಿಜಯಶ್ಚ ಪರಾಕ್ರಮೇ ॥ 32 ॥**
**ವಿಜೇಷ್ಯಸಿ ರಣೇ ಶತ್ರುಂ ದೈತ್ಯೇಂದ್ರಂ ಸಹ ಸೈನಿಕಮ್ ॥ 33**

ನಿನ್ನ ಪ್ರಸಾದ ಗುಣದಲ್ಲಿಯೇ ಜಯಲಕ್ಷ್ಮಿ ಸ್ಥಿರವಾಗಿರುವಳು. ಪರಾಕ್ರಮದಲ್ಲಿ ವಿಜಯಲಕ್ಷ್ಮಿಯಿರುವವಳು. ನೀನು ಈ ಯುದ್ಧದಲ್ಲಿ ಬಾಣಾಸುರನನ್ನು ಅವನ ಸೈನಿಕ ವರ್ಗದವರನ್ನೂ ಗೆಲ್ಲುವೆ? ಎಂದು ಹೇಳಿತು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಶ್ರೀಕೃಷ್ಣನ ಯುದ್ಧೋದ್ಯೋಗ ಎಂಬಲ್ಲಿ
ನೂರಇಪ್ಪತ್ತೊಂದನೆಯ ಅಧ್ಯಾಯ ಸಮಾಪ್ತಿ

# ಅಥ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ

*ವೈಶಂಪಾಯನ ಉವಾಚ –*

**ತತಃ ತೂರ್ಯನಿನಾದೈಶ್ಚ ಶಂಖಾನಾಂ ಚ ಮಹಾಸ್ವನೈಃ ।**
**ವಂದಿಮಾಗದ ಸೂತಾನಾಂ ಸ್ತವೈಶ್ಚಾಪಿ ಸಹಸ್ರಶಃ ॥ 1 ॥**

**ಅಥಾಷ್ಟಬಾಹುಃ ಕೃಷ್ಣಸ್ತು ಪರ್ವತಾಕಾರ ಸನ್ನಿಭಃ ।**
**ವಿಬಭೌ ಪುಂಡರೀಕಾಕ್ಷೋ ವಿಕಾಂಕ್ಷನ್ ಬಾಣ ಸಂಕ್ಷಯಮ್ ॥ 2 ॥**

ವೈಶಂಪಾಯನರು ಜನಮೇಜಯನನ್ನು ಕುರಿತು ರಾಜನೇ! ಕೃಷ್ಣನು ಹೊರಡಲುನುವಾದಾಗ ನಾನಾ ವಿಧ ವಾದ್ಯಗಳು, ಗಂಭೀರವಾದ ಶಂಖಧ್ವನಿ, ವಂದಿ ಮಾಗಧರ ಸ್ತೋತ್ರಗಳ ಮೂಲಕ ಕೃಷ್ಣನನ್ನು ಸ್ತುತಿಸಲಾರಂಭಿಸಿದರು. ತಲೆಯನ್ನು ಮೇಲಕ್ಕೆತ್ತಿ ಶ್ರೀಕೃಷ್ಣನನ್ನೆ ನೋಡುತ್ತಿದ್ದ ಕೆಲವರು ಶ್ರೀಕೃಷ್ಣನಿಗೆ ಜಯವಾಗಲಿ ಎಂದು ಹರಸಿದರು. ಆ ಸಮಯದಲ್ಲಿ ಸೂರ್ಯ, ಚಂದ್ರ, ಶುಕ್ರರಂತೆ ಶ್ರೀಕೃಷ್ಣನು ತೇಜಸ್ಸಿನಿಂದ ಬೆಳಗುತ್ತಿದ್ದನು. ಹರಿಯ ತೇಜಸ್ಸಿನಿಂದ ಗರುಡನೂ ಬೆಳಗುತ್ತಿದ್ದನು. ಎಂಟು ಬಾಹುಗಳಿಂದ ಕೂಡಿದ ಶ್ರೀಕೃಷ್ಣನು ಬಾಣನ ವಿನಾಶವನ್ನೇ ಆಶಿಸುತ್ತಾ ಪರ್ವತಾಕಾರವಾಗಿ ಮೆರೆಯುತ್ತಿದ್ದನು.

ಕತ್ತಿ, ಚಕ್ರ, ಗದೆ, ಬಾಣಗಳನ್ನು ಬಲಭಾಗದಲ್ಲಿಯೂ, ಗುರಾಣಿ, ಧನಸ್ಸು, ವಜ್ರಾಯುಧ, ಶಂಖವನ್ನು ಎಡ ನಾಲ್ಕು ಕೈಗಳಲ್ಲಿ ಧರಿಸಿದ್ದನು.

ಈ ಸಮಯದಲ್ಲಿ ಅನಂತಾನಂತ ಶಿರಸ್ಸನ್ನು ಅಭಿವ್ಯಕ್ತಗೊಳಿಸಿದ್ದನು.

ಬಲರಾಮನಾದರೂ ಸಾವಿರ ಸರ್ಪ ಶರೀರ ಹೊಂದಿದ್ದನು. ಧವಲ ವರ್ಣದ ಬಲರಾಮನು ಆಯುಧಗಳನ್ನು ಧರಿಸಿ ಕೈಲಾಸದಂತೆಯೂ, ಉದಯಾಚಲ ಚಂದ್ರಮನಂತೆಯೂ ಕಂಡನು.

ಸಂಗ್ರಾಮಕ್ಕೆ ಹೊರಟಿರುವ ಪ್ರದ್ಯುಮ್ನನಲ್ಲಿ ಸನತ್ಕುಮಾರವೆಂಬ ಭಗವದ್ರೂಪ ಸನ್ನಿಹಿತವಾಗಿತ್ತು.

ಮಹಾಬಲಿಷ್ಠ ಗರುಡನು ತನ್ನ ಪಕ್ಷಗಳ ಅಭಿಘಾತದಿಂದ ಪರ್ವತಗಳನ್ನೆ ಕಂಪಿಸುವಂತೆ ಮಾಡುತ್ತಾ ವೇಗವಾಗಿ ಹೋಗುತ್ತಿದ್ದನು. ನೋಡುವವರಿಗೆ ವಾಯುವಿನಿಗಿಂತಲೂ ತೀವ್ರ ವೇಗದಿಂದ ಹೋಗುತ್ತಿರುವಂತೆ ತೋರುತಿದ್ದನು. ಈ ಸಮಯದಲ್ಲಿ ಬಲರಾಮನು ಕೃಷ್ಣನನ್ನು ಕುರಿತು ಹೀಗೆಂದನು,

**ಸ್ವಾಭಿಃ ಪ್ರಭಾಭಿರ್ಹೀನಾಃ ಸ್ಮ ಕೃಷ್ಣ ಕಸ್ಮಾದ್ ಅಪೂರ್ವವತ್ ।**
**ಸರ್ವೇ ಕನಕವರ್ಣಾಭಾಃ ಸಂವೃತ್ತಾಃ ಸ್ಮ ನ ಸಂಶಯಃ ॥ 3 ॥**
**ಕಿಮಿದಂ ಬ್ರೂಹಿ ನಸ್ತ್ವಂ ಮೇರೋ ಪಾರ್ಶ್ವಗಾ ವಯಮ್ ।**

ಕೃಷ್ಣನೇ! ನಾವೆಲ್ಲರೂ ನಮ್ಮ ಸ್ವಾಭಾವಿಕ ಕಾಂತಿಯನ್ನೂ ಕಳೆದುಕೊಂಡು ಸುವರ್ಣದಂತೆ ಕಾಂತಿವುಂಟಾಗಿದೆ. ಇದಕ್ಕೇನು ಕಾರಣವಿರಬಹುದು? ಬಹುಶಃ ನಾವು ಸುವರ್ಣಗಿರಿ ಮೇರುವಿನ ಪಾರ್ಶ್ವದಲ್ಲಿರಬಹುದೆ? ಎಂದಾಗ ಶ್ರೀಕೃಷ್ಣನು ಹಾಗೇನಿಲ್ಲ. ನಾವು ಈಗ ಬಾಣನ ಶೋಣಿತಪುರದ ಸಮೀಪ ಬಂದಿರಬಹುದು. ಏಕೆಂದರೆ ಅವನ ನಗರಿಯನ್ನು ರಕ್ಷಿಸುತ್ತಿರುವ ಅಹವನೀಯಾಗ್ನಿಯ ಕಾಳ, ಕರಾಳ ಮೊದಲಾದ ಸಪ್ತಜ್ವಾಲೆಯು ನಮ್ಮ ಮೇಲೆ ಬಿದ್ದಿರಬಹುದು. **[ರಕ್ಷಾರ್ಥಂ ತಸ್ಯ ನಿರ್ಯಾತೋ ವಹ್ನಿಃ]**

ಆಹವನೀಯಾಗ್ನಿಯ ಪ್ರಭೆಯೆ ಇದು. ನಮ್ಮ ಮೇಲೆ ಬಿದ್ದಿದೆ ಎಂದಾಗ ಬಲರಾಮನು ಅಗ್ನಿಯ ಕಾಂತಿಯಿಂದ ನಾವು ನಿಸ್ತೇಜಸ್ಕರಾಗಿದ್ದರೆ ನಾವೇನು ಮಾಡಬೇಕೆಂದು ತಿಳಿಸು ಎಂದಾಗ ಶ್ರೀಕೃಷ್ಣನು ಗರುಡನಿಗೆ ವಿನತಾಪುತ್ರನೇ! ನೀನು ಉಪಯಾಂತರದಿಂದ ಅಗ್ನಿಯ ಜ್ವಾಲೆಯನ್ನೂ ಮುಂದೆ ಚಾಚಿಕೊಂಡು ಬರುತ್ತಿರುವ ಅಗ್ನಿಯನ್ನೂ ಶಾಂತಗೊಳಿಸು. ಮುಂದಿನ ಕಾರ್ಯ ನಾನು ನೋಡಿಕೊಳ್ಳುತ್ತೇನೆ ಎಂದನು. ಶ್ರೀಕೃಷ್ಣನ ಮಾತಿನಂತೆ ಕಾಮರೂಪ ಧರಿಸಬಲ್ಲ ಗರುಡನು ಕೂಡಲೇ ಸಾವಿರಾರು ಮುಖಗಳನ್ನು ಧರಿಸಿ ಸಹಸ್ರಮುಖ ಗರುಡನಾದನು.

**ಚಕ್ರೇ ಮುಖಸಹಸ್ರಂ ಹಿ ಕಾಮರೂಪೀ ಮಹಾಬಲಃ ।**

ಕೂಡಲೇ ಆಕಾಶಗಂಗೆಗೆ ಧಾವಿಸಿ ಹೋಗಿ ಅಲ್ಲಿ ಇಳಿದು ಸಾವಿರ ಮುಖಗಳಿಂದಲೂ ನೀರನ್ನು ಕುಡಿದು, ಶೋಣಿತಪುರದ ಸುತ್ತಲೂ ಹರಡಿರುವ ಅಗ್ನಿಯ ಮೇಲೆ ವರ್ಷಿಸಿದನು. ಇದರಿಂದಾಗಿ ಅಗ್ನಿಯು ಶಾಂತನಾಗಿ ಹೋದನು. [**ತತಃ ಅಗ್ನಿಃ ಶಾಂತಿ ಮುಪಾಗಮತ್**]

**ಆಪ್ಲುತ್ಯ ಆಕಾಶಗಂಗಾಯಾಮ್ ಆಪೀಯ ಸಲಿಲಂ ಬಹು ।**
**ತೇನಾಗ್ನಿಂ ಶಮಯಾಮಾಸ ಬುದ್ಧಿಮಾನ್ ವಿನತಾತ್ಮಜಃ ॥ 4 ॥**

ಆಕಾಶ ಗಂಗಾಜಲದಿಂದ ಆಹವನೀಯಾಗ್ನಿಯು ಶಾಂತವಾದದ್ದನ್ನು ನೋಡಿ ಅತ್ಯಾಶ್ಚರ್ಯ ಹೊಂದಿದ ಗರುಡನು ಭಗವಂತನಿಗೆ ಹೀಗೆಂದನು.

**ಅಹೋ ವೀರ್ಯಮಥಾಗ್ನೇಸ್ತು ಯೋ ದಹೇದ್ ಯುಗ ಸಂಕ್ಷಯೇ ।**
**ಯಥೇಹ ವರ್ಣವೈರೂಪ್ಯಂ ಚಕ್ರೇ ಕೃಷ್ಣಸ್ಯ ಧೀಮತಃ ॥ 5 ॥**

ಅಹೋ! ಅಗ್ನಿಯ ತೇಜಸ್ಸು ಅನ್ಯಾದೃಶವಾದದ್ದು. ಪ್ರಲಯಕಾಲದಲ್ಲಿ ಜಗತ್ತನ್ನೆ ಕಬಳಿಸುವ ಇವನು ಮಹಾನುಭಾವನಾದ ಶ್ರೀಕೃಷ್ಣನ ಇಂದ್ರನೀಲ ಕಾಂತಿಯನ್ನೆ ತನ್ನ ಸುವರ್ಣಕಾಂತಿಯಿಂದ ಸುವರ್ಣಮಯವನ್ನಾಗಿಸಿದ್ದಾನೆ. ಇಂತಹ ಮಹಾಪರಾಕ್ರಮಿಯೂ ನಾನು ತಂದ ನೀರಿನಿಂದ ಶಾಂತನಾದನೆಂದರೆ ಇದು ಶ್ರೀಕೃಷ್ಣನ ಪ್ರಭಾವ ಹೊರತು ನನ್ನದಲ್ಲ. ಆದ್ದರಿಂದ ಶ್ರೀಕೃಷ್ಣ – ಬಲರಾಮ – ಪ್ರದ್ಯುಮ್ನ ಈ ತ್ರೇತಾಗ್ನಿ ವರ್ಚಸ್ಕರಾದ ಈ ಮೂವರು, ಮೂರು ಲೋಕಗಳನ್ನೂ ಗೆಲ್ಲಬಲ್ಲರು, ಶೋಣಿತಪುರ ಇವರಿಗೇನು ಲೆಕ್ಕ!

**ತ್ರಯಃ ತ್ರಯಾಣಾಂ ಲೋಕಾನಾಂ ಪರ್ಯಾಪ್ತಾ ಇತಿ ಮೇ ಮತಿಃ ।**

ಹೀಗೆ ಗರುಡನಿಂದ ಅಗ್ನಿಯು ಶಾಂತವಾದ ಮೇಲೆ ರೆಕ್ಕೆಗಳನ್ನು ಬೀಸುತ್ತಾ ಭಯಂಕರ ಶಬ್ದದೊಂದಿಗೆ ಮುಂದೆ ಹೊರಟನು. ಗರುಡನ ಮೇಲೆ ಕುಳಿತಿರುವ ಈ ಮೂವರನ್ನೂ ನೋಡಿದ ರುದ್ರನ ಅಗ್ನಿಗಣಗಳು ಅಚ್ಚರಿ ಹೊಂದಿದವು.

### ರುದ್ರಗಣದ ಯುದ್ಧೋದ್ಯೋಗ

ನಾನಾ ರೂಪಧರಿಸಿ ಗರುಡಾರೂಢರಾಗಿ ಬಂದಿರುವ ಇವರ್ಯಾರು? ಎಲ್ಲಿಂದ ಬಂದವರು ಎಂದಲೋಚಿಸಿದರು. ಅವರಿಗೆ ಇವರು ಯಾರೆಂದು ಊಹಿಸಲಾಗಲಿಲ್ಲ. ಅದಕ್ಕಾಗಿ ಅವರ ಮೇಲೆ ಯುದ್ಧಕ್ಕೆ ಅಣಿಯಾದರು.

ಸಿಂಹಗಳ ಗರ್ಜನೆಯಂತಿರುವ ರುದ್ರಾನುಚರರ ಸಿಂಹನಾದ ಕೇಳಿದ ಅಂಗೀರಸನು ತನ್ನ ಸಂಬಂಧಿ ಪುರುಷನನ್ನು ಅಲ್ಲಿಗೆ ಕಳುಹಿಸುತ್ತಾ ಹೀಗೆಂದನು.

**ಯತ್ರ ಯದ್ ವರ್ತತೇ ಯುದ್ಧಂ ತತ್ರ ಗಚ್ಛಸ್ವ ಮಾ ಚಿರಮ್ ।**
**ದೃಷ್ಟ್ವಾ ತತ್ಸರ್ವಮಾಗಚ್ಛ ಇತ್ಯುಕ್ತಃ ಪ್ರಹಿತಸ್ತ್ವರನ್ ॥ 6 ॥**

ಭೃತ್ಯನೇ! ಈ ಮೂವರು ಪುರುಷರ ಯುದ್ಧವೆಲ್ಲಿ ನಡೆಯುವುದೊ ಅಲ್ಲಿಗೆ ನೀನು ಶೀಘ್ರವಾಗಿ ಹೋಗಿ, ಎಲ್ಲವನ್ನೂ ನೋಡಿಕೊಂಡು ಇಲ್ಲಿಗೆ ಬೇಗನೆ ಬಾ ಎಂದು. ಹಾಗೆಯೆ ಆಗಲೆಂದು ದೂತನು, ಯುದ್ಧಭೂಮಿಗೆ ಬಂದು ಶ್ರೀಕೃಷ್ಣ ಹಾಗೂ ಅಗ್ನಿಗಣಗಳು ಯುದ್ಧ ಮಾಡುತ್ತಿರುವುದನ್ನು ನೋಡಿದನು.

**ತೇ ಜಾತವೇದಸಃ ಸರ್ವೇ ಕಲ್ಮಾಷಃ ಕುಸುಮಸ್ತಥಾ ।**
**ದಹನಃ ಶೋಷಣಶ್ಚೈವ ತಪನಶ್ಚ ಮಹಾಬಲಃ ॥ 7 ॥**

ಶ್ರೀಕೃಷ್ಣನೊಂದಿಗೆ ಯುದ್ಧ ಮಾಡುತ್ತಿದ್ದವರು ಕಲ್ಮಾಷ, ಕುಸುಮ, ದಹನ, ಶೋಷಣ ಹಾಗೂ ತಪನರೆಂಬ ಜಾತವೇದಾಗ್ನಿಗಳಾಗಿದ್ದರು. ಇವರೆಲ್ಲರೂ ಸ್ವಾಹಾಕಾರದ ವಿಷಯದಲ್ಲಿ ಪ್ರಖ್ಯಾತರು. ಇವರಲ್ಲದೆ ಇತರರಾದ ಪಿಠರ, ಪತಗ, ಸ್ವರ್ಣ, ಶ್ವಾಗಾಧ, ಹಾಗೂ ಭ್ರಾಜರೆಂಬ ಪಂಚಾಗ್ನಿಗಳು ಈ ಯುದ್ಧದಲ್ಲಿ ತೊಡಗಿದ್ದರು. ಇವರಾದರೂ ಸ್ವಧಾಕಾರ ವಿಷಯದಲ್ಲಿ ಪ್ರಸಿದ್ಧರು ಇವರಲ್ಲದೆ ವಷಟ್ಕಾರಾವಲಂಬಿಗಳಾದ ಜ್ಯೋತಿಷ್ಟೋಮ ಹಾಗೂ ವಿಭಾಗರೆಂಬ ಮಹಾತೇಜಸ್ಕರೂ ಶ್ರೀಕೃಷ್ಣನೊಂದಿಗೆ ಯುದ್ಧ ಮಾಡುತ್ತಿದ್ದರು.

ಅಂಗೀರಸನ ದೂತನು ಈ ಯುದ್ಧವನ್ನೆಲ್ಲ ನೋಡಿ ಕೂಡಲೇ ಅಂಗೀರಸನಿಗೆ ತಿಳಿಸಿದನು. ಈ ಅಂಗೀರಸನೂ ಅಗ್ನಿಗಳಲ್ಲಿ ಪ್ರಮುಖನಾಗಿದ್ದು 'ಅಗ್ನೇಯ'ವೆಂಬ ರಥದಲ್ಲಿ ಕುಳಿತು ದೇದೀಪ್ಯಮಾನವಾದ ಬಾಣವೊಂದನ್ನು ಹಿಡಿದು ಅಗ್ನಿಗಣಗಳು ಹಾಗೂ ಶ್ರೀಕೃಷ್ಣರ ಮಧ್ಯೆ ಬಂದು ನಿಂತು, ನಿರಂತರ ಬಾಣಗಳನ್ನು ಕೃಷ್ಣನ ಮೇಲೆಸೆದನು. ಇದನ್ನು ನೋಡಿ ಕೃಷ್ಣನು ನಗುತ್ತಾ ಹೀಗೆಂದನು.

**ತಿಷ್ಠಧ್ವಮಗ್ನಯಃ ಸರ್ವೇ ಏಷ ವೋ ವಿದಧೇ ಭಯಮ್ ।**
**ಮಮಾಸ್ತ್ರ ತೇಜಸಾ ದಗ್ಧಾ ದಿಶೋ ಯಾಸ್ಯಥ ವಿದ್ರುತಾಃ ॥ 8 ॥**

ಅಗ್ನಿಗಳೇ, ನೀವು ಇಲ್ಲಿಯೆ ನಿಲ್ಲಿರಿ. ಓಡಿ ಹೋಗಬೇಡಿ. ಈಗ ನಾನು ನಿಮಗೆ

ಭಯವನ್ನುಂಟು ಮಾಡುವೆ. ನಾನು ಬಿಡುವ ಅಸ್ತ್ರಗಳ ತೇಜಸ್ಸು ನಿಮ್ಮನ್ನು ಸುಡದೆ ಬಿಡದು. ಇದರಿಂದಾಗಿ ದಿಕ್ಕಾಪಾಲಾಗಿ ಓಡುವುದು ನಿಶ್ಚಿತ ಎಂದನು.

## ಕೃಷ್ಣ ಹಾಗೂ ಅಗ್ನಿಗಳ ಯುದ್ಧ

ಶ್ರೀಕೃಷ್ಣನ ಮಾತನ್ನು ಕೇಳಿ ಕ್ರುದ್ಧರಾದ ಅಂಗೀರಸ ಋಷಿಯು ಫಳಫಳ ಹೊಳೆಯುವ ತ್ರಿಶೂಲವನ್ನು ಕೈಯಲ್ಲಿ ಹಿಡಿದು ಕೃಷ್ಣನನ್ನು ಕೊಲ್ಲಲು ಅವನ ಕಡೆಗೆ ನುಗ್ಗಿ ಬಂದನು. ಆದರೆ ಕೂಡಲೇ ಕೃಷ್ಣನು ಯಮದಂಡೋಪಮವಾದ ಎರಡು ಅರ್ಧಚಂದ್ರಾಕಾರದ ಬಾಣದಿಂದ ಆ ತ್ರಿಶೂಲವನ್ನು ತುಂಡರಿಸಿದನು. ನಂತರ 'ಸ್ಥೂಣಾಕರ್ಣ'ವೆಂಬ ನಾಮದ ಬಾಣವನ್ನು ಅಂಗೀರಸನ ಎದೆಗೆ ಹೊಡೆದನು. ಇದರಿಂದಾಗಿ ಅಂಗೀರಸನು ಭೂಮಿಯ ಮೇಲೆ ಬಿದ್ದನು. ನಂತರ ಉಳಿದ ನಾಲ್ಕು ಅಗ್ನಿಗಳು ವೇಗವಾಗಿ ಬಾಣಾಸುರನ ನಗರದ ಬಳಿ ನಿಂತರು.

**ಸ್ಥೂಣಾಕರ್ಣೇನ ಬಾಣೇನ ದೀಪ್ತೇನ ಸ ಮಹಾಮನಾಃ ।**
**ವಿವ್ಯಾಧಾಂತಕ ತುಲ್ಯೇನ ವಕ್ಷಸ್ಯಂಗಿರಸಂ ತತಃ ॥ 9 ॥**
**ವಿಷ್ಟಬ್ಧಗಾತ್ರಃ ಸಹಸಾ ಪಪಾತ ಧರಣೀತಲೇ ।**

ನಂತರ ಬಾಣಾಸುರನ ಶೋಣಿತಪುರಕ್ಕೆ ಶ್ರೀಕೃಷ್ಣನೂ ಬಂದು ಸೇರಿದನು. ಬಾಣನ ಪಟ್ಟಣವನ್ನು ದೂರದಿಂದಲೇ ನೋಡಿದ ನಾರದರು ಕೇಶವನೇ! ನೋಡು ಇದೇ ಶೋಣಿತಪುರ. ಬಾಣನ ರಾಜಧಾನಿ. ಇಲ್ಲಿಯೆ ಬಾಣನಿಗೆ ಮೆಚ್ಚಿದ ಶಿವ–ಪಾರ್ವತಿಯರು ವಾಸಿಸುತ್ತಿದ್ದರು.

**ಏತತ್ ತಚ್ಛೋಣಿತಪುರಂ ಕೃಷ್ಣ ಪಶ್ಯ ಮಹಾಭುಜ ।**
**ಅತ್ರ ರುದ್ರೋ ಮಹಾತೇಜಾ ರುದ್ರಾಣ್ಯಾ ಸಹಿತೋಽವಸತ್ ॥ 10 ॥**

ಸ್ಕಂಧದೇವನೂ ಸಹ ಬಾಣನ ರಕ್ಷಣೆಗಾಗಿ ಕಟಿಬದ್ಧನಾಗಿ ಇಲ್ಲಿರುವನು. *[ಗುಹಶ್ಚ ಬಾಣಗುಪ್ತ್ಯರ್ಥಂ]* ಎಂದಾಗ ಶ್ರೀಕಷ್ಣನು ಇಂತಹ ಲಕ್ಷಮಂದಿ ರುದ್ರರಿದ್ದರೂ ನನಗೆ ಭಯವಿಲ್ಲವೆಂಬಂತೆ ನಗುತ್ತಾ ಹೇಳಿದನು.

ನಾರದರೇ! ಬಾಣಾಸುರನ ಸಂರಕ್ಷಣೆಗಾಗಿ ರುದ್ರನೇನಾದರೂ ನಮ್ಮೊಂದಿಗೆ ಯುದ್ಧ ಮಾಡಲು ಬಂದರೆ ನಾವೂ ಅವನೊಂದಿಗೆ ಯುದ್ಧ ಮಾಡುವುದು. ಹೀಗೆ ಸಮಾಲೋಚನೆಯಲ್ಲಿರುವಾಗಲೇ ವೇಗಶಾಲಿಯಾದ ಗರುಡನು ಶೋಣಿತಪುರ ಸೇರಿಸಿಬಿಟ್ಟನು.

## ಕೃಷ್ಣನ ಶಂಖನಾದ

ನಂತರ ಶ್ರೀಕೃಷ್ಣನು ತನ್ನ ಬಂದಿರುವಿಕೆಯನ್ನು ಸೂಚಿಸುವಂತೆ ತನ್ನ ಪಾಂಚಜನ್ಯವನ್ನೂದಿದನು. *[ತತಃ ಶಂಖಂ ಸಮಾಧಾಯ ವದನೇ]*

ಅದನ್ನು ನೋಡಿದಾಗ ವಾಯುವೇಗದಿಂದ ಉದ್ಧೂತವಾದ ಮೇಘವು ಚಂದ್ರನನ್ನು ಹೊರಹಾಕುವಂತಿತ್ತು. *[ಮೇಘಃ ಚಂದ್ರಮಿವ ಉದ್ಗಿರನ್]*

ಹೀಗೆ ಶಂಖವನ್ನು ಗಟ್ಟಿಯಾಗಿ ಊದಿ ಶತ್ರುಗಳ ಹೃದಯದಲ್ಲಿ ಭಯದ ಮುದ್ರೆಯೊತ್ತಿದನು. ನಂತರ ಶ್ರೀಕೃಷ್ಣನು ಬಾಣಾಸುರನ ನಗರದೊಳಗೆ ಪ್ರವೇಶಿಸಿದನು.

**ಪ್ರವಿವೇಶ ಪುರಂ ಕೃಷ್ಣೋ ಬಾಣಸ್ಯಾದ್ಭುತಕರ್ಮಣಃ ।**

ನಂತರ ಶಂಖಧ್ವನಿಗಳು, ಭೇರಿಗಳು ಮೊಳಗಿದವು ಇದರಿಂದ ಪ್ರಚೋದಿತ-ರಾದ ಬಾಣನ ಸೈನ್ಯವು ಕವಚಾದಿಗಳನ್ನು ಧರಿಸಿ ಯುದ್ಧ ಸನ್ನದ್ಧವಾಯಿತು. ಬಾಣಸುರನು ಭಯ ಹೊಂದಿ ತನ್ನ ಕಿಂಕರರೆಂಬ ಸೈನ್ಯಗೆ ಯುದ್ಧ ಮಾಡಲು ಆದೇಶಿಸಿದನು. ಈ ಸೈನ್ಯವಾದರೂ ಕೋಟಿ ಕೋಟಿ ಸಂಖ್ಯೆಯಲ್ಲಿತ್ತು. ಅಸ್ತ್ರ-ಶಸ್ತ್ರಗಳಿಂದ ಯುಕ್ತವಾಗಿತ್ತು. ಈ ಸೈನ್ಯವು ಅಕ್ಷಯವಾಗಿದ್ದು ದೈತ್ಯ-ದಾನವ - ರಾಕ್ಷಸರಿಂದ ಕೂಡಿತ್ತು. ಇದರೊಂದಿಗೆ ರುದ್ರದೇವನ ಪ್ರಮಥಗಳ ಪ್ರಧಾನರೂ ಕೈಜೋಡಿಸಿದ್ದರು. ಇವರೆಲ್ಲರೂ ಶ್ರೀಕೃಷ್ಣನ ಮೇಲೆ ಬಿದ್ದರು. ಅಗ್ನಿಗಳಂತೆ ದೇದೀಪ್ಯಮಾನ ಆಯುಧ ಧರಿಸಿದ್ದ ಯಕ್ಷ, ರಾಕ್ಷಸ, ಸೈನಿಕರು ಶ್ರೀಕೃಷ್ಣ - ಬಲರಾಮ - ಪ್ರದ್ಯುಮ್ನ - ಗರುಡರ ಮೇಲೆರಗಿದರು.

ಬಲರಾಮನು ಶ್ರೀಕೃಷ್ಣನಿಗೆ ಈ ಸೈನ್ಯದವರಿಗೆ ಮಹಾಭಯವನ್ನುಂಟು ಮಾಡು ಎಂದನು.

**ಕೃಷ್ಣ ಕೃಷ್ಣ ಮಹಾಬಾಹೋ ವಿಧಸ್ತ್ವೈಷಾಂ ಮಹದ್ ಭಯಮ್ ॥ 11 ॥**

ಬಲರಾಮನು ಹೀಗೆ ಹೇಳದ ಕೂಡಲೇ ರಾಕ್ಷಸರ ನಿರ್ನಾಮಕ್ಕಾಗಿ ಆಗ್ನೇಯಾಸ್ತ್ರವನ್ನು ತೆಗೆದುಕೊಂಡನು. *[ತೇಷಂ ವಧಾರ್ಥಂ ಆಗ್ನೇಯಂ ಜಗ್ರಾಹ]*.

ಆಗ್ನೇಯಾಸ್ತ್ರ ತೇಜಸ್ಸಿನಿಂದ ಮಾಂಸ ಭಕ್ಷಕರಾದ ಸೈನಿಕರನ್ನು ನಾಶ ಮಾಡ-ಲಾರಂಭಿಸಿದನು. ಶೂಲ-ಪಟ್ಟಿಶ-ಶಕ್ತಿ ಮೊದಲಾದ ಆಯುಧಧಾರಿಗಳಾದ

ಅಪಾರ ಸೈನ್ಯವೆಲ್ಲವೂ – ವಾಯುವಿನ ವೇಗಕ್ಕೆ ಛಿನ್ನ ಭಿನ್ನವಾದ ಮೇಘಗಳಂತೆ ಕಾಣುತ್ತಿದ್ದವು. ಅವರ ತುಂಡಾದ ದೇಹಗಳು ಪರ್ವತೋಪಾಯದಿಯಲ್ಲಿದ್ದವು.

ಆಗ ಬಲರಾಮನು ಶ್ರೀಕೃಷ್ಣನೊಂದಿಗೆ ನಾನೂ ಈ ಸೈನ್ಯದೊಂದಿಗೆ ಹೋರಾಡುತ್ತೇನೆ ಎಂದನು. ಬಲರಾಮನೇ! ಈ ರಣಭೂಮಿಯಲ್ಲಿ ನಾನೂ ಯುದ್ಧ ಮಾಡುವ ಬಯಕೆ ಹೊಂದಿದ್ದೇನೆ. ನನಗೆ ಸಹಾಯಕರಾಗಿ ನನ್ನ ಮುಂದೆ ಗರುಡನೂ, ಎಡದಲ್ಲಿ ಪ್ರದ್ಯುಮ್ನನೂ, ಬಲಭಾಗದಲ್ಲಿ ನೀನು ಇರು. ನಾವು ನಮ್ಮ ರಕ್ಷಣೆ ಮಾಡಿಕೊಳ್ಳುತ್ತಲೆ ಶತ್ರುಗಳೊಡನೆ ಹೋರಾಡಬೇಕು.

ಹೀಗೆ ಹೇಳಿದ ಮೇಲೆ ಮೂವರು ಗರುಡನ ಮೇಲೇರಿಕೊಂಡು ಹೋರಾಟ ನಡೆಸಿದರು. ಬಲರಾಮನಾದರೂ ತನ್ನ ಮುಸಲ ನೇಗಿಲ ಹಿಡಿದು ಪ್ರಲಯಕಾಲೀನ ಕಾಲನಂತೆ ಶತ್ರುಗಳನ್ನು ಕೊಂದು ಹಾಕುತ್ತಿದ್ದ. ಹಲಾಯುಧದಿಂದ ಶತ್ರುಗಳನ್ನು ಸೆಳೆದು ಮುಸಲಾಯುಧದಿಂದ ತಲೆಯೊಡೆಯುತ್ತಿದ್ದನು.

ಇದೇ ರೀತಿ ಪ್ರದ್ಯುಮ್ನನೂ ಬಾಣಗಳನ್ನು ಪುಂಖಾನುಪುಂಖವಾಗಿ ಪ್ರಯೋಗಿಸುತ್ತಾ ಶತ್ರುಗಳನ್ನು ಕೊಲ್ಲುತ್ತಿದ್ದನು. ಶ್ರೀಕೃಷ್ಣನೂ ಸಹ ಆಗಾಗ್ಗೆ ಶಂಖನಾದದಿಂದ ಭಯಪಡಿಸುತ್ತಾ ಯುದ್ಧ ಮಾಡುತ್ತಿದ್ದನು. ಗರುಡನಾದರೂ ರೆಕ್ಕೆಗಳ ಪ್ರಹಾರದಿಂದಲೂ ತೀಕ್ಷ್ಣ ನಖಗಳಿಂದಲೂ, ಚೂಪಾದ ಕೊಕ್ಕಿನಿಂದ ಗಾಯಗೊಳಿಸುತ್ತಲೂ ಅನೇಕ ರಾಕ್ಷಸರನ್ನು ಕೊಂದು ಹಾಕಿದನು. ಹೀಗೆ ನಾಲ್ಕು ಮಂದಿಯಿಂದ ಬಾಣಾಸುರನ ಸೈನ್ಯ ವಿಧ್ವಂಸಗೊಂಡಿತು.

## ಶೈವಜ್ವರ ಯುದ್ಧ

ದೈತ್ಯಸೈನ್ಯವು ಹೀಗೆ ನಾಲ್ವರಿಂದ ವಿನಾಶ ಹೊಂದುತ್ತಿರುವುದನ್ನು ನೋಡಿ ಶೈವಜ್ವರಕ್ಕೆ ಅಭಿಮಾನಿಯು ಬಂದು ತಮ್ಮ ಸೈನ್ಯ ಸಂರಕ್ಷಿಸಲು ಮುಂದೆ ಬಂದನು. ಶೈವಜ್ವರಾಭಿಮಾನಿಗೆ ಮೂರು ಕಾಲುಗಳಿದ್ದು ಮೂರು ತಲೆಗಳಿದ್ದವು. ಆರು ಭುಜಗಳು, ಒಂಭತ್ತು ಕಣ್ಣುಗಳಿದ್ದವು.

**ಜ್ವರಃ ತ್ರಿಪಾದಃ ತ್ರಿಶಿರಾಃ ಷಡ್ಭುಜೋ ನವಲೋಚನಃ ।**
**ಭಸ್ಮ ಪ್ರಹರಣೋ ರೌದ್ರಃ ಕಾಲಾಂತಕ ಯಮೋಪಮಃ ॥ 12 ॥**

ಭಸ್ಮವೆ ಅದರ ಆಯುಧವಾಗಿತ್ತು. ಕಾಲಾಂತಕ ಯಮಮನಂತೆ ಭಯಂಕರ–ವಾಗಿದ್ದನು. ಸಾವಿರಾರು ಮೇಘಗಳಂತೆ ಗಂಭೀರನಾದ ಹೊಂದಿದ್ದ ಜ್ವರನು

ಧಾವಿಸಿ ಬಂದನು. ನಿಟ್ಟುಸಿರು ಬಿಡುತ್ತಾ, ಆಕಳಿಸುತ್ತಾ, ನಿದ್ರೆಯ ಮಬ್ಬಿನಲ್ಲಿರುತ್ತಾ ನಿದ್ರೆಯ ಕಣ್ಣುಗಳಿಂದ ತಡವರಿಸುತ್ತಾ ಮುಗ್ಗರಿಸುತ್ತಾ ಯುದ್ಧ ಸ್ಥಳಕ್ಕೆ ಹೋಗುತ್ತಿದ್ದನು. ನಿಮಿರಿನಿಂತ ರೋಮಗಳು, ಕಳೆಗುಂದಿದ ನೇತ್ರಗಳುಳ್ಳವಾಗಿ ಅತೀ ಕೋಪದಿಂದ ಬಲರಾಮನ್ನು ಸಮೀಪಿಸಿ ಹೀಗೆಂದನು.

**ಕಿಮೇವಂ ಬಲಮತ್ತೋऽಸಿ ನ ಮಾಂ ಪಶ್ಯಸಿ ಸಂಯುಗೇ ।**
**ತಿಷ್ಠ! ತಿಷ್ಠ! ನ ಮೇ ಜೀವನ್ ಮೋಕ್ಷ್ಯ ಸೇ ರಣಮೂರ್ಧನಿ ॥ 13 ॥**
**ಯುಗಾಂತಾಗ್ನಿನಿಭೈಃ ಘೋರೈಃ ಮುಷ್ಟಿಭಿಃ ಜನಯನ್ ಭಯಮ್ ।**

ಬಲರಾಮನೇ! ನಾನೇ ಬಲಿಷ್ಠನೆಂದು ಮದೋನ್ಮತ್ತನಾಗಿರುವೆ. ನೀನು ನಾನು ಯುದ್ಧದಲ್ಲಿರುವುದನ್ನು ಕಾಣಲ್ಲಿಲ್ಲವೆ? ನಿಲ್ಲು ನಿಲ್ಲು ನೀನು ಇಂದು ಯುದ್ಧಭೂಮಿಯಿಂದ ಜೀವ ಸಹಿತವಾಗಿ ಹೋಗಲಾರೆ ಎಂದು ಹೇಳುತ್ತಾ ಅಟ್ಟಹಾಸದಿಂದ ನಗುತ್ತಾ ಬಲರಾಮನನ್ನೆದುರಿಸಲು ಧಾವಿಸಿದ. ಪ್ರಲಯಾಗ್ನಿ ಸದೃಶ ತನ್ನ ಮುಷ್ಟಿಗಳಿಂದ ಅವನು ಸಕಲ ಪ್ರಾಣಿಗಳಿಗೂ ಭಯವನ್ನುಂಟು ಮಾಡುತ್ತಿದ್ದನು.

ರೌಹಿಣೇಯನಾದರೂ ಸಾವಿರಾರು ಮಂಡಲ ಕ್ರಮಗಳಲ್ಲಿ ಸುತ್ತುತ್ತಾ ಇದ್ದನು. ಇದರಿಂದಾಗಿ ಜ್ವರನಿಗೆ ಬಲರಾಮನನ್ನು ಹಿಡಿಯಲು ಅವಕಾಶ ಸಿಗಲಿಲ್ಲ. ತನ್ನ ಭಸ್ಮಾಯುಧವನ್ನು ಬಲರಾಮನ ಮೇಲೆಸೆದನು. ಇದು ಪರ್ವತಾಕಾರ ಹೊಂದಿದ್ದ ಬಲರಾಮನ ವಕ್ಷಃಸ್ಥಲಕ್ಕೆ ಬಿತ್ತು.

**ತಸ್ಯ ಭಸ್ಮ ತದಾ ಕ್ಷಿಪ್ತಂ ಜ್ವರೇಣಾ ಪ್ರತಿಮೌಜಸಾ ।**
**ಶೈಘ್ಯಾತ್ ವಕ್ಷೋ ನಿಪತಿತಂ ಶರೀರೇ ಪರ್ವತೋಪಮೇ ॥ 14 ॥**

ಬಲರಾಮನ ಎದೆಗೆ ಬಿದ್ದ ಚೆಂಡಿನಂತೆ ಅಲ್ಲಿಂದ ಪುಟಿದು ಮೇರುಪರ್ವತದ ಶಿಖರದ ಮೇಲೆ ಬಿತ್ತು. ಅದು ಮೇರು ಶಿಖರವನ್ನು ಬಿದ್ದ ಕೂಡಲೇ ಸೀಳ ಹಾಕಿತು.

**ತದ್ ಭಸ್ಮ ವಕ್ಷಸಸ್ತಸ್ಯ ಮೇರೋಃ ಶಿಖರಮಾಗಮತ್ ।**
**ಪ್ರದೀಪ್ತಂ ಪತಿತಂ ತತ್ರ ಗಿರಿಶೃಂಗಂ ವ್ಯದಾರಯತ್ ॥ 15 ॥**

ಭಸ್ಮಾಯುಧದ ಅವಶೇಷ ಬಲರಾಮನ ಎದೆಯಲ್ಲಿ ಉಳಿದು ಅದು ಅವನನ್ನು ಸುಡಲು ಪ್ರಾರಂಭಿಸಿತು.

**ಶೇಷೇಣ ಚಾಪಿ ಜಜ್ವಾಲ ಭಸ್ಮನಾ ಕೃಷ್ಣಪೂರ್ವಜಃ ।**

ಇದರ ಪ್ರಭಾವದಿಂದಾಗಿ ಬಲದೇವನು ನಿಟ್ಟುಸಿರುಬಿಡುತ್ತಾ ಆಕಳಿಸುತ್ತಾ ನಿದ್ರಾವಶನಾದನು. ಅವನಿಗೆ ತೂಕಡಿಗೆವುಂಟಾಯಿತು. ಕಣ್ಣುಗಳ ಭ್ರಮಣೆ, ಶರೀರದಲ್ಲಿ ರೋಮೋದ್ಗಮ, ಬುದ್ಧಿ ಭ್ರಮಣೆ ಮೊದಲಾದವು ಜ್ವರನಿಗಿದ್ದ ಅವಸ್ಥೆ ಬಲರಾಮನಿಗೂ ಉಂಟಾಯಿತು. ಇಂತಹ ಅವಸ್ಥೆ ತಲುಪಿದ ಬಲದೇವನು ಶ್ರೀಕೃಷ್ಣನಿಗೆ ಹೀಗೆಂದನು.

**ಕೃಷ್ಣ ಕೃಷ್ಣ ಮಹಾಬಾಹೋ ಪ್ರದೀಪ್ತೋಽಸ್ಮಿ ಅಭಯಂ ಕುರು ।**
**ದಹ್ಯಾಮಿ ಸರ್ವತಸ್ತಾತ ಕಥಂ ಶಾಂತಿರ್ಭವಿಷ್ಯತಿ ॥ 16 ॥**

ಶ್ರೀಕೃಷ್ಣನೇ ರಕ್ಷಿಸು. ಈ ಜ್ವರದಿಂದಾಗಿ ಬೆಂಕಿಯಿಂದ ಜ್ವಲಿಸುತ್ತಿರುವಂತೆ ಭಾಸಮಾನವಾಗುತ್ತಿದೆ. ನನ್ನ ಸರ್ವಾಂಗಗಳೂ ದಹಿಸಿ ಹೋಗುತ್ತಿವೆ. ಇದರಿಂದ ನನಗೆ ಶಾಂತಿ ಹೇಗೆ ಲಭಿಸುವುದು ತಿಳಿಸು ಎಂದನು.

### ಶ್ರೀಕೃಷ್ಣನಿಂದ ಬಲರಾಮನ ಆಲಿಂಗನೆ

ಬಲರಾಮನೇ! ಭಯಪಡಬೇಡ! ಎಂದು ಅಭಯವಚನ ನೀಡುತ್ತಾ ಶ್ರೀಕೃಷ್ಣನು ಬಲರಾಮನನ್ನು ಒಂದು ಬಾರಿ ಆಲಿಂಗನ ಮಾಡಿದನು.

**ನ ಭೇತವ್ಯಮಿತೀತ್ಯುಕ್ತ್ವಾ ಪರಿಷ್ವಕ್ತೋ ಹಲಾಯುಧಃ ।**
**ಕೃಷ್ಣೇನ ಪರಮಸ್ನೇಹಾತ್ ತತೋ ದಾಹಾತ್ ಪ್ರಮುಚ್ಯತ ॥ 17 ॥**

ಬಲರಾಮನನ್ನು ಪರಮ ಪ್ರೀತಿಯಿಂದ ಆಲಿಂಗನ ಮಾಡಿದ ಕೂಡಲೇ ಬಲರಾಮನು ದಹಿಸುವಿಕೆಯಿಂದ ವಿಮೋಚನೆ ಹೊಂದಿದ.[1] ನಂತರ ಪರಮ ಕ್ರುದ್ಧನಾಗಿ – ಜ್ವರವೆ ಬಾ ನನ್ನೊಂದಿಗೆ ಹೋರಾಡು ಬಾ. ನಿನ್ನಲ್ಲಿರುವ ಶಕ್ತಿ ಯಾವುದೊ ಅದನ್ನು ನನ್ನ ಮುಂದೆ ತೋರಿಸು ಎಂದನು.

**ಯಚ್ಚ ತೇ ಪೌರುಷಂ ಸರ್ವಂ ತದ್ ದರ್ಶಯತು ನೋ ಭವಾನ್ ।**

ಶ್ರೀಕೃಷ್ಣನ ಮಾತನ್ನು ಕೇಳಿದ ಜ್ವರನು ತನ್ನ ಬಲಭಾಗದಲ್ಲಿರುವ ಎರಡು ಕೈಗಳಿಂದಲೂ, ಜ್ವಾಲೆಗಳನ್ನು ತನ್ನಲ್ಲಡಿಗಿಸಿಕೊಂಡಿದ್ದ ಭಸ್ಮವನ್ನು ಕೃಷ್ಣನ ಮೇಲೆಸೆದನು. ಭಗವಂತನೂ ಕೂಡ ಕ್ಷಣಕಾಲ ತನ್ನ ಶರೀರವೂ

---

1. ತೇನ ಭಸ್ಮ ಪ್ರಹಾರೇಣ ಜ್ವರಿತಂ ರೋಹಿಣೀಸುತಂ ।
ಆಶ್ಲಿಷ್ಯ ವಿಜರಂ ಚಕ್ರೇ ವಾಸುದೇವೋ ಜಗತ್ಪ್ರಭುಃ ॥ – *ತಾ.ನಿ. 22/258*

ಜ್ವರಪೀಡಿತವಾಗಿ ಸುಡುತ್ತಿದೆಯೆಂಬಂತೆ ತನ್ನನ್ನು ತಾನು ತೋರಿಸಿಕೊಂಡನು.[2] ಸ್ವಲ್ಪಕಾಲ ಜ್ವರದೊಂದಿಗೆ ಆಟವಾಡಿದನಷ್ಟೆ ಬಳಲಲಿಲ್ಲ.

**ತತಃ ಪ್ರದೀಪ್ತಗಾತ್ರಸ್ತು ಮುಹೂರ್ತಮಭವತ್ ಪ್ರಭುಃ ॥ 18 ॥**

ನಂತರ ಜ್ವರಾಗ್ನಿಯು ತಾನೇ ಶಾಂತವಾಯಿತು. ನಂತರ ಜ್ವರನು ತನ್ನ ಸರ್ಪಗಳಂತೆ ಇರುವ ಮೂರು ತೋಳುಗಳಿಂದ ಕೃಷ್ಣನ ಎದೆಗೆ ಗುದ್ದಿದನು. ಶ್ರೀಕೃಷ್ಣ ಹಾಗೂ ಜ್ವರದಲ್ಲಿ ಮುಷ್ಟಿಯುದ್ಧವೇರ್ಪಟ್ಟಿತು. ಮುಷ್ಟಿಯ ಹೊಡೆತಗಳು ಪರ್ವತಗಳ ಮೇಲೆ ಬೀಳುವ ಸಿಡಿಲಿನಂತಿದ್ದವು.

**ಪರ್ವತೇಷು ಪತಂತೀನಾಮಶನೀನಾಮಿವ ಸ್ವನಃ ।**
**ಕೃಷ್ಣಜ್ವರ ಭುಜಾಘಾತೈಃ ಯುದ್ಧಮಾಸೀತ್ ಸುದಾರುಣಮ್ ॥ 19 ॥**

ಶ್ರೀಕೃಷ್ಣ – ಜ್ವರನಿಗೂ ಪರಸ್ಪರ ಭುಜಗಳಿಂದ ಪ್ರಹಾರ ರೂಪ ಸುದಾರುಣವಾದ ಯುದ್ಧವೇರ್ಪಟ್ಟಿತ್ತು. ಈ ಮುಹೂರ್ತಕಾಲ ನಡೆಯಿತು.

ಅನಂತರ ಶ್ರೀಕೃಷ್ಣನು ಚಿತ್ರ ವಿಚಿತ್ರ ಆಭರಣ ಭೂಷಿತನಾಗಿದ್ದ ಜ್ವರನನ್ನು ತನ್ನ ಎರಡೂ ಭುಜಗಳಿಂದಲೂ ಹಿಡಿದು ಗಟ್ಟಿಯಾಗಿ ಒತ್ತತೊಡಗಿದನು.

**ತತೋ ಜ್ವರಂ ಭುಜಯುಗಲೇನ ನ್ಯಪೀಡಯತ್ ಸಂಯುಗೇ ॥ 20 ॥**

ಅವನ ಬಲವಾಗಿ ಒತ್ತುವಿಕೆಗೆ ಜ್ವರನು ಮೃತ ಪ್ರಾಯನಾದನು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ**
**ಶ್ರೀಕೃಷ್ಣ ಶೈವಜ್ವರ ಯುದ್ಧ ಎಂಬಲ್ಲಿ**
**ನೂರಇಪ್ಪತ್ತೆರಡನೆಯ ಅಧ್ಯಾಯ ಸಮಾಪ್ತಿ**

---

2. ನರಸಿಂಹನು ಜ್ವರದೊಳಗೆ 27 ರೂಪಗಳಿಂದಲೂ, ಹರನೊಳಗೆ 28 ರೂಪಗಳಿಂದಲೂ ಇದ್ದು ಜ್ವರಹರ ಎಂಬ ನೃಸಿಂಹನ ಎರಡು ಸಾವಿರದ ಎಂಟನೂರ ಇಪ್ಪತ್ತೇಳು (2827) ರೂಪಗಳನ್ನು ಚಿಂತನೆ ಮಾಡಿದವನಿಗೆ ಜ್ವರ ಮೂಲಕವಾದ ಪಾಪಗಳೆಲ್ಲ ದೂರವಾಗುವುವು.
**ಅಷ್ಟಾವಿಂಶತಿ ರುದ್ರೇಽಸ್ತಿ ಜ್ವರೇ ವೈ ಸಪ್ತವಿಂಶತಿಃ ।**
ಹೀಗೆ ನರಸಿಂಹ ರೂಪ ಜ್ವರ ಹರವಾಗಿರುವುದರಿಂದಲೇ ಅತೀ ತಾಪವಾದಾಗ "ನರಸಿಂಹನ ಹೋಮ"ಕ್ಕೆ ಸೇರಿಸುತ್ತಾರೆ. ನರ್ಸಿಂಗ್ ಹೋಂನಲ್ಲಿ ರೋಗಿಯು ಈ ಶರೀರ 'ನರಸಿಂಗನಿಗೆ ಹೋಮವು'ವೆಂದು ತಿಳಿದಾಗ ರೋಗಮುಕ್ತನಾಗಿ ಬರುವನು.

# ಅಥ ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ

*ವೈಶಂಪಾಯನ ಉವಾಚ –*

**ಮೃತಮಿತ್ಯಭಿವಿಜ್ಞಾನಃ ಜ್ವರಂ ಶತ್ರು ನಿಷೂದನಃ ।**
**ಕೃಷ್ಣೋ ಭುಜಬಲಾಭ್ಯಾಂ ತು ಚಿಕ್ಷೇಪಾಥ ಮಹೀತಲೇ ॥ 1 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ ಕೇಳು, ಶ್ರೀಕೃಷ್ಣನು ತನ್ನ ಎರಡೂ ಭುಜಗಳ ಮಧ್ಯದಲ್ಲಿ ಜ್ವರಾಭಿಮಾನಿಯನ್ನು ಬಿಗಿಯಾಗಿ ಹಿಡಿದು ಕೊಂಡಿದ್ದರಿಂದ ಜ್ವರನು ಮೃತನಾದನೆಂದೆ ಭಾವಿಸಿ ಅವನನ್ನು ನೆಲಕ್ಕೆ ಒಗೆದುಬಿಟ್ಟನು.

ಕೃಷ್ಣನ ಬಾಹುಗಳಿಂದ ಭೂಮಿಗೆ ಬಿದ್ದೊಡನೆಯೆ ಜ್ವರನು ಕೃಷ್ಣನ ಶರೀರವನ್ನು ಸೇರಿದನು. ಅವನ ಪ್ರಭಾವ ಜಗತ್ತಿಗೆ ತಿಳಿಸಲೋಸುಗ ತಾನು ಸಹ ಆಕಳಿಸಿದಂತೆ, ನಿದ್ರೆ ಬಂದವನಂತೆ ನಟಿಸಿದ. ಇದೊಂದು ಮೋಹನ ಮಾತ್ರ. ಅತ್ಯಲ್ಪ ಜನರಲ್ಲಿಯೂ ಮಹಾಪ್ರಯತ್ನದಿಂದ ಜಯ ಸಾಧಿಸಿದ ಎಂದು ಮೋಹವುಂಟು ಮಾಡಲು ತೋರಿಸಿದನಷ್ಟೆ!

## ವೈಷ್ಣವ ಜ್ವರ ಸೃಷ್ಟಿ

**ಜ್ವರಾಭಿ ಭೂತಮಾತ್ಮಾನಂ ವಿಜ್ಞಾಯ ಪುರುಷೋತ್ತಮಃ ।**
**ಸೋಽಸೃಜತ್ ಜ್ವರಮನ್ಯಂ ತು ಪೂರ್ವಜ್ವರ ವಿನಾಶನಮ್ ॥ 2 ॥**

ಶ್ರೀಕೃಷ್ಣನು ತಾನು ಜ್ವರಾಕ್ರಾಂತನಾಗಿರುವೆನೆಂದು ತಿಳಿದು ತನ್ನಲ್ಲಿದ್ದ

ಶೈವಜ್ವರವನ್ನೆ ನಾಶ ಮಾಡಬಲ್ಲ ವೈಷ್ಣವ ಜ್ವರವನ್ನು ಸೃಷ್ಟಿಸಿದನು. ಸಕಲ ಪ್ರಾಣಿಭಯಂಕರವೂ ಅತ್ಯುಗ್ರವಾದ ಆ ವೈಷ್ಣವ ಜ್ವರವು ತನ್ನಲ್ಲಿ ಸೇರಿಕೊಂಡಿದ್ದ ಜ್ವರನನ್ನು ಬಲಾತ್ಕಾರವಾಗಿ ಹಿಡಿದು ಕೃಷ್ಣನಿಗೆ ನೀಡಿತು. *[ಕೃಷ್ಣಾಯ ಹೃಷ್ಟಃ ಪ್ರಾಯಚ್ಛತ್]*

ನಂತರ ಜ್ವರವನ್ನು ನೆಲದ ಮೇಲೆ ಹಾಕಿ ನೂರಾರು ತುಂಡುಗಳಾಗಿ ವಿಭಾಗಗೊಳಿಸಲು ಇಚ್ಛಿಸಿದ. ಆಗ ಜ್ವರವು ದೈನ್ಯದಿಂದ ಭಗವಂತನೇ! ನನ್ನನ್ನು ರಕ್ಷಿಸು ಎಂದು ಪ್ರಾರ್ಥಿಸಿದನು.

**ವ್ಯಾಘೋಷತ ಜ್ವರಸ್ತತ್ರ ಭೋಃ ಪರಿತ್ರಾತುಮರ್ಹಸಿ ।**

ಇದೇ ಸಮಯದಲ್ಲಿ ಅಶರೀರವಾಣಿ ಅಂತರಿಕ್ಷದಲ್ಲಿ ಕೇಳಿಸಿತು.

**ಮಾವಧೀಃ ಜ್ವರಮೇನಂ ತು ರಕ್ಷಣೀಯಃ ತ್ವಯಾನಘ ॥ 3 ॥**

ಶ್ರೀಕೃಷ್ಣನೆ! ಈ ಜ್ವರನನ್ನು ಕೊಲ್ಲಬೇಡ! ಇವನನ್ನು ರಕ್ಷಿಸು. ಹೀಗೆ ಅಶರೀರವಾಣಿ ಮಾತನ್ನು ಕೇಳಿ ಮುಂದೆ ಇದರ ಉಪಯೋಗವನ್ನು ಮನಗಂಡ ಭೂತಭವಿಷ್ಯದ್ ಜ್ಞಾನವುಳ್ಳ ಶ್ರೀಕೃಷ್ಣನು ಕೊಲ್ಲದೇ ಬಿಟ್ಟುಬಿಟ್ಟನು. *[ಏವಮುಕ್ತೇ ವಚನೇ ತಂ ಮುಮೋಚ ಹರಿಃ ಸ್ವಯಂ].*

ಜ್ವರವಾದರೂ ಶ್ರೀಕೃಷ್ಣನ ಪಾದಗಳಲ್ಲಿ ಬಿದ್ದು ಶರಣಾಗತಿ ಬೇಡಿ, ತನ್ನೊಂದು ವಿಜ್ಞಾಪನೆ ಮಾಡಿತು. ಕೃಷ್ಣನೇ! ಈ ಜಗತ್ತಿನಲ್ಲಿ ಜ್ವರನೆಂಬುವನು ನಾನೊಬ್ಬನೆ ಇರಬೇಕು. ಈ ವರವನ್ನು ನೀಡುವವನಾಗು ಎಂದು.

**ಅಹಮೇಕೋ ಜ್ವರಸ್ತಾತ ನಾನ್ಯೋ ಲೋಕೇ ಜ್ವರೋ ಭವೇತ್ ।**

ಹಾಗೆ ಆಗಲಿ ನಿನ್ನ ಇಚ್ಛೆಯಂತೆ ಆಗಲಿ. ನಿನಗೆ ಮಂಗಳವಾಗಲಿ. ಶರಣಾಗತನಾಗಿ ವರವನ್ನು ಬೇಡಿದವರಿಗೆ ನಾನು ವರವನ್ನು ನೀಡುವುದು ಉಚಿತವೆ.

ನೀನೊಬ್ಬನೇ ಲೋಕದಲ್ಲಿ ಜ್ವರರೂಪನಾಗಿ ಜ್ವರ ಅಧಿಕಾರದಲ್ಲಿ ಪ್ರತಿಷ್ಠಿತನಾಗಿರು. ನಾನು ಸೃಷ್ಟಿಸಿದ ವೈಷ್ಣವ ಜ್ವರ ನನ್ನಲ್ಲಿಯೆ ಲೀನವಾಗುತ್ತದೆ.

**ಏಕ ಏವ ಜ್ವರೋ ಲೋಕೇ ಭವಾನಸ್ತು ಯಥಾ ಪುರಾ ।**
**ಯೋಽಯಂ ಮಯಾ ಜ್ವರಃ ಸೃಷ್ಟೋ ಮಯ್ಯೈವೈಷ ಪ್ರಲೀಯತಾಂ ॥ 4 ॥**

ಜನಮೇಜಯ! ಕೀರ್ತಿಶಾಲಿಯಾದ ಶ್ರೀಕೃಷ್ಣನು ಶೈವಜ್ವರನನ್ನು ಕುರಿತು ಹೀಗೆಂದನು.

**ಶ್ರುಣುಷ್ವ ಜ್ವರ ! ಸಂದೇಶಂ ಯಥಾಲೋಕೇ ಚರಿಷ್ಯಸಿ ।**
**ತ್ರಿಧಾ ವಿಭಜ್ಯ ಚಾತ್ಮಾನಂ ಮತ್ಪ್ರಿಯಂ ಯದಿ ಕಾಂಕ್ಷಸೇ ॥ 5 ॥**
**ಚತುಷ್ಪದಾನ್ ಭಜೈಕೇನ ದ್ವಿತೀಯೇನ ಚ ಸ್ಥಾವರಾನ್ ।**
**ತೃತೀಯೋ ಯಶ್ಚ ತೇ ಭಾಗೋ ಮಾನುಷೇಷೂಪಪತ್ಸ್ಯತೇ ॥ 6 ॥**

ಜ್ವರನೇ! ಸಕಲ ಚರಾಚರ ಪ್ರಾಣಿಗಳ ಶರೀರದಲ್ಲಿ ಯಾವುದೇ ಭಯವಿಲ್ಲದೆ ಹೇಗಿರಬೇಕೆಂದು ತಿಳಿಸುವೆ ಕೇಳು. ಹೀಗೆ ನೀನು ಮಾಡಿದರೆ ನೀನು ನನಗೆ ಪ್ರಿಯನಾಗುವೆ.

ನೀನು ನಿನ್ನನ್ನು ಮೂರು ವಿಭಾಗಗಳನ್ನಾಗಿ ಮಾಡಿಕೊ. ಅದರಲ್ಲಿ ಒಂದು ಭಾಗದಿಂದ ಚತುಷ್ಪಾದ ಪ್ರಾಣಿಗಳಲ್ಲಿರು. ಎರಡನೆ ಭಾಗದಿಂದ ವೃಕ್ಷ-ಪರ್ವತಗಳು ಮೊದಲಾದ ಸ್ಥಾವರ ಪ್ರಾಣಿಗಳಲ್ಲಿರುವವನಾಗು. ಮೂರನೇ ಭಾಗದಿಂದ ಮಾನವರಲ್ಲಿ ವಾಸಿಸು.

### ಜ್ವರಗಳ ವೈವಿಧ್ಯತೆ

**ಮನುಷ್ಯೇಷು ಅಭಿಭೇದೇನ ವಸ ತ್ವಂ ಪ್ರವಿಭಜ್ಯ ವೈ ।**
**ಜಾತಿಷ್ವಥಾವಶೇಷಾಸು ನಿವಸ ತ್ವಂ ಶ್ರುಣುಷ್ವ ಮೆ ॥ 7 ॥**

ಮನುಷ್ಯರಲ್ಲಿರುವ ಯಾವ ಜ್ವರದಲ್ಲಿ ದಿನಬಿಟ್ಟುದಿನ ಬರುವ ಜ್ವರವು 'ಏಕಾಂತಜ್ವರ' ಎನ್ನುವರು. ಮೂರು ಮೂರು ದಿನಗಳು ಬಿಟ್ಟು ನಾಲ್ಕನೇ ದಿನ ಬರುವ ಜ್ವರವನ್ನು 'ಚಾತುರ್ಥಿಕ ಜ್ವರ'. [ವಿಷಮಶೀತಜ್ವರವನ್ನೆ ಚಾತುರ್ಥಿಕ ಜ್ವರವೆನ್ನಲಾಗಿದೆ.]

ಇಂತಹ ಜ್ವರಭೇದದಿಂದ ನಿನ್ನನ್ನು ವಿಭಾಗಿಸಿಕೊಂಡು ಮನುಷ್ಯರಲ್ಲಿರು. ಹಾಗೆಯೇ ಉಳಿದಿರುವ ಸ್ಥಾವರ – ಜಂಗಮಗಳಲ್ಲಿಯೂ ವಾಸವಾಗಿರು.

ಹೇಗೆ ವಾಸ ಮಾಡಿಕೊಂಡಿರಬೇಕೆಂದು ಹೇಳುವೆ ಕೇಳು.

**ವೃಕ್ಷೇಷು ಕೀಟರೂಪೇಣ ತಥಾ ಸಂಕೋಚಪತ್ರಕಃ ।**
**ಪಾಂಡುಪತ್ರಶ್ಚ ವಿಖ್ಯಾತಃ ಫಲೇಷು ಆತುರ್ಯಮೇವ ಚ ॥ 8 ॥**

ವೃಕ್ಷಗಳಲ್ಲಿ ಕೀಟರೂಪಗಳಿಂದ ಇರುವವನಾಗು. ಇದರಿಂದಾಗಿ ಎಲೆಗಳು ಮುದುಡಿಕೊಂಡಿರುತ್ತವೆ. ಸುಕ್ಕಿ ಹೋಗಿರುತ್ತವೆ. ಇವುಗಳನ್ನೆ 'ಸಂಕೋಚಪತ್ರ'ವೆನ್ನುವರು. ಕೆಲವು ಎಲೆಗಳು ಹಸಿರುಬಣ್ಣ ಬಿಟ್ಟು ಬಿಳಚಿಕೊಂಡಿರುತ್ತವೆ. ಇವುಗಳು 'ಪಾಂಡುಪತ್ರ'ಗಳು.

ವೃಕ್ಷಗಳಲ್ಲಿ ಬಿಡುವ ಹೂವುಗಳಲ್ಲಿಯೂ ನೀನು 'ಆ ತುರ್ಯ' ವೆಂಬ ಹೆಸರಿನಿಂದಿರು. ಈ ಜ್ವರದ ಪ್ರಭಾವದಿಂದಾಗಿ ಹಣ್ಣುಗಳು ಸುರುಟಿ ಹೋಗುತ್ತವೆ.

**ಅಪಾಂ ತು ನೀಲಿಕಾಂ ವಿದ್ಯಾತ್ ಶಿಖೋದ್ಭೇದೇನ ಬರ್ಹಿಣಾಮ್ ।**
**ಪದ್ಮಿನ್ಯಾದೌ ಹಿಮೌ ಭೂತ್ವಾ ಪೃಥಿವ್ಯಾಮಪಿ ಚೋಷರಃ ॥ 9 ॥**
**ಗೋಷ್ವಪಸ್ಮಾರಕೋ ಭೂತ್ವಾ ಖೋರಕಶ್ಚ ಭವಿಷ್ಯಸಿ ।**

ಜ್ವರನೇ! ನೀನು ನೀರಿನಲ್ಲಿ ನೀನು ಲಕ್ಕಿಗಿಡದ ರೂಪದಲ್ಲಿರುವೆ. ಇದಿದ್ದರೆ ನೀರಿಗೆ ಜ್ವರವೆಂದು ತಿಳಿಯಬೇಕು. ಇದು ಇದ್ದಾಗ ಸ್ನಾನಪಾನ ನಿಷಿದ್ಧವಾಗಿರುತ್ತದೆ.

ಮಯೂರಗಳಲ್ಲಿ ಶಿಖಾರೂಪದಲ್ಲಿರುತ್ತಿ. ಜ್ವರ ಬಂದಾಗ ನವಿಲಿನ ತಲೆಯ ಮೇಲಿನ ಶಿಖೆ ಉದುರುತ್ತದೆ. ಇದು ಜ್ವರದ ಲಕ್ಷಣ. ಕಮಲಗಳಲ್ಲಿ ಹಿಮರೂಪವಾಗಿರುವೆ. ಹಿಮಬಿದ್ದಾಗ ಕಮಲದಳಗಳು ಉದುರುತ್ತವೆ ಅಥವಾ ಬಾಡಿದಂತಿರುತ್ತವೆ. ಭೂಮಿಯಲ್ಲಿ ಚೌಳು ಭೂಮಿಯ ರೂಪದಲ್ಲಿರುವೆ. ಚೌಳು ಭೂಮಿಯಲ್ಲಿ ಯಾವುದು ಬೆಳೆಯುವುದಿಲ್ಲ. ಪರ್ವತಗಳಲ್ಲಿ ಗೈರಿಕಾದಿ ಧಾತುಗಳ ರೂಪದಲ್ಲಿಯೂ ಇರುತ್ತಿರುವಿ. ಗೋವುಗಳಲ್ಲಿ ಅಪಸ್ಮಾರ ರೂಪದಲ್ಲಿಯೂ, ಗೊರಸಿನ ರೋಗರೂಪದಲ್ಲಿಯೂ ಇರುವೆ.

ಅಪಸ್ಮಾರವೆಂದರೆ ಗೋವುಗಳಿಗೆ ಬರುವ ನಡುಕರೋಗ. ಖೋರಕ ಎಂದರೆ ಉಗುರು ಸುತ್ತಿನಂತಿರುವ ಗೊರಸಿನ ರೋಗ.

**ಏವಂ ತ್ವಂ ಬಹುರೂಪೇಣ ಭವಿಷ್ಯಸಿ ಮಹಿತಲೇ ।**
**ದರ್ಶನಾತ್ ಸ್ಪರ್ಶನಾಚ್ಚಾಪಿ ಪ್ರಾಣಿನಾಂ ವಧಮೇಷ್ಯಸಿ ॥ 10 ॥**
**ಋತೇ ದೇವ ಮನುಷ್ಯಾಣಾಂ ನಾನ್ಯಸ್ತ್ವಾಂ ವಿಸಹಿಷ್ಯತಿ ॥ 11 ॥**

ಹೀಗೆ ನೀನು ಭೂಮಿಯಲ್ಲಿ ಅನೇಕ ರೂಪದಿಂದಿರುವೆ. ಇದು ನನ್ನ

ಅನುಗ್ರಹವೆಂದು ತಿಳಿ. ನಿನ್ನ ದರ್ಶನ ಹಾಗೂ ಸ್ಪರ್ಶದಿಂದಲೂ ನೀನು ಪ್ರಾಣಿಗಳನ್ನು ಸಂಹಾರ ಮಾಡುವ ಸಾಮರ್ಥ್ಯ ಹೊಂದಿರುವೆ. ಆದರೆ ದೇವತೆಗಳನ್ನಾಗಲಿ, ದೇವತೆಗಳು ಭೂಮಿಯಲ್ಲಿ ಅವತರಿಸಿದಾಗಲಿ ನೀನು ಅವರೆನ್ನೇನೂ ಮಾಡಲಾರೆ. ದೇವ ಸ್ವಭಾವದ ಮಾನವರೂ ನಿನ್ನ ಉಪಟಳ ಸಹಿಸಬಲ್ಲರು. ಇತರರು ನಿನ್ನಿಂದ ತಪ್ಪಿಸಿಕೊಳ್ಳಲಾರರು.

ಜನಮೇಜಯ ಕೇಳು, ಶ್ರೀಕೃಷ್ಣನ ಮಾತುಗಳನ್ನು ಕೇಳಿ ಜ್ವರನು ಸಂತುಷ್ಟನಾದನು. ಅಂಜಲಿಬದ್ಧನಾಗಿ ಹೀಗೆಂದನು.

**ಸರ್ವಜಾತಿ ಪ್ರಭುತ್ವೇನ ಕೃತೋ ಧನ್ಯೋಽಸ್ಮಿ ಮಾಧವ ।**

ಮಾಧವನೇ! ನೀನು ಸಕಲ ಪ್ರಾಣಿಗಳ ಪ್ರಭುತ್ವವನ್ನೆ ದಯಪಾಲಿಸಿರುವಿ ಧನ್ಯನಾದೆನು.

ನಾನು ತ್ರಿಪುರಾಸುರ ಸಂಹಾರಿಯಿಂದ ಜನ್ಮವೆತ್ತಿದವನು. ಮಹಾಪರಾಕ್ರಮಿ-ಯಾಗಿರುವೆನು. ಆದರೆ ಇಂದು ನಿನ್ನಿಂದ ಪರಾಜಿತನಾಗಿರುವೆನು. ಇಂದಿನಿಂದ ನಾನು ನಿನ್ನ ಪಾದಾರಾಧಕನಾಗಿರುವೆನು. ಇನ್ನು ನನ್ನಿಂದ ಪರಿಪಾಲಿಸ-ಬೇಕಾದ ಆದೇಶವಿದ್ದರೆ ಆದೇಶಿಸು, ಶಿರಸಾವಹಿಸುತ್ತೇನೆ ಎಂದನು.

ವೈಶಂಪಾಯನರು ರಾಜನಿಗೆ – ರಾಜನ್! ಜ್ವರನ ಈ ವಿನೀತ ಮಾತುಗಳಿಂದ ಸಂತೋಷ ಹೊಂದಿದ ವಾಸುದೇವನು – "ಜ್ವರನೇ! ನಾನು ನೀನು ಮಾಡಿದ ಈ ಯುದ್ಧದಲ್ಲಿ ನಮ್ಮ ಭುಜಬಲವೆ ಅಸ್ತ್ರಶಸ್ತ್ರಗಳಾಗಿದ್ದವು.

ಯಾವನು ನನಗೆ ಭಕ್ತಿಪೂರ್ವಕ ನಮಸ್ಕರಿಸಿ ನನಗೂ ನಿನಗೂ ನಡೆದ ಯುದ್ಧ ಪ್ರಸಂಗವನ್ನು ಪಾರಾಯಣ ಮಾಡುವನೋ ಅವನು ನಿಶ್ಚಿತವಾಗಿಯೂ ಜ್ವರದಿಂದ ವಿಮುಕ್ತನಾಗಬೇಕು. ನೀನು ಅವನಿಗೆ ತೊಂದರೆ ನೀಡಬಾರದು. ಇದು ನನ್ನ ಆಜ್ಞೆಯೆಂದು ತಿಳಿ.

**ಪ್ರಣಮ್ಯ ಮಾಮೇಕಮನಾಃ ಪಠೇತ್ ತು ಯಃ ।**
**ಸ ವೈ ಭವೇತ್ ಜ್ವರ! ವಿಗತಜ್ವರೋ ನರಃ ॥ 12 ॥**

ಯಾರಿಗೆ ತ್ರಿನೇತ್ರಗಳಿವೆಯೋ, ತ್ರಿಶಿರಸ್ಸು ಹಾಗೂ ನವಲೋಚನಗಳಿವೆಯೋ, ಯಾವನಿಗೆ ಭಸ್ಮವೆ ಆಯುಧವೋ ಅಂತಹ ಸಕಲರೋಗಗಳಿಗೂ ಅಧಿಪತಿಯಾದ ಜ್ವರನು, ನನ್ನ ಮೇಲೆ ಪ್ರಸನ್ನನಾಗಿ ರೋಗ ಪರಿಹರಿಸಲಿ ಎಂದು ಸಾಧಕನು ಹೇಳಬೇಕು.

**ತ್ರಿಪಾದ್ ಭಸ್ಮ ಪ್ರಹರಣಃ ತ್ರಿಶಿರಾ ನವಲೋಚನಃ ।**
**ಸ ಮೇ ಪ್ರೀತಃ ಸುಖಂ ದದ್ಯಾತ್ ಸರ್ವಾಮಯಪತಿರ್ಜ್ವರಃ ॥ 13 ॥**

ಜಗತ್ತಿನ ಉತ್ಪತ್ತಿ ನಾಶಗಳು ಯಾರ ಅಧೀನದಲ್ಲಿವೆಯೋ ಯಾರು ಸರ್ವಜ್ಞನೋ [**ತ್ವಂ ಕವಿಃ ಸರ್ವವೇದನಾತ್**]. ಅನಾದಿ ಕಾಲದಿಂದಿರುವವರೂ [**ಪುರಾಣಂತದನಾದಿತಃ**]. ಅವ್ಯಕ್ತ ಸ್ವಭಾವನಾದ್ದರಿಂದ ಸೂಕ್ಷ್ಮರೋ ಸರ್ವೋತ್ತಮವಾದವುಗಳೋ, ಸಕಲ ಜಗತ್ತನ್ನೂ ನಿಯಮಿಸುವುದರಿಂದ ಶಾಸಕರೋ ಅಂತಹ ಪ್ರದ್ಯುಮ್ನಾನಿರುದ್ಧ ಸಂಕರ್ಷಣ ವಾಸುದೇವ ಮೂರ್ತಿಗಳು ಸಮಸ್ತ ಜ್ವರಗಳನ್ನೂ ಪರಿಹರಿಸಲಿ!

**ಆದ್ಯಂತವಂತಃ ಕವಯಃ ಪುರಾಣಾಃ ಸೂಕ್ಷ್ಮಾ**
**ಬೃಹಂತೋಽಪ್ಯನುಶಾಸಿತಾರಃ ।**
**ಸರ್ವಾನ್ ಜ್ವರಾನ್ ಘ್ನಂತು ಮಮಾನಿರುದ್ಧ- ಪ್ರದ್ಯುಮ್ನ ಸಂಕರ್ಷಣ –**
**ವಾಸುದೇವಾಃ ॥ 14 ॥**

ಹೀಗೆ ಪ್ರಾರ್ಥಿಸಿದವರನ್ನು ನೀನು ಪೀಡಿಸಬೇಡ ಎಂದು ಹೇಳಲು ಜ್ವರನು '**ಏವಮೇತದ್ ಭವಿಷ್ಯತಿ**' ನೀನು ಹೇಳಿದಂತೆಯೆ ನಡೆಯುತ್ತದೆ ಎಂದನು.

ಜನಮೇಜಯನೇ, ಹೀಗೆ ಜ್ವರನು ಶ್ರೀಕೃಷ್ಣನಿಂದ ವರ ಪಡೆದು ಅವನೊಡನೆ ನಿಬಂಧನೆ ಮಾಡಿಕೊಂಡು ನಮಸ್ಕರಿಸಿ ಹೊರಟು ಹೋದನು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಜ್ವರನ ಪರಾಜಯ – ಶ್ರೀಕೃಷ್ಣನ ಅನುಗ್ರಹ ಎಂಬಲ್ಲಿ
ನೂರಇಪ್ಪತ್ತಮೂರನೆಯ ಅಧ್ಯಾಯ ಸಮಾಪ್ತಿ

# ಅಥ ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ

## ಬಾಣಸುರ ಸೈನ್ಯದ ಪಲಾಯನ

**ತತಸ್ತೇ ತ್ವರಿತಾಃ ಸರ್ವೇ ತ್ರಯಸ್ತ್ರಯ ಇವಾಗ್ನಯಃ ।।**
**ವೈನತೇಯಮಥಾರುಹ್ಯ ಯುಧ್ಯಮಾನ ರಣೇ ಸ್ಥಿತಾಃ ॥ 1 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ ತ್ರೇತಾಗ್ನಿಗಳಂತೆ ದೇದಿಪ್ಯಮಾನರಾದ ಕೃಷ್ಣ-ಬಲರಾಮ - ಪ್ರದ್ಯುಮ್ನರು ವೇಗವಾಗಿ ಗರುಡಾರೂಢರಾಗಿ ಶತ್ರು ಸೈನ್ಯದೊಂದಿಗೆ ಹೋರಾಡುತ್ತಾ ರಣಭೂಮಿಯಲ್ಲಿ ತಿರುಗುತ್ತಿದ್ದರು.

ಅವರು ಸಿಂಹನಾದ ಮಾಡುತ್ತಾ ತಮ್ಮ ಚೂಪಾದ ಶರಗಳಿಂದ ಬಾಣನ ಸೈನ್ಯವನ್ನು ಆಚ್ಛಾದಿಸಿದರು. ಹೀಗೆ ಬಾಣುಸುರನ ಸೈನ್ಯ ಚಕ್ರಾಯುಧ, ಹಲಾಯುಧ, ಬಾಣಗಳ ಮಳೆಗಳಿಂದ ಅತ್ಯಂತ ಪೀಡಿತವಾಗಿತ್ತು. ಶ್ರೀಕೃಷ್ಣನ ಬಾಣಗಳಿಂದ ಸಾವಿರಾರು ದಾನವರು ನಾಶ ಹೊಂದಿದರು. ಬಾಣದಿಂದ ಹುಟ್ಟಿದ ಅಗ್ನಿಯು ಬಾಣನ ಸೈನ್ಯವನ್ನು ಸರ್ವತ್ರ ವ್ಯಾಪಿಸಿ ಸುಡತೊಡಗಿದಾಗ ರಣರಂಗದಲ್ಲಿ ಸೈನ್ಯ ನಿಲ್ಲಲಾರದೆ ಪಲಾಯನಗೈದಿತು. ಬಾಣನಾದರೂ ಮಹಾಸೈನ್ಯದ ಬಳ ಬಂದು ಅದನ್ನು ತಡೆದು ನಿಲ್ಲಿಸುತ್ತಾ ಹೀಗೆಂದರು.

**ಲಾಘವಂ ಸಮುಪಾಗಮ್ಯ ಕಿಮರ್ಥಂ ಭಯವಿಕ್ಲವಾಃ ।**
**ದೈತ್ಯವಂಶ ಸಮುತ್ಪನ್ನಾಃ ಪಲಾಯಧ್ವಂ ಮಹಾಹವಾತ್ ॥ 2 ॥**

"ದೈತ್ಯ ವೀರರೇ, ದೈತ್ಯ ವಂಶದಲ್ಲಿ ಹುಟ್ಟಿಯೂ ಈ ಪಲಾಯನಕ್ಕೆ

ಆಶ್ರಯವಿತ್ತಿರುವ ನಿಮಗೆ ಧಿಕ್ಕಾರವಿರಲಿ! ನಿಮ್ಮ ಕವಚ, ಗದೆ ಮೊದಲಾದವು–ಗಳನ್ನು ಕೆಳಗೆ ಹಾಕಿ ಮನಬಂದಲ್ಲಿಗೆ ಓಡಾಡುತ್ತಿರುವಿರಿ. ನಿಮ್ಮ ಜಾತಿ, ನಿಮ್ಮ ಸಾಮರ್ಥ್ಯ, ನನ್ನ ಪರಾಕ್ರಮ ನನ್ನೊಂದಿಗೆ ಶಿವನಿಗಿರುವ ಸಂಬಂಧವನ್ನು ತಿಳಿದಾದರೂ ಓಡದೆ ಯುದ್ಧಕ್ಕೆ ಮರಳಿ ಬನ್ನಿರಿ. ನಾನೂ ಯುದ್ಧ ರಂಗ ಪ್ರವೇಶಿಸಿದ್ದೇನೆ. ನೀವೆಲ್ಲರೂ ಹೋರಾಡಿರಿ ಎಂದು, ಬಾಣನು ಹೀಗೆ ದೈತ್ಯ ಸೈನ್ಯಕ್ಕೆ ಉತ್ಸಾಹವರ್ಧಕ ಮಾತುಗಳನ್ನು ಪದೇ ಪದೇ ಹೇಳಿ ಹುರಿದುಂಬಿಸುತ್ತಿದ್ದರೂ ಭಯದಿಂದ ಓಡಿ ಹೋದರು.

**ಅಪ್ರಕಾಮಂತ ತೇ ಸರ್ವೇ ದಾನವಾಃ ಭಯಮೋಹಿತಾಃ ।**

ರುದ್ರದೇವನ ಪ್ರಮಥಗಳು ಮಾತ್ರ ಅಲ್ಲಿಯೆ ಉಳಿದಿದ್ದವು. ಅವುಗಳನ್ನೆ ಆಶ್ರಯಿಸಿ, ಭಗ್ನಾವಶೇಷರಾದ ಸೈನಿಕರೊಂದಿಗೆ ಬಾಣನು ಯುದ್ಧ ಮಾಡಲು ತೀರ್ಮಾನಿಸಿದನು. ಆಗ ಬಾಣನ ಮಂತ್ರಿ ಕುಂಭಾಂಡಕನು ಸೈನಿಕರನ್ನು ಹೀಗೆಂದನು.

**ಏಷ ಬಾಣಃ ಸ್ಥಿತೋ ಯುದ್ಧೇ ಶಂಕರೋಽಯಂ ಗುಹಸ್ತಥಾ ॥ 3 ॥**

ನಮ್ಮ ಪಕ್ಷದಲ್ಲಿ ಬಾಣನಿರುವನು. ಅವನೊಂದಿಗೆ ಶಂಕರನು, ಅವನ ಪುತ್ರ ಸ್ಕಂದನು ಬಂದಿರುವರು. ಇಂತಹವರ ಬೆಂಬಲ ಪಡೆದು ಮೋಹಿತರಾಗಿ ಬೆನ್ನು ತೋರಿಸಿ ಓಡುತ್ತಿರುವುದೇನು? ನಿಲ್ಲಿರಿ. ಕುಂಭಾಂಡನ ಮಾತುಗಳೂ ಅವರನ್ನು ನಿಲ್ಲಿಸಲಿಲ್ಲ. ಶ್ರೀಕೃಷ್ಣನ ಚಕ್ರಾಗ್ನಿಯಿಂದ ಮಹಾಭಯವಾಗಿದ್ದ ಅವರು ದಿಕ್ಕಾಪಾಲಾಗಿ ಓಡಿ ಹೋದರು.

## ಶ್ರೀಕೃಷ್ಣ – ರುದ್ರ ದೇವರ ಯುದ್ಧ

**ಭಗ್ನಂ ಬಲಂ ತತೋ ದೃಷ್ಟ್ವಾ ಕೃಷ್ಣೇನಾಮಿತ ತೇಜಸಾ ।**
**ಸಂರಕ್ತನಯನಃ ಸ್ಥಾಣುಃ ಯುದ್ಧಾಯ ಪರ್ಯವರ್ತತಃ ॥ 4 ॥**
**ಬಾಣ ಸಂರಕ್ಷಣಂ ಕರ್ತುಂ ರಥಮಾಸ್ಥಾಯ ಸುಪ್ರಭಮ್ ।**
**ದೇವಃ ಕುಮಾರಶ್ಚ ತಥಾ ರಥೇನಾಗ್ನಿ– ಸಮೇನ ವೈ ॥ 5 ॥**

ಬಾಣನ ಸೈನ್ಯ ಶ್ರೀಕೃಷ್ಣನಿಂದ ನಾಶ ಹೊಂದುತ್ತಿರುವುದನ್ನು ನೋಡಿ ಕೆಂಗಣ್ಣನಾದ ಉಮಾಧವನು, ಮಾಧವನೊಂದಿಗೆ ಯುದ್ಧಕ್ಕೆ ವೃಷಭಾರೂಢನಾಗಿ ತನ್ನ ಮಗ ಕಾರ್ತಿಕೇಯನಿಂದಲೂ, ಭೂತಪ್ರೇತ

ಶಾಕಿನೀ ಡಾಕಿನೀಗಳಿಂದ ಕೂಡಿದ ಪ್ರಮಥಗಣಗಳಿಂದಲೂ ರಣಭೂಮಿಗೆ ಬಂದು ಕೃಷ್ಣ ಬಲರಾಮನೊಂದಿಗೆ ಯುದ್ಧ ಹೂಡಿದನು.[1]

ಶಿವನು ಬಾಣನ ಸಂರಕ್ಷಣೆಗಾಗಿ ದಿವ್ಯರಥದಲ್ಲಿ ಕುಳಿತು ಕೃಷ್ಣನ ಕಡೆಗೆ ಧಾವಿಸಿ ಹೋದಾಗ ಅಗ್ನಿಯಂತೆ ಹೊಳೆಯುವ ರಥದಲ್ಲಿ ಕುಳಿತ ಸ್ಕಂಧನು ಶಿವನನ್ನು ಹಿಂಬಾಲಿಸಿದನು. ನಾನಾ ರೀತಿಯ ಸಿಂಹನಾದ ಮಾಡುತ್ತಿದ್ದ ನಾನಾ ವಿಧವಾದ ಭಯಂಕರ ರೂಪಗಳನ್ನು ಧರಿಸಿದ್ದ ಸಾವಿರಾರು ರುದ್ರನ ಪ್ರಮಥಗಣಗಳೊಂದಿಗೆ ಸಮಾವೃತವಾಗಿದ್ದ ಮಹಾದೇವನ ಮಹಾರಥವು ಮೇಘದಿಂದ ಮುಕ್ತ ಚಂದ್ರನಂತೆ ಶೋಭಿಸುತಿತ್ತು.

ಶಿವನ ಗಣದಲ್ಲಿ ಸಿಂಹ ಮುಖದವರೂ, ವ್ಯಾಘ್ರ, ಗಜ, ಅಶ್ವ, ಒಂಟೆ ಮುಖದವರು ಅನೇಕ ಸಂಖ್ಯೆಯಲ್ಲಿದ್ದರು. ಶಿವನ ಪ್ರಮಥ ಗಣಗಳಲ್ಲಿ ಕೆಲವರು ಸರ್ಪಗಳನ್ನೆ ಯಜ್ಞೋಪವೀತದಂತೆ ಧರಿಸಿದ್ದರು. ಕೆಲವರು ಮೇಕೆ ಮುಖದಂತೆಯೂ, ಬೆಕ್ಕಿನಂತೆಯೂ, ಟಗರು ತಲೆಯಂತೆಯೂ ಇರುತ್ತಿದ್ದರು. ನಾರು ಮಡಿ ವುಟ್ಟವರು, ಶಿಖೆ ಧರಿಸಿದವರು, ಊರ್ಧ್ವ ಮುಖ ಜಟೆಯವರೂ ಇರುತ್ತಿದ್ದು ಕೃಷ್ಣನ ಬಾಣಗಳಿಂದ ಭಗ್ನರಾಗಿ ಕೆಳಗೆ ಬೀಳುತ್ತಿದ್ದರು. ಇವರಲ್ಲದೆ ಸೌಮ್ಯರು, ಪುಷ್ಪಧಾರಿಗಳೂ, ನಾನಾ ವಿಧ ಆಯುಧಧಾರಿಗಳೂ, ಇದ್ದರು. ವಿಕಟ ಆಕಾರ ಕೆಲವರಾದರೆ ಸಿಂಹ ಹಾಗೂ ವ್ಯಾಘ್ರ ಚರ್ಮಗಳಿಂದ ತಮ್ಮನ್ನು ಮುಚ್ಚಿಕೊಂಡಿದ್ದರು. ಕೆಲವು ಮಾಂಸಾಶನಿಗಳು ಕೋರೆದಾಡೆಗಳಿಂದಲೂ, ಕೂಡಿದ್ದು ಶಿವನನ್ನು ಸುತ್ತುವರಿದು ನಿಂತಿದ್ದರು.

## ಶಿವ–ಕೃಷ್ಣ ಯುದ್ಧ

**ಕೃಷ್ಣಃ ಗರುಡಮಾಸ್ಥಾಯ ಯಯೌ ರುದ್ರಾಯ ಸಂಯುಗೇ ।**
**ವೈನತೇಯಸ್ಥಮಾಸ್ಯಂತಮ್ ಆಯಾಂತಮಗ್ರಣೀಂ ಹರಿಮ್ ॥ 6 ॥**
**ವಿವ್ಯಾಧ ಕುಪಿತೋ ಬಾಣೈಃ ನಾರಾಚಾನಾಂ ಶತೇನ ಸಃ ।**

ರುದ್ರದೇವನ ರಥವನ್ನು ನೋಡಿದ ಕೃಷ್ಣನು ಗರುಡಾರೂಢನಾಗಿ ರುದ್ರನೊಂದಿಗೆ ರಣ ಹೂಡಲು ಹೊರಟನು. ಗರುಡನ ಮೇಲೇರಿ ಬರುತ್ತಿರುವ ಕೃಷ್ಣನನ್ನು ನೋಡಿ ಕ್ರುದ್ಧನಾಗಿ ನೂರು ಬಾಣಗಳಿಂದ ಹೊಡೆದನು.

---

1. ಬಾಣಾರ್ಥೇ ಭಗವಾನ್ ರುದ್ರಃ ಸಸುತೈಃ ಪ್ರಮಥೈರ್ವೃತಃ ।
ಆರುಹ್ಯ ನಂದೀವೃಷಭಂ ಯುಯುಧೇ ರಾಮಕೃಷ್ಣಯೋಃ ॥ ಭಾ. 78/6

**ಹರಿರ್ಜಗ್ರಾಹ ಕುಪಿತೋ ಹ್ಯಸ್ತ್ರಂ ಪಾರ್ಜನ್ಯಮುತ್ತಮಮ್ ।**
**ಪ್ರಚಚಾಲ ತತೋ ಭೂಮಿಃ ವಿಷ್ಣುರುದ್ರ ಪ್ರಪೀಡಿತಾ ॥ 7 ॥**

ರುದ್ರದೇವನ ಬಾಣಗಳಿಂದ ಕೋಪಗೊಂಡ ಕೃಷ್ಣನು ಪರ್ಜ್ಯನ್ಯಾಸ್ತ್ರವನ್ನು ಕೈಗೆತ್ತಿಕೊಂಡನು. ಈ ಹರಿ-ಹರರ ಯುದ್ಧದಿಂದಾಗಿ ಭೂದೇವಿಯು ಕಂಪಿಸಿದಳು.

ದಿಗ್ಗಜಗಳು ಸೊಂಡಿಲುಗಳನ್ನು ಮೇಲೆತ್ತಿ ತತ್ತರಿಸಿದವು. ನೀರಿನ ಧಾರೆಗಳಿಂದ ಪರ್ವತಗಳೆಲ್ಲ ತೊಯ್ದು ಹೋದವು. ಕೆಲವು ಪರ್ವತಗಳ ಶಿಖರಗಳು ಕೆಳಗೆ ಬಿದ್ದವು. ದಿಕ್ಕು-ವಿದಿಕ್ಕು-ಭೂಮಿ - ಆಕಾಶಗಳೆಲ್ಲವೂ ಸುಡುತ್ತಿರುವಂತೆ ತೋರಿತು. ಸರ್ವತ್ರ ಸಿಡಿಲುಗಳು ಬೀಳತೊಡಗಿದವು. ನರಿಗಳೆಲ್ಲವೂ ಜಗತ್ತಿಗೆ ಅಮಂಗಳ ಸೂಚಿಸುವಂತೆ ಊಳಕ್ಕುತ್ತಿದ್ದವು. ಇಂದ್ರದೇವನು ರಕ್ತದ ವರ್ಷ ಸುರಿಸಿದನು. ಉಲ್ಕೆಗಳು ಬಿದ್ದವು. ಪ್ರಚಂಡ ವಾಯುವು ಬೀಸುತ್ತಿದ್ದನು. ನಕ್ಷತ್ರ ತಾರೆಗಳಾಗಲೀ, ಪಕ್ಷಿಗಳಾಗಲೀ ಆಕಾಶದಲ್ಲಿ ಸಂಚರಿಸುತ್ತಿದ್ದಿಲ್ಲ.

## ಬ್ರಹ್ಮದೇವನ ಆಗಮನ

**ಏತಸ್ಮಿನ್ನಂತರೇ ಬ್ರಹ್ಮಾ ಸರ್ವದೇವಗಣೈರ್ವೃತಃ ।**
**ತ್ರಿಪುರಾಂತಕ ಮುದ್ಯಂತಂ ಜ್ಞಾತ್ವಾ ರುದ್ರಮುಪಾಗಮತ್ ॥ 8 ॥**

ಈ ಮಧ್ಯದಲ್ಲಿ ಸಮಸ್ತ ದೇವತಾ ವೃಂದದೊಡನೆ ಚತುರ್ಮುಖ ಬ್ರಹ್ಮನು ತ್ರಿಪುರಾಂತಕನು ಚತುರ್ದಶಲೋಕಾಂತಕನ ಮೇಲೆ ಯುದ್ಧದಲ್ಲಿ ತೊಡಗಿರುವನೆಂದು ತಿಳಿದು ಅಲ್ಲಿಗೆ ಬಂದನು. ಯಕ್ಷ ವಿದ್ಯಾಧರ, ಸಿದ್ಧರು, ಚಾರಣರು ಯುದ್ಧವನ್ನು ನೋಡಲು ಗಗನದಲ್ಲಿ ನೆರೆದರು.

ಶ್ರೀಕೃಷ್ಣನಾದರೂ ಶಂಕರನ ಅನುಯಾಯಿಗಳಾದ ಭೂತಪ್ರೇತ ಪಿಶಾಚ, ಗುಹ್ಯಕ ಡಾಕಿನೀ, ವೇತಾಲ ವಿನಾಯಕ, ಮಾತ್ರಗಣ, ಕೂಶ್ಮಾಂಡರನ್ನೂ ಚೂಪಾದ ಬಾಣಗಳಿಂದ ಹೊಡೆದೋಡಿಸಿದನು. ಇದರಿಂದಾಗಿ ಕೋಪಗೊಂಡ ಪಿನಾಕಪಾಣಿ ಶಿವನು ಚಕ್ರಪಾಣಿ ಕೃಷ್ಣನ ಮೇಲೆ ಅಸ್ತ್ರ-ಶಸ್ತ್ರಗಳ ಮಳೆ ಸುರಿಸಿದನು. ಶ್ರೀಕೃಷ್ಣನು ಪರ್ಜನ್ಯಾಸ್ತ್ರ ಪ್ರಯೋಗಿಸಿದನು. ಇದು ಪ್ರಜ್ವಲಿಸುತ್ತಾ ಶಿವನ ಬಳಿ ಹೋಯಿತು. ಅದರ ಪ್ರಭಾವವೆಷ್ಟಿತ್ತೆಂದರೆ ಅದರಿಂದ ಲಕ್ಷೋಪಲಕ್ಷ ಬಾಣಗಳು ಹತ್ತೂ ದಿಕ್ಕಿನಿಂದ ಹೊರಬಂದು ಶಿವನ ರಥದ ಮೇಲೆ ಬಿದ್ದವು. ಇದರಿಂದ ಕೋಪಗೊಂಡ ಶಿವನು ಆಗ್ನೇಯಾಸ್ತ್ರ

ಪ್ರಯೋಗಿಸಿದನು. ಇದರಿಂದಾಗಿ ನಾಲ್ವರು ಕೃಷ್ಣಾದಿಗಳಿಗೂ ಗಾಯಗಳಾದವು. ಆಗ್ನೇಯಾಸ್ತ್ರದಿಂದ ಹೊರಬಂದ ಸಾವಿರಾರು ಬಾಣಗಳು ಅವರನ್ನು ಕ್ಷಣಕಾಲ ಮರೆ ಮಾಡಿತು. ಆಗ್ನೇಯಾಸ್ತ್ರದಿಂದ ಕೃಷ್ಣನು ಮೃತನಾದನೆಂದೆ ದಾನವರು ಭ್ರಮಿಸಿದರು.

**ಹತೋಽಯಮಿತಿ ವಿಜ್ಞಾಯ ಆಗ್ನೇಯಾಸ್ತ್ರೇಣ ವೈ ತದಾ ।**

ಮರುಕ್ಷಣದಲ್ಲಿಯೇ ಆಗ್ನೇಯಾಸ್ತ್ರದ ಪ್ರಹಾರವನ್ನು ಸಹಿಸಿಕೊಂಡು ಆಗ್ನೇಯಾಸ್ತ್ರದ ಶಾಂತಿಗಾಗಿ ವಾರುಣಾಸ್ತ್ರವನ್ನು ಬಿಟ್ಟನು. [**ಜಗ್ರಾಹ ವಾರುಣಂ ಸೋಽಸ್ತ್ರಂ**]

**ಆಗ್ನೇಯಾಸ್ತ್ರಂ ಪ್ರಶಮಂ ಯಾತಮಸ್ತ್ರಂ ವಾರುಣತೇಜಸಾ ॥ 9 ॥**

ಶ್ರೀಕೃಷ್ಣನು ಬಿಟ್ಟ ವಾರುಣಾಸ್ತ್ರದಿಂದ ಆಗ್ನೇಯಾಸ್ತ್ರವು ಶಮನಗೊಂಡಿತು. ರುದ್ರದೇವನು ಕುಪಿತನಾಗಿ ಪ್ರಲಯಾಗ್ನಿ ಸದೃಶವಾದ ಪೈಶಾಚ - ರಾಕ್ಷಸ - ರೌದ್ರ - ಆಂಗೀರಸವೆಂಬ ಮಹಾಸ್ತ್ರಗಳನ್ನು ಬಿಟ್ಟನು.

**ವಾಯವ್ಯಮಥ ಸಾವಿತ್ರಂ ವಾಸವಂ ಮೋಹನಂ ತಥಾ ।**
**ಅಸ್ತ್ರಾಣಾಂ ವಾರಣಾರ್ಥಾಯ ವಾಸುದೇವೋ ವ್ಯಮುಂಚತ ॥ 10 ॥**

ಶ್ರೀಕೃಷ್ಣನು ಈ ಪೈಶಾಚಾದಿ ನಾಲ್ಕು ಮಹಾಸ್ತ್ರಗಳ ವಿರುದ್ಧವಾಗಿ ವಾಯವ್ಯಾಸ್ತ್ರ ಸಾವಿತ್ರ-ವಾಸವ - ಮೋಹನವೆಂಬ ಅಸ್ತ್ರಗಳನ್ನು ಬಿಟ್ಟನು. ಇದರಿಂದಾಗಿ ರುದ್ರನು ಪ್ರಯೋಗಿಸಿದ್ದ ನಾಲ್ಕು ಅಸ್ತ್ರಗಳೂ ಉಪಶಮನ ಹೊಂದಿದವು.

## ವೈಷ್ಣವಾಸ್ತ್ರ ಪ್ರಯೋಗ

**ಮುಮೋಚ ವೈಷ್ಣವಂ ಸೋಽಸ್ತ್ರಂ ವ್ಯಾದಿತಾಸ್ಯಾಂತಕೋಪಮಂ ॥ 11 ॥**

ಶ್ರೀಕೃಷ್ಣನು ತನ್ನ ವೈಷ್ಣವಾಸ್ತ್ರವನ್ನು ರುದ್ರನ ಮೇಲೆ ಬಿಟ್ಟನು. ಇದನ್ನು ಪ್ರಯೋಗ ಮಾಡುತ್ತಿದ್ದಂತೆ ಸಮಸ್ತ ಸೇನಾ ವಾಹಿನಿಯೂ ಭಯದಿಂದ ವಿಹ್ವಲವಾಗಿ ದಶದಿಕ್ಕುಗಳಿಗೂ ಓಡಿ ಹೋದರು.

## ಬಾಣ ಯುದ್ಧ ಪ್ರವೇಶ

**ನಿರ್ಜಗಾಮ ತತೋಬಾಣಃ ಯುದ್ಧಾಯಾಭಿಮುಖಿಸ್ತ್ವರಮ್ ।**

ಶಿವನ ಪ್ರಮಥಗಳಿಂದ ತುಂಬಿದ್ದ ತನ್ನ ಸೈನ್ಯ ದಿಕ್ಕು ಪಾಲಾಗಿ ಓಡಿದಾಗ

ಬಾಣನು ಕೃಷ್ಣನೊಂದಿಗೆ ಹೋರಾಡಲು ಧಾವಿಸಿ ಬಂದನು. ಭಯಂಕರ ಆಯುಧಧರಿಸಿ ಬಾಣನು ವಜ್ರಹಸ್ತ ಇಂದ್ರನಂತೆ ಕಂಡು ಬಂದ.

### ಬ್ರಾಹ್ಮಣರ ಆಶೀರ್ವಾದ

ಜನಮೇಜಯನೆ, ಬಾಣನು ಯುದ್ಧಕ್ಕೆ ಹೊರಡುತ್ತಿರುವಾಗಲೇ ಬ್ರಾಹ್ಮಣರು ಜಪ-ಮಂತ್ರ - ಔಷಧಿಗಳಿಂದ ಬಾಣನಿಗೆ ಶಾಂತಿ ಮಾಡಿದರು. ಬಾಣನು ಬ್ರಾಹ್ಮಣರಿಗೆ ಗೋವುಗಳನ್ನು ವಸ್ತ್ರಗಳನ್ನೂ ನೀಡಿದನು. ಅವನ ರಥವು ವಿಶಾಲವಾಗಿದ್ದು ಸಾವಿರಾರು ಸೂರ್ಯನ ಚಿಹ್ನೆಗಳಿದ್ದವು. ಸಾವಿರಾರು ಚಂದ್ರನ ಚಿಹ್ನೆಗಳಿದ್ದು ಹತ್ತು ಸಾವಿರ ನಕ್ಷತ್ರ ಚಿಹ್ನೆಗಳಿದ್ದವು. ಅಗ್ನಿಯಂತೆಯೆ ರಥವು ಶೋಭಾಯಮಾನವಾಗಿತ್ತು. ಕುಂಭಾಂಡಕನು ರಥದ ಸಾರಥಿಯಾಗಿಯೂ, ಧ್ವಜವು ಹಾರಾಡುತ್ತಿತ್ತು. ಬಾಣಾಸುರನು ಹನ್ನೆರಡು ಅಕ್ಷೋಹಿಣೀ ಸೈನ್ಯ ನಾಶ ಮಾಡಲೆಂದು ಉಗ್ರರೂಪ ಧರಿಸಿದ್ದನು.

ಬಾಣನ ದೈತ್ಯ ಸಾಗರವು ಯಾದವರನ್ನೂ ಕೊಂದು ಹಾಕಲು ಮುನ್ನುಗ್ಗುತ್ತಿತ್ತು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ಶಿವ-ಕೃಷ್ಣ ಯುದ್ಧ ಎಂಬಲ್ಲಿ
ನೂರಇಪ್ಪತ್ತನಾಲ್ಕನೆಯ ಅಧ್ಯಾಯ ಸಮಾಪ್ತಿ

## ಅಥ ಪಂಚವಿಂಶತ್ಯಧಿಕಶತತಮೋಽಧ್ಯಾಯಃ

### ಜೃಂಬಣಾಸ್ತ್ರ ಪ್ರಯೋಗ

ರುದ್ರದೇವನು ಶ್ರೀಕೃಷ್ಣನ ಮೇಲೆ ಬೇರೆ ಬೇರೆ ರೀತಿಯ ಅಸ್ತ್ರಗಳನ್ನು ಪ್ರಯೋಗಿಸಿದನು. ಶ್ರೀಕೃಷ್ಣನು ಬ್ರಹ್ಮಾಸ್ತ್ರಕ್ಕೆ ಬ್ರಹ್ಮಾಸ್ತ್ರ, ವಾಯುವ್ಯಾಸ್ತ್ರಕ್ಕೆ ಪರ್ವತಾಭಿಮಾನಿ ಪಾರ್ವತಾಸ್ತ್ರವನ್ನೂ, ಆಗ್ನೇಯಾಸ್ತ್ರಕ್ಕೆ ವಾರುಣಾಸ್ತ್ರ, ಪಾಶುಪತಾಸ್ತ್ರಕ್ಕೆ ನಾರಾಯಣಾಸ್ತ್ರವನ್ನೂ ಬಿಟ್ಟು ಶಮನಗೊಳಿಸಿದನು.

ಜನಮೇಜಯನೇ, ಶ್ರೀಕೃಷ್ಣನ ವೈಷ್ಣವಾಸ್ತ್ರದಿಂದ ತ್ರಿಪುರಾಂತಕ ಶಿವನ ಶರೀರವೆಲ್ಲ ದಹಿಸಲಾರಂಭಿಸಿತು. ಪಂಚಮುಖಶಿವನಾದರೂ ಚತುರ್ಮುಖ ಬಾಣವನ್ನು ತೆಗೆದುಕೊಂಡು ಸಹಸ್ರಾಕ್ಷನ ಮೇಲೆ ಬಿಡಲುದ್ಯುಕ್ತನಾದಾಗ ಶ್ರೀಕೃಷ್ಣನಿಗೆ ರುದ್ರನ ಮನೋರಥ ತಿಳದು, ಶಿವನ ಮೇಲೆ ಜೃಂಭಕಾಸ್ತ್ರ'ವನ್ನು ಪ್ರಯೋಗಿಸಿದನು.

---

1. **ಜೃಂಭಕಾಸ್ತ್ರ :**
ಇದನ್ನು ಪ್ರಯೋಗಿಸಿದಾಗ ಯಾರ ಮೇಲೆ ಪ್ರಯೋಗಿಸಲಾಗುವುದೋ ಅವನಿಗೆ ನಿರಂತರ ಆಕಳಿಕೆವುಂಟಾಗುತ್ತದೆ. ಇದರಿಂದಾಗಿ ಒಂದು ರೀತಿಯ ಆಲಸ್ಯವೇರ್ಪಡುತ್ತದೆ. ವೃತ್ರಾಸುರನು ಇಂದ್ರದೇವನನ್ನು ನುಂಗಿದಾಗ ಭಯಗೊಂಡ ದೇವತೆಗಳು ಅವನ ಮೇಲೆ ಜೃಂಭಕಾಸ್ತ್ರ ಪ್ರಯೋಗಿಸಿದರು. ವೃತ್ರಾಸುರನು ಆಕಳಿಕೆಗೆ ಒಳಗಾದ. ಆಕಳಿಸುತ್ತಿರುವಾಗ ವೃತ್ರನ ದೇಹ ವಿಸ್ತಾರವಾಯಿತು. ಬಾಯಿ ಅಗಲವಾಯಿತು. ಇಂದ್ರದೇವನ ದೇಹ ಸಂಕೋಚ ಮಾಡಿಕೊಂಡು ಹೊರಬಂದು. ಅಂದಿನಿಂದ ಜೃಂಭಕವು ದೇಹದ ಪ್ರಾಣವಾಯುವಿನೊಂದಿಗೆ ಸೇರಿತು. ಇದರಿಂದಾಗಿ ಶ್ರಮವಾದಾಗ ಮೈ ಮುರಿದು ಬಾಯಿ ತೆರೆದು ವಾಯುವನ್ನು ಹೊರಗೆ ಕಳಿಸಿ ಪುನಃ ಒಳಗೆ ತೆಗೆದುಕೊಳ್ಳುವರು.

**ಜೃಂಭಣಂ ನಾಮ ಸೋಽಪ್ಯಸ್ತ್ರಂ ಜಗ್ರಾಹ ಪುರುಷೋತ್ತಮಃ ॥**
**ಹರಂ ಸಂಜೃಂಭಯಾಮಾಸ ಕ್ಷಿಪ್ರಕಾರೀ ಮಹಾಬಲಃ ॥ 1 ॥**

ಈ ಜೃಂಭಣಾಸ್ತ್ರದಿಂದ ರುದ್ರನು ನಿರಂತರ ಆಕಳಿಸಲಾರಂಭಿಸಿದನು. ಧನುರ್ಬಾಣಗಳನ್ನು ಹಿಡಿದಿದ್ದಂತೆಯೇ ಬಹಳವಾಗಿ ಆಕಳಿಸತೊಡಗಿದನು.

**ಸಂಜ್ಞಾಂ ನ ಲೇಭೇ ಭಗವಾನ್ ವಿಜೇತಾಸುರ ರಕ್ಷಸಾಮ್ ।**

ಅಸುರ ರಾಕ್ಷಸರನ್ನು ಗೆಲ್ಲುವ ಧೈರ್ಯ ಇರುವವನಾದರೂ ಶಿವನು ಜೃಂಭಣಾಸ್ತ್ರದಿಂದ ಪರವಶನಾದನು.

**ಸಶರಂ ಸಧನುಷ್ಕಂ ಚ ದೃಷ್ಟ್ವಾಽಽತ್ಮಾನಂ ವಿಜೃಂಭಿತಮ್ ।**
**ಬಲೋನ್ಮತ್ತೋಽಥ ಬಾಣೋಽಸೌ ಶರ್ವಂ ಚೋದಯತೇಽಕೃತ್ ॥ 2 ॥**

ಧನುರ್ಬಾಣಾದಿಗಳನ್ನು ಹಿಡಿದಿದ್ದರೂ ಶಿವನು ಆಕಳಿಸುತ್ತಿರುವುದನ್ನು ಕಂಡು ಬಾಣಾಸುರನು ಕಲ್ಲು ಕಂಬದಂತೆ ನಿಂತ ಶಿವನನ್ನು ಕುರಿತು "ಶಿವನೇ! ಶ್ರೀಕೃಷ್ಣನನ್ನು ಪ್ರಹರಿಸು" ಎಂದು ಪುನಃ ಪುನಃ ಹೇಳುತ್ತಿದ್ದರೂ ಹೊಡೆಯಲು ಸಾಧ್ಯವಾಗಲಿಲ್ಲ. ಅವನ ದೇಹವೇ ಅವನ ಅಧೀನವಾಗಿರಲಿಲ್ಲ.

**ತತೋ ನನಾದ ಭೂತಾತ್ಮಾ ಸ್ನಿಗ್ಧಗಂಭೀರಯಾ ಗಿರಾ ।**
**ಪ್ರಧ್ಮಾಪಯಾಮಾಸ ತದಾ ಕೃಷ್ಣಃ ಶಂಖಂ ಮಹಾಬಲಃ ॥ 3 ॥**
**ಪಾಂಚಜನ್ಯಸ್ಯ ಘೋಷೇಣ ಶಾಂರ್ಗವಿಸ್ಫೂರ್ಜಿತೇನ ಚ ।**
**ದೇವಂ ವಿಜೃಂಭಿತಂ ದೃಷ್ಟ್ವಾ ಸರ್ವಭೂತಾನಿ ತತ್ರಸುಃ ॥ 4 ॥**

ರುದ್ರದೇವನು ಜೃಂಭಣಾಸ್ತ್ರದಿಂದ ಮೋಹಗೊಂಡವನಂತೆ ಇರುವಾಗಲೇ ಶ್ರೀಕೃಷ್ಣನು ಗಂಭೀರವಾಗಿ ಸಿಂಹನಾದ ಮಾಡಿ, ತನ್ನ ಪಾಂಚಜನ್ಯ ಶಂಖವನ್ನೂದಿದನು. ಶಾರ್ಙ್ಗಧನುಷ್ಟಿನ ಟೇಕಾರವನ್ನೂ ಮಾಡಿದನು. ಈ ಶಬ್ಧವನ್ನು ಕೇಳಿದರೂ ಇನ್ನೂ ಮೋಹದ ಗುಂಗಿನಲ್ಲಿಯೇ ಇದ್ದ ಪರಮಶಿವನನ್ನು ನೋಡಿ, ತಮಗೆ ರಕ್ಷಕರಾರು ಎಂದು ಭಯಗೊಂಡರು. ಇದೇ ಸಮಯದಲ್ಲಿ ಕೃಷ್ಣನು ಕತ್ತಿ-ಬಾಣ-ಗದಾದಿ ಆಯುಧಗಳಿಂದ ಬಾಣಾಸುರನ ಸೈನಿಕರನ್ನು ಧ್ವಂಸ ಮಾಡಿದನು.

### ಪದ್ಯುಮ್ನ - ಪಾರ್ಷದರಯುದ್ಧ

ಒಂದು ಕಡೆ ಪ್ರದ್ಯುಮ್ನ-ಕಾರ್ತಿಕೇಯರು ಯುದ್ಧ ಮಾಡುತ್ತಿದ್ದರು. ಇದೊಂದು

ರೋಮಾಂಚನಕಾರಿಯಾಗಿತ್ತು. ನಂತರ ರುದ್ರನ ಪಾರ್ಷದರು ಪ್ರದ್ಯುಮ್ನನನ್ನು ಸುತ್ತುವರೆದರು. ಮಾಯಾಯುದ್ಧವನ್ನೆ ಮಾಡಿದರು. ಪ್ರದ್ಯುಮ್ನನು ಅಸ್ತ್ರ-ಪ್ರತ್ಯಸ್ತ್ರಗಳಿಂದ ಜೃಂಭಣಾಸ್ತ್ರದಿಂದ ಪ್ರಮಥಗಳನ್ನು ನಿದ್ರಾಪರವಶ-ರನ್ನಾಗಿಸಿದನು.

**ಸರ್ವಾನ್ ತು ನಿದ್ರಾವಶಗಾನ್ ಕೃತ್ವಾ ಮಕರಕೇತುಮಾನ್ ।**
**ದಾನವಾನ್ ನಾಶಯತ್ ತತ್ರ ಶರಜಾಲೇನ ವೀರ್ಯವಾನ್ ॥ 5 ॥**

**ಶಿವನ ಬಾಯಿಂದ ಅಗ್ನಿಜ್ವಾಲೆ**

**ತತಸ್ತು ಜೃಂಭಮಾಣಸ್ಯ ದೇವಸ್ಯಾಕ್ಲಿಷ್ಟ ಕರ್ಮಣಃ ।**
**ಜ್ವಾಲಾ ಪ್ರಾದುರಭೂದ್ ವಕ್ತ್ರಾದ್ ದಹಂತೀವ ದಿಶೋ ದಶ ॥ 6 ॥**

ಜೃಂಭಣಾಸ್ತ್ರಕ್ಕೆ ವಶನಾಗಿ ನಿರಂತರ ಬಾಯಿ ತೆರೆಯುತ್ತಲೆ ಇದ್ದ ಶಿವನ ಬಾಯಿಂದ ಹತ್ತು ದಿಕ್ಕುಗಳನ್ನೂ ಸುಡುವಂತೆ ಜ್ವಲಿಸುತ್ತಿರುವ ಜ್ವಾಲೆಯೊಂದು ಹೊರಹೊಮ್ಮಿತು. ಇದರಿಂದ ಭೂದೇವಿಯು ಭಯಪಟ್ಟು ಬ್ರಹ್ಮದೇವನನ್ನು ಶರಣು ಹೊಂದಿದಳು.

ಬ್ರಹ್ಮದೇವನೇ! ನಾನು ಈ ಎರಡು ಮಹಾತೇಜಸ್ಸುಗಳ ಘರ್ಷಣೆಯಿಂದಾಗಿ ಬಹಳ ಪೀಡಿಸಲ್ಪಟ್ಟಿದ್ದೇನೆ. ಕೃಷ್ಣ-ಶಿವರ ಭಾರದಿಂದಾಗಿ ಸಮುದ್ರದಲ್ಲಿ ಲೀನಳಾಗುವೆನೊ ಎಂದು ಭಯವಿದೆ.

ಈ ಭಾರವನ್ನು ಅಸಮರ್ಥಳಾದ ನನಗೆ ಭಾರವು ಲಘುವಾಗಿರಲು ಉಪಾಯವೊಂದನ್ನು ಹೇಳು. ಭೂದೇವಿಯ ಮಾತನ್ನು ಕೇಳಿ ಬ್ರಹ್ಮನು,

**ಮುಹೂರ್ತಂ ಧಾರಯಾತ್ಮಾನಂ ಆಶು ಲಘ್ವೀ ಭವಿಷ್ಯಸಿ ।**

ದೇವಿ! ಒಂದು ಮುಹೂರ್ತದಷ್ಟು ಕಾಲ ಈ ಭಾರವನ್ನು ಧರಿಸು. ನಂತರ ಲಘುವಾಗುವಿ ಎಂದನು.

ವೈಶಂಪಾಯನರು ಜನಮೇಜಯನಿಗೆ ರುದ್ರದೇವನು ಶ್ರೀಕೃಷ್ಣನೊಂದಿಗೆ ಯುದ್ಧಕ್ಕೆ ಇಳಿದದ್ದನ್ನು ಕಂಡ ಬ್ರಹ್ಮದೇವನು – ರುದ್ರದೇವನೇ! ದೇವದೇವನಾದ ಕೃಷ್ಣನೊಂದಿಗೆ ಯುದ್ಧವೆ?

**ನ ಚ ಬುದ್ಧ್ಯಸಿ ಕೃಷ್ಣಂ ತ್ವಮಾತ್ಮಾನಂ ತು ದ್ವಿಧಾ ಕೃತಮ್ ।**
**ಪ್ರವಿಶ್ಯ ಯೋಗಂ ಯೋಗಾತ್ಮಾ ವರಾಂಸ್ತಾನ್ ಅನುಚಿಂತಯನ್ ॥ 7 ॥**

**ಜಗಾದ ನೋತ್ತರಂ ಕಿಂಚಿತ್ ನಿವೃತ್ತೋ ಹ್ಯಭವತ್ ತದಾ ॥ 8 ॥**

ರುದ್ರದೇವನೇ! ಶ್ರೀಹರಿ-ಶ್ರೀಕೃಷ್ಣವೆಂದು ತನ್ನ ಎರಡು ರೂಪ ಮಾಡಿ ಬಂದದ್ದನ್ನು ನೀನು ಅಸುರಾವೇಶದಿಂದಾಗಿ ತಿಳಿಯುತ್ತಿಲ್ಲ. ನಿನ್ನ ಉಗ್ರತಪವೆಂಬ ಮತ್ತೊಂದು ರೂಪವೂ ಕೃಷ್ಣನಲ್ಲಿರುವುದನ್ನು ತಿಳಿಯುತ್ತಿಲ್ಲ. ಹೀಗೆ ಹೇಳಿದ ಬ್ರಹ್ಮದೇವನು ಶಿವನನ್ನು ಕರೆದುಕೊಂಡು ಶ್ರೀಕೃಷ್ಣನ ಉದರದಲ್ಲಿ ಪ್ರವೇಶಿಸಿದ. ಅಲ್ಲಿ 'ಬಿಲ್ವವನ'ದಲ್ಲಿ ಶಿವನು ಶ್ರೀಹರಿಯಿಂದ ಶಿವಪದವಿಗಾಗಿ ತಪಸ್ಸನ್ನು ಮಾಡುತ್ತಿರುವುದನ್ನೂ ತೋರಿಸಿ, ಕೃಷ್ಣನ ಮೇಲೆ ಯುದ್ಧದಿಂದಾಗಿ ಕೃಷ್ಣನ ಜೃಂಭಣಾಸ್ತ್ರದಿಂದ ತಪಸ್ಸು ಮಾಡುತ್ತಿದ್ದ ರೂಪವೂ ಸ್ತಂಭಿತವಾದದ್ದನ್ನು ತೋರಿಸಿದನು. ಶ್ರೀಹರಿ-ಶ್ರೀಕೃಷ್ಣ ಬೇರೆಯಲ್ಲ. ಶ್ರೀಹರಿ ನಿನಗೆ ಶಿವಪದವಿ ನೀಡಿರುವನು. ಈಗ ಅವನಿಗೆ ವಿರೋಧ ಮಾಡಿರುವೆ. ಇದರಿಂದಾಗಿ ತಮೋರೂಪವೂ ಸ್ತಂಭಿತವಾಗಿದೆ. ಹೀಗಾದಲ್ಲಿ ಮುಂದೆ ನಿನಗೆ ಶಿವಪದವಿ ಇಲ್ಲವಾಗಬಹುದು. ಇದನ್ನೆ **'ಪ್ರವಿಶ್ಯಯೋಗಂ ಯೋಗಾತ್ಮಾ'** ಎನ್ನಲಾಗಿದೆ. ಯೋಗ ಸಮಾಧಿಯಿಂದ ಹೊರಬಂದನೆಂದು ಅರ್ಥವಲ್ಲ. **'ಯೋಗೋ ಯೋಗವಿದಾಂ ನೇತಾ'** ಎಂಬಂತೆ ಶ್ರೀಕೃಷ್ಣನನ್ನು ಪ್ರವೇಶಿಸಿ ಹೊರಬಂದ ಎಂದರ್ಥ.

**ಆತ್ಮಾನಂ ಕೃಷ್ಣಯೋನಿಸ್ಥಂ ಪಶ್ಯತ ಹ್ಯೇಕಯೋನಿಜಮ್ ।**
**ತತೋ ನಿಸ್ಸೃತ್ಯ ರುದ್ರಸ್ತು ನ್ಯಸ್ತವಾದೋಽಭವನ್ ಮೃಧೇ ॥ 9 ॥**

ಕೃಷ್ಣನೆಂಬ ಜಗದೇಕ ಕಾರಣನಲ್ಲಿ ನಾನಿರುವೆನೆಂದು, ಪರಶಿವನು ನನಗೆ ವರ ನೀಡಿದ ಶ್ರೀಹರಿ ಹಾಗೂ ಈ ಶ್ರೀಕೃಷ್ಣ ಇಬ್ಬರೂ ಒಬ್ಬರೇ ಎಂದು ತಿಳಿದನು. ನಂತರ ಯಾವುದೇ ಚರ್ಚೆ ಮಾಡದೆ ರಣರಂಗದಿಂದ ಹೊರಟು ಹೋದನು. ಹೀಗೆ ಯುದ್ಧ ವಿರಾಮ ಹೊಂದಿ ಬ್ರಹ್ಮನಿಗೆ ಶಿವನು – ನಾನು ಇನ್ನೂ ಮುಂದೆ ಶ್ರೀಕೃಷ್ಣನೊಂದಿಗೆ ಯುದ್ಧ ಮಾಡುವುದಿಲ್ಲ. ಇದರಿಂದಾಗಿ ಭೂಮಿಯು ಭಾರರಹಿತಳಾಗಲಿ ಎಂದನು.

## ಕೃಷ್ಣ ರುದ್ರರ ಆಲಿಂಗನ

**ತತಃ ಕೃಷ್ಣೋಽಥ ರುದ್ರಶ್ಚ ಪರಿಷ್ವಜ್ಯ ಪರಸ್ಪರಮ್ ।**
**ಪರಾಂ ಪ್ರೀತಿಮುಪಾಗಮ್ಯ ಸಂಗ್ರಾಮಾದ್ ಅಪಜಗ್ಮತುಃ ॥ 10 ॥**

ನಂತರ ಹರಿ-ಹರರು ಪ್ರೀತಿಯಿಂದ, ಆಲಿಂಗನ ಮಾಡಿದರು. ಇಲ್ಲಿಗೆ ಶಿವಕೃಷ್ಣರ ಯುದ್ಧ ಮುಗಿದಂತಾಯಿತು.

ಬ್ರಹ್ಮದೇವನು ಶ್ರೀಕೃಷ್ಣ ಹಾಗೂ ಶಿವನಲ್ಲಿದ್ದ ಶಿವನೆಂಬ ವಿಷ್ಣುರೂಪಕ್ಕೂ ಅಭೇದವನ್ನೂ ತಿಳಿದನು. ವ್ಯಾಮೋಹಕ್ಕಾಗಿ ನಾನು ಭವ–ಕೇಶವರಲ್ಲಿ ಭೇದ ಕಾಣುತ್ತಿಲ್ಲವೆಂದು ಮಾರ್ಕಂಡೇಯರಿಗೆ ಹೇಳಿದ.

**"ಭೇದದೃಷ್ಟ್ಯಾಭಿಮಾನೇನ ನಿಸ್ಸಂಗೇನಾಪಿ ಕರ್ಮಣಾ"** ಎಂದಿದೆ.

**ಹರಂ ಚ ಹರಿರೂಪೇಣ ಹರಿಂ ಚ ಹರರೂಪಿಣಮ್ ।**
**ಶಂಖ ಚಕ್ರ ಗದಾಪಾಣಿಂ ಪೀತಾಂಬರಧರಂ ಹರಿಮ್ ॥ 11 ॥**

**ತ್ರಿಶೂಲ ಪಟ್ಟಿಶಧರಂ ವ್ಯಾಘ್ರ ಚರ್ಮಧರಂ ಹರಿಮ್ ।**
**ಗರುಡಸ್ಥಂ ಚಾಪಿ ಹರಂ ಹರಿಂ ಚ ವೃಷಭ ಧ್ವಜಮ್ ॥ 12 ॥**

ಹರಿರೂಪನಾಗಿದ್ದ ಹರನನ್ನೂ, ಹರರೂಪಿಯಾಗಿದ್ದ ಹರಿಯನ್ನೂ ನಾನು ಕಂಡೆ. ಹರನು ಶಂಖ ಚಕ್ರ ಗದಾ ಪಾಣಿಯಾಗಿದ್ದನ್ನು ಪೀತಾಂಬರ ಧರಿಸಿದ ಹರನ ಅಂತರ್ಯಾಮಿಯನ್ನು ಕಂಡೆನು.[2]

ಶ್ರೀಹರಿಯು ಹುಲಿಚರ್ಮ ಧರಿಸಿ ತ್ರಿಶೂಲ, ಪಟ್ಟಿಶ, ಧರಿಸಿದ್ದನ್ನೂ ಕಂಡೆ. ಸರ್ವಪ್ರಹರಣಾಯುಧನಲ್ಲಿ ಇದೇನು ಮಹತ್ವ! ಹರನು ಗರುಡಾರೂಢ–ನಾದದ್ದನ್ನು, ಹರಿಯು ವೃಷಭಾರೂಪನಾದದ್ದನ್ನೂ ನೋಡಿದೆ.

ಗರುಡವಾಹನ – ವಾಯುವಾಹನನಿಗೆ ವೃಷಭವಾಹನನಾಗುವುದು ಅಸಾಧ್ಯವೇ?

ಮಾರ್ಕಂಡೇಯರು ತನ್ನ ಗುರುವಿನಂತಿರುವ ಬ್ರಹ್ಮದೇವರ ಮುಂದೆ ತಾನು ಹರಿ–ಹರ ರೂಪವನ್ನು ತಿಳಿದಂತೆ ತಿಳಿಸುತ್ತಾರೆ.

ಶಿವನ ಅಂತರ್ಯಾಮಿ ಹಾಗೂ ಭಗವಂತನನ್ನು ಬೇರೆಯಾಗಿ ನೋಡಿದರೆ ಅನರ್ಥವಿದೆ. ಹಾಗಾಗಿ ಅಂತರವನ್ನು ನೋಡಬಾರದು. ಹೀಗೆ ತಿಳಿದಾಗ

---

2. 1) ಬ್ರಹ್ಮ ವಿಷ್ಣ್ವೀಶರೂಪಾಣಿ ತ್ರೀಣಿ ವಿಷ್ಣೋಃ ಮಹಾತ್ಮನಃ ।
ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೆ ಶಿವೇ ಸ್ಥಿತಃ ॥
2) ನಿಮಿತ್ತ ಮಾತ್ರಂ ಈಶಸ್ಯ ವಿಶ್ವ ಸರ್ಗ ನಿರೋಧಯೋಃ ।
ಹಿರಣ್ಯಗರ್ಭಃ ಶರ್ವಶ್ಚ
3) ಶಿವಃ ಸುಖಾತ್ಮಕತ್ವೇನ
4) ಕ್ರಿಯಂತೇ ಸ್ತುತಯೋಽನ್ಯತ್ರ ತದಂತರ್ಯಾಮ್ಯಪೇಕ್ಷಯಾ ।
5) ನಿರ್ವಿಷಂ ವತ್ಸನಾಭಶ್ಚ ಯಥೈಕಾಮಾಶ್ರಿತೌ ಲತಾಮ್ ।
ತಥಾ ಹರಿಹರೌ ಭಿನ್ನತರೌ ಅಪ್ಯೇಕಮೂರ್ತಿಗೌ ॥ – *ಶೀ.ಪ್ರ. –63*

ಹರಿ–ಹರರ ಕೃಪೆಯಾಗುತ್ತದೆ. ಹರಿಹರರು ಏಕಶರೀಸ್ಥರಾದರೂ ಸಮಾನ ಭೋಗ ಪ್ರಾಪ್ತಿ ಬರಲೆಂದು ಶಂಕಿಸಬಾರದು. ಸಾಮರ್ಥ್ಯ ವಿಶೇಷದಿಂದಾಗಿ ಭೋಗ–ಅಭೋಗ ಕೂಡಿಸಬಹುದು.

**ಮಾರ್ಕಂಡೇಯ ಹರಿಹರಸ್ತುತಿ**

ಯಾರು ವಿಷ್ಣುವೋ ಅವನೇ ರುದ್ರಾಂತರ್ಯಾಮಿಯು. ಯಾರು ರುದ್ರಾಂತರ್ಯಾಮಿಯೋ ಅವನೇ ಪಿತಾಮಹನು, ವಿಷ್ಣುವೂ ಪಿತಾಮಹನೆ ಆಗಿರುವನು. ಸಂಸಾರರೋಗ ಪರಿಹಾರ ಮಾಡುವ ರುದ್ರಾಂತರ್ಯಾಮಿ ರುದ್ರನೆನಿಸಿದರೆ, ಜಗತ್ತಿಗೆ ಪಿತನೆನಿಸಿದ ಬ್ರಹ್ಮದೇವನಿಂದ ಪೂಜ್ಯನಾದ್ದರಿಂದ ಪಿತಾಮಹನೆನಿಸಿರುವನು. *[ಪಿತ್ರಾ ಮಹ್ಯತೇತಿ ಪಿತಾಮಹಃ]*

ಬ್ರಹ್ಮಾಂತರ್ಯಾಮಿ, ರುದ್ರಾಂತರ್ಯಾಮಿ ಹಾಗೂ ವಿಷ್ಣುವು ಜಗಜ್ಜನ್ಮಾದಿ ಕಾರಣಕರ್ತರೂಪಗಳು.

**ಯಥಾ ಜಲೇ ಜಲಂ ಕ್ಷಿಪ್ತಂ ಜಲಮೇವ ತು ತದ್ ಭವೇತ್ ।**
**ರುದ್ರಂ ವಿಷ್ಣುಃ ಪ್ರವಿಷ್ಟಸ್ತು ತಥಾ ರುದ್ರಮಯೋ ಭವೇತ್ ॥ 13 ॥**

ನೀರಿನಲ್ಲಿ ನೀರನ್ನು ಬೆರೆಸಿದರೆ ಅಭಿವೃದ್ಧಿ ಕಂಡುಬರುವುದರಿಂದ ಎರಡೂ ನೀರುಗಳು ಬೇರೆಯೆ ಒಂದೇ ಅಲ್ಲ. ಹಾಗೆ ರುದ್ರ ವಿಷ್ಣುಗಳು ಭಿನ್ನಭಿನ್ನರೆ. ಶುದ್ಧವಾದ ನೀರು ಶುದ್ಧವಾದ ನೀರಿನೊಂದಿಗೆ ಸೇರಿಸಿದಾಗ ಅದರಂತೆಯೇ ಆಗುತ್ತದೆ ಹೊರತು ಅದೇ ಆಗುವುದಿಲ್ಲ.[3]

ಅಗ್ನಿಯು ಅಗ್ನಿಯನ್ನು ಪ್ರವೇಶಿಸಿದ ಮಾತ್ರಕ್ಕೆ ಎರಡು ಅಗ್ನಿಯು ಒಂದೆಯೋ ಖಂಡಿತಾ ಅಲ್ಲ. ಅಗ್ನಿಯೇ ಆಗಿದೆಯೆಂದು ತೋರುತ್ತದೆ. ಒಂದೇ ಅಲ್ಲ. ಹಾಗೆಯ ವಿಷ್ಣುವು ರುದ್ರನನ್ನು ಸೇರಿದ ಮಾತ್ರಕ್ಕೆ ರುದ್ರನೇ ಆಗುವುದಿಲ್ಲ. ಅಗ್ನಿಯಲ್ಲಿರುವ ಭಗವಂತನೇ ರುದ್ರನಲ್ಲಿಯೂ ಇರುವನು. ಅವನೇ ಚಂದ್ರನಲ್ಲಿರುವನು. ಹೀಗಾಗಿ ವಿಷ್ಣುವು 'ಅಗ್ನಿಷೋಮ' ಎನಿಸಿರುವನು.

ಈ ರುದ್ರಾಂತರ್ಯಾಮಿ ಹಾಗೂ ಬ್ರಹ್ಮಾಂತರ್ಯಾಮಿ ರೂಪಗಳೇ ಸ್ಥಾವರ ಜಂಗಮಾತ್ಮಮಕ ಜಗತ್ತಿನ ಸೃಷ್ಟಿ ಸಂಹಾರಕರಾಗಿರುವರು. ಕತೃಗಳು, ಕಾರಣಗಳೂ ಈ ರೂಪಗಳೇ.[4]

3. ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । *–ಕಾಠಕ–2/15*
ನ ತು ತದ್ರೂಪತಾಂ ಯಾತಿ ॥ *–ಭಾಷ್ಯ*
4. ಸ ಕಾರಣಂ ಕಾರಣತಸ್ತತೋಽಪಿ ತಸ್ಯಾಪಿ ಹೇತುಃ ಪರಹೇತು ಹೇತುಃ ।
ಕಾರ್ಯೇಷು ಚೈವಂ ... ಸ ಹಿ ಕರ್ಮಕರ್ತೃ
ರೂಪೈರಶೇಷೈಃ ಅವತೀಹ ಸರ್ವಂ ॥ *–ಬ್ರ.ಪಾ.ಸ್ತೋ.*

ಹರನಲ್ಲಿರುವ ಬ್ರಹ್ಮನಲ್ಲಿರುವ ರೂಪಗಳೇ ವೃಷ್ಟಿಗೈಯ್ಯುತ್ತವೆ. ಸೂರ್ಯನಲ್ಲಿದ್ದು ಜಗತ್ತನ್ನು ಪ್ರಕಾಶಗೊಳಸುತ್ತವೆ.[5] ಈ ಅಂತರ್ಯಾಮಿ ಸ್ತೋತ್ರವನ್ನು ಪಠಿಸಿದವನಿಗೆ ಹರಿಹರರು ಪ್ರೀತರಾಗುವರು.

**ನ ವಿನಾ ಶಂಕರಂ ವಿಷ್ಣುಃ ನ ವಿನಾ ಕೇಶವಂ ಶಿವಃ ।**
**ತಸ್ಮಾದೇಕತ್ವಮಾಯಾತೌ ರುದ್ರೋಪೇಂದ್ರೌ ತು ತೌ ಪುರಾ ॥ 14 ॥**

ಭಿನ್ನಭಕ್ತನಾದ ರುದ್ರದೇವನನ್ನು ತಿರಸ್ಕರಿಸಿ ವಿಷ್ಣುಪೂಜೆ ಮಾಡಿದರೆ ವಿಷ್ಣುವು ಅದನ್ನು ಸ್ವೀಕರಿಸುವುದಿಲ್ಲ. ಶಿವನಾದರೂ ತನ್ನ ಪರಮದೈವ ವಿಷ್ಣುವನ್ನು ತುಚ್ಛೀಕರಿಸಿ ಶಿವನನ್ನು ಮಾತ್ರ ಪೂಜಿಸಿದರೆ ಸಂತುಷ್ಟನಾಗಲಾರ. ಈ ಅಭಿಪ್ರಾಯದಲ್ಲಿ ಇಬ್ಬರದೂ ಐಕಮತ್ಯವಿದೆಯಾಗಿ ಅವರಿಬ್ಬರೂ ಒಂದೇ ಎನ್ನಲಾಗುವುದು.

**ನಮಃ ಷಡರ್ಧನೇತ್ರಾಯ ಸದ್ವಿನೇತ್ರಾಯ ವೈ ನಮಃ ।**
**ನಮಃ ಪಿಂಗಲನೇತ್ರಾಯ ಪದ್ಮನೇತ್ರಾಯ ವೈ ನಮಃ ॥ 15 ॥**

ಇಬ್ಬರೂ ಒಂದೇ ಎಂದು ಯಾಕಾಗಬಾರದೆಂದರೆ ವಿರುದ್ಧ ಧರ್ಮದವ–ರಾದ್ದರಿಂದ ಎಂದು ಹೇತುವು ಯಾವುದದು? ಶಿವನು ಮೂರು ನೇತ್ರನು. ಶ್ರೀಕೃಷ್ಣನು ದ್ವಿನೇತ್ರೋಪಲಕ್ಷಿತ ಅನಂತಾನಂತನೇತ್ರನು. ಶಿವನು ಪಿಂಗಲನೇತ್ರನು, ಶ್ರೀಹರಿಯು ಪುಂಡರೀಕಾಕ್ಷನು. ಇದು ಉಪಲಕ್ಷಣ, ಶ್ರೀಹರಿಯ ಸ್ಥಾನ ವೈಕುಂಠ, ಶಿವನದು ಸ್ಮಶಾನ, ವಾಹನ ಗರುಡ, ವೃಷಭವಾಹನ, ಪೀತಾಂಬರಧಾರಿ ಗಜಚರ್ಮಾಂಬರಧಾರಿ ಇತ್ಯಾದಿ. ಮುಂದಿನ ಶ್ಲೋಕಗಳಲ್ಲಿ ವಿರುದ್ಧ ಧರ್ಮಗಳ ಸಂಗ್ರಹವಿದೆ.

**ಯ ಇದಂ ಪಠತೇ ನಿತ್ಯಂ ಸ್ತೋತ್ರಂ ಹರಿಹರಾತ್ಮಕಮ್ ।**
**ಶ್ರಿಯಂ ಚ ಲಭತೇ ನಿತ್ಯಂ ನ ಚ ಸ್ವರ್ಗಾನ್ನಿವರ್ತತೇ ॥ 16 ॥**

ಈ ಹರಿಹರ ಸ್ತೋತ್ರವನ್ನು ಪಠಿಸುವವರಿಗೆ ಆರೋಗ್ಯ, ದೈಹಿಕಬಲ, ಸಂಪತ್ತು, ಸ್ವರ್ಗ, ಪುತ್ರ ಫಲ, ಪತಿಲಾಭ, ಗರ್ಭಿಣಿಗೆ ಸುಪುತ್ರನನ್ನು ಪಡೆಯುವರು. ರಾಕ್ಷಸ ಭೂತ ಪ್ರೇತ ಭಯಗಳು ದೂರವಾಗುವುವು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ**
**ಮಾರ್ಕಂಡೇಯರು ಮಾಡಿದ ಹರಿ–ಹರ ಸ್ತೋತ್ರ ಎಂಬಲ್ಲಿ**
**ನೂರಇಪ್ಪತ್ತೈದನೆಯ ಅಧ್ಯಾಯ ಸಮಾಪ್ತಿ**

---

5. ಪಾಚಕತ್ವಂ ಶೋಷಕತ್ವಂ ತಾಪಕತ್ವಂ ತಥೈವ ಚ ।
ನೈವ ಶಕ್ತೀ ರವೇಃರಾಜನ್ ಶಕ್ತಿಃ ನಾರಾಯಣಸ್ಯ ವೈ ॥ – ಐ.ಭಾ.

# ಅಥ ಷಡ್ವಿಂಶತ್ಯಧಿಕಶತತಮೋऽಧ್ಯಾಯಃ

## ಶ್ರೀಕೃಷ್ಣ-ಸ್ಕಂಧರಲ್ಲಿ ಯುದ್ಧ

*ಜನಮೇಜಯ ಉವಾಚ-*

**ಅಪಯಾತೇ ತತೋ ದೇವೇ ಕೃಷ್ಣೇ ಚೈವ ಮಹಾತ್ಮನಿ ।**
**ಪುನಶ್ಚಾಸೀತ್ ಕಥಂ ಯುದ್ಧಂ ಪರೇಷಾಂ ಲೋಮಹರ್ಷಣಮ್ ॥ 1 ॥**

ಜನಮೇಜಯನು - ವೈಶಂಪಾಯನರೇ! ಶ್ರೀಕಷ್ಣ ಹಾಗೂ ಶಿವನು ಯುದ್ಧದಿಂದ ವಿಮುಖರಾಗಿ ಯುದ್ಧದಿಂದ ಹೊರಟು ಹೋದಾಗ ಶತ್ರುಗಳಗೂ ಭಯಂಕರ ಯುದ್ಧ ಹೇಗೆ ಮುಂದುವರೆಯಿತೆಂದು ಹೇಳರಿ.

ವೈಶಂಪಾಯನರು ರಾಜನ್! ಬಾಣನ ಮಂತ್ರಿಯಾದ ಕುಂಭಾಂಡನಿಂದ ನಿಯಮಿಸಲ್ಪಡುತ್ತಿರುವ ರಥದಲ್ಲ ಸ್ಕಂದದೇವನು ಕುಳತು ಕೃಷ್ಣ-ಬಲರಾಮ - ಪ್ರದ್ಯುಮ್ನರನ್ನು ಎದುರಿಸಿ ಹೋರಾಡತೊಡಗಿದನು.

ನೂರಾರು ಬಾಣಗಳಂದ ಗುಹನು ಅಮರ್ಷರೋಷಗಳಂದ ಅವರನ್ನು ಗಾಯಗೊಳಸಿದನು. ಮೂವರ ಶರೀರಗಳೂ ಬಾಣಗಳಂದ ಚುಚ್ಚಲ್ಪಟ್ಟು ರಕ್ತದಿಂದ ತೊಯ್ದವರಾಗಿ ತ್ರೇತಾಗ್ನಿಗಳಂತೆ ಕಂಡುಬಂದರು.

**ಶರಸಂವೃತಗಾತ್ರಾಸ್ತೇ ತ್ರಯಸ್ತ್ರಯ ಇವಾಗ್ನಯಃ ।**

ಬಲರಾಮ ಕೃಷ್ಣ ಪ್ರದ್ಯುಮ್ನರೂ ಯುದ್ಧ ಕೌಶಲ್ಯದಲ್ಲ ಪಳಗಿದವರು. ಅವರು ಕ್ರಮವಾಗಿ ವಾಯವ್ಯ - ಆಗ್ನೇಯ - ಪರ್ಜನ್ಯಾಸ್ತ್ರಗಳಂದ ಸ್ಕಂಧನನ್ನು ಗಾಯಗೊಳಸಿದರು.

ಆದರೆ ಅದಕ್ಕೆ ಪ್ರತಿಯಾಗಿ ಅಗ್ನಿಕುಮಾರ ಸ್ಕಂಧನು ಪಾರ್ವತ–ವಾರುಣ – ಸಾವಿತ್ರಗಳೆಂಬ ಪ್ರತ್ಯಸ್ತಗಳಿಂದ ವಿಫಲಗೊಳಿಸಿದನು. **[ಶೈಲ – ವಾರುಣ– ಸಾವಿತ್ರೈಃ ತಾನ್ ಸ ವಿವ್ಯಾಧ]**

ಕೃಷ್ಣ ಬಲರಾಮ ಕಾರ್ಷ್ಣಿಗಳು ಈ ಅಸ್ತ್ರಗಳನ್ನೂ ವಿಫಲಗೊಳಿಸಿದ್ದರಿಂದ ಕೋಪಗೊಂಡ ಸ್ಕಂಧನು ಔವುಡುಗಚ್ಚಿ ಕೋಪದಿಂದ ಕಾಲಾಗ್ನಿ ಸದೃಶವೂ, ದುರ್ಜಯವೂ ಆದ 'ಬ್ರಹ್ಮಶಿರ'ವೆಂಬ ಮಹಾಸ್ತ್ರವನ್ನು ಪ್ರಯೋಗಿಸಿದನು.

ಬ್ರಹ್ಮಶಿರೋಸ್ತ್ರವನ್ನು ನೋಡಿ ಸೈನಿಕರೆಲ್ಲರೂ ಹಾಹಾಕಾರ ಮಾಡುತ್ತಾ ಭಯದಿಂದ ದಿಕ್ಕಾಪಾಲಾಗಿ ಓಡಿ ಹೋದರು. ಅಸ್ತ್ರ ತೇಜಸ್ಸಿನಿಂದ ಜಗತ್ತೇ ಮಂಕುಕವಿದಂತೆ ಆಗಿದ್ದಾಗ ಕೇಶಿ ಹಂತಕನಾದ ಕೇಶವನು ತನ್ನ ಸುದರ್ಶನ ಚಕ್ರ ಹಿಡಿದನು. **[ಚಕ್ರಂ ಜಗ್ರಾಹ ವೀರ್ಯವಾನ್]**.

ಪ್ರಖ್ಯಾತವಾದ ಸುದರ್ಶನವನ್ನು ಬಿಟ್ಟೊಡನೆಯೇ ಬ್ರಹ್ಮಶಿರೋ ಅಸ್ತ್ರದ ಕಾಂತಿಯು ಮೇಘಗಳಿಂದ ಆಚ್ಛಾದಿತ ಸೂರ್ಯಮಂಡಲದಂತೆ ನಿಷ್ಪ್ರಭವಾಯಿತು.

ತನ್ನ ಅಸ್ತ್ರವು ಸುದರ್ಶನದಿಂದ ಕಾಂತಿಗುಂದಿದ್ದನ್ನು ನೋಡಿದ ಸ್ಕಂಧನು ಮತ್ತೂ ಉಗ್ರನಾಗಿ ಉರಿದು ಹೋದನು.

### ಶಕ್ತ್ಯಾಯುಧ ಪ್ರಯೋಗ

ಇದರಿಂದ ಸಮಸ್ತಲೋಕ ಭಯಂಕರವಾದ ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡು ಪ್ರಯೋಗಿಸಿದಾಗ ಅದು ಆಕಾಶದಿಂದ ಬೀಳುವ ಮಹತ್ತಾದ ಉಲ್ಕೆಯಂತೆ ಜ್ವಲಿಸುತ್ತಾ ಪ್ರಲಯದ ಸಂವರ್ತಕಾಗ್ನಿಯಂತೆ ವೇಗವಾಗಿ ಬರುತ್ತಿತ್ತು. ಇದನ್ನು ಪ್ರಯೋಗಿಸಿ ಜೋರಾಗಿ ಸಿಂಹನಾದ ಮಾಡಿದನು.

ಈ ಮಹಾಸ್ತ್ರವು ವಿಪ್ರೌಘಪ್ರಿಯ ಸ್ಕಂಧನಿಂದ ಬಿಡಲ್ಪಟ್ಟು ಅಕಾಶದಲ್ಲಿ ದೊಡ್ಡದಾಗ ತೊಡಗಿ, ಕೃಷ್ಣನನ್ನು ಕೊಲ್ಲಲು ಅವನ ಬಳಿಗೆ ಧಾವಿಸಿತು.

ಆಧಾವತ ಮಹಾಶಕ್ತಿಃ ಕೃಷ್ಣಸ್ಯ ವಧಕಾಂಕ್ಷಿಣೀ ॥ 2 ॥

ಧಗಧಗನೆ ಜ್ವಲಿಸುತಾ ಕೃಷ್ಣನ ಬಳಿ ವೇಗವಾಗಿ ಬರುತ್ತಿರುವ ಶಕ್ತ್ಯಾಯುಧವನ್ನು ನೋಡಿದ – ಇಂದ್ರದೇವನೂ ಕೂಡ ವಿಷಣ್ಣನಾಗಿ 'ಶ್ರೀಕೃಷ್ಣನು ದಗ್ಧನಾಗಿ ಹೋದ' – **[ದಗ್ಧಃ ಕೃಷ್ಣೇತಿ ಚಾಬ್ರವೀತ್]** ಎಂದನು.

### ಹುಂಕಾರದಿಂದಲೇ ಶಕ್ತ್ಯಾಯುಧ ದೂರ ಹೋಯಿತು

**ಹುಂಕಾರೇಣೈವ ನಿರ್ಭರ್ತ್ಸ್ಯ ಪಾತಯಾಮಾಸ ಭೂತಲೇ ।**

ಶ್ರೀಕೃಷ್ಣನು ಕೇವಲ ತನ್ನ ಹುಂಕಾರ ಮಾತ್ರದಿಂದಲೇ ಮಹಾಶಕ್ತ್ಯಾಯುಧವನ್ನು ಕೆಳಗೆ ಬೀಳಿಸಿದನು. ಇದನ್ನು ನೋಡಿದ ಇಂದ್ರಾದಿ ದೇವತೆಗಳು ಸಾಧು! ಸಾಧು! ಎಂದು ಸಿಂಹನಾದ ಮಾಡುತ್ತಾ ಪ್ರಶಂಸಿದರು.

ದೇವತೆಗಳು ಸಂತೋಷದಿಂದ ತನಗಾದ ವಿಜಯಕ್ಕಾಗಿ ಸಿಂಹನಾದ ಮಾಡುತ್ತಿರಲಾಗಿ ಸುದರ್ಶನಾಸ್ತ್ರವನ್ನು ಪುನಃ ಕೈಗೆತ್ತಿಕೊಂಡನು.

ಹೀಗೆ ಕಾರ್ತಿಕೇಯನನ್ನು ಕೊಲ್ಲಲೆಂದು ಸುದರ್ಶನಾಸ್ತ್ರ ತೆಗೆದುಕೊಂಡಾಗಲೇ ಅವನನ್ನು ರಕ್ಷಿಸುವ ಸಲುವಾಗಿ ಕೋಟಾರಾದೇವಿ'ಯು ಬಂದಳು.

**ಕುಮಾರ ರಕ್ಷಣಾರ್ಥಾಯ ಬಿಭ್ರತೀ ಸುತನುಂ ತದಾ ।**
**ದಿಗ್ವಾಸಾ ದೇವ ವಚನಾತ್ ಪ್ರವಿಷ್ಟಾ ತತ್ರ ಕೋಟರಾ ॥ 3 ॥**

ಕೋಟರಾದೇವಿಯು ಪಾರ್ವತಿಯ ಅಂಶದಿಂದ ಜನಿಸಿ ಸುಂದರ ಶರೀರ ಹೊಂದಿದ್ದಳು. ಅವಳು ಶ್ರೀಕೃಷ್ಣ ಹಾಗೂ ಸ್ಕಂಧನ ಮಧ್ಯೆ ದಿಗಂಬರಳಾಗಿ ನಿಂತಳು. ಶ್ರೀಕೃಷ್ಣನಾದರೂ **'ನ ನಗ್ನಾಂ ಸ್ತ್ರಿಯಮೀಕ್ಷೇತ'** ಎಂಬ ಧರ್ಮಶಾಸ್ತ್ರದಂತೆ ಅವಳನ್ನು ನೋಡದೆ – ಕೋಟರೆಯೇ! ದೂರ ಸರಿದು ನಿಲ್ಲು. ಈ ನಗ್ನಾವಸ್ಥೆಯಲ್ಲಿ ಬಂದ ನಿನಗೆ ಧಿಕ್ಕಾರ. ಶತ್ರುವನ್ನು ಕೊಲ್ಲಲು ಬದ್ಧ ದೀಕ್ಷನಾದ ನನಗೆ ಹೀಗೆ ವಿಘ್ನವೊಡಿರುವೆ ಎಂದನು.

ಜನಮೆಜಯನೇ ! ಕೃಷ್ಣನ ಮಾತನ್ನು ಕೇಳದರೂ ಪುತ್ರ ರಕ್ಷಣೆಗಾಗಿ ಕೋಟರಿಯು ಅಲ್ಲಿಂದ ಅಲುಗಾಡಲಿಲ್ಲ. ವಸ್ತ್ರಧಾರಣೆಯನ್ನು ಮಾಡಲಿಲ್ಲ.

**ಅಪವಾಹ್ಯ ಗುಹಂ ಶೀಘ್ರಮಪಮಾಹಿ ರಣಾಜಿರಾತ್ ।**
**ಸ್ವಸ್ತಿ ಹ್ಯೇವಂ ಭವೇದದ್ಯ ॥ 4 ॥**

---

1. **ಕೋಟರಾ –**
**ತನ್ಮಾತಾ ಕೋಟರೀ ನಾಮ ನಗ್ನಾ ಮುಕ್ತಶಿರೋರುಹಾ ।**
**ಪ್ರರೋವತಸ್ಥೇ ಕೃಷ್ಣಸ್ಯ ಪುತ್ರಪ್ರಾಣರಿರಕ್ಷಯಾ ॥** – *ಭಾಗ 78/20*
ಕೋಟರೀ ಎಂದರೇ ಬೆತ್ತಲೆ ಹೆಂಗಸು. ಕೋಟರೀ, ಲಂಬ ಇತ್ಯಾದಿ ಪಾರ್ವತಿಗೆ ಹೆಸರು **"ಲಂಬಾ ಪದ್ಮಾಲಯ ಗೌರ್ಯೋಃ"**
ಬಾಣಾಸುರನ ರಕ್ಷಣೆಗಾಗಿ ಪುನಃ ದಿಗಂಬರಳಾಗಿ ಮುಂದೆ ಬರುವಳು.

ಕೋಟರೆಯೇ! ನೀನು ಸ್ಕಂಧನನ್ನು ಬಿಟ್ಟು ಶೀಘ್ರವಾಗಿ ಹೋದೆಯಾದರೆ ಅವನ ಪ್ರಾಣವುಳಿದು ಮಂಗಳವುಂಟಾಗುತ್ತದೆ ಎಂದರೂ ಕೋಟರೆಯು ಯುದ್ಧಭೂಮಿಯಲ್ಲಿಯೆ ನಿಂತಿದ್ದಳು. ಶ್ರೀಕೃಷ್ಣನು ಸುದರ್ಶನ ಚಕ್ರವನ್ನು ಉಪಸಂಹಾರ ಮಾಡಿ ಹಿಂದಕ್ಕೆ ಪಡೆದನು. ಚಕ್ರವನ್ನು ಉಪಸಂಹರಿಸಿದಾಗ ಕೋಟವಿಯು ಸ್ಕಂಧನನ್ನು ಕರೆದುಕೊಂಡು ಶಿವನ ಬಳಿಗೆ ಹೋದಳು.

**ಕುಮಾರೇ ರಕ್ಷಿತೇ ದೇವ್ಯಾ ಬಾಣಸ್ತಂ ದೇಶಮಾಯಯೌ ।**

ಕೋಟರೆಯು ಸ್ಕಂಧನನ್ನು ರಕ್ಷಿಸಿದ ನಂತರ ಆ ಸ್ಥಳಕ್ಕೆ ಬಾಣಾಸುರನು ತಾನೆ ಯುದ್ಧಕ್ಕೆ ಆಗಮಿಸಿದನು.

ಬಾಣನು ಭಯಂಕರ ಆಯುಧ ಧರಿಸಿದ್ದ ಮಹಾವೀರ ದೈತ್ಯರಿಂದ ಆವೃತನಾಗಿದ್ದ ಬಾಣನಿಗೆ ಬ್ರಾಹ್ಮಣರು – ಪುರೋಹಿತರು 'ಶತ್ರುನ್ ಜಯ' ಎಂದು ಆಶೀರ್ವಾದ ಮಾಡುತ್ತಿದ್ದರು. ಮಂಗಳ ಭೇರಿ ವಾದ್ಯ ಮೊಳಗಿದವು. ತನ್ನ ಮೇಲೆ ಯುದ್ಧಕ್ಕೆ ಬಂದ ಬಾಣನನ್ನು ನೋಡಿ ಕೃಷ್ಣನು ಗರುಡಾರೂಢನಾಗಿ ಬಂದು ಅವನನ್ನು ಎದುರಿಸಿದನು.

ಬಾಣನು ಕೃಷ್ಣನನ್ನು ಕುರಿತು, ನೀನು ಯುದ್ಧಕ್ಕೆ ಬಂದಿರುವೆ. ನನ್ನಿಂದ ನೀನು ಸಾಯುವುದು ನಿಶ್ಚಿತ. ನೀನು ಪುನಃ ದ್ವಾರಕೆಗೆ ಹೋಗಲಾರೆ, ಯಾದವರನ್ನು ನೋಡಲಾರೆ.

ನೀನು ಅಷ್ಟಬಾಹು – ನಾನಾದರೂ ಸಹಸ್ರಬಾಹುವಾಗಿರುವೆ. ನೀನು ನನ್ನೊಂದಿಗೆ ಹೇಗೆ ಯುದ್ಧ ಮಾಡುವೆ ಹೇಳು.

**ಅದ್ಯ ಬಾಹುಸಹಸ್ರೇಣ ಕಥಮಷ್ಟಭುಜೋ ರಣೇ ॥ 5 ॥**

**ಯೋತ್ಸ್ಯಸೇ ಗರುಡಧ್ವಜ....**

ಸಾವಿರಾರು ತೋಳುಗಳಲ್ಲಿ ನಾನಾ ವಿಧವಾದ ಆಯುಧಗಳಿಂದ ಅಲಂಕೃತನಾದ ನನ್ನಿಂದ ಸಂಹೃತನಾಗಿ ದ್ವಾರಕೆಯನ್ನು ಸ್ಮರಿಸುವಿಷ್ಟೆ, ಪುನಃ ಅಲ್ಲಿಗೆ ಹೋಗಲಾರೆ ಎಂದ.

ಹೀಗೆ ಬಾಣಾಸುರನ ಮಾತುಗಳು ಚಂಡಮಾರುತದಿಂದ ಪ್ರೇರಿತವಾಗಿ ಭೋರ್ಗರೆಯುತ್ತ ಮೇಲೆಳುವ ಸಮುದ್ರ ಅಲೆಗಳಂತೆ ತೋರುತ್ತಿದ್ದರೆ ಅವನ ನೇತ್ರಗಳು ಜಗತ್ತನ್ನು ಸುಡಲು ಹುಟ್ಟಿರುವ ಇಬ್ಬರು ಸೂರ್ಯರಂತೆ ತೋರುತ್ತಿದ್ದವು.

### ನಾರದರ ಆಗಮನ

ಹೀಗೆ ಭಯಂಕರ ಮಾತನ್ನು ಆಡುತ್ತಿರುವಾಗಲೇ ನಾರದರು ಅವರಿಬ್ಬರ ಯುದ್ಧ ನೋಡಲು ಕುತೂಹಲಿಗಳಾಗಿ ಬಂದರು. ಶ್ರೀಕೃಷ್ಣನು ಅಟ್ಟಹಾಸದಿಂದ ಮೆರೆಯುತ್ತಿದ್ದ ಬಾಣನನ್ನು ನೋಡಿ,

**ಬಾಣ ಕಿಂ ಗರ್ಜಸೇ ಮೋಹಾತ್ ಶೂರಾಣಾಂ ನಾಸ್ತಿ ಗರ್ಜಿತಮ್ ।**
**ಏಹ್ಯೇಹಿ ಯುದ್ಧ್ಯಸ್ವ ರಣೇ ಕಿಂ ವೃಥಾ ಗರ್ಜಿತೇನ ತೇ ॥ 6 ॥**

ಬಾಣನೇ! ಮೋಹಪರವಶನಾಗಿ ಶೂರರು ಗರ್ಜಿಸುವುದಿಲ್ಲ. ಯುದ್ಧಕ್ಕೆ ಸಜ್ಜಾಗು! ಗರ್ಜನೆ ಸಾಕು ಮಾಡು. ಇದು ವ್ಯರ್ಥ.

ಕೇವಲ ಮಾತುಗಳಿಂದಲೇ ಯುದ್ಧದಲ್ಲಿ ವಿಜಯವಾಗುವುದಾದರೆ ವಾಚಾಳನಾದ ನೀನು ನಿಶ್ಚಿತವಾಗಿ ಜಯಗಳಿಸಿ ಬಿಡುತ್ತಿದ್ದೆ. ಹೀಗೆ ಹೇಳುತ್ತಾ ಕೃಷ್ಣನು ಮರ್ಮಭೇದಕ ಬಾಣಗಳಿಂದ ಅಸುರನನ್ನು ಮುಚ್ಚಿದನು. ಬಾಣಾಸುರನೂ ಸಹ ಬಾಣಗಳಿಂದ ಕೃಷ್ಣನನ್ನು ಮುಚ್ಚಿ ಹಾಕಿ, ಪರಿಘ, ಕತ್ತಿ, ಗದೆ ತೋಮರ ಶಕ್ತ್ಯಾದಿಗಳಿಂದ ಆಚ್ಛಾದಿಸಿದನು.

ಸಾವಿರ ತೋಳನ್ನು ಹೊಂದಿದ್ದ ಬಾಣನು ಈಗ ಕೇವಲ ದ್ವಿಭುಜನಾಗಿ ಹೋರಾಡುತ್ತಿದ್ದ ಕೃಷ್ಣನ ಮೇಲೆ ಅನಾಯಾಸವಾಗಿ ಸೆಣೆದಾಡುತ್ತಿದ್ದನು.

### ಬಾಣನಿಂದ ಮಹಾಸ್ತ್ರ ಪ್ರಯೋಗ

ಆದರೂ ಆಯುಧ ಪ್ರಯೋಗದಲ್ಲಿ ಶ್ರೀಕೃಷ್ಣನ ಕೌಶಲ್ಯ ನೋಡಿದ ಬಾಣನು ಕೋಪಗೊಂಡು ತಪಸ್ಸಿನ ಮೂಲಕ ಪಡೆದುಕೊಂಡಿದ್ದ ಮಹಾಸ್ತ್ರವನ್ನು ಕೃಷ್ಣನ ಮೇಲೆ ಎಸೆದನು.

**ತತೋಽಸ್ತ್ರಂ ಪರಮಂ ದಿವ್ಯಂ ತಪಸಾ ನಿರ್ಮಿತಂ ಮಹತ್ ।**
**ಬ್ರಹ್ಮಣಾ ವಿಹಿತಂ ದಿವ್ಯಂ ತಮ್ಮುಮೋಚ ದಿತೇಃ ಸುತಃ ॥ 7 ॥**

ಈ ಅಸ್ತ್ರವನ್ನು ಬ್ರಹ್ಮದೇವನೇ ನಿರ್ಮಿಸಿದ್ದನು. ಇದನ್ನು ಪ್ರಯೋಗಿಸಿದ ಕೂಡಲೇ ದಶದಿಕ್ಕುಗಳಲ್ಲಿಯೂ ಗಾಢಾಂಧಕಾರ ವೇರ್ಪಟ್ಟಿತು. ಜಗತ್ತು ನಾಶ ಸೂಚಕ ಅಪಶಕುನ ತೋರಿದವು. ದೇವತೆಗಳು ಕಂಗೆಟ್ಟರು. ದೈತ್ಯರು ಸಂತುಷ್ಟರಾದರು.

ಈ ಅಸ್ತ್ರ ಪ್ರಭಾವದಿಂದಾಗಿ ಅಗ್ನಿಜ್ವಾಲೆಗಳಿಂದ ಕೂಡಿದ್ದ ತೀಕ್ಷ್ಣ ಬಾಣಗಳು ಮಳೆಯಂತೆ ಬಿದ್ದವು. ಈ ಬಾಣನ ಬಾಣ ವೇಗದಲ್ಲಿ ಕೃಷ್ಣನು ಬೆಂದು ಹೋದನೆಂದು ಜನರು ಭ್ರಮಿಸಿದರು.

## ಶ್ರೀಕೃಷ್ಣನಿಂದ ಪಾರ್ಜನ್ಯಾಸ್ತ್ರಪ್ರಯೋಗ

**ಪಾರ್ಜನ್ಯಂ ನಾಮ ಭಗವಾನ್ ಕಾಲಾಂತಕನಿಭಂ ರಣೇ ।**

ಮರುಕ್ಷಣ ಶ್ರೀಕೃಷ್ಣನು ಕಾಲಾಂತಕರಿಗೆ ಸದೃಶವಾಗಿದ್ದ ಪರ್ಜನ್ಯಾಸ್ತ್ರವನ್ನು ದೈತ್ಯರಾಜನ ಮೇಲೆ ಬಿಟ್ಟನು. ಕೂಡಲೇ ಕತ್ತಲೆ ಕರಗಿ ಹೋಯಿತು. ಬಾಣನ ಅಸ್ತ್ರವು ಉಪಶಮನ ಹೊಂದಿತು. ದೇವತೆಗಳಿಗೆ ಸಂತೋಷ ನಗು ಹೊರ ಹೊಮ್ಮಿತು. ಜಯಕಾರ ಹಾಕುತ್ತಾ ಪ್ರಶಂಸಿಸಿದರು.

ತನ್ನ ಮಹಾಸ್ತ್ರ ಉಪಶಮನ ಹೊಂದಿದ ಕೋಪದಿಂದಾಗಿ ಶ್ರೀಕೃಷ್ಣನ ಮೇಲೆ ಮುಸಲಾಯುಧಗಳಿಂದ ಆಚ್ಛಾದಿಸಿದನು. ತನ್ನ ಮೇಲೆ ಪ್ರಯೋಗಿಸಿದ ಮುಸಲ ಪಟ್ಟಿಶಾದಿ ಆಯುಧಗಳನ್ನು ನಗುತ್ತಲೇ ನಿವಾರಿಸಿಕೊಂಡ ಕೃಷ್ಣನು ಶಾರ್ಙ್ಗ ಧನುಸ್ಸಿನಿಂದ ವಜ್ರ ಸದೃಶ ಬಾಣಗಳನ್ನು ಬಿಟ್ಟು ಬಾಣನ ಧ್ವಜ ಪತಾಕೆ ಅಶ್ವಗಳಿಂದ ಕೂಡಿದ್ದ ರಥವನ್ನು ತುಂಡು ತುಂಡು ಮಾಡಿದ. ಬಾಣನ ಕವಚವನ್ನು ಕತ್ತರಿಸಿ ಕಿರೀಟಕ್ಕೆ ಹೊಡೆದು ಕೆಳಗುರುಳಿಸಿದ. ನಂತರ ಚೂಪಾದ ನಾರಾಚದಿಂದ ಅವನ ಎದೆಗೂ ಹೊಡೆದ. ಇದರಿಂದ ಮೂರ್ಛಿತನಾಗಿ ಕೆಳಗೆ ಬಿದ್ದನು. ಇದನ್ನು ನೋಡಿದ ಮಹಡಿಯ ಮೇಲೆ ನಿಂತಿದ್ದ ನಾರದರು ಹೇಗಿದೆ? ಶ್ರೀಕೃಷ್ಣ ಭುಜಬಲ ಪರಾಕ್ರಮ ಎಂದು ಕೇಳುವ ರೀತಿಯಲ್ಲಿ ತಮ್ಮ ಭುಜಗಳನ್ನು ತಟ್ಟಿಕೊಂಡರು.

## ನಾರದರ ಸಂತೋಷ – ಪ್ರಾರ್ಥನೆ

**ಅಹೋ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಮ್ ।**
**ದೃಷ್ಟಂ ಮೇ ಯದಿದಂ ಚಿತ್ರಂ ದಾಮೋದರ ಪರಾಕ್ರಮಮ್ ॥ 8 ॥**

ಇಂದು ನಾನು ಜನಿಸಿದ್ದು ಸಾರ್ಥಕವಾಯಿತು. ಭಗವಂತನ ಭುಜ ಪರಾಕ್ರಮ ನೋಡಿದ ನನ್ನ ಜನ್ಮ ಸಫಲವಾಯಿತು.

ಮಹಾಬಾಹು ಶ್ರೀಕೃಷ್ಣನೇ! ದೇವತೆಗಳಿಗೆ ಮಹಾಪರಾಧವನ್ನು ಮಾಡಿರುವ ದೈತ್ಯಧಮನನ್ನು ಜಯಿಸು. ಇವನನ್ನು ಪರಾಜಯಗೊಳಿಸಲೆಂದೆ ಈ ನಿನ್ನ ಕೃಷ್ಣಾವತಾರವಲ್ಲವೆ.

## ಗರುಡನ ಯುದ್ಧ

ಕೇಶವ - ಬಾಣರು ಹೋರಾಡುತ್ತಿರುವಾಗಲೇ ಇತ್ತ ಧ್ವಜದಲ್ಲಿದ್ದ ಗರುಡ-ನವಿಲುಗಳು ಘೋರವಾಗಿ ಹೋರಾಡಿದವು. ರೆಕ್ಕೆಗಳ ಬಡಿತ, ಕೊಕ್ಕುಗಳು, ಉಗುರುಗಳಿಂದಲೂ ಕಾದಾಟವಾಗುತ್ತಿತ್ತು. ಮಹಾಪರಾಕ್ರಮಿ ಗರುಡನು ಬಾಣನ ಧ್ವಜದ ನವಿಲಿನ ತಲೆಯನ್ನು ಹಿಡಿದುಬಿಟ್ಟನು. ಕೊಕ್ಕಿನಿಂದ ಕುಕ್ಕಿ ರೆಕ್ಕೆಯಿಂದ ಹೊಡೆದನು.

## ಗರುಡ - ಮಯೂರ ಯುದ್ಧ

ಗರುಡನು ಮಯೂರಕ್ಕೆ ರೆಕ್ಕೆಗಳಿಂದ ಹೊಡೆದು ಭೂಮಿಯ ಮೇಲೆ ಕೆಡವಿದನು. ಜ್ಞಾನತಪ್ಪಿದ ನವಿಲನ್ನು ನೋಡಿ ಭಯಪಟ್ಟ ಬಾಣಾಸುರನು.

## ಬಾಣನ ಪಶ್ಚಾತ್ತಾಪ

**ಮಯಾತಿಬಲಮತ್ತೇನ ನ ಕೃತಂ ಸುಹೃದಾಂ ವಚಃ ।**
**ಚಿಂತಯದ್ ಭಗವಾನ್ ರುದ್ರೋ ಬಾಣ ರಕ್ಷಣಮಾತುರಃ ॥ 9 ॥**

ನಾನು ಮಹಾಬಲಿಷ್ಠನೆಂಬ ದುರಹಂಕಾರದಿಂದಾಗಿ ನನಗೆ ಈ ಅವಸ್ಥೆ ಪ್ರಾಪ್ತವಾಯಿತು. ಅಹಂಕಾರಿಯಾದ ನಾನು ಮಿತ್ರರ ಮಾತನ್ನು ಕೇಳಲಿಲ್ಲ. ಹೀಗಾಗಿ ಇಂತಹ ಆಪತ್ತು ಬಂದಿತು. ಹೀಗೆ ರಣರಂಗದಲ್ಲಿ ಚಿಂತಾಕ್ರಾಂತನಾಗಿದ್ದ ಬಾಣನನ್ನು ನೋಡಿದ ಶಿವನು ಬಾಣನ ರಕ್ಷಣೆ ಮಾಡಲು ನಂದಿಗೆ ಹೀಗೆಂದನು -

ನಂದಿಯೇ! ನೀನೀಗಲೇ ಬಾಣ ಬಳಿ ತೆರಳು. ಸಿಂಹಗಳನ್ನು ಹೂಡಿರುವ ಈ ದಿವ್ಯರಥವನ್ನು ಅವನಿಗೆ ಕೊಡು. ಇದು ಕೃಷ್ಣನನ್ನು ಎದುರಿಸಲು ಸಮರ್ಥವಾಗಿದೆ. ಕೃಷ್ಣನೊಂದಿಗೆ ಯುದ್ಧ ಮಾಡಲು ನನಗೆ ಮನಸ್ಸಿಲ್ಲ. ಆದರೂ ಪ್ರಮಥಗಳ ಮಧ್ಯೆ ನಾನಿರುತ್ತೇನೆ. ನೀನು ಬಾಣನಿಗೆ ಸಹಾಯ ಮಾಡು ಎಂದನು.

**ಪ್ರಮಥಗಣ ಮಧ್ಯೇಽಹಂ ಸ್ಥಾಸ್ಯಾಮಿ ನ ಹಿ ಮೇ ಮನಃ ।**

ನಂದಿಶ್ವರನು ಶಂಕರನಿಗೆ ಹಾಗೆ ಆಗಲಿ ಎಂದು ಹೇಳಿ ಬಾಣನ ಬಳಿ ಬಂದು ಬಾಣನೆ ಶಿವದತ್ತವಾದ ಈ ಸಿಂಹವಾಹನ ರಥದಲ್ಲಿ ಕುಳಿತು ಕೃಷ್ಣನೊಂದಿಗೆ ಯುದ್ಧ ಮಾಡು ಎಂದನು.

ಬಾಣನೂ ಸಹ ಹಾಗೆ ಅಗಲೆಂದು ಆ ದಿವ್ಯರಥದಲ್ಲಿ ಕುಳಿತನು. ಈ ರಥವು ಬ್ರಹ್ಮನಿಂದ ನಿರ್ಮಿತವಾಗಿತ್ತು. ಇದರಲ್ಲಿ ಕುಳಿತು ದೇದೀಪ್ಯಮಾನನಾದ ಬಾಣನು ಶ್ರೀಕೃಷ್ಣನ ಮೇಲೆ 'ಬ್ರಹ್ಮಶಿರ' ವೆಂಬ ಅಸ್ತ್ರವನ್ನು ಪ್ರಯೋಗಿಸಿದನು.

ಈ ಬ್ರಹ್ಮಶಿರದಿಂದಾಗಿ ಲೋಕವೆಲ್ಲ ಕ್ಷೋಭೆಗೊಂಡಿತು. ಬ್ರಹ್ಮದೇವನಿಂದ ಲೋಕರಕ್ಷಣೆಗೆ ನಿರ್ಮಿತವಾಗಿದ್ದು ಈಗ ಬಾಣನ ಲೋಕಭಕ್ಷಣೆಗೆ ಪ್ರಯೋಗಿಸಿದ್ದ. ಇದನ್ನು ನೋಡಿದ ಶ್ರೀಕೃಷ್ಣನು ಚಕ್ರವನ್ನು ಪ್ರಯೋಗಿಸಿ ಬ್ರಹ್ಮಶಿರೋಸ್ತ್ರವನ್ನು ನಾಶಗೊಳಿಸಿ ಜಗನ್ನಾಥನೆನಿಸಿದನು.

ಬಾಣನೇ ! ನಿನ್ನ ಜಂಭದ ಮಾತುಗಳೆಲ್ಲಿ ಹೋದವು. ಆತ್ಮ ಪ್ರಶಂಸೆ ಶೂರರ ಲಕ್ಷಣವಲ್ಲ. ನನ್ನೊಂದಿಗೆ ಯುದ್ಧ ಮಾಡು. ವೀರಪುರುಷನಾಗು.

**ಕತ್ಥಿತಾನಿ ಕ್ವ ತೇ ತಾತ ಬಾಣ ಕಿಂ ನ ವಿಕತ್ಥಸೇ ॥ 10 ॥**

ಬಾಣಾಸುರನೇ! ಹಿಂದೆ ನಿನ್ನ ಹಾಗೆ ಸಾವಿರ ತೋಳುಗಳುಳ್ಳ ಕಾರ್ತವೀರ್ಯಾರ್ಜುನನೆಂಬ ರಾಜನಿದ್ದ. ಆದರೆ ಪರಶುರಾಮನೆಂಬ ದ್ವಿಬಾಹು ಬ್ರಾಹ್ಮಣನು ಮಹಾಬಲಿಷ್ಠ ಕಾರ್ತವೀರ್ಯನ ಸಹಸ್ರಬಾಹುಗಳನ್ನು ಕತ್ತರಿಸಿ ಹಾಕಿ ದ್ವಿಬಾಹುವಾಗಿ ಮಾಡಿಬಿಟ್ಟನು.

**ಕಾರ್ತವೀರ್ಯಾರ್ಜುನೋ ನಾಮ ಪೂರ್ವಂ ಬಾಹುಸಹಸ್ರವಾನ್ ।**
**ಮಹಾಬಲಃ ಸ ರಾಮೇಣ ದ್ವಿಬಾಹುಃ ಸಮರೇ ಕೃತಃ ॥ 11 ॥**

ನಿನಗೂ ಕಾರ್ತವೀರ್ಯನಂತೆ ಸಹಸ್ರಬಾಹುವೆಂಬ ಅಹಂಕಾರವಿದೆ. ಪರಶುರಾಮನಂತೆ ನಾನೂ ಸಹ ನಿನ್ನ ಸಾವಿರ ತೋಳುಗಳನ್ನು ಕತ್ತರಿಸಿ ಹಾಕಿ ನಿನ್ನ ದರ್ಪವನ್ನು ಅಡಗಿಸುತ್ತೇನೆ. ಈ ಒಂದೇ ತೋಳಿನಿಂದ ನಿನ್ನ ಸಾವಿರ ತೋಳುಗಳನ್ನೂ ಕತ್ತರಿಸುವೆ. ಅಲ್ಲಿಯವರೆಗೂ ನೀನು ರಣರಂಗದಲ್ಲಿದ್ದೆಯಾದರೆ ನಿನ್ನ ದರ್ಪಶಾಂತಿ ಮಾಡುವೆ.

ಜನಮೇಜಯನೇ, ದೇವಾಸುರ ಸಂಗ್ರಾಮಕ್ಕೆ ಸಮಾನವಾಗಿದ್ದ ಈ ಮಹಾಯುದ್ಧವನ್ನು ನೋಡಿ ಆನಂದದಿಂದ ನರ್ತನ ಮಾಡಿದರು. ಪ್ರದ್ಯುಮ್ನನಾದರೂ ಪ್ರಮಥಗಣಗಳೆಲ್ಲವನ್ನೂ ದೂರ ಚದುರಿಸಿ ಬಿಟ್ಟನು. ಅವೆಲ್ಲವೂ ಯುದ್ಧದ ಮಾತೆತ್ತದೆ ಶಿವನನ್ನು ಸೇರಿದವು.

ನಂತರ ಶ್ರೀಕೃಷ್ಣನು ವರ್ಷಾಕಾಲದ ಮೇಘಗಳಂತೆ ಗುಡುಗುತ್ತಾ ಬಾಣಾಸುರನನ್ನು ಮುಗಿಸಲು ಸಹಸ್ರಾರ ಚಕ್ರವನ್ನು ತೆಗೆದುಕೊಂಡನು. ಇದು ಗ್ರಹ ನಕ್ಷತ್ರಗಳು, ಇಂದ್ರನ ತೇಜಸಿದ್ಧಿತೆ, ಅವೆಲ್ಲವೂ ಇದರಲ್ಲಿತ್ತು. ಪ್ರಪಂಚಲ್ಲಿರುವ ಮೃಗ ಪಶುಪಕ್ಷಿ ಗಂಧರ್ವ ದೇವತೆಗಳಲ್ಲಿರುವ ತೇಜಸ್ಸೆಲ್ಲವೂ ಇದರದೆ ಒಂದು ಭಾಗ. ಇದರ ತೇಜಸ್ಸಿನ ಮುಂದೆ ಬಾಣನು ಸೂರ್ಯನ ಮುಂದೆ ಇರುವ ಮಿಣುಕುಳದಂತಾದ.

ಶ್ರೀಕೃಷ್ಣನು ಚಕ್ರಾಯುಧ ಹಿಡಿದು ಬಾಣನ ಮೇಲೆ ಪ್ರಯೋಗಿಸುತ್ತಿರುವುದನ್ನು ನೋಡಿದ ಪಾರ್ವತಿಯು ಶಿವನಿಗೆ ಹೀಗೆಂದಳು.

'ಬಾಣಸುರನ ಮೇಲೆ ಬಿಡಲಿರುವ ಚಕ್ರವು ತ್ರಿಲೋಕಗಳಲ್ಲಿ ಎದುರಿಲ್ಲದ ಅಸ್ತ್ರವಾಗಿದೆ. ಶ್ರೀಕೃಷ್ಣನು ಬಾಣನ ಮೇಲೆ ಚಕ್ರವನ್ನು ಬಿಡುವುದರೊಳಗೆ ಅವನನ್ನು ರಕ್ಷಿಸಬೇಕು.'

**ಬಾಣಂ ತ್ರಾಯಸ್ವ ದೇವ ತ್ವಂ ಯಾವಚ್ಚಕ್ರಂ ನ ಮುಂಚತಿ ।**

**ಲಂಬಾದೇವಿ[2]ಗೆ ಶಿವನ ಆದೇಶ**

ಪಾರ್ವತಿಯು ಹೀಗೆ ಹೇಳಿದ್ದನ್ನು ಕೇಳಿದ ಶಿವಶಂಕರನು ಲಂಬಾದೇವಿಗೆ ಹೀಗೆಂದನು.

ಲಂಬಾದೇವಿಯೇ, ಬಾಣಾಸುರನನ್ನು ರಕ್ಷಿಸಲು ನೀನು ಈಗಲೇ ಹೊರಡು.

---

2. ಲಂಬಾದೇವೀ :
ಪಾರ್ವತಿಯದೆ ಮತ್ತೊಂದು ರೂಪ. ಇದಕ್ಕೆ ಕೋಟರಾ ಎಂದು ಹೆಸರು. ಇವಳು ಈಗಾಗಲೇ ಸ್ಕಂಧನ ರಕ್ಷಣೆಗಾಗಿ ನಗ್ನಳಾಗಿ ಬಂದಿದ್ದಳು. ಸ್ಕಂಧನನ್ನುಳಿಸಿದಳು. ಈಗ ಮತ್ತೊಬ್ಬ ಮಗ ಷಣ್ಮುಖನ ತಮ್ಮ ಬಾಣನನ್ನು ಕೊಂದು ಹಾಕಲಿರುವಾಗ ಪುನಃ ನಗ್ನಳಾಗಿ ಕಾಣಿಸಿಕೊಂಡಳು. ಹೀಗೆ ಎರಡು ಬಾರಿ ನಗ್ನಳಾಗಿ ತನ್ನ ಮಕ್ಕಳನ್ನು ಕಾಪಾಡಿದಳು.
ಪಾರ್ವತಿಯು ಅಳಗಿರೀಶ ಕೃಷ್ಣನಿಗೆ ತಂಗಿಯು. ತಂಗಿಯು ಅಣ್ಣನ ಮುಂದೆ ದಿಗಂಬರವಾಗಿ ನಿಂತರೆ ಅನ್ಯಥಾಭಾವವೇರ್ಪಡುವುದಿಲ್ಲ. ಅದಕ್ಕಾಗಿಯೇ **'ಕೃಷ್ಣಸ್ಯೈಕಸ್ಯ ತದ್ರೂಪಂ ದರ್ಶಯಂತೀ'** ಎಂದಿದೆ. ಪಾರ್ವತಿಗೆ ಬಾಣನು ಮಗ ಹೇಗೆಂದರೆ– ಬಾಣನಾದರೂ ಪರಮೇಶ್ವರನನ್ನು ಕುರಿತು – ಹೇ ತ್ರಿಲೋಚನ! ನಿನ್ನ ಆಜ್ಞೆಯಾದರೆ ನಾನು ಪಾರ್ವತಿಯ ಪುತ್ರನಾಗಬೇಕೆಂದು ಇಚ್ಛಿಸುವೆ ಎಂದಾಗ ಹಾಗೆ ಆಗಲಿ ಎಂದು ಹೇಳಿ, ಪಾರ್ವತಿಗೆ ಇವನನ್ನು ಷಣ್ಮುಖನ ತಮ್ಮನೆಂದು ಪರಿಗಣಿಸಿ ಸ್ವೀಕರಿಸು ಎಂದಾಗ ಅವಳೂ ಒಪ್ಪಿದಳು. ಈಗ ಎರಡನೆ ಮಗನ ಮರಣ ಸನ್ನಿಹಿತವಾದಾಗ ತಾನು ಪುನಃ ನಗ್ನಳಾಗಿ ಕಾಣಿಸಿ, ಬಿಡಿಸಿದಳು.

**ಗಚ್ಛೈಹಿ ಲಂಬೇ ಶೀಘ್ರಂ ತ್ವಂ ಬಾಣಸಂರಕ್ಷಣಂ ಪ್ರತಿ ॥ 12 ॥**

ತ್ರ್ಯಂಬಕನ ಈ ಆದೇಶವನ್ನು ಕೇಳಿದ ಕೂಡಲೇ ಪಾರ್ವತಿಯದೆ ಮತ್ತೊಂದು ರೂಪವಾದ ಲಂಬಾದೇವಿಯು ಅಂದರೆ ಕೋಠರಾದೇವಿಯು ಹಿಂದಿನಂತೆಯೇ ಪುನಃ ಯೋಗವನ್ನವಲಂಬಿಸಿ ಇತರರಿಗೆ ಅದೃಶ್ಯಳಾಗಿ ಶ್ರೀಕೃಷ್ಣನಿಗೆ ಮಾತ್ರ ಕಾಣುವಂತೆ ನಿಂತಳು. ಹಿಂದಿನಂತೆಯೇ ತಾನು ಧರಿಸಿದ್ಧ ವಸ್ತ್ರಗಳನ್ನೆಲ್ಲ ಕಳಚಿ ವಿವಸ್ತ್ರಳಾಗಿ ಶ್ರೀಕೃಷ್ಣನ ಮುಂದೆ ನಿಂತಳು.

**ತತೋ ಯೋಗಂ ಸಮಾಧಾಯ ಅದೃಶ್ಯಾ ಹಿಮವತ್ ಸುತಾ ।**
**ಕೃಷ್ಣಸ್ಯೈಕಸ್ಯ ತದ್ರೂಪಂ ದರ್ಶಯಂತೀ ವ್ಯವಸ್ಥಿತಾಃ ॥ 13 ॥**
**ಅಂತರ್ಧಾನಮುಪಾಗಮ್ಯ ತ್ಯಕ್ತ್ವಾ ಸ ವಾಸಸೀ ಪುನಃ ।**
**ಪ್ರಮುಖೇ ವಾಸುದೇವಸ್ಯ ದಿಗ್ವಾಸಾಃ ಕೋಟರೀ ಸ್ಥಿತಾಃ ॥ 14 ॥**

ಬಾಣಾಸುರನನ್ನು ರಕ್ಷಿಸುವ ಸಲುವಾಗಿ ಲಂಬಾದೇವಿ/ಕೋಟವೀ ಕೃಷ್ಣನ ಮುಂದೆ ನಿಂತಾಗ ಶ್ರೀಕೃಷ್ಣನು – ಅಮರ್ಷದಿಂದ ತಾಮ್ರಾಕ್ಷಿಯಾಗಿ ನಿಂತಿರುವ ನೀನು ಬಾಣನನ್ನು ಸಂರಕ್ಷಿಸಲೆಂದೇ ಈ ನಗ್ನವೇಷದಲ್ಲಿ ಇಲ್ಲಿ ಬಂದು ನಿಂತಿರುವೆ. ಆದರೆ ನಾನು ಮಾತ್ರ ಅವನನ್ನು ಕೊಲ್ಲದೆ ಬಿಡುವುದಿಲ್ಲ ಎಂದಾಗ ಬಾಣನನ್ನು ಕೊಲ್ಲದೆ ಬಿಡಲಾರೆ ಎಂಬ ಕೃಷ್ಣನ ಮಾತಿಗೆ ಲಂಬೆಯು ಹೀಗೆಂದಳು.

**ಲಂಬಾಸ್ತುತಿ**

ಭಗವಂತನೇ, ನೀನು ಜಗಜ್ಜನ್ಮಾದಿ ಕಾರಣನು. ಕ್ಷರಾಕ್ಷರ ತತ್ವವನ್ನು ಮೀರಿನಿಂತ ಪುರುಷೋತ್ತಮನು. ಮಹಾಭಾಗ್ಯ ದೇವತೆಯಾದ ಲಕ್ಷ್ಮೀಪತಿಯು, ನೀನೇ ಮಹಾದೇವ, ನಾವೆಲ್ಲರೂ ಅಧಮ ದೇವತೆಗಳು, ದೇಶತಃ ಕಾಲತಃ ಗುಣತಃ ಅಪರಿಚ್ಛಿನ್ನನು. ಮಹದ್ಗುಣಶಾಲಿಯಾದ್ದರಿಂದ ಅನಂತನಾಮಕನು. ಹರಿನ್ಮಣಿಮರ್ಯ ನಿಭನು, ಅನಾದಿ ನಿತ್ಯನು. ಪದ್ಮನಾಭನು, ಇಂದ್ರಿಯ ನಿಯಾಮಾಕನು, ಲೋಕಗಳ ಆದಿಕಾರಣನು [**ಊರ್ಧ್ವಮೂಲನು**]. ಈ ಬಾಣನನ್ನು ಕೊಲ್ಲುವುದು ನಿನಗುಚಿತವಲ್ಲ. ಬಾಣನಿಗೆ ಅಭಯ ನೀಡು.

ನನ್ನನ್ನು ಜೀವತ್ಪುತ್ರಳನ್ನಾಗಿ ಮಾಡು. ನಾನು ಇವನಿಗೆ ನನ್ನ ಪುತ್ರನಾಗಿರು ಎಂದು ವರ ನೀಡಿರುವೆನು. ಇದರಿಂದಾಗಿ ಇವನ ರಕ್ಷಣೆಗೆ ಪದೇ ಪದೇ ಕಾಣಿಸಿಕೊಳ್ಳುವೆ.

**ಪ್ರಯಚ್ಛ ಹ್ಯಭಯಂ ಬಾಣೇ ಜೀವಪುತ್ರೀತ್ವಮೇವ ಚ ।**
**ನ ಮೇ ಮಿಥ್ಯಾ ಸಮುದ್ಯೋಗಂ ಕರ್ತುಮರ್ಹಸಿ ಮಾಧವಃ ॥ 15 ॥**

ಹೀಗೆ ಪಾರ್ವತಿಯು ಬೇಡುತ್ತಿರಲು ಪರಪುರಂಜಯನಾದ ಶ್ರೀಕೃಷ್ಣನು ಲಂಬೆಗೆ ಹೇಳಿದನು.

**ಬಾಣೋ ಬಾಹು ಸಹಸ್ರೇಣ ನರ್ದತೇ ದರ್ಪಮಾಶ್ರಿತಃ ।**
**ಏತೇಷಾಂ ಛೇದನಂ ತ್ವದ್ಯ ಕರ್ತವ್ಯಂ ನಾತ್ರ ಸಂಶಯಃ ॥ 16 ॥**
**ದ್ವಿಬಾಹುನಾ ಚ ಬಾಣೇನ ಜೀವಪುತ್ರೀ ಭವಿಷ್ಯಸಿ ।**

ಭಗಿನೀ! ಲಂಬೆ! ಈ ನಿನ್ನ ಮುಗ್ಧ ಬಾಣನು ತಾನು ಸಹಸ್ರಬಾಹುವಾಗಿರುವೆನೆಂಬ ದರ್ಪದಿಂದಾಗಿ ಯುದ್ಧದಲ್ಲಿ ತುರಿಕೆವುಳ್ಳವನಾಗಿದ್ದಾನೆ. ಇವುಗಳನ್ನು ನಾನು ಈಗ ಕತ್ತರಿಸಿ ಹಾಕಿ, ಎರಡು ಬಾಹುಗಳನ್ನು ಮಾತ್ರ ಉಳಿಸುತ್ತೇನೆ. ಇದರಿಂದಲೂ ನೀನು ಜೀವತ್ ಪುತ್ರಿಯಾಗುವೆ ಎಂದನು.

**ಆಸುರಂ ದರ್ಪಮಾಶ್ರಿತ್ಯ ನ ಚ ಮಾಂ ಸಂಶ್ರಯಿಷ್ಯತಿ ॥ 17 ॥**

ಬಾಣಾಸುರನು ಆಸುರೀ ದರ್ಪವನ್ನು ಹೊಂದಿರುವುದರಿಂದ ನನಗೆ ಶರಣು ಹೊಂದಲಾರನು. ಇವನ ಸಹಸ್ರ ತೋಳುಗಳನ್ನು ಕತ್ತರಿಸಿದರೆ ಆಸುರೀಭಾವ ತೊಲಗುತ್ತದೆ ಎಂದಾಗ ದೇವಿಯು ಹೀಗೆಂದಳು.

**ಪ್ರೋವಾಚ ದೇವೀ ಬಾಣೋಽಯಂ ದೇವದತ್ತೋ ಭವೇದಿತಿ ।**

ಈ ಬಾಣಾಸುರನು ಮಹಾದೇವನಿಂದ ನನಗೆ ನೀಡಿರುವ ಮಗನೆಂದಾಗುವಂತೆ ಅನುಗ್ರಹಿಸು ಎಂದಾಗ ಹಾಗೆ ಆಗಲಿ ಎಂದು ಅನುಗ್ರಹಿಸಿ ಬಾಣನನ್ನು ಕ್ರೋಧಾವಿಷ್ಟನಾಗಿ ಹೀಗೆ ಹೇಳಿದನು.

**ಯುಧ್ಯತಾಂ ಯುಧ್ಯತಾಂ ಸಂಖ್ಯೇ ಭವತಾಂ ಕೋಟವೀ ಸ್ಥಿತಾ ।**
**ಅಶಕ್ತಾನಾಮಿವ ರಣೆ ಧಿಗ್ ಬಾಣ ತವ ಪೌರುಷಮ್ ॥ 18 ॥**

ಬಾಣನೇ! ರಣರಂಗದಲ್ಲಿ ಈಗ ಯುದ್ಧ ಮಾಡು. ದುರ್ಬಲರಾದವರಿಗೆ ಸಹಾಯ ಮಾಡಲು ಕೋಟರಿಯು ನಿನ್ನ ರಕ್ಷಣೆಗಾಗಿ ಇಲ್ಲಿಗೆ ಬಂದಿರುವಳು. ಸ್ತ್ರೀ ಸಹಾಯ ಪಡೆದು ಯುದ್ಧ ಮಾಡುವ ನಿನ್ನದೂ ಒಂದು ಪೌರುಷವೆ? ನಿನ್ನ ಪೌರುಷಕ್ಕೆ ಧಿಕ್ಕಾರವಿಲಿ ಎಂದು ಹೇಳಿ ಬಾಣಾಸುರನ ಮೇಲೆ ತನ್ನ

ಚಕ್ರವನ್ನು ಬಿಟ್ಟನು. ಚಕ್ರ ಬಿಡುವಾಗ ನಗ್ನ ದೇವತೆಯನ್ನು ನೋಡದಂತೆ ನಿಮೀಲಿತಾಕ್ಷನಾಗಿ ಪ್ರಯೋಗಿಸಿದನು.

**ಚಕ್ರಮುದ್ಯಮ್ಯ ಸಮರೇ ಕೋಪದೀಪ್ತೋ ಗದಾಧರಃ ।**
**ಸ ಮುಷ್ಣನ್ ದಾನವಂ ತೇಜಃ ಸಮರೇ ಸ್ವೇನ ತೇಜಸಾ ॥ 19 ॥**

ಶ್ರೀಕೃಷ್ಣನು ಕೋಪದಿಂದ ಚಕ್ರವನ್ನು ಹಿಡಿದನು. ಅವನ ಕಾಂತಿಯಿಂದ ಅಸುರನ ಆಸುರೀಕಾಂತಿಯು ಅಡಗಿ ಹೋಯಿತು.

ಚಕ್ರದಿಂದ ಶ್ರೀಕೃಷ್ಣನು ಬಾಣಾಸುರನ ಸಾವಿರ ಬಾಹುಗಳಲ್ಲಿ ಎರಡನ್ನು ಮಾತ್ರ ಉಳಿಸಿ ಉಳಿದ ತೋಳುಗಳನ್ನೆಲ್ಲ ಕತ್ತರಿಸಿ ಹಾಕಿದ.

ಆ ಸುದರ್ಶನ ಚಕ್ರನು ಅಲಾತಚಕ್ರದಂತೆ ಸುತ್ತುತ್ತಿತ್ತು.

ರೆಂಬೆಗಳನ್ನು ಕತ್ತರಿಸಿದ ವೃಕ್ಷದಂತೆ ಸಾವಿರ ಬಾಹುವು ದ್ವಿಬಾಹುವಾಗಿ ಮಾಡಿ ಚಕ್ರವು ಕೃಷ್ಣನ ಬಳ ಬಂದಿತು.

**ಕೃತ್ವಾ ದ್ವಿಬಾಹುಂ ತಂ ಬಾಣಂ ಛಿನ್ನಶಾಖಮಿವ ದ್ರುಮಮ್ ।**

ವೈಶಂಪಾಯನರು ಹೇಳುವರು – ರಾಜನೇ! ಚಕ್ರವು ಬಾಣನ ತೋಳುಗಳನ್ನು ಕತ್ತರಿಸಿದ್ದರಿಂದ ಬಾಣನ ಶರೀರದಿಂದ ರಕ್ತವು ಧಾರಾಕಾರವಾಗಿ ಹರಿಯುತ್ತಿತ್ತು. ರಕ್ತದಿಂದ ತೊಯ್ದ ಆ ಬಾಣನು ತನ್ನ ಪಟ್ಟಣ ಮಾತ್ರ ಶೋಣಿತಪುರವಲ್ಲ. ನನ್ನ ಈ ಶರೀರವೆಂಬ ಪುರವೂ ಶೋಣಿತವೆಂದು ತೋರಿಸುವನೋ ಎಂಬಂತಿದ್ದ. ಕೆಂಪಾದ ಮೇಘವು ಗರ್ಜಿಸುವಂತೆ ಕೋಪದಿಂದ ಕೂಗುತ್ತಿದ್ದ ಬಾಣನನ್ನು ಕೊಂದು ಹಾಕಲು, ಉದ್ಯುಕ್ತನಾದಾಗ ಪರಮಶಿವನೆ ಸ್ಕಂಧನೊಂದಿಗೆ ಬಂದು ಹೀಗೆಂದನು.[3]

**ಶಿವಸ್ತುತಿ[4]**

ಶ್ರೀಕೃಷ್ಣನೇ! ಅನಾದಿನಿತ್ಯನೂ ದೇವದೇವನೂ ಮಧುಕೈಟಭಹಂತೃವೂ ನೀನೇ

---

3. **ತದಾ ಶಿವೇನ ಪ್ರಣತೋ ಬಾಣರಕ್ಷಣ ಕಾಮ್ಯಯಾ ।**
**ಕೃತ್ವಾ ಸ್ವಭಕ್ತಂ ಬಾಣಂ ತಂ ರರಕ್ಷ ದ್ವಿಭುಜೀಕೃತಮ್** ॥ – ತಾ.ನಿ. *22/267*

4. ವಸ್ತುತಃ ಭಾಗವತದಲ್ಲಿ ಪುನಃ ಶೈವಜ್ವರವು ಶ್ರೀಕಷ್ಣನನ್ನು ಅಸುರಾವೇಶದಿಂದಾಗಿ ಆಕ್ರಮಿಸುತ್ತದೆ. ಆಗ ವೈಷ್ಣವ ಜ್ವರವನ್ನು ಬಿಟ್ಟಾಗ ಅದು ಅದರ ಕೈಯ್ಯಲ್ಲಿ ಸಾಂಪುಲಿರುವಾಗ 'ನಮಾಮಿ ತ್ವಾಮನಂತ ಶಕ್ತಿಂ' ಇತ್ಯಾದಿ ಸ್ತುತಿಸಿದಾಗ ಮುಕ್ತಗೊಳಿಸುವನೆಂದಿದೆ.

ಎಂದು ನಾನು ಬಲ್ಲೆ. ಲೋಕಗಳಿಗೆಲ್ಲ ನೀನೆ ಆಶ್ರಯನು. ನಿನ್ನಿಂದ ಹುಟ್ಟಿರುವ ಈ ಜಗತ್ತನ್ನು ಪಾಲಿಸುವವ ನೀನೆ. ನಿನ್ನನ್ನು ಮೂರ್ಲೋಕದಲ್ಲಿ ಗೆಲ್ಲುವವರಾರಿದ್ದಾರೆ? ಆದ್ದರಿಂದ ಈ ಬಾಣನು ನಿನ್ನ ಕೈಯ್ಯಲ್ಲಿ ಸಾಯುವುದು ನಿಶ್ಚಿತ. ನಿನ್ನ ಚಕ್ರಕ್ಕೆ ಎದುರು ನಿಲ್ಲುವವರಾರಿದ್ದಾರೆ? ಆದ್ದರಿಂದ ನಿನ್ನ ಆಯುಧವನ್ನು ಬಾಣನ ಮೇಲೆ ಪ್ರಯೋಗಿಸಬೇಡ. ಇವನು ನನ್ನ ಮಗನಾಗಿರುವನು ಇವನಿಗೆ ಅಭಯ ನೀಡಿರುವೆನು. ನನ್ನ ವರ ವ್ಯರ್ಥವಾಗದಂತೆ ನನ್ನನ್ನು ರಕ್ಷಿಸು ಎಂದನು.[5]

**ಜೀವತಾಂ ದೇವ ಬಾಣೋಽಯಂ ಏತಚ್ಚಕ್ರಂ ನಿವರ್ತಿತಮ್ ।**
**ಮಾನ್ಯಸ್ತ್ವಂ ದೇವದೇವಾನಾಂ ಅಸುರಾಣಾಂ ಚ ಸರ್ವಶಃ ॥ 20 ॥**

ಮಹಾದೇವನು ಬಾಣನ ಪ್ರಾಣ ಉಳಿಸಲು ಪ್ರಾರ್ಥಿಸಿದಂತೆ ಮಹಾ-ದಯಾವಂತನಾದ ಕೃಷ್ಣನು "ಭವಶಂಕರನೇ! ನಿನ್ನ ಪ್ರಾರ್ಥನೆಯಂತೆ ಬಾಣನು ಬದುಕಿರಲಿ. ನೀನು ದೇವತೆಗಳಿಗೂ ಅಸುರರಿಗೂ ಬೇಕಾದವನಾಗಿರುವಿ" ನಾನಿನ್ನು ಹೊರಟು ಬರುತ್ತೇನೆ. ನನಗೆ ಅನುಮತಿ ನೀಡುವವನಾಗು.

ಶಿವನಿಂದ ಅನುಮತಿ ಪಡೆದ ಕೃಷ್ಣನು ನಾಗಪಾಶಗಳಿಂದ ಬಂಧಿತನಾಗಿದ್ದ ತನ್ನ ಪೌತ್ರ ಅನಿರುದ್ಧನ ಕಡೆಗೆ ಹೊರಟನು.

**ಗತೇ ಕೃಷ್ಣೇ ತತೋ ನಂದೀ ಬಾಣಮಾಹ ವಚಃ ಶುಭಮ್ ।**

ಶ್ರೀಕೃಷ್ಣನು ಹೊರಟು ಹೋದ ಮೇಲೆ ನಂದೀಶ್ವರನು ಬಾಣನಿಗೆ ಹಿತವೂ ಪಥ್ಯವೂ ಆದ ಮಾತನ್ನು ಹೇಳಿದನು.

ಬಾಣನೆ! ನಿನ್ನನ್ನು ಉಳಿಸಿ ಕೊಟ್ಟಿರುವ ರುದ್ರದೇವನ ಬಳಿ ಹೋಗಿ ಪ್ರಾರ್ಥಿಸು ಎಂದಾಗ ಬಾಣನು ಹೊರಡಲು, ಅನುವಾದಾಗ ಬಾಹುಗಳು ಕತ್ತರಿಸಲ್ಪಟ್ಟದ್ದನ್ನು ನೋಡಿ ಕರುಣೆಯಿಂದ ಅವನೇ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟನು.

---

5. ಹಿಂದೆ ಬಾಣನು ಸಾವಿರ ತೋಳುಗಳಿಂದಲೂ ವಾದ್ಯಗಳನ್ನು ಬಾರಿಸಿ ತಾಂಡವ ನೃತ್ಯದಲ್ಲಿ ಸಂತೋಷಪಡಿಸಿದ್ದ. ಆಗ ಶಿವನು ನಿನ್ನನ್ನು ನನ್ನ ಮಗನನ್ನಾಗಿ ಮಾಡಿಕೊಂಡಿದ್ದೇನೆ ಎಂದ.
ವಸ್ತುತಃ ಹರಿವಂಶ, ಮಹಾಭಾರತ, ತಾ. ನಿರ್ಣಯಗಳಲ್ಲಿ ದ್ವಿಭುಜನನ್ನಾಗಿಸಿದ ಎಂದಿದೆ. ಭಾಗವತವು **"ಚತ್ವಾರೋಽಸ್ಯ ಭುಜಾ ಶಿಷ್ಟಾ"** ಎಂದು ನಾಲ್ಕು ಭುಜ ಉಳಿಸಿದ ಎಂದಿದೆ. ಇದರಭಿಪ್ರಾಯ ಒಂದು ಪಾರ್ಶ್ವದಲ್ಲಿ ಎರಡು ಭುಜಗಳಂತೆ ಒಟ್ಟು ನಾಲ್ಕು ಎಂದು.

**ಮಹಾದೇವನ ಬಳಿ ಹೋದ ಮೇಲೆ ನಂದಿಯು ಈ ಮಹಾದೇವನು ನಿನ್ನ ಮೇಲೆ ಅತೀ ಪ್ರಸನ್ನನಾಗಿದ್ದಾನೆ. ಅವನ ಮುಂದೆ ನರ್ತನ ಮಾಡುವವನಾಗು.**

**[ಬಾಣ ಬಾಣ ಪ್ರನೃತ್ಯಸ್ವ]**

ನಂದಿಯ ಮಾತಿನಂತೆ ಬಾಣನು ರಕ್ತಸಿಕ್ತನಾಗಿದ್ದರೂ ರುದ್ರದೇವನ ಮುಂದೆ ನರ್ತನವನ್ನು ಮಾಡಿದನು. ಸಂತುಷ್ಟನಾದ ಶಿವನು ಅವನಿಗೆ ಬಾಣನೇ! ಯಾವುದಾದರೂ ಒಂದು ವರವನ್ನು ಬೇಡು ಎಂದಾಗ ಬಾಣನು ನಾನು ಅಜರಾಮರಣನಾಗಿರಬೇಕು ಹೀಗೆ ಅನುಗ್ರಹಿಸು.

'**ಅಜರಶ್ಚಾಮರಶ್ಚೈವ ಭವೇಯಂ ಸತತಂ ವಿಭೋ**' ಎಂದನು. ಶಿವನು ನೀನು ದೇವತೆಗಳಿಗೆ ಸಮಾನನಾಗಿ ಜರಾ ಮರಣವಿಲ್ಲದವನಾಗುತ್ತಿ. ಮತ್ತೊಂದು ವರ ಕೇಳು ಎಂದಾಗ.

**ಭಕ್ತಾನಾಂ ನೃತ್ಯತಾಂ ದೇವ ಪುತ್ರಜನ್ಮಭವೇದ್ ಭವ ॥ 21 ॥**

ನಾನು ರಕ್ತದಿಂದ ತೊಯ್ದು ದುಃಖಿತನಾಗಿದ್ದರೂ ನಿನ್ನ ಮುಂದೆ ನರ್ತನ ಮಾಡುತ್ತಿರುವೆ. ಯಾರು ಹೀಗೆ ನಿನ್ನ ಮುಂದೆ ನರ್ತನ ಮಾಡುವರೋ ಅವರಿಗೆ ಪುತ್ರಜನ್ಮವಾಗುವಂತೆ ಅನುಗ್ರಹಿಸು ಎಂದನು.

ಶಿವನು 'ಹಾಗೆ ಆಗಲಿ' ಯಾರು ನಿರಾಹಾರರಾಗಿ ಭಕ್ತಿಪೂರ್ವಕವಾಗಿ ನಿನ್ನಂತೆ ನರ್ತಿಸುವರೊ ಅವರಿಗೆ ಪುತ್ರಪ್ರಾಪ್ತಿಯಾಗುತ್ತದೆ ಎಂದನು.

ಮೂರನೇ ವರವನ್ನು ಬೇಡು ಎಂದಾಗ,

ಚಕ್ರದ ಹೊಡೆತದಿಂದಾಗಿ ಅತಿಯಾದ ವೇದನೆವುಂಟಾಗುತ್ತಿದೆ. ಈ ವೇದನೆಯು ಇಲ್ಲದಂತಾಗಲಿ ಇದು ನನ್ನ ಮೂರನೇ ವರ ಎಂದಾಗ, ನಿನಗೆ ಚಕ್ರದ ಪ್ರಹಾರದಿಂದ ಯಾವುದೇ ವೇದನೆ ಇರುವುದಿಲ್ಲ.

ನಾಲ್ಕನೆಯ ವರವನ್ನೂ ಕೇಳು. ನಿನ್ನ ವಿಷಯದಲ್ಲಿ ನಾನು ಯಾವಾಗಲೂ ಪ್ರಸನ್ನನಾಗಿಯೆ ಇರುವೆ ಎಂದಾಗ.

ನಾನು ನಿನ್ನ ಪ್ರಮಥಗಣಗಳ ಸಮೂಹಕ್ಕೆಲ್ಲ ಪ್ರಧಾನನಾಗುವಂತೆ ಮಾಡು ಎಂದನು. ನಾನು ಮಹಾಕಾಲನೆಂಬ ಖ್ಯಾತಿ ಹೊಂದುವಂತಾಗಲಿ ಎಂದಾಗ – ನೀನು ಅಪೇಕ್ಷಿಸಿದಂತೆಯೇ ಎಲ್ಲವೂ ನಡೆಯುತ್ತದೆ. ನೀನು ನೀರೋಗಿಯಾಗಿ ದೃಢಕಾಯನಾಗಿ ಇರುತ್ತಿ.

ಈ ವರಗಳಿಂದಾಗಿ ನಿನಗೆ ಎಲ್ಲಿಯೂ ಯಾರಿಂದಲೂ ಯಾವುದೇ ರೀತಿಯ ಭಯವಿರುವುದಿಲ್ಲ. ಇನ್ನೇನಾದರೂ ವರ ಬೇಕೆ? ಭಕ್ತರಿಗೆ ಕೊಡದೆ ಇರುವ ಯಾವುದೇ ವಸ್ತು ನನ್ನಲ್ಲಿರುವುದಿಲ್ಲ ಎಂದಾಗ ಬಾಣನು ಸಾವಿರ ಬಾಹುವಿನಿಂದ ಶೋಭಿಸುತ್ತಿದ್ದ ನನಗೆ ಈ ದ್ವಿಬಾಹುಗಳು ವಿಕಾರವಾಗಿ ಕಾಣುವುವು. ಈ ನನ್ನ ಶರೀರ ವಿರೂಪವಾಗಿ ತೋರಬಾರದು ಎಂದಾಗ ಹಾಗೆ ಆಗಲಿ ಎಂದು ವರ ನೀಡಿ ಅಲ್ಲಿಯೆ ಅಂತರ್ಧಾನನಾದನು.

**ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ ಉಷಾಹರಣ ಪ್ರಸಂಗದಲ್ಲಿ ಬಾಣನಿಗೆ ಶಿವನ ವರದಾನ ಎಂಬಲ್ಲಿ ನೂರಇಪ್ಪತ್ತಾರನೆಯ ಅಧ್ಯಾಯ ಸಮಾಪ್ತಿ**

# ಅಥ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ

## ಅನಿರುದ್ಧನ ನಾಗಪಾಶಮೋಚನೆ

**ಏವಂ ವರಾನ್ ಬಹೂನ್ ಪ್ರಾಪ್ಯ ಬಾಣಃ ಪ್ರೀತಮನಾಽಭವತ್ ।**
**ಜಗಾಮ ಸಹ ರುದ್ರೇಣ ಮಹಕಾಲತ್ವಮಾಗತಃ ॥ 1 ॥**

ವೈಶಂಪಾಯನರು ಹೇಳುವರು – ರಾಜನೇ! ಹೀಗೆ ಬಾಣನು ಶಿವನಿಂದ ಅದ್ಭುತ ವರಗಳನ್ನು 'ಮಹಾಕಾಲ'ತ್ವವನ್ನೂ ಪಡೆದು ಸಂತುಷ್ಟನಾದನು. ರುದ್ರನೊಡನೆ ಹೊರಟು ಹೋದನು.

ಇತ್ತ ಶ್ರೀಕೃಷ್ಣನು ನಾರದರನ್ನು ನಾರದರೇ! ಬಾಣನು ನನ್ನ ಮೊಮ್ಮಗನನ್ನು ನಾಗಪಾಶದಿಂದ ಬಂಧಿಸಿ ಎಲ್ಲಿ ಬಚ್ಚಿಟ್ಟಿದ್ದಾನೆ ಎಂದು ಹೇಳಿರಿ. ಇಡೀ ದ್ವಾರಕೆಯು ಅವನಿಗಾಗಿ ಹಾತೊರೆಯುತ್ತಿದೆ.

**ಕ್ವಾನಿರುದ್ಧೋಽಸ್ತಿ ಭಗವನ್ ಸಂಯತೋ ನಾಗಬಂಧನೈಃ ।**

ಈಗ ಬಾಣನು ನಷ್ಟವಾದಂತೆ ಆಗಿರುವನು. ಅವನ ಭಯವಿಲ್ಲ. ಅನಿರುದ್ಧನು ಎಲ್ಲಿರುವನೆಂದು ದಯಮಾಡಿ ಹೇಳ ಎಂದಾಗ, ನಾರದರು ಕೃಷ್ಣನೇ! ಕುಮಾರನು ಬಂಧಿಸಲ್ಪಟ್ಟು ಕನ್ಯೆಯಾದ ಉಷಾದೇವಿಯ ಗೃಹದಲ್ಲಿಯೇ ಇರುವನು.

**ಕನ್ಯಾಪುರೇ ಕುಮಾರೋಽಸೌ ಬದ್ಧೋ ನಾಗೈಶ್ಚ ಮಾಧವ ॥ 2 ॥**

ಈ ಮಧ್ಯದಲ್ಲಿ ಚಿತ್ರಲೇಖೆಯು ಶೀಘ್ರವಾಗಿ ಅಲ್ಲಿಗೆ ಬಂದು ಹೀಗೆಂದಳು.

**ಇದಮಂತಃ ಪುರಂ ದೇವ ಪ್ರವಿಶಸ್ವ ಯಥಾಸುಖಮ್ ।**

ದೇವನೇ! ಶಿವನೇ ಪರದೈವವೆಂದು ತಿಳಿದು ಪೂಜಿಸುವ ಬಾಣನ ಅಂತಃಪುರವು ಇದೆ ಆಗಿದೆ. ಇದನ್ನು ಯಥೇಚ್ಛವಾಗಿ ಪ್ರವೇಶಿಸಬಹುದು ಎಂದಾಗ,

ಶ್ರೀಕೃಷ್ಣನು ಬಲರಾಮ-ಗರುಡ ಪ್ರದ್ಯುಮ್ನ ನಾರದರೊಂದಿಗೆ ಪ್ರವೇಶಿಸಿದನು. ಗರುಡನು ಅಂತಃಪುರ ಪ್ರವೇಶ ಮಾಡಿದೊಡನೆಯೇ ಅನಿರುದ್ಧನನ್ನು ಬಂಧಿಸಿದ್ದ ಸರ್ಪಗಳೆಲ್ಲವೂ ಅನಿರುದ್ಧನ ದೇಹದಿಂದ ಬಾಣರೂಪಗಳಾಗಿ ಕೆಳಗೆ ಬಿದ್ದವು.

**ತತೋ ದೃಷ್ಟ್ವೈವ ಗರುಡಂ ಯೇಽನಿರುದ್ಧಶರೀರಗಾಃ ।**
**ಶರರೂಪಾ ಮಹಾಸರ್ಪಾಃ ಪ್ರಕೃತ್ಯವಸ್ಥಿತಾಃ ಶರಾಃ ॥ 3 ॥**

ಹೀಗೆ ನಾಗಪಾಶಗಳಿಂದ ಬಿಡುಗಡೆ ಹೊಂದಿದ ಅನಿರುದ್ಧನು ಅಂಜಲಿಬದ್ಧನಾಗಿ ಕೇಶವನನ್ನು ಸ್ತುತಿಸಿದನು.

ಭಗವನ್! ನೀನು ಯುದ್ಧದಲ್ಲಿ ತೊಡಗಿದೆನೆಂದರೆ ಇಂದ್ರನೆ ಬಂದರೂ ನಿನ್ನ ಮುಂದೆ ನಿಂತು ಯುದ್ಧ ಮಾಡಲಾರನು.

ಸರ್ವಲೋಕಹರನಾದ ಹರನನ್ನೆ ಅನಾಯಾಸವಾಗಿ ಜಯಿಸಿದ ನಿನ್ನ ಮುಂದೆ ಜ್ವರ, ಬಾಣಾದಿಗಳೇನು ಮಾಡಿಯಾರು ಎಂದು ಹೇಳಿ ಬಲರಾಮಕೃಷ್ಣ, ಗರುಡ ನಾರದಾದಿಗಳಿಗೆ ನಮಸ್ಕರಿಸಿದನು. ತಂದೆಯಾದ ಪ್ರದ್ಯುಮ್ನನನ್ನೂ ಅಭಿವಂದಿಸಿದನು.

ಈ ಸಮಯದಲ್ಲಿ ಸಖಿಯರಿಂದ ಕೂಡಿರುವ ಉಷೆಯು ಅಲ್ಲಿಗೆ ಆಗಮಿಸಿ, ಮಹಾಬಲಿಷ್ಠ ಕೃಷ್ಣನಿಗೂ, ಬಲರಾಮ, ಗರುಡನಿಗೂ ನಮಸ್ಕರಿಸಿದಳು. ಪುಷ್ಪಬಾಣಧಾರಿಯಾದ ತನ್ನ ಮಾವನಿಗೂ ಲಜ್ಜೆಯಿಂದ ನಮಸ್ಕರಿಸಿ ನಿಂತಳು. ನಾರದರು – ಗೋವಿಂದನೇ! ನೀನು ಬಂಧನ ಮುಕ್ತನಾದ ನಿನ್ನ ಮೊಮ್ಮಗನೊಂದಿಗೆ ಸುಖವಾಗಿ ಸೇರಿದೆ. ಇದೊಂದು ಮಂಗಳ.

ಕೃಷ್ಣನೇ! ನೀನು ಅನಿರುದ್ಧನಿಗೆ ವೀರ್ಯಶುಲ್ಕಳಾದ ಉಷೆಯೊಂದಿಗೆ ವಿವಾಹ ನೆರವೇರಿಸು. ಅವರ ಕಂಠದಲ್ಲಿ ಪರಸ್ಪರವಾಗಿ ಸಂತೋಷಪೂರ್ವಕವಾಗಿ ಹಾಕಲ್ಪಡುವ ವಿವಾಹ ಮಾಲೆಯನ್ನು ನೋಡಲು ನಾನು ಕಾತುರನಾಗಿದ್ದೇನೆ ಎಂದರು.

# ಅಥ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ

## ಅನಿರುದ್ಧನ ನಾಗಪಾಶಮೋಚನೆ

**ಏವಂ ವರಾನ್ ಬಹೂನ್ ಪ್ರಾಪ್ಯ ಬಾಣಃ ಪ್ರೀತಮನಾಽಭವತ್ ।**
**ಜಗಾಮ ಸಹ ರುದ್ರೇಣ ಮಹಕಾಲತ್ವಮಾಗತಃ ॥ 1 ॥**

ವೈಶಂಪಾಯನರು ಹೇಳುವರು – ರಾಜನೇ! ಹೀಗೆ ಬಾಣನು ಶಿವನಿಂದ ಅದ್ಭುತ ವರಗಳನ್ನು 'ಮಹಾಕಾಲ'ತ್ವವನ್ನೂ ಪಡೆದು ಸಂತುಷ್ಟನಾದನು. ರುದ್ರನೊಡನೆ ಹೊರಟು ಹೋದನು.

ಇತ್ತ ಶ್ರೀಕೃಷ್ಣನು ನಾರದರನ್ನು ನಾರದರೇ! ಬಾಣನು ನನ್ನ ಮೊಮ್ಮಗನನ್ನು ನಾಗಪಾಶದಿಂದ ಬಂಧಿಸಿ ಎಲ್ಲಿ ಬಚ್ಚಿಟ್ಟಿದ್ದಾನೆ ಎಂದು ಹೇಳಿರಿ. ಇಡೀ ದ್ವಾರಕೆಯು ಅವನಿಗಾಗಿ ಹಾತೊರೆಯುತ್ತಿದೆ.

**ಕ್ವಾನಿರುದ್ಧೋಽಸ್ತಿ ಭಗವನ್ ಸಂಯತೋ ನಾಗಬಂಧನೈಃ ।**

ಈಗ ಬಾಣನು ನಷ್ಟವಾದಂತೆ ಆಗಿರುವನು. ಅವನ ಭಯವಿಲ್ಲ. ಅನಿರುದ್ಧನು ಎಲ್ಲಿರುವನೆಂದು ದಯಮಾಡಿ ಹೇಳ ಎಂದಾಗ, ನಾರದರು ಕೃಷ್ಣನೇ! ಕುಮಾರನು ಬಂಧಿಸಲ್ಪಟ್ಟು ಕನ್ಯೆಯಾದ ಉಷಾದೇವಿಯ ಗೃಹದಲ್ಲಿಯೇ ಇರುವನು.

**ಕನ್ಯಾಪುರೇ ಕುಮಾರೋಽಸೌ ಬದ್ಧೋ ನಾಗೈಶ್ಚ ಮಾಧವ ॥ 2 ॥**

ಈ ಮಧ್ಯದಲ್ಲಿ ಚಿತ್ರಲೇಖೆಯು ಶೀಘ್ರವಾಗಿ ಅಲ್ಲಿಗೆ ಬಂದು ಹೀಗೆಂದಳು.

**ಇದಮಂತಃ ಪುರಂ ದೇವ ಪ್ರವಿಶಸ್ವ ಯಥಾಸುಖಮ್ ।**

ದೇವನೇ! ಶಿವನೇ ಪರದೈವವೆಂದು ತಿಳಿದು ಪೂಜಿಸುವ ಬಾಣನ ಅಂತಃಪುರವು ಇದೆ ಆಗಿದೆ. ಇದನ್ನು ಯಥೇಚ್ಛವಾಗಿ ಪ್ರವೇಶಿಸಬಹುದು ಎಂದಾಗ,

ಶ್ರೀಕೃಷ್ಣನು ಬಲರಾಮ-ಗರುಡ ಪ್ರದ್ಯುಮ್ನ ನಾರದರೊಂದಿಗೆ ಪ್ರವೇಶಿಸಿದನು. ಗರುಡನು ಅಂತಃಪುರ ಪ್ರವೇಶ ಮಾಡಿದೊಡನೆಯೇ ಅನಿರುದ್ಧನನ್ನು ಬಂಧಿಸಿದ್ದ ಸರ್ಪಗಳೆಲ್ಲವೂ ಅನಿರುದ್ಧನ ದೇಹದಿಂದ ಬಾಣರೂಪಗಳಾಗಿ ಕೆಳಗೆ ಬಿದ್ದವು.

**ತತೋ ದೃಷ್ಟ್ವೈವ ಗರುಡಂ ಯೇಽನಿರುದ್ಧಶರೀರಗಾಃ ।**
**ಶರರೂಪಾ ಮಹಾಸರ್ಪಾಃ ಪ್ರಕೃತ್ಯವಸ್ಥಿತಾಃ ಶರಾಃ ॥ 3 ॥**

ಹೀಗೆ ನಾಗಪಾಶಗಳಿಂದ ಬಿಡುಗಡೆ ಹೊಂದಿದ ಅನಿರುದ್ಧನು ಅಂಜಲಿಬದ್ಧನಾಗಿ ಕೇಶವನನ್ನು ಸ್ತುತಿಸಿದನು.

ಭಗವನ್! ನೀನು ಯುದ್ಧದಲ್ಲಿ ತೊಡಗಿದೆನೆಂದರೆ ಇಂದ್ರನೆ ಬಂದರೂ ನಿನ್ನ ಮುಂದೆ ನಿಂತು ಯುದ್ಧ ಮಾಡಲಾರನು.

ಸರ್ವಲೋಕಹರನಾದ ಹರನನ್ನೆ ಅನಾಯಾಸವಾಗಿ ಜಯಿಸಿದ ನಿನ್ನ ಮುಂದೆ ಜ್ವರ, ಬಾಣಾದಿಗಳೇನು ಮಾಡಿಯಾರು ಎಂದು ಹೇಳಿ ಬಲರಾಮಕೃಷ್ಣ, ಗರುಡ ನಾರದಾದಿಗಳಿಗೆ ನಮಸ್ಕರಿಸಿದನು. ತಂದೆಯಾದ ಪ್ರದ್ಯುಮ್ನನನ್ನೂ ಅಭಿವಂದಿಸಿದನು.

ಈ ಸಮಯದಲ್ಲಿ ಸಖಿಯರಿಂದ ಕೂಡಿರುವ ಉಷೆಯು ಅಲ್ಲಿಗೆ ಆಗಮಿಸಿ, ಮಹಾಬಲಿಷ್ಠ ಕೃಷ್ಣನಿಗೂ, ಬಲರಾಮ, ಗರುಡನಿಗೂ ನಮಸ್ಕರಿಸಿದಳು. ಪುಷ್ಪಬಾಣಧಾರಿಯಾದ ತನ್ನ ಮಾವನಿಗೂ ಲಜ್ಜೆಯಿಂದ ನಮಸ್ಕರಿಸಿ ನಿಂತಳು. ನಾರದರು – ಗೋವಿಂದನೇ! ನೀನು ಬಂಧನ ಮುಕ್ತನಾದ ನಿನ್ನ ಮೊಮ್ಮಗನೊಂದಿಗೆ ಸುಖವಾಗಿ ಸೇರಿದೆ. ಇದೊಂದು ಮಂಗಳ.

ಕೃಷ್ಣನೇ! ನೀನು ಅನಿರುದ್ಧನಿಗೆ ವೀರ್ಯಶುಲ್ಕಳಾದ ಉಷೆಯೊಂದಿಗೆ ವಿವಾಹ ನೆರವೇರಿಸು. ಅವರ ಕಂಠದಲ್ಲಿ ಪರಸ್ಪರವಾಗಿ ಸಂತೋಷಪೂರ್ವಕವಾಗಿ ಹಾಕಲ್ಪಡುವ ವಿವಾಹ ಮಾಲೆಯನ್ನು ನೋಡಲು ನಾನು ಕಾತುರನಾಗಿದ್ದೇನೆ ಎಂದರು.

**ಜಂಬೂಲಮಾಲಿಕಾಂ ದ್ರಷ್ಟುಂ ಶ್ರದ್ಧಾ ಹಿ ಮಮ ಜಾಯತೇ ।**

ಶ್ರೀಕೃಷ್ಣನು ಉಷಾ–ಅನಿರುದ್ಧರ ವಿವಾಹ ಕೂಡಲೇ ನಡೆಯಲು ಏರ್ಪಾಡಾಗಲಿ ಎಂದನು.

ಈ ಮಧ್ಯದಲ್ಲಿ ವಿವಾಹೋಪಯುಕ್ತ ವಸ್ತುಗಳೊಂದಿಗೆ ಬಾಣ ಮಂತ್ರಿ ಕುಂಭಾಂಡನೂ ಅಲ್ಲಿಗೆ ಬಂದು ಕೃಷ್ಣನೇ! ಪರಪಕ್ಷವಹಿಸಿ ನಿನಗೆ ಅಪಚಾರ ಮಾಡಿದ ನನ್ನನ್ನು ಕ್ಷಮಿಸಿ ಅಭಯ ನೀಡುವವವನಾಗು ಎಂದಾಗ, ಅಭಯವಿತ್ತನು.

**ಶೋಣಿತಪುರಾಧೀಶ ಕುಂಭಾಂಡನಾದದು**

ಕುಂಭಾಂಡನೇ ! ನಿನ್ನ ಸತ್ಕರ್ಮಗಳನ್ನೆಲ್ಲ ನಾರದರಿಂದ ತಿಳಿದಿದ್ದೇನೆ. ಈ ಗುಣಗಳಿಂದಾಗಿ ನೀನು ಈ ಶೋಣಿತಪುರದ ರಾಷ್ಟ್ರಪತಿಯಾಗು. [**ಸುಕೃತಂ ತೇ ವಿಜಾನಾಮಿ ರಾಷ್ಟ್ರೀಶೋಽಸ್ತು ಭವಾನಿಹ**]

ರಾಜ್ಯವನ್ನು ನಿನಗೆ ಒಪ್ಪಿಸಿಕೊಟ್ಟಿದ್ದೇನೆ. ನಿನ್ನ ಬಂಧು–ಬಾಂಧವರಿಂದ ಸುಖದಿಂದಿರು ಎಂದು ಹೇಳಿ ರಾಜ್ಯಭಾರ ಅವನಿಗೊಪ್ಪಿಸಿ ಅನಿರುದ್ಧ–ಉಷೆಯ ವಿವಾಹವನ್ನು ಮಾಡಿಸಿದನು.

**ವಿವಾಹಮಕರೋತ್ ತಸ್ಯಾನಿರುದ್ಧಸ್ಯ ಜನಾರ್ದನಃ ॥ 4 ॥**

ಈ ವಿವಾಹಕ್ಕಾಗಿ ಅಗ್ನಿದೇವನೇ ಸ್ವತಃ ಆಗಮಿಸಿದನು. ಈ ವಿವಾಹವು ಶುಭನಕ್ಷತ್ರ ಶುಭಮುಹೂರ್ತದಲ್ಲಿ ನಡೆಯಿತು. ಸಕಲಗ್ರಹಬಲ ಕೃಷ್ಣನಿರುವಾಗ ಎಲ್ಲವೂ ಶುಭವೆ.

ವಿವಾಹದಲ್ಲಿ ಅಪ್ಸರಾಗಣಗಳು ಗಾನ ಮಾಡುತ್ತಾ ನೃತ್ಯವನ್ನಾಡಿದರು. ಹೀಗೆ ಶತ್ರು ಸೂದನನಾದ ಮಧುಸೂದನನು ಉಷಾ–ಅನಿರುದ್ಧ ವಿವಾಹ–ವನ್ನೇರ್ಪಡಿಸಿ ರುದ್ರದೇವನ ಅನುಮತಿ ಪಡೆದು ದ್ವಾರಕೆಗೆ ಹೊರಟನು.

ಶ್ರೀಕೃಷ್ಣನು ಹೊರಡಲನುವಾದಾಗ ಮಂತ್ರಿ ಕುಂಭಾಂಡನು – ಸ್ವಾಮಿನ್!

**ಬಾಣಸ್ಯ ಗಾವಸ್ತಿಷ್ಠಂತಿ ಹಸ್ತೇ ತು ವರುಣಸ್ಯ ವೈ ।**

ಬಾಣನಿಗೆ ಸೇರಿದ್ದ ಅಸಂಖ್ಯಾತ ಗೋವುಗಳು ವರುಣನಲ್ಲಿವೆ. ಅವುಗಳು ಅಮೃತಕ್ಕೆ ಸಮಾನವಾದ ಹಾಲನ್ನು ಸುರಿಸುತ್ತವೆ. ಇವುಗಳ ಕ್ಷೀರಪಾನ

ಮಾಡಿದವನು ಬಲಿಷ್ಠನೂ ದುರ್ಜಯನೂ ಆಗುವನು ಎಂದಾಗ ಶ್ರೀಕೃಷ್ಣನು ಪ್ರಸನ್ನಮನಸ್ಕನಾಗಿ ಹಾಗೆ ಆಗಲೆಂದನು. ಶ್ರೀಕೃಷ್ಣನು ಕೂಡಲೇ ದ್ವಾರಕೆಗೆ ಹೋಗಲಿಚ್ಛಿಸಿ ಹೊರಟಾಗ ಬ್ರಹ್ಮೇಂದ್ರಾದಿಗಳೆಲ್ಲರೂ ಹೊರಟರು. ಪಾರ್ವತಿಯು ತಾನೆ ಸಾಕ್ಷಾತ್ತಾಗಿ ಉಷೆಯನ್ನು ನವಿಲಿನ ರಥದಲ್ಲಿ ಕುಳ್ಳಿರಿಸಿ ದ್ವಾರಕೆಗೆ ಕಳುಹಿಸಿಕೊಟ್ಟಳು. ಪ್ರದ್ಯುಮ್ನಾದಿಗಳೂ ಗರುಡನ ಮೇಲೇರಿ ದ್ವಾರಕೆಗೆ ಸೇರಿದರು.

## ಗರುಡನ ಪರಾಕ್ರಮ

ಗರುಡನು ಹಾರಿದಾಗ ಗಿಡಮರಗಳೆಲ್ಲ ಬುಡಸಹಿತ ಬಿದ್ದವು. ದಶದಿಕ್ಕುಗಳೂ ವ್ಯಾಕುಲಗೊಂಡವು. ಸೂರ್ಯನು ಕಾಂತಿಗುಂದಿದನು. ಅವರು ಭೂಮಿಯಿಂದ ಪಶ್ಚಿಮ ದಿಕ್ಕಿಗೆ ಪ್ರಯಾಣ ಬೆಳೆಸಿದರು. ಇದೇ ಸಮಯದಲ್ಲಿ ಸಮುದ್ರದ ತೀರದಲ್ಲಿದ್ದ ದಿವ್ಯವಾದ ಹಾಲನ್ನೀಡುವ ಸಾವಿರಾರು ಗೋವುಗಳನ್ನು ನೋಡಿದರು. ಕೃಷ್ಣನು ಕುಂಭಾಂಡ ಹೇಳಿದ ಹಸುಗಳು ಇವೆಯೆಂದು ತಿಳಿದನು. ಗರುಡನಿಗೆ ಗರುಡನೇ! ಬಾಣನ ಗೋ ಸಂಪತ್ತಿರುವ ಸ್ಥಳಕ್ಕೆ ಹೊರಡು ಎಂದನು. ಈ ಬಾಣನ ಗೋವುಗಳ ಬಗ್ಗೆ ಸತ್ಯಭಾಮೆಯೂ ಹೀಗೆ ಹೇಳಿದಳು.

**ಯಾಸಾಂ ಪೀತ್ವಾ ಕಿಲ ಕ್ಷೀರಂ ನ ಜೀರ್ಯಂತಿ ಮಹಾಸುರಾಃ ।**
**ವಿಜರಾಶ್ಚ ಜರಾಂ ತ್ಯಕ್ತ್ವಾ ಭವಂತಿ ಕಿಲ ಜಂತವಃ ॥ 5 ॥**

ಈ ಗೋವುಗಳ ಹಾಲನ್ನು ಕುಡಿಯುವ ಮಹಾಸುರರು ವೃದ್ಧರಾಗುವುದಿಲ್ಲ. ವೃದ್ಧರಾದವರು ಕುಡಿದರೆ ಅವರು ತರುಣರಾಗುವರು. ಆದ್ದರಿಂದ ಧರ್ಮಲೋಪವಾಗದಿದ್ದರೆ ಮಾತ್ರ ಅವುಗಳನ್ನು ನನಗೆ ತಂದುಕೊಡು ಎಂದಿದ್ದಾಳೆ. [**ತಾ ಆನಯಸ್ವ ಭದ್ರಂ ತೇ**]

ಗರುಡನು, ಪ್ರಭುವೆ! ನೀನು ಹೇಳಿರುವ ಗೋವುಗಳು ನನ್ನ ದೃಷ್ಟಿಗೆ ಗೋಚರವಾಗುತ್ತಿವೆ. ಆದರೆ ಅವುಗಳು ಸಮುದ್ರದೊಳಗೆ ಹೋಗುತ್ತಿವೆ. ಈಗ ನಾನೇನು ಮಾಡಲಿ ಹೇಳು ಎಂದು ಹೇಳಿ ತನ್ನ ಪಕ್ಷಗಳ ವಾತದಿಂದ ಸಮುದ್ರವನ್ನೆ ಉಲ್ಲೋಲಕಲ್ಲೋಲ ಮಾಡಿಬಿಟ್ಟನು. ನಂತರ ಸಮುದ್ರದೊಳಗೆ ಹೋದನು. [**ವಿವೇಶ ವರುಣಾಲಯಮ್**]

## ವರುಣ ಸೈನಿಕ - ಗರುಡರ ಯುದ್ಧ

ಶ್ರೀಕೃಷ್ಣನೊಂದಿಗೆ ಗರುಡನು ಸಮುದ್ರಾಲಯವನ್ನು ಪ್ರವೇಶಿಸಿದ್ದನ್ನು ನೋಡಿದ ವರುಣನ ಸೈನಿಕರು ಕ್ಷಣಕಾಲ ಭ್ರಾಂತರಾದರು. ಮರುಕ್ಷಣ ಸಜ್ಜಾಗಿ ಶ್ರೀಕೃಷ್ಣನ ಮೇಲೆರೆಗಿದರು. ಸಾವಿರಾರು ಸಂಖ್ಯೆಯಲ್ಲಿದ್ದ ವಾರುಣಭಟರು ಆಕ್ರಮಿಸಿದಾಗ ಕ್ಷಣ ಮಾತ್ರದಲ್ಲಿ ಕೃಷ್ಣನು ಸೈನ್ಯವನ್ನು ಭಗ್ನಗೊಳಿಸಿದನು. ವರುಣನ ಸೈನಿಕರಿಗೂ ಗರುಡನಿಗೆ ಯುದ್ಧವಾಯಿತು. ಭಯದಿಂದ ಕೆಲವರು ಸಮುದ್ರ ಮಧ್ಯಭಾಗಕ್ಕೆ ಪಲಾಯನ ಮಾಡಿದರು.

**ಷಷ್ಟಿಂ ರಥಸಹಸ್ರಾಣಿ ಷಷ್ಟಿಂ ರಥಶತಾನಿ ಚ ॥ 6 ॥**

ಮತ್ತೆ ಅರವತ್ತಾರು ಸಾವಿರ ಸೈನಿಕರು ಪ್ರದೀಪ್ತ ಆಯುಧಗಳನ್ನು ಹಿಡಿದು ಯುದ್ಧಕ್ಕೆ ಬಂದರು. ಇವರೆಲ್ಲ ರಥಗಳಲ್ಲಿದ್ದರು.

ಆದರೆ ಶೂರರಾದ ಬಲರಾಮ - ಕೃಷ್ಣ - ಪ್ರದ್ಯುಮ್ನ - ಅನಿರುದ್ಧ - ಗರುಡರು ಆ ರಥ ಸೈನ್ಯವನ್ನು ಭಗ್ನಗೊಳಿಸಿದರು.

## ಕೃಷ್ಣ –ವರುಣ ಯುದ್ಧ

**ತತೋ ಭಗ್ನಂ ಬಲಂ ದೃಷ್ಟ್ವಾ ಕೃಷ್ಣೇನಾಕ್ಲಿಷ್ಟಕರ್ಮಣಾ ।**
**ವರುಣಸ್ತ್ವಥ ಸಂಕ್ರುದ್ಧೋ ನಿರ್ಯಯೌ ಯತ್ರ ಕೇಶವಃ ॥ 7 ॥**

ಶ್ರೀಕೃಷ್ಣನು ತನ್ನ ಮಹಾರಥ ಸೈನ್ಯವನ್ನು ಅನಾಯಾಸವಾಗಿ ಧ್ವಂಸ ಮಾಡಿದ್ದನ್ನು ಕಂಡು ಕ್ರುದ್ಧನಾದ ಮಕರವಾಹನನು ಕೃಷ್ಣನಿದ್ದೆಡೆಗೆ ಧಾವಿಸಿದನು. ವರುಣನನ್ನು ದೇವಗಂಧರ್ವರೆಲ್ಲರೂ ಸ್ತುತಿಸಿದರು. ವರುಣನು ಶ್ವೇತಚ್ಛತ್ರವನ್ನು ತಲೆಯ ಮೇಲ್ಭಾಗದಲ್ಲಿ ಧರಿಸಿದ್ದನು ಶ್ವೇತಚ್ಛತ್ರವು ಅಮೃತವನ್ನು ಸುರಿಸುತ್ತಿತ್ತು. ವರುಣನು ತನ್ನ ಪುತ್ರಪೌಯರಿಂದೊಡಗೂಡಿ ಯುದ್ಧಕ್ಕೆ ಕೃಷ್ಣನನ್ನು ಆಹ್ವಾನಿಸುವಂತೆ ತನ್ನ ಧನಸ್ಸನ್ನು ಟೇಂಕಾರ ಮಾಡಿದ, ಶಂಖಧ್ವನಿ ಮಾಡುತ್ತ ಹರಿಯನ್ನು ಈ ಹಿಂದೆ ಹರನು ಎದುರಿಸಿದಂತೆ ಆಕ್ರಮಿಸಿದನು. **[ಹರಿಂ ಹರ ಇವ ಕ್ರುದ್ಧಃ]**

## ಪಾಂಚಜನ್ಯ ಮೊಳಗಿಸಿದ ಶ್ರೀಕೃಷ್ಣ

**ತತಃ ಪ್ರಾಧ್ಮಾಯ ಜಲಜಂ ಪಾಂಚಜನ್ಯಂ ಜನಾರ್ದನಃ ।**

ತನ್ನ ಪಾಂಚಜನ್ಯ ಶಂಖವನ್ನೂದುತ್ತಾ ದಶದಿಕ್ಕುಗಳನ್ನೂ ಬಾಣಗಳ

ಮಳೆಗರೆದನು. ಇದಕ್ಕೆ ಬೆರಗಾಗದೆ ನಗುತ್ತಲೆ ವರುಣನು ಬಾಣಗಳಿಂದ ಕೃಷ್ಣನನ್ನು ಹೊಡೆದನು.

## ವೈಷ್ಣವಾಸ್ತ್ರ ಪ್ರಯೋಗ

**ತತೋಽಸ್ತ್ರಂ ವೈಷ್ಣವಂ ಘೋರಮಭಿಮಂತ್ರ್ಯಾಹವೇ ಸ್ಥಿತಃ ।**
**ಮಯೋದ್ಯತಂ ವಧಾರ್ಥಂ ತೇ ತಿಷ್ಠೇದಾನೀಂ ಸ್ಥಿರೋ ಭವ ॥ 8 ॥**

ನಂತರ ಕೃಷ್ಣನು ಭಯಂಕರವಾದ ವೈಷ್ಣವಾಸ್ತ್ರವನ್ನು ತೆಗೆದುಕೊಂಡು ವರುಣನೇ! ನಿನ್ನನ್ನು ಕೊಲ್ಲಲೆಂದೆ ಈ ಘೋರವಾದ ವೈಷ್ಣವಾಸ್ತ್ರವನ್ನು ಅಭಿಮಂತ್ರಿಸಿ ಸಜ್ಜುಗೊಳಿಸಿದ್ದೇನೆ ಸುಸ್ಥಿರವಾಗಿ ನಿಲ್ಲು – ಓಡಿ ಹೋಗಬೇಡ ಎಂದನು.

### ವರುಣನಿಂದ ವಾರುಣಾಸ್ತ್ರ

ಶ್ರೀಕೃಷ್ಣನು ವೈಷ್ಣವಾಸ್ತ್ರವನ್ನು ತನ್ನ ಮೇಲೆ ಪ್ರಯೋಗಿಸಲುದ್ಯುಕ್ತನಾದಾಗ ವರುಣನೂ ಸಹ ವಾರುಣಾಸ್ತ್ರವನ್ನು ಸಜ್ಜುಗೊಳಿಸಿದನು.

**ವಾರುಣಾಸ್ತ್ರೇಣ ಸಂಯೋಜ್ಯ ವಿನನಾದ ಮಹಾಬಲಃ ।**

ವಾರುಣಾಸ್ತ್ರದಿಂದ ಜಲಧಾರೆ ಹೊರಹೊಮ್ಮಿತು. ವರುಣನು ವಾರುಣಾಸ್ತ್ರದಿಂದ ವೈಷ್ಣವಾಸ್ತ್ರವನ್ನು ಉಪಶಮನಗೊಳಿಸಲು ಪ್ರಯತ್ನ ಮಾಡುತ್ತಿದ್ದನು. ವಾರುಣಾಸ್ತ್ರದ ಜಲರಾಶಿಯು ವೈಷ್ಣವಾಸ್ತ್ರದ ಮೇಲೆ ಬಿದ್ದು ತಾನೇ ವಿನಾಶ ಹೊಂದುತ್ತಿತ್ತು. ವೈಷ್ಣವಾಸ್ತ್ರದ ಜ್ವಾಲೆಯು ವಾರುಣಾಸ್ತ್ರದ ಜಲವನ್ನೆ ನುಂಗಿ ಹಾಕಿತ್ತು.

ವೈಷ್ಣವಾಸ್ತ್ರದ ಜ್ವಾಲೆಗಳ ಹಬೆ ತಡೆದುಕೊಳ್ಳಲಾಗದ ವಾರುಣ ಭಟರು ಭಯದಿಂದ ಪಲಾಯನ ಮಾಡಿದರು. ವೈಷ್ಣವಾಸ್ತ್ರದಿಂದ ತನ್ನ ಸೈನಿಕರೆಲ್ಲ ದಗ್ಧರಾಗುತ್ತಿರುವುದನ್ನು ನೋಡಿದ ವರುಣನು ಅಸುರವೇಶದಿಂದ ಮುಕ್ತನಾಗಿ ಕೃಷ್ಣನನ್ನು ಸ್ತುತಿಸಿದನು.

### ವಾರುಣಸ್ತುತಿ

**ಸ್ಮರ ಸ್ವಪ್ರಕೃತಿಂ ಪೂರ್ವಾಮವ್ಯಕ್ತಾಂ ವ್ಯಕ್ತಲಕ್ಷಣಾಮ್ ।**
**ತಮೋ ಜಹಿ ಮಹಾಭಾಗ ತಮಸಾ ಮುಹ್ಯಸೇ ಕಥಮ್ ॥ 9 ॥**

ಮಹಾಭಾಗ ಕೃಷ್ಣನೇ! ನಿನ್ನ ಅನಾದಿ ನಿತ್ಯವಾದ ಮೂಲ ಸ್ವರೂಪವನ್ನು ಸ್ಮರಿಸಿಕೋ. ನೀನು ಸಾಕ್ಷಾತ್ತಾಗಿ ವಿಷ್ಣುವೆ. ನಿನ್ನ ಪತ್ನಿಯಾದ ಅವ್ಯಕ್ತ ತತ್ತ್ವಾಭಿಮಾನಿಯೂ ನನ್ನಲ್ಲಿ ಅವತರಿಸಿ ವ್ಯಕ್ತಳಾಗಿರುವಳು. ನಾನು ನಿನ್ನ ಮಾವನಾದರೆ ನೀನು ನನ್ನ ಅಳಿಯನು. ಈಗ ನಾನು ತಮೋಗ್ರಸ್ತನಾಗಿರುವೆ. **[ತಮಂ ತು ತಮಸಾ ಸಾರ್ಧಂ]**.

ಈಗ ನೀನು ನಿನ್ನ ಪತ್ನಿಯಿಂದ ಅಭಿಮನ್ಯವಾದ ವೈಷ್ಣವಾಸ್ತ್ರದಿಂದ ಕೂಡಿರುವೆ ಹೀಗಿರುವಾಗ ಈ ನಿನಗೆ ನಿನ್ನ ಮೇಲೆ ಯುದ್ಧ ಮಾಡುವ ಅಜ್ಞಾನ ಹೇಗೆ? ನೀನಂತೂ ತಮೋರೂಪ ಅಜ್ಞಾನಕ್ಕೆ ಬಲಿಯಾಗಲಾರೆ. **[ತಮಸಾ ತ್ವಂ ಕಥಂ ಮುಕ್ಷ್ಯಸೆ।]**

ಏಕೆಂದರೆ ನೀನು ಯಾವಾಗಲೂ ಶುದ್ಧ ಸತ್ವಗುಣದ ವ್ಯಾಪಾರವನ್ನೆ ಮಾಡುವವನು. ಪಂಚಭೂತಗಳನ್ನು ಆಶ್ರಿಯಿಸಿರುವವ ನನ್ನಂತಹವರಿಗೆ ಇರುವ ರಾಗದ್ವೇಷಗಳನ್ನು ಅಹಂಕಾರವನ್ನೂ ಪರಿಹಾರ ಮಾಡುವವನಾಗು. **[ವರ್ಜಯ = ವರ್ಜಯಿತುಂ ಯೋಗ್ಯಂ ಕುರು]**

ನೀನು ಎತ್ತಿರುವ ಮತ್ಸ್ಯ ಕೂರ್ಮ ಮೊದಲಾದ ನಿನ್ನ ವಿಷ್ಣು ಮೂರ್ತಿಗಳಿಗೂ ಹಿಂದಿನಿಂದ ನಾನಿರುವೆಯಾದ್ದರಿಂದ ನಾನು ಜ್ಯೇಷ್ಠನಾಗಿರುವೆನು. ಗೌರವಕ್ಕೆ ಪಾತ್ರನು. ನನ್ನನ್ನು ಸುಡುವುದು ಯೋಗ್ಯವಲ್ಲ. ಸಮುದ್ರಾದರ್ಣವಾದಧಿ ಎಂಬಂತೆ ಸಕಲ ಚರಾಚರ ಪ್ರಾಣಿಗಳನ್ನು ಸೃಷ್ಟಿಸಿದವನು ನೀನೆ ಆಗಿರುವಿ. ನನ್ನನ್ನೂ ನೀನೆ ಸೃಷ್ಟಿಸಿ ನೀನೇ ನನ್ನನ್ನು ಸುಡುವುದುಚಿತವಲ್ಲ.

ರಕ್ಷಮಾಂ ರಕ್ಷಣೀಯೋಽಹಂ ತ್ವಯಾನಘ ನಮೋಽಸ್ತು ತೇ ।
ವಿಕ್ರೀಡಸಿ ಮಹಾದೇವ ಬಾಲಃ ಕ್ರೀಡನಕೈರಿವ ॥ 10 ॥

ಮಕ್ಕಳು ಆಟಿಕೆಗಳಿಂದ ಆಟವಾಡುವಂತೆ ಬ್ರಹ್ಮಾದಿಗಳನ್ನು ಆಟದ ವಸ್ತುವನ್ನಾಗಿಸಿ ನೀನು ವಿಹರಿಸುವೆ ಎಂದಾಗ ಶ್ರೀಕೃಷ್ಣನು ವರುಣನ ಮೇಲೆ ಪ್ರಸನ್ನನಾಗಿ ನಗುತ್ತಲೆ ಹೀಗೆಂದನು.

ಗಾವಃ ಪ್ರಯಚ್ಛ ಮೇ ವೀರ ಶಾಂತ್ಯರ್ಥಂ ಭೀಮವಿಕ್ರಮ ।

ವರುಣನೇ ನಿನ್ನ ಪರಾಕ್ರಮ ಅದ್ಭುತ. ಶಾಂತಿಯಾಗಬೇಕಾದರೆ ಗೋವುಗಳನ್ನು ನನಗೆ ಕೊಡು ಎಂದಾಗ ವಾಗ್ಮಿಯಾದ ವರುಣನು ಶ್ರೀಕೃಷ್ಣನೇ! ನಾನು

ಬಾಣಾಸುರನೊಂದಿಗೆ ಒಂದು ಪ್ರತಿಜ್ಞೆ ಮಾಡಿದ್ದೇನೆ. ನಾನು ಜೀವಿಸಿರುವಷ್ಟು ಕಾಲ ನಿನ್ನ ಗೋವುಗಳನ್ನು ನಾನು ಪರಿಪಾಲಿಸುತ್ತೇನೆಂದು. ಈ ರೀತಿ ಅವನ ಬಳಿ ನಿಬಂಧನೆ ಮಾಡಿಕೊಂಡು ಈಗ ಅದನ್ನು ಮುರಿಯುವುದೆಂದರೆ ಅದೊಂದು ಪ್ರತಿಜ್ಞಾ ಹಾನಿಯಾಗಿ ನನ್ನ ಕೀರ್ತಿಯೇ ಕಳಂಕಿತವಾಗುತ್ತದೆ.

ಕೃಷ್ಣನೇ! ಪ್ರಸನ್ನನಾಗು, ಧರ್ಮಕ್ಕೆ ಚ್ಯುತಿ ಬಾರದಂತೆ ನನಗೆ ಆದೇಶಿಸು. ಪ್ರತಿಜ್ಞಾ ಹಾನಿಯ ಪಾಪ ತಟ್ಟದಂತೆ ಕಾಪಾಡು.

**ಪ್ರಸೀದ! ಧರ್ಮಲೋಪಶ್ಚ ಮಾ ಭೂನ್ಮೇ ಮಧುಸೂದನ ॥ 11 ॥**

ನಾನು ಜೀವಿಸಿರುವಾಗ ಬಾಣನ ಗೋವುಗಳನ್ನು ನಿನಗೆ ನೀಡಲಾರೆ. ನನ್ನನ್ನು ಮೊದಲು ಕೊಂದು ಹಾಕಿ ನಂತರ ಗೋವುಗಳನ್ನು ಒಯ್ಯಬಹುದು.

**ಜೀವನ್ನಾಹಂ ಪ್ರದಾಸ್ಯಾಮಿ ಗಾವೋ ಮೇ ವೃಷಭೇಕ್ಷಣ ।**
**ಹತ್ವಾ ನಯಸ್ವ ಮಾಂ .... ॥ 12 ॥**

ನಾನು ನಿನ್ನ ಅನುಗ್ರಹಕ್ಕೆ ಪಾತ್ರನಾಗಿರುವುದಾದರೆ ನನ್ನನ್ನು ರಕ್ಷಿಸು. ಗೋವುಗಳೇ ಬೇಕೆನ್ನುವುದಾದರೆ ನನ್ನನ್ನು ಕೊಂದು ತೆಗೆದುಕೊಂಡು ಹೋಗು.

**ಯದ್ಯೇವಾಹಮನುಗ್ರಾಹ್ಯೋ ರಕ್ಷ ಮಾಂ ಮಧುಸೂದನ ।**
**ಅಥವಾ ಗೋಷು ನಿರ್ಬಂಧೋ ಹತ್ವಾ ನಯ ಮಹಾಭುಜ ॥ 13 ॥**

ವೈಶಂಪಾಯನರು – ರಾಜನೇ! ವರುಣನ ಪ್ರತಿಜ್ಞೆ ಮೀರಲಾಗದೆಂದು ಗೋವುಗಳ ಬಗ್ಗೆ ವಿವಾದ ಪರಿತ್ಯಜಿಸಿದನು.

ವರುಣದೇವನೇ! ಇಂತಹ ನಿಬಂಧನೆಗೆ ಒಳಗಾಗಿರುವೆಯಾದರೆ ಇನ್ನು ಮುಂದೆ ಆ ವಿವಾದಕ್ಕೆ ನೀನು ಬದ್ಧನಾಗಿರಬೇಕಿಲ್ಲ. ಬಾಣನು ನನ್ನಿಂದ ಸೋತು ಅವನ ರಾಜ್ಯಗಳೆಲ್ಲ ನನ್ನ ಅಧೀನವೆ ಆಗಿರುವೆ. ನೀನು ಸತ್ಯಪ್ರತಿಜ್ಞನು. ಈ ವಿವಾದ ಮುಕ್ತನಾಗಿರುವೆ ಎಂದು ಹೇಳಿದನು.

ಶ್ರೀಕೃಷ್ಣನು ಹೀಗೆ ಹೇಳಿದ ನಂತರ ಸಂತುಷ್ಟನಾದ ವರುಣನು ವಾದ್ಯಘೋಷಗಳೊಂದಿಗೆ ಬರ ಮಾಡಿಕೊಂಡು ಅರ್ಘ್ಯ ಪಾದ್ಯಾದ್ಯಾ-ಚಮನಗಳಿಂದ ಪೂಜಿಸಿದನು. ಹೀಗೆ ಕೃಷ್ಣನಿಗೆ ಸತ್ಕಾರವಾದ ಮೇಲೆ ಬಲರಾಮನಿಗೂ ಸತ್ಕರಿಸಿದನು. ನಂತರ ಕೃಷ್ಣನು ದ್ವಾರಕೆಗೆ ಹೊರಟನು.

## ಪ್ರಯಾಣ ವೈಭವ

**ತತ್ರ ದೇವಾಃ ಸಮರುತಃ ಸಸಾಧ್ಯಾಃ ಸಿದ್ಧ ಚಾರಣಾಃ ।**
**ಅನುಗಚ್ಛಂತಿ ಭೂತೇಶಂ ಸರ್ವಭೂತಾದಿಮವ್ಯಯಮ್ ॥ 14 ॥**

ಶ್ರೀಕೃಷ್ಣನ ಹಿಂದೆ ದಾಸರಂತೆ ಸಮಸ್ತ ದೇವತೆಗಳು, ಮರುದ್ಗಣಗಳು, ಸಾಧ್ಯರು, ಸಿದ್ಧ-ಚಾರಣರು ಗಂಧರ್ವಾಪ್ಸರಸೆಯರು, ಕಿನ್ನರರೂ, ಆದಿಕಾರಣನೂ ಅವಿನಾಶಿಯೂ ಆದ ಜಗನ್ನಾಥನನ್ನು ಹಿಂಬಾಲಿಸಿದರು. ನಾರದರೂ ಸಹ ಅವನನ್ನು ಹಿಂಬಾಲಿಸಿದ್ದರು. [**ನಾರದಶ್ಚ ಮಹಾಭಾಗಃ ಪ್ರಸ್ಥಿತೋ ದ್ವಾರಕಾಂ ಪ್ರತಿ**]

ಹೀಗೆ ಮಹಾವೈಭವದಿಂದ ದ್ವಾರಕೆಗೆ ಪುರಪ್ರವೇಶ ಮಾಡಿದನು.

## ಪಾಂಚಜನ್ಯದಿಂದ ಆಗಮನ ಸೂಚನೆ

**ಪಾಂಚಜನ್ಯಸ್ಯ ನಿರ್ಘೋಷಂ ಚಕ್ರೇ ಚಕ್ರಗದಾಧರಃ ।**
**ಸಂಜ್ಞಾಂ ಪ್ರಯಚ್ಛತೇ ದೇವೋ ದ್ವಾರಕಾ ಪುರವಾಸಿನಾಮ್ ॥ 15 ॥**

ದ್ವಾರಕಾಪಟ್ಟಣದ ಸೀಮಾಂತ ಪ್ರದೇಶದಲ್ಲಿದ್ದುಕೊಂಡೇ ತನ್ನ ಬರುವಿಕೆಯ ಸೂಚನೆಯಾದ ಪಾಂಚಜನ್ಯ ಶಂಖವನ್ನೂದಿದನು. ಈ ಶಬ್ಧದಿಂದಾಗಿ ದ್ವಾರಕಾವಾಸಿಗಳೆಲ್ಲ ಕೃಷ್ಣನ ಬರುವಿಕೆಯಿಂದಾಗಿ ಆನಂದಭರಿತರಾದರು.

ಶ್ರೀಕೃಷ್ಣನು ಆಗಮಿಸುವನೆಂಬ ಸಡಗರದಿಂದ ಯುಕ್ತರಾದ ದ್ವಾರಕಾ ಜನರು ಪೂರ್ಣಕುಂಭಗಳಿಂದಲೂ, ಅರಳನ್ನೆರಚುವುದು, ಚಪ್ಪರ ಬಾಳೆ ಕಂಬಗಳಿಂದ ತಮ್ಮ ಊರು ಹಾಗೂ ಮನೆಗಳನ್ನು ಅಲಂಕರಿಸಿ ಸ್ವಾಗತ ಕೋರಿದರು.

ತಳಿರು-ತೋರಣ, ಮುತ್ತು ಮಾಣಿಕ್ಯಗಳ ಗುಚ್ಛದಿಂದಲೂ ಇಡಿ ಪುರವು ಶೋಭಾಯಮಾನವಾಗಿತ್ತು.

ಬ್ರಾಹ್ಮಣರು, ವಿದ್ವಾಂಸರು, ಕುಲಪುರೋಹಿತರು ವೇದಘೋಷಗಳನ್ನು ಪಠಿಸಿ ಇದರ ಮುಖ್ಯ ಪ್ರತಿಪಾದ್ಯ ನೀನೆಂದು ಹರಿಸಿದರು.

ಸಕಲ ವರ್ಣದವರೂ ಸ್ವಾಗತಿಸಿದರು. ಉಪವನದಲ್ಲಿದ್ದ ಋಷಿವರ್ಯರು, ಗಂಧರ್ವರೂ ಸಹ ಸ್ತೋತ್ರ ಮಾಡುತ್ತಿದ್ದರು.

ಪ್ರತಿಯೊಬ್ಬರೂ ಕೃಷ್ಣನ ಅಜೇಯ ಪರಾಕ್ರಮವನ್ನು ಮೆಲುಕು ಹಾಕುತ್ತಿದ್ದರು.

ರುದ್ರ ವರಾನ್ವಿತ ಸಹಸ್ರಬಾಹುಯುಕ್ತ ಬಾಣನನ್ನೂ ಸದೆ ಬಡೆದ ಈ ನಮ್ಮ ಕೃಷ್ಣ ಸಾಧಾರಣ ವ್ಯಕ್ತಿಯಲ್ಲ – ದೇವದೇವನೆ ಸರಿ. ಹೀಗೆ ಹೊಗಳುತ್ತಿದ್ದರು.

ಈ ಗರುಡನಾದರೂ ಬಹಳ ದೂರ ಪ್ರಯಾಣ ಮಾಡಿದ್ದರೂ ಬಹಳ ವೇಗವಾಗಿಯೇ ಇವರನ್ನು ಕರೆದು ತಂದಿದ್ದಾನೆ. ಇಂತಹ ಜಗತ್ತಿಗೆ ತಂದೆಯಂತಿರುವ ಶ್ರೀಕೃಷ್ಣನಿಂದ ರಕ್ಷಿತವಾಗಿರುವ ನಾವೇ ಧನ್ಯತಮರು.

ಹೀಗೆ ಪುರಜನರು ಕೃಷ್ಣನನ್ನು ಹಾಡಿ ಹೊಗಳುತ್ತಿರುವಾಗಲೇ ಶ್ರೀಕೃಷ್ಣನು ತನ್ನ ಅರಮನೆಗೆ ಹೋದರು. ಬಲರಾಮಾದಿಗಳೂ ತಮ್ಮ ತಮ್ಮ ಅಂತಃಪುರ ಪ್ರವೇಶಿಸಿದರು. ದ್ವಾರಕೆಯ ಮೇಲೆ ದೇವತಾ ವಿಮಾನಗಳೆಲ್ಲ ನಿಂತಿದ್ದವು. ಶ್ರೀಕೃಷ್ಣನು ಸಭೆಗೆ ಬಂದು ಸಿಂಹಾಸನದಲ್ಲಿ ಆಸೀನನಾಗಿ ಹೀಗೆಂದನು.

ಕುಮಾರರೇ! ಇಲ್ಲಿಗೆ ಆಗಮಿಸಿರುವ ಏಕಾದಶರುದ್ರರು, ದ್ವಾದಶಾದಿತ್ಯರು, ಅಷ್ಟವಸುಗಳು, ಅಶ್ವಿನೀ ಕುಮಾರರು ಹಾಗೂ ಇತರ ದೇವತೆಗಳೆಲ್ಲರೂ ಇಲ್ಲಿಗೆ ಬಂದಿರುವರು. ಇದೋ ರಥಾರೂಢನಾಗಿ ಬಂದಿರುವ ಶಚೀಪತಿ ಇಂದ್ರದೇವನಿಗೆ ನಮಸ್ಕರಿಸಿರಿ.

ಸಪ್ತರ್ಷಿಗಳು ಭೃಗವಾಂಗಿರಸರು ಅನೇಕ ಮುನಿಗಳೂ ಇಲ್ಲಿರುವರು. ಅವರಿಗೂ ನಮಸ್ಕರಿಸಿ ಎಂದು ಪ್ರತಿಯೊಬ್ಬರಿಗೂ ಅವರ ಯೋಗ್ಯತಾನುಸಾರ ಗೌರವಿಸಲು ಆದೇಶಿಸಿದ.

ಇಷ್ಟು ದೇವಾನು ದೇವತೆಗಳು ಇಲ್ಲಿಗೆ ಬಂದಿರುವುದನ್ನು ನೋಡಿದ ದ್ವಾರಕಾವಾಸಿಗಳಿಗೆ ಅತ್ಯಾಶ್ಚರ್ಯವಾಯಿತು ಹಾಗೂ ಇವರೆಲ್ಲರಿಗಿಂತ ಶ್ರೀಕೃಷ್ಣನೆ ಜ್ಯೇಷ್ಠನೂ, ಶ್ರೇಷ್ಠನೂ ಎಂದು ಭಕ್ತಿಭಾವ ತಳೆದರು.

ಇವರೆಲ್ಲರೂ ಬಂದಿರುವ ದೇವತೆಗಳಿಗೆ ಚಂದನ ಪುಷ್ಪಾಕ್ಷತೆಗಳಿಂದ ಪೂಜಿಸಿ ಗೌರವಿಸಿದರು.

## ಇಂದ್ರನ ಗೌರವ

ಇಂದ್ರದೇವನು ಉಗ್ರಸೇನನನ್ನೂ, ವಾಸುದೇವನನ್ನೂ, ಸಾಂಬ, ಸಾತ್ಯಕಿ, ಉಲ್ಮುಖ, ವಿಪೃಥು, ಅಕ್ರೂರ, ನಿಶಠ ಮೊದಲಾದವರನ್ನು ಆಲಿಂಗಿಸಿ, ನೆತ್ತಿಯನ್ನು ಆಘ್ರಾಣಿಸಿದನು.

ಈ ಶ್ರೀಕೃಷ್ಣನು ಸಾತ್ವತ ವಂಶದಲ್ಲಿಯೇ ಸಾತ್ತ್ವತನಾಗಿರುವನು. ಸಾತ್ವಿಕರಿಗೆ ಅನುಗ್ರಹಿಸುವುದರಿಂದ ಸಾತ್ವತನು.

ರಣಭೂಮಿಯಲ್ಲಿ ಅನಿರುದ್ಧನನ್ನು ಬಂಧನ ಮೋಚನ ಮಾಡಿ, ಈ ಸಂದರ್ಭದಲ್ಲಿ ಬಾಣನ ರಕ್ಷಣೆಗೆ ಬಂದ ರುದ್ರ-ಸ್ಕಂಧರನ್ನೂ ಗೆದ್ದು, ಅವರ ಮುಂದೆಯೇ ಬಾಣನನ್ನು ಗೆದ್ದು ಸಾವಿರ ತೋಳುಗಳನ್ನು ಕತ್ತರಿಸಿ ಎರಡು ತೋಳನ್ನುಳಿಸಿದ ಮಹಾಪರಾಕ್ರಮಿಯು.

**ಸಾತ್ವತಃ ಸಾತ್ತ್ವತಾಮೇಷಃ ಸರ್ವೇಷಾಂ ಯದುನಂದನಮ್ ।**
**ಏಷ ಬಾಣಂ ರಣೇ ಜಿತ್ವಾ ದ್ವಾರಕಾಂ ಪುರಮಾಗತಃ ॥ 16 ॥**

ಯಾವ ಭೂಭಾರಹರಣಕ್ಕಾಗಿ ಧರ್ಮ ಸಂಸ್ಥಾಪನೆಗಾಗಿ ಶ್ರೀಕೃಷ್ಣನ ಜನ್ಮವೋ ಆ ಕಾರ್ಯ ಪೂರ್ಣವಾಗಿದೆ. ನಮಗೆ ಬಂದಿರುವ ಆಪತ್ತುಗಳೆಲ್ಲವನ್ನೂ ಪರಿಹರಿಸಿ ಶೋಕರಹಿತರನ್ನಾಗಿ ಮಾಡಿರುವನು.

ಈ ಸಂತೋಷದ ಸಮಯದಲ್ಲಿ ಮಾಧ್ವೀ ಮಧುವನ್ನು ಪಾನ ಮಾಡಿರಿ. [ಮಧ್ವರ ಗ್ರಂಥದ ರಸಗಳ ಪಾನ ಮಾಡಿರೆಂದು ಅಧ್ಯಾತ್ಮ]

**[ಪಿಬತಾಂ ಮಧು ಮಾಧ್ವೀಕಂ]**

ಯಥೇಚ್ಛ ಸುಖಭೋಗ ಅನುಭವಿಸಿರಿ. ನಾವೂ ಸ್ವರ್ಗದಲ್ಲಿ ಸುಖವಾಗಿರುವೆವು. ಹೀಗೆ ಸ್ತುತಿಸಿದ ಸಹಸ್ರಾಕ್ಷ ಅನಂತಾಕ್ಷನ ಅನುಮತಿ ಕೋರಿ ಹೊರಟು ಹೋದನು. ಶ್ರೀಕೃಷ್ಣನು ಬಂದವರನ್ನೆಲ್ಲ ಕುಶಲ ಕೇಳಿದ, ಎಲ್ಲರೂ ಕಿಲಕಿಲ ನಗುವಿನೊಡನೆ ಶ್ರೀಕೃಷ್ಣ ಚಂದ್ರಿಕೆಯನ್ನು ನೋಡುತ್ತ ಹೋಗುತ್ತಿದ್ದರು. ಹೀಗೆ ಯಾದವರೊಡನೆ ಆನಂದದಿಂದ ಕಾಲಕಳೆದ.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ದ್ವಾರಕ ಪ್ರವೇಶ ವೈಭವ ಎಂಬಲ್ಲಿ
ನೂರಇಪ್ಪತ್ತೇಳನೆಯ ಅಧ್ಯಾಯ ಸಮಾಪ್ತಿ

ವಿಷ್ಣುಪರ್ವ 128 ವಿಷ್ಣುಪರ್ವ

# ಅಥ ಅಷ್ಟಾವಿಂಶತ್ಯಧಿಕಶತತಮೋಽಧ್ಯಾಯಃ

## ದ್ವಾರಕೆಯಲ್ಲಿ ವಿಜಯೋತ್ಸವ

**ಅಥಾಹುಕೋ ಮಹಾಬಾಹುಃ ಕೃಷ್ಣಂ ಪ್ರಾಹ ಮಹಾದ್ಯುತಿಃ ।**

ಜನಮೇಜಯನೇ, ದೇವತೆಗಳೆಲ್ಲ ತಮ್ಮ ಸ್ಥಳಗಳಿಗೆ ಹೋದ ನಂತರ ಮಹಾನುಭಾವನಾದ ಆಹುಕನು ಹರ್ಷೋದ್ರೇಕದಿಂದ ವಿಕಸಿತ ನೇತ್ರನಾಗಿ ಹೀಗೆಂದನು.

ಕೃಷ್ಣನೇ! ಅನಿರುದ್ಧನು ಕ್ಷೇಮದಿಂದ ದ್ವಾರಕೆಗೆ ಹಿಂತಿರುಗಿದ್ದಾನೆ. ಇದರ ಕುರುಹಾಗಿ ಒಂದು ಮಹೋತ್ಸವವನ್ನೇಕೆ ಮಾಡಬಾರದು?

ನಮ್ಮ ಸೊಸೆ ಉಷಾದೇವಿಯೂ ಕೂಡ ಅನಿರುದ್ಧನೊಂದಿಗೆ ಸೇರಿ ಆನಂದದಿಂದ ಕಾಲ ಕಳೆಯಲಿ.

**ರಮತೇ ಪರಯಾ ಪ್ರೀತ್ಯಾ ಚಾನಿರುದ್ಧೇನ ಸಂಗತಾ ॥ 1 ॥**

**ಸಾಂಬಾಯ ದೀಯತಾಂ ರಾಮಾ ಕುಂಭಾಂಡದುಹಿತಾ ಶುಭಾ ।**

ಕುಂಭಾಂಡನ ಪುತ್ರಿಯಾದ 'ರಾಮಾ' ಎಂಬುವಳು ಇರುವಳು. ಅವಳೂ ನಮ್ಮ ಅಂತಃಪುರ ಸೇರಲಿ. ವಿದರ್ಭ ನಂದಿನಿ ರುಕ್ಮಿಣಿಯು ರಾಮಾಳನ್ನು ತನ್ನ ಮಗ ಸಾಂಬನಿಗೆ ನೀಡಿ ಸೊಸೆಯನ್ನಾಗಿ ಮಾಡಿಕೊಳ್ಳಲಿ.

ಉಳಿದ ಉಷಾದೇವಿಯ ಸಖಿಯರು ಉಳಿದ ರಾಜಕುಮಾರರನ್ನು ಕೈ ಹಿಡಿಯಲಿ ಎಂದು ಉಗ್ರಸೇನನ ಮಾತನ್ನು ಶ್ರೀಕೃಷ್ಣನು ಅನುಮೋದಿಸಿದನು.

ಅನಿರುದ್ಧ ಹಾಗೂ ಶ್ರೀಧನ್ವನ ಗೃಹಗಳಲ್ಲಿ ಉತ್ಸವ ನಡೆಯಿತು. ಈ ಉತ್ಸವದಲ್ಲಿ ನಾರಿಯರೆ ಪಕ್ಕ ವಾದ್ಯಗಳನ್ನು ನುಡಿಸಿದರು. ಅಪ್ಸರೆಯರು ನೃತ್ಯ ಮಾಡಿದರು. ಗಾಯನ ವಿವಿಧ ಮಾತುಕತೆ, ಆಲಿಂಗನಾದಿಗಳಲ್ಲಿ ಕೆಲವರು ಮರೆತಿದ್ದರು.

ಈ ಸಂಭ್ರಮದಲ್ಲಿಯೆ ಉಷೆಯು ಕುಳತಿದ್ದ ರಥವು ಮಹಾದ್ವಾರಕ್ಕೆ ಬಂದಿತು. ಶ್ರೀಕೃಷ್ಣನು ರುಕ್ಮಣಿಗೆ – ರುಕ್ಮಿಣಿ! ಪಾರ್ವತಿದೇವಿಯು ಉಷೆಯನ್ನು ನವಿಲಿನಿಂದ ಯುಕ್ತ ರಥದಲ್ಲಿ ಇಲ್ಲಿಗೆ ಕಳುಹಿಸಿರುವಳು. ಇವಳನ್ನು ನೀನು ಸೊಸೆಯೆಂದು ಪರಿಗ್ರಹಿಸು. ಹೀಗೆ ಹೇಳುತ್ತಲೆ ಮಂಗಳಾಶಂಸನ ಪೂರ್ವಕವಾಗಿ ಕುಲನಾರಿಯರು ಉಷೆಯನ್ನು

**ದಾಣಪುತ್ರೀ ತವವಧೂಃ ಪ್ರತಿಗೃಹ್ಣೀಷ್ವ ಭಾಮಿನೀಮ್ ॥ 2 ॥**

ದೇವಕೀ–ರೋಹಿಣೀ ರುಗ್ಮಿಣಿಯರು ಬಹಳ ದಿವಸಗಳ ನಂತರ ಅನಿರುದ್ಧನನ್ನು ಕಂಡವರಾದ್ದರಿಂದ ಆನಂದದಿಂದ ಕಣ್ಣು ಕೋಡಿ ಹರಿಯಿತು.

ರೇವತೀ –ರುಕ್ಮಿಣಿಯರು ಅನಿರುದ್ಧನನ್ನು ಅಲಂಕೃತ ಅರಮನೆಗೆ ಕಳುಹಿಸಿದರು. ನಂತರ ಶುಭಾಂಗಿ ಉಷೆಗೆ – ನೀನು ನಿನ್ನ ಮೂಲದಲ್ಲಿ ಪತಿಯಾದ ಅನಿರುದ್ಧನನ್ನೆ ವರಿಸಿರುವೆ. ಇದೊಂದು ಸೌಭಾಗ್ಯ ವಿಷಯವಾಗಿದೆ. ಅನೇಕ ಚಂದ್ರಮುಖಿಯರು ಮಂಗಳ ಕಾರ್ಯಗಳನ್ನು ಮಾಡಿ ಅನಿರುದ್ಧನ ಬಳಗೆ ಕಳುಹಿಸಿದರು. ಉಷೆಯು ಅನಿರುದ್ಧನೊಂದಿಗೆ ಸಮಸ್ತ ಕಾಮೋಪಭೋಗಗಳನ್ನನುಭವಿಸುತ್ತಾ ಕಾಲಕಳೆದನು.

ಪ್ರದ್ಯುಮ್ನನ ಪತ್ನಿಯಾದ ಮಾಯಾವತಿ[1]ಯು ಲಾವಣ್ಯವತಿಯಾದ ತನ್ನ ಸೊಸೆಯನ್ನು ನೋಡಿ ಸಂತೋಷಪಟ್ಟಳು. ದಿವ್ಯವಾದ ವಸ್ತ್ರಗಳು, ರುಚಿಕರವಾದ ಅನ್ನಪಾನಾದಿಗಳಿಂದ ಸೊಸೆಯನ್ನು ಆದರಿಸಿದಳು.

ನೂತನ ವಧುವಾದ ಉಷೆಯನ್ನು ಯದುಕುಲದ ಸ್ತ್ರೀಯರೆಲ್ಲರೂ ತಮ್ಮ ಮನೆಗೆ ಆಹ್ವಾನಿಸಿ ಸತ್ಕರಿಸಿದರು.

---

1. **ಮಾಯಾವತೀ** : ಅನಿರುದ್ಧನಿಗೆ ಇಬ್ಬರು ಹೆಂಡಂದಿರು. ಒಬ್ಬಳು ರುಗ್ಮಿಯ ಮೊಮ್ಮಗಳಾದ ರೋಚನೆ ವಿವಾಹವಾಗಿ ವಜ್ರನೆಂಬ ಮಗನನ್ನು ಪಡೆದನು. ಮತ್ತೊಬ್ಬಳು ಬಾಣನ ಪುತ್ರಿ ಉಷೆ. ಮಾಯವತಿಯು ಶಂಬರಾಸುರನ ಪತ್ನಿ. ವಸ್ತುತಃ ಶಚೀದೇವಿ. ಶಾಪದಿಂದಾಗಿ ಅಸುರ ಸಂಪರ್ಕವುಂಟಾಗಿತ್ತು. ಪ್ರದ್ಯುಮ್ನನನ್ನು ಮಾಯವತಿಯು ಅಕ್ಕರೆಯಿಂದ ಸಾಕಿ ಮಾಯಾವಿದ್ಯೆ ಹೇಳಿಕೊಟ್ಟು ಶಂಬರನಿಂಗಿಂತಲೂ ಅಧಿಕನನ್ನಾಗಿ ಮಾಡಿದಳು. ಅವಳೇ ಮಾಯಾವತೀ.

ಜನಮೇಜಯನೇ! ಶ್ರೀಕೃಷ್ಣನು ಬಾಣನ ಮೇಲೆ ಸಾಧಿಸಿದ ವಿಜಯವನ್ನು ರುದ್ರನ ಕೋರಿಕೆಯಂತೆ ಜೀವಸಹಿತ ಬಿಟ್ಟನೆಂದು ಇವೆ ಮೊದಲಾದ ಸಂಗತಿಗಳನ್ನು ನಿನಗೆ ತಿಳಿಸಿರುವೆ. ನಂತರ ಶ್ರೀಕೃಷ್ಣನು ಯಾದವರಿಂದ ಕೂಡಿಕೊಂಡು ದ್ವಾರಕೆಯಲ್ಲಿಯೇ ವಾಸಿಸುತ್ತಿದ್ದನು.

**ಏವಮೇಷೋಽವತೀರ್ಣೋ ವೈ ಪೃಥಿವೀಂ ಪೃಥಿವೀಪತೇ ।**
**ಏತೈಶ್ಚ ಕಾರಣೈಃ ಶ್ರೀಮಾನ್ ವಸುದೇವಕುಲೇ ಪ್ರಭುಃ ॥ 3 ॥**
**ಜಾತೋ ವೃಷ್ಣಿಷು ದೇವಕ್ಯಾಂ ಯನ್ಮಾಂ ತ್ವಂ ಪರಿಪೃಚ್ಛಸಿ ॥ 4 ॥**

ಜನಮೇಜಯನೇ, ಶ್ರೀಹರಿಯು ಭೂಭಾರಹರಣಕ್ಕಾಗಿ ಭೂಮಿಯಲ್ಲಿ ಅವತರಿಸಿ ವಸುದೇವ-ದೇವಕಿಯರ ಮಗನಂತೆ ತೋರಿಸುತ್ತಾ ವಾಸುದೇವನಾಮಕನಾಗಿ ಅವತರಿಸಿದನು. ಈ ವಿಷಯವಾಗಿಯೇ ನೀನು ಪ್ರಶ್ನೆ ಕೇಳಿದ್ದೆ. ನಾರದರು ಧನ್ಯಾಶ್ಚರ್ಯ ಸಂದರ್ಭದಲ್ಲಿ ಮಾಡಿದ್ದ ಪ್ರಶ್ನೆಗೆ ಉತ್ತರ ಸಿಕ್ಕಿದ ನಂತರ ನಿನ್ನ ಪ್ರಶ್ನೆಗಳಿಗೂ ಅದೇ ಉತ್ತರ. ಆಗ ಸಂಕ್ಷೇಪವಾಗಿ ಉತ್ತರಿಸಿದ್ದೆ. ಈಗ ವಿಸ್ತಾರವಾಗಿಯೇ ನಿರೂಪಿಸಿದ್ದೇನೆ. ವಿಷ್ಣುವು ಮಥುರಾದಲ್ಲಿ ಅವತರಿಸುವ ಬಗ್ಗೆ ನಿನ್ನ ಮಹಾಸಂದೇಹವೇ ಇತ್ತು. ಅದಕ್ಕಾಗಿಯೇ ವಾಸುದೇವನೇ ಸರ್ವರಿಗೂ ಪರಮಾಶ್ರಯದಾತನೆಂದು ಚೆನ್ನಾಗಿ ತಿಳಿಸಿದ್ದೇನೆ.

ರಾಜನೇ! ಶ್ರೀಕೃಷ್ಣನನ್ನು ಬಿಟ್ಟು ಬೇರೆ ಯಾವುದೂ ಆಶ್ಚರ್ಯಕರವಾದ ವಸ್ತು ಯಾವುದೂ ಇಲ್ಲ. ಆಶ್ಚರ್ಯಕ್ಕೆ ದೃಷ್ಟಾಂತ ಶ್ರೀಕೃಷ್ಣನೆ. ಯಾವುದೇ ಜಗತ್ತಿನಲ್ಲಿ ಆಶ್ಚರ್ಯ ವಸ್ತುವಿದ್ದರೆ, ವಿಷ್ಣುವಿನ ಮಹಿಮೆ ಇಲ್ಲದ ಆಶ್ಚರ್ಯವಿರುವುದಿಲ್ಲ.

**ಆಶ್ಚರ್ಯಂ ಚೈವ ನಾನ್ಯದ್ ವೈ ಕೃಷ್ಣಶ್ಚಾಶ್ಚರ್ಯ ಸನ್ನಿಧಿಃ ।**
**ಸರ್ವೇಷ್ವಾಶ್ಚರ್ಯ ಕಲ್ಪೇಷು ನಾಸ್ತಿ ಆಶ್ಚರ್ಯಮವೈಷ್ಣವಮ್ ॥ 5 ॥**

ಈ ಶ್ರೀಕೃಷ್ಣನೆ ಧನ್ಯರಾದ ಬ್ರಹ್ಮಾದಿಗಳಿಗಿಂತಲೂ ಧನ್ಯತಮನು. ಇವನಿಗಿಂತ ಧನ್ಯರಾದವರನ್ನೆಲ್ಲಿಯೂ ನಾ ಕಾಣೆನು.

ಇವನೇ ಧಾತನು, ವಿಧಾತನು, ಸಂಹಾರಕನು, ಸತ್ಯ ಧರ್ಮ ತಪಸ್ಸು ಎಲ್ಲವೂ ಇವನ ಪ್ರೀತಿಗಾಗಿಯೆ ಇರುತ್ತವೆ.

ಜನಮೇಜಯನೇ! ಯಾರು ಈ ಶ್ರೀಕೃಷ್ಣನ ಮಹಿಮೆಗಳನ್ನು ಶ್ರವಣ ಪಠಣ ಮಾಡುವರೋ ಅವರು ತಮ್ಮ ವಂಶದಲ್ಲಿಯೇ ಸ್ಥಿರವಾಗಿರುವನು. ಕ್ಷತ್ರಿಯನು

**ವಿಜಯವನ್ನೂ, ವೈಶ್ಯನು ಧನ ಸಮೃದ್ಧಿಯನ್ನೂ ಶೂದ್ರನು ಸಕಲೇಚ್ಛೆಗಳನ್ನೂ ಹೊಂದುವರು. ಈ ಆಶ್ಚರ್ಯಪರ್ವವನ್ನು ಮನಸ್ಸಿನಲ್ಲಿ ಧಾರಣೆ ಮಾಡಿದವನು. ಅಂತಹವನು ಸಮಸ್ತ ಪಾಪಗಳನ್ನು ಕಳೆದುಕೊಳ್ಳುವನು. ದೀರ್ಘಾಯುಸ್ಸು ಲಭಿಸುತ್ತದೆ.**

ಸೌತಿರುವಾಚ -

**ಇತಿ ಪಾರಿಕ್ಷಿತೋ ರಾಜಾ ವೈಶಂಪಾಯನ ಭಾಷಿತಮ್ ।**
**ಶ್ರುತವಾನಚಲೋ ಭೂತ್ವಾ ಹರಿವಂಶಂ ದ್ವಿಜೋತ್ತಮಃ ॥ 6 ॥**

ಬ್ರಾಹ್ಮಣರೇ, ಹೀಗೆ ಪರೀಕ್ಷಿತನ ಪುತ್ರನಾದ ಜನಮೇಜಯನು ಸ್ಥಿರಮನಸ್ಕನಾಗಿ ವೈಶಂಪಾಯನರ ಬಾಯಿಂದ ಹೇಳಲ್ಪಟ್ಟ ಹರಿವಂಶ ಪುರಾಣವನ್ನು ಆಮೂಲಾಗ್ರವಾಗಿ ಕೇಳಿದ.

ಶೌನಕರೇ! ನಾನೂ ಸಹ ನಿಮಗೆ ಸಮಾಸ-ವ್ಯಾಸಯೋಗದಿಂದ ತಿಳಿಸಿರುತ್ತೇನೆ. ಮತ್ತೇನನ್ನು ಕೇಳ ಬಯಸುವಿರಿ ಎಂದರು.

ಇತಿ ಶ್ರೀಹರಿವಂಶ ಖಿಲಭಾಗದ ವಿಷ್ಣುಪರ್ವದಲ್ಲಿ
ದ್ವಾರಕೆಯಲ್ಲಿ ವಿಜಯೋತ್ಸವ ಎಂಬಲ್ಲಿ
ನೂರಇಪ್ಪತ್ತೆಂಟನೆಯ ಅಧ್ಯಾಯ ಸಮಾಪ್ತಿ

## ಇಲ್ಲಿಗೆ ಶ್ರೀಹರಿವಂಶ ಖಿಲಭಾಗದ
## ವಿಷ್ಣುಪರ್ವವು ಮುಕ್ತಾಯವಾಯಿತು

## ಅಥ ಪ್ರಥಮೋಽಧ್ಯಾಯಃ

*ಶೌನಕ ಉವಾಚ –*

**ಜನಮೇಜಯಸ್ಯ ಕೇ ಪುತ್ರಾಃ ಪರ್ಯಂತೇ ಲೌಮ ಹರ್ಷಣೇ ।**
**ಕಸ್ಮಿನ್ ಪ್ರತಿಷ್ಠಿತೋ ವಂಶಃ ಪಾಂಡವಾನಾಂ ಮಹಾತ್ಮನಾಮ್ ॥ 1 ॥**

ಶೌನಕರು ಸೂತಪುರಾಣಿಕರಿಗೆ ಹೇಳುತ್ತಾರೆ –

ಸೂತರೇ! ಜನಮೇಜಯನ ಮಕ್ಕಳುಗಳು ಯಾರು? ಅವರೆಷ್ಟು ಮಂದಿ? ಮಹಾನುಭಾವರಾದ ಪಾಂಡವರ ವಂಶವು ಹೇಗೆ ಮುಂದುವರೆಯಿತು? ಇದನ್ನು ತಿಳಿಸಿ ಕೊಡಿ ಎಂದಾಗ,

**ಪಾರಿಕ್ಷಿತಸ್ಯ ಕಾಶ್ಯಾಯಾಂ ದ್ವೌಪುತ್ರೌ ಸಂಬಭೂವತುಃ ।**
**ಚಂದ್ರಾಪೀಡಶ್ಚ ನೃಪತಿಃ ಸೂರ್ಯಾಪೀಡಶ್ಚ ವೀರ್ಯವಾನ್ ॥ 2 ॥**

ಶೌನಕರೇ! ಪರೀಕ್ಷಿತನ ಪುತ್ರನಾದ ಜನಮೇಜಯನು ಕಾಶೀರಾಜ ಸುವರ್ಮನ ಪುತ್ರಿಯಾದ ವಪುಷ್ಟಮೆಯನ್ನು ವಿವಾಹವಾಗಿ ಅವಳಲ್ಲಿ ಚಂದ್ರಾಪೀಡ, ಸೂರ್ಯಾಪೀಡರೆಂಬ ಇಬ್ಬರು ಮಕ್ಕಳನ್ನು ಪಡೆದ. ಇವರು ಮೋಕ್ಷಸಾಧನ ಜ್ಞಾನವೇತ್ತರಾಗಿದ್ದರು. ಚಂದ್ರಾಪೀಡನಿಗೆ ನೂರು ಮಂದಿ

---

1. **ಜನಮೇಜಯ :**
ಪರೀಕ್ಷಿತ್ ರಾಜನಿಂದ ಭದ್ರವತಿಯಲ್ಲಿ ಹುಟ್ಟಿದವನು. **ಜನ್ಮನಾ ಶತ್ರೂನ್ ವಿಜಯತಿ ಕಂಪಯತೀತಿ ಜನಮೇಜಯ** ಎಂದು ನಿರ್ವಚನ. ವಪುಷ್ಟಮೆ ಇವನ ಪತ್ನಿ. ಇವಳು ಕಾಶಿರಾಜ ಸುವರ್ಮನ ಪುತ್ರಿಯು. ಶತಾನೀಕ ಶಂಕುಕರ್ಣರೆಂಬ ಇಬ್ಬರು ಪುತ್ರರು.
– *ಭಾರತ. ಆ. 1*

ಮಕ್ಕಳಾದರು. ಅವರೆಲ್ಲ ಧನುರ್ಧಾರಿಗಳು. ಇವರೇ 'ಜಾನಮೇಜಯರು' ಎಂದು ಪ್ರಖ್ಯಾತಿ ಪಡೆದರು.

ನೂರು ಮಂದಿಯಲ್ಲಿ ಜ್ಯೇಷ್ಠನೇ 'ಸತ್ಯಕರ್ಣ'ನು. ಇವನು ಹಸ್ತಿನಾವತಿಯಲ್ಲಿ ರಾಜನಾಗಿ ಯಾಗಶೀಲನಾಗಿದ್ದು ಯಜ್ಞಗಳಲ್ಲಿ ವಿಪುಲ ದಕ್ಷಿಣೆ ನೀಡಿದವನು. ಸತ್ಯಕರ್ಣನ ಪುತ್ರನೇ ಶ್ವೇತಕರ್ಣನು. ಇವನಿಗೆ ಮಕ್ಕಳಾಗಲಿಲ್ಲ. ಇದಕ್ಕಾಗಿ ತಪಸ್ಸು ಮಾಡಲು ವನಕ್ಕೆ ಹೋದನು. ಇವನ ಪತ್ನಿ 'ಮಾನಿನಿ'ಯು ಯದುಕುಲದ ಸುಚಾರು ಎಂಬ ರಾಜನ ಪುತ್ರಿ. ಅಣ್ಣತಮ್ಮಂದಿರು ಬಹುಮಂದಿ ಇವಳಿಗಿದ್ದರು. ಶ್ವೇತಕರ್ಣನ ಹಿಂದೆ ಈ ಸುಂದರಭ್ರೂವು ಹೊರಟಳು. ವನದಲ್ಲಿ ಇವಳು ಗರ್ಭಿಣಿಯಾದಳು. ಮಗುವಿಗೆ ಜನ್ಮಕೊಡಲಿರುವ ಕಾಲಕ್ಕೆ ಇವನು 'ಮಹಾಪ್ರಸ್ಥಾನ' ಹೊಂದಲಿಚ್ಛಿಸಿದನು. ಅವನ ಪತ್ನಿಯೂ ಅವನನ್ನು ಹಿಂಬಾಲಿಸಿದಳು. ರಾಣಿಯು ಮಾರ್ಗ ಮಧ್ಯೆದಲ್ಲಿ ಸುಂದರ ಗಂಡು ಮಗುವಿಗೆ ಜನ್ಮವಿತ್ತಳು.

**ಪಥಿ ಸಾ ಸುಷುವೇ ಸುಭ್ರೂಃ ವನೇ ರಾಜೀವಲೋಚನಮ್ ।**

ಈ ಕುಮಾರನನ್ನು ಅಲ್ಲಿಯೆ ಪರಿತ್ಯಜಿಸಿ ತನ್ನ ಪತಿಯನ್ನೆ ಹಿಂಬಾಲಿಸಿದಳು. ಹುಟ್ಟಿದ ಮಗುವು ಪರ್ವತ ತಪ್ಪಲಿನಲ್ಲಿ ಜೋರಾಗಿ ಅಳತೊಡಗಿತು. [**ಗಿರಿ ಕುಂಜೇರುರೋದ ಹ]**

ಆ ಮಗುವಿಗೆ ನೆರಳನ್ನುಂಟು ಮಾಡಲು ನಾಲ್ಕೂ ದಿಕ್ಕಿನಲ್ಲಿಯೂ ಮೇಘಗಳು ಪ್ರಕಟವಾದವು.

**ಶ್ರವಿಷ್ಠಾಯಾಶ್ಚ ಪುತ್ರೌ ದ್ವೌ ಪಿಪ್ಪಲಾದಶ್ಚ ಕೌಶಿಕಃ ॥ 3 ॥**
**ದೃಷ್ಟ್ವಾ ಕೃಪಾನ್ವಿತೌ ಗೃಹ್ಯ ತಂ ಪ್ರಾಕ್ಷಾಲಯತಾಂ ಜಲೈಃ ॥ 4 ॥**

ಶ್ರವಿಷ್ಠಾ ಎಂಬುವಳಿಗೆ ಪಿಪ್ಪಲಾದ, ಕೌಶಿಕರೆಂಬ ಇಬ್ಬರು ಮಕ್ಕಳಿದ್ದರು. ಅವರು ಅನಾಥವಾಗಿ ಅಳುತ್ತಿರುವ ಮಗುವಿನ ಮೇಲೆ ಕೃಪೆ ಹೊಂದಿ ಅದನ್ನು ನೀರಿನಿಂದ ತೊಳೆದು ಸ್ನಾನ ಮಾಡಿಸಿದರು.

ಕಲ್ಲಿನ ಮೇಲಿದ್ದ ಮಗುವು ಅಳುತ್ತ ಕಲ್ಲನ್ನುಜ್ಜಿದ ಕಾರಣವಾಗಿ ಅದರ ಎರಡು ಪಾರ್ಶ್ವಗಳು ತರಚಿ ಗಾಯವಾಗಿದ್ದವು. ಪಿಪ್ಪಲಾದ ಕೌಶಿಕರ ಉಪಚಾರ-ದಿಂದಾಗಿ ಪಾರ್ಶ್ವ ಗಾಯಗಳು ವಾಸಿಯಾದವು. ಆದರೆ ಆ ಕಲೆ ಹಾಗೆ ಉಳಿಯಿತು. ಅದು ಆಡಿನ ಬಣ್ಣದಂತಿತ್ತು. ಇದಕ್ಕಾಗಿ 'ಅಜಪಾರ್ಶ್ವ' ಎಂದು ಪ್ರಸಿದ್ಧನಾದ.

**ತತೋऽಜಪಾರ್ಶ್ವ ಇತಿ ತೌ ಚಕ್ರಾತೇ ತಸ್ಯ ನಾಮ ಹ ।**

ಅಜಪಾರ್ಶ್ವನನ್ನು ವೇಮಕನೆಂಬ ಋಷಿಯ ಆಶ್ರಮದಲ್ಲಿ ಬಾಲಕನ ಪೋಷಣೆ ಮಾಡುತ್ತಿದ್ದರು. ವೇಮಕನ ಭಾರ್ಯೆಯಾದ ವೇಮಕಿಯು ಅಜಪಾರ್ಶ್ವನನ್ನು ವಿಶೇಷ ಆದರದಿಂದ ಬೆಳೆಸಿ ಅವನಿಗೆ ವಿವಾಹವನ್ನೂ ಮಾಡಿದಳು. ಇದರಿಂದಾಗಿ ಅಜಪಾರ್ಶ್ವನು ವೇಮಕಿಯ ಮಗನೆನಿಸಿದನು. **[ವೇಮಕ್ಯಾಃ ಸ ತು ಪುತ್ರೋऽಭೂತ್]**

ಪಿಪ್ಪಲಾದ ಕೌಶಿಕರೂ ಸಹಪುತ್ರರೆನಿಸಿದರು. ಈ ಮೂವರೂ ಒಂದೇ ಕಾಲದಲ್ಲಿದ್ದರು. ಹೀಗೆ ಪೌರವ ವಂಶವು ಪಾಂಡವರ ವಂಶವು ಸಹ ಭೂಮಿಯಲ್ಲಿ ಪ್ರತಿಷ್ಠಿತವಾಯಿತು.

**ಅಚಂದ್ರಾರ್ಕಗ್ರಹಾ ಭೂಮಿಃ ಭವೇದಪಿ ನ ಸಂಶಯಃ ।**
**ಅಪೌರವಾ ನ ತು ಮಹೀ ಭವಿಷ್ಯತಿ ಕದಾಚನ ॥ 5 ॥**

ಒಂದು ವೇಳೆ ಯಾವಾಗಲಾದರೂ ಒಮ್ಮೆ ಭೂಮಿಯು ಸೂರ್ಯ ಚಂದ್ರರ ಹಿತವಾಗಬಹುದೇನೋ, ಆದರೆ ಭೂಮಿಯು ಎಂದೂ ಪೌರವ ವಂಶದವರಿಂದ ವಿಹೀನವಾಗುವುದಿಲ್ಲ.

ಇತಿ ಭವಿಷ್ಯಪರ್ವದ ಖಿಲಭಾಗದಲ್ಲಿ
ಜನಮೇಜಯನ ಸಂತತಿ ವರ್ಣನೆ ಎಂಬಲ್ಲಿ
ಮೊದಲನೆಯ ಅಧ್ಯಾಯವು ಸಮಾಪ್ತಿ

# ಅಥ ದ್ವಿತೀಯೋಽಧ್ಯಾಯಃ

## ಜನಮೇಜಯನ ಅಶ್ವಮೇಧ

**ಉಕ್ತೋಽಯಂ ಹರಿವಂಶಸ್ತೇ ಪರ್ವಾಣಿ ನಿಖಿಲಾನಿ ಚ ।**
**ಶ್ರೀಣಾತ್ಯಸ್ಮಾನ್ ಅಮೃತವತ್ ಸರ್ವಪಾಪವಿನಾಶನಮ್ ॥ 1 ॥**

ಶೌನಕರು ಸೂತರನ್ನುದ್ದೇಶಿಸಿ ಸೌತಿಗಳೇ! ಹಿಂದೆ ವ್ಯಾಸ ಮಹರ್ಷಿಗಳ ಶಿಷ್ಯರಾದ ವೈಶಂಪಾಯನರು ಹರಿವಂಶವನ್ನು ಹೇಗೆ ವರ್ಣಿಸಿ ಹೇಳಿದ್ದರೋ ನೀವೂ ಸಹ ನಮಗೆಲ್ಲ ಹಾಗೆಯೇ ವಿಸ್ತರಿಸಿ ಹೇಳಿರುವಿರಿ. ಈ ಗ್ರಂಥವು ಇತಿಹಾಸದಿಂದ ಕೂಡಿದ್ದು, ಇದರ ಶ್ರವಣ ಸರ್ವಪಾಪಹರವಾಗಿದೆ. ನಮಗೆಲ್ಲ ಅಮೃತಪಾನವನ್ನೇ ಮಾಡಿಸಿದಿರಿ. ಸೌತಿಗಳೇ! ಜನಮೇಜಯನು ಸರ್ಪಯಾಗ ಮಾಡಿದ ನಂತರ ಇಂತಹ ದಿವ್ಯ ಆಖ್ಯಾನವನ್ನು ಕೇಳಿ ಮುಂದೆ ಏನು ಮಾಡಿದನೆಂದು ತಿಳಿಸಿರಿ ಎಂದರು.

ಸೌತಿಗಳು – ಶೌನಕರೇ ಕೇಳಿರಿ. ಜನಮೇಜಯನ ಇಂತಹ ಅದ್ಭುತ ಆಖ್ಯಾನವನ್ನು ಕೇಳಿದ ಮೇಲೆ ಅಶ್ವಮೇಧಯಾಗವನ್ನು ಮಾಡಲಿಚ್ಛಿಸಿ ಯಜ್ಞ ಸಾಮಗ್ರಿಗಳನ್ನು ಸಂಗ್ರಹಿಸಲಾರಂಭಿಸಿದನು.

ಋತ್ವಿಕರು, ಪುರೋಹಿತರು, ಆಚಾರ್ಯರೆ ಮೊದಲಾದವರನ್ನು ಯಜ್ಞಕ್ಕೆ ಆಹ್ವಾನಿಸಿದನು. ಯಜ್ಞದಲ್ಲಿ ತಾವೆಲ್ಲರೂ ಪಾಲ್ಗೊಂಡು ವಿಧಿವತ್ತಾಗಿ ಯಜ್ಞೀಯಾಶ್ವವನ್ನು ಸ್ವೇಚ್ಛೆಯಾಗಿ ತಿರುಗಲು ಬಿಡಬೇಕು.

**ಯಕ್ಷ್ಯೇಽಹಂ ವಾಜಿಮೇಧೇನ ಹಯ ಉತ್ಸೃಜ್ಯತಾಮಿತಿ ।**

ಜನಮೇಜಯ ರಾಜನು ಅಶ್ವಮೇಧಯಾಗವನ್ನು ಮಾಡುವನೆಂದು

ಸರ್ವಜ್ಞರಾದ ವೇದವ್ಯಾಸರು ತಿಳಿದರು. ಭೂತಭವ್ಯಭವತ್ಪ್ರಭುಗಳಲ್ಲವೆ? ಕೂಡಲೇ ಅವನನ್ನು ಕಾಣಲೆಂದು ಅವನ ರಾಜಧಾನಿಗೆ ಆಗಮಿಸಿದರು.

**ತತೋಽಸ್ಯ ವಿಜ್ಞಾಯ ಚಿಕೀರ್ಷಿತಂ ತದಾ ಕೃಷ್ಣೋ ಮಹಾತ್ಮಾ**
**ಸಹಸಾಽಽಜಗಾಮ ॥ 2 ॥**

ಜನಮೇಜಯನು ತನ್ನಲ್ಲಿಗೆ ಬಂದು ವ್ಯಾಸದೇವರಿಗೆ ಅರ್ಘ್ಯ ಪಾದ್ಯಗಳಿಂದ ಸತ್ಕರಿಸಿ ಉಚಿತಾಸನದಲ್ಲಿ ಕುಳ್ಳಿರಿಸಿ ತಾನು ಕೂತನು. ಸಭಾಸದಸ್ಯರೆಲ್ಲರೂ ಸಮಾಗಮಿಸಿದ್ದರು. ವ್ಯಾಸ–ಪಾರಿಕ್ಷಿತರಲ್ಲಿ ವಿಚಿತ್ರ ಕಥಾ ಪ್ರಸಂಗಗಳು ನಡೆದವು. ಈ ರೀತಿಯ ಕತೆಗಳೆಲ್ಲವೂ ಮುಗಿದ ನಂತರ ತನಗೆ ಪ್ರಪಿತಾಮಹರೆನಿಸಿದ ವ್ಯಾಸದೇವರನ್ನು ವ್ಯಾಸರೇ! ತಾವು ರಚಿಸಿರುವೆ ಮಹಾಭಾರತ ಆಖ್ಯಾನವು ಅದ್ಭುತವಾದ ಅರ್ಥವೈಶಾಲ್ಯದಿಂದ ಕೂಡಿದೆ. ಭಾರತವು ಹತ್ತು ಅರ್ಥಗಳಿಂದ ಕೂಡಿವೆ ಎಂದು ತಮ್ಮ ಉಪಸದರು ಹೇಳುತ್ತಾರೆ. ಮಹತ್ವ–ಭಾರವತ್ವಗಳಲ್ಲಿ ಇದನ್ನು ಮೀರುವ ಮತ್ತೊಂದು ಗ್ರಂಥ ಜಗತ್ತು ನೋಡಿಲ್ಲ. ಇದೊಂದು ಇತಿಹಾಸವೂ ಪುರಾಣವೂ ಆಗಿದೆ. ಇದರ ಶ್ರವಣ ಎಷ್ಟು ಸುಖದಾಯಕವೆಂದರೆ ಇದನ್ನು ಕೇಳುತ್ತಾ ಹಲವಾರು ದಿವಸಗಳೂ ಸಹ ಕ್ಷಣಾರ್ಧದಂತೆ ಕಳೆದು ಹೋಯಿತು. ಕ್ಷೀರಸಮುದ್ರವನ್ನು ಶಂಖದಲ್ಲಿ ತುಂಬಿಟ್ಟಂತೆ ಲಕ್ಷ ಶ್ಲೋಕಗಳಲ್ಲಿ ಮಹತ್ತಾದ ಅರ್ಥ ತುಂಬಿರುವಿರಿ.

**ನಿಮೇಷ ಮಾತ್ರಮಪಿ ಮೇ ಸುಖಶ್ರಾವ್ಯತಯಾ ಗತಮ್ ।**
**ತ್ವಯಾ ಸುವಿಹಿತಂ ಬ್ರಹ್ಮನ್ ಶಂಖೇ ಕ್ಷೀರಮಿವಾಹಿತಮ್ ॥ 3 ॥**

ಅಮೃತಪಾನದಿಂದ ತೃಪ್ತಿಯಾಗಬಹುದು. ಸ್ವರ್ಗೀಯ ಸುಖದಿಂದಲೂ ತೃಪ್ತಿ ಹೊಂದಬಹುದು. ಆದರೆ ಮಹಾಭಾರತದ ಕಥೆಯನ್ನು ಕೇಳುತ್ತಿದ್ದರೆ ತೃಪ್ತಿಯೆಂಬುದೆ ಆಗುವುದಿಲ್ಲ.

**ತಥಾ ತೃಪ್ತಿರ್ನ ಗಚ್ಛಾಮಿ ಶ್ರುತ್ವೇಮಾಂ ಭಾರತೀಂ ಕಥಾಮ್ ।**

ಪೂಜ್ಯ ಪಿತಾಮಹರೇ, ತಾವು ಸರ್ವಜ್ಞರು. ನನ್ನ ಅಭಿಪ್ರಾಯದಲ್ಲಿ ಕುರುಗಳು ನಾಶವಾಗಲು ಪಾಂಡವರು ಮಾಡಿದ ರಾಜಸೂಯಯಾಗವೇ ಮೂಲ ಕಾರಣವೆಂದು ನನ್ನ ಅನಿಸಿಕೆ. ಈ ಯುದ್ಧದಲ್ಲಿ ಹದಿನೆಂಟು ಅಕ್ಷೌಹಿಣೀ ನಾಶವಾಯಿತಷ್ಟೆ. ಈ ರಾಜಸೂಯ ಕಲ್ಪನೆಯೆ ಯುದ್ಧಕ್ಕಾಗಿಯೆಂದು ನನಗೆ ಅನಿಸುತ್ತಿದೆ.

**ರಾಜಸೂಯಂ ತಥಾ ಮನ್ಯೇ ಯುದ್ಧಾರ್ಥಮುಪಕಲ್ಪಿತಮ್ ॥ 4 ॥**

ಹಿಂದೆ ಚಂದ್ರದೇವನು. ರಾಜಸೂಯಾಗ ಮಾಡಿದನು. ಈ ಮಹಾಯಾಗ ಮುಗಿದು ತಾರೆಗಾಗಿ 'ತಾರಕಮಯ' ಎಂಬ ಘನಘೋರ ಯುದ್ಧವಾಯಿತು.

**ರಾಜಸೂಯಸ್ತು ಸೋಮೇನ ಶ್ರೂಯತೇ ಪೂರ್ವ ಮಾಹೃತಃ ।**
**ತಸ್ಯಾಂತೇ ಸುಮಹದ್ ಯುದ್ಧಮ್ ಅಭವತ್ ತಾರಕಾಮಯಮ್ ॥ 5 ॥**

ವರುಣದೇವನೂ ಸಹ ರಾಜಸೂಯಯಾಗ ಮಾಡಿದನು. ಯಾಗದ ನಂತರ ಸಮಸ್ತ ಪ್ರಾಣಿ ಕ್ಷಯಕರವಾದ ದೇವಾಸುರ ಸಂಗ್ರಾಮ ನಡೆಯಿತು.

**ಆಹೃತೋ ವರುಣೇನಾಥ ತಸ್ಯಾಂತೆ ಸುಮಹಾಕ್ರತೋಃ ।**
**ದೇವಾಸುರಂ ಮಹಾಯುದ್ಧಂ ಸರ್ವಭೂತಕ್ಷಯಾವಹಮ್ ॥ 6 ॥**

ರಾಜರ್ಷಿಯಾದ ಹರಿಶ್ಚಂದ್ರ ಮಹಾರಾಜನೂ ರಾಜಸೂಯಯಾಗ ಮಾಡಿದ. ಆಗಲೂ ವಿಶ್ವಾಮಿತ್ರ ವಸಿಷ್ಠರಲ್ಲಿ 'ಆಡೀಬಕ'ವೆಂಬ ಯುದ್ಧ ನಡೆಯಿತು.

**ತತ್ರಾಪ್ಯಾಡೀಬಕಂ ನಾಮ ಯುದ್ಧಂ ಕ್ಷತ್ರಿಯನಾಶನಮ್ ।**

ನಂತರ ನನ್ನ ಪಿತಾಮಹರು ರಾಜಸೂಯಯಾಗ ಮಾಡಿದರು. ಅ ಯಾಗಾನಂತರ ಕೌರವ-ಪೌಂಡವರಲ್ಲಿ ಯುದ್ಧ ನಡೆದು ಹದಿನೆಂಟು ಅಕ್ಷೌಹಿಣೀ ಸೈನ್ಯ ನಾಶವಾಯಿತು. ಆದರೆ ರಾಜಸೂಯಯಾಗವೆಂದರೆ ಇದೊಂದು ಅಗ್ನಿಯಂತೆ ಎಂದು ನನ್ನ ಅಭಿಪ್ರಾಯ. ಹೀಗಿರುವಾಗ ಹಿಂದಿನ ದೃಷ್ಟಾಂತಗಳಿಂದ ಸಾವು-ನೋವು ವಿದಿತವಾಗಿರುವಾಗ ಮಹಾಭಾರತ ಯುದ್ಧಕ್ಕೆ ಮೂಲ ಕಾರಣವಾದ ಪಾಂಡವರು ಮಾಡುವ ರಾಜಸೂಯ-ಯಾಗವನ್ನು ನೀವೇಕೆ ತಡೆಯಲಿಲ್ಲ?

**ತದಸ್ಯ ಮೂಲಂ ಯುದ್ಧಸ್ಯ ಲೋಕಕ್ಷಯಕರಸ್ಯ ಚ ।**
**ರಾಜಸೂಯೆ ಮಹಾಯಜ್ಞಃ ಕಿಮರ್ಥಂ ನ ನಿವಾರಿತಃ ॥ 7 ॥**

ನಮ್ಮ ಅನುಭವದಂತೆ ರಾಜಸೂಯಯಾಗವನ್ನು ಸಾಂಗೋಪಾಂಗವಾಗಿ ಮಾಡಲು ಸಾಧ್ಯವೇ ಇಲ್ಲ. ಇದಕ್ಕೆ ಬೇಕಾದ ಯಜ್ಞಾಂಗಗಳು ಸಿಗುವುದಿಲ್ಲ. ವಿಧಿವತ್ತಾಗಿ ಆಚರಿಸಲ್ಪಡದಿರುವ ನ್ಯೂನತೆಯಿರುವ ಯಾಗವು ದೇಶ ಕ್ಷಯವುಂಟು ಮಾಡುತ್ತದೆ.

ತಾವಾದರೂ ಹಿಂದಿನವರಿಗೆಲ್ಲ ಪಿತಾಮಹರಾಗಿರುವಿರಿ. ಭೂತ-ಭವಿಷ್ಯಜ್ಞಾನಿಗಳೂ, ನಮ್ಮ ಕುಲದ ರಕ್ಷಕರೂ, ಪೂರ್ವಜರಿಗೆ ಜನ್ಮ ನೀಡಿರುವ ಜನಕರೂ ಆಗಿರುವ ನಿಮ್ಮಂತಹ ಸರ್ವಜ್ಞರನ್ನು ಮಾರ್ಗದರ್ಶಕರಾಗಿ ಹೊಂದಿದ್ದರೂ ಪಾಂಡವರು ನ್ಯಾಯಮಾರ್ಗದಿಂದ ಹೇಗೆ ಭ್ರಷ್ಟರಾದರು?

**ಭವಾನಪಿ ಚ ಸರ್ವೇಷಾಂ ಪೂರ್ವೇಷಾಂ ಚ ಪಿತಾಮಹಃ ।**

**ಅತೀತಾನಾಗತಜ್ಞಶ್ಚ ನಾಥಶ್ಚಾದಿಕರಶ್ಚ ನಃ ॥ 8 ॥**

**ತೇ ಕಥಂ ಭವತಾ ನೇತ್ರಾ ಬುದ್ಧಿಮಂತಶ್ಚ್ಯುತಾ ನಯಾತ್ ।**

ಯಾರು ಅನಾಥರೋ ಅಥವಾ ಕುನಾಥರೋ ಅಂತಹವರು ಅಪರಾಧ ಮಾಡಲಿ. ಆದರೆ ತಮ್ಮಂತಹ ಮೇಧಾವಿಗಳಿದ್ದರೂ ಯುದ್ಧ ಮೂಲಕ ರಾಜಸೂಯಯಾಗ ಮಾಡುವ ಬುದ್ಧಿಯಾದರೂ ಹೇಗುಂಟಾಯಿತು ಎಂದು ಕೇಳಿದರು.

## ವ್ಯಾಸರ ಉತ್ತರ

*ವ್ಯಾಸ ಉವಾಚ –*

**ಕಾಲೇನ ವಿಪರೀತಾಸ್ತೇ ತವ ಪೂರ್ವಪಿತಾಮಹಾಃ ।**

**ನ ಮಾಂ ಭವಿಷ್ಯಂ ಪೃಚ್ಛಂತಿ ನ ಚಾಪೃಷ್ಟೋ ಬ್ರವೀಮ್ಯಹಮ್ ॥ 9 ॥**

ಜನಮೇಜಯನೇ! ನಿನ್ನ ಪ್ರಶ್ನೆ ಸಾಧುಸಮ್ಮತವೆ ಆಗಿದೆ. ನಿಮ್ಮ ಪಿತಾಮಹರಾದ ಪಾಂಡವರು ಕಾಲನಾಮಕ ಶ್ರೀಕೃಷ್ಣನಿಂದ ವಿಶೇಷವಾಗಿ ರಕ್ಷಿಸಲ್ಪಟ್ಟವರು **[ಕಾಲೇನ ವಿ + ಪರಿತಾಃ]**

ಅವರು ಅವನ ಆದೇಶದಂತೆಯೆ ಭವಿಷ್ಯ ರೂಪಿಸಿಕೊಳ್ಳುವವರು. ಅವರು ನನ್ನನ್ನು ಎಂದೂ ಭವಿಷ್ಯವೇನಾಗುತ್ತದೆ ಎಂದು ಕೇಳಿಲ್ಲ. ಕೇಳದೆ ನಾನಾಗಿಯೇ ಹೇಳುವ ಸ್ವಭಾವ ನನಗಿಲ್ಲ.

**ಸಾಮರ್ಥ್ಯಂ ಚ ನ ಪಶ್ಯಾಮಿ ಭವಿಷ್ಯಸ್ಯ ನಿವರ್ತನೇ ।**

**ಪರಿಹರ್ತುಂ ನ ಶಕ್ಯಾ ಹಿ ಕಾಲೇನಿ ವಿಹಿತಾ ಗತಿಃ ॥ 10 ॥**

ಯಾವುದು ಮುಂದೆ ನಡೆಯಲೇಬೇಕೋ ಅದನ್ನು ಆಗದಂತೆ ತಡೆಯಲು ಯಾವನೂ ಶಕ್ತನಲ್ಲ. ನಾವೆಲ್ಲರೂ ಕಾಲನಿಯಾಮಕನ ಅಧೀನವಲ್ಲಿರುನೆವು.

ರಾಜನೇ! ನೀನು ಈ ವಿಷಯವನ್ನು ಪ್ರಶ್ನಿಸಿರುವೆಯಲ್ಲವೆ. ನಿನಗೆ ಅಶ್ವಮೇಧಯಾಗದಲ್ಲಿ ತೊಡಗಿರುವ ನಿನಗೆ ಮುಂದೇನಾಗುತ್ತದೆಯೆಂದು ಮೊದಲೇ ತಿಳಿಸುವೆ. ಅದನ್ನು ಪರಿಹರಿಸಿಕೊಳ್ಳಲು ಸಾಧ್ಯವಾಗುತ್ತದೆಯೆ ನೋಡು. ಕಾಲನಿಂದ ಬರೆಯಲ್ಪಟ್ಟ ಲಿಖಿತವನ್ನು ಅನ್ಯಥಾ ಮಾಡಲು ಸಾಧ್ಯವೇ ಇಲ್ಲ.

ಅಶ್ವಮೇಧಯಾಗವಾದರೂ ಕ್ಷತ್ರಿಯರಿಗೆ ಸರ್ವಶ್ರೇಷ್ಠವು. ಅದಕ್ಕಾಗಿಯೇ ನೀನೂ ಸಹ ಆ ಯಜ್ಞದಲ್ಲಿ ಉದ್ಯುಕ್ತನಾಗಿರುವೆ. ಅದರ ಭವಿಷ್ಯವೇನೆಂದು ನಿನಗೆ ಹೇಳುತ್ತೇನೆ ಕೇಳು. ನೀನು ಮಾಡಲಿರುವ ಅಶ್ವಮೇಧಯಾಗವನ್ನು ಇದರ ಮಹತ್ವ ಕಾರಣದಿಂದಲೇ ಅದನ್ನು ಮಾಡಲು ಇಂದ್ರದೇವನು ಅಡ್ಡಿ ಮಾಡುವನು. ಅದನ್ನು ಕೆಡಿಸುವನು ಎಂದು ಭವಿಷ್ಯ ನುಡಿದಿದ್ದೇನೆ. ಮಾನವ ಪ್ರಯತ್ನದಿಂದ ನಿಯಾಮಕನನ್ನು ಗೆಲ್ಲಲು ಶಕ್ಯವಿರುವುದಾದರೆ ನೀನು ಅಶ್ವಮೇಧಯಾಗವನ್ನು ಮಾಡದಿರುವುದೇ ಉತ್ತಮ. ಈ ಯಾಗದಿಂದಾಗಿ ಋತ್ವಿಕ್ಕರು ಪುರೋಹಿತರೊಂದಿಗೆ ಜಗಳವೇರ್ಪಡುತ್ತದೆ. ಇದನ್ನು ನಿಲ್ಲಿಸು ನೋಡೋಣ. ಈ ಯಜ್ಞ ಭ್ರಷ್ಟರಾಗಲು ಇಂದ್ರನಾಗಲೀ ಋತ್ವಿಕ್ಕರಾಗಲಿ ಕಾರಣರಲ್ಲ. ಕಿಂತು ದುರತಿಕ್ರಮವಾದ ಕಾಲವೇ ಕಾರಣವೆಂದು ತಿಳಿ.

**ನ ಚಾಪರಾಧಃ ಶಕ್ರಸ್ಯ ನೋಪಾಧ್ಯಾಯ ಗಣಸ್ಯ ತೇ ।**
**ತವ ವಾ ಯಜಮಾನಸ್ಯ ಕಾಲೋಽತ್ರ ದುರತಿಕ್ರಮಃ ॥ 11 ॥**

ಈ ಅಶ್ವಮೇಧವು ಭ್ರಷ್ಟವೆನಿಸಲು ಕಾಲನಿಯಾಮಕನ ಇಚ್ಛೆಯೇ ಪ್ರಧಾನವಾಗಿದೆ. ಯುಗದ ಅಂತ್ಯದಲ್ಲಿ ಯಾವುದಾದರೂ ಕಾರಣದಿಂದ ಪ್ರಜೆಗಳು ಮೃತರಾಗುವರು. ಇದು ಮೊದಲೇ ತಿಳಿದಿದೆ. ಹಾಗೆಯೇ ಬ್ರಾಹ್ಮಣರು ಯಜ್ಞದ ಫಲವನ್ನು ಹಣಕ್ಕೆ ಮಾರುತ್ತಾರೆ. ಹೀಗಾಗಿ ಇವೆಲ್ಲ ಕಾಲನಿಯಮಿತವೆಂದು ತಿಳಿ.

ಜನಮೇಜಯನು ಪ್ರಶ್ನಿಸುತ್ತಾನೆ –

ವ್ಯಾಸರೇ! ಯಾವ ಕಾರಣಕ್ಕಾಗಿ ನಾನು ಅಶ್ವಮೇಧ ನಿಲ್ಲಿಸಬೇಕಾಗುತ್ತದೆ ಎಂದು ತಾವು ತಿಳಿಸಿದರೆ, ಅದರಂತೆ ಆ ದೋಷ ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತೇನೆ ಎಂದಾಗ,

ವ್ಯಾಸರು – ಬ್ರಾಹ್ಮಣರ ಮೇಲೆ ನಿನಗೆ ಮಹಾಕ್ರೋಧವೇರ್ಪಡುತ್ತದೆ.

ಇದಕ್ಕಾಗಿಯೆ ನೀನು ಯಜ್ಞವನ್ನು ನಿಲ್ಲಿಸಬೇಕಾಗುತ್ತದೆ. ಇದನ್ನು ಪರಿಹರಿಸಿಕೊ. ನಿನಗೆ ಮಂಗಳವಾಗಲಿ.

**ನಿಮಿತ್ತಂ ಭವಿತಾ ಹ್ಯತ್ರ ಬ್ರಹ್ಮಕೋಪಕೃತಂ ಪ್ರಭೋ ।**

ನಿನ್ನ ದೃಷ್ಟಾಂತದಿಂದ ಈ ಮಹಾಯಾಗವನ್ನು ಭೂಮಿಯಿರುವವರೆಗೂ ಯಾವ ರಾಜರು ಮಾಡುವುದಿಲ್ಲ. **[ಕ್ಷತ್ರಿಯಾಃ ನಾಹರಿಷ್ಯಂತಿ ಯಾವದ್ ಭೂಮಿಃ]**

*ಜನಮೇಜಯ ಉವಾಚ –*

**ನಿವೃತ್ತಾವಶ್ವಮೇಧಸ್ಯ ಬ್ರಹ್ಮಶಾಪಾಗ್ನಿ ತೇಜಸಾ ।**
**ಅಹಂ ನಿಮಿತ್ತಮಿತಿ ಮೇ ಭಯಂ ತೀವ್ರಂ ತು ಜಾಯತೇ ॥ 12 ॥**

ವ್ಯಾಸರೇ! ಬ್ರಾಹ್ಮಣರ ಕೋಪವೆಂಬ ಶಾಪಾಗ್ನಿಯಿಂದ ನನ್ನ ಯಾಗ ನಿಂತು ಹೋಗುತ್ತದೆ ಹಾಗೂ ಇದಕ್ಕೆ ನಾನೆ ನಿಮಿತ್ತನಾಗುತ್ತೇನೆ ಎಂಬ ಭವಿಷ್ಯ ವಚನ ಕೇಳಿ ನನಗೆ ಮಹಾಭಯವುಂಟಾಗಿದೆ. ನನ್ನಂತಹ ರಾಜನು ಅಪಕೀರ್ತಿಯನ್ನು ಹೇಗೆ ಸಹಿಸಿಯಾನು.

ಜಾಲದಲ್ಲಿ ಸಿಕ್ಕಿಹಾಕಿಕೊಂಡಿರುವ ಪಕ್ಷಿಯು ಹೇಗೆ ತಾನೆ ಅಂಬರಕ್ಕೆ ಹಾರಬಲ್ಲದು? ಹಾಗೆ ಅಪಯಶಸ್ಸಿನಿಂದ ಕೂಡಿರುವ ನನ್ನಂತಹವರು ಹೇಗೆ ತಾನೆ ಉತ್ತಮಲೋಕಗಳನ್ನು ಹೊಂದಲು ಸಾಧ್ಯ ಹೇಳಿ.

ವ್ಯಾಸರೇ! ನಾನು ಮಾಡಲಿರುವ ಅಶ್ವಮೇಧಯಾಗಕ್ಕೆ ವಿಘ್ನವನ್ನು ತಿಳಿದಿರುವ ತಾವು ಈ ಯಜ್ಞದ ಪುನಃ ಮುಂದುವರೆಯುವ ಉಪಾಯವೇನಾದರೂ ಇದ್ದರೆ ಅದನ್ನು ನನಗೆ ತಿಳಿಸಿ ಎಂದನು.

ವ್ಯಾಸರು – ರಾಜನೇ ನೀನು ಮಾಡುವ ಹಯಮೇಧ ಮುಗಿದ ನಂತರ ಅದರ ಫಲ ಮುಖ್ಯವಾಗಿ ದೇವತೆಗಳಿಗೆ ಸೇರುತ್ತದೆ. ನಂತರ ಋಷಿಗಳಿಗೂ ಅವರ ಅನಂತರ ಮಾನವರಿಗೆ ಸಿಗುವ ಫಲ ಬಹಳ ಅಲ್ಪ. ರಾಜನೇ, ತೇಜೋಮಯವಾದ ದೇವತೆಗಳೇ ತೇಜಃಪ್ರದವಾದ ರಾಜಸೂಯ, ಅಶ್ವಮೇಧಾದಿ ಯಾಗ ಮಾಡಲು ಯೋಗ್ಯರಾಗಿರುತ್ತಾರೆ. ಇತರರು ಮಾಡಿದರೂ ಅದು ತೇಜೋವಂತರಾದ ದೇವತೆಗಳಿಗೆ ಸೇರುತ್ತದೆ.

**ತೇಜಸಾ ವ್ಯಾಹತಂ ತೇಜಃ ತೇಜಸ್ಯೇವಾವತಿಷ್ಠತೇ ।**

ಮುಂದೆ ಕಾಶ್ಯಪ ವಂಶೀಯನಾದ ಒಬ್ಬ ಯೋಗಿಯು ಸೇನಾನೀ ನಾಮಕನು ಭೂ ವಿವರದಿಂದ ಮೇಲೆದ್ದು ಬರುವನು. ಅವನು ಕಲಿಯುಗಾಂತ್ಯದಲ್ಲಿ ಅಶ್ವಮೇಧವನ್ನು ಮಾಡುವನು. ಯುಗಾಂತ್ಯದಲ್ಲಿ ಅವನ ವಂಶದವನೊಬ್ಬನು ರಾಜಸೂಯ ಮಾಡುವನು. ಇದು 'ಶ್ವೇತಗ್ರಹ' ಎಂದು ಉತ್ಪಾತ ಸೂಚಿತವಾದಾಗ ನಡೆಯುತ್ತದೆ.

**ಸರ್ವಜ್ಞ ವ್ಯಾಸರ ಭವಿಷ್ಯುಕ್ತಿ**

ಜನರ ಶ್ರದ್ಧಾಸ್ತಿಕ್ಯಾದಿಗಳಂತೆ ಫಲ ಲಭಿಸುತ್ತದೆ. ಮುಂದೆ ಅನರ್ಥಕಾರಿ ದಿವಸಗಳವೆ. ಮುಂದೆ ಶಿಷ್ಟಾಚಾರಗಳನ್ನು ತ್ಯಜಿಸುತ್ತಾರೆ.

ಅತ್ಯಲ್ಪ ಪುಣ್ಯ ಕಾರ್ಯಗಳನ್ನೂ ಮಾಡಿದರೂ ಸಾಕು ಮಹಾಫಲವೇ ಲಭಿಸುತ್ತದೆ. ಆದರೆ ಅಲ್ಪಫಲಾಚರಣೆಗೂ ನಾನಾ ವಿಘ್ನಗಳು.

ಈ ಕಾಲದಲ್ಲಿ ಧರ್ಮದ ಮೂಲವೆಂದರೆ ದಾನವೊಂದೇ. ಚಾತುರ್ವರ್ಣ್ಯ ವ್ಯವಸ್ಥೆ ಶಿಥಿಲವಾಗಿ ಧರ್ಮದ ಸ್ವರೂಪವೆ ಬದಲಾಗುತ್ತದೆ.

**ಧನ್ಯಾಃ ಧರ್ಮಂ ಚರಿಷ್ಯಂತಿ ಯುಗಾಂತೇ ಜನಮೇಜಯ ॥ 13 ॥**

ಧರ್ಮವೆ ಇರದ ಕಲಿಯುಗಾಂತ್ಯದಲ್ಲಿ ಅತ್ಯಲ್ಪ ತಪಸ್ಸಿನಿಂದಲೂ ಸಿದ್ಧಿ ಹೊಂದವರು. ಈ ಕಲಿಯುಗದಲ್ಲಿ ಕೆಲವರು ಧನ್ಯಪುರುಷರಷ್ಟೆ ಧರ್ಮಕಾರ್ಯ ನಡೆಸುವರು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಜನಮೇಜಯನ ಪ್ರಶ್ನೆಗೆ ವ್ಯಾಸರ ಉತ್ತರವೆಂಬಲ್ಲಿ
ಎರಡನೆಯ ಅಧ್ಯಾಯವು ಸಮಾಪ್ತಿ

# ಅಥ ತೃತೀಯೋಽಧ್ಯಾಯಃ

## ವ್ಯಾಸರಿಂದ ಕಲಿಯುಗ ವರ್ಣನೆ

ಆಸನ್ನ ವಿಪ್ರಕೃಷ್ಟಂ ವಾ ಯದಿ ಕಲಂ ನ ವಿದ್ಮಹೇ ।
ತಸ್ಮಾದ್ ದ್ವಾಪರ ಸಂ ವಿದ್ಧಂ ಯುಗಾಂತಂ ಸ್ಪೃಹಯಾಮ್ಯಹಮ್ ॥ 1 ॥

ಜನಮೇಜಯನು ವ್ಯಾಸರನ್ನು ಕುರಿತು ವ್ಯಾಸರೇ, ನಮಗೆ ಕಾಲವು ಆಸನ್ನವಾಗಿರುವುದೋ ಅಥವಾ ದೂರದಲ್ಲಿರುವುದೋ ತಿಳಿಯಲಾರೆವು. ಆದ್ದರಿಂದ ದ್ವಾಪರದಿಂದ ಎದುರಿಸಲ್ಪಡುತ್ತಿರುವ ಸಂಶಯದಿಂದ ತೊಳಲಾಡುತ್ತಿರುವ ಕಲಿಯುಗದ ಧರ್ಮವನ್ನು ತಿಳಿಯಬೇಕೆಂದಿರುವೆ.

ಕಲಿಯುಗದಲ್ಲಿ ಮಾನವನು ಸ್ವಲ್ಪ ಧರ್ಮಾಚರಣೆಯಿಂದಲೇ ಮಹಾಧರ್ಮವನ್ನಾಚರಿಸಿದ ಫಲವನ್ನು ಪಡೆಯುವರು. ಇದರ ಲೋಭದಿಂದಲೇ ನಾವು ಕಲಿಯುಗದ ಆದಿಯಲ್ಲಿ ಜನ್ಮತಾಳಬಹುದೇನೊ?

ಶೌನಕರು ಸೂತರನ್ನು ಸೂತರೇ, ಪ್ರಜೆಗಳನ್ನು ಉದ್ವೇಗಗೊಳಿಸುವ ಹಾಗೂ ಧರ್ಮವನ್ನು ನಾಶ ಮಾಡುವ ಕಲಿಯುಗವು ಈಗಾಗಲೆ ಬಂದುಬಿಟ್ಟಿದೆ. ಇದರ ಭಾವೀಲಕ್ಷಣಗಳನ್ನು ತಿಳಿಸಿರಿ ಎಂದಾಗ ಸೌತಿಗಳು ನೀನು ಮಾಡಿದ ಪ್ರಶ್ನೆ ಜನಮೇಜಯನೂ ಮಾಡಿದ್ದನು. ಅದಕ್ಕೆ ವ್ಯಾಸರು ನೀಡಿದ ಉತ್ತರವನ್ನೇ ನಿಮಗೂ ಹೇಳುವೆನು.

## ಕಲಿಯುಗ ವೈಪರೀತ್ಯಗಳು

ಅರಕ್ಷಿತಾರೋ ಹರ್ತಾರೋ ಬಲಿಭಾಗಸ್ಯ ಪಾರ್ಥಿವಾಃ ।

ರಾಜನೇ! ಕಲಿಯುಗದಲ್ಲಿ ಪ್ರಜೆಗಳ ರಕ್ಷಣೆ ಮಾಡಬೇಕಾದ ರಾಜರುಗಳು

ಸ್ವಾರ್ಥ ಪರಾಯಣರಾಗಿ ತಮ್ಮ ಶರೀರ ಪೋಷಣೆಯಲ್ಲಿ ತೊಡಗುವರು. ಆದರೆ ಕರದ ನೆಪವೊಡ್ಡಿ ಧನಗಳನ್ನು ಸೆಳೆಯುತ್ತಾರೆ.

**ಹಾರಿಣೋ ಜನವಿತ್ತಾನಾಂ ಶುಲ್ಕ ವ್ಯಾಜೇನ ಪಾರ್ಥಿವಾಃ ॥ 2 ॥**

ಕಲಿಯುಗದಲ್ಲಿ ಕ್ಷತ್ರಿಯರೆ ರಾಜರಾಗಬೇಕಿಲ್ಲ. ಅಯೋಗ್ಯ ವ್ಯಕ್ತಿಯೂ ರಾಜನಾಗಬಹುದು. ಬ್ರಾಹ್ಮಣರಾದರೂ ಶ್ವವೃತ್ತಿಯೆನಿಸಿದ ನೀಚ ಶೂದ್ರರನ್ನು ಆಶ್ರಯಿಸಿ ಜೀವನ ನಡೆಸುವರು. ಶೂದ್ರರು ಬ್ರಾಹ್ಮಣರ ಆಚಾರ,

**ಶೂದ್ರಾಶ್ಚ ಬ್ರಾಹ್ಮಣಾಚಾರಾಃ ಭವಿಷ್ಯಂತಿ ಯುಗಕ್ಷಯೇ ।**

ವೇದವನ್ನೋದದವರೂ ಯಜ್ಞಯಾಗಾದಿಗಳನ್ನು ಮಾಡಿಸುವರು. ಬ್ರಾಹ್ಮಣರಾದರೂ ಶೂದ್ರೋಪಜೀವಿಗಳಾಗುವರು. ಶೂದ್ರರೂ ಸಹ ವೇದಾಭ್ಯಾಸ ಮಾಡುವರು, ತತ್ತ್ವೋಪದೇಶದಲ್ಲಿ ತೊಡಗುವರು. ವಿಪ್ರರು ಪಂಚಯಜ್ಞಗಳನ್ನು ಬಿಡುವರು. ಸರ್ವವರ್ಣದವರೂ ಒಂದೇ ಪಂಕ್ತಿಯಲ್ಲಿ ಕೂತು ಪಂಕ್ತಿಭೇದವಿಲ್ಲದೆ ಒಟ್ಟಿಗೆ ಭೋಜನ ಮಾಡುವರು. ಶಿಲ್ಪಶಾಸ್ತ್ರದಲ್ಲಿ ತೊಡಗುವರು ಯಂತ್ರತಂತ್ರಗಳನ್ನು ತಯಾರಿಸುವವರಾಗುತ್ತಾರೆ. ಸುಳ್ಳು ಹೇಳುವವರೆ ಅಧಿಕರಾಗುತ್ತಾರೆ. ಮದ್ಯ-ಮಾಂಸಗಳನ್ನು ತಿನ್ನುವುದು ಸಾಮಾನ್ಯ. ಮಿತ್ರರ ಭಾರ್ಯೆಯನ್ನು ಭೋಗಿಸುತ್ತಾರೆ, ಪಾಪಭೀತಿ-ಯಿಲ್ಲದವರಾಗುತ್ತಾರೆ.

ಚೋರರೆಲ್ಲರೂ ರಾಜೋಚಿತ ವೃತ್ತಿಯನ್ನು ಮಾಡುತ್ತಿರುತ್ತಾರೆ. ರಾಜರೂ ಸಹ ಕಳ್ಳರದೆ ಸ್ವಭಾವ ಹೊಂದಿರುತ್ತಾರೆ. ಇಷ್ಟೆ ಸಂಬಳವೆಂದಾಗಲೀ ಇಷ್ಟೆ ಆಹಾರವೆಂದಾಗಲೀ ಭೃತ್ಯರಿಗೆ ಇರದೆ ಯಥೇಚ್ಛ ಸುಖಲೋಲುಪರಾಗುವರು.

ದುಡ್ಡು ಇದ್ದವನೇ ದೊಡ್ಡಪ್ಪ. ಅದೇ ಪೂಜ್ಯತೆಗೆ ಮಾನದಂಡವಾಗಿರುತ್ತದೆ. ಸಜ್ಜನರಿಗೆ ಅವರ ಸದಾಚಾರಕ್ಕೆ ಕಿಮ್ಮತ್ತೂ ಬೆಲೆ ಇರುವುದಿಲ್ಲ. ಸರ್ವರೂ ಪತಿತರೆ ಇರುವ ಕಲಿಯುಗದಲ್ಲಿ ಪತಿತನನ್ನು ನಿಂದಿಸುವವರು ಯಾರೂ? ಧರ್ಮಾಧರ್ಮವಿವೇಕರಹಿತರೂ, ಸನ್ಯಾಸಿಗಳು ಸಂಸಾರಕ್ಕೆ ಬರುವರು ಅಥವಾ ವಿಧವಾಸಂಗಮ ತತ್ಪರರಾಗುವರು. ಮಕ್ಕಳನ್ನು ಪಡೆಯುವರು. ಹದಿನಾರು ವರ್ಷ ತುಂಬುವುದರೊಳಗೆ ಮಕ್ಕಳನ್ನು ಹಡೆಯುವರು.

**ಅಟ್ಟಶೂಲಾಃ ಜನಪದಾಃ ಶಿವಶೂಲಾಃ ಚತುಷ್ಪಥಾಃ ।**
**ಪ್ರಮದಾಃ ಕೇಶಶೂಲಿನ್ಯೋ ಭವಿಷ್ಯಂತಿ ಯುಗಕ್ಷಯೇ ॥ 3 ॥**

ಕಲಿಯುಗದಲ್ಲಿ ಹಸಿವೆಗೊಂಡವರಿಗೆ ದುಡ್ಡಿಗಾಗಿ ಮಾರಿ ಬದುಕುವರು. ಅನ್ನಸತ್ರ ಇವೆಲ್ಲ ಕಣ್ಮರೆಯಾದ ಶಬ್ದಗಳು. ವೇದಗಳನ್ನು ಹೇಳಿಕೊಡಿರೆಂದು ಬಂದವರಿಗೆ ಎಷ್ಟು ಹಣ ಕೊಡುತ್ತಿ ಎಂದು ಕೇಳುತ್ತಾರೆ. ವೇದವನ್ನು ಧನಕ್ಕಾಗಿ ಮಾರಿ ಬದುಕುತ್ತಾರೆ. ವನಿತೆಯರು ಹಣಕ್ಕಾಗಿ ವೈಶ್ಯಾವೃತ್ತಿ ಮೂಲಕ ದೇಹ ಮಾರಿಕೊಂಡು ಜೀವಿಸುವರು.

ಎಲ್ಲರೂ ವೇದವೇದಾಂತ ನೀಡಬಲ್ಲವರಂತೆ ಸೋಗು ಹಾಕುತ್ತಾರೆ. ಎಲ್ಲರೂ ವಾಜಸನೇಯ ಶಾಖೆಯವರೇ ಎಂಬಂತಿರುತ್ತಾರೆ. ಬ್ರಾಹ್ಮಣನಿಗೆ ಕರೆಯ-ಬೇಕಾದ ಬಹು ಗೌರವ ಶಬ್ದವಾದ ಭೋಃ ಎಂಬ ಶಬ್ದದಿಂದ ಶೂದ್ರರು ಆದರಿಸಲ್ಪಡುತ್ತಾರೆ.

ಬ್ರಾಹ್ಮಣರು ತಪಸ್ಸಿನ ಹಾಗೂ ಯಜ್ಞ ಮಾಡಿದ ಪುಣ್ಯವನ್ನು ಮಾರುವರು. ದುಡ್ಡಿಗಾಗಿ ಹೋಮ, ಧನಕ್ಕಾಗಿ ಜಪ, ಧನಕ್ಕಾಗಿ ತಪಸ್ಸನ್ನು ಮಾಡುವರು.

ಸಕಲ ಋತುಧರ್ಮಗಳು ವಿಪರೀತ ಫಲ ನೀಡುವುವು. ಮಳೆಬೆಳೆ ಬಿಸಿಲುಗಾಳಿ ಋತುಗಳಿಗೆ ತಕ್ಕಂತೆ ನಡೆಯುವುದಿಲ್ಲ.

ಮಾಂಸವನ್ನು ಬಿಟ್ಟು ಶುಕ್ಲದಂತರಾಗುತ್ತ ಸೂಕ್ಷ್ಮದೃಷ್ಟಿಗಳು ತಲೆಯ ಮುಂಡನ ಮಾಡಿಸಿಕೊಂಡು ಕಾಷಾಯ ವಸ್ತ್ರಧರಿಸಿ ಬೌದ್ಧಮತ ಹಿಡಿಯುವರು.

**ಶ್ವಾಪದಪ್ರಚುರತ್ವಂ ಚ ಗವಾಂ ಚೈವ ಪರಿಕ್ಷಯಃ ।**

ನಾಯಿಗಳ ಸಂಖ್ಯೆ ಅಧಿಕವಾಗುತ್ತದೆ. ಗೋವಿನ ಸಂಖ್ಯೆ ಕಡಿಮೆಯಾಗುತ್ತದೆ. ಸಾಕಬೇಕಾದ ಗೋವುಗಳು ಮೂಲೆ ಸೇರಿದರೆ ನಾಯಿಗಳು ಆ ಸ್ಥಾನ ಅಲಂಕರಿಸುತ್ತವೆ. ಉತ್ತಮ ವಾಸ ಆಹಾರ ಪದಾರ್ಥಗಳೇ ದುರ್ಲಭವಾಗುತ್ತವೆ.

ಮ್ಲೇಚ್ಛರು ಕುರುಪಾಂಚಲಾದಿ ಮಧ್ಯದಲ್ಲಿ ವಾಸಿಸುವರು. ಸದಾಚಾರಿಗಳು ಊರಾಚೆ ವಾಸಿಸುವರು. ಸರ್ವತ್ರ ನೀಚವರ್ತನೆಯೆ ಕಾಣುತ್ತದೆ.

ಎರಡು ವರ್ಷದ ಎತ್ತುಗಳನ್ನು ಗಾಡಿ ಎಳೆಯಲು ಕಟ್ಟುವರು. ಪರ್ಜನ್ಯನು ವಿಚಿತ್ರ ರೀತಿಯಲ್ಲಿ ಮಳೆಗರೆಯುವನು. ಒಂದು ಕಡೆ ಮಳೆ ಮತ್ತೊಂದೆಡೆ ಮಳೆ ಅಭಾವವಿರುತ್ತದೆ.

ಸರ್ವರೂ ಕಳ್ಳರ ಜಾತಿಯಲ್ಲಿಯೆ ಹುಟ್ಟಿ ಚೋರ ವೃತ್ತಿಯನ್ನು

ಬೆಳೆಸಿಕೊಂಡಿರುತ್ತಾರೆ. ಪರಸ್ಪರವಾಗಿ ವಂಚನೆ ಮಾಡಿಕೊಳ್ಳುತ್ತಿರುತ್ತಾರೆ. ಧನಾಢ್ಯರಾಗಲು ಅಲ್ಪ ಪ್ರಯತ್ನ ಸಾಕಾಗುವುದು ಸ್ವಲ್ಪ ಕಾರಣದಿಂದಲೇ ದರಿದ್ರರಾಗುವರು.

ಮಾನವರು ಸ್ವಹಿತ ವೃತ್ತಿಯನ್ನು ಭಕ್ತಿಯಿಂದ ಮಾಡುವುದಿಲ್ಲ. ಧರ್ಮವಿಲ್ಲದ ಭೂಮಿಗಳೆಲ್ಲವೂ ಚೌಳು ಭೂಮಿಗಳಾಗುತ್ತವೆ. ಹೆದ್ದಾರಿ ಕಿರುದಾರಿಗಳಲ್ಲಿ ದಾರಿಹೋಕರನ್ನು ಪೀಡಿಸುವ ಕಳ್ಳಕಾಕರು ಅಧಿಕರಾಗುವರು.

ಬ್ರಾಹ್ಮಣಾದಿ ಸಕಲ ವರ್ಣದವರೂ ವೈಶ್ಯರಂತೆ ವ್ಯಾಪಾರ ಮಾಡಲು ತೊಡಗುವರು. ತಂದೆ ತಾಯಿಗಳು ತಾವೆ ವಿಭಾಗ ಮಾಡಿಕೊಡದಿದ್ದರೂ ಅವರಿಗೂ ತಿಳಸದೆ ಆಸ್ತಿ ವಿಭಾಗ ಮಾಡಿಕೊಳ್ಳುವರು.

ಎಲ್ಲವೂ ನನಗೆ ಲಭಿಸಬೇಕೆಂಬ ಲೋಭದಿಂದಾಗಿ ಅಣ್ಣ-ತಮ್ಮಂದಿರು ವಾಲಿಸುಗ್ರೀವರಂತೆ ಹೊಡೆದಾಡುತ್ತಾರೆ. ನ್ಯಾಯಾಂಗಕಟ್ಟೆಯನ್ನು ಏರಿ ಕುಲಕ್ಕೆ ಕಳಂಕ ಪ್ರಾಯರಾಗುವರು. ಒಬ್ಬರ ಆಸ್ತಿ ಮತ್ತೊಬ್ಬನು ಅಪಹರಿಸಲು ಪ್ರಯತ್ನಿಸುವರು.

**ಸೌಕುಮಾರ್ಯೇ ತಥಾ ರೂಪೇ ರತ್ನೇ ಚೋಪಕ್ಷಯಂ ಗತೇ ।**
**ಭವಿಷ್ಯಂತಿ ಯುಗಾಂತೇ ಚ ನಾರ್ಯಃ ಕೇಶೈರಲಂಕೃತಾಃ ॥ 4 ॥**

ಕಲಿಯುಗದಲ್ಲಿ ಬ್ರಾಹ್ಮಣರು ನಿಷಿದ್ಧ ದ್ರವ್ಯ ಸ್ವೀಕರಿಸುವವರಾದರೂ ದೀಕ್ಷಿತನಾಗುವನು. ಕಲಿಯುಗದಲ್ಲಿ ನುಡಿದದ್ದೆ ವೇದವಾಕ್ಯವೆನಿಸುವುದು. ಅವೈದಿಕ ಕಾಳ ಮೊದಲಾದ ದೇವತೆಗಳೇ ದೇವತೆಗಳು. ವಿಷ್ಣು ವಾಯು ಇವರಾರು ಬೇಕಾಗಿಲ್ಲ. ಸನ್ಯಾಸಾದಿ ಧರ್ಮವೆನಿಸಿದ ವೈರಾಗ್ಯಾದಿ-ಗಳಿಲ್ಲದಿದ್ದರೂ ಯಾರೂ ಯಾವುದೇ ಆಶ್ರಮವನ್ನು ಹೊಂದುವರು.

**ಪುರುಷಾಲ್ಪಂ ಬಹುಸ್ತ್ರೀಕಂ ತದ್ಯುಂಗಾಂತಸ್ಯ ಲಕ್ಷಣಮ್ ।**

ಕಲಿಯುಗದಲ್ಲಿ ಸ್ತ್ರೀಸಂತಾನ ಬಹಳವಿರುತ್ತದೆ. ಪುರುಷ ಸಂತಾನ ಕಡಮೆಯಾಗುತ್ತದೆ.

ಕಲಿಯುಗದಲ್ಲಿ ಪುರುಷರಿಗೆ ಅಲ್ಪ ದ್ರವ್ಯವಿದ್ದರೂ ಅಹಂಕಾರ ಮಾತ್ರ ಬಹಳ ಇರುತ್ತದೆ. ತಾನೊಬ್ಬನೇ ಶ್ರೀಮಂತನೆಂಬ ಹಮ್ಮು ಇರುತ್ತದೆ. ಸ್ತ್ರೀಯರಿಗಾದರೂ ರೂಪವಿಲ್ಲದಿದ್ದರೂ ರೂಪ ಮದ ಅಧಿಕವಾಗಿರುತ್ತದೆ.

ರೂಪವಿಲ್ಲದಿದ್ದರೂ ವಿಧವಿಧ ಕೇಶಾಲಂಕಾರಗಳಿಂದಲೇ ತಾವು ರೂಪವತಿಯರೆಂಬ ಭ್ರಮೆ ಹುಟ್ಟಿಸುತ್ತಾರೆ.

ಸ್ತ್ರೀಯರು ಧನವಿಲ್ಲದ ಪತಿಯನ್ನು ತ್ಯಜಿಸಿ ಧನವಂತ ಪರಪುರುಷರನ್ನು ಅರಸುವರು.

ಯಾರು ಹೆಚ್ಚು ಧನ ಸಂಬಳ ನೀಡುವನೋ ಅವನೇ ಸ್ವಾಮಿಯು. ಕುಲೀನನಾದವನು ಸ್ವಾಮಿಯೆನಿಸುವುದಿಲ್ಲ.

ಮಾನವನು ಧನ ಸಂಪಾದಿಸುವುದು ಧರ್ಮಕ್ಕಾಗಿಯಲ್ಲ. ತಾನು ಸುಖವಾಗಿರಲೆಂದು ಧನ ಸಂಪಾದಿಸುವುದೇ ಗುರಿಯು. ಹೂವು ಚಂದನಾದಿಗಳು ಪೂಜೆಗಾಗಿ ಅಲ್ಲ ತನ್ನ ಸುಖಕ್ಕಾಗಿ.

ಮಲಗಿರುವ ಪತಿಯನ್ನು ಪರಿತ್ಯಜಿಸಿ ಸ್ತ್ರೀಯರು ಪರಪುರುಷನ ಬಳಿಗೆ ಹೋಗುವರು. ಪುರುಷರೂ ಹಾಗೆಯೆ, ಪರಸತಿಯನ್ನು ಅರಸುವರು.

**ನಾವ್ಯಾಧಿತೋ ನಾಪ್ಯರುಜೋ ಜನಃ ಯುಗೇ ಕ್ಷೀಣೇ ಭವಿಷ್ಯತಿ ॥ 5 ॥**

ಶಾರೀರಿಕ ರೋಗವಿಲ್ಲದವನನ್ನು ಮಾನಸಿಕ ವ್ಯಾಧಿವಿಲ್ಲದವನನ್ನು ಕಲಿಯುಗದಲ್ಲಿ ನೋಡಲು ಸಿಗಲಾರರು. ಎಲ್ಲರೂ ಆಧಿ-ವ್ಯಾಧಿಗ್ರಸ್ತರೆ ಇರುವರು. ಜನರೂ ಕೂಡ ಮತ್ತೊಬ್ಬರ ದೋಷವನ್ನು ಹುಡುಕುತ್ತಾರೆಯೆ ಹೊರತು ಗುಣಗ್ರಾಹಿಗಳಾಗಲಾರರು. ಮಾಡಿದ ಉಪಕಾರ ಸ್ಮರಿಸದೆ ಕೃತಘ್ನರಾಗುವರು.

**ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ**
**ಕಲಿಯುಗದ ಧರ್ಮ ನಿರೂಪಣೆ ಎಂಬಲ್ಲಿ**
**ಮೂರನೆಯ ಅಧ್ಯಾಯವು ಸಮಾಪ್ತಿ**

## ಅಥ ಚತುರ್ಥೋಽಧ್ಯಾಯಃ

**ಏವಂ ವಿಲುಲಿತೇ ಲೋಕೇ ಮನುಷ್ಯಾಃ ಕೇನ ಪಾಲಿತಾಃ ।**
**ನಿವತ್ಸ್ಯಂತಿ ಕಿಮಾಚಾರಾಃ ಕಿಮಾಹಾರ ವಿಹಾರಿಣಃ ॥ 1 ॥**

ಜನಮೇಜಯನು ಹೇಳುತ್ತಾನೆ - ಪೂಜ್ಯರೇ! ಕಲಿಯುಗದ ಜನ ಆಚಾರಾದಿಗಳನ್ನು ತ್ಯಜಿಸಿ ಅನಾಚಾರಗಳಿಂದ ದೂಷಿತವಾದಾಗ ಈ ಜಗತ್ತಿನಲ್ಲಿ ಮನುಷ್ಯರ ರಕ್ಷಣೆ ಯಾವುದರಿಂದಾಗುವುದು. ಅವನ ಆಚಾರವಾವುದು? ಆಹಾರಾದಿಗಳು ವಿಹಾರಾದಿಗಳಾವುವು?

ಯಾವ ಕೆಲಸ ಮಾಡುವರು? ಅವರ ಅಭಿಲಾಷೆ ಯಾವುದರಲ್ಲಿ? ಅವರ ಅಳತೆಯೆಷ್ಟು? ಅವನ ಪರಮಾವಧಿ ಆಯುಸ್ಸು ಎಷ್ಟಿರುತ್ತದೆ?

ವ್ಯಾಸರು - ಜನಮೇಜಯನೇ! ಕಲಿಯುಗದಲ್ಲಿ ಧರ್ಮವೆಲ್ಲ ನಷ್ಟ ಪ್ರಾಯವಾಗಿ ಹೋದ್ದರಿಂದ ಪ್ರಜೆಗಳು ಔದರ್ಯಾದಿ ಗುಣಹೀನರೂ, ದುರ್ವ್ಯಸನಿಗಳಾಗಿ ಅಲ್ಪಾಯುಗಳಾಗುತ್ತಾರೆ.

**ಶೀಲವ್ಯಸನಮಾಸಾದ್ಯ ಪ್ರಾಪ್ಸ್ಯಂತೇ ಹ್ರಾಸಮಾಯುಷಃ ।**

ಆಯುಸ್ಸು ಹ್ರಾಸವಾಗಿ ದೈಹಿಕ ಬಲಾದಿಗಳು ಕ್ಷೀಣಿಸುತ್ತವೆ. ಬಲಕ್ಷೀಣವಾಗಿ ಶರೀರ ಕಾಂತಿಹೀನವಾಗುತ್ತದೆ. ಇದರಿಂದಾಗಿ ಅನೇಕ ವ್ಯಾಧಿಗಳು ಪೀಡಿಸುತ್ತವೆ. ವ್ಯಾಧಿಯಿಂದಾಗಿ ನನಗೇನೂ ಬೇಡ ಎಂಬ ವೈರಾಗ್ಯ ಏರ್ಪಡುತ್ತದೆ.

ವೈರಾಗ್ಯ ಪೂರ್ಣವಾದಾಗ ತನ್ನ ಜೀವನದ ಬಗ್ಗೆ ದುಃಖವುಂಟಾಗುತ್ತದೆ.

ದುಃಖಪರಿಹಾರಕ ಬೇರಾರನ್ನೂ ಕಾಣದೆ ಭಗವಂತನೆ ಗತಿ ಎಂಬ ತತ್ವಜ್ಞಾನವುಂಟಾಗುತ್ತದೆ. ಇದರಿಂದಾಗಿ ಧರ್ಮದಲ್ಲಿ ಆಸಕ್ತಿ ಶ್ರದ್ಧೆ-ವುಂಟಾಗುತ್ತದೆ. ಇಂತಹ ಧರ್ಮದ ತುಟ್ಟ ತುದಿ ತಲುಪಿದಾಗ ಕೃತಯುಗ ಬಂದಿರುತ್ತದೆ.

**ಏವಂ ಗತ್ವಾ ಪರಾಂ ಕಾಷ್ಠಾಂ ಪ್ರಪಸತ್ಸ್ಯಂತಿ ಕೃತಂ ಯುಗಂ ॥ 2 ॥**

ಕೆಲವರು ಸ್ವಲ್ಪ ಧರ್ಮಾಚರಣೆ ಮಾಡುವರು. ಕೆಲವರು ಧರ್ಮಾಚರಣೆ-ಯಲ್ಲಿಯೇ ಉದಾಸೀನ ಭಾವನೆ ಹೊಂದುವರು ಕೆಲವು ವಿವೇಕಿಗಳು ಮಾತ್ರ ಧರ್ಮ ಮಾಡಲೇಬೇಕೆಂದು ಯುಕ್ತಿಯಿಂದ ಸಮರ್ಥಿಸುವರಾದರೂ ತಾವು ಧರ್ಮಾಚರಣೆ ಮಾಡುವುದಿಲ್ಲ. ಪ್ರತ್ಯಕ್ಷ ಅನುಮಾನ –ಆಗಮಗಳಲ್ಲಿ ಆಗಮವನ್ನು ಅಷ್ಟೇಕೆ? ಶಬ್ದ ಪ್ರಮಾಣವನ್ನೆ ಅಲ್ಲಗಳೆಯುವರು. ತಾವೇ ಪಂಡಿತರೆಂದು ಅಹಂಭಾವ ಹೊಂದಿ ಚಾರ್ವಾಕರಂತೆ ಪ್ರತ್ಯಕ್ಷ ಮಾತ್ರ ಪ್ರಮಾಣವೆನ್ನುವರು. ಸಾಗತರಾದ ವೇದೋಕ್ತ ಧರ್ಮಗಳೆಲ್ಲ ಅಪ್ರಮಾಣ-ವೆಂದು ಹೇಳುವರು. ಸ್ತ್ರೀಯರು ಕೆಲವರು ಬಾಯಿಯಲ್ಲಿಯೇ ಭಗದ ಕಾರ್ಯ ನಡೆಸುವರು.

ಸರ್ವತ್ರ ನಾಸ್ತಿಕ್ಯವಾದವೇ ಪ್ರಧಾನವಾಗಿರುತ್ತದೆ. ದೇವರು ಸ್ವರ್ಗ ನರಕಾದಿಗಳನ್ನು ನಂಬಲಾರರು. ವರ್ತಮಾನದಲ್ಲಿ ನಡೆಯುವ ಲೌಕಿಕ ಹರಟೆಗಳಲ್ಲಿಯೆ ಆಸಕ್ತರು, ಶಾಸ್ತ್ರಜ್ಞಾನವಿಲ್ಲ – ಬೇಕೂ ಇಲ್ಲ. ಧರ್ಮದ ವಿಚಾರ ಚರ್ಚೆ ಅವರಿಗೆ ಆಶ್ಚರ್ಯ ಸಂಗತಿ. ಸರ್ವತ್ರ ಡಾಂಬಿಕತೆ ಮೋಸ ಎದ್ದು ಕಾಣುತ್ತದೆ.

**ತದಾ ವಿಚಲಿತೇ ಧರ್ಮೇ ಜನಾಃ ಶೇಷ ಪುರಸ್ಕೃತಾಃ ।**
**ಶುಭಾನ್ಯೇವಾಚರಿಷ್ಯಂತಿ ದಾನಸತ್ಯ ಸಮನ್ವಿತಾಃ ॥ 3 ॥**

ಹೀಗೆ ಧರ್ಮವು ಸರ್ವತ್ರ ಕ್ಷೀಣವಾಗುತ್ತಿದ್ದರೂ ಸಂಪೂರ್ಣ ನಾಶವೇರ್ಪಡುವುದಿಲ್ಲ ಕೆಲವು ಸಾತ್ವಿಕರು ಭಗವಂತನ ನಿರಂತರ ಸ್ಮರಣೆ ಮುಂತಾದ ಧರ್ಮಗಳಲ್ಲಿ ಆಸಕ್ತರಾಗಿರುವರು. ಶುಭಕಾರ್ಯಗಳನ್ನು ದಾನಧರ್ಮ, ದಯೆ ಮೊದಲಾದವುಗಳನ್ನು ಮಾಡುತ್ತಿರುತ್ತಾರೆ.

ಕಲಿಯುಗದಲ್ಲಿ ಮುಖ್ಯಧರ್ಮವೆಂದರೆ ಸಿಕ್ಕಿದ್ದೆಲ್ಲವನ್ನೂ ತಿನ್ನುವುದು, ಹಾಗೂ

ಇಂದ್ರಿಯನಿಗ್ರಹವಿಲ್ಲದಿರುವುದು [**ಅಸಂಗುಪ್ತೋ**] ಗುಣಶೂನ್ಯತೆ, ನಾಚಿಕೆಯಿಲ್ಲದಿರುವಿಕೆ ಇವುಗಳಿ ಎದ್ದು ಕಾಣುತ್ತದೆ.

**ಸರ್ವಭಕ್ಷೋ ಹ್ಯಸಂಗುಪ್ತೋ ನಿರ್ಗುಣೋ ನಿರಪತ್ರಪಃ ।**

ನೀಚವರ್ಣದವರು ತಾವು ಜೀವನ ಮಾಡಲು ಬ್ರಾಹ್ಮಣರ ಸನಾತನ ವೈದಿಕ ವೃತ್ತಿಯನ್ನು ಹಿಡಿಯುವುದೂ ಕಲಿಲಕ್ಷಣ.

**ವಿಪ್ರಾಣಾಂ ಶಾಶ್ವತೀಂ ವೃತ್ತಿಂ ಯದಾ ವರ್ಣಾವರಾ ಜನಾಃ ।**

**ಪ್ರತಿಪತ್ಸ್ಯಂತಿ ॥ 4 ॥**

ಹೀಗೆ ಕಲಿಪ್ರಭಾವದಿಂದಾಗಿ ಲೋಕದಲ್ಲಿ ಜ್ಞಾನ-ವಿದ್ಯೆಗಳಿಗೆ ಲೋಪವುಂಟಾದಾಗ ತ್ಯಾಗದಿಂದಲೇ ಸಿದ್ಧಿಯನ್ನು ಸ್ವಲ್ಪ ಕಾಲದಲ್ಲಿಯೇ ಪಡೆಯುವರು.

**ಮಹಾಯುದ್ಧಂ ಮಹಾವಾತಂ ಮಹಾವರ್ಷಂ ಮಹಾಭಯಮ್ ।**

ಕಲಿಪ್ರಭಾವದಿಂದಾಗಿ ದೇಶದೇಶಗಳಿಗೆ ಮಹಾಯುದ್ಧವೇರ್ಪಡುತ್ತದೆ. ಝಂಝಾವಾತ, ಬಿರುಗಾಳಿ ಭಯಂಕರ ವೃಷ್ಟಿ, ಎಲ್ಲಿ ಹೋದರೂ ಮಹಾಭಯ ಸ್ಥಿತಿ ತಲೆದೋರುತ್ತದೆ.

ಕಲಿಯುಗಾಂತ್ಯದಲ್ಲಿ ರಾಕ್ಷಸರು, ದೈತ್ಯರು ಬ್ರಾಹ್ಮಣ ರೂಪದಿಂದ ಹುಟ್ಟುತ್ತಾರೆ. ಇಲ್ಲಸಲ್ಲದ ಚಾಡಿ ಮಾತನ್ನು ಆಳುವ ರಾಜರುಗಳಿಗೆ ಕಿವಿಯಲ್ಲಿ ಊದುತ್ತಾರೆ. ಈ ಚಾಡೀ ಮಾತಿನಿಂದಾಗಿ ರಾಜರು ಕೆರಳಿ ಪ್ರಜೆಗಳನ್ನು ಪೀಡಿಸುತ್ತಾರೆ.

**ವಿಪ್ರರೂಪಾಣಿ ರಕ್ಷಾಂಸಿ ರಾಜಾನೋ ಕರ್ಣವೇದಿನಃ ॥ 5 ॥**

ಬ್ರಾಹ್ಮಣರು ವೇದಾಧ್ಯನ, ವಷಟ್ಕಾರಗಳನ್ನು ಮಾಡುವುದಿಲ್ಲ. ವೇದೋಕ್ತ ವಿಷಯವನ್ನು ಹೇಳಲಾರರು. ಪಾಷಂಡ ಧರ್ಮ ಅತ್ಯಭಿರುಚಿ. ಈ ಪಾಷಂಡ ಧರ್ಮಕ್ಕೆ ಸೋತು ಶ್ರೀವಿಷ್ಣುವನ್ನು ಪೂಜಿಸಲಾರರು. ವರ್ಣಗಳೆಲ್ಲ ಸಾಂಕರ್ಯದಿಂದಾಗಿ ಶೂದ್ರ ಧರ್ಮ ಪ್ರಚುರವಾಗುವುವು. ನ್ಯಾಯ ಮಾರ್ಗದಿಂದ ಸರಿದು ದುರಭಿಮಾನಿಗಳಾಗಿ ದೈತ್ಯರಂತೆ ಭಕ್ಷ್ಯಾಭಕ್ಷ್ಯ ವಿವೇಚನೆ ಇಲ್ಲದೆ ನಾಲಿಗೆ ಬಯಸಿದ್ದೆಲ್ಲವನ್ನೂ ತಿನ್ನುವರು. ಜಿಹ್ವಾಚಾಪಲ್ಯ ಹಾಗೂ ಗುಹ್ಯೇಂದ್ರಿಯ ಜಯವಿಲ್ಲದ ಜನರ ಪಾಡು ನಾಯಿ ಪಾಡಾಗುತ್ತದೆ.

**ಔಪಸ್ಥ್ಯ ಜೈಹ್ವ್ಯ ಕಾರ್ಪಣ್ಯಾತ್ ಗೃಹಪಾಲಾಯತೆ ಜನಃ ।**
**ವಿಪ್ರಾಃ ಕ್ರವ್ಯಾರೂಪೇಣ ಸರ್ವಭಕ್ಷ್ಯಾಃ ವೃಥಾ ವ್ರತಾಃ ॥ 6 ॥**

ಸ್ವಾರ್ಥತೆ, ಲೋಲುಪತೆ, ನೀಚತೆ, ಮೂರ್ಖತೆಗಳಿಂದಾಗಿ ಸನಾತನ ಧರ್ಮಗಳನ್ನು ತ್ಯಜಿಸಿ ಆಹಾರ– ನಿದ್ರಾ– ಮೈಥುನಗಳಲ್ಲಿ ತತ್ಪರರಾಗಿರುತ್ತಾರೆ.

**ಹರ್ತಾರಃ ಪರರತ್ನಾನಾಂ ಪರಹಾರಾಪಹಾರಕಾಃ ।**
**ಚೌರಾಃ ಚೌರಸ್ಯ ಹರ್ತಾರೋ ಹಂತಾ ಹಂತುರ್ಭವಿಷ್ಯತಿ ॥ 7 ॥**

**ಚೌರ್ಯೈಃ ಚೌರಕ್ಷಯೇ ಚಾಪಿ ಕೃತೇ ಕ್ಷೇಮಂ ಭವಿಷ್ಯತಿ ।**

ಕಲಿಯುಗದಲ್ಲಿ ಜನರು ಸ್ವಾರ್ಥಕ್ಕೆ ಬಲಿಯಾಗಿ ಮತ್ತೊಬ್ಬರ ಐಶ್ವರ್ಯಾದಿಗಳನ್ನೂ ಅಪಹರಿಸುತ್ತಾರೆ. ಪರಸ್ತ್ರೀಯರನ್ನೂ ಭೋಗಿಸುತ್ತಾರೆ. ಕಾಮಾಸಕ್ತರಾಗಿ ದುಷ್ಟಬುದ್ಧಿವುಳ್ಳವರಾಗುವರು. ಸರ್ವತ್ರ ಇಂತಹವರೆ ತುಂಬಿ ದೇವರನ್ನೆ ಇಲ್ಲವೆನ್ನುವ ಸಮಯಕ್ಕೆ ತಕ್ಕಂತೆ ವೇಷಧರಿಸುವ ಮುನಿವೇಷಧಾರಿಗಳು ಹುಟ್ಟುವರು. ಹಿಂದೆ ಕೃತಾದಿಗಳಲ್ಲಿ ಎಂತಹ ಸಜ್ಜನರಿದ್ದರೆಂದು ಶ್ಲಾಘಿಸುವರು. ಆದರೆ ಅವರ ಆಚರಣೆ ಶೂನ್ಯ. ಬೇರೊಬ್ಬರ ಗದ್ದೆಯಲ್ಲಿ ಬೆಳೆದ ಸಸ್ಯಾಪಹಾರಕರು, ಆಹಾರ, ವಸ್ತ್ರ, ಪೆಟ್ಟಿಗೆಗಳನ್ನು ಕದಿಯುವರು.

**ಚೌರಾಃ ಚೌರಸ್ಯ ಹರ್ತಾರೋ ಹಂತಾ ಹಂತುಃ ಭವಿಷ್ಯತಿ ।**
**ಪಿತೃನ್ ಆಜ್ಞಾಪಯಿಷ್ಯಂತಿ ಪುತ್ರಾಃ ಕರ್ಮಣಿ ಸರ್ವಶಃ ॥ 8 ॥**

**ಸ್ನುಷಾಃ ಶ್ವಶ್ರೂಃ ತಥಾಚೈವ ಗುರೂನ್ ಶಿಷ್ಯಾಃ ತಥೈವ**
**ಚ ವಾಕ್‌ಭರ್ರೈರರ್ದಯಿಷ್ಯಂತಿ ॥ 9 ॥**

ಕಳ್ಳರು ಮತ್ತೊಬ್ಬ ಕಳ್ಳನ ಮನೆಗೆ ಕನ್ನ ಹಾಕುವನು. ಒಬ್ಬ ಕೊಲೆಗಡಕನನ್ನು ಮತ್ತೊಂದು ಕೊಲೆಗಡುಕರ ತಂಡ ಕೊಂದು ಹಾಕುತ್ತದೆ. ಜೀವಕ್ಕೆ ಬೆಲೆಯಿರುವುದಿಲ್ಲ. ಹೀಗೆ ದುಷ್ಟರಿಂದಲೇ ದುಷ್ಟರ ಕೂಟ ನಿರ್ನಾಮ–ವಾಗುತ್ತದೆ.

ತಂದೆ–ತಾಯಿಗಳನ್ನು ಪುತ್ರರೇ ಆಜ್ಞಾದೇಶ ಮಾಡುವರು. ಹಿರಿತನ ಕೆಲಸಕ್ಕೆ ಬರುವುದಿಲ್ಲ. ಸೊಸೆ, ಅತ್ತೆ ಮಾವಂದರಿಗೆ ಆಜ್ಞೆ ಮಾಡುವಳು. ಗುರುಗಳಿಂದ ವಿದ್ಯೆ ಸಂಪಾದಿಸಿ ಗುರುಗಳನ್ನೇ ಚುಚ್ಚು ಮಾತಿನಿಂದ ಚುಚ್ಚುವರು.

ಯಜ್ಞಯಾಗಾದಿ ಕರ್ಮಗಳು ನಿಂತು ಹೋಗಿ ದೇವತಾ ವ್ಯಾಕೋಪಕ್ಕೆ ತುತ್ತಾದ ಪ್ರಜೆಗಳನ್ನು ರಾಕ್ಷಸಭೂತ ಪ್ರೇತಗಳು, ನಾಯಿಗಳು, ಇಲಿ, ಸರ್ಪಗಳು, ನಾನಾ ಕೀಟಗಳು ಮನುಷ್ಯರ ಹತ್ತಿರ ನಿರ್ಭಯರಾಗಿ ಸಂಚರಿಸುತ್ತವೆ.

**ಕೀಟ ಮೂಷಕ ಸರ್ಪಾಶ್ಚ ಧರ್ಷಯಿಷ್ಯಂತಿ ಮಾನವಾನ್ ।**
**ಕ್ಷೇಮಂ ಸುಭಿಕ್ಷಮಾರೋಗ್ಯಂ ಸಾಮಗ್ರ್ಯಂ ವಾಪಿ ಬಂಧುಷು ।**
**ಉದ್ದೇಶತೋ ಭವಿಷ್ಯಂತಿ ॥ 10 ॥**

ಕ್ಷೇಮವಾಗಲಿ, ಸುಭಿಕ್ಷೆ, ಆರೋಗ್ಯ, ಬಂಧುಗಳೊಂದಿಗೆ ಸೇರುವುದು ಇವುಗಳಲ್ಲಿ ಯಾವುದೋ ಒಂದು ಉದ್ದೇಶವಿರುತ್ತದೆ.

ಕಲಿಯುಗದಲ್ಲಿ ಜನರಕ್ಷಕರೆಂದು ನಿಯಮಿತರಾದ ರಕ್ಷಾಪುರುಷರೂ ಸಹ ರಕ್ಷಣಾ ಕಾರ್ಯ ನೆಪದಲ್ಲಿ ಮಹಾಕಳ್ಳರಾಗಿರುತ್ತಾರೆ. [ಪೋಲಿಗಳಿಗೆ ಈಶರು] ಕಲಿಯುಗದಲ್ಲಿ ಸಂಘದಲ್ಲಿಯೆ ಬಲವಿರುವುದೆಂಬ ನಿಯಮಾನುಸಾರ ಅನೇಕ ಸಂಘಸಂಸ್ಥೆಗಳು ತಲೆ ಎತ್ತುತ್ತವೆ. ಶಿವಸೇನೆ, ಕನ್ನಡಸೇನೆ ಇತ್ಯಾದಿ. ತಮ್ಮ ಕಾರ್ಯವನ್ನು ಈ ಪ್ರತ್ಯೇಕತೆಯಿಂದ ಮಾಡುತ್ತವೆ.

ಬೇರೆಯವರು ಆಕ್ರಮಣದಿಂದಾಗಿ ತಾವು ವಾಸಿಸುವ ಪ್ರದೇಶವನ್ನು ತೊರೆಯಬೇಕಾಗಿ ಅನ್ಯತ್ರ ವಾಸಿಸುವರು. ಇದು ಕಲಿ ಪ್ರಭಾವ.

ಅಂತಹ ದುರ್ದಿನಗಳಲ್ಲಿ ಹಸಿವೆಯಿಂದ ಪೀಡಿತರಾದ ಜನರು ತಮ್ಮ ಕುಮಾರರನ್ನು ಹೆಗಲ ಮೇಲೆ ಹಾಕಿಕೊಂಡು ಕೌಶಿಕೀ ನದಿ ಉಪಲಕ್ಷಿತ ನದಿಗಳನ್ನು ದಾಟಿ ದೂರ ಹೋಗುವರು.

**ಅಂಗಾನ್ ವಂಗಾನ್ ಕಲಿಂಗಾನ್ ಕಾಶ್ಮೀರಾನಸ ಮೇಕಲಾನ್ ।**
**ಋಷಿಕಾಂತಗಿರಿದ್ರೋಣೀಃ ಸಂಶ್ರಯಿಷ್ಯಂತಿ ಮಾನವಾಃ ॥ 11 ॥**

ತಮ್ಮ ದೇಶಬಿಟ್ಟು ಹೊರಟ ಮಾನವರು ತಮ್ಮ ಜೀವನಕ್ಕಾಗಿ ಅಂಗವಂಗ ಕಾಶ್ಮೀರಾದಿ ದೇಶಗಳಿಗೆ ವಲಸೆ ಹೋಗುವರು. ಪರ್ವತ ಕಣಿವೆಗಳಲ್ಲಿ ವಾಸಿಸುವರು. ಗೋಧಿ, ಬಾರ್ಲಿ ಹೆಚ್ಚು ಬೆಳೆಯುವ ಪ್ರದೇಶಗಳಿಗೆ ಹೋಗಿ ಸೇರುವರು. **[ಗೋಧೂಮಾನ್ನ ಯವಾನ್ನಾಢ್ಯಾನ್ ದೇಶಾನ್ ಯಾಸ್ಯಂತಿ]**

ಜನರು ಉದರಂಭರಿಗಳಾಗಿ ಮ್ಲೇಂಛ ಜನರೊಂದಿಗೆ ಸೇರಿಕೊಂಡು ಗುಂಪುಗುಂಪಾಗಿ ಹಿಮಾಲಯ ಪಾರ್ಶ್ವ, ಉಪ್ಪುಸಮುದ್ರ ತೀರ, ಅರಣ್ಯಗಳಲ್ಲಿ ವಾಸಿಸುವರು.

**ಗೋಪ್ತಾರಶ್ಚಾಪ್ಯಗೋಪ್ತಾರಃ**

ಆರರಕ್ಷಕದಳವು ಅರಕ್ಷಕದಳವಾಗಿಯೂ, ಶಸ್ತ್ರಗಳನ್ನು ಹಿಡಿದಿದ್ದರೂ ಯಾರನ್ನೂ ರಕ್ಷಿಸುವುದಿಲ್ಲ. ಹೀಗಾಗಿ ಭೂಮಿ ಜನರಿಂದ ಶೂನ್ಯರಂತೆ ತೋರಿದರೂ ಆ ಭೂಮಿಯಲ್ಲಿ ಮತ್ತ್ಯಾರೊ ಇರುತ್ತಾರೆ. ಹೀಗಾಗಿ ಜನರಿಂದ ಪೂರ್ಣವೋ ಶೂನ್ಯವೋ ತಿಳಯುವುದಿಲ್ಲ. [**ನೈವ ಶೂನ್ಯಾ ನ ಚಾಶೂನ್ಯಾ ವಸುಂಧರಾ**]

ಕಲಿಯುಗದ ಜನರು ಧರ್ಮಭ್ರಷ್ಟರಾಗಿ ಹಸಿವೆ ನೀಗಿಸಿಕೊಳ್ಳಲು ಮೃಗ, ಮೀನು, ಪಕ್ಷಿ, ಪ್ರಾಣಿಗಳು, ಸರ್ಪ, ಕೀಟ, ಮಧು, ತರಕಾರಿ, ಹಣ್ಣು, ಕಂದಮೂಲಗಳು ಹೀಗೆ ಸರ್ವಭಕ್ಷಕರಾಗುವರು. [ಚೀನಾದವರು ಇದಕ್ಕೆ ದೃಷ್ಟಾಂತ]

ಇದಕ್ಕಾಗಿ ಕುರಿ, ಆಡು, ಕತ್ತೆ, ಒಂಟೆ ಮೊದಲಾದ ಪ್ರಾಣಿಗಳನ್ನು ಗೂಟಕ್ಕೆ ಕಟ್ಟಿ ಹಾಕಿ ಸಾಕುತ್ತಾರೆ. [**ಅಜೈಡಕಂ ಖರೋಷ್ಟ್ರಂ ಚ ಪಾಲಯಿಷ್ಯಂತಿ**]

ನದಿಯ ತೀರಕ್ಕೆ ಹೋಗಿ ಅಲ್ಲಿಯೆ ವಾಸವಾಗಿದ್ದು ದೂರಾಲೋಚನೆಯೆಂಬ ದುರಾಲೋಚನೆಯಿಂದಾಗಿ ಸ್ವತಂತ್ರವಾಗಿ ಹರಿಯುತ್ತಿರುವ ನದಿಗಳಿಗೆ ಸೇತುವೆ ಕಟ್ಟುತ್ತಾರೆ. ಬದರಿಯ ದಾರಿಯಲ್ಲಿ ಬರುವ ದೇವಪ್ರಯಾಗ ಚಮೋಲಿ ಮೊದಲಾದ ಪ್ರದೇಶ ಗಂಗೆಗೆ ಸೇತುವೆ ಕಟ್ಟಿದ್ದಾರೆ. ಇದರಿಂದ ಭೂಕುಸಿತ ನಿಶ್ಚಿತ. ಬೇಯಿಸಿದ ಅನ್ನಾದಿಗಳಿಗೆ ಪಣವಾಗಿ ಬೇಯಿಸದ ಧಾನ್ಯ ನೀಡುವುದು ಕಲಿಯ ಪ್ರಭಾವ. ತಮ್ಮ ದೇಹದಿಂದ ಜನಿಸಿದ ಮಕ್ಕಳೊಂದಿಗೆ ಜಗಳ, ಮೂಲಧನ ಪಡೆದು ಬಡ್ಡಿ, ಅಸಲು ನೀಡದೆ ಕಲಹಕ್ಕೆ ಬೀಳುತ್ತಾರೆ.

ಕೆಲವರಿಗೆ ಬಹು ಸಂತಾನವಿದ್ದರೆ ಮತ್ತೆ ಕೆಲವರಿಗೆ ಸಂತಾನವೆ ಇರುವುದಿಲ್ಲ. ಹುಟ್ಟಿದವರೂ ಕುಲದ ಲಕ್ಷಣ ಒಂದೂ ಇರುವುದಿಲ್ಲ. ಅತ್ಯಂತ ಹೀನ ಧರ್ಮ ಆಚರಣೆ, ಇದರಿಂದ ದುರ್ಬಲರು, ಕೃಶರೂ ರಜೋಗುಣ ಭೂಯಿಷ್ಠರು, ರೋಗಿಗಳೂ ಇವುಗಳಿಂದಾಗಿ ಆಯುಸ್ಸು ಕ್ಷೀಣಿಸುತ್ತದೆ.

**ಆಯುಸ್ತತ್ರ ಚ ಮರ್ತ್ಯಾನಾಂ ಪರಂ ತ್ರಿಂಶದ್ ಭವಿಷ್ಯತಿ ।**

ಅನ್ಯಾಯ ಮಾರ್ಗ ಹಿಡಿದ ಜನರ ಆಯುಸ್ಸು ಮುವ್ವತ್ತು ಇರುತ್ತದೆ. ಅಧರ್ಮವೃದ್ಧಿಯಾಗಿ ಆಯುಸ್ಸು ಕ್ಷೀಣಿಸುತ್ತಾ ಮುಂದೆ ಹನ್ನೆರಡು ವರ್ಷಕ್ಕಿಂತ ಅಧಿಕ ವರ್ಷ ಬದುಕಲಾರರು.

**ನಾತಿಜೀವತಿ ವೈ ಕಶ್ಚಿತ್ ಕಲೌ ವರ್ಷಾಣಿ ವಿಂಶತಿಃ ॥ 12 ॥**

ಕಲಿಯುಗದಲ್ಲಿ ತಮ್ಮ ಕಾಮನೆ ಪೂರೈಸಿಕೊಳ್ಳಲು ಧರ್ಮಶೀಲರ ಸನ್ಯಾಸಿಗಳ ವೇಷಧರಿಸಿ ಜನರನ್ನು ವಂಚಿಸುತ್ತಾರೆ. ಮಠ ಉಳಿಯಲೆಂದು ಸನ್ಯಾಸ ಹೊರತು ಮಠ ಉಳಿಸಲೆಂದಲ್ಲ.

**ಕಾಮಾನಾಂ ಅಲಾಭಾದ್ ಧರ್ಮಶೀಲಿನಃ ।**

ಅನಾರೋಗ್ಯ, ಕ್ಷೀಣಾಯುಸ್ಸು ಇತ್ಯಾದಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಕೆಲವು ಬುದ್ಧಿಜೀವಿಗಳು ಧರ್ಮಶ್ರವಣಕ್ಕಾಗಿ ಸಾಧು ಸಂತರ ಕಾಲು ಹಿಡಿಯುವರು. ಅವರು ಹಿರಿಯರ ಸೇವೆ, ದಾನ, ಸತ್ಯ, ಪ್ರಾಣರಕ್ಷಣೆ ಇವುಗಳಿಂದ ಧರ್ಮ ನಿಂತಿದೆ. ಇವುಗಳನ್ನು ನಾವು ರಕ್ಷಿಸಿದರೆ ಅವು ನಮ್ಮನ್ನು ರಕ್ಷಿಸುತ್ತವೆ ಎಂದು ಉಪದೇಶಿಸುವರು. ಈಗ ದುರಾಚಾರ ಸ್ವಲ್ಪ ಕಡಿಮೆಯಾಗುತ್ತದೆ. ಇದರಿಂದ ಧರ್ಮದ ಬಗ್ಗೆ ವಿಶೇಷ ಜಿಜ್ಞಾಸೆ ಮಾಡುತ್ತಾ ಈ ನಿಶ್ಚಯ ಹೊಂದುವರು.

ಹೇಗೆ ಧರ್ಮವು ನಾಶವಾಗುವುದೋ ಹಾಗೆಯೇ ಅನುಕ್ರಮವಾಗಿ ಧರ್ಮದ ವೃದ್ಧಿಯೂ ಆಗುತ್ತದೆ. ಹೀಗೆ ಧರ್ಮ ಪೂರ್ಣವಾಗಿ ತನ್ನದ್ದನ್ನಾಗಿ ಮಾಡಿಕೊಂಡಾಗ ಕೃತಯುಗ ಪ್ರಾರಂಭವಾಗುತ್ತದೆ.

**ಪ್ರಗೃಹೀತೇ ಯತೋ ಧರ್ಮೇ ಪ್ರಪತ್ಸ್ಯಂತಿ ಕೃತಂ ಯುಗಮ್ ।**

ಹೀಗೆ ಧರ್ಮದ ಹಾನಿ, ಪಾಷಂಡವೃದ್ಧಿ, ಸಜ್ಜನರಿಗೆ ನಾಶ, ಧರ್ಮೋದ್ಯೋಗ ಪ್ರಯತ್ನ ಹಾಳು, ಯಜ್ಞಾಗಳಿಗೆ ಸ್ವಾಮಿ ನಾರಾಯಣನನ್ನು ಯಜಿಸುವುದಿಲ್ಲವೋ ಆಗ ಕಲಿಕಾಲಾಭ್ಯುದಯವೆಂದು ತಿಳಿಯುವುದು.

ಹೇಗೆ ಚಂದ್ರನು ಒಬ್ಬನೆ ಆದರೂ ಕೆಲವು ದಿವಸ ಪ್ರಕಾಶಮಾನನು, ಕೆಲವು ದಿವಸ ಹೀನ ಪ್ರಕಾಶನೂ ಆಗಿರುವುನೋ ಹಾಗೆಯೆ ಒಂದೇ ಕಲಿಯುಗವು ಕೆಲವು ಕಾಲ ಸತ್ಯಯುಗವೂ ಕೆಲವು ಕಾಲ ಕಲಿಯುಗವೂ ಆಗಿರುತ್ತದೆ.

**ಧನ್ನೋ ಹಿ ತಮಸಾ ಸೋಮೋ ಯಥಾ ಕಲಿಯುಗೇ ತಥಾ ।**
**ಪೂರ್ಣಶ್ಚ ತಮಸಾ ಹೀನೋ ಯಥಾ ಕೃತಯುಗೇ ತಥಾ ॥ 13 ॥**

ಭಗವಂತನನ್ನು ತಿಳಿಸಿಕೊಡುವ ವೇದಗಳ ವಿಷಯ ಅರ್ಥವಾದವೆಂದು ಹೇಳುವರು. ವೇದದಲ್ಲಿ ಮುಖ್ಯಪ್ರತಿಪಾದ್ಯನಾದ ಶ್ರೀಹರಿಯು ಏಕೆ ಎಲ್ಲರಿಗೂ ಪ್ರಾಪ್ತನಾಗುವುದಿಲ್ಲವೆಂದರೆ ಅದಕ್ಕೆ ದುಷ್ಟಾಂತ ಕೊಡುವರು ಕೆಲವರು.

ತಂದೆಯು ಮಗನಿಗೆ ಒಂದು ಮಣ್ಣಿನಿಂದ ಮುಚ್ಚಿರುವ ಸುವರ್ಣ ನಾಣ್ಯವನ್ನು ನೀಡುವನು. ಅದರಲ್ಲಿ ಮಣ್ಣು ತುಂಬಿರುವವರೆಗೂ ಸುವರ್ಣವಿದ್ದರೂ ದರಿದ್ರನಾಗಿಯೆ ಇರುವನು. ಹಾಗೆಯೆ ಮನುಷ್ಯನ ಹೃದಯದಲ್ಲಿ ಮಾಲಿನ್ಯವಿದ್ದರೆ ಸುವರ್ಣವರ್ಣನಾದ ಭಗವಂತ ನಮ್ಮಲ್ಲಿಯೆ ಇದ್ದರೂ ಜ್ಞಾನ ದರಿದ್ರನೇ ಆಗಿರುವನು. ಶುದ್ಧಾಂತಃಕರಣನಾದಾಗ, ಮಲಿನತೆ ಹೋದಾಗ ಸುವರ್ಣ ಪಡೆಯುವಂತೆ ಹೇಮಾಂಗ ಶ್ರೀಹರಿಯು ಕಾಣಿಸಿಕೊಳ್ಳುವನು ಎಂದು.

ಚಂದ್ರನು ತಮೋಮಯ ರಾಹುವಿನಿಂದ ಆವೃತನಾದಂತೆ ಧರ್ಮವು ಇದ್ದರೂ ಆವೃತವಾಗಿರುತ್ತದೆ. ರಾಹು ಮುಕ್ತನಾದಾಗ ಪೂರ್ಣಪ್ರಕಾಶ ಹೊಂದುವಂತೆ ಕೃತಯುಗ ಪ್ರಾಪ್ತವಾದಾಗ ಧರ್ಮ ಬೆಳಗುತ್ತದೆ.

**ಇಷ್ಟವಾದಃ ತಪೋ ನಾಮ ತಪೋ ಹಿ ಸ್ಥಾವರಂ ಕೃತಮ್ ।**
**ಗುಣೈಃ ಕರ್ಮಭಿಃ ನಿವೃತ್ತಿಃ ಗುಣಾಃ ತಥ್ಯೇನ ಕರ್ಮಣಾ ॥ 14 ॥**

ವರ್ಣಾಶ್ರಮ ಯೋಗ್ಯವಾದ ತಪಸ್ಸು ಮೊದಲಾದವು ಸ್ವರ್ಗಾದ್ಯಭೀಷ್ಟವನ್ನು ನೀಡುತ್ತದೆ. ಇದು ಅನ್ವಯ ವ್ಯತಿರೇಕ ಸಿದ್ಧವೆಂದು ಶಾಸ್ತ್ರ ತಿಳಿಸಿವೆ. ಇಂತಹ ಭಗವದ್ಭಕ್ತಿ ಸಹಿತ ಕರ್ಮಾನುಷ್ಠಾನಗಳಿಂದ ಪುನರಾವೃತ್ತಿ ಮೋಕ್ಷವು. ಶಾಸ್ತ್ರೋಕ್ತ ನಿಷ್ಕಾಮ ಕರ್ಮಗಳಿಂದಲೇ ಅಂತಃಕರಣ ಶುದ್ಧಿಯಾಗಿ ಭಕ್ತ್ಯಾದಿ ಗುಣಗಳನ್ನು ಪಡೆಯಬೇಕು. ಇದಕ್ಕಾಗಿ ಶ್ರೀಹರಿಯನ್ನೇ ಶರಣು ಹೊಂದಬೇಕು.

ಕರ್ಮವೊಂದೇ ಆಗಿದ್ದರೂ ಕರ್ಮಗಳ ಗತಿ ಗಹನವಾದ್ದರಿಂದ ಕರ್ಮದಲ್ಲಿ ವೈಚಿತ್ರವಿರುವಂತೆ ಆಚರಣೆಯಲ್ಲಿಯೂ ವೈಚಿತ್ರವೆ ಇರುತ್ತದೆ. ಶ್ರದ್ಧಾದಿಗಳಲ್ಲಿ ತಾರತಮ್ಯವಿರುವುದರಿಂದ ಕರ್ಮದ ಫಲದಲ್ಲಿ ತಾರತಮ್ಯವಿರಲೇಬೇಕಷ್ಟೆ.

ಈ ಮನುಷ್ಯಲೋಕದಲ್ಲಿಯೂ ಸಹ ಧರ್ಮ ಅರ್ಥ ಕಾಮಕ್ಕೆ ಸಂಬಂಧಿಸಿದಂತೆ ಕರ್ಮ ಶ್ರದ್ಧೆಗಳಲ್ಲಿ ವೈಚಿತ್ರ್ಯವಿರುವುದರಿಂದಲೇ ನಮಗೆ ದೇವತೆಗಳು ಪ್ರತಿಕ್ರಿಯೆ ಮಾಡುವುದೂ ತಾರತಮ್ಯದಿಂದಲೆ ಹೊರತು ಒಂದೇ ರೀತಿಯಾಗಿಯಲ್ಲ.

ಬಹಳ ಹಿಂದಿನಿಂದಲೂ ಅವರವರ ಸ್ವಭಾವಕ್ಕೆ ಅನುಗುಣವಾಗಿಯೇ ದೇವತಾರಾಧನೆಯನ್ನು, ಶುಭಕರ್ಮಗಳನ್ನು ಮಾಡುವರು. ಇದು ನಾಲ್ಕೂ

ಯುಗಗಳಲ್ಲಿಯೂ ಸಮಾನವೆ. ಆಯಾಯ ಯುಗದಲ್ಲಿರುವ ಜನರು ಅವರ ಶ್ರದ್ಧೆಯಂತೆ ಕರ್ಮಾದಿಗಳನ್ನು ಮಾಡಿದಾಗ ದೇವದೇವನೂ ಸಹ ಶ್ರದ್ಧೆಯಂತೆ ಫಲ ನೀಡುವನು.

**ಕ್ಷಣಂ ನ ಸಂತಿಷ್ಠತಿ ಜೀವಲೋಕಃ ಯಥಾಯುಗಾನಾಂ ಪರಿವರ್ತನಾನಿ॥15॥**

ಹೀಗೆ ಯುಗಗಳು ಒಂದಾದ ಮೇಲೆ ಒಂದು ಸರಿಯುತ್ತಿರುತ್ತದೆ. ಈ ಜೀವ ಸಮುದಾಯವೂ ಕ್ಷಯ-ಅಭಿವೃದ್ಧಿಗಳಿಂದ ತಿರುಗುತ್ತಿರುತ್ತದೆ. ಈ ಸಂಸಾರ ಕ್ಷಣಕಾಲವಾದರೂ ಸ್ಥಿರವಾಗಿ ನಿಂತಿರುವುದಿಲ್ಲ.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಕಲಿಯುಗ ವರ್ಣನೆ ಎಂಬಲ್ಲಿ
ನಾಲ್ಕನೆಯ ಅಧ್ಯಾಯವು ಸಮಾಪ್ತಿ

# ಭವಿಷ್ಯ ಪರ್ವ 05 ಭವಿಷ್ಯ ಪರ್ವ

## ಅಥ ಪಂಚಮೋऽಧ್ಯಾಯಃ

*ಸೂತ ಉವಾಚ –*

**ಇತ್ಯೇವಮಾಶ್ವಾಸಯತೋ ರಾಜಾನಂ ಜನಮೇಜಯಮ್ ।**
**ಅತೀತಾನಾಗತಂ ವಾಕ್ಯಂ ಋಷೇಃ ಪರಿಷದಾ ಶ್ರುತಮ್ ॥ 1 ॥**

ಸೂತರು ಶೌನಕಾದಿಗಳಿಗೆ ಶೌನಕರೆ! ಜನಮೇಜಯನಿಗೆ ಭೂತ-ಭವಿಷ್ಯತ್‌ಗಳ ಸಂಬಂಧವಾಗಿ ವ್ಯಾಸರು ಹೇಳಿದ ಮಾತುಗಳನ್ನೆಲ್ಲ ಸದಸ್ಯರೆಲ್ಲರೂ ಕೇಳಿದರು. ವ್ಯಾಸರ ಸರ್ವಜ್ಞತ್ವವನ್ನು ಕೊಂಡಾಡಿದರು.

ವ್ಯಾಸದೇವನ ಈ ಮಾತುಗಳೆಲ್ಲವೂ ಅಮೃತಪ್ರವಾಹ ಹರಿದು ಬಂದಂತ್ತಿತ್ತು. ಚಂದ್ರಮನ ಚಂದ್ರಿಕೆಯಂತೆ ಆಹ್ಲಾದಕರವಾಗಿತ್ತು. ಸರ್ವರ ಶ್ರೋತ್ರೇಂದ್ರಿ-ಯಗಳೂ ತೃಪ್ತಿವುಂಟು ಮಾಡಿತ್ತು.

ಅವರ ಮಾತುಗಳು ಧರ್ಮಾದಿ ಚತುರ್ವಿಧ ಪುರುಷಾರ್ಥಯುಕ್ತವೂ ವೀರರಿಗೆ ಹರ್ಷಣದಾಯಕವೂ, ರಮಣೀಯವೂ ಆಗಿತ್ತು.

ವ್ಯಾಸರು ಭೂತ ಭವಿಷ್ಯಗಳ ವರ್ತಮಾನಗಳನ್ನು ಕರತಲಾಮಲಕದಂತೆ ನೋಡಿ ತಿಳಿಸಿದ್ದರು. ಇದರಲ್ಲಿ ಯಾವ ಉತ್ಪ್ರೇಕ್ಷೆಯೂ ಇರಲಿಲ್ಲ. ಕೆಲವರು ಈ ಆಖ್ಯಾನ ಕೇಳಿ ಕಣ್ಣೀರನ್ನು ಸುರಿಸಿದರು. [**ಅಶ್ರೂಣೀ ಮುಮುಚುಃ**]

ವ್ಯಾಸರು ಚಿತ್ತರಿಸಿದ ಇತಿಹಾಸವು ಕೈಯಲ್ಲಿಟ್ಟುಕೊಂಡು ತೋರಿಸಿದಂತೆಯೇ ಇತ್ತು. ನಂತರ ವ್ಯಾಸರು ಸದಸ್ಯರಿಗೆ ಹೋಗಿ ಬರುತ್ತೇನೆ. ಪುನಃ ನೋಡೋಣವೆಂದು ಹೇಳಿ ಹೊರಟು ಹೋದರು.

ಪುನರ್ದ್ರಕ್ಷ್ಯಾಮಿ ಇತ್ಯುಕ್ತ್ವಾ ಜಗಾಮ ಭಗವಾನ್ ಋಷಿಃ ।

ತಪೋಧನರೆಲ್ಲರೂ ವ್ಯಾಸರನ್ನು ಅನುಸರಿಸಿ ಹೋದರು. ನಂತರ ರಾಜರು, ಋತ್ವಿಕ್ಕುಗಳೂ ಸಹ ತಾವು ಬಂದಲ್ಲಿಗೆ ಹೊರಟು ಹೋದರು.

ರಾಜನು ಘೋರಸರ್ಪಗಳಿಗೆ ಸರ್ಪಮೇಧ ಮಾಡಿ ಪ್ರತಿಕಾರ ಮಾಡಿ ವಿಷವನ್ನು ಕಳೆದುಕೊಂಡ ಸರ್ಪದಂತೆ ರೋಷವನ್ನು ತ್ಯಾಗ ಮಾಡಿ ಶಾಂತನಾಗಿ ಊರಿಗೆ ಹೊರಟ.

ಜಗಾಮ ರೋಷಮುತ್ಸೃಜ್ಯ ರಾಜಾ ವಿಷಮಿವೋರಗಃ ॥ 2 ॥

ಅಗ್ನಿಯಲ್ಲಿ ಬಿದ್ದ ತಕ್ಷಕನ ಶಿರಸ್ಸು ಸುಟ್ಟು ಗಾಯಗಳಾಗಿತ್ತು. ಆಸ್ತೀಕನು ಇವನನ್ನು ರಕ್ಷಿಸಿದ ನಂತರ ತಾನೂ ಹೊರಟು ಹೋದನು.

### ರಾಜನ ಅಶ್ವಮೇಧಯಾಗ

ಕೆಲವು ಕಾಲಾ ನಂತರ ಜನಮೇಜಯನು ಅಶ್ವಮೇಧ ಯಾಗದಲಿ ದೀಕ್ಷೆಗೊಂಡನು. ಋತ್ವಿಜಾದಿಗಳಿಗೆ ಭೂರಿದಕ್ಷಿಣೆ ನೀಡಿದನು. ಅಶ್ವಮೇಧದ ವಿಧಿಯಂತೆ ಕುದುರೆಯನ್ನು ಕೊಂದು ಆ ಸತ್ತ ಕುದುರೆಯ ಬಳ ಯಜಮಾನನ ಪತ್ನಿ ಮಲಗಬೇಕು. ಅದರಂತೆ, ಕಾಶೀರಾಜನ ಪುತ್ರಿಯೂ ಜನಮೇಜಯನ ಪತ್ನಿಯೂ ಆದ 'ವಪುಷ್ಟಮೆ'ಯು ಸತ್ತ ಕುದುರೆಯ ಪಕ್ಕದಲ್ಲಿಯೆ ಮಲಗಿದ್ದಳು.

ಸಂಜ್ಞಪ್ತಮಶ್ವಂ ತತ್ರಾಶ್ಯ ದೇವೀ ಕಾಶ್ಯಾ ವಪುಷ್ಟಮಾ ।
ಸಂವಿವೇಶಾಥ ... ॥ 3 ॥

### ಇಂದ್ರನ ಬಯಕೆ ಪೂರ್ತಿ

ಇಂದ್ರದೇವನು ಸರ್ವಾಂಗ ಸುಂದರಿಯಾದ ವಪುಷ್ಟಮೆಯನ್ನು ಬಯಸಿದ್ದನು. ಇದೇ ತನ್ನ ಬಯಕೆ ಪೂರ್ಣವಾಗುವ ಕಾಲವೆಂದು ಕುದುರೆಯಲ್ಲಿ ಸೇರಿ, ವಪುಷ್ಟಮೆಯನ್ನು ಭೋಗಿಸಿದನು.

ತಾಂ ತು ಸರ್ವಾನವದ್ಯಾಂಗೀಂ ಚಕಮೇ ವಾಸವಸ್ತದಾ ।
ಸಂಜ್ಞಪ್ತಮಶ್ವಮಾವಿಶ್ಯ ತಯಾ ಮಿಶ್ರೀಬಭೂವ ಸಃ ॥ 4 ॥

### ರಾಜನಿಂದ ಇಂದ್ರನಿಗೆ ಶಾಪ

ಅಶ್ವದಲ್ಲಿ ವಿಕಾರವನ್ನು ನೋಡಿದ ಜನಮೇಜಯನು ಅಧ್ವರ್ಯವನ್ನು ಕೇಳಿದ.

ನೀವು ಯಜ್ಞಾಶ್ವವನ್ನು ಕೊಂದೆ ಇಲ್ಲ. ಹಾಗಿಲ್ಲದಿದ್ದರೆ ಕುದುರೆಯಲ್ಲಿ ಈ ವಿಕಾರ ಹೇಗಾಯಿತು ಹೇಳಿ ಎಂದು ಗುಡುಗಿದ.

**ಅಸಂಜ್ಞಪ್ತೋಽಯಮಶ್ವಸ್ತೇ ಧ್ವಂಸೇತ್ಯಧ್ವರ್ಯುಮಬ್ರವೀತ್ ।**

ಜ್ಞಾನಸಂಪನ್ನ ಅಧ್ವರ್ಯುವು ನನ್ನನ್ನೆ ಧ್ವಂಸ ಎಂದು ನಿಂದಿಸಿದ ರಾಜನನ್ನು ಕುರಿತು ರಾಜನೆ! ಇದೆಲ್ಲ ಇಂದ್ರದೇವನ ಕಪಟ ಎಂದು ಅಂತರ್ದೃಷ್ಟಿಯಿಂದ ತಿಳಿದು ಹೇಳಿದ.

ಕೂಡಲೇ ರಾಜನು ಇಂದ್ರದೇವನಿಗೆ ಶಾಪ ನೀಡಿದನು.

ನಾನೇನಾದರೂ ಯಜ್ಞ ಯಾಗಾದಿಗಳನ್ನು ಮಾಡಿದ್ದರೇ, ಪ್ರಜೆಗಳನ್ನು ರಕ್ಷಣೆ ಮಾಡಿದ್ದು ನಿಜವಾದರೆ, ತಪಸ್ಸಿನಿಂದೇನಾದರೂ ಪುಣ್ಯವಿದ್ದರೆ, ಆ ಪುಣ್ಯವನ್ನು ಒತ್ತೆ ಇಟ್ಟು ಹೇಳುತ್ತಿರುವೆ, ಕೇಳಿರಿ,

**ಅದ್ಯಪ್ರಭೃತಿ ದೇವೇಂದ್ರ ಮಜಿತೇಂದ್ರಿಯಮಸ್ಥಿರಮ್ ।**
**ಕ್ಷತ್ರಿಯಾ ವಾಜಿಮೇಧೇನ ನ ಯಕ್ಷ್ಯಂತೀತಿ ಶೌನಕ ॥ 5 ॥**

ಇಂದಿನಿಂದಾರಂಭಿಸಿ ಕ್ಷತ್ರಿಯರು ಅಜಿತೇಂದ್ರಿಯನಾದ ಚಂಚಲ ಮನಸ್ಕನಾದ ಇಂದ್ರನನ್ನು ಉದ್ದೇಶಿಸಿ ಅಶ್ವಮೇಧ ಯಜ್ಞದ ಮೂಲಕವಾಗಿ ಪೂಜಿಸುವುದಿಲ್ಲ ಎಂದು ಶಪಿಸಿದನು.

### ಋತ್ವಿಜರಿಗೆ ದೇಶೋಚ್ಚಾಟನೆ

ಶೌನಕರೇ, ಜನಮೇಜಯನು ಇಂದ್ರನಿಗೆ ಶಾಪ ಕೊಟ್ಟು ನಂತರ ಅತ್ಯಂತ ರುಷ್ಟನಾಗಿ ಋತ್ವಜರಿಗೂ ಹೀಗೆಂದನು.

ಇಂದು ನನ್ನ ಈ ಯಜ್ಞ ಹಾಳಾದದ್ದು ನಿಮ್ಮ ಅಜಾಗರೂಕತೆಯಿಂದಾಗಿ ಇದು ನಿಮ್ಮ ದೌರ್ಬಲ್ಯವಾಗಿದೆ. ಆದ್ದರಿಂದಾಗಿ ನೀವು ನನ್ನ ರಾಜ್ಯದಲ್ಲಿರಬೇಡಿರಿ. ನನ್ನ ದೇಶ ಬಿಟ್ಟು ಹೋಗಿರಿ ಎಂದನು.

### ಋತ್ವಿಜರಿಗೆ ಉಚ್ಚಾಟನೆ

**ವಿಷಯೇ ಮೇ ನ ವಸ್ತವ್ಯಂ ಗಚ್ಛಧ್ವಂ ಸಹ ಬಾಂಧವೈಃ ।**

ಹೀಗೆಂದಾಗ ನಿಷ್ಕಾರಣದಿಂದಾಗಿ ತಮ್ಮನ್ನು ದೂಷಿಸಿದ್ದರಿಂದ ಕೋಪಗೊಂಡು ಅವನ ದೇಶ ಬಿಟ್ಟು ಹೊರಟು ಹೋದರು.

**ಪತ್ನಿಗೆ ಬಹಿಷ್ಕಾರ**

ಜನಮೇಜಯನು ಮಹಾಧರ್ಮಿಷ್ಠನಾಗಿದ್ದರೂ ಕ್ರೋಧವಶ ದೈತ್ಯರಿಂದ ಆವಿಷ್ಟನಾಗಿ ಏನೂ ಅರಿಯದ ವಪುಷ್ಟಮೆಗೂ ಈ ಪಾಪಿಷ್ಠಳನ್ನು ಅರಮನೆಯಿಂದ ಹೊರಗೆ ಹಾಕಿರಿ. ಇವಳು ತನ್ನ ಕೆಸರು ಗಾಲಿನಿಂದ ನನ್ನ ತಲೆ ತುಳಿದಿರುವಳು ಎಂದು ಆದೇಶಿಸಿದನು.

**ಅಸತೀಂ ವಪುಷ್ಟಮಾಮೇತಾಂ ನಿರ್ಯಾತಯತ ಮೇ ಗೃಹಾತ್ ।**
**ಯಯಾ ಮೇ ಚರಣೌ: ಮೂರ್ಧ್ನಿ ಪಾತಿತೌ ರೇಣುಗುಂಠಿತೌ ॥ 6 ॥**

ಇವಳಿಂದ ನನ್ನ ಕೀರ್ತಿ, ಮಹತ್ವ ಮಾನ್ಯಾದಿಗಳೆಲ್ಲ ಮಣ್ಣುಗೂಡಿದವು. ಬಾಡಿ ಮುದುಡಿ ಹೋದ ಹೂವಿನ ಹಾರವನ್ನು ತಿರಸ್ಕರಿಸುವಂತೆ ನಾನಿವಳನ್ನು ತಿರಸ್ಕರಿಸುವೆ. ನಾಯಿ ಮುಟ್ಟಿದ ಹವಿಸ್ಸಿನಂತೆ ಪರಪುರುಷನ ಸಂಗಮದಿಂದ ಅಪವಿತ್ರಳಾದ ಇವಳೊಡನೆ ಪುನಃ ಸಮಾಗಮ ಬಯಸಲಾರೆನು. ಪರಪುರುಷ ಭೋಗಿತ ತನ್ನ ಸ್ತ್ರೀಯನ್ನು ಹೊಂದಿರುವವನು. ಅನ್ನವನ್ನು ವಿಷದಂತೆ ತಿನ್ನಲಾರ, ಏಕಾಂತದಲ್ಲಿ ಅವಳೊಂದಿಗೆ ಇರಲಾರ.

**ನ ಸ್ವಾದು ಸೋಽಶ್ನಾತಿ ನರಃ ಸುಖಂ ಸ್ವಪಿತಿ ವಾ ರಃ ।**
**ಪುನಃ ನೈವೋ ಪಭುಂಜೀತ ಶ್ವಾವಲೀಢಂ ಹವಿರ್ಯಥಾ ॥ 7 ॥**

ಹೀಗೆ ಕೋಪದಿಂದ ಕೂಗಾಡುತ್ತಿರುವ ರಾಜನನ್ನು ನೋಡಿದ ಗಂಧರ್ವ ರಾಜನಾದ ವಿಶ್ವಾವಸುವು ಹೀಗೆಂದನು.

ರಾಜನೇ ! ನೀನು ಮುನ್ನೂರು ಯಜ್ಞಗಳನ್ನು ಮಾಡಿರುವಿ. ಇದಕ್ಕಾಗಿಯೆ ನಿನ್ನ ಉತ್ಕರ್ಷವನ್ನು ಸಹಿಸುತ್ತಿಲ್ಲ. ಇದಕ್ಕಾಗಿಯೇ ಇಂದ್ರನು ಒಬ್ಬ ಅಪ್ಸರಾಸ್ತ್ರೀಯನ್ನೆ ನಿನ್ನ ಪತ್ನಿ ವಪುಷ್ಟಮೆಯನ್ನಾಗಿ ಮಾಡಿ ನಿನ್ನ ಪತ್ನಿಯನ್ನಾಗಿ ಮಾಡಿದನು. ನೀನು ಯಾರನ್ನು ಕಾಶೀರಾಜನ ಪುತ್ರಿಯಾದ ವಪುಷ್ಟಮೆಯನ್ನಾಗಿ ತಿಳಿದಿರುವೆಯೋ ಅವಳು ರಂಭಾಯೆಂಬ ಅಪ್ಸರಾ ಸ್ತ್ರೀಯಾಗಿರುವಳು. ಇವಳ ಮೂಲಕ ನಿನ್ನ ಯಜ್ಞ ಪೂರ್ಣವಾಗದಂತೆ ಮಾಡಿರುವನು.

**ರಂಭಾ ನಾಮಾಪ್ಸರಾ ದೇವೀ ಕಾಶೀರಾಜಸುತಾ ಮತಾ ।**

ವಪುಷ್ಟಮೆಯಾದರೂ ಸ್ತ್ರೀ ರತ್ನವಾಗಿದ್ದು ಇವಳನ್ನು ಉಪಭೋಗಿಸು.

ನೀನಾದರು ಯಜ್ಞ ಕರ್ತೃವಾಗಿದ್ದು ಐಶ್ವರ್ಯಾದಿ ಸಮೃದ್ಧಿಯಲ್ಲಿ ಇಂದ್ರನಿಗೇನು ಕಡಮೆ ಇಲ್ಲ. **[ಸಮೃದ್ಧ್ಯಾ ವಾಸವೋಪಮಃ]**

ನಿನ್ನ ಯಜ್ಞಗಳ ಫಲಾಧಿಕ್ಯದಿಂದಾಗಿ ಇಂದ್ರನು ನಿನ್ನ ಬಗ್ಗೆ ಭಯ ಪಟ್ಟಿದ್ದಾನೆ. ನಿನ್ನ ಯಜ್ಞಕ್ಕೆ ಭಂಗ ತಂದವನು ಇಂದ್ರನೆ ಹೊರತು ಬೇರಾರು ಕಾರಣರಲ್ಲ. ವಿಘ್ನವುಂಟು ಮಾಡಲೆಂದೆ ಕಪಟತಂತ್ರ ಹೂಡಿರುವನು. ಕುದುರೆ ಸತ್ತು ಹೋಗಿತ್ತು. ಅದರಲ್ಲಿ ಸೇರಿದ ಇಂದ್ರನು ರಂಭೆಯೊಂದಿಗೆ ರಮಿಸುತ್ತಿದ್ದ. ಆ ರಂಭೆಯನ್ನೆ ನಿನ್ನ ಪತ್ನಿಯೆಂದು ತಿಳಿದಿರುವೆ ಕೋಪದಿಂದಾಗಿ ಮುನ್ನೂರು ಅಶ್ವಮೇಧಯಾಗ ಮಾಡಿಸಿದ್ದ ಗುರುಪ್ರಾಯರಾದ ಬ್ರಾಹ್ಮಣರಿಗೂ ಶಾಪವಿತ್ತೆ. ನೀನೂ ಭ್ರಷ್ಟನಾಗಿ ಇತರ ಬ್ರಾಹ್ಮಣರೂ ಭ್ರಷ್ಟರಾದರೂ. **[ಭ್ರಂಶಿ ತಸ್ತ್ವಂ ಚ ವಿಪ್ರಾಶ್ಚ]**

ತ್ರಿಶತಯಜ್ಞ ಮಾಡಿದ ನಿನ್ನಿಂದ ಹಾಗೂ ಮಾಡಿಸಿದ ಬ್ರಾಹ್ಮಣರಿಂದಲೂ ಭಯಪಡುತ್ತಿದ್ದ ಇಂದ್ರದೇವನು ಮಾಯಾ ಪ್ರಯೋಗದಿಂದ ಎರಡೂ ಬಗೆಯು ಭಯವು ದೂರವಾಯಿತು.

**ಏಕೇನವೈ ತದುಭಯಂ ತೀರ್ಣಂ ಶಕ್ರೇಣ ಮಾಯಯಾ ॥ 8 ॥**

ನಿನ್ನ ಮೇಲೆ ವಿಜಯ ಸಾಧಿಸಲಿಚ್ಛಿಸಿದ ಮಹಾತೇಜೋವಂತನಾದ ಪುರಂದರನು ಬೇರೆ ಯಾರೂ ಮಾಡಲಾಗದ ತನ್ನ ಮೊಮ್ಮಗನ ಪತ್ನಿಯನ್ನು ಅವನು ಹೇಗೆ ತಾನೇ ಭೋಗಿಸಿಯಾನು?

**ಕಥಮನ್ಯೈರನಾಚೀರ್ಣಂ ನಪ್ತುಃ ದಾರಾನ್ ಅತಿಕ್ರಮೇತ್ ॥ 9 ॥**

ಹೇಗೆ ಇಂದ್ರನಲ್ಲಿ ಉತ್ಕೃಷ್ಟ ಬುದ್ಧಿಮತ್ತತೆ, ಉತ್ಕೃಷ್ಟಧರ್ಮ, ಇಂದ್ರಿಯ ನಿಗ್ರಹ, ಪರಮೈಶ್ವರ್ಯಗಳು ಇವೆಯೋ ಹಾಗೆಯೇ ಇವೆಲ್ಲವೂ ನಿನ್ನಲ್ಲಿಯೂ ಇವೆ.

ಆದ್ದರಿಂದ ರಾಜನೇ! ನೀನು ಇಂದ್ರನನ್ನಾಗಲೀ, ಪುರೋಹಿತ-ವರ್ಗ-ವನ್ನಾಗಲೀ, ನಿನ್ನನಾಗಲಿ, ವಪುಷ್ಟಮೆಯನ್ನಾಗಲೀ ದೂಷಿಸಬೇಡ. ಇದಕ್ಕೆಲ್ಲ ಕಾಲನಾಮಕ ಭಗವಂತನೆ ಕಾರಣ. ಅವನಿಚ್ಛೆ ಮೀರುವುದು ಅಸಾಧ್ಯ. **[ಕಾಲೋ ಹಿ ಸರ್ವಥಾ ದುರತಿಕ್ರಮಃ]**

ಆದ್ದರಿಂದ ಸುಖಾಪೇಕ್ಷಿಯು ದೇವತೆಗಳ ವಿರುದ್ಧ ಹೋಗದೆ ಅವರಿಗೆ ಅನುಕೂಲವಾಗಿರಬೇಕು.

ಪ್ರವಾಹಕ್ಕೆ ಎದುರಾಗಿ ಈಸುವುದು ಅಸಾಧ್ಯ. ಪ್ರತಿಕೂಲ ದೇವತೆಗಳಿಂದ ಪಾರಾಗುವುದು ಅಸಾಧ್ಯ.

ನಿರಪರಾಧಿಯಾದ ಸ್ತ್ರೀಯರನ್ನು ಪರಿತ್ಯಾಗ ಮಾಡಬಾರದು. ಹಾಗಾದಲ್ಲಿ ಸ್ತ್ರೀಯರೂ ನಿರಪರಾಧಿಗಳಾದ ಗಂಡಂದಿರನ್ನು ಬಿಟ್ಟಾರು. ಪ್ರೀಯರಾದರೂ ಪ್ರಾಯ ದುಷ್ಟಭಾವದಿಂದಿರುವುದಿಲ್ಲ. ದೈವಿಭಾವವನ್ನು ಹೊಂದಿರುತ್ತಾರೆ.

ಪತಿವ್ರತಾ ಸ್ತ್ರೀಯರು ಲಕ್ಷ್ಮೀ ಸನ್ನಿಧಾನ ವಿಶೇಷವುಳ್ಳವರು. ಇದು ಜ್ಞಾನಿಗಳ ಮತವು. ಆದ್ದರಿಂದ ಅವರ ಲಾಲನೆ, ಪಾಲನೆ ಪ್ರೀತಿ ಮಾಡಲು ಯೋಗ್ಯರಾಗಿರುತ್ತಾರೆ. ಹೀಗಾಗಿ ಸರ್ವರಿಂದಲೂ ಆದರಣೀಯರು. ಅವರಿಗೆ ಅಗೌರವ ಮಾಡಬಾರದು ಎಂದನು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ವಿಶ್ವಾವಸು ಗಂಧರ್ವನಿಂದ ಯಥಾರ್ಥ ಸ್ಥಿತಿ ವರ್ಣನೆ ಎಂಬಲ್ಲಿ
ಐದನೆಯ ಅಧ್ಯಾಯವು ಸಮಾಪ್ತಿ

# ಅಥ ಷಷ್ಠೋಽಧ್ಯಾಯಃ

## ಜನಮೇಜಯನ ಸಂತಪ್ತಿ

**ಏವಂ ಸ ವಿಶ್ವಾವಸುನಾನು ನೀತಃ ಪ್ರಸಾದಮಾಗಮ್ಯ ವಪುಷ್ಟಮಾಯಾಃ ।**
**ಚಕಾರ ಮಿಥ್ಯಾ ವ್ಯತಿಶಂಕಿತಾತ್ಮಾ ಶಾಂತಿಂ ಪರಾಂ ಮಾನವ**
**ಧರ್ಮಹೃಷ್ಟಾಮ್ ॥ 1 ॥**

ಸೂತರು ಶೌನಿಕರಿಗೆ – ಮುನಿಗಳೇ! ಹೀಗೆ ವಿಶ್ವಾವಸು ಗಂಧರ್ವನಿಂದ ನಿಜಸ್ಥಿತಿ ತಿಳಿದ ರಾಜನು ವಪುಷ್ಟಮೆಯ ಮೇಲಿದ್ದ ಸಂಶಯಬಿಟ್ಟು, ಅವಳನ್ನು ಸಮಾಧಾನ ಮಾಡಿದನು. ಮಾನವಧರ್ಮಾಚರಣೆಯಿಂದ ರಾಜನು ಸುಖಶಾಂತಿಗಳಿಂದಿದ್ದನು.

ನಂತರ ರಾಜನು ಮಾನಸಿಕ ದೂರ ಮಾಡಿಕೊಂಡು, ವಿಶೇಷ ಯಶಃ ಸಂಪಾದನೆ ಮಾಡಲು ಪ್ರಜೆಗಳನ್ನು ರಾಜ್ಯವನ್ನೂ ಧರ್ಮದಿಂದ ಪಾಲಿಸುತ್ತಿದ್ದನು. ವಪುಷ್ಟಮೆಯೊಂದಿಗೆ ವಿಹರಿಸುತ್ತಾ ಇದ್ದನು. **[ಮುದಿತಮನಾಃ ರಮಯನ್ ವಪುಷ್ಟಮಾಂ]**

**ನ ಹಿ ವಿರಮತಿ ವಿಪ್ರಪೂಜನಾತ್ ನ ಚ ವಿನಿವರ್ತತಿ ಯಜ್ಞದಾನ**
**ಶೀಲಾತ್ ॥ 2 ॥**

ಜನಮೇಜಯನು ಎಂದಿಗೂ ಬ್ರಾಹ್ಮಣರ ಪೂಜಾ ಸತ್ಕಾರಾದಿಗಳನ್ನು ಬಿಡಲಿಲ್ಲ. ಯಜ್ಞ ಯಾಗ ಮಾಡುವುದು, ದಾನಧರ್ಮ ಮಾಡುವುದರಿಂದಾಗಲೀ ಹಿಂತಿರುಗಿದವನಲ್ಲ. ಯಜ್ಞಶೀಲನೂ, ದಾನಶೀಲನೂ ಆಗಿದ್ದು ರಾಜ್ಯವನ್ನು ಅಪ್ರಮತ್ತನಾಗಿ ಪಾಲಿಸುತ್ತಿದ್ದ.

ವಿಧಿಯು ಬರೆದದ್ದನ್ನು ಅನ್ಯಥಾ ಮಾಡಲು ಯಾರಿಗೂ ಸಾಧ್ಯವಿಲ್ಲ ಎಂದು ವ್ಯಾಸರು ಈ ಮೊದಲೇ ರಾಜನಿಗೆ ತಿಳಿಸಿದ್ದರು. ಅದರಂತೆ ಎಲ್ಲವೂ ನಡೆದಿತ್ತು. ಇದನ್ನು ನೆನೆದು ಬ್ರಾಹ್ಮಣರ ಮೇಲೆ ಮಾಡಿದ್ದ ಕೋಪವನ್ನು ಬಿಟ್ಟನು.

**ಫಲಸ್ತುತಿ**

ಮಹಾನುಭಾವರಾದ ವ್ಯಾಸದೇವರ ಈ ಮಹಾಕಾವ್ಯವನ್ನು ಯಾರು ಪಠಿಸುವರೋ, ಅವರು ಮನುಷ್ಯರಲ್ಲಿಯೇ ಪೂಜ್ಯವಂತರಾಗುವರು. ಉತ್ಕೃಷ್ಟವೂ ಪೂರ್ಣವೂ ಆದ ಆಯುಸ್ಸನ್ನು ಪಡೆದು, ತತ್ವವೇತ್ತರಾಗಿ ಕೇಶವನ ಪ್ರೀತಿ ಹೊಂದುವನು.

ಇಂದ್ರದೇವನ ಮನಸ್ಸನ್ನು ಪರಿಷ್ಕರಿಸುವ ಪ್ರಕರಣದಿಂದ ಕೂಡಿರುವ ಈ ಕಾವ್ಯವನ್ನು ಪಠಣ ಮಾಡುವವನೂ ಕೂಡ ಸಮಸ್ತ ಆತಂಕಗಳನ್ನು ದೂರ ಮಾಡಿಕೊಳ್ಳುವನು. ಆಪ್ತಕಾಮನಾಗಿ ಬಹುಕಾಲ ಜೀವಿಸುವನು.

ಹೇಗೆ ವೃಕ್ಷಗಳು ಕಾಲ ಬಂದಾಗ ಪುಷ್ಪವನ್ನು ಬಿಡುತ್ತವೆ. ಪುಷ್ಪದಿಂದ ಫಲಗಳು, ಫಲದಿಂದ ಬೀಜಗಳು, ಬೀಜಗಳಿಂದ ಪುನಃ ವೃಕ್ಷಗಳು ಬೆಳೆಯುವುವೋ ಹಾಗೆಯೇ ವ್ಯಾಸರಿಂದ ಉತ್ಪನ್ನವಾದ ಈ ಮಹಾಗ್ರಂಥವು ವ್ಯಾಸರ ಕೀರ್ತಿ ಪಾದಪವನ್ನು ಅಭಿವೃದ್ಧಿಗೊಳಿಸುತ್ತದೆ.

ಈ ಗ್ರಂಥ ಶ್ರವಣಾದಿಗಳಿಂದ ಪುತ್ರರಹಿತರು ಸತ್ಪುತ್ರವಂತರಾಗುತ್ತಾರೆ. ಮಾನ, ಧನ ಹಾನಿಯಾಗಿದ್ದವನು ಮೊದಲಿನಂತೆಯೇ ಸ್ಥಾನಮಾನ ಪಡೆದು-ಕೊಳ್ಳುವನು. ಮಾನಸಿಕ ಶಾರೀರಿಕ ಬಾಧೆಗಳಿರುವುದಿಲ್ಲ. ಬಂಧಿತನು ಬಹುಕಾಲ ಬಂಧನದಲ್ಲಿರಲಾರ ಸುಖದಿಂದಿರುವನು.

**ಪುತ್ರಾನ್ ಅಪುತ್ರೋ ಲಭತೇ ವ್ಯಾಧಿಂ ನ ಚಾಪ್ನೋತಿ ।**
**ಚ್ಯುತಃ ಪುನರ್ವಿಂದತಿ ಚಾತ್ಮನಃ ಸ್ಥಿತಿಮ್ ॥ 3 ॥**

ಮಂಗಳಕರವಾದ ವ್ಯಾಸರ ವಾಣಿಯನ್ನು ಶ್ರದ್ಧೆಯಿಂದ ಕೇಳಿದ ಕನ್ಯೆಯು ಉತ್ತಮರಲ್ಲಿ ಉತ್ತಮಪತಿಯನ್ನು ಹೊಂದುವಳು. ವೀರವಂತರಾದ ಮಕ್ಕಳನ್ನೂ ಪಡೆಯುವಳು. [**ಪತಿಮಭಿಲಭತೇ ಚ ಸತ್ಸು ಕನ್ಯಾ – ಜನಯತಿ ಸುತಾನ್ ಗುಣೈರುಪೇತಾನ್**].

ಕ್ಷತ್ರಿಯನು ಇದರ ಪಠನಾದಿಗಳಿಂದ ಭೂಮಿಯನ್ನೇ ಗೆಲ್ಲುವನು. ವಿಪುಲ

ಐಶ್ವರ್ಯಕ್ಕೆ ಭಾಗಿಯಾಗುವನು. ವೈಶ್ಯನೂ ಕೂಡ ಅಖಂಡ ಸಂಪತ್ತಿಗೆ ಭಾಗಿಯಾಗುವನು. ಶೂದ್ರನಾದರೂ ಉತ್ತಮ ಗತಿ ಹೊಂದುವನು.

ಈ ಮಹಾನುಭಾವರ ಚರಿತ್ರೆಗಳಿಂದ ಕೂಡಿರುವ ಈ ಗ್ರಂಥವನ್ನು ಅಧ್ಯಯನ ಮಾಡಿದವನು ಭಗವಂತನಲ್ಲಿ ನಿಶ್ಚಲ ಭಕ್ತಿವುಳ್ಳವನಾಗುವನು.

ಶೌನಕರೇ! ನಾನು ಬಿತ್ತರಿಸಿರುವ ಈ ಗ್ರಂಥವನ್ನು ನೀವೂ ಪ್ರವಚನ ಮಾಡಿ ಪ್ರಚುರಗೊಳಿಸಿರಿ. ಅದ್ಭುತರಾಜರ ಮಹಿಮೆಗಳನ್ನು ಸಂಕ್ಷೇಪವಾಗಿ ಹೇಳಿರುವೆನಷ್ಟೆ. ಶೌನಕರೇ, ಇನ್ನೇನನ್ನು ಹೇಳಲಿ ಹೇಳಿ ಎಂದರು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಗ್ರಂಥ ಪಠನ ಶ್ರವಣ ಫಲ ಎಂಬಲ್ಲಿ
ಆರನೆಯ ಅಧ್ಯಾಯವು ಸಮಾಪ್ತಿ

# ಅಥ ಸಪ್ತಮೋಽಧ್ಯಾಯಃ

*ಜನಮೇಜಯ ಉವಾಚ–*

**ಪ್ರಭಾವಂ ಪದ್ಮನಾಭಸ್ಯ ಸ್ವಪತಃ ಸಾಗರಾಂಭಸಿ ।**
**ಪುಷ್ಕರೇ ವೈ ಯಥೋದ್ಭೂತಾ ದೇವಾಃ ಸರ್ಷಿಗಣಾಃ ಪುರಾ ॥ 1 ॥**

ಜನಮೇಜಯನು ವೈಶಂಪಾಯನರನ್ನು ಕುರಿತು ಸಮುದ್ರದಲ್ಲಿ ಮಲಗಿರುವ ಪದ್ಮನಾಭನ ವರ್ಣನೆ ಮಾಡಿರುವಿರಿ. ಭಗವಂತನ ನಾಭಿಕಮಲದಲ್ಲಿ ದೇವತೆ ಋಷಿ ಮುನಿಗಳ ಉತ್ಪತ್ತಿಯು ಹೇಗಾಯಿತೆಂದು ತಿಳಸಬೇಕು. ಹರಿಯ ಮಹಾಮಹಿಮೆ ಕೇಳದಷ್ಟು ತೃಪ್ತಿಯೆಂಬುದಿಲ್ಲ.[1]

ಭಗವಂತನು ಎಷ್ಟು ಕಾಲ ಮಲಗಿದ್ದನು? ಅಲ್ಲಿ ಮಲಗಿದ ಕಾರಣವೇನು? ಕಾಲವನ್ನು ಉತ್ಪತ್ತಿ ಮಾಡುವುದೆಂದರೇನು? ಏಳುವ ಕಾಲ ಯಾವುದು? ಎಚ್ಚರಿಕೆಯ ನಂತರ ಹೇಗೆ ಸಮಗ್ರ ಜಗತ್ತನ್ನು ನಿರ್ಮಿಸುವನು? ಹಿಂದೆ ಯಾರು ಯಾರು ಪ್ರಜಾಪತಿಗಳಿದ್ದರು. ನಂತರ ಇದೆಲ್ಲ ಪ್ರಪಂಚ ನಾಶವಾದಾಗ ಮಹಾ ಆಕಾರ ಹೊಂದಿರುವ ಹರಿಯು ಏಕಾರ್ಣವದಲ್ಲಿ ಏಕಾಕಿಯಾಗಿ ಮಲಗಲು ಆಶ್ರಯ ಯಾವುದು? ಇದೆಲ್ಲ ನನಗೆ ತಿಳಸಿರಿ ಎಂದನು.

**ನಾರಾಯಣ ಯಶೋಜ್ಞಾನೇ ಯಾ ಭವೇತ್ ಭವತಃ ಸ್ಪೃಹಾ ।**
**ತ್ವದ್ ವಂಶಾನಘ ಪೂತಸ್ಯ ಕಾರ್ಯಂ ಕುರುಕುಲರ್ಷಭ ॥ 2 ॥**

1. ನೈಷಾಽತಿ ದುಸ್ಸಹಾ ಕ್ಷುನ್ಮಾಂ ತ್ಯಕ್ತೋದ ಮಪಿ ಬಾಧತೇ ।
ಪಿಬಂತಂ ತ್ವನ್ಮುಖಾಂಭೋಜಸ್ಯುತಂ ಹರಿಕಥಾಮೃತಮ್ ॥ *–ಭಾಗ. 10/1/13*

ವೈಶಂಪಾಯನರು ಕುರುಕುಲೋತ್ತಮನೇ! ಶ್ರೀಮನ್ನಾರಾಯಣನ ಯಶೋಗಾಥೆಯನ್ನು ಕೇಳಲು ನಿನಗುಂಟಾಗಿರುವ ಇಚ್ಛೆಯು ನಿನ್ನ ಕುಲಕ್ಕೆ ಅನುಗುಣವಾಗಿದೆ. ಇದಕ್ಕೆ ಕಾರಣ ನಿನ್ನ ಪೂರ್ವ ಸಂಪಾದಿತ ಪುಣ್ಯವೆ ಆಗಿದೆ.

ಮಹಾನುಭಾವರಾದ ವ್ಯಾಸರಿಂದ ನಾನು ಕೇಳಿರುವಂತೆ ಭಗವಂತನ ಕೀರ್ತಿಯನ್ನು ಚಿತ್ತರಿಸುವೆ ಕೇಳು.

**ಪಾರಾಶರ್ಯಸ್ತತಃ ಶ್ರೀಮಾನ್ ಗುರುಃ ದ್ವೈಪಾಯನೋಽಬ್ರವೀತ್ ।**
**ತತ್ತೇಽಹಂ ಸಂಪ್ರವಕ್ಷ್ಯಾಮಿ ॥ 3 ॥**

ಬ್ರಹ್ಮದೇವನಿಂದಲೂ ಪೂರ್ಣವಾಗಿ ತಿಳಿಯಲಾಗದ ಹರಿ ಮಹಿಮೆಯನ್ನು ಸಾಮಾನ್ಯ ಋಷಿಯಾದ ನಾನೇನುಬಲ್ಲನು.

ಅಧ್ಯಾತ್ಮವೇತ್ತರಿಂದ ತಿಳಿಯಲ್ಪಡುವವನು ಭಗವಂತನೆ. ಆ ನಾರಾಯಣ ತತ್ವವೆ ಅಧಿದೈವವೆಂದು ಹೇಳಲ್ಪಡುತ್ತದೆ. **ಅಧಿಕಶ್ಚಾಸೌ ಆತ್ಮಾ ಚ** ಎಂಬಂತೆ ಅಧ್ಯಾತ್ಮನೂ ಶ್ರೀಹರಿಯೆ. ಆ ಮನುಷ್ಯರೆ ಮೊದಲಾದ ಸರ್ವಜೀವರಲ್ಲಿಯೂ ನಿಯಾಮಕನಾದ ಶ್ರೀಮನ್ನಾರಾಯಣನೆ ಅಧಿಭೂತ ವಾಚ್ಯನಾಗಿರುವನು. ಇಂದ್ರಿಯಾಭಿಮಾನಿ ದೇವತೆಗಳು ಅಧಿದೈವವೆನಿಸಿರುವರು. ಅವರಿಗೂ ನಿಯಾಮಕನಾಗಿ ಭಗವಂತನು ಅಧಿದೈವ ವಾಚ್ಯನಾಗಿರುವನು.

**ಅಧಿದೈವಂ ಚ ಯದ್ ದೈವಂ ತದ್ ದೈವಮಿತಿ ಸಂಜ್ಞಿತಮ್ ।**
**ಯದ್ ಭೂತಮಧಿಭೂತಂ ಚ........ ॥ 4 ॥**

ಈ ಸತ್ಯ ಶಬ್ದ ವಾಚ್ಯ ಭಗವಂತನನ್ನು ಶಾಸ್ತ್ರೈಕ ಸಮಧಿಗಮ್ಯನಾಗಿರುವನು.

ಭಗವಂತನೆ ಸ್ವತಂತ್ರ ಕರ್ತೃವಾದ್ದರಿಂದ ಕರ್ತೃವೆಂದು, ಸಕಲಕ್ಕೂ ಮೂಲಕಾರಣನಾದ್ದರಿಂದ ಕರ್ಮನೆಂದೂ [**ಕರ್ಮ ಮೂಲಂ ಕೃತಿಃ**], ಜ್ಞಾನಜನಕನಾದ್ದರಿಂದ ಕಾರಕನೂ, ಕಾರ್ಯಾಕಾರ್ಯ ವಿನಿರ್ಣಯ ಮಾಡುವವನಾದದ್ದರಿಂದ ಬುದ್ಧಿಯು ಮನನಶೀಲನಾದ್ದರಿಂದ [**ಮಂತೃತ್ವಾತ್**] ಮನೋವಾಚ್ಯನು, ಶ್ರೀಹರಿಯು ಚೇತನಾಚೇತನಾತ್ಮಕ ಜಗತ್ತನ್ನು ತನಗೆ ವಾಸಸ್ಥಾನ ಮಾಡಿಕೊಂಡು ರಕ್ಷಿಸುವವನಾದ್ದರಿಂದ ಈ ಜಗತ್ತೆ ಕ್ಷೇತ್ರವು. ಅದನ್ನು ತಿಳಿದವನಾಗಿರುವನು. ಪುರುಷಡ್ಗಣನೂ ಸಮಸ್ತ ಜಗತ್ತಿಗೆ

ಮುಖ್ಯಾಧಾರನೂ [**ಪ್ರಧಾನಂ**] ಅದ್ವಿತೀಯನೂ, ಶಾಸಕನೂ ಶ್ರೀಹರಿಯೇ ಆಗಿರುವನು.

ಶತ್ರುಸಂಹಾರಕನೂ [**ಕಲಭೇದನೇ**] ಗುಣಪೂರ್ಣನೂ [**ಕಲಕಾಮಧೇನೌ**] ಕಾಲನಿಯಾಮಕನೂ, ಸರ್ವವಸ್ತುದ್ರಷ್ಟುವೂ, ತನಗೆ ಮಾತ್ರ ತಾನು ಅಧೀನನೂ ಪ್ರಾಣಾಪಾನಾದಿ ಪಂಚವಿಧ ಪ್ರಾಣನೂ, ಭಕ್ತರಿಗೆ ಅಧಿಕವಾಗಿ ನೀಡುವವನೂ [**ಅಧಿಕಂ ಕ್ಷರತೀತಿ**] ಪ್ರಲಯದಲ್ಲಿ ನಾಶ ಹೊಂದದೆ ಧ್ರುವನೂ, ಆಗಿರುವನು. ಆ ಭಗವಂತನೆ ಸೃಷ್ಟಿ- ಸಂಹಾರಗಳನ್ನು ಮಾಡುವನು. ಕರ್ಮವನ್ನು ನಮ್ಮಿಂದ ಮಾಡಿಸುವವನೂ ಅವನೇ, ಬಂಧಿಸುವವನೂ ಅವನೇ. ಅವನನ್ನೆ ಯಜ್ಞಾದಿಗಳ ಮೂಲಕ ಆರಾಧಿಸುತ್ತೇವೆ. ಇದರಿಂದ ಅವನನ್ನೆ ಹೊಂದುತ್ತೇವೆ.

ಯಾರು ನಮ್ಮಲ್ಲಿದ್ದು ಹೇಳಿಸುವವನೋ, ಹೇಳಬೇಕಾದದ್ದೆಲ್ಲ ಯಾವನದೋ, ಅಂತಹ ದಿವ್ಯ ಸ್ವರೂಪ ತಿಳಿಸುವೆ.

ವೇದಗಳೆಲ್ಲ ನಾರಾಯಣ ಪರವಾಗಿವೆ. ದ್ರವ್ಯ, ಕರ್ಮ, ಕಾಲ, ಸ್ವಭಾವವೆಲ್ಲರೂ ಶ್ರೀಹರಿಯದು. ವಿಶ್ವವನ್ನು ಸೃಷ್ಟಿಸಿ ನಿಯಾಮಕನಾಗಿದ್ದಾನೆ. ವಿಶ್ವಪತಿಯೂ ಅವನೇ.

ಯಾವುದನ್ನು ಸತ್ಯವಾದರೂ ಅನೃತವೆನ್ನುವರೋ, ಯಾವ ಪ್ರಕೃತಿಯನ್ನು ಕಾರಣವೆಂದು ಜಗತ್ತನ್ನು ಕಾರ್ಯವೆನ್ನುವರೋ, ಯಾವುದು ಹಿಂದೆ ಇತ್ತು. ಮುಂದೆ ಹುಟ್ಟುತ್ತದೆ ಎನ್ನುವರೋ ಅಷ್ಟೇಕೆ? ಹದಿನಾಲ್ಕು ಲೋಕಗಳಲ್ಲಿ ಏನೇನು ಇವೆಯೋ ಅವೆಲ್ಲ ಶ್ರೀಹರಿಯ ಅಧೀನವಾಗಿದ್ದು. ಇವೆಲ್ಲ ಅವನೇ ಎಂದು ಕರೆಯಲಾಗುತ್ತದೆ.

**[ಯದಧೀನಾ ಯಸ್ಯ ಸತ್ತಾ ತತ್ ತದಿತ್ಯೇವ ಭಣ್ಯತೇ]**

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಹರಿ ಮಹಿಮಾ ವರ್ಣನೆ ಎಂಬಲ್ಲಿ
ಏಳನೆಯ ಅಧ್ಯಾಯವು ಸಮಾಪ್ತಿ

ಭವಿಷ್ಯ ಪರ್ವ 08 ಭವಿಷ್ಯ ಪರ್ವ

# ಅಥ ಅಷ್ಟಮೋಽಧ್ಯಾಯಃ

## ಕೃತಯುಗಾದಿ ವರ್ಣನೆ

*ವೈಶಂಪಾಯನ ಉವಾಚ-*

**ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತು ಕೃತಂ ಯುಗಮ್ ।**
**ತಸ್ಯ ತಾವಚ್ಛತೀ ಸಂಧ್ಯಾ ದ್ವಿಗುಣಾ ಜನಮೇಜಯ ॥ 1 ॥**

ಶ್ರೀಹರಿಯು ದೇಶತಃ ಕಾಲತಃ ಗುಣತಃ ಆನಂತ್ಯ ತಿಳಿಯುವುದು ಮೋಕ್ಷ ಸಾಧನವಾಗಿದೆ. ತ್ರಿವಿಧ ಮಹತ್ವವೂ ಶ್ರೀಹರಿಗೇನೆ ಇರುತ್ತದೆ. ಕಾಲಾವಧಿ ರಹಿತವಾದದ್ದು ಕಾಲಾನಂತ್ಯ, ದೇಶದ ಅವಧಿ ಇಲ್ಲದಿರುವುದು ದೇಶಾನಂತ್ಯ. ಗುಣಗಳ ಸಂಖ್ಯಾ ತಿಳಿಯದಿರುವುದೆ ಗುಣಾನಂತ್ಯವು. ಇವು ಮೂರು ಭಗವಂತನಿಗೆ ಮುಖ್ಯವಾಗಿದ್ದು ಇತರರಿಗಿಲ್ಲ.

**ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಮ್ ।**
**ದಿವ್ಯೈಃ ದ್ವಾದಶಸಾಹಸ್ರೈಃ ಸಾವಧಾನಂ ನಿರೂಪಿತಮ್ ॥ 2 ॥**

ಯುಗಗಳು ಕೃತ ತ್ರೇತಾ ದ್ವಾಪರ ಕಲಿಯೆಂಬುದಾಗಿ ನಾಲ್ಕು ಇವೆ. ದೇವತೆಗಳ ಹನ್ನೆರಡು ಸಾವಿರ ದಿವ್ಯವರ್ಷಗಳ ಅವಧಿವುಳ್ಳವು. ಈ ಕೃತಾದಿಗಳ ಪೂರ್ವಾವಧಿ ಕಾಲವು ಸಂಧ್ಯಾ ಕಾಲವೆನಿಸಿದರೆ, ಉತ್ತರಾವಧಿ ಕಾಲವು ಸಂಧ್ಯಾಂಶ ಕಾಲವು. ಹನ್ನೆರಡು ಸಾವಿರ ವರ್ಷಗಳಲ್ಲಿ ನಾಲ್ಕು ಸಾವಿರ ವರ್ಷ ಕೃತಯುಗದ ಅವಧಿಯು, ಸಂಧ್ಯಾ ಹಾಗೂ ಸಂಧ್ಯಾಂಶವು ಪ್ರತ್ಯೇಕ ನಾನೂರು. ಹಾಗಾದರೆ 4800 ವರ್ಷಗಳಲ್ಲಿ ನಾಲ್ಕು ಸಾವಿರ

ಕೃತಯುಗವಾದರೆ ನಾನೂರು ವರ್ಷ ಸಂಧ್ಯಾಕಾಲ.[1] ಕಡೆಯ ನಾನೂರು ವರ್ಷಗಳು ಸಂಧ್ಯಂಶಗಳು. ಕೃತಯುಗದಲ್ಲಿ ಧರ್ಮವು ತಪಸ್ಸು, ದಯೆ, ಸತ್ಯ, ಶೌಚವೆಂಬ ನಾಲ್ಕು ಪಾದಗಳಿಂದ ಕೂಡಿರುತ್ತದೆ. ಮಾನವರು ಸ್ವಧರ್ಮ ನಿರತರಾಗಿದ್ದು, ಕ್ಷತ್ರಿಯರು ದುಷ್ಟಶಿಕ್ಷಣ-ಶಿಷ್ಟಪಾಲನೆಯಲ್ಲಿ ಆಸಕ್ತರಾಗಿರುವರು. ವೈಶ್ಯರು ಕೃಷಿ ವಾಣಿಜ್ಯಾದಿಗಳಲ್ಲಿಯೂ, ಶೂದ್ರರು ತ್ರೈವರ್ಣೀಕರ ಸೇವೆಯಲ್ಲಿ ನಿರತರಾಗಿರುತ್ತಾರೆ. ಈ ಯುಗದಲ್ಲಿ ಸತ್ಯ, ತಪಸ್ಸು, ಧರ್ಮಗಳು ಯಾವಾಗಲೂ ವೃದ್ಧಿಯಾಗುತ್ತಿರುತ್ತವೆ. ಸಜ್ಜನರು ತಾವು ಯಾವುದನ್ನು ಆಚರಣೆಯಲ್ಲಿ ತರುತ್ತಾರೋ ಅದನ್ನೆ ಇತರ ಯೋಗ್ಯರಿಗೂ ಉಪದೇಶಿಸುತ್ತಾರೆ. ಪ್ರಾಣಿಗಳು ನೀಚಯೋನಿ ಜನಿಸಿರಲಿ, ನೀಚ ಕುಲದಲ್ಲಿ ಜನಿಸಿರಲ್ಲಿ ಸರ್ವರಿಗೂ ಧರ್ಮಬುದ್ಧಿಯಿರುತ್ತದೆ.

**ಪ್ರಾಣಿನಾಂ ಧರ್ಮಬುದ್ಧೀನಾಮಪಿ ಚೇನ್ ನೀಚಯೋನಿನಾಮ್ ।**

ತ್ರೇತಾಯುಗದ ಪ್ರಮಾಣವು ಮೂರು ಸಾವಿರ ದಿವ್ಯ ವರ್ಷಗಳು. ಆರುನೂರು ದಿವ್ಯ ವರ್ಷಗಳು ಸಂಧ್ಯಾಕಾಲ, ಸಂಧ್ಯಂಶ ಕಾಲಗಳು. ಒಟ್ಟು ಮೂರು ಸಾವಿರದಾರನೂರು ತ್ರೇತೆಗೆ ಸಂಬಂಧಿಸಿರುತ್ತದೆ.

ತ್ರೇತೆಯಲ್ಲಿ ಧರ್ಮದ ಮೂರು ಪಾದಗಳಿದ್ದು, ಅಧರ್ಮವು ಒಂದು ಭಾಗ ವ್ಯಾಪಿಸಿರುತ್ತದೆ. ನೂರಕ್ಕೆ 75 ಮಂದಿ ಧರ್ಮವನ್ನಾಚರಿಸಿದರೆ 25 ಮಂದಿ ಅಧರ್ಮದಲ್ಲಿ ಆಸಕ್ತರಾಗಿರುವರು.

ಕೃತಯುಗದಲ್ಲಿ ಅಧರ್ಮದ ನಾಲ್ಕು ಪಾದಗಳಾದ ಅಹಂ, ಸಂಗ, ಮದ, ಅನ್ಯತಗಳಿಂದ ಧರ್ಮಕ್ಕೆ ಚ್ಯುತಿ ಬರುವುದಿಲ್ಲ. ತ್ರೇತಾಯುಗದಲ್ಲಿ ತಪಸ್ಸೆಂಬ ಪಾದವು ಸ್ಮಯದಿಂದ ಕೆಡುತ್ತದೆ. ತ್ರೇತೆಯಲ್ಲಿ ವರ್ಣಗಳು ಲೋಲುಪತೆ-ಯಿಂದಾಗಿ ವಿಕಾರ ಹೊಂದುತ್ತವೆ. ನಾಲ್ಕು ವರ್ಣದವರಲ್ಲಿಯೂ ವಿಕಾರವುಂಟಾಗಿ ಮಾನವರು ಜ್ಞಾನಾದಿಗಳಲ್ಲಿ ದೌರ್ಬಲ್ಯ ಹೊಂದುವರು.

---

1. ಮಾನವ ವರ್ಷಗಳು 17,28,000, ತ್ರೇತೆಯುಗವು 12,96,000 ವರ್ಷಗಳು ದ್ವಾಪರವು 8,64,000, ಕಲಿಯುಗವು 4,32,000 ವರ್ಷಗಳು. ಇವೆಲ್ಲವನ್ನೂ ಸೇರಿಸಿದರೆ 43,20,000 ವರ್ಷಗಳಾಗುತ್ತವೆ. ಇದು ದಿವ್ಯ ವರ್ಷಗಳು. ಇಂತಹ 12 ಸಾವಿರ ದಿವ್ಯ ವರ್ಷಗಳೇ ನಾಲ್ಕು ಯುಗದ ಪರಿಮಾಣ.

   ಸಂಧ್ಯಾ ವರ್ಷಗಳು 1,44,000, ಸಂಧ್ಯಂಶ 1,44,000, ತ್ರೇತೆಯು 3,000,300 ಸಂಧ್ಯಾಕಾಲ, 300 ಸಂಧ್ಯಂಶ. ದ್ವಾಪರೆಯು 2000 ವರ್ಷ, 200+200. ಕಲಿಯುಗ 1000+100+100.

**ದ್ವಾಪರಸ್ಯಾಪಿ ಯಾ ಚೇಷ್ಟಾ ತಾಮಪಿ ಶ್ರೋತುಮರ್ಹಸಿ ॥ 3 ॥**

ದ್ವಾಪರಯುಗದ ಪರಿಮಾಣವನ್ನು ಹೇಳುವೆ ಕೇಳು. ಆಯುಃ ಪ್ರಮಾಣವು ಎರಡು ಸಾವಿರ ವರ್ಷಗಳು. ಇದರ ಸಂಧ್ಯಾಕಾಲ ಹಾಗೂ ಸಂಧ್ಯಂಶಗಳ ಪರಿಮಾಣ ನಾಲ್ಕು ನೂರು ವರ್ಷಗಳು. ದ್ವಾಪರದಲ್ಲಿ ದುಷ್ಟಸಂಗ, ದುರಭಿಮಾನಗಳಿಂದ ತಪಸ್ಸು ಶೌಚ ಹಾಳಾಗುವುವು.

ಈ ದ್ವಾಪರದಲ್ಲಿ ಧನವನ್ನೆ ಆಶ್ರಯಿಸುವ ಬ್ರಾಹ್ಮಣರು, ರಜೋಗುಣ ಭೂಯಿಷ್ಠರು, ಶಠರು, ಬಹಿಷ್ಕೃತರು ಕ್ಷುದ್ರರು ಹುಟ್ಟುತ್ತಾರೆ. ಕೃತಯುಗದಲ್ಲಿ ಹೇಳಿದ ಧರ್ಮಗಳು ದ್ವಾಪರದಲ್ಲಿ ಅಧರ್ಮವೆನಿಸುತ್ತವೆ.

**ದ್ವಾಭ್ಯಾಂ ಧರ್ಮಃ ಸ್ಥಿತಃ ಪದ್ಭ್ಯಾಂ ಅಧರ್ಮಃ ತ್ರಿಭಿರುತ್ಥಿವಃ ।**
**ವಿಪರ್ಯಯಂ ಶನೈಃ ಯಾಂತಿ ಕೃತೇ ಯೇ ಧರ್ಮಸೇತವಃ ॥ 4 ॥**

ಬ್ರಾಹ್ಮಣವೆ ನಷ್ಟವಾಗುತ್ತದೆ. ಆಸ್ತಿಕ್ಯ ಬುದ್ಧಿಯೂ ನಶಿಸುತ್ತದೆ. ವ್ರತೋಪವಾಸಗಳಿಗೆಲ್ಲ ತಿಲಾಂಜಲಿ ಬಿಡುತ್ತಾರೆ. ನಾಸ್ತಿಕರು ಪ್ರಬಲರಾಗುತ್ತಾರೆ. ದ್ವಾಪರದಲ್ಲಿ ಮೂರು ಅಧರ್ಮ ಪಾದಗಳು ಬಲವಾಗಿ ಎರಡು ಸತ್ಯ ದಯಾಪಾದಗಳಿಂದ ಮಾತ್ರ ಧರ್ಮ ನಿಂತಿರುತ್ತದೆ.

**ತಥಾ ವರ್ಷಸಹಸ್ರಂ ತು ವರ್ಷಾಣಾಂ ದ್ವೇ ಶತೇ ತಥಾ ।**
**ಸಂಧ್ಯಯಾ ಸಹ ಸಂಖ್ಯಾತಂ ಕ್ರೂರಂ ಕಲಿಯುಗಂ ಸ್ಮೃತಮ್ ॥ 5 ॥**

ಇದರಂತೆ ಕ್ರೂರವಾದ ಕಲಿಯುಗ ಪ್ರಮಾಣವು ಸಾವಿರದ ಇನ್ನೂರು ದಿವ್ಯ ವರ್ಷಗಳು. ಕಲಿಯುಗದಲ್ಲಿ ನಾಲ್ಕು ಪಾದಗಳಷ್ಟು ಅಧರ್ಮವಿದ್ದು ಒಂದು ಪಾದದಿಂದ ಧರ್ಮ ನಿಂತಿರುತ್ತದೆ.

ಕಲಿಯುಗದಲ್ಲಿ ಮದದಿಂದಾಗಿ ದಮವೂ ಕೊಡುತ್ತದೆ. ಸತ್ಯವೆಂಬ ಪಾದವೊಂದೆ ಉಳಿಯುತ್ತದೆ. ಕಲಿಯ ಅಂತ್ಯಭಾಗದಲ್ಲಿ ಅನೃತದಿಂದ ಸತ್ಯಪಾದವೂ ಕೆಟ್ಟು ಅಧರ್ಮವೆ ರಾಜ್ಯವಾಳುವುದು. ಈ ಯುಗದಲ್ಲಿ ಮಾನವರು ಬಹುಶಃ ಕಾಮಾಸಕ್ತರೂ, ತಮೋಗುಣಿಗಳೂ ಆಗಿರುತ್ತಾರೆ. ಕಲಿಯುಗದಲ್ಲಿ ಉಪವಾಸವ್ರತವನ್ನಾಗಲೀ, ಸಾಧು ಸಂತನಾಗಲೀ ಸತ್ಯವಾದಿಯಾಗಲಿ, ಆಸ್ತೀಕನಾಗಲೀ ಬ್ರಹ್ಮಜ್ಞಾನ ಬೋಧಿಸುವ ಬೋಧಕನೂ ಇರುವುದಿಲ್ಲ.

ಬ್ರಾಹ್ಮಣರೂ ಅಹಂಕಾರಿಗಳಾಗಿ ಸ್ನೇಹ ಶೂನ್ಯರಾಗಿರುತ್ತಾರೆ. ವಿಪ್ರರು ಶೂದ್ರಾಚಾರಿಗಳೂ, ಶೂದ್ರರು ವಿಪ್ರವೇಷಧಾರಿಗಳಾಗಿರುತ್ತಾರೆ. ವರ್ಣಾಶ್ರಮ ಧರ್ಮಗಳನ್ನು ನಿಂದಿಸುವವರೆ ಇರುತ್ತಾರೆ. ವರ್ಣ ಸಾಂಕರ್ಯವಾಗುತ್ತದೆ. ಬೆರೆಯಬಾರದ ಸ್ತ್ರೀಯರೊಂದಿಗೆ ಚೆಲ್ಲಾಟ ಹೀಗೆ ಅಧರ್ಮ ಭೂಯಿಷ್ಠವಾಗಿರುತ್ತದೆ.

ಹೀಗೆ ಹನ್ನೆರಡು ಸಾವಿರ ದಿವ್ಯ ವರ್ಷಗಳಿಗೆ ಚತುರ್ಯುಗವೆನ್ನುವರು. ಇಂತಹ ಚತುರ್ಯುಗಗಳು 71 ಬಾರಿ ಆವೃತ್ತಿಯಾದ ಕಾಲಕ್ಕೆ 'ಮನ್ವಂತರ'ವೆಂದು ಹೆಸರು.

## ಬ್ರಹ್ಮನ ಅಹೋರಾತ್ರ

**ಏವಂ ದ್ವಾದಶಸಾಹಸ್ರಂ ತದೇಕಂ ಯುಗಮುಚ್ಯತೇ ।**
**ತದೇಕಸಪ್ತತಿ ಗುಣಂ ಮನ್ವಂತರ ಮಿಹೋಚ್ಯತೇ ॥ 6 ॥**
**ಏತತ್ ಸಹಸ್ರ ಪರ್ಯಂತಂ ತದಹೋ ಬ್ರಾಹ್ಮಮುಚ್ಯತೇ ॥ 7 ॥**

ಈ ನಾಲ್ಕೂ ಯುಗಗಳು ಮನುಷ್ಯಮಾನದಲ್ಲಿ ಒಟ್ಟು 43,20,000 ವರ್ಷಗಳಾಗುತ್ತವೆ. ಈ ನಾಲ್ಕು ಯುಗಗಳು 71 ಬಾರಿ ಸುತ್ತಿದರೆ ಒಂದು ಮನ್ವಂತರವು. 43,20,000 X 71 = 30,67,20,000 ವರ್ಷಗಳು.[2]

ಇಂತಹ ಚತುರ್ಯುಗ ಪ್ರಮಾಣಕ್ಕೆ 43,20,000 ವರ್ಷಗಳು ಸಾವಿರ ಬಾರಿ ಸುತ್ತಿದರೆ ಬ್ರಹ್ಮದೇವನಿಗೆ ಒಂದು ಹಗಲು. ಅಂದರೆ

---

2. 71 ಮಹಾಯುಗಗಳು ಮನ್ವಂತರವೆಂದಿದ್ದರೂ ಶ್ರೀಮದಾಚಾರ್ಯರು ಈ 71 ಮಹಾಯುಗಗಳೊಂದಿಗೆ 18,50,000 ವರ್ಷಗಳ ಭುಕ್ತಿ ಕಾಲವನ್ನೂ ಸೇರಿಸಬೇಕೆಂದು ತಿಳಿಸಿದ್ದಾರೆ.

**ಯುಗೈಕಸಪ್ತತೇರೂರ್ಧ್ವಂ ಸಾರ್ಧಾಷ್ಟಾದಶಲಕ್ಷಕಂ ।** *–ಭಾ.ತಾ. – 3/12/24*

| | | |
|---|---|---|
| ಹಾಗಾದರೆ ಒಟ್ಟು ಮನ್ವಂತರವೆಂದರೆ | 30,67,20,000 | + |
| | 18,50,000 | |
| | 30,85,70,000 | |

*ವಾದಿರಾಜರು :* ಹದಿನಾಲ್ಕು ಮನುಗಳಿಗೂ ಸರಿಯಾಗಿ ಬರುವಂತೆ ವಿಭಾಗಿಸಿ ಹೇಳಿರುವರು. 31,85,71,428 ವರ್ಷ, 6 ತಿಂಗಳು, 25 ದಿವಸ, 17 ತಾಸು, 21 ಘಳಿಗೆ ಗುಣಿಸು 14. 4 ಅಬ್ಜ, 32 ಕೋಟಿ ಮಾನವ ವರ್ಷಗಳು.

4,32,00,00,000 ವರ್ಷಗಳು. ಅಷ್ಟೆ ಕಾಲ ರಾತ್ರಿಯಾಗಿರುತ್ತದೆ. ಇಂತಹ 30 ಹಗಲು ರಾತ್ರಿಗಳು ಒಂದು ಮಾಸವು. ಅಂದರೆ 2,59,20,00,00,000 ವರ್ಷಗಳು. ಇಂತಹ ಹನ್ನೆರಡು ತಿಂಗಳಾದರೆ ಒಂದು ವರ್ಷ 31,10,40,00,00,000 ವರ್ಷಗಳು. ಇಂತಹ ನೂರು ವರ್ಷಗಳು 31,10,40,00,00,00,000 ವರ್ಷಗಳು ಪರಕಾಲ-ವೆನುಸುತ್ತದೆ. ಇಂತಹ ಪರಕಾಲವು ಶ್ರೀಹರಿಗೆ ಒಂದು ರೆಪ್ಪೆ ಹಾಕುವ ಕಾಲ.

**ಕಾಲೋಽಯಂ ದ್ವಿಪರಾರ್ಧಾಖ್ಯೋ ನಿಮೇಷ ಉಪಚರ್ಯತೇ** ।

ಬ್ರಹ್ಮನ ಹಗಲು ಕಳೆದಾಗ ಸಕಲ ಪ್ರಾಣಿಗಳೂ ಕೇವಲ ಶಾರೀರಿಕ ಸುಖ ಹೊಂದುವುದರಲ್ಲಿಯೇ ಆಸಕ್ತವಾಗಿರುವುದನ್ನು ನೋಡಿದ ರುದ್ರದೇವನು ಸಮಸ್ತ ದೇವತೆಗಳನ್ನೂ, ಬ್ರಾಹ್ಮಣ, ಯಕ್ಷ, ರಾಕ್ಷಸದೈತ್ಯಾದಿ ಚರಾಚರ ಪ್ರಪಂಚವನ್ನು ಸಂಹಾರ ಮಾಡುತ್ತಾನೆ. ಭಗವಂತನಾದರೂ ಬ್ರಹ್ಮನು ಸೂರ್ಯನಲ್ಲಿದ್ದು ಸೂರ್ಯನ ಪ್ರಖರಕಿರಣಗಳಿಂದ ಕಣ್ಣನ್ನು ಕಿತ್ತುಕೊಳ್ಳುತ್ತಾನೆ. ವಾಯುವಾಗಿ ಪ್ರಾಣಿಸಂಕುಲವನ್ನೆ ಸಂಹಾರಗೈಯ್ಯುವನು.

ಅಗ್ನಿಯಾಗಿ ಅಗ್ನಿಯಲ್ಲಿದ್ದು ಸಮಸ್ತ ಲೋಕಗಳನ್ನೂ ಸುಟ್ಟು ಹಾಕುವನು. ಮೇಘದಲ್ಲಿದ್ದು ಪ್ರಲಯಕಾಲೀನ ವೃಷ್ಟಿ ಸುರಿಸುವನು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಕೃತಾದಿಯುಗ ಪರಿಮಾಣ ವರ್ಣನೆ ಎಂಬಲ್ಲಿ
ಎಂಟನೆಯ ಅಧ್ಯಾಯವು ಸಮಾಪ್ತಿ

# ಅಥ ನವಮೋऽಧ್ಯಾಯಃ

## ಪ್ರಲಯಾರ್ಣವದಲ್ಲಿ ಹರಿಯ ಶಯನ

**ಭೂತ್ವಾ ನಾರಾಯಣೋ ಯೋಗೀ ಸಪ್ತಮೂರ್ತಿಃ ವಿಭಾವಸುಃ ।**
**ಗಭಸ್ತಿಭಿಃ ಪ್ರದೀಪ್ತಾಭಿಃ ಸಂಶೋಷಯತಿ ಸಾಗರಾನ್ ॥ 1 ॥**

ವೈಶಂಪಾಯನರು ರಾಜನ್! ಜಗತ್ತನ್ನು ಸಂಹಾರ ಮಾಡುವ ಉಪಾಯ ತಿಳಿದ ನಾರಾಯಣನು ಸಪ್ತಜ್ವಾಲೆಗಳುಳ್ಳ ಅಗ್ನಿದೇವನ ರೂಪಧರಿಸಿ ತನ್ನ ಪ್ರಖರ ಕಿರಣಗಳ ಮೂಲಕ ಸಪ್ತಸಮುದ್ರಗಳನ್ನೂ ನದಿಗಳನ್ನೂ ಪರ್ವತಗಳಲ್ಲಿರುವ ನೀರನ್ನೂ ಒಣಗಿಸುವನು. ರಶ್ಮಿಗಳ ಮೂಲಕ ನದಿ ಬಾವಿ ಮೊದಲಾದ ಜಲಾಶಯಗಳಲ್ಲಿರುವ ನೀರನ್ನು ಸೆಳೆಯುವನು. ಈ ಭೂಮಿಯನ್ನು ಸಾವಿರಾರು ಹೋಳುಗಳನ್ನಾಗಿ ಮಾಡಿ ರಸಾತಲಕ್ಕೆ ಒಯ್ದು, ರಸಾತಲದಲ್ಲಿರುವ ನೀರನ್ನೂ ಕಿರಣಗಳಿಂದ ಒಣಗಿಸುತ್ತಾನೆ.

ನೀರಿನಲ್ಲಿ ತೇವವನ್ನು ಸೃಜಿಸಿದ ಭಗವಂತನು ಪ್ರಾಣಿಗಳಿಗೆ ಪದಾರ್ಥಗಳನ್ನೂ ಅವನೇ ಸೃಷ್ಟಿಸಿ ನೀಡುತ್ತಾನೆ. ಸ್ಥಿತಿಕರ್ತೃತ್ವವೂ ಅವನದೆ.

**ವಾಯುಶ್ಚ ಬಲವಾನ್ ಭೂತ್ವ ಸ ವಿಧೂಯಾಖಿಲಂ ಜಗತ್ ।**
**ಪ್ರಾಣೋದಯಂ ಸುರಾಣಾಂ ಚ ವಾಯುನ ಕುರುತೇ ಹರಿಃ ॥ 2 ॥**

ಶ್ರೀಹರಿಯೇ ವಾಯುಶಬ್ದಿತನಾದ ಶ್ರೀಹರಿಯೇ ವಾಯುವಿನಲ್ಲಿದ್ದು ಸಮಸ್ತ ಜಗತ್ತನ್ನೂ ಕಂಪಿಸುವುನಲ್ಲದೆ ಆ ವಾಯುವಿನ ಮೂಲಕವೆ ಸಮಸ್ತ ದೇವಾದಿಗಳ ಪ್ರಾಣವಾಯು ಸಂಚಾರವಾಗುವಂತೆ ಮಾಡುವನು.

ಸಮಸ್ತ ದೇವತೆಗಳು ಸಮಸ್ತ ದೇಹಧಾರಿಗಳ ಇಂದ್ರಿಯಾಭಿಮಾನಿ ದೇವತೆಗಳು ತಮಗೆ ಕಾರಣರಾದ ಸ್ವೋತ್ತಮ ದೇವತೆಗಳಲ್ಲಿ ಸೇರುತ್ತಾರೆ.

ಗಂಧ–ಘ್ರಾಣೇಂದ್ರಿಯ – ಶರೀರಗಳು ಪೃಥಿವೀ ತತ್ತ್ವವನ್ನು ಆಶ್ರಯಿಸುತ್ತವೆ. ನಾಲಿಗೆ – ರಸನೇಂದ್ರಿಯ – ಕ್ಲೇದಗಳು ಜಲತತ್ತ್ವವನ್ನೂ, ಕಣ್ಣು ಹಾಗೂ ತೇಜಸ್ಸು ಅಗ್ನಿ ತತ್ತ್ವವನ್ನೂ, ಸ್ಪರ್ಶ – ಪ್ರಾಣ – ಚೇಷ್ಟೆಗಳು ವಾಯುತತ್ತ್ವವನ್ನು, ಶಬ್ಧ – ಶ್ರವಣೇಂದ್ರಿಯ ಹಾಗೂ ಆಕಾಶಗಳು ಶಬ್ದತತ್ತ್ವವನ್ನು ಆಶ್ರಯಿಸುತ್ತದೆ. ಸಮಸ್ತವೂ ಹೃಷೀಕೇಶನಲ್ಲಿ ಆಶ್ರಯಿಸುತ್ತವೆ. ಪುನಃ ಭಗವಂತನ ಇಚ್ಛೆಯಂತೆ ವಾಯುವಿನಿಂದ ಆಕರ್ಷಿಸಲ್ಪಟ್ಟು ಇಂದ್ರಿಯಾಭಿಮಾನಿಗಳು ಪರಸ್ಪರವಾಗಿಯೂ ಸಂಘರ್ಷಿಸುತ್ತ ಅಗ್ನಿಯು ಹುಟ್ಟಿತು. ನೂರಾರು ಜ್ವಾಲೆಗಳಿಂದ ಕೂಡಿ ಉಗ್ರವಾದ ಸಂವರ್ತಕಾಗ್ನಿಯು ಸಮಸ್ತಲೋಕಗಳನ್ನೂ ದಹಿಸಿ ಹಾಕುತ್ತದೆ.'

---

1. ಒಟ್ಟು ಭೂ ಮಂಡಲವು 7 ಕೋಟಿ ಯೋಜನ ಅಂದರೆ 7 ಕೋಟಿ 14 ಲಕ್ಷ 28 ಸಾವಿರ 57 ಯೋಜನಗಳು. ಮೇರು ಮಧ್ಯದಿಂದ ಪೂರ್ವ ಪಶ್ಚಿಮಕ್ಕೆ ಒಟ್ಟು 7 ಕೋಟಿ 7 ಲಕ್ಷ ಯೋಜನ. ಮುಂದೆ ಸುತ್ತಲೂ ವಜ್ರಲೇಪ ಸಹಿತ ಹೈಮಭೂಮಿ.

   1 ಕೋಟಿ 6 ಲಕ್ಷ 28 ಸಾವಿರದ 571 ಯೋಜನ. 64 ಲಕ್ಷ ಹೈಮಭೂಮಿ. 42,28,751 ವಜ್ರಲೇಪ. ಮುಂದೆ ಲೋಕಾಲೋಕ ಪರ್ವತ. 50,50,000 ಯೋಜನ. ಇದು ಒಂದು ಪಾರ್ಶ್ವದ್ದು. ಇದರ ದ್ವಿಪಟ್ಟು ತಮಸ್ಸು. ತಮಸ್ಸಿನ ದುಪ್ಪಟ್ಟು ಘನೋದಕ. ಏಳು ಸಾಗರದಲ್ಲಿ ತುಂಬಿರುವ ಜಲಚರಗಳಿಗೆ ಲೆಕ್ಕವಿಲ್ಲ. ಅರಣ್ಯಗಳಿಗೆ ಲೆಕ್ಕವಿಲ್ಲ. ಪ್ರಾಣಿಗಳಿಗೆ ಲೆಕ್ಕವಿಲ್ಲ. ಈ ವಸ್ತುಗಳನ್ನು ಶ್ರೀದೇವಿ ಅಡಿಗೆ ಮಾಡುವಳು. ಪ್ರಲಯ ಜ್ವಾಲೆಯಲ್ಲಿ ಲವಣ ಇಕ್ಷು ಸುರಾಸರ್ಪಿ ದಧಿ ಕ್ಷೀರ ಆರು ಸಾಗರಗಳ ರಸದೊಂದಿಗೆ ಪೃಥಿವಿಯೆಂಬ ಮಾಂಸವನ್ನು ಬ್ರಹ್ಮಾಂಡಮಯ ಪಾತ್ರೆಯೊಳಗೆ ಇಟ್ಟು ಬೇಯಿಸುತ್ತಾಳೆ. ಬಹಳ ಹಸಿದವನು ಮೃಷ್ಟಾನ್ನ ಕಂಡಂತೆ ಅವಸರದಿಂದ ಒಂದೇ ತುತ್ತಿನಲ್ಲಿ ತನ್ನ ಬೃಹದಾಕಾರ ಬಾಯಿ ತೆಗೆದು ತಿಂದ. ಶ್ರಮದಿಂದ ಬೆವರು ಬಂದಾಗ ವಾಯುದೇವ ಬೀಸುತ್ತಾನೆ. ಭೋಜನದಲ್ಲಿ ಸಿಹಿ ನೀರು 64 ಲಕ್ಷ ಯೋಜನ ನೀರನ್ನು ಕುಡಿದನು. ಆಪೋಶನ ಆಚಮನವೂ ಅದೇ ನೀರಿನಿಂದ ಮಾಡಿದ. ಬ್ರಹ್ಮಾಂಡ ಖರ್ಪರ ಉಳಿದಿರುತ್ತದೆ. ತಿಂದ ಅನ್ನ ಜೀರ್ಣವಾಗಲು ಸುವರ್ಣ ಖರ್ಪರವನ್ನೇ ಭಸ್ಮ ಮಾಡಿ ಭಸ್ಮ ಸೇವಿಸಿದ. ಚೆನ್ನಾಗಿ ಕುದಿದು ಕಷಾಯವಾದ ಬಾಹ್ಯೋದಕವನ್ನು ಕುಡಿದು ನಂತರ ಲಕ್ಷ್ಮಿಯೊಂದಿಗೆ ಪವಡಿಸಲಿಚ್ಛಿಸಿದ.

   **ಅದ್ಯತೇ – ಅತ್ತಿ ಚ ಭೂತಾನಿ, ಅತ್ತಾ ಚರಾಚರಗ್ರಹಣಾತ್** ಎಂಬ ಶ್ರುತಿ ಸೂತ್ರಗಳ ಭಾವವಿದು.

**ಸಪರ್ವತಾನ್ ತರೂನ್ ಗುಲ್ಮಾನ್ ಲತಾವಲ್ಲೀಸ್ತೃಣಾನಿ ಚ ।**
**ವಿಮಾನಾನಿ ಚ ದಿವ್ಯಾನಿ ಪುರಾಣಿ ವಿವಿಧಾನಿ ಚ ।**
**ಯಾನಿ ಚಾಶ್ರಯಣೀಯಾನಿ ತಾನಿ ಸರ್ವಾಣಿ ಸೋಽದಹತ್ ॥ 3 ॥**

ಸಪ್ತ ದ್ವೀಪಗಳು, ನಾನಾ ವೃಕ್ಷಗಳು ಫಲಗಳು ಭಕ್ಷಗಳು, ಶಾಕಗಳು ಕಂದಮೂಲಗಳು ಬ್ರಾಹ್ಮಣ ಕ್ಷತ್ರಿಯ ಜಾತಿಗಳು ಮೃತ್ಯುವು ಉಪಸೇಚನ-ವಾಗುತ್ತದೆ. ಏಳು ಕೋಟಿ ಯೋಜನ ಸಪ್ತ ದ್ವೀಪಯುಕ್ತ ಭೂಮಿಯ ವಸ್ತುಗಳೆಲ್ಲ ಶ್ರೀಹರಿಗೆ ಭಕ್ಷ್ಯವಾಗುತ್ತದೆ. ಪರ್ವತ, ವೃಕ್ಷ ಪೊದೆ, ಬಳ್ಳಿ ತೃಣ ವಿಮಾನಗಳು, ನಗರಗಳು ಆಶ್ರಮಗಳು, ಮಂದಿರಗಳು ಅಗ್ನಿಗೆ ಆಹುತಿಯಾಗುತ್ತವೆ.[2]

**ಸಮುದ್ರ ಶಯನ**

ಪ್ರಲಯ ಕಾಲದಲ್ಲಿ ಸಕಲ ಪ್ರಾಣಿಗಳು ಶೂನ್ಯವಾದಾಗ ಶ್ರೀಹರಿಯು ಏಕಾಕಿಯಾಗಿ ಏಕಾರ್ಣವವಾದ ಸಮುದ್ರದಲ್ಲಿ ಮಲಗುವನು. ಲಯದಲ್ಲಿ ತತ್ವಗಳಾವವೂ ಇರುವುದಿಲ್ಲ. ಪ್ರಾಕೃತಾಭರಣ ಇರುವುದಿಲ್ಲ. ಆಗ ದೇವಿಯೇ ಹರಿಗೆ ಆಭರಣವಾದಳು. ಮಹಾಲಕ್ಷ್ಮಿಯು ಸಮುದ್ರವಾದಳು. ಆಲದೆಲೆಯಾಗಿಯೂ ಇರುತ್ತಾಳೆ. ಹೀಗೆ ಭೂ ಶ್ರೀ ದುರ್ಗೆಯರು ಲಾಲಿಸುತ್ತಿರೆ ಶ್ರೀಹರಿ ಆಲದೆಲೆಯ ಮೇಲೆ ಮಲಗಿದ.

**ಏಕಾರ್ಣವಜಲೆ ಹ್ಯಾಸೀದ್ ಯೋಗೀ ಯೋಗಮುಪಾಗತಃ ।**
**ಅಯುತಾನಂ ಸಹಸ್ರಾಣಿ ಗತಾನ್ಯೇಕಾರ್ಣವೇಽಂಭಸಿ ॥ 4 ॥**

ಮಹಾಯೋಗಿಯಾದ ಶ್ರೀಮನ್ನಾರಾಯಣನು ಒಂದು ಸಾವಿರ ಅಯುತವರ್ಷಗಳ ಕಾಲ ನೀರಿನ ಮಧ್ಯದಲ್ಲಿ ಮಲಗಿದನು. ಇಲ್ಲಿ ಸಹಸ್ರವೆಂದರೆ ಬಹು ಪರ್ಯಾಯವಾಚಿಯಾಗಿದೆ.

---

2. **ನಷ್ಟೇ ಲೋಕೇ ದ್ವಿಪರಾರ್ಧಾವಸಾನೇ ಮಹಾಭೂತೇಷ್ವಾದಿ ಭೂತಂ ಗತೇಷು ।**
**ವ್ಯಕ್ತೇಽ ವ್ಯಕ್ತಂ ಕಾಲವೇಗೇನ ಯಾತೇ ಭವಾನೇಕಃ ಶಿಷ್ಯತೇಽಶೇಷ ಸಂಜ್ಞಃ ॥**
ಸಂಕರ್ಷಣರೂಪಿ ಹರಿ ತನ್ನ ಮುಖದ ಅಗ್ನಿಯಿಂದ ಹದಿನಾಲ್ಕು ಲೋಕಗಳನ್ನು ಸುಡಿಸಿ, ಮಹಾಪಂಚಭೂತಗಳನ್ನು ಮಹತತ್ವವು ನುಂಗಿ, ಮಹತತ್ವವು ಮೂಲ ಪ್ರಕೃತಿಯಲ್ಲಿ ಸೇರಿಕೊಳ್ಳುತ್ತದೆ. ಆಗ ಹರಿಯೊಬ್ಬನೆ ಉಳಿಯುವನು. ಸತ್ವರಜಸ್ಸುತಮಸ್ಸು ಗುಣಗಳನ್ನು ಮೂಲಪ್ರಕೃತಿಯಲ್ಲಿ ಸೇರಿಸಿದನು.

ಜನಮೇಜಯ –

**ಏಕಾರ್ಣವಧಿಃ ಕೋಽಯಂ ಯಶ್ಚೈವ ಪರಿಕೀರ್ತಿತಃ ।**
**ಕ ಏಷ ಪುರೋಷೋನಾಮ ಕಿಂ ಯೋಗಃ ಕಶ್ಚ ಯೋಗವಾನ್ ॥ 5 ॥**

ಜನಮೇಜಯನು ಗುರುಗಳೇ! ಏಕಾರ್ಣವದ ಅವಧಿ ಎಷ್ಟು ವರ್ಷಗಳು? ಅಲ್ಲಿ ಮಲಗಿರುವ ಪುರುಷನೆಂದರೆ ಯಾರು? ಅವನ ಯೋಗದ ಸ್ವರೂಪವೇನು? ಯೋಗೇಶ್ವರ ಯಾರು?

ಪ್ರಲಯ[3]ದಲ್ಲಿ ಯಾವುದೇ ಪ್ರಾಕೃತ ತತ್ವಗಳಿಲ್ಲ. ಸಮುದ್ರದ ನೀರು ಲಯವಾಗಿ ಹೋದದ್ದಾಗಿ ಲಕ್ಷ್ಮೀದೇವಿಯೇ ವೈಕುಂಠವಿದ್ದ ಶ್ರೀಭಾಗವಿದ್ದಲ್ಲಿಯೆ ಸಮುದ್ರ ರೂಪದಿಂದ ಅಭಿವ್ಯಕ್ತಳಾದಳು **[ಸಲಿಲಂ ಶ್ರೀಪಕೃತ್ಯಾಖ್ಯಂ]** ಪ್ರಪಂಚ

---

3. ಪ್ರಲಯವು ಮೂರು ವಿಧ. ಮಾನವ ಪ್ರಲಯ, ದೈನಂದಿನ ಪ್ರಲಯ, ಬ್ರಾಹ್ಮ ಪ್ರಲಯ. ಹದಿನಾಲ್ಕು ಮನುಗಳ ರಾಜ್ಯಭಾರ ಮುಗಿದಾಗ ದೈನಂದಿನ ಪ್ರಲಯವು. ಈಗ ಬ್ರಹ್ಮದೇವನು ಮಲಗಿರುತ್ತಾನೆ. ಮನ್ವಂತರ ಪ್ರಲಯದಲ್ಲಿ ವಿಶೇಷವಾಗಿ ಪ್ರಜೆಗಳ ನಾಶವಾಗುತ್ತದೆ. ಲೋಕಗಳು ನಾಶವಾಗುವುದಿಲ್ಲ. ನೀರಿನಿಂದ ತುಂಬಿರುತ್ತದೆ. ದೈನಂದಿನ ಪ್ರಲಯದಲ್ಲಿ ಮೂರು ಲೋಕಗಳು ನೀರಿನಲ್ಲಿ ಮುಳುಗುತ್ತವೆ. ಮಹರ್ಲೋಕ ಜನೋಲೋಕಾದಿಗಳು ಮುಳುಗುವುದಿಲ್ಲ. ತತ್ವಾಭಿಮಾನಿ ದೇವತೆಗಳು ಕೆಲವು ಮನಿಗಳು ಉಳಿದಿರುತ್ತಾರೆ. ಪುನಃ ರಾತ್ರಿ ಕಳೆದ ಮೇಲೆ ಸೃಷ್ಟಿ ಮಾಡುವನು ಬ್ರಹ್ಮದೇವ. ಸತ್ಯಲೋಕಾಧಿಪತಿಯಾದ ಬ್ರಹ್ಮದೇವನ ನೂರು ವರ್ಷ ಮುಗಿಯುತ್ತಿರಲು ಏಳು ಪ್ರಕೃತಿ ಕಾರ್ಯಗಳಾದ ಪಂಚಭೂತ, ಮಹತತ್ವ, ಅಹಂಕಾರ ತತ್ವಗಳು ಎಲ್ಲಿ ಮುಳುಗುತ್ತವೊ ಅದೇ ಪ್ರಾಕೃತಿಕ/ಬ್ರಾಹ್ಮ.

ಈ ಕಾಲದಲ್ಲಿ ನೂರು ವರ್ಷ ಮಳೆ ಬರದೆ ಪ್ರಾಣಿ ಕ್ಷಯವೇರ್ಪಡುತ್ತದೆ. ಅನ್ನವಿಲ್ಲದೆ ಹಸಿವೆಯಿಂದ ಒಬ್ಬರನೊಬ್ಬರು ತಿನ್ನುತ್ತಾ ಕ್ರಮೇಣ ನಾಶವಾಗುತ್ತಾರೆ.

ಸಾಂವರ್ತಕರೆಂಬ ದ್ವಾದಶ ಸೂರ್ಯರು ಸಮುದ್ರ ನದಿ ನದಿಗಳ ನೀರನ್ನು, ದೇಹದಲ್ಲಿರುವ ನೀರನ್ನು ರೇತಸ್ಸನ್ನೂ, ಭೂಮಿಯಲ್ಲಿರುವ ನೀರನ್ನೆಲ್ಲ ಕುಡಿದು ಹಾಕುವನು. ಪುನಃ ಹೊರಗೆ ಬಿಡುವುದಿಲ್ಲ.

ಇದಲ್ಲದೆ ಸಂಕರ್ಷಣ ಮುಖದಿಂದ, ರುದ್ರದೇವರ ಮೂರನೆ ನೇತ್ರದಿಂದ ಹೊರಟ ಪ್ರಲಯಾಗ್ನಿಯು ಅತಲವಿತಲಾದಿ ಭೂವಿವರಗಳನ್ನೂ ಸುಡುತ್ತದೆ. ಹೀಗೆ ಮೇಲೆ ಕೆಳಗೆ ಸುತ್ತಲೂ ಸುಡುತ್ತಿರುವ ಬ್ರಹ್ಮಾಂಡವು ಸುಟ್ಟಸೆಗಣಿಯ ಬೆರಣಿಯಂತೆ ಕಾಣುವುದು. ನಂತರ ನೂರು ವರ್ಷ ಪ್ರಚಂಡ ಬಿರುಗಾಳಿ ಬೀಸುವುದು. ಆಕಾಶವೆಲ್ಲ ಧೂಳಿನಿಂದಾಗಿ ಧೂಮ್ರವಾಗಿ ಕಾಣುತ್ತದೆ.

**ಲಯವಾಗಿ ಸಮುದ್ರ ಒಂದೇ ಇದ್ದಾಗ ಲಕ್ಷ್ಮೀದೇವಿಯು ವಟಪತ್ರವಾದಳು. ಅಲ್ಲಿ ಮಲಗಿದ ಶ್ರೀಹರಿ. ಶ್ರೀಹರಿಗೆ ಯೋಗವುಳ್ಳವನೆಂದರೆ ಯೋಗನಿದ್ರಾವುಳ್ಳವನು. ಹರಿಗೆ ನಿದ್ರಾದಿಗಳಿಲ್ಲ. ವಾಯುದೇವ ಹೊರತು ಇತರ ಜೀವರ ನಿದ್ರೆಯೆ ಯೋಗನಿದ್ರೆ.**

**ಭೂದೇವಿ ವಟಪತ್ರಳಾದರೆ, ದುರ್ಗೆಯು ಕತ್ತಲೆ ರೂಪದಲ್ಲಿರುವಳು. ಈ ವಟಪತ್ರ 50 ಕೋಟಿ ಯೋಜನ ಪರಿಮಿತ. ಶೂನ್ಯನಾಮಕ ಹರಿಯು ಕೋಟಿ ಯೋಜನ ಶಿಶುವಾಗಿ, ತನ್ನ ಬಲಗಾಲಿನ ಅಂಗುಷ್ಠವನ್ನು**

---

ಮತ್ತೆ ನೂರು ವರ್ಷ ಅನೇಕ ಬಣ್ಣದ ಮೇಘಗಳು ವನಕೆ ಗಾತ್ರದ ಮಳೆ ಸುರಿಸುತ್ತದೆ. [ಇದರ ವಿವರಣೆ ಮಹಾಭಾರತ - ವನಪರ್ವ 191ನೇ ಅಧ್ಯಾಯದಲ್ಲಿದೆ].

ಹೀಗೆ ನೀರಿನಿಂದ ವಿಶ್ವವೆಲ್ಲವೂ ಏಕೋದಕವಾಗುವುದು. ಭೂಮಿಗೆ ಕಾರಣವಾದ ಗಂಧವು ನೀರು ನುಂಗುತ್ತದೆ. ನೀರಿನಲ್ಲಿ ಗಂಧಲಯವಾದ ಮೇಲೆ ಪೃಥಿವಿಯು ನಾಶವಾಗುತ್ತದೆ. ನೀರಿನ ಕಾರಣವಾದ ರಸತನ್ಮಾತ್ರೆಯು ತೇಜಸ್ಸಿನಲ್ಲಿ ಲಯ ಹೊಂದುತ್ತದೆ. ತೇಜಸ್ಸಿನ ರೂಪವು ವಾಯುವಿನಲ್ಲಿಯೂ, ವಾಯು ಸ್ಪರ್ಶವು ಆಕಾಶದಲ್ಲಿ ಲಯ ಹೊಂದುತ್ತದೆ. ಶಬ್ದವನ್ನು ತಾಮಸ ಅಹಂಕಾರದಲ್ಲಿಯೂ ಆಕಾಶವಾದರೂ ಅಹಂಕಾರದಲ್ಲಿ ಲಯ ಹೊಂದುವುದು. ತೈಜಸಾಹಂಕಾರ ಕಾರ್ಯವಾದ ದಶೇಂದ್ರಿಯಗಳು ತೈಜಸದಲ್ಲಿಯೂ, ವೈಖಾರಿಕ ದೇವತಾ ಶರೀರಗಳು ವೈಖಾರಿಕ ಅಹಂಕಾರದಲ್ಲಿ ಲಯವಾಗುವುವು. ಈ ತ್ರಿವಿಧಾಹಂಕಾರ-ವನ್ನೂ ಮಹತತ್ವ ನುಂಗುತ್ತದೆ. ಮಹತತ್ವವನ್ನು ಸತ್ವಾದಿ ಗುಣಗಳು ನುಂಗುತ್ತವೆ. ಇವುಗಳ ಹರಿ ಪ್ರೇರಿತವಾದ ಸರ್ವಕ್ಕೂ ಬೀಜಭೂತವಾದ ಅವಕ್ತ ತತ್ವದಲ್ಲಿ ಲಯ ಹೊಂದುತ್ತವೆ.

**ಲಯಃ ಪ್ರಾಕೃತಿಕೋ ಹ್ಯೇಷಃ ಪುರುಷಾ ವ್ಯಕ್ತಯೋಃ ಯದಾ ।**

**ಶಕ್ತಯಃ ಸಂಪ್ರಲೀಯಂತೇ.... ॥**

ಹೀಗೆ ಬ್ರಹ್ಮಾಂಡಾಂತಃ ನಾಶವಾಗುತ್ತಿದ್ದಾಗ ಮಾನುಷ್ಯರಿಗೆ ದೇಹಲಯವು ಯಮನಲ್ಲಿ, ದೇಹಗಳೆಲ್ಲವೂ ಪಂಚಭೂತದಲ್ಲಿಯೂ, ಜೀವರೆಲ್ಲ ಯಮನಲ್ಲಿಯೂ ಅಚೇತನ ವಸ್ತುಗಳಿಗೆ ನಾಶವೂ, ಲಕ್ಷ್ಮ್ಯಾತ್ಮಕಲೋಕಗಳೆಲ್ಲ ಮೂಲರೂಪದಲ್ಲಿಯೂ, ಏಕೀಭಾವ ಹೊಂದುತ್ತವೆ. ಕಶ್ಯಪ ಸೃಷ್ಟ ವಸ್ತುಗಳು ಕಶ್ಯಪನಲ್ಲಿಯೂ, ಇವನು ಮರೀಚಿ-ಯಲ್ಲಿಯೂ, ಇವರು ಬ್ರಹ್ಮನಲ್ಲಿಯೂ, ಬ್ರಹ್ಮಾಂಡದೊಳಗೆ ಬ್ರಹ್ಮ ಶರೀರದಿಂದ ಹುಟ್ಟಿದ ಆಕಾಶಾದಿ ಪುರುಷದೇಹಾಭಿಮಾನಿಗಳೆಲ್ಲರೂ ವ್ಯುತ್ಕ್ರಮದಿಂದ ಪ್ರವೇಶವು. ಆ ಶರೀರಗಳೆಲ್ಲವೂ ಕಾಲಾಗ್ನಿಯಲ್ಲಿ ನಾಶ.

ಬಾಯಲ್ಲಿಟ್ಟುಕೊಳ್ಳುವನು. ಇದು ಅನಂತಾನಂತ ಬ್ರಹ್ಮಕಲ್ಪಗಳಲ್ಲಿ ಅನಂತ ಮುಕ್ತ ಬ್ರಹ್ಮಾದಿಗಳು ಅವನ ಪಾದಕ್ಕೆ ಅರ್ಪಿಸಿದ ಸೇವಾ ರೂಪ ರುಚಿ ಸವಿಯುವನು. ವಟಪತ್ರಶಾಯಿಯು 87 1/2 ವರ್ಷ ಮಲಗಿರುವನು. 87 1/2 ವರ್ಷದ ಕಡೆ ದಿನದಂದು ಅಂದರೆ ಹತ್ತುವರೆ ತಾಸಾಗಲು, ದುರ್ಗೆಯು ಜಯ ಜಯವೆಂದು ಶ್ರುತಿಗೀತೆ ಹಾಡುವಳು. ಈಗ ಎಚ್ಚೆತ್ತುವನಂತೆ ನಟಿಸುವನು. ಇಲ್ಲಿಂದ ಒಂದುವರೆ ತಾಸು ಅಂದರೆ ಪ್ರಲಯದ ಎಂಟನೇ ಭಾಗ ಅಂದರೆ 12 1/2 ವರ್ಷ ಸೃಷ್ಟಿಕಾಲವು. ಯೋಗವೆಂದರೆ ಮುಕ್ತರೊಂದಿಗೆ ಕ್ರೀಡಯೋಗ, ಮುಕ್ತರಿಗೆ ಶುದ್ಧ ಸತ್ವಾತ್ಮಕ ಶರೀರ ನೀಡಿ ಸತ್ವಾತ್ಮಕ ವಸ್ತ್ರಾಭರಣ ನೀಡಿದ ವಾಸುದೇವ ಹಯಗ್ರೀವ - ಹಯ - ವೃಷಭ - ಗೋ, ಇತ್ಯಾದಿ ವಿಹಾರ ನಡೆಸುವನು.

ಇನ್ನು ಎಷ್ಟು ಕಾಲದವರೆಗೂ ಏಕಾರ್ಣವದಲ್ಲಿರುವನೆಂದು ಕೇಳಿರುವೆ. ಇದಕ್ಕೆ ಉತ್ತರ ಚಿದಾತ್ಮಕನಾದ ಬ್ರಹ್ಮನೇ ತಿಳಿದಿರುತ್ತಾನೆ.

*ಕಶ್ಚಿತ್ ಬುಧ್ಯತೇ* = ನಾವೆಲ್ಲರೂ ತಿಳಿದಿಲ್ಲ. **ಕಶ್ಚಿನ್ನ ಬುಧ್ಯತೇ**

**ನ ವೈ ಮಾತಾ ನ ಚ ದ್ರಷ್ಟಾ ನ ಜ್ಞಾತಾ ನೈವ ಪಾರ್ಶ್ವಗಃ ।**
**ನ ಸ್ಮಾವಗಚ್ಛತೇ ಕಶ್ಚಿತ್ ಋತೇ ತಂ ದೇವಮೀಶ್ವರಮ್ ॥ 6 ॥**

ಭಗವಂತನು ಸಮಸ್ತಲೋಕಕ್ಕೂ ತಾಯಿಯಾಗಿರುವನು. ಅವನನ್ನು ಹಡೆದವರು ಯಾರಿದ್ದಾರೆ. ಚರಾಚರ ಪ್ರಪಂಚಕ್ಕೆ ತಂದೆಯಾಗಿರುವವನು. [**ಪಿತಾಸಿ ಲೋಕಸ್ಯ ಚರಾಚರಸ್ಯ**] ಪೂರ್ಣವಾಗಿ ತಿಳಿದವನು ಯಾರೂ ಇಲ್ಲ. ಅವನನ್ನು ಸಂಪೂರ್ಣ ನೋಡಿದವನೂ ಇಲ್ಲ. ಅಷ್ಟೇಕೆ? ಅವನ ಪಕ್ಕದಲ್ಲಿಯೆ ಇರುವ ಲಕ್ಷ್ಮೀದೇವಿಯೂ ಪೂರ್ಣ ತಿಳಿದವಳಲ್ಲ.

ಜ್ಞಾನದ ಖನಿಯಾಗಿರುವ (ಕಃಚಿತ್) ಬ್ರಹ್ಮದೇವನೂ ಸಹ ಸಾಕಲ್ಯೇನ ತಿಳಿದವನಲ್ಲ. ದೇವದೇವನಾದ ಹರಿಯೊಬ್ಬನೆ ತನ್ನನ್ನು ತಿಳಿಯಬಲ್ಲ ಮತ್ತೊಬ್ಬರು ತಿಳಿಯಲಾರರು.[4]

---

4. 1) ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
   2) ಮಮಯೋನಿಃ ಅಪ್ಸಂತಃ ಸಮುದ್ರೇ ।
   3) ಯೋ ನಃ ಪಿತಾ ಜನಿತಾ ಯೋ ವಿಧಾತಾ ।
   4) ವಿಷ್ಣೋಃ ಗುಣಾಂಶಲೇಶಂ ವಾ ನಜಾನಾತಿ ತಥಾಪಿತು ।
   5) ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ।

ಈ ಭಗವಂತನೆ ಅಕಾಶ ಹಾಗೂ ಅದರಭಿಮಾನಿ ಗಣಪನನ್ನು ಸೃಷ್ಟಿಸಿದನು. ಪೃಥಿವಿ ಹಾಗೂ ಧರಾದೇವಿಯನ್ನು, ವಾಯು ಮತ್ತು ಮರೀಚಿ, ಬ್ರಹ್ಮಾದಿ ಪ್ರಜಾಪತಿಗಳನ್ನೂ, ಭುವನ ಶ್ರೇಷ್ಠ ಇಂದ್ರದೇವನನ್ನೂ, ಪಿತಾಮಹ ಬ್ರಹ್ಮನಿಗೂ ಉಪದೇಶ ನೀಡಿದನೋ [ಯ ಆದಿಕವಯೇ ಬ್ರಹ್ಮ ಹೃದಾತೇನೆ]

ಅಂತಹ ಅಚಿಂತ್ಯಾದ್ಭುತ ಹರಿಯು ನೀರಿನ ಮೇಲೆ ಮಲಗುವನೆಂದು ಇಚ್ಛಿಸಿದನು. ಇಷ್ಟಪಟ್ಟು ಮಲಗಿದನು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಕಮಲೋತ್ಪತ್ತಿ ಎಂಬಲ್ಲಿ
ಒಂಭತ್ತನೆಯ ಅಧ್ಯಾಯವು ಸಮಾಪ್ತಿ

# ಅಥ ದಶಮೋಽಧ್ಯಾಯಃ

## ಮಹಾಸಮುದ್ರದಲ್ಲಿ ಹರಿಯ ಶಯನ

*ವೈಶಂಪಾಯನ ಉವಾಚ –*

**ಏವಮೇಕಾರ್ಣವೀಭೂತೇ ಶೇತೇ ಲೋಕೇ ಮಹಾದ್ಯುತಿಃ ।**
**ಪ್ರಚ್ಛಾದ್ಯ ಸಲಿಲಂ ಸರ್ವಂ ಹರಿರ್ನಾರಾಯಣಃ ಪ್ರಭುಃ ॥ 1 ॥**

ಜನಮೇಜಯನೇ! ಮಹಾದ್ಯುತಿವಂತನಾದ ಶ್ರೀಮನ್ನಾರಾಯಣನು ಪ್ರಲಯ ಜಲವನ್ನೆಲ್ಲ ಆಚ್ಛಾದಿಸಿಕೊಂಡು ಮಲಗಿದ್ದನು. ಭಗವಂತನು ರಜೋಪಲಕ್ಷಿತ ತ್ರಿಗುಣರಹಿತನಾಗಿದ್ದು ಪರಮಕ್ಷರ ಎಂದು ಜ್ಞಾನಿಗಳು ತಿಳಿಯುವರು. ಭೂತ ಭವಿಷ್ಯದ್ ವರ್ತಮಾನ ಕಾಲಗಳಿಗೂ ನಿಯಾಮಕನಾದ ಶ್ರೀಹರಿಯು ಮಲಗಿದವನಂತೆ ನಟಿಸಿದ.

## ಬ್ರಹ್ಮದೇವರ ಆವಿರ್ಭಾವ

**ಬ್ರಹ್ಮಾಣಂ ಪರಮಂ ವಕ್ತ್ರಾದುದ್ಗಾತಾರಂ ಚ ಸಾಮಗಮ್ ।**
**ಹೋತಾರಮಥ ಚಾಧ್ವರ್ಯುಂ ಬಾಹುಭ್ಯಾಮಸೃಜತ್ ಪ್ರಭುಃ ॥ 2 ॥**

ಯಜ್ಞಗಳಲ್ಲಿ ಋತ್ವಿಜರೆಂಬ ಬ್ರಾಹ್ಮಣರು ಶ್ರೀಹರಿಯಿಂದ ಪ್ರಕಟವಾದರು. ಶ್ರೀಹರಿಯು ಬ್ರಹ್ಮನೆಂಬ[1] ಋತ್ವಿಕ್ಕನನ್ನು ಸಾಮಗಾನ ಮಾಡುವ

1. ಅಧ್ವರ್ಯು, ಹೋತೃ, ಉದ್ಗಾತೃ, ಬ್ರಹ್ಮ – ಎಂದು ನಾಲ್ಕು ಮಂದಿ ಹೋಮಕ್ಕೆ ಇರುತ್ತಾರೆ.

ಉದ್ಗಾತೃವನ್ನೂ ತನ್ನ ಮುಖದಿಂದ ಸೃಷ್ಟಿಸಿದನು. ಹೋತೃ ಹಾಗೂ ಅಧ್ವರ್ಯುವನ್ನು ತನ್ನ ಭುಜಗಳಿಂದ ಸೃಷ್ಟಿಸಿದನು.

ವೇದಾಧ್ಯಯನ ಮಾಡುವ ಕಾರಣದಿಂದ ಬ್ರಾಹ್ಮಣಾಚ್ಛಂಸಿ ಎಂಬುವವನನ್ನು ತನ್ನ ತೋಳುಗಳಿಂದಲೂ, ಪ್ರಸ್ತೋತಾ, ಮೈತ್ರಾವರುಣರೆಂಬುವರನ್ನು ಹಾಗೂ ಪ್ರತಿಪ್ರಸ್ತಾತೃವನ್ನೂ ಸೃಷ್ಟಿಸಿ, ತನ್ನ ಉದರದಿಂದ ಪ್ರತಿಹತೃವನ್ನೂ ಪೋತೃವನ್ನೂ, ಮನಸ್ಸಿನಿಂದ ಅಚ್ಛಾವಾಕನನ್ನೂ, ತೊಡೆಯಿಂದ ನೇಷ್ಟೃವನ್ನೂ ಪ್ರಾಣಿಗಳಿಂದ ಆಗ್ನೀಧ್ರ ಹಾಗೂ ಸುಬ್ರಹ್ಮಣ್ಯನನ್ನೂ, ಭುಜದಿಂದ ಗ್ರಾವಾಣನನ್ನೂ ಹಾಗೂ ಉನ್ನೇತೃವನ್ನೂ ಪ್ರಕಟಗೊಳಿಸಿದನು.

ಹೀಗೆ ಹದಿನಾರು ಯಜ್ಞ ಋತ್ವಿಕ್ಕುಗಳನ್ನೂ ತನ್ನ ಶರೀರದ ಯವಗಳಿಂದ ಸೃಷ್ಟಿಸಿದ ಭಗವಂತನೆ ವೇದಪ್ರತಿಪಾದ್ಯನಾಗಿದ್ದು ವೇದಮಯನೂ, ಸರ್ವಯಜ್ಞಭೋಕ್ತೃವಾಗಿದ್ದು ಯಜ್ಞಮಯನೆನಿಸಿರುವನು.

ಷಡಂಗ ಸಹತಿ ಉಪನಿಷದಾದಿಗಳೆಲ್ಲವೂ ಭಗವಂತನ ಸ್ವರೂಪ ನಿರ್ಣಾಯಕಗಳು.

## ವಿಷ್ಣುನೊಂದಿಗೆ ಮಾರ್ಕಂಡೇಯರು

**ಸ್ವಪಿತ್ಯೇಕಾರ್ಣವೆ ಚೈವ ಯದಾಶ್ಚರ್ಯಮಭೂತ್ ತದಾ ।**
**ಶ್ರೂಯತೇ ತದ್ ಯಥಾವೃತ್ತಂ ಮಾರ್ಕಂಡೇಯೋ ಯದನ್ವಭೂತ್ ॥3॥**

---

ಅಧ್ವರ್ಯು ಯಜುರ್ವೇದ ಪಂಡಿತ. ಇವನಿಗೆ ಪ್ರತಿಪ್ರಸ್ಥಾತೃ, ನೇಷ್ಟೃ, ಉನೇಷ್ಟೃ ಎಂದು ಮೂವರು ಸಹಾಯಕರು.

ಹೋತೃವು ಋಗ್ವೇದ ರೀತ್ಯಾ ಹೋಮ ಮಾಡುವವನು. ಇವನಿಗೆ ಮೈತ್ರಾವರುಣ, ಅಚ್ಛಾವಾಕ, ಗ್ರಾವಸ್ತುತ್ ಎಂದು,

ಸಾಮವೇದ ಗಾನ ಕರ್ತೃವು ಉದ್ಗಾತಾಯೆಂದು, ಇವನಿಗೆ ಪ್ರಸ್ತೋತೃ, ಪ್ರತಿಹರ್ತೃ, ಸುಬ್ರಹ್ಮಣ್ಯಯೆಂದೂ

ಬ್ರಹ್ಮನು ನಾಲ್ಕೂ ವೇದಬಲ್ಲವನು ಹಾಗೂ ಕರ್ಮಗಳ ವಿಧಿವಿಧಾನ ತಿಳಿದವನು. ಇವನಿಗೆ ಬ್ರಾಹ್ಮಣಾಚ್ಛಂಸಿ, ಆಗ್ನಿಧ್ರ, ಪೋತೃ ಎಂದು ಮೂರು ಮಂದಿ ಸಹಾಯಕರು.

ಒಟ್ಟು ಹದಿನಾರು ಮಂದಿ ಸೇರಿ ಯಾಗ ನಡೆಸುವರು. ಸದಸ್ಯನು ಹದಿನೇಳನೆಯವನು.

ಶ್ರೀಮನ್ನಾರಾಯಣನು ಏಕಾರ್ಣವದಲ್ಲಿ ಮಲಗಿರುವಾಗ ಅಚ್ಚರಿ ಸಂಗತಿ ನಡೆಯಿತು. ಮಾರ್ಕಂಡೇಯರು[2] ಈ ಘಟನೆಯ ಅನುಭವವನ್ನು ಪಡೆದನು. ಇವರು ಯುವಕರಾಗಿದ್ದಾಗ ಹರಿಯ ಉದರದೊಳಗೆ ಸೇರಿಕೊಂಡಿದ್ದನು. ಅಲ್ಲಿಯೇ ಇದ್ದು ಬಹಳ ಸಹಸ್ರ ವರ್ಷಗಳು ಕಳೆದ. ಶ್ರೀಹರಿಯ ವರದಿಂದಾಗಿ ಮಾರ್ಕಂಡೇಯರು ಸಾವಿರಾರು ವರ್ಷಗಳನ್ನು ಪಡೆದಿದ್ದರು. ಮಾರ್ಕಂಡೇಯರು ಭೂಮಂಡಲವನ್ನೆಲ್ಲ ಸುತ್ತಿ ತೀರ್ಥಯಾತ್ರೆ ಮಾಡಿದರು. ಭಗವಂತನ ಉದರದಲ್ಲಿಯೆ ಇದ್ದು ಪವಿತ್ರ ಆಶ್ರಮಗಳನ್ನು ದೇವಾಲಯಗಳನ್ನೂ, ಚಿತ್ರ-ವಿಚಿತ್ರ ದೇಶ ವಿಶೇಷಗಳಿಗೆ ತಿರುಗಿದರು. ನಂತರ ಘೋರವಾದ ತಪಸ್ಸಿನಲ್ಲಿ ತೊಡಗಿದರು. ಜಪ ಹೋಮಾದಿಗಳನ್ನು ನಿರಂತರವಾಗಿ ಮಾಡಿ ದುರ್ಬಲರಾದರು. **[ಜಪಹೋಮರತಃ ಕ್ಷಾಂತಃ]**

**ಮಾರ್ಕಂಡೇಯ ಸ್ತತಸ್ತಸ್ಯ ಶನೈಃ ವಕ್ತ್ರಾದ್ ವಿನಿಃಸೃತಃ ।**
**ನಿಷ್ಕ್ರಾಮಂತಂ ನ ಚಾತ್ಮಾನಂ ಜಾನೀತೇ ದೇವಮಾಯಯಾ ॥ 4 ॥**

ನಂತರ ಮಹರ್ಷಿಗಳು ಶ್ರೀಹರಿಯ ಬಾಯಿಂದ ಹೊರಬಂದರು. ಅವರಿಗೆ ಹಾಗೆ ಹೊರಗೆ ಬಂದದ್ದೂ ತಿಳಿಯಲಿಲ್ಲ. ಇದೊಂದು ದೇವಮಾಯೆ. ಮಹರ್ಷಿಗಳು ಏಕಾರ್ಣವದ ಮೇಲೆ ನಿಂತರು. ಎಲ್ಲಿ ನೋಡಿದರೂ ಗಾಢಾಂಧಕಾರ ತುಂಬಿತ್ತು. ಋಷಿಗಳು ಭಯಪಟ್ಟರು. ನಾನು ಜೀವಿಸುವೆನೆ ಎಂದು ಸಂದೇಶಪಟ್ಟರು. ವಸ್ತುತಃ ಚಿರಂಜೀವಿಗಳಾಗಿದ್ದರು. ಭಗವಂತನ

---

2. **ಮಾರ್ಕಂಡೇಯರು :**

ಸ್ವಾಯಂಭುವ ಮನ್ವಂತರದಲ್ಲಿದ್ದ ಭೃಗು ಋಷಿಯ ಸಂತತಿಯಲ್ಲಿ ಬಂದ ಮೃಕಂಡುವಿನ ಪುತ್ರನು. ಹರಿವಾಯು ಭಕ್ತನು ಮಾರ್ಕಂಡೇಯರು ಹರಿಯನ್ನು ಮೆಚ್ಚಿಸಿ ಹದಿನಾಲ್ಕು ಕಲ್ಪಗಳ ಆಯುಸ್ಸು ಪಡೆದ. ಇವನ ಪತ್ನಿ ಧೂಮೋರ್ಣೆ. ಪುಷ್ಪಭದ್ರಾ ನದಿಯ ತೀರದಲ್ಲಿದ್ದ 'ಚಿತ್ರಾ' ಎಂಬ ಶಿಲೆಯಿರುವ ಸ್ಥಳದಲ್ಲಿ ಅವರ ಆಶ್ರಮವಿತ್ತು. [ಈಗಿನ ಭದ್ರಾವತಿ] ಇಲ್ಲಿರುವ ನೃಸಿಂಹದೇವರನ್ನು ಬಹಳ ಕಾಲ ಉಪಾಸಿಸಿದರು. ಹೀಗೆ ಉಗ್ರ ತಪಸ್ಸು ಮಾಡುತ್ತಿರುವಾಗ ಇಂದ್ರದೇವನು ಅಪ್ಸರೆಯರನ್ನೂ ಕಳುಹಿಸಿ ವಿಘ್ನ ಮಾಡಿದ. ಆದರೂ ಚಲಿಸಲಿಲ್ಲ. ಅವರ ತೇಜಸ್ಸು ಅವರನ್ನು ಸುಡಲಾರಂಭಿಸಿತು. ಹೀಗೆ ತಪಸ್ಸಿಗೆ ಮೆಚ್ಚಿದ ನರ-ನಾರಾಯಣರು ಈ ಆಶ್ರಮಕ್ಕೆ ಬಂದರು. ಅವರನ್ನು ಸತ್ಕರಿಸಿದರು. 'ವರ ಬೇಡು' ಎಂದಾಗ ತಮ್ಮ ಅಚಿಂತ್ಯಾದ್ಭುತ ಶಕ್ತಿ ನೋಡಬೇಕೆಂದಾಗ ತಾತ್ಕಾಲಿಕವಾಗಿ ಅವರಿಗೆ ಮಾತ್ರ ಪ್ರಲಯ ತೋರಿಸಿದರು.

ಅನುಗ್ರಹವಾಯಿತು. ಅವನು ತನ್ನ ದರ್ಶನ ನೀಡಿದ. ಅವನನ್ನು ನೋಡಿ ಅನಂದಭರಿತರಾದರು, ಅಚ್ಚರಿಪಟ್ಟರು.

**ದೇವದರ್ಶನ ಸಂಹೃಷ್ಟೋ ವಿಸ್ಮಯಂ ಚಾಗಮತ್ ಪರಮ್ ।**

ಪುನಃ ಸಂದೇಹದಿಂದ ಮನಸ್ಸು ಕಂಪಿಸಿತು. ನಾನೇಕೆ ಚಿಂತಿಸುತ್ತಿರುವೆ. ನನಗೇನು ಮೋಹವೆ? ಅಥವಾ ಇದು ಸ್ವಪ್ನವೆ? ಇವುಗಳಲ್ಲಿ ಯಾವುದಾದರೂ ಒಂದಾಗಿರಲೇಬೇಕು. ಇದು ನನ್ನದೆ ಆದ ಮೋಹವೆ ಇರಬೇಕು. ಏಕೆಂದರೆ ಇಲ್ಲಿ ಸೂರ್ಯಚಂದ್ರರಿಲ್ಲ. ವಾಯುವು ಸಂಚರಿಸುತ್ತಿಲ್ಲ. ಭೂಮಿಯಾಗಲಿ, ಪರ್ವತಗಳಾಗಲಿ, ಸಮುದ್ರವೆಲ್ಲವೂ ನೀರಿನಲ್ಲಿ ಮುಳುಗಿವೆ. ಇದು ನನಗೆ ತಿಳಿಯದ ಯಾವ ಲೋಕವಾಗಿರಬಹುದು ಎಂದು ಯೋಚಿಸುತ್ತಾ ನಿಂತರು. ಹೀಗಿರುವಾಗಲೇ ಸಾಗರ ಮಧ್ಯದಲ್ಲಿ ಮಲಗಿದ್ದ ಏಳು ಕೋಟಿ ಯೋಜನ ಮಹತ್ತಾದ, ನೀಲಮೇಘಶ್ಯಾಮನಾದ ಪುರುಷೋತ್ತಮನು ಪುನಃ ದರ್ಶನ ನೀಡಿದ. ಕೋಟಿ ಸೂರ್ಯ ಸಮಪ್ರಭನು. ಸ್ವಾಮಿ ನೀನಾರು? ಎನ್ನುತ್ತಿರುವಾಗಲೇ ಮೆಲ್ಲಗೆ ಅವನ ಬಾಯಿಯೊಳಗೆ ಪ್ರವೇಶಿಸಿದರು. ಅಲ್ಲಿ ನೋಡಿದಾಗ ಅವನ ಆಶ್ರಮ ಶಿಷ್ಯಾದಿಗಳೆಲ್ಲವೂ ಇದ್ದವು. ಈಗ ಸಮಾಧಾನ ಹೊಂದಿದರು. ಪುನಃ ಉದರದಲ್ಲಿಯೇ ಸಂಚರಿಸಿದರು. ಅಲ್ಲಿಯೇ ಸ್ವರ್ಗಲೋಕ, ಭೂಮಂಡಲವೆಲ್ಲವನ್ನೂ ತೀರ್ಥಯಾತ್ರೆ ನಡೆಸಿದರು. ನೂರಾರು ಋತ್ವಿಕ್ಕುಗಳು ಯಜ್ಞಯಾಗ ನಡೆಸುತ್ತಿದ್ದರು.

**ಪುಣ್ಯತೀರ್ಥಾನಿ ಪೂತಾನಿ ನಿರೈಕ್ಷದ್ ದಿವಿ ಭೂತಲೇ ।**
**ಪಶ್ಯತೇ ದೇವ ಕುಕ್ಷಿಸ್ಥಾನ್ ಯಜ್ಞಿಯಾನ್ ಶತಶೋ ದ್ವಿಜಾನ್ ॥ 5 ॥**
**ವರ್ಷಾಣಾಂ ಶತಸಾಹಸ್ರಂ ಮಾರ್ಕಂಡೇಯೋ ಮಹಾಮುನಿಃ ।**
**ವಿಚರನ್ ಪೃಥಿವೀಂ ಕೃತ್ಸ್ನಾಂ ನ ಚ ಕುಕ್ಷ್ಯಂತ ಮೈಕ್ಷತ ॥ 6 ॥**

ಸಕಲವರ್ಣದವರೂ ಸದಾಚಾರ ಸಂಪನ್ನರಾಗಿದ್ದರು. ಬ್ರಹ್ಮಚರ್ಯಾದಿ ನಾಲ್ಕು ಆಶ್ರಮ ಧರ್ಮಗಳನ್ನು ಉತ್ತಮ ರೀತಿಯಲ್ಲಿ ವಿಧಿವತ್ತಾಗಿ ಅನುಸರಿಸುತ್ತಿರುವ ಮಹರ್ಷಿಗಳು ಭಗವಂತನ ಕುಕ್ಷಿಯಲ್ಲಿ ಕಂಡರು. ಬ್ರಹ್ಮವೇತ್ತರನ್ನು ಯಜ್ಞ ನಿಷ್ಠರನ್ನೂ ಪವಿತ್ರ ಕ್ಷೇತ್ರಗಳನ್ನೂ ನೋಡುತ್ತಾ ಒಂದು ಲಕ್ಷ ವರ್ಷಗಳನ್ನೂ ಕಳೆದರು. ಇಷ್ಟಾದರೂ ಭಗವಂತನ ಉದರದ ಅಂತ್ಯ ಭಾಗವನ್ನು ಕಾಣಲೆ ಇಲ್ಲ.

ಮುನಿಃ ಮಾರ್ಕಂಡೇಯರು ಮಗುವಿನ ಬಾಯಿಂದ ಹೊರಬಂದರು. ಹೊರಗೆ ನೋಡಿದರೆ ಅಗಾಧ ಜಲದ ಮಧ್ಯದಲ್ಲಿ ಬಾಲನೊಬ್ಬನು ಆಲದೆಲೆಯ ಮೇಲೆ ಮಲಗಿ ತೇಲಾಡುತ್ತಿದ್ದದ್ದನ್ನು ಮಾರ್ಕಂಡೇಯರು ನೋಡಿದರು. ಇದರಿಂದಾಗಿ ಮತ್ತು ಆಶ್ಚರ್ಯವುಂಟು ಮಾಡಿತ್ತು. ಸೂರ್ಯನಂತೆ ಪ್ರಕಾಶಮಾನವಾಗಿದ್ದ ಮಗುವಿನ ಬಳಿ ಹೋಗಲು ಸಾಧ್ಯವಾಗಲಿಲ್ಲ. ಹೀಗೆ ಚಿಂತಿಸಿದನು.

**ಪೂರ್ವದೃಷ್ಟಮಿದಂ ನೇತಿ ಶಂಕಿತೋ ದೇವಮಾಯಯಾ ।**

ನಾನು ಇಂತಹ ದೃಶ್ಯವನ್ನು ಹಿಂದೆಂದೂ ನೋಡಲೇ ಇಲ್ಲವಲ್ಲ. ಇದು ಯಾವುದಿರಬಹುದು? ಎಂದು ಸಂದೇಹ ಬಂದಿತು.

ಇಷ್ಟರಲ್ಲಿ ತನ್ನಿಚ್ಛೆಯಂತೆ ಬಾಲ ಸ್ವರೂಪ ಹೊಂದಿದ್ದ ಹಂಸ ಸ್ವರೂಪನಾದ ಭಗವಂತನು ಮೇಘದ ಗರ್ಜನೆಯಂತೆ ಗಂಭೀರ ಸ್ವರದಿಂದ ಕೂಡಿದ ಮಾತನ್ನಾಡಿದನು.

**ಮಾ ಭೈಃ ವತ್ಸ! ನ ಭೇತವ್ಯ ಇಹೈವಾಯಾಹಿ ಚಾಂತಿಕಮ್ ।**
**ಮಾರ್ಕಂಡೇಯ ಮುನೇ ಧೀರ ಬಾಲಸ್ತ್ವಂ ಶ್ರಮಪೀಡಿತಃ ॥ 7 ॥**

ವತ್ಸ! ಮಾರ್ಕಂಡೇಯ! ಭಯಪಡಬೇಡ. ನನ್ನ ಸಮೀಪ ಬರುವವನಾಗು. ನೀನಿನ್ನು ಬಾಲಕನು. ಹೀಗಾಗಿ ಶ್ರಮದಿಂದ ದುಃಖಿಸುತ್ತಿರುವೆ ಎಂದಾಗ ಜ್ಞಾನ, ತಪಸ್ಸು, ವಯಸ್ಸುಗಳಲ್ಲಿ ವೃದ್ಧರಾದ ಮಾರ್ಕಂಡೇಯರಿಗೆ ತನ್ನನ್ನು ಮಗು ಎಂದು ಸಂಬೋಧಿಸಿದ ಆ ವ್ಯಕ್ತಿ ಯಾರೆಂದು ಅಚ್ಚರಿಯಿಂದ ನೋಡಿದರು.

**ಕೋ ಮಾಂ ನಾಮ್ನಾ ಕೀರ್ತಯತೇ ತಪಃ ಪರಿಭವನ್ ಮಮ ।**
**ಬಹುವರ್ಷಸಹಸ್ರಾಯುಃ ಧರ್ಷಯಂಶ್ಚೈವ ಮೇವಯಃ ॥ 8 ॥**

**ವಿಷ್ಣು ಮಾರ್ಕಂಡೇಯರ ಸಂವಾದ**

**ಮಾಂ ಬ್ರಹ್ಮಾಪಿ ಸ ವಿಶ್ವೇಶೋ ದೀರ್ಘಾಯುರಿತಿ ಭಾಷತೇ ॥ 9 ॥**

ವಯೋವೃದ್ಧನೂ, ಜ್ಞಾನವೃದ್ಧನೂ ತಪೋವೃದ್ಧರನೂ ಆದವನೂ ಹಾಗೂ ಮಹಾಯುಸ್ಸುನ್ನೂ ಕಡೆಗಣಿಸಿ ನನ್ನನ್ನು ಹೆಸರಿಟ್ಟು ಕೂಗಿದ್ದಲ್ಲದೆ, 'ಮಗು' ಎಂದೂ ಸಂಬೋಧನೆ ಮಾಡಿದವರು ಯಾರು?

ಅನುಗ್ರಹವಾಯಿತು. ಅವನು ತನ್ನ ದರ್ಶನ ನೀಡಿದ. ಅವನನ್ನು ನೋಡಿ ಆನಂದಭರಿತರಾದರು, ಅಚ್ಚರಿಪಟ್ಟರು.

**ದೇವದರ್ಶನ ಸಂಹೃಷ್ಟೋ ವಿಸ್ಮಯಂ ಚಾಗಮತ್ ಪರಮ್ ।**

ಪುನಃ ಸಂದೇಹದಿಂದ ಮನಸ್ಸು ಕಂಪಿಸಿತು. ನಾನೇಕೆ ಚಿಂತಿಸುತ್ತಿರುವೆ. ನನಗೇನು ಮೋಹವೆ? ಅಥವಾ ಇದು ಸ್ವಪ್ನವೆ? ಇವುಗಳಲ್ಲಿ ಯಾವುದಾದರೂ ಒಂದಾಗಿರಲೇಬೇಕು. ಇದು ನನ್ನದೆ ಆದ ಮೋಹವೆ ಇರಬೇಕು. ಏಕೆಂದರೆ ಇಲ್ಲಿ ಸೂರ್ಯಚಂದ್ರರಿಲ್ಲ. ವಾಯುವು ಸಂಚರಿಸುತ್ತಿಲ್ಲ. ಭೂಮಿಯಾಗಲಿ, ಪರ್ವತಗಳಾಗಲಿ, ಸಮುದ್ರವೆಲ್ಲವೂ ನೀರಿನಲ್ಲಿ ಮುಳುಗಿವೆ. ಇದು ನನಗೆ ತಿಳಿಯದ ಯಾವ ಲೋಕವಾಗಿರಬಹುದು ಎಂದು ಯೋಚಿಸುತ್ತಾ ನಿಂತರು. ಹೀಗಿರುವಾಗಲೇ ಸಾಗರ ಮಧ್ಯದಲ್ಲಿ ಮಲಗಿದ್ದ ಏಳು ಕೋಟಿ ಯೋಜನ ಮಹತ್ತಾದ, ನೀಲಮೇಘಶ್ಯಾಮನಾದ ಪುರುಷೋತ್ತಮನು ಪುನಃ ದರ್ಶನ ನೀಡಿದ. ಕೋಟಿ ಸೂರ್ಯ ಸಮಪ್ರಭನು. ಸ್ವಾಮಿ ನೀನಾರು? ಎನ್ನುತ್ತಿರುವಾಗಲೇ ಮೆಲ್ಲಗೆ ಅವನ ಬಾಯಿಯೊಳಗೆ ಪ್ರವೇಶಿಸಿದರು. ಅಲ್ಲಿ ನೋಡಿದಾಗ ಅವನ ಆಶ್ರಮ ಶಿಷ್ಯಾದಿಗಳೆಲ್ಲವೂ ಇದ್ದವು. ಈಗ ಸಮಾಧಾನ ಹೊಂದಿದರು. ಪುನಃ ಉದರದಲ್ಲಿಯೇ ಸಂಚರಿಸಿದರು. ಅಲ್ಲಿಯೇ ಸ್ವರ್ಗಲೋಕ, ಭೂಮಂಡಲವೆಲ್ಲವನ್ನೂ ತೀರ್ಥಯಾತ್ರೆ ನಡೆಸಿದರು. ನೂರಾರು ಋತ್ವಿಕ್ಕುಗಳು ಯಜ್ಞಯಾಗ ನಡೆಸುತ್ತಿದ್ದರು.

**ಪುಣ್ಯತೀರ್ಥಾನಿ ಪೂತಾನಿ ನಿರೈಕ್ಷದ್ ದಿವಿ ಭೂತಲೇ ।**
**ಪಶ್ಯತೇ ದೇವ ಕುಕ್ಷಿಸ್ಥಾನ್ ಯಜ್ಞಿಯಾನ್ ಶತಶೋ ದ್ವಿಜಾನ್ ॥ 5 ॥**
**ವರ್ಷಾಣಾಂ ಶತಸಾಹಸ್ರಂ ಮಾರ್ಕಂಡೇಯೋ ಮಹಾಮುನಿಃ ।**
**ವಿಚರನ್ ಪೃಥಿವೀಂ ಕೃತ್ಸ್ನಾಂ ನ ಚ ಕುಕ್ಷ್ಯಂತ ಮೈಕ್ಷತ ॥ 6 ॥**

ಸಕಲವರ್ಣದವರೂ ಸದಾಚಾರ ಸಂಪನ್ನರಾಗಿದ್ದರು. ಬ್ರಹ್ಮಚರ್ಯಾದಿ ನಾಲ್ಕು ಆಶ್ರಮ ಧರ್ಮಗಳನ್ನು ಉತ್ತಮ ರೀತಿಯಲ್ಲಿ ವಿಧಿವತ್ತಾಗಿ ಅನುಸರಿಸುತ್ತಿರುವ ಮಹರ್ಷಿಗಳು ಭಗವಂತನ ಕುಕ್ಷಿಯಲ್ಲಿ ಕಂಡರು. ಬ್ರಹ್ಮವೇತ್ತರನ್ನು ಯಜ್ಞ ನಿಷ್ಠರನ್ನೂ ಪವಿತ್ರ ಕ್ಷೇತ್ರಗಳನ್ನೂ ನೋಡುತ್ತಾ ಒಂದು ಲಕ್ಷ ವರ್ಷಗಳನ್ನೂ ಕಳೆದರು. ಇಷ್ಟಾದರೂ ಭಗವಂತನ ಉದರದ ಅಂತ್ಯ ಭಾಗವನ್ನು ಕಾಣಲೆ ಇಲ್ಲ.

ಪುನಃ ಮಾರ್ಕಂಡೇಯರು ಮಗುವಿನ ಬಾಯಿಂದ ಹೊರಬಂದರು. ಹೊರಗೆ ನೋಡಿದರೆ ಅಗಾಧ ಜಲದ ಮಧ್ಯದಲ್ಲಿ ಬಾಲನೊಬ್ಬನು ಆಲದೆಲೆಯ ಮೇಲೆ ಮಲಗಿ ತೇಲಾಡುತ್ತಿದ್ದದ್ದನ್ನು ಮಾರ್ಕಂಡೇಯರು ನೋಡಿದರು. ಇದರಿಂದಾಗಿ ಮತ್ತು ಆಶ್ಚರ್ಯವುಂಟು ಮಾಡಿತ್ತು. ಸೂರ್ಯನಂತೆ ಪ್ರಕಾಶಮಾನವಾಗಿದ್ದ ಮಗುವಿನ ಬಳಿ ಹೋಗಲು ಸಾಧ್ಯವಾಗಲಿಲ್ಲ. ಹೀಗೆ ಚಿಂತಿಸಿದನು.

**ಪೂರ್ವದೃಷ್ಟಮಿದಂ ನೇತಿ ಶಂಕಿತೋ ದೇವಮಾಯಯಾ ।**

ನಾನು ಇಂತಹ ದೃಶ್ಯವನ್ನು ಹಿಂದೆಂದೂ ನೋಡಲೇ ಇಲ್ಲವಲ್ಲ. ಇದು ಯಾವುದಿರಬಹುದು? ಎಂದು ಸಂದೇಹ ಬಂದಿತು.

ಇಷ್ಟರಲ್ಲಿ ತನ್ನಿಚ್ಛೆಯಂತೆ ಬಾಲ ಸ್ವರೂಪ ಹೊಂದಿದ್ದ ಹಂಸ ಸ್ವರೂಪನಾದ ಭಗವಂತನು ಮೇಘದ ಗರ್ಜನೆಯಂತೆ ಗಂಭೀರ ಸ್ವರದಿಂದ ಕೂಡಿದ ಮಾತನ್ನಾಡಿದನು.

**ಮಾ ಭೈಃ ವತ್ಸ! ನ ಭೇತವ್ಯ ಇಹ್ಯೈವಾಯಾಹಿ ಚಾಂತಿಕಮ್ ।**
**ಮಾರ್ಕಂಡೇಯ ಮುನೇ ಧೀರ ಬಾಲಸ್ತ್ವಂ ಶ್ರಮಪೀಡಿತಃ ॥ 7 ॥**

ವತ್ಸ! ಮಾರ್ಕಂಡೇಯ! ಭಯಪಡಬೇಡ. ನನ್ನ ಸಮೀಪ ಬರುವವನಾಗು. ನೀನಿನ್ನು ಬಾಲಕನು. ಹೀಗಾಗಿ ಶ್ರಮದಿಂದ ದುಃಖಿಸುತ್ತಿರುವೆ ಎಂದಾಗ ಜ್ಞಾನ, ತಪಸ್ಸು, ವಯಸ್ಸುಗಳಲ್ಲಿ ವೃದ್ಧರಾದ ಮಾರ್ಕಂಡೇಯರಿಗೆ ತನ್ನನ್ನು ಮಗು ಎಂದು ಸಂಬೋಧಿಸಿದ ಆ ವ್ಯಕ್ತಿ ಯಾರೆಂದು ಅಚ್ಚರಿಯಿಂದ ನೋಡಿದರು.

**ಕೋ ಮಾಂ ನಾಮ್ನಾ ಕೀರ್ತಯತೇ ತಪಃ ಪರಿಭವನ್ ಮಮ ।**
**ಬಹುವರ್ಷಸಹಸ್ರಾಯುಃ ಧರ್ಷಯಂಶ್ಚೈವ ಮೇವಯಃ ॥ 8 ॥**

## ವಿಷ್ಣು ಮಾರ್ಕಂಡೇಯರ ಸಂವಾದ

**ಮಾಂ ಬ್ರಹ್ಮಾಪಿ ಸ ವಿಶ್ವೇಶೋ ದೀರ್ಘಾಯುರಿತಿ ಭಾಷತೇ ॥ 9 ॥**

ವಯೋವೃದ್ಧನೂ, ಜ್ಞಾನವೃದ್ಧನೂ ತಪೋವೃದ್ಧರನೂ ಆದವನೂ ಹಾಗೂ ಮಹಾಯುಸ್ಸುನ್ನೂ ಕಡೆಗಣಿಸಿ ನನ್ನನ್ನು ಹೆಸರಿಟ್ಟು ಕೂಗಿದ್ದಲ್ಲದೆ, 'ಮಗು' ಎಂದೂ ಸಂಬೋಧನೆ ಮಾಡಿದವರು ಯಾರು?

ಚತುರ್ಮುಖನೂ ನನ್ನನ್ನು ದೀರ್ಘಾಯು ಮಹರ್ಷಿಯೇ, ಎಂದೇ ನನ್ನನ್ನು ಸಂಬೋಧಿಸುವನೆ ಹೊರತು ಹೆಸರಿಟ್ಟು ಕರೆಯುವುದಿಲ್ಲ. ನನ್ನನ್ನು 'ಮಾರ್ಕಂಡೇಯ' ಎಂದು ಕರೆಯುತ್ತಾ ಮೃತ್ಯುವಿನ ದವಡೆ ಸೇರುತ್ತಿರುವ ಇವನಾರು?

**ಕಸ್ತಮೋ ಘೋರಶಿರಸಃ ಮಮಾದ್ಯ ತ್ಯಕ್ತಜೀವಿತಃ ।**
**ಮಾರ್ಕಂಡೇಯೇತಿ ಮಾಂ ಪ್ರೋಕ್ತ್ವಾ ಮೃತ್ಯುಮೀಕ್ಷಿತುಮಿಚ್ಛತಿ ॥ 10 ॥**

ವೈಶಂಪಾಯನರು ಜನಮೇಜಯನೇ! ಮಾರ್ಕಂಡೇಯರು ಕೋಪಗೊಂಡು ಹೀಗೆ ಹೇಳಲು ತನ್ನ ಪರಮಭಕ್ತನಾದ ತನ್ನನ್ನೆ ಆಶ್ರಯಿಸಿರುವ ಮೃಕುಡುಪುತ್ರರನ್ನು ನೋಡಿ ಭಗವಂತನು ಹೀಗೆ ಹೇಳಿದನು.

**ಅಹಂ ತೇ ಜನಕೋ ವತ್ಸ! ಹೃಷೀಕೇಶಃ ಪಿತಾ ಗುರುಃ ।**
**ಆಯುಃ ಪ್ರದಾತಾ ಪೌರಾಣಃ ಕಿಮರ್ಥಂ ನೋಪಸರ್ಪತಿ ॥ 11 ॥**

ವತ್ಸ ಮಾರ್ಕಂಡೇಯ! ನಾನು ನಿನ್ನ ಜನ್ಮಕ್ಕೆ ಕಾರಣನಾದ ತಂದೆಯೂ, ನಿನಗೆ ಗುರುವೂ ಆಗಿರುವೆ. ಇಂದ್ರಿಯ ಪ್ರೇರಕ ಹೃಷಿಕೇಶನು ನಾನೇ. ನಿನಗೆ ದೀರ್ಘಾಯುಷ್ಯವನ್ನು ನೀಡಿದವನೂ ನಾನೆಂದು ತಿಳಿ. ನಿನ್ನನ್ನು ಕರೆದರೂ ಬರುತ್ತಿಲ್ಲವೇಕೆ?

ಹಿಂದೆ ಪುತ್ರ ಕಾಮನೆಯಿಂದ ನಿನ್ನ ತಂದೆ ಅಂಗೀರಸರು ತೀವ್ರವಾದ ತಪಸ್ಸು ಮಾಡಿದ್ದರಿಂದಾಗಿ ನಾನು ಮೆಚ್ಚಿ ಅಗ್ನಿ ತೇಜಸ್ಸಿಗೆ ಸದೃಶವಾದ ತೇಜಸ್ಸಿನಿಂದ ಕೂಡಿದ್ದ ದೀರ್ಘಾಯುವೂ, ನನಗೆ ಪರಮಪ್ರಿಯನೂ ಆದ ಘೋರಶಿರಸ್ಸೆಂಬ ನಿನ್ನನ್ನು ನಿನ್ನ ತಂದೆ ಮೃಕಂಡುವಿಗೆ ನಾನೇ ಮಗನಾಗಿ ನೀಡಿರುವೆನು.

**ತತಸ್ತ್ವಾಂ ಘೋರಶಿರಸಂ ದಹನೋಪಮತೇಜಸಮ್ ।**
**ದತ್ತವಾನಹಮಾತ್ಮೇಷ್ಟಂ ಮಹರ್ಷಿಮಮಿತಾಯುಷಮ್ ॥ 11 ॥**

ಯಾವ ಪ್ರಾಣಿಯು ನನ್ನ ಇಚ್ಛೆಯಿಲ್ಲದೆ ನನ್ನ ಭಕ್ತನಲ್ಲದಿದ್ದರೆ ಯೋಗಾಧರ್ಮವನ್ನಾಶ್ರಯಿಸಿ ಪ್ರಲಯಾರ್ಣವದಲ್ಲಿ ಮಲಗಿ ವಿಹರಿಸುವ ನನ್ನನ್ನು ನೋಡಲು ಸಾಧ್ಯವಿಲ್ಲ. ನೀನಾದರೂ ನನ್ನ ಅನುಗ್ರಹ ವಿಶೇಷದಿಂದ ನೀನು ಹುಟ್ಟಿರುವೆ. ನನ್ನ ಪುತ್ರನಾಗಿರುವೆ. ಆದ್ದರಿಂದಲೇ ನಿನ್ನನ್ನು ಹತ್ತಿರಕ್ಕೆ ಕರೆದೊಯ್ಯುತ್ತಿರುವೆ.

ವೈಶಂಪಾಯನರು ರಾಜನ್! ಭಗವಂತನ ಈ ಮಾತುಗಳನ್ನು ಕೇಳಿದ ಮಾರ್ಕಂಡೇಯರು ವಿಸ್ಮಯಪಟ್ಟರು. ಮುಖ ಅರಳಿತು. ಕಣ್ಣುಗಳು ಅರಳಿದವು. ಕೈಜೋಡಿಸಿಕೊಂಡು ತಲೆಯ ಮೇಲಿಟ್ಟು ನಮಿಸಿದನು.

**ಮೂರ್ಧ್ನಿ ಬದ್ಧಾಂಜಲಿಪುಟೋ ಮರ್ಕಂಡೇಯೋ ಮಹಾತಪಾಃ ।**

ಏಕಾರ್ಣವದಲ್ಲಿ ವಿಹರಿಸುತ್ತಿದ್ದ ಶ್ರೀಹರಿಯೆ ತನ್ನ ನಾಮ ಗೋತ್ರಗಳನ್ನು ಹೇಳಿದ್ದನ್ನು ಕೇಳಿ ಭಗವಂತನನ್ನು ಸ್ತುತಿಸಿದರು.

ಪ್ರಭುವೆ! ಈ ಬಾಲಕ ರೂಪದಿಂದ ಪವಡಿಸಿರುವ ನಿನ್ನ ಮಾಯೆಯನ್ನು ತಿಳಿಸಬೇಕು ಎಂದನು.

**ಕಿಂ ಸಂಜ್ಞಃ ಕಶ್ಚ ಭಗವಾನ್ ಲೋಕೇ ವಿಜ್ಞಾಯ ತೇಽನಘ ।**
**ತರ್ಕಯೇ ತ್ವಾಂ ಮಹಾಭೂತಂ ನ ಭೂತಮಿಹ ತಿಷ್ಠತಿ ॥ 12 ॥**

ಐಶ್ವರ್ಯಾದಿಗಳಿಂದ ಧರ್ಮದಿಂದಲೂ ಕಾಂತಿಯಿಂದಲೂ ಸಂಪನ್ನ-ನಾಗಿರುವ ನೀನು ಯಾರು? ನಿನ್ನ ಶುಭನಾಮ ಯಾವುದು? ನೀನು ಮಹದ್ಭೂತವೆನಿಸಿರುವ ಶ್ರೀಮನ್ನಾರಾಯಣನೇ ಆಗಿರುವಿ. ಸಾಮಾನ್ಯ ಪ್ರಾಣಿಗಳಿಗೆ ಈ ಪ್ರಲಯಾರ್ಣವದಲ್ಲಿ ಪವಡಿಸಲು ಸಾಧ್ಯವಿಲ್ಲ.

ಭಗವಂತನು –

**ಅಹಂ ನಾರಾಯಣೋ ಬ್ರಹ್ಮಾ ಸಂಭವಃ ಸರ್ವದೇಹಿನಾಮ್ ।**
**ಸರ್ವಭೂತೋದ್ಭವಕರಃ ಸರ್ವಭೂತ ವಿನಾಶನಃ ॥ 13 ॥**

ಮಹಾಮುನಿಯೇ! ನಾನೇ ನಾರಾಯಣನು. ಸರ್ವರಿಗೂ ಪಿತನೆನಿಸಿದ ಚತುರ್ಮುಖನು ಕಾರಣನಾಗಿರುವನು. ಅವನಲ್ಲಿದ್ದು ಸೃಷ್ಟಿಸಿದ ಬ್ರಹ್ಮನೇ ನಾನು. ಸಮಸ್ತ ಪ್ರಾಣಿಗಳ ಸಂಹಾರ ಮಾಡುವ ರುದ್ರನಲ್ಲಿದ್ದು ರುದ್ರನಾಗಿ ಸಂಹರಿಸುವವನೂ ನಾನೇ.

ಇಂದ್ರನ ಪದವಿಯಲ್ಲಿರುವವನೂ ಇಂದ್ರಾಂತರ್ಯಾಮಿಯೂ, ಋತುಗಳ ಸ್ವಾಮಿಯೆನಿಸಿದ ಸಂವತ್ಸರನೂ ನಾನೇ, ಯುಗ ಪ್ರವರ್ತಕ, ಯುಗ ನೇತಾರನೂ ನಾನೇ, ಸಮಸ್ತ ಪ್ರಾಣಿಗಳೂ, ಸಮಸ್ತ ದೇವತೆಗಳೂ ನಾನೇ ಆಗಿದ್ದೇನೆ.

ಅನೇಕ ಹೆಡೆಗಳುಳ್ಳ ಸರ್ಪಗಳಿಗೆಲ್ಲ ಶೇಷನಲ್ಲಿ ಅನಂತನೆಂಬ ಹೆಸರಿನಿಂದಿರುವೆ. ವೈನತೇಯನೆಂಬ ಹೆಸರಿನಿಂದ ಗರುಡನಲ್ಲಿದ್ದು ಎಲ್ಲ ಪಕ್ಷಿಗಳಿಕ್ಕಿಂತ ಶ್ರೇಷ್ಠತೆಯನ್ನು ಅವನಿಗೆ ನೀಡಿದವನು ನಾನು.

**ಭುಜಂಗಾನಾಮಹಂ ಶೇಷಃ ತಾರ್ಕ್ಷ್ಯೋಽಹಂ ಸರ್ವಪಕ್ಷಿಣಾಮ್ ।**

ನಾನೇ ಸಹಸ್ರ ಶಬ್ದಿತ ಅನಂತ ಶಿರಸ್ಸಿನಿಂದ ಕೂಡಿದ ವಿರಾಟ್ ಪುರುಷ-ನಾಗಿರುವೆನು. ಪಾದಗಳಿಂದ ಪೃಥಿವೀ ಆಕಾಶವೂ ನಾನೇ. ಲೋಕ ಬೆಳಗುವ ಸೂರ್ಯನು ಯಜ್ಞ ಪುರುಷ ತಪೋಯಜ್ಞ ಯೋಗಯಜ್ಞ ಇವೇ ಮೊದಲಾದ ಯಜ್ಞಗಳಿಂದ ಕೂಡಿರುವ ಮಹಾಯಜ್ಞನು ನಾನೇ. ಯಜ್ಞ ಹವಿಸ್ಸನ್ನೂ ನೀಡುವ ಅಗ್ನಿಯೂ, ಜಲಚರ ಪ್ರಾಣಿಗಳ ರಕ್ಷಕ ವರುಣನೂ ನಾನೆ. **[ವರುಣೋ ಯಾದಸಾಮಹಮ್]**

**ಯತ್ ಪೃಥಿವ್ಯಾಂ ದ್ವಿಜೇಂದ್ರಾಣಾಂ ತಪಸಾ ಭಾವಿತಾತ್ಮನಾಮ್ ।**
**ಬಹುಜನ್ಮನಿರುದ್ಧಾತ್ಮಾ ಬ್ರಾಹ್ಮಣೋ ಯತಿರುಚ್ಯತೇ ॥ 14 ॥**

ಭೂಮಿಯಲ್ಲಿ ಸ್ವಧರ್ಮಾನುಷ್ಠಾನರೂಪ ತಪಸ್ಸಿನಿಂದ ಶುದ್ಧಾಂತಃಕರಣರಾದ ಪುರುಷರಲ್ಲಿ ಹಲವಾರು ಜನ್ಮಗಳಿಂದ ಯೋಗ ಸಾಧನೆ ಮಾಡಿ ಸನ್ಯಾಸಿಯೋ, ಯಾರನ್ನು ಬ್ರಹ್ಮನೆಂದು ಕರೆಯುವರೋ ಅವನೇ ನಾನು. ಸರ್ವನಿಯಮನ ಮಾಡುವ ಸರ್ವರ ಅಂತಕನೆನಿಸಿದ ಯಮ ನಾನೇ. ಸರ್ವರನ್ನೂ ಬಂಧಿಸುವ ಪದಾರ್ಥಗಳಲ್ಲಿ ಶ್ರೇಷ್ಠವಾದ ಕಾಲದಲ್ಲಿ ಕಾಲನೆಂಬ ಹೆಸರಿನಿದಿದ್ದು ಕಾಲಕ್ಕೆ ಶ್ರೇಷ್ಠತೆ ನೀಡಿದವನು ನಾನು. **[ಕಾಲಃ ಕಲಯತಾಮಹಂ]** ನಾನೇ ಕರ್ಮ ಕ್ರಿಯೆ ಜೀವರಿಗೆ ಧರ್ಮ ಸ್ವರೂಪ ತಿಳಿಸಿದವನು ನಾನೇ. ಸಕಲಕ್ರಿಯೆಗಳಿಗೂ ಸಾಕ್ಷಿಯು. ಪ್ರಧಾನ ಪುರುಷ, ದೇವತೆಗಳೆಲ್ಲವೂ ನನ್ನ ಅಧೀನ. ವೇದಗಳನ್ನು ರಕ್ಷಿಸಿದ ಹಯಗ್ರೀವ ದೇವ ನಾನೇ. ಪ್ರಜಾಪತಿಗಳೂ ನಾನೇ. ಸಾಂಖ್ಯ-ಯೋಗ ನಾನೇ. ನಾನೇ ವಿದ್ಯಾಧಿಪತಿ ವ್ಯಾಸರು. ಅಗ್ನಿ, ವಾಯು, ಭೂಮಿ, ಆಕಾಶಾದಿ ಪಂಚಭೂತಗಳು ನಾನೇ ಆಗಿರುವೆನು. ಸಮುದ್ರಗಳೂ, ನಕ್ಷತ್ರಗಳೂ, ದಶದಿಕ್ಕುಗಳೂ, ಮಳೆ, ಸೋಮನೂ ಪರ್ಜನ್ಯ ಸೂರ್ಯನೂ ನಾನೇ. ಸಮುದ್ರದಲ್ಲಿರುವ ವಾಡವಾಗ್ನಿಯೂ ನಾನೇ ಆಗಿದ್ದೇನೆ. ಪ್ರಲಯ ಸಂವರ್ತಕಾಗ್ನಿಯೂ ಆಗಿದ್ದು ಜಗತ್ತಿನಲ್ಲಿರುವ ಜಲರೂಪ ಹವಿಸ್ಸನ್ನು ಪಾನ ಮಾಡುತ್ತೇನೆ.

ನಾನೇ ಪರಮ ಪುರಾಣ ಪುರುಷ. ಪರಮಾಶ್ರಯನೂ, ಸಕಲ ಜಗನ್ನಿರ್ಮಾತೃವೂ ನಾನೇ. ನೋಡುವ ವಸ್ತು ನೋಡುವವನೂ, ಕೇಳಬೇಕಾದ ವಸ್ತುವು ಕೇಳುವವನೂ ನಾನೇ.

ಮಾರ್ಕಂಡೇಯನೇ ಹಿಂದೆ ನಾನೇ ಈ ಜಗತ್ತನ್ನು ಸೃಷ್ಟಿಸಿದ್ದೆ. ಈಗಲೂ ಇದನ್ನು ಸೃಷ್ಟಿಸುವೆ. ಮಾರ್ಕಂಡೇಯನೇ, ಬ್ರಹ್ಮನೂ ನನ್ನಲ್ಲಿಯೆ ಇರುವನು. ನೀನೂ ಸಹ ನನ್ನ ಉದರದಲ್ಲಿಯೇ ಸಂಚರಿಸುತ್ತಿರು.

ಅಕಾರವಾಚ್ಯನೂ ನಾನೆಂದು ತಿಳಿ. ಅ ಉ ಮ ಮೂರು ಅಕ್ಷರಾತ್ಮಕ ಓಂಕಾರ ವಾಚ್ಯನೂ ನಾನೇ. ತ್ರಿಪದಾತ್ಮಕ ಗಾಯತ್ರೀ ಪ್ರತಿಪಾದ್ಯನೂ ನಾನೇ.

ಹೀಗೆ ತನ್ನ ಬಳಿಗೆ ಬರುವಂತೆ ಆಹ್ವಾನಿಸಿದನು. ಅವರು ಸಮೀಪಿಸಿದ ಕೂಡಲೇ ಬಾಯಿಯ ಮೂಲಕ ಉದರದಲ್ಲಿ ಸೇರಿದೆ.

ಹೀಗೆ ಜಗತ್ತನ್ನು ಸೃಷ್ಟಿಸಿ ಪುನಃ ಪಾಲಿಸಿ ಸಂಹರಿಸುತ್ತಾನೆ.

**ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ**
**ಮಾರ್ಕಂಡೇಯರಿಗೆ ವಿಭೂತಿ ರೂಪ ವರ್ಣನೆ ಎಂಬಲ್ಲಿ**
**ಹತ್ತನೆಯ ಅಧ್ಯಾಯವು ಸಮಾಪ್ತಿ**

# ಅಥ ಏಕಾದಶ-ದ್ವಾದಶೋಽಧ್ಯಾಯಃ

## ಭಗವಂತನ ಸೃಷ್ಟಿ

*ವೈಶಂಪಾಯನ ಉವಾಚ –*

**ಆಪವಃ ಸ ವಿಭುಃ ಭೂತ್ವಾ ಕಾರಯಾಮಾಸ ವೈ ತಪಃ ।**
**ಛಾದಯಿತ್ವಾಽಽತ್ಮನೋ ದೇಹಮಾತ್ಮನಾ ಕುಂಭಸಂಭವಃ ॥ 1 ॥**

ಭಗವಂತನು ಕುಂಭ ಜನ್ಮನಾದ ವಸಿಷ್ಠನಲ್ಲಿ ಪ್ರವೇಶಿಸಿ, ಆ ದೇಹದಿಂದ ತನ್ನನ್ನು ಆಚ್ಛಾದಿಸಿ ತಪಸ್ಸನ್ನು ಮಾಡಿದನು.

ಮಹಾನುಭಾವನಾದ ಅವನು ಸೃಷ್ಟಿ ಮಾಡಲಿಚ್ಛಿಸಿ ಭೌತಿಕ ಜಗತ್ತಿಗೆ ಬೇಕಾದ ಪಂಚಭೂತಗಳನ್ನು ಸೃಷ್ಟಿಸಲು ಆಶಿಸಿದನು. ಇದಕ್ಕಾಗಿ ನೀರನ್ನು ಸ್ವಲ್ಪ ಉಲ್ಲೋಲ –ಕಲ್ಲೋಲ ಮಾಡಿದನು. ಈ ಮಥನದಿಂದಾಗಿ ವಾಯುವು ಕ್ಷೋಭೆಗೊಂಡು ಅಲ್ಲಿಂದ ಆಕಾಶವು ಆವಿರ್ಭವಿಸಿತು. ಆಕಾಶದಿಂದ ಮೊದಲು ಶಬ್ಧವು, ಹುಟ್ಟಿತು. ಆಕಾಶದ ಛಿದ್ರದಲ್ಲಿ ವಾಯುವಾಗಿ ಪ್ರಾದುರ್ಭವಿಸಿದನೂ ಶ್ರೀಹರಿಯೇ. ಆಕಾಶದ ಪ್ರಾದುರ್ಭಾವವಾದ ನಂತರ ಸೂಕ್ಷ್ಮದಲ್ಲಿದ್ದ ವಾಯುವು, ಶಬ್ಧ ಹಾಗೂ ಗತಿಗಳು ಸ್ಥೂಲರೂಪ ಹೊಂದಿದವು. ವಾಯುವು ಸ್ಥೂಲ ರೂಪಧರಿಸಿ ಪ್ರಲಯೋದಕವನ್ನು ಉಲ್ಲೋಲ ಕಲ್ಲೋಲ ಮಾಡಿತು. ದೊಡ್ಡದೊಡ್ಡ ತರಂಗಗಳು ತುರಂಗಮದಂತೆ ವೇಗವಾಗಿ ಒಂದಕ್ಕೊಂದು ಸಂಘರ್ಷಿಸಿದವು.

**ಮಹಾರ್ಣವಸ್ಯ ಕ್ಷುಬ್ಧಸ್ಯ ತಸ್ಮಿನ್ನಂಭಸಿ ಮಥ್ಯತಿ ।**
**ಕೃಷ್ಣವರ್ತ್ಮಾ ಸಮಭವತ್ ಪ್ರಭುರ್ವೈಶ್ವಾನರೋಽರ್ಚಿಮನ್ ॥ 2 ॥**

ಈ ವಾಯುವಿನ ಸಂಘರ್ಷದಿಂದಾಗಿ ಜ್ವಾಲಾಮಾಲಾಗಳಿಂದ ಕೂಡಿದ ಮಹಾಶಕ್ತಿಶಾಲಿಯಾದ ವೈಶ್ವಾನರಾಗ್ನಿಯು ಹುಟ್ಟಿತು. [**ವಾಯೋರಗ್ನಿಃ**] ಅದು ಪ್ರಾದುರ್ಭವಿಸುತ್ತಲೇ ಸಮುದ್ರ ಜಲವನ್ನು ಒಣಗಿಸಲು ಪ್ರಾರಂಭಿಸಿತು. ಜಗತ್ತೆಲ್ಲ ಅಗ್ನಿಮಯವಾದಾಗ ಹರಿವಾಯುಗಳು ಶಾಂತಿಯನ್ನು ಮಾಡಿದನು. ರಸಾತ್ಮಕವಾದ ಅದನ್ನು ಒಣಗಿಸಿ ಗಂಧ ಗುಣಕವಾದ ಪೃಥಿವಿಯನ್ನು ಸೃಷ್ಟಿಸಿದರು. ಈಗ ಭೂ-ಜಲ-ಗಗನಚರ ಪ್ರಾಣಿಗಳಿಗೆ ಆಶ್ರಯ ಲಭಿಸಿದಂತಾಯಿತು. ಹೀಗೆ ಲೋಕದಸೃಷ್ಟಿ ಪ್ರಯೋಜನ ಹೊಂದಿರುವ ತತ್ವಗಳನ್ನೂ ತಿಳಿದಿರುವ, ಕಾಲಕ್ಕೆ ತಕ್ಕಂತ ಅನೇಕ ರೂಪ ಧರಿಸುವ ಶ್ರೀಹರಿಯು ಸೃಷ್ಟಿ ವಿಸ್ತರಿಸಲು ಬ್ರಹ್ಮನನ್ನು ಸೃಷ್ಟಿಸುವ ಯೋಚನೆ ಮಾಡಿದನು.[1]

---

1. ಪ್ರಲಯ ಕಾಲದಲ್ಲಿ $87^1/_2$ ವರ್ಷ ನಿದ್ರೆೈದ ಶ್ರೀಹರಿಯು ಲಕ್ಷ್ಮಿಯಿಂದ ಎಬ್ಬಿಸಲ್ಪಟ್ಟು ಮುಕ್ತರೊಂದಿಗೆ ಕ್ರೀಡೆಯಾಡುತ್ತಾನೆ. ಈ ಕ್ರೀಡೆ ಅವ್ಯಾಕೃತಾಕಾಶದಲ್ಲಿ ನಡೆಯುತ್ತದೆ. ಪ್ರಲಯದ ಎಂಟನೆ ಭಾಗವು ಸೃಷ್ಟಿಕಾಲವು. ಇಲ್ಲಿ ವೇದಾದಿಗಳು ಓಂಕಾರ – ಅಷ್ಟಾಕ್ಷರ ವಿಶ್ವಾದಿ ಎಂಟು ಮೂರ್ತಿಗಳು 51 ವರ್ಣಗಳು. ಅಭಿವ್ಯಕ್ತಗೊಳಿಸುತ್ತಾನೆ. ನಂತರ ಬ್ರಹ್ಮದೇವರ ಹತ್ತು ವರ್ಷದವರೆಗೂ ಸೂಕ್ಷ್ಮ ಸೃಷ್ಟಿ ನಡೆಯುತ್ತದೆ. ಒಂದನೆ ವರ್ಷ ಬ್ರಹ್ಮದೇವರನ್ನೂ, ನಾಲ್ಕನೇ ವರ್ಷದಲ್ಲಿ ಸೂತ್ರ ವಾಯುವನ್ನೂ, ಏಳನೇ ವರ್ಷದಲ್ಲಿ ಸರಸ್ವತೀ ಭಾರತಿಯರನ್ನು ಸೃಷ್ಟಿಸುತ್ತಾನೆ. ಇದರಿಂದ ಗರುಡ–ಶೇಷರು, ಒಂಭತ್ತನೆ ವರ್ಷದಲ್ಲಿ ಹುಟ್ಟುವರು. ಇವರಿಂದ ಜಯ ವಿಜಯರು ಜನಿಸುವರು. ಇಲ್ಲಿಗೆ 10 ವರ್ಷವಾಗುತ್ತದೆ.

   ನಂತರ 11 ರಿಂದ 20 ವರ್ಷ ಪ್ರದ್ಯುಮ್ನನು ಸೃಷ್ಟಿಸುವನು. ಪ್ರದ್ಯುಮ್ನನು ದೇವಂಶ ಜೀವರನ್ನು ಬೀಜ ರೂಪದಿಂದ ಸೃಷ್ಟಿಸಿದನು. ಈಗ ಕೃತಿ ಅವರ ಎಡಭಾಗದ ಅಧಾಟಿಗಳಾಗಿದ್ದಳು. ಹೀಗೆ ಬಲಭಾಗದಿಂದ ಪುರುಷ ದೇವತೆಗಳು, ಎಡಭಾಗದಿಂದ ಸ್ತ್ರೀ ದೇವತೆಗಳೂ ಹುಟ್ಟಿದರು. ಬ್ರಹ್ಮಾದಿಗಳು ಮುಖದಿಂದಲೂ, ಬಲಭುಜದಿಂದ ವಾಯ್ವಾದಿ ಕ್ಷತ್ರಿಯರೂ, ಬಲ ತೊಡೆಯಿಂದ ಕುಬೇರಾದಿ ವೈಶ್ಯರೂ, ಎಡ ತೊಡೆಯಿಂದ ಅವರ ಪತ್ನಿಯರೂ, ಬಲಗಾಲಿನಿಂದ ಶೂದ್ರರೂ ಹುಟ್ಟುವರು. ಪಶುಪಕ್ಷ್ಯಾದಿಗಳೂ ರೋಮರಂಧ್ರದಿಂದ ಹುಟ್ಟುವರು. ಹೀಗೆ ಬೀಜರೂಪದಿಂದ ಪ್ರದ್ಯುಮ್ನನಿಂದ ಜನಿಸಿದ ಜೀವರನ್ನೂ ಅನಿರುದ್ಧ ರೂಪ ಭಗವಂತನು ಸಂಗ್ರಹಿಸಿ ಅವರಿಗೆ ಸ್ಥೂಲದೇಹ ನೀಡುವನು.

   ಅನಿರುದ್ಧ ಸೃಷ್ಟಿಯು 21 ವರ್ಷದಿಂದಾರಂಭಿಸಿ ಬ್ರಹ್ಮನ 35 ವರ್ಷದವರೆಗೂ ಸಾಗುತ್ತದೆ.

   **ಅನಿರುದ್ಧ ಸೃಷ್ಟಿ**

   ಅನಿರುದ್ಧನು ಸತ್ವಾದಿ ಗುಣತ್ರಯಾಭಿಮಾನಿನಿಯಾದ ಶಾಂತಿದೇವಿಯಲ್ಲಿ ಮಹತತ್ವಕ್ಕೆ

**ದೃಷ್ಟ್ವಾ ಭೂತಾನಿ ಭಗವಾನ್ ಲೋಕ ಸೃಷ್ಟ್ಯರ್ಥತತ್ವವಿತ್ ।**
**ಬ್ರಹ್ಮಣೋ ಜನ್ಮ ಸಹಿತಂ ಬಹುರೂಪೋ ವಿಚಿನ್ವತಿ ॥ 3 ॥**

**ಹೀಗೆ ಒಂದು ಸಾವಿರ ಚತುರ್ಯುಗಗಳು ಕಳೆದಾಗ ಬ್ರಹ್ಮನಿಗೆ ಒಂದು ಹಗಲು. ಇದೇ ರೀತಿ ರಾತ್ರಿ ಕಳೆದರೆ ಒಂದು ದಿನವಾಗುತ್ತದೆ. ಇಂತಹ ಒಂದು ತಿಂಗಳು, ಹನ್ನೆರಡು ತಿಂಗಳು, ಇಂತಹ ನೂರು ವರ್ಷಗಳು ಅವನ ಆಯುಷ್ಯವು ಪರಕಾಲವೆಂದು ಕರೆಯಲ್ಪಡುತ್ತದೆ.**

---

ಅಭಿಮಾನಿಗಳಾದ ಬ್ರಹ್ಮವಾಯು ಸಾವಿತ್ರಿ ಭಾರತಿಯರು ಹುಟ್ಟುವರು. ಬ್ರಹ್ಮನಿಂದ ಸಾವಿತ್ರಿಯಲ್ಲಿ ಅಹಂಕಾರ ತತ್ವಾಭಿಮಾನಿಯಾಗಿ ರುದ್ರದೇವನು, ಇವರು ವಸು ಆದಿತ್ಯ ಪಿತೃ ಮೊದಲಾದ ಸೋಮಪಾನಾರ್ಹ ದೇವತೆಗಳನ್ನು ಸೃಷ್ಟಿಸುವರು.

*ವೈಕಾರಿಕ ರುದ್ರ ಸೃಷ್ಟಿ :* ರುದ್ರದೇವರು ಕುಬೇರಾದಿಗಳನ್ನು ಸೃಷ್ಟಿಸುವರು. ವೈಕಾರಿಕ ರುದ್ರದೇವನ ಕಿವಿಗಳಿಂದ ಸರ್ಪಗಳೂ, ಬಾಯಿಂದ ಗೋವು, ಹಸು, ಕುದುರೆ ಮೊದಲಾದವು. ಗುಹ್ಯೇಂದ್ರಿಯದಿಂದ ತಿರ್ಯಕ್ ಜಂತುಗಳು, ಮೇಢ್ರದಿಂದ ಮನುಷ್ಯ ದೈತ್ಯ ರಾಕ್ಷಸರೂ, ಅಧೋಭಾಗಗಳಿಂದ ಗಿಡಮರಬಳ್ಳಿಗಳು ಜನಿಸುತ್ತವೆ. ಇದು ವೈಕಾರಿಕ ರುದ್ರ ಸೃಷ್ಟಿ.

*ತೈಜಸ ರುದ್ರ ಸೃಷ್ಟಿ :* ತೈಜಸರುದ್ರನಿಂದ ಹತ್ತು ಇಂದ್ರಿಯಗಳೂ, ತಾಮಸ ರುದ್ರನಿಂದ ಆಕಾಶಾದಿ ಪಂಚಭೂತಗಳೂ, ಸ್ಥೂಲರೂಪ ತಳೆಯುತ್ತವೆ. ಇಲ್ಲಿಗೆ ಬ್ರಹ್ಮದೇವರಿಗೆ 34 ವರ್ಷ ಕಳೆಯುತ್ತದೆ. 35ನೇ ವರ್ಷ ರುದ್ರದೇವನು ತಪಸ್ಸಿನಲ್ಲಿರುವನು.

*ಬ್ರಹ್ಮಾಂಡ ಬಹಿರಾವರಣಗಳು :* 36ನೇ ವರ್ಷದಿಂದ 45 ವರ್ಷದವರೆಗೂ ಬ್ರಹ್ಮಾಂಡ ಸೃಷ್ಟಿಗಾಗಿ ಅವುಗಳ ಆವರಣಗಳ ಸೃಷ್ಟಿ ನಡೆಯುತ್ತದೆ. ಮೊದಲು ಸತ್ವ ಗುಣಾತ್ಮಕ ಮೊದಲನೆಯ ಹಾಗೂ ಕಡೆಯು ಆವರಣವನ್ನೂ, ಅದರೊಳಗೆ ರಜೋಗುಣಾತ್ಮಕ ದ್ವಿತೀಯ ಆವರಣವನ್ನೂ, ಅದರೊಳಗೆ ತಮೋ ಗುಣಾತ್ಮಕ ತೃತೀಯಾವರಣವನ್ನೂ ಸೃಷ್ಟಿಸುತ್ತಾನೆ. ನಂತರ ಮಹತತ್ತ್ವಾತ್ಮಕ ನಾಲ್ಕನೇ ಆವರಣವನ್ನೂ, ರುದ್ರದೇವನೂ ಅಹಂಕಾರಾತ್ಮಕ ಪಂಚಮಾವರಣವನ್ನೂ ಇಂದ್ರದೇವರು ಗಣಪತಿಯ ದ್ವಾರಾ ಷಷ್ಠಾವರಣವಾದ ಆಕಾಶಾವರಣವನ್ನೂ ವಾಯ್ವಾತ್ಮಕಾವರಣವನ್ನೂ ಪ್ರವನಿಂದಲೂ, ಅಗ್ನಿಯಿಂದ ತೇಜಸಾತ್ಮಕ ಅಷ್ಟಮಾವರಣವನ್ನೂ, ವರುಣನು ಅಬಾತ್ಮಕಾ-ವರಣವನ್ನೂ, ಗುಣತ್ರಯಾವರಣವನ್ನೂ ಹೀಗೆ ಸಪ್ತಾವರಣಗಳನ್ನೂ ನಿರ್ಮಿಸಲ್ಪಡುತ್ತದೆ.

ನಂತರ ಧರಾದೇವಿಯು ಸುವರ್ಣಾತ್ಮಕ ಬ್ರಹ್ಮಾಂಡ ಕಟಾಹವನ್ನು ನಿರ್ಮಿಸುವಳು. ಈ ಬ್ರಹ್ಮಾಂಡಾವರಣಗಳ ಸೃಷ್ಟಿಯನ್ನೆ 'ಪ್ರಾಕೃತಸೃಷ್ಟಿ' ಎನ್ನಲಾಗಿದೆ.

ಪ್ರಾಕೃತಸೃಷ್ಟಿಯು ಆರುವಿ. ಮಹತತ್ವ, ಅಹಂಕಾರ, ಪಂಚಮಹಾಭೂತಗಳು, ದಶೇಂದ್ರಿಯಗಳು, ದೇವತಾ ಸೃಷ್ಟಿ, ಅವಿದ್ಯಾಸೃಷ್ಟಿ.

**ಬ್ರಹ್ಮದೇವನು ಹಿಂದಿನ ಕಲ್ಪದಲ್ಲಿ ಈ ಭೂಮಿಯಲ್ಲಿ ತಪಸ್ಸು ಮಾಡಿ ಶುದ್ಧಾಂತಃಕರಣರಾದ ಬ್ರಾಹ್ಮಣರಿಗೆಲ್ಲರಿಗೂ ಜ್ಯೇಷ್ಠರೂ ಶ್ರೇಷ್ಠನೂ ಆಗಿದ್ದನು. ನಿರಂತರ ಪರಬ್ರಹ್ಮನನ್ನು ಚಿಂತಿಸುತ್ತಾ ಚಿತ್ರವೃತ್ತಿ ನಿರೋಧಗೈಸಿ ಮಹಾಜ್ಞಾನಿಯಾಗಿದ್ದನು. ಭಗವಂತನ ಸಾಕ್ಷಾತ್ಕಾರ ಹೊಂದಿದ್ದನು. ಮೋಕ್ಷೋಪಾಯ ತಿಳಿದವರಲ್ಲಿ ಅಗ್ರಗಣ್ಯನಾಗಿದ್ದನು.**

---

ಮುಂದೆ ಬ್ರಹ್ಮಾಂಡ ಸೃಷ್ಟಿಯು ತತ್ವಾಭಿಮಾನಿ ದೇವತೆಗಳು ಹೊರಗಿನ ಸೃಷ್ಟಿ ಅಸಂಸೃಷ್ಟರಾಗಿದ್ದು ಬ್ರಹ್ಮಾಂಡ ಸೃಷ್ಟಿಗೆ ಸಮರ್ಥರಾಗದೆ ಶ್ರೀಹರಿಗೆ ಶರಣು ಬಂದಾಗ ಭಗವಂತನಾದರೂ ಪಂಚಭೂತಗಳನ್ನು ಸಂಸಷ್ಟವನ್ನಾಗಿ ಮಾಡಿದನು.

ಆಕಾಶದಲ್ಲಿ ವಾಯುವನ್ನೂ, ಆಕಾಶವನ್ನೂ ವಾಯುವಿನಲ್ಲಿಯೂ, ಇದರಲ್ಲಿ ತೇಜಸ್ಸನ್ನು, ತೇಜಸ್ಸಿನಲ್ಲಿ ವಾಯುವನ್ನೂ, ತೇಜಸ್ಸಿನಲ್ಲಿ ಜಲವನ್ನೂ, ತೇಜಸ್ಸನ್ನೂ ಜಲದಲ್ಲಿಯೂ, ಇಂತಹ ಜಲದಲ್ಲಿ ಪೃಥಿವಿಯನ್ನೂ, ಪೃಥಿವಿಯ ನೂರನೆ ಒಂದು ಭಾಗ ಜಲದಲ್ಲಿಯೂ ಬೆರೆಸಿದನು. ಆಪ್ಯ, ತೈಜಸ, ಪಾರ್ಥಿವ ಪದಾರ್ಥಗಳ ಸೃಷ್ಟಿಗಾಗಿ ತ್ರಿವೃತ್ಕರಣ ಬೇಕಾಯಿತು. ಜಲದ ನಾಲ್ಕು ಭಾಗ, ಪೃಥಿವಿಯ ಮೂರು ಭಾಗ, ತೇಜಸ್ಸಿನ ಒಂದು ಒಟ್ಟು ಸೇರಿಸಿ ಎಂಟು ಭಾಗಗಳಿಂದ ಜಲೀಯ ರಾಶಿಯನ್ನೂ, ನಾಲ್ಕು ತೇಜೋ ಭಾಗ, ಮೂರು ಜಲೀಯ ಭಾಗ, ಒಂದು ಪೃಥಿವೀ ಭಾಗ ಸೇರಿಸಿ ತೇಜೋರಾಶಿಯನ್ನೂ, ನಾಲ್ಕು ಪೃಥಿವೀ, ಮೂರು ಜಲ ಭಾಗ, ಒಂದು ತೇಜೋ ಭಾಗ ಸೇರಿಸಿ ಪೃಥಿವೀ ರಾಶಿ ನಿರ್ಮಿಸಿದನು. ಹೀಗೆಯೆ ವಾಯುವಿನ ಐದು ಭಾಗ, ಪೃಥವೀ, ಅಪ್, ತೇಜಸ್ಸುಗಳ ಒಂದೊಂದು ಭಾಗ ಮಿಶ್ರೀಕರಿಸಿ ವಾಯುರಾಶಿ ನಿರ್ಮಿಸಿದ. ಇದೇ ಭೂತಪ್ರೇತಾದಿಗಳ ದೇಹಗಳಿಗೆ ಕಾರಣ.

ಹೀಗೆ ತ್ರಿವೃತ್ಕರಣವಾದ ಮೇಲೆ ಪೂರ್ವಾರ್ಧದ ಅಂತ್ಯಭಾಗದಲ್ಲಿ ಉಳಿದಿರುವ ಸ್ವಲ್ಪ ಭಾಗದಲ್ಲಿ ಹಿಂದೆ ಅವತರಿಸಿದ ವಿಷ್ಣುವು ಬ್ರಹ್ಮಾಂಡ ಸೃಷ್ಟಿಸಲೆಂದು ಶ್ರೀದೇವಿಯನ್ನೂ ಸಮೀಪಿಸಿದನು.

ತೈಜಸರಾಶಿಯಿಂದ ಬ್ರಹ್ಮಾಂಡ ನಿರ್ಮಾಣ ಮಾಡಿ ಶ್ರೀದೇವಿಯ ಉದರದಲ್ಲಿಟ್ಟನು. ಅವನ ಸುವರ್ಣಾತ್ಮಕ ವೀರ್ಯವನ್ನೂ ಬ್ರಹ್ಮಾಂಡ ರೂಪದಿಂದ ಹೊರ ಹಾಕಿದನು.

ಹೀಗೆ ಬ್ರಹ್ಮಾಂಡದಲ್ಲಿ ಲಕ್ಷ್ಮೀ ಸಹಿತ ಪ್ರವೇಶಿಸಿ ಅಂಡೋದಕದಲ್ಲಿ ಮಲಗಿದನು. ನೂರು ಚತುರ್ಯುಗ ಯೋಗನಿದ್ರೆ ಮಾಡಿದನು. ನಂತರ ಎದ್ದು ನೀರನ್ನು ಒಣಗಿಸಿದನು. ಶ್ವೇತದ್ವೀಪಾದಿಗಳಲ್ಲಿ ವಿಹರಿಸಿ ವೈಕುಂಠಕ್ಕೆ ಬರುತ್ತಾನೆ. ಪೂರ್ವಪರಾರ್ಧದ ಕಡೆಯ ವರ್ಷದ ಕಡೆಯ ರಾತ್ರಿ ಮುಗಿಯುವ ಕಾಲಕ್ಕೆ ಸರಿಯಾಗಿ ಭಗವಂತನ ನಾಭಿಯಿಂದ 14 ದಳಗಳುಳ್ಳ ರಮಾಭಿಮನ್ಯವಾದ ಪದ್ಮವು ಉತ್ಪನ್ನವಾಯಿತು. ಯಾವ ಕಲ್ಪದಲ್ಲಿ ಪದ್ಮದ ಉತ್ಪತ್ತಿಯಾಯಿತೋ ಅದೇ ಪಾದ್ಮಕಲ್ಪ.

ಇಂತಹ ಯೋಗವೇತ್ತನಾದ ಚತುರ್ಮುಖ ಬ್ರಹ್ಮನಿಗೆ ಜಗತ್ತನ್ನು ನಿರ್ಮಿಸಲು ಆದೇಶ ನೀಡುವನು.

### ಜಲಕ್ರೀಡಾ ವಿಹಾರ

**ತತಸ್ತಸ್ಮಿನ್ ಮಹಾತೋಯೇ ಹವಿಷೋ ಹರಿರಚ್ಯುತಃ ।**
**ಸ್ವಪನ್ ಕ್ರೀಡಂಶ್ಚ ವಿವಿಧಂ ಮೋದತೇ ಚೈಷ ಪಾವಕಿಃ ॥ 4 ॥**

### ಪದ್ಮಾವಿರ್ಭಾವ

**ಪದ್ಮಂ ನಾಭ್ಯುದ್ಭವಂ ಚೈಕಂ ಸಮುತ್ಪಾದಿತವಾಂಸ್ತದಾ ।**
**ಸಹಸ್ರಪತ್ರಂ ವಿರಜೋ ಭಾಸ್ಕರಾಭಂ ಹಿರಣ್ಮಯಮ್ ॥ 5 ॥**

ಬ್ರಹ್ಮದೇವರು ಜನಿಸುವ ಸಮಯ ಸಮೀಪವಾಗುತ್ತಿರುವಾಗಲೇ ಶ್ರೀಹರಿಯ ನಾಭಿ ಕಮಲದಿಂದ ಸಾವಿರ ದಳಗಳುಳ್ಳ ಪದ್ಮವೊಂದು ಆವಿರ್ಭೂತವಾಗುತ್ತದೆ. ಸೂರ್ಯನಕಾಂತಿಯಂತೆ ತೇಜಸ್ಸುಳ್ಳದ್ದೂ ಸುವರ್ಣಮಯವೂ ಆಗಿರುತ್ತದೆ. ಅತ್ಯಂತ ಸುಗಂಧಯುಕ್ತವಾಗಿದ್ದು ಅಗ್ನಿಯ ಜ್ವಾಲೆಯಂತೆ ಪ್ರಕಾಶಮಾನವಾಗಿರುತ್ತದೆ.[2]

---

2. **ಪದ್ಮಸೃಷ್ಟಿ :**
ಬ್ರಹ್ಮಾಂಡದ ಅಂಡೋಕದಲ್ಲಿ ಲಕ್ಷ್ಮ್ಯಾತ್ಮಕ ಪರ್ಯಂಕದಲ್ಲಿ ಮಲಗಿದ ಶ್ರೀಕಾಲ-ನಾಮಕನ ನಾಭಿಯಿಂದ ಸಕಲಲೋಕಾಶ್ರಯರವಾದ ಪದ್ಮವೊಂದು ಜನಿಸಿತು. ಜೀವಪ್ರಧಾನರಾದ ಬ್ರಹ್ಮನು ಇದರಲ್ಲಿ ಆವಿರ್ಭೂತನಾದನು. ಇವನಲ್ಲಿ ಭಗವಂತನ ಸನ್ನಿಧಾನದಿಂದಾಗಿ ಮೊದಲಿನಂತೆ ಹದಿನಾಲ್ಕು ಲೋಕಗಳ ವ್ಯವಸ್ಥೆ ಮಾಡಿದನು.
ಶ್ರೀಹರಿಯು ಬ್ರಹ್ಮದೇವನ 51ನೇ ವರ್ಷದ ಪ್ರಾತಃಕಾಲದಲ್ಲಿ ಪದ್ಮನಾಭ ರೂಪಿಯು ಹದಿನಾಲ್ಕು ಲೋಕಾತ್ಮಕ ಪದ್ಮ ನಿರ್ಮಿಸುವನು. ಅದರಲ್ಲಿ ಬ್ರಹ್ಮದೇವರನ್ನು ಸೃಷ್ಟಿಸುವನು. ಅವನನ್ನು ಬೆರಗಾಗಿ ತನಗೆ ಕಾರಣ ಯಾರೆಂದು ತಿಳಿಯಲು ನಾಭಿಯ ನಾಳ ಪ್ರವೇಶಿಸುವನು. ಯಾರೂ ಕಾಣದಿದ್ದಾಗ ಲಕ್ಷ್ಮೀದೇವಿಯೇ 'ತಪ ತಪ'ವೆಂದು ಉಪದೇಶಿಸುವಳು. ದೇವತಾ ಸಾವಿರದಷ್ಟು ತಪಸ್ಸನ್ನು ಮಾಡಿದಾಗ ಶ್ರೀಹರಿಯು ಮೈದೋರುವನು. ವಾಸುದೇವಾದಿ ರೂಪಗಳನ್ನೂ ಸಂದರ್ಶನವಿತ್ತು ಪಂಚರಾತ್ರಾಗಮ ಬ್ರಹ್ಮತರ್ಕ ಹಾಗೂ ಸಕಲ ವೇದಗಳನ್ನೂ ಉಪದೇಶಿಸಿ ಅದೃಶ್ಯನಾದನು.
ಹೀಗೆ ಹರಿಯ ಸನ್ನಿಧಾನದಿಂದಾಗಿ ಬ್ರಹ್ಮದೇವನು ತನಗೆ ಆಸನವಾದ ಪದ್ಮವನ್ನು ಹದಿನಾಲ್ಕು ಲೋಕಗಳಿಗೆ ಆಧಾರಕ್ಕಾಗಿ ವಿರಾಡ್ರೂಪಿ ಬ್ರಹ್ಮನಲ್ಲಿ ವೈರಾಜರೂಪದಿಂದ ಪ್ರವೇಶಿಸಿದನು. ತನ್ನಲ್ಲಿ ಭಗವಂತನ ಸ್ಥಿತಿ ಮಾತ್ರದಿಂದಲೆ ಜಗತ್ತನ್ನೂ ಸೃಷ್ಟಿಸಿದನು.

## ಲೋಕಗಳ ಸೃಷ್ಟಿ

**ಅಥ ಯೋಗವಿದಾಂ ಶ್ರೇಷ್ಠಂ ಸರ್ವಭೂತ ಮನೋಮಯಮ್ ।**
**ಸ್ರಷ್ಟಾರಂ ಸರ್ವಭೂತಾನಾಂ ಬ್ರಹ್ಮಾಣಂ ಸರ್ವತೋಮುಖಮ್ ॥ 6 ॥**

ವೈಶಂಪಾಯನರು ಜನಮೇಜಯನಿಗೆ ರಾಜನ್! ಭಗವಂತನು ಬಹುಯೋಜನ ವಿಸ್ತೃತವೂ ತೇಜೋಮಯವೂ ಸುವರ್ಣಮಯವಾದ ಆ ಪದ್ಮದಲ್ಲಿ ಯೋಗವುಳ್ಳವರಲ್ಲಿ ಅಗ್ರಮಾನ್ಯನಾದ ಬ್ರಹ್ಮದೇವನನ್ನು ಸೃಷ್ಟಿಸಿದನು.

ಈ ಕಮಲವಾದರೂ ಪಾರ್ಥಿವಲಕ್ಷಣ ಹೊಂದಿದ್ದು, ಲಕ್ಷ್ಮೀದೇವಿಯಿಂದ ಅಭಿಮನ್ಯವಾಗಿ ಸುವರ್ಣಮಯವಾದ ಆ ಪದ್ಮದಲ್ಲಿ ಚತುರ್ಮುಖನು ಆವಿರ್ಭವಿಸಿದನು. ಅವರು ಭಗವಂತನ ಪ್ರೀತಿಗಾಗಿ ಭಯ, ಹಾಗೂ ಅಜ್ಞಾನ ತೋರಿಸಿದರು. ಅಜ್ಞಾನಾಭಿಭವ ಅಸ್ಪೃಷ್ಟರಾದ ಇವರಿಗೆ ಅಜ್ಞಾನವೆಲ್ಲಿಂದ? ಭಗವಂತನನ್ನು ಅರಸುತ್ತಾ ನಾಲ್ಕು ಮುಖ ಪಡೆದರು. ಮೇಲ್ಭಾಗವಾದ ಕುದುರೆ ಮುಖದಂತಿತ್ತು. ಈ ಮುಖದಿಂದ ಅಪಸ್ವರ[3] ಹೊರಡಿಸಿ ಭಗವಂತನ ಮುಂದೆ ಎಲ್ಲರೂ ಅಪಸ್ವರರೇ ಇವನೊಬ್ಬನೆ ಸುಸ್ವರವೆಂದೂ ಪ್ರಕಟಿಸಿದರು. ಭಗವಂತನು ಈ ಪದ್ಮದಲ್ಲಿ ಒಂದು ರೂಪದಿಂದ ಪ್ರವೇಶಿಸಿದನು.

ಹೀಗೆ ಪದ್ಮಸಂಸ್ಥನಾದ ಶ್ರೀಹರಿಯಿಂದ ಚತುರ್ಮುಖ ಹುಟ್ಟಿದನು.

**ಯಾತು ಪದ್ಮಾಸನಾ ದೇವೀ ಪೃಥಿವೀ ತಾಂ ಪ್ರಚಕ್ಷತೇ ।**
**ನಾರಾಯಣಾಂಗ ಸಂಭೂತಂ ಪ್ರವದಂತಿ ಮಹರ್ಷಯಃ ॥ 7 ॥**

ಮಹರ್ಷಿಗಳು ಈ ನಾರಾಯಣಾಂಗ ಸಂಭೂತ ಪದ್ಮವನ್ನು ಭೂದೇವಿಯನ್ನಾಗಿ ಹೇಳುವರು. ಕಮಲದ ಒಳಭಾಗದಲ್ಲಿ ಪಾಷಾಣಮಯ ಗಟ್ಟಿಯಾದ ಯಾವ ಭಾಗವೋ ಅದು ಅಂಕುರದಂತೆ ಎತ್ತರವಾಗಿ ಇರುವ ಅದನ್ನು ದಿವ್ಯವಾದ ಪರ್ವತಗಳೆಂದು ತಿಳಿಯಬೇಕು.

---

3. **ಅಪಸ್ವರ :**

**ಅಪಗತಸ್ವರ** = ಸ್ವರತನಾದ ಶ್ರೀಮನ್ನಾರಾಯಣನ ಧ್ಯಾನದಲ್ಲಿದ್ದ, ಸ್ವರನನ್ನೂ ಬಿಡಲಿಲ್ಲ. ಅಪಸ್ವರ ಹೇಳಿದ ಆ ಮುಖವನ್ನು ಭಗವದಿಚ್ಛೆಯಂತೆ ಆ ಮುಖವನ್ನು ಲಕ್ಷ್ಮೀದೇವಿಯು ತೆಗೆದು ಹಾಕಿಸಿದಳು. ಚತುರ್ಮುಖವೆಂಬ ನಾಲ್ಕು ಚತುರಮುಖಗಳನ್ನೆ ಉಳಿಸಿದಳು.

**ತಲ್ಲೋಕ ಪದ್ಮಂ ಸ ಉ ಏವ ವಿಷ್ಣುಃ ಪ್ರಾವೀವಿಶತ್ ಸರ್ವಗುಣಾವಭಾಸಂ ।**
**ಪದ್ಮ ಸಂಸ್ಥಾದ್ಧರೇಃ ತತ್ರ ಬ್ರಹ್ಮಾಜನಿ ಚತುರ್ಮುಖಃ ॥** –*ಭಾಗ. 3/9/15*

ಹಿಮಾಲಯ, ಮೇರು, ನೀಲ, ನಿಷಧ, ಕೈಲಾಸ, ಮುಂಜವಂತ, ಗಂಧಮಾದನ ಪವಿತ್ರ ತ್ರಿಕುಟ, ಮಂದರಾಚಲ, ಉದಯಪರ್ವತ, ಕಂದರಗಿರಿ, ವಿಂಧ್ಯ, ಹಸ್ತಾಚಲ ಇವುಗಳೇ ನಾಭಿ ಕಮಲದಲ್ಲಿರುವ ಪರ್ವತಗಳ ಮಂಗಳ ನಾಮಗಳು. ಇವು ದೇವತೆಗಳು ಸಿದ್ಧ ಮೊದಲಾದವರ ಆಶ್ರಯಸ್ಥಾನವಾಗಿವೆ. ಇವುಗಳ ಮಧ್ಯದೇಶವೆ ಜಂಬೂದ್ವೀಪವು.

**ಏತೇಷಾಮಂತರೋ ದೇಶಃ ಜಂಬೂದ್ವೀಪ ಇತಿ ಸ್ಮೃತಃ ।**

ಈ ಜಂಬೂ ದ್ವೀಪದಲ್ಲಿ ಅನೇಕ ಜ್ಞಾನಿಗಳು ಅನೇಕ ಯಜ್ಞ ನಡೆಸುವರು **[ಯಾಜ್ಞಿಯಾಃ ಯತ್ರ ಚಕ್ರಿರೇ]**

**ಗರ್ಭಾದ್ ಯತ್ ಸ್ರವತೇ ತೋಯಂ ದೇವಾಮೃತರಸೋಪಮಮ್ ।**
**ದಿವ್ಯತೀರ್ಥಶತಾಪಾಂಗ್ಯಃ ತಾ ದಿವ್ಯಾಃ ಸರಿತಃ ಸ್ಮೃತಾಃ ॥ 8 ॥**

ನಾರಾಯಣನ ನಾಭಿಯಲ್ಲಿರುವ ಆ ದಿವ್ಯ ಕಮಲದ ಗರ್ಭದಿಂದ ದೇವತೆಗಳಲ್ಲಿರುವ ಅಮೃತಕ್ಕೆ ಸಮಾನವಾದ ಜಲವು ಸ್ರವಿಸುತ್ತಿದೆಯೋ ಅವುಗಳೇ ಗಂಗಾದಿ ಸಕಲ ನದಿಗಳು. ನಾಭಿ ಕಮಲದ ಯಾವ ಕೇಸರಗಳವಿಯೋ ಅವುಗಳೇ ಧಾತು ಪರ್ವತಗಳು. ಇವು ಅಸಂಖ್ಯಾತ.

**ಯಾನಿ ಪದ್ಮಸ್ಯ ಪತ್ರಾಣಿ ಭೂರಿಣ್ಯೂರ್ಧ್ವಂ ನರಾಧಿಪ ।**
**ತೇ ದುರ್ಗಮಾಃ ಶೈಲಚಿತಾಃ ಮ್ಲೇಚ್ಛದೇಶಾ ವಿಕಲ್ಪಿತಾಃ ॥ 9 ॥**

ಪದ್ಮದ ಮೇಲಿನ ಪತ್ರಗಳನ್ನು ಪರ್ವತಗಳಿಂದ ಕೂಡಿ ದುರ್ಗಮವಾದ ಪ್ರದೇಶಗಳಲ್ಲಿ ಚಾತುರ್ವರ್ಣ್ಯ ವ್ಯವಸ್ಥೆ ಇರದ ಮ್ಲೇಚ್ಛ ದೇಶಗಳೂ ಇವೆ. ನಾಭಿ ಕಮಲದ ಕೆಳಭಾಗದಲ್ಲಿರುವ ದಳಗಳನ್ನು ನಿವಾತಕವಚಾದಿ ದೈತ್ಯರೂ, ಅನೇಕ ಶಿರಸ್ಸಿರುವ ಸರ್ಪಗಳು ವಾಸ ಮಾಡಿಕೊಂಡಿರುವ 'ಪಾತಳಲೋಕ'-ವೆನ್ನುತ್ತಾರೆ. [ಉದಕ = ಉತ್ ಉತ್ಕೃಷ್ಟವಾದ, ಅಕಂ = ದುಃಖಂ ಯತ್ರ] ನರಕವೆಂದರ್ಥ.

**ಮಹಾಪಾತಕ ಕರ್ಮಾಣೋ ಮಜ್ಜಂತೇ ಯತ್ರ ಮಾನವಾಃ ॥ 10 ॥**

ಪದ್ಮದಳ ಕೆಳಭಾಗದಲ್ಲಿ ಉದಕವೆಂಬ ಸ್ಥಾನವಿದೆ. ಮಹಾಪಾಪಯುಕ್ತರಾದ ಕರ್ಮ ಮಾಡಿರುವ ಮಾನವರು ಇರುತ್ತಾರೆ. ನಾಭಿಕಮಲದ ಅಂತ್ಯ ಭಾಗದ ನಾಲ್ಕೂ ಕಡೆಗಳಲ್ಲಿಯೂ ಯಾವ ಕುಶವೆಂಬ ನೀರಿರುವುದೋ ಅದೇ

ಚತುಃಸಾಗರಗಳು. ಈ ಅದ್ಭುತ ಕಮಲವು ಆವಿರ್ಭವಿಸಿತು. ಇದು 'ಪುಷ್ಕರಸಂಭವ'ವೆಂದು ಪ್ರಸಿದ್ಧ.

ಈ ಕಮಲದಲ್ಲಿಯೇ ವಿಶ್ವದ ವ್ಯವಹಾರವನ್ನು ಸೃಷ್ಟಿಸಿದನು. ಪರ್ವತಗಳನ್ನೂ ನದಿಗಳನ್ನೂ ಅನೇಕ ದೇಶಗಳನ್ನೂ ರಚಿಸಿದನು. **[ತತಃಸಮುದ್ರೋ ಅರ್ಣವಃ]** ಹೀಗೆ ನಾರಾಯಣನು ಮಲಗಿದ್ದಾಗ ಪದ್ಮ[4]ನಿಧಿಯನ್ನು ಸೃಷ್ಟಿಸಿದನು.

## ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ ಪದ್ಮಾವಿರ್ಭಾವ ವೆಂಬಲ್ಲಿ ಹನ್ನೊಂದು-ಹನ್ನೆರಡನೆಯ ಅಧ್ಯಾಯವು

4. ಪದ್ಮ :

ಗರ್ಭೋದಕವು ವಾಯುವಿನಿಂದ ಒಣಗಿ ಪದ್ಮಾಕಾರವಾಗಿ ಹೊರಬಂದಿತು. **ಉದಕಂ ವಾಯುನಾ ಶುಷ್ಕಂ ಭಿನ್ನಂ ಪದ್ಮಮಭೂದ್ ಹರೇಃ ।**

ಈ ಪದ್ಮದಿಂದಲೇ ಚತುರ್ಮುಖನಾಗಿ ಬ್ರಹ್ಮನು ಹುಟ್ಟಿದನು. ಬ್ರಹ್ಮನಿಗೆ ಆಸನವನ್ನೂ ಮಾಡಲು ಪೃಥವೀರೂಪವೆಂದು ಪದ್ಮವು ಹೇಳಲ್ಪಡುತ್ತದೆ. 50ನೇ ವರ್ಷದ ಕಥೆಯ ದಿನದ ಪ್ರಾರಂಭದಲ್ಲಿ ನಾಭಿಯಿಂದ ಪದ್ಮದ ಉದ್ಭವ. ಇದನ್ನೇ 'ಪದ್ಮಕಲ್ಪ'ವೆನ್ನುವರು. ಲಕ್ಷ್ಮೀದೇವಿಯು ಮಳೆ ಸಹಿತ ಚಂಡಮಾರುತವನ್ನು ಎರೆಚಿ ಭಯಪಡಿಸಿದಳು. ಬ್ರಹ್ಮನ ಭಯ ದುಃಖ ತೋರಿದ. 10 ಸಾವಿರ ದಿವ್ಯ ವರ್ಷ ತಪಸ್ಸು, ಎಚ್ಚರವಾದಾಗ ಕುಮಾರ ರೂಪದಿಂದ ವೇದವೇದಾಂಗ ಪಂಚರಾತ್ರಾದಿ ಉಪದೇಶ ಮಾಡಿದನು. ಸಾವಿರ ವರ್ಷ ಮನನ ಮಾಡಿದ. ನಂತರ ಹರಿಯಾಜ್ಞೆಯಂತೆ ಸೃಷ್ಟಿಯಲ್ಲಿ ತೊಡಗಿದನು.

ಬ್ರಹ್ಮದೇವನು ಭಗವಂತನ ಪ್ರೀತಿಗಾಗಿ ಅಜ್ಞಾನ ನಾಲ್ಕು ಬಾರಿ, ಎರಡು ಬಾರಿ ಭಯ, ಶೋಕ ಎರಡು ಬಾರಿ ತೋರಿಸಿದನು.

1) ಪದ್ಮದಲ್ಲಿ ಏಕಾಂಗಿಯಾಗಿ ಇರುವೆನೆಂದು ಅಜ್ಞಾನ ತೋರಿದುದ್ದು.

2) ವಿಶ್ವಸೃಷ್ಟಿ ಮಾಡುವಾಗ ಸಾಧನಗಳ ಸ್ಫೂರ್ತಿಯಾಗಲಿಲ್ಲ.

3) ಶ್ರೀಹರಿಯ ಪೂಜೆಗೆ ಉಪಯುಕ್ತ ಸಾಧನೆಗಳು ದೊರಕದಿರುವಾಗ ದುಃಖದಿಂದ ದೇಹ ತ್ಯಜಿಸಲು ಇಚ್ಛೆ.

4) ಸನಕಾದಿಗಳು ಪ್ರಶ್ನಿಸಿದಾಗ ಉತ್ತರ ನೀಡದೆ ಮೌನವಹಿಸಿದ್ದು.

1) ಬ್ರಹ್ಮಾಂಡದ ನೀರು ಗಾಳಿಗಳಿಂದ ಭಯ.

2) ಮೃತ್ಯು ತಿನ್ನಲು ಬಂದಾಗ ಭಯ ತೋರಿದ್ದು.

# ಅಥ ತ್ರಯೋದಶೋಽಧ್ಯಾಯಃ

## ಮಧು-ಕೈಟಭ ಸಂವಾದ

**ಚತುರ್ಯುಗಾದಿ ಸಂಭೂತೌ ಸಹಸ್ರ ಯುಗ ಪರ್ಯಯೇ ।**
**ವಿಘ್ನಸ್ತಮಸಿ ಸಂಭೂತೋ ಮಧುರ್ನಾಮ ಮಹಾಸುರಃ ॥ 1 ॥**

ಜನಮೇಜಯನೇ! ಸಾವಿರ ಯುಗಾತ್ಮಕವಾದ ಬ್ರಹ್ಮನ ರಾತ್ರಿಯು ಕಳೆದುಹೋಗಿ ಚತುರ್ಯುಗಗಳಲ್ಲಿ ಮೊದಲನೆಯದಾದ ಕೃತಯುಗವು ಪ್ರಾರಂಭವಾಯಿತು. ಈ ಕಾಲದಲ್ಲಿ ನಡೆಯಬೇಕಿದ್ದ ಸೃಷ್ಟಿಗೆ ವಿಘ್ನರೆಂಬಂತೆ ತಮೋಗುಣದಿಂದ 'ಮಧು' ಎಂಬ ದೈತ್ಯನು ಹುಟ್ಟಿದನು.

ಮಧು ದೈತ್ಯನಿಗೆ ಸಹಾಯಕ್ಕಾಗಿ ರಜೋಗುಣದಿಂದ ಕೈಟಭನೆಂಬ ಮತ್ತೊಬ್ಬ ರಾಕ್ಷಸನು ಹುಟ್ಟಿದನು. ಅವರಿಬ್ಬರೂ ಸ್ವೇಚ್ಛಾ ರೂಪಿಗಳು. ರಜೋಗುಣ ತಮೋಗುಣ ಭೂಯಿಷ್ಠರಾದ ಇವರು ಕೆಂಪು ಹಾಗೂ ಕಪ್ಪು ಬಟ್ಟೆ ಧರಿಸಿದ್ದರು. ಬಿಳಿಯಾದ ಕೋರೆ ದಾಡೆಗಳಿಂದ ಕೂಡಿದ್ದು ಏಕಾರ್ಣವದಲ್ಲಿರುವ ಸಮುದ್ರಜಲವನ್ನೆ ಅಲ್ಲೋಲ ಕಲ್ಲೋಲ ಮಾಡಿದರು. ಕೆಂಪಾದ ಕಣ್ಣುಗಳು, ಮಾಂಸ ತುಂಬಿದ ವಕ್ಷಃಸ್ಥಳಗಳು, ಆಜಾನುಬಾಹುಗಳು, ಮಹತ್ತಾದ ಶರೀರ ಹಾಗೂ ಶಿರಸ್ಸುಗಳು ಇವುಗಳಿಂದ ಕೊಬ್ಬಿ ಉಬ್ಬಿ ಹೋಗಿದ್ದರು.

ಎರಡು ಚಲಿಸುವ ಪರ್ವತವೊ ಎಂಬಂತಿದ್ದರು. [**ಜಂಗಮಾವಿವ ಪರ್ವತೌ**] ಕಾರ್ಮುಗಿಲಿನಂತೆ ಕಪ್ಪಾದ ಭಯಂಕರವಾಗಿದ್ದರು. ಕಾಲ್ಬೆಡಿಗೆಗಳಿಂದ ಸಮುದ್ರವನ್ನೆ ಎತ್ತಿ ಬಿಸುಟುವರೊ ಎಂದು ತೋರುತ್ತಿದ್ದ ಅವರು ಶತ್ರು ನಿಷೂದನನಾದ ಶ್ರೀಹರಿಯನ್ನೇ ಭಯಪಡಿಸುವಂತೆ ಜಲವಿಹಾರದಲ್ಲಿ

ವಿಹರಿಸುತ್ತಿದ್ದರು. ಹೀಗೆ ಸಂಚರಿಸುತ್ತಾ ನಾಲ್ಮೊಗನಾದ ಬ್ರಹ್ಮದೇವನನ್ನು ನೋಡಿದರು.

**ನಾರಾಯಣ ಸಮಾಜ್ಞಪ್ತಂ ಸೃಜಂತಮಖಿಲಾಃ ಪ್ರಜಾಃ ।**
**ದೈವತಾನಿ ಚ ವಿಶ್ವಾನಿ ಮಾನಸಾಂಶ್ಚ ಸುತಾನ್ ಋಷೀನ್ ॥ 2 ॥**
**ಕಸ್ತ್ವಂ ಪುಷ್ಕರ ಮಧ್ಯಸ್ಥಃ ಸಿತೋಷ್ಣೀಷಶ್ಚತುರ್ಮುಖಃ ।**
**ಆವಾಮಗಣಯನ್ ಮೋಹಾದ್ ಆಸ್ಸೇ ತ್ವಂ ವಿಗತಜ್ವರಃ ॥ 3 ॥**

ಪ್ರಕಾಶದಿಂದ ಬೆಳಗುತ್ತಿರುವ ಬ್ರಹ್ಮನಾದರೂ ನಾರಾಯಣನು ತನಗೆ ಆದೇಶಿಸಿದಂತೆ ಸಮಸ್ತ ದೇವತೆಗಳನ್ನೂ ಮಾನಸಪುತ್ರರಾದ ಮಹರ್ಷಿ-ಗಳನ್ನೂ ಸೃಷ್ಟಿಸುತ್ತಿದ್ದನು.

ದೃಪ್ತರೂ ಯುದ್ಧೋತ್ಸಾಹಿಗಳೂ ಕ್ರುದ್ಧರೂ ಆದ ಮಧು ಕೈಟಭರು ಕೋಪದಿಂದ ಸಂರಕ್ತನೇತ್ರರಾಗಿ ಬ್ರಹ್ಮನನ್ನು ಕುರಿತು – ಎಲೋ ಪುಷ್ಕರ ಮಧ್ಯದಲ್ಲಿರುವ ನೀನಾರು? ಮೋಹವಶನಾದ ನೀನು ನಮ್ಮನ್ನೂ ಲೆಕ್ಕಿಸದೆ ನಿರ್ಭಯನಾಗಿ ನಾಲ್ಕು ಮುಖಗಳಗೂ ಬಿಳಿಯ ಪೇಟವನ್ನು ಸುತ್ತಿ ಕುಳಿತಿರುವೆ!

ಕಮಲೋದ್ಭವನೇ ಏಹಿ ಬಾಹು ಯುದ್ಧವನ್ನು ನಮ್ಮೊಂದಿಗೆ ಮಾಡು. ಮಹಾವೀರರಾದ ನಮ್ಮ ಮುಂದೆ ಬಹುಕಾಲ ನಿಲ್ಲಲಾರೆ.

ನೀನಾರು ನಿನ್ನ ಜನ್ಮಕ್ಕೆ ಕಾರಣ ಯಾರು? ನಿನಗೆ ಸೃಷ್ಟಿ ಮಾಡಲು ಆದೇಶಿಸಿದವನಾರು? ನಿನ್ನನ್ನು ಸೃಷ್ಟಿಸಿ ನಿನ್ನ ರಕ್ಷಣೆಭಾರ ಹೊತ್ತವನಾರು? ನಿನ್ನ ಹೆಸರೇನು ಎಂದು ಆಗ್ರಹಿಸಿದರು.

**ಯಃ ಕ ಇತ್ಯುಚ್ಯತೇ ಲೋಕೇ ಹ್ಯವಿಜ್ಞಾತಃ ಸಹಸ್ರಶಃ ।**
**ತತ್ ಸಂಭವಂ ಯೋಗವಂತಂ ಕಿಂ ಮಾಂ ನಾಭ್ಯ ವಗಚ್ಛಥಃ ॥ 4 ॥**

ಯಾರು ಗುಣಪೂರ್ಣನಾದ್ದರಿಂದ ಕ ಎಂದು ಕರೆಯಲ್ಪಡುವನೋ ಯಾರನ್ನು ಸಾವಿರಾರು ಬಾರಿ ಪ್ರಯತ್ನಿಸಿದರೂ ಸಾಕಲ್ಯೇನ ತಿಳಿಯಲಾರನೋ ಅಂತಹ ಶ್ರೀಹರಿಯಿಂದ ಉತ್ಪನ್ನನಾಗಿದ್ದೇನೆ. ಅವನು ಅಚಿಂತ್ಯಾದ್ಭುತ ಶಕ್ತಿವುಳ್ಳವನೆಂದು ನಿಮಗೆ ತಿಳಿದೆ ಇಲ್ಲವೆ.

**ಆವಾಭ್ಯಾಂ ಛಾದ್ಯತೇ ವಿಶ್ವಂ ತಮಸಾ ರಜಸಾ ತಥಾ ।**

ಮಧುಕೈಟಭರು ಈ ಮಾತಿಗೆ ಹೇಳುವರು. ಮಹಾಮತಿಯೇ! ಈ ವಿಶ್ವದಲ್ಲಿ ನಮಗಿಂತ ಬಲಿಷ್ಠರಾದವರೂ ಯಾರೂ ಇಲ್ಲ. ರಜೋಗುಣ ತಮೋಗುಣ-ದಿಂದ ಹುಟ್ಟಿರುವ ನಾವಿಬ್ಬರೂ ನಮ್ಮ ಗುಣಗಳಿಂದ ಇಡೀ ಜಗತ್ತನ್ನೇ ಆಕ್ರಮಿಸಬಲ್ಲೆವು.

ಸಾಧುಸಜ್ಜನರಾದ ಯತಿಗಳಂತಹವರಿಗೂ ನಾವು ಇವುಗಳಿಂದ ದುಃಖ-ವುಂಟು ಮಾಡುವೆವು. ಧರ್ಮಶೀಲರಾದವರನ್ನು ವಂಚಿಸುತ್ತೇವೆ. [**ಧರ್ಮಶೀಲಾನಾಂ ಛಲಕೌ**] ನಮ್ಮನ್ನು ಅತಿಕ್ರಮಿಸಿ ನಡೆಯುವುದು ದುಸ್ಸಾಧ್ಯವೆ. ನಮ್ಮ ಆಕ್ರಮಣ ಯಾವ ಯುಗದಲ್ಲಿಯೂ ಇರುತ್ತದೆ.

**ಮಧುಕೈಟಭರ ಪ್ರಭಾವ**

ಧರ್ಮ, ಅರ್ಥ, ಕಾಮ, ಯಜ್ಞ, ಸುಖ, ದುಃಖ, ಸಂಪತ್ತು, ನಯ-ವಿನಯಗಳೆಲ್ಲ ನಮ್ಮದೆ ಕೊಡುಗೆ.

**ಸುಖಂ ಯತ್ರ ಮುದೋ ಯತ್ರ ಯತ್ರ ಶ್ರೀಃ ಸನ್ನತಿರ್ನಯಃ ।**
**ಏಷಾಂ ಯತ್ ಕಾಂಕ್ಷಿತಂ ಚೈವ ತತ್ತದ್ ಆವಾಂ ವಿಚಿಂತಯ ॥ 5 ॥**
**ಸ ಏವ ಯುಧ್ವಾ ಸಮರೇ ವಶೀ ವಾಂ ಶಮಯಿಷ್ಯತಿ ।**

ಬ್ರಹ್ಮನು ಹೇಳುವನು – ಮಧುಕೈಟಭರೇ, ನಿಮಗೆ ಯುದ್ಧ ಕೊಡಲು ನನಗೆ ಸಾಧ್ಯವಿಲ್ಲ. ನಾನೀಗ ಭಗವಂತನ ಆರಾಧನೆಯಲ್ಲಿರುವೆನು. ಸೃಷ್ಟಿಗೆ ಬೇಕಾದ ಸಾಧನ ಸಾಮಗ್ರಿ ಈಗ ನನ್ನಲ್ಲಿದೆ. ಯೋಗಿಗಳು ಯಾವುದನ್ನು ಪರತತ್ವವೆಂದು ಉಪಾಸಿಸುವರೋ, ಅನಾದಿ ನಿತ್ಯವಾದ ಅಪ್ರಹತವಾದ ಶಕ್ತಿವುಳ್ಳ [**ಶಕ್ರಂ ವಸ್ತ್ವಿತಿ ಭಣ್ಯತೇ**] ನಿಮ್ಮಲ್ಲಿರುವ ರಜೋಗುಣ ತಮೋಗುಣಗಳನ್ನು ಯಾವನು ಸೃಷ್ಟಿಸಿದನೋ, ಯಾವನಿಂದ ಸಾತ್ವಿಕನಾದ ನನ್ನಂತಹ, ಅಸಾತ್ವಿಕರಾದ ನಿಮ್ಮಂತಹ ಪ್ರಾಣಿಗಳೆರಡೂ ಉತ್ಪನ್ನವಾಗುವುವೋ ಯಾವನು ಎಲ್ಲವನ್ನೂ ತನ್ನ ಅಧೀನದಲ್ಲಿಟ್ಟು ಕೊಂಡಿರುವನೋ ಅಂತಹ ಪರಮಪುರುಷ ಶ್ರೀಹರಿಯು ನಿಮ್ಮೊಂದಿಗೆ ಯುದ್ಧ ಮಾಡಿ, ನಿಮ್ಮನ್ನು ತೃಪ್ತಿಪಡಿಸುವನು ಎಂದನು.

ವೈಶಂಪಾಯನರು ಹೇಳುವರು. ಜನಮೇಜಯನೇ, ಮಧುಕೈಟಭರು ಅನೇಕ ಯೋಜನಗಳಷ್ಟು ವಿಸ್ತಾರವಾದ ಶರೀರ ಧರಿಸಿ ಮಲಗಿರುವ – ಇವರ

ಇಂದ್ರಿಯಾದಿಗಳಿಗೆ ನಿಯಾಮಕನಾದ ಅನಂತ ಪದ್ಮನಾಭನಿಗೆ ನಮಸ್ಕರಿಸಿ ಹೀಗೆಂದರು.

**ಜಾನೀವಃ ತ್ವಾಂ ವಿಶ್ವಯೋನಿಮೇಕಂ ಪುರುಷಸತ್ತಮಂ ।**
**ತವೋಪಾಸನ ಹೇತ್ವರ್ಥಮಿದಂ ನೌ ವಿದ್ಧೀ ಕಾರಣಮ್ ॥ 6 ॥**

ಭಗವಂತನೇ ! ನೀನು ಸಮಸ್ತಲೋಕಗಳಿಗೂ ಒಡೆಯನಾದವನೆಂದೂ ಈ ಬ್ರಹ್ಮನಿಗೂ ಜನ್ಮದಾತನೆಂದೂ, ಕ್ಷರಾಕ್ಷರ ತತ್ವವನ್ನೂ ಮೀರಿನಿಂತ ಪುರುಷೋತ್ತಮನೆಂದೂ ನಾವಿಬ್ಬರೂ ತಿಳಿದಿರುತ್ತೇವೆ.

ನಾವಿಬ್ಬರೂ ಜನಿಸಿರುವುದೂ ನಿನ್ನ ಉಪಾಸನೆಗಾಗಿಯೇ. ನಿನ್ನ ದರ್ಶನ ಅಮೋಘವೆಂದು ಜ್ಞಾನಿಗಳು ಅಭಿಪ್ರಾಯಪಡುವರು. ಈಕಾರ ವಾಚ್ಯಳಾದ ಲಕ್ಷ್ಮೀದೇವಿಗೂ **[ಲಕ್ಷ್ಮೀರೀಕಾರ ಉಚ್ಯತೇ]** ಶಂ ಸುಖ ನೀಡುವ ವರನಾಗಿರುವೆ. ಆದ್ದರಿಂದ ನಾವಿಬ್ಬರೂ ನಿನ್ನ ದರ್ಶನಾಕಾಂಕ್ಷಿಗಳಾಗಿ ನಿನ್ನ ಸಮೀಪ ಬರುತ್ತೇವೆ.

ಹಾಗೆಯೇ ನಮ್ಮೀರ್ವರಿಗೂ ಒಂದು ವರ ನೀಡಬೇಕು. ನಿನ್ನ ದರ್ಶನ ಅಮೋಘವಲ್ಲವೆ. ನಿನಗೆ ನಮಸ್ಕಾರವಿರಲಿ. **[ತದಿಚ್ಛಾವೋ ವರಂ ದತ್ತಂ]**

ಭಗವಂತನು – ಅಸುರ ಶ್ರೇಷ್ಠರೇ ! ನಿಮಗೆ ನನ್ನಿಂದ ಎಂತಹ ವರ ಅಪೇಕ್ಷಿಸುವಿರಿ. ನಾನು ನಿಮಗೆ ನೀಡಿರುವ ಆಯುಷ್ಯಕ್ಕಿಂತ ಅಧಿಕಾಯುಷ್ಯವು ಬೇಕೆ! ಹಾಗಿದ್ದಲ್ಲಿ ನಿಮಗೆ ದೀರ್ಘಾಯುಷ್ಯ ಉಂಟಾಗುತ್ತದೆ. ಇಷ್ಟು ವರ್ಷ ಆಯುಸ್ಸನ್ನು ನೀಡಿದ್ದರೂ ಇನ್ನೂ ಬದುಕಿರಬೇಕೆಂದು ಆಸೆಯೆ?

**ದತ್ತ್ರಾಯುಷೌ ಮಯಾ ಭೂಯಃ ತ್ವಹೋ ಜೀವಿತುಮಿಚ್ಛತಃ ।**

ಆದರೆ ನನ್ನಿಂದ ನಿಮಗೆ ಮರಣವುಂಟಾಗುತ್ತದೆ. ಇದು ನಿಶ್ಚಿತ. ಮಧು ಕೈಟಭರು ವಿಷ್ಣುವಿಗೆ ಹೀಗೆಂದರು.

**ಯಸ್ಮಿನ್ ನ ಕಶ್ಚಿನ್ ಮೃತವಾಂಸ್ತಸ್ಮಿನ್ ದೇಶೇ ವಿಭೋ ವಧಮ್ ।**
**ಇಚ್ಛಾವಃ ಪುತ್ರತಾಃ ಯಾಂತು ತವ ಚೈವ ಸುರಾಧಿಪ ॥ 7**

ಸುರಾಧೀಪನೇ ! ನಾವು ಬೇಡುವ ವರವೆಂದರೆ – ಯಾವ ಪ್ರದೇಶದಲ್ಲಿ ಇದುವರೆಗೂ ಯಾರೂ ಮೃತರಾಗಿಲ್ಲವೋ ಆ ಪ್ರದೇಶದಲ್ಲಿ ನಿನ್ನಿಂದ ನಾವು

ವಧಿಸಲ್ಪಡಲಿಚ್ಛಿಸುವೆವು. ನಿನ್ನ ಪುತ್ರರಾಗಬೇಕೆಂದೂ ನಮ್ಮ ಅಪೇಕ್ಷೆಯಿದೆ ನಡೆಸಿಕೊಡು.

ನಾರಾಯಣನು 'ಹಾಗೆ ಆಗಲಿ'. ಮುಂದಿನ ಕಲ್ಪದಲ್ಲಿ ನೀವು ನನ್ನ ಪುತ್ರರಾಗಿ ಹುಟ್ಟುವಿರಿ. ಇದು ತಥ್ಯವು ಎಂದು ವರವಿತ್ತನು.

### ಮಧು-ಕೈಟಭ ಸಂಹಾರ

ವೈಶಂಪಾಯನರು - ರಾಜನೇ ವಿಷ್ಣುವು ಅವರಿಗೆ ವರ ನೀಡಿದಂತೆ ತನ್ನ ತೊಡೆಯ ಮೇಲೆ ಹಾಕಿಕೊಂಡು ಕೊಂದು ಹಾಕಿದನು. ತೊಡೆಯಲ್ಲಿ ಯಾರು ಮೃತರಾಗಲಿಲ್ಲವಷ್ಟೆ.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಮಧು ಕೈಟಭ ಸಂಹಾರ ಎಂಬಲ್ಲಿ
ಹದಿಮೂರನೆಯ ಅಧ್ಯಾಯವು ಸಮಾಪ್ತಿ

# ಅಥ ಚತುರ್ದಶೋಽಧ್ಯಾಯಃ

## ಬ್ರಹ್ಮಮಾನಸರಿಗೆ ಪರಮಪದ ಪ್ರಾಪ್ತಿ

**ಸ್ಥಿತ್ವಾ ತಸ್ಮಿಂಸ್ತು ಕಮಲೇ ಬ್ರಹ್ಮಾ ಬ್ರಹ್ಮವಿದಾಂ ವರಃ ।**
**ಊರ್ಧ್ವಬಾಹುಃ ಮಹಾಬಾಹುಃ ತಪೋಘೋರಂ ಸಮಾಶ್ರಿತಃ ॥ 1 ॥**

**ದ್ವಿಧಾ ಕೃತ್ವಾಽಽತ್ಮನಾಽಽತ್ಮಾನಮಚಿಂತ್ಯಾತ್ಮಾ ಸನಾತನಃ ।**
**ಸಾಂಖ್ಯಾಚಾರ್ಯಶ್ಚ ಮತಿಮಾನ್ ಕಪಿಲೋ ಬ್ರಾಹ್ಮಣೋ ವರಃ ॥ 2 ॥**

ಜನಮೇಜಯನೇ! ಬ್ರಹ್ಮದೇವನು ಈ ಸಮಯದಲ್ಲಿ ಎರಡೂ ಕೈಗಳನ್ನೆತ್ತಿ ಕಮಲದ ಮೇಲೆ ನಿಂತು ಅತ್ಯುಗ್ರ ತಪಸ್ಸನ್ನಾಚರಿಸಿದ. ತನ್ನ ತೇಜಸ್ಸಿನಿಂದಲೇ ಕತ್ತಲೆಯನ್ನು ಹೋಗಲಾಡಿಸುತ್ತಾ ಸಹಸ್ರ ರಶ್ಮಿ ಸೂರ್ಯನಂತೆ ರಾರಾಜಿಸುತ್ತಿದ್ದನು. ಅವನಿಗೆ ಸಾಂಖ್ಯಶಾಸ್ತ್ರವನ್ನು, ಭಕ್ತಿಯೋಗವನ್ನೂ ತಿಳಿಸಲು, ನಾರಾಯಣನಾದರೂ ತನ್ನನ್ನು ದ್ವಿಧಾ ವಿಭಾಗಿಸಿಕೊಂಡು ಯೋಗಾಚಾರ್ಯನೂ ಕಪಿಲ ಸಾಂಖ್ಯಾಚಾರ್ಯನೂ ಆಗಿಯೂ, ನಾರಾಯಣ ರೂಪಿಯಾಗಿಯೂ ಆವಿರ್ಭವಿಸಿದನು.

ಶ್ರೀಹರಿಯ ಅ ಎರಡೂ ರೂಪಗಳೂ ಬ್ರಹ್ಮದೇವನಿಗೆ ಹೀಗೆ ಹೇಳಿದರು. ಪರಾಪರ ತತ್ವದ ರಹಸ್ಯವನ್ನು ಅರಿತಿದ್ದ ಆ ರೂಪಗಳು ಕ್ಷೇತ್ರ-ಕ್ಷೇತ್ರಜ್ಞ ಪುರುಷ ಪ್ರಕೃತಿ ಕಾರಣ ಕಾರ್ಯಗಳನ್ನು ಚೆನ್ನಾಗಿ ತಿಳಿದಿದ್ದರು. ಅವರು ಬ್ರಹ್ಮನನ್ನು ಕುರಿತು ಹದಿನಾಲ್ಕು ಲೋಕಗಳಿಗೂ ನೀನು ನೇತಾರನಾಗಿರುವಿ. ಸರ್ವ ಜಗತ್ತಿಗೂ ತತ್ವೋಪದೇಶಕ ಗುರುವಾಗಿರುವಿ *[ತಸ್ಮಾದ್*

*ಬ್ರಹ್ಮಾಗುರುರ್ಮುಖ್ಯಃ]* ಸರ್ವಲೋಕಗಳಿಗೂ ಜ್ಯೇಷ್ಠನೂ ಶ್ರೇಷ್ಠನೂ ಆಗಿರುವ ನೀನು ಜಗತ್ತನ್ನು ಸೃಷ್ಟಿಸು ಎಂದಾದೇಶಿಸಿದನು.

ಅವರ ಮಾತನ್ನು ಕೇಳಿದ ಬ್ರಹ್ಮದೇವನು *'ಭೂರ್ಭುವಸ್ಸ್ವಃ'*ವೆಂದು ವ್ಯಾಹೃತಿಯನ್ನು ಜಪಿಸಿ ಮೂರು ಲೋಕಗಳನ್ನು ಸೃಷ್ಟಿಸಿದನು.

**ತಯೋಃ ತದ್ವಚನಂ ಶ್ರುತ್ವಾ ತಿಸ್ರೋ ವ್ಯಾಹೃತಯೋಽಜಪನ್ ।**
**ತ್ರೀನಿಮಾನ್ ಕೃತವಾನ್ ಲೋಕಾನ್ ಯಥಾಹ ಬ್ರಾಹ್ಮಣೀ ಶ್ರುತಿಃ ॥ 3 ॥**

ನಾರಾಯಣನು ಹೇಳಿದ ಮಂತ್ರಗಳಲ್ಲಿ ಸಾರವತ್ತಾದ ಓಂಕಾರವು ಅಕಾರ-ಉಕಾರ-ಮಕಾರ ರೂಪ ವರ್ಣತ್ರಯಗಳಿಂದ ಕೂಡಿತ್ತು. ಇದರ ವ್ಯಾಖ್ಯಾನವೆ *ಭೂಃ ಭುವಃ ಸ್ವಃ* ಎಂಬ ವ್ಯಾಹೃತಿಗಳು. ಅದನ್ನು ಉಚ್ಚರಿಸಿ ಅವುಗಳಿಗೆ ಪ್ರತಿಪಾದ್ಯವಾದ ವಿಶ್ವ ತೈಜಸ ಪ್ರಾಜ್ಞ ರೂಪಗಳನ್ನು ಧ್ಯಾನಿಸುತ್ತಾ ಭೂಃ ಭುವಃ ಸ್ವಃ ಎಂಬ ಲೋಕತ್ರಯಗಳನ್ನು ಸೃಷ್ಟಿಸಿದನು.

ನಂತರ *ಭೂಃ* ಎಂಬ ಹೆಸರುಳ್ಳ ಮಾನಸಪುತ್ರನನ್ನು ಸೃಷ್ಟಿಸಿದನು. ಬ್ರಹ್ಮ ಮಾನಸಪುತ್ರನು ತಂದೆಗೆ ನಮಸ್ಕರಿಸಿ ತಂದೆಯೇ ನಾನು ನಿಮಗೇನು ಸೇವೆ ಸಲ್ಲಿಸಲಿ ನನ್ನ ಜನ್ಮಕ್ಕೆ ಕಾರಣವಾದ ಕರ್ತವ್ಯವೇನೆಂದು ಹೇಳಿರಿ.

**ಕರೋಮಿ ಕಿಂ ತೇ ಸಾಹಾಯ್ಯಂ ಬ್ರವೀತು ಭಗವಾನಿತಿ ।**
**ಏಷ ತೇ ಕಪಿಲೋ ನಾಮ ಬ್ರಹ್ಮ ನಾರಾಯಣಸ್ತಥಾ ॥**
**ವದತೇ ವರದಸ್ತ್ವಾಂ ನಾರಾಯಣ ತತ್ ಕುರುಷ್ವ ಮಹಾಮತೇ ॥ 4 ॥**

"ವತ್ಸ! ಬ್ರಹ್ಮಸ್ವರೂಪಿ ನಾರಾಯಣ ಹಾಗೂ ಕಪಿಲರು ಯಾವ ತತ್ವ ಉಪದೇಶಿಸುವರೋ ಅದರಂತೆ ನಡೆದುಕೋ" ಎಂದನು.

ಭೂ ಮಾನಸಪುತ್ರನು ತನ್ನ ತಂದೆಗಿಂತ ಇವರು ಶ್ರೇಷ್ಠರೇ ? ಎಂಬ ಸಂಶಯ ಹೊಂದಿ ಕಪಿಲ ನಾರಾಯಣರ ಬಳಿ ಬಂದು - ಗುರುಗಳೇ ! ನನ್ನ ಕರ್ತವ್ಯವಾವುದು ಎಂದು ಕೇಳಿದಾಗ - ವತ್ಸನೇ! ಜಗತ್ತಿನಲ್ಲಿ ಪರತತ್ವ - ಅಪರತತ್ವಗಳಿವೆ. ಇವುಗಳಲ್ಲಿ ಭಗವಂತನು ನಿರ್ದೋಷ ಗುಣಪೂರ್ಣ-ನಾಗಿದ್ದು ಪರವೆಂದು ಕರೆಯಲ್ಪಡುವನು.

*[ನಿರ್ದೋಷಗುಣಪೂರ್ಣತ್ವಾತ್ ಪರಂ ಚಾಹುಃ ಜನಾರ್ದನಂ । -ಭಾಗ.ತಾ.1/1/1]*

ತತ್ವವೆಂದರೆ ಅನರೋಪಿತವಾಗಿದ್ದು ಈ ಜಗತ್ತೆಲ್ಲವೂ ಅಪರತತ್ವೆನಿಸುತ್ತದೆ. ಪರತತ್ವಕ್ಕೆ ಅಪರತತ್ವವು ಅಧೀನವಾಗಿರುತ್ತದೆ.

ಪರತತ್ವವಾದರೂ ಅನಾದಿನಿತ್ಯವಾಗಿದ್ದು ನಿಜವಾದ ಸತ್ಯವೆನಿಸಿದೆ. ಇದಕ್ಕೆ ಎಂದೂ ನಾಶವಿಲ್ಲ. ಈ ಪರತತ್ವವೆಂದರೆ ಶ್ರೀಮನ್ನಾರಾಯಣನೆ. ಪರತತ್ವವನ್ನು ತಿಳಿದು ಮೋಕ್ಷ ಮಾರ್ಗ ಹೊಂದಬೇಕು ಎಂದರು.

ಬಾಲಕನೇ, ಈ ಮನುಷ್ಯನನ್ನು ಸಂಸಾರದಲ್ಲಿ ಬಂಧಿಸತಕ್ಕಂತ ಹದಿನೆಂಟು ವಿಧವಾದ ಪಾಶಗಳಿವೆ. ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚಭೂತಗಳು, ಅವಿದ್ಯಾ-ಕಾಮ-ಕರ್ಮಗಳು ಇವೇ ಹದಿನೆಂಟು ಗ್ರಂಥಿಗಳು.

ಈ ಪಾಶಗಳಿಂದ ಬಿಡುಗಡೆ ಹೊಂದಬೇಕಾದರೆ ಅನಾದಿ ನಿತ್ಯವೂ ಸತ್ಯವೂ ಆದ ಭಗವತ್‌ತತ್ವ ಜ್ಞಾನದಿಂದ ಮಾತ್ರ ಸಾಧ್ಯವು. ಅಂತಹ ತತ್ವವನ್ನೇ ಚಿಂತಿಸು ಎಂದರು.

ಹೀಗೆ ಕಪಿಲ-ನಾರಾಯಣರ ಮಾತನ್ನು ಕೇಳಿ, ಪರಮಾತ್ಮನ ಪೂರ್ಣಗುಣವನ್ನು ತಿಳಿದಿದ್ದರಿಂದ *'ಭೂ'* ಎನಿಸಿದ್ದ ಬ್ರಹ್ಮ ಮಾನಸಪುತ್ರನು *[ಭೂ ಬಹೌ = ಬಹುತ್ವಂ ಪೂರ್ಣತ್ವಮ್].*

ಜನಮೇಜಯ-ಕಪಿಲ ನಾರಾಯಣರ ಮಾತನ್ನು ಕೇಳಿದ ಮಾನಸಪುತ್ರನು ಉತ್ತರದಿಕ್ಕಿಗೆ ಹೋಗಿ ದಿವ್ಯದೃಷ್ಟಿಯಿಂದ ಪರತತ್ವವನ್ನೇ ಧ್ಯಾನಿಸುತ್ತಾ ಇದ್ದನು.[1]

**ತತೋ ಬ್ರಹ್ಮಾ ಭುವರ್ನಾಮ ದ್ವಿತೀಯ ಮಸೃಜತ್ ಪ್ರಭುಃ ।**
**ತತೋ ಸೋಽಪ್ಯಬ್ರವೀದ್ ವಾಕ್ಯಂ ಕಿಂ ಕುರ್ಮೀತಿ ಪಿತಾಮಹಮ್ ॥5॥**

ನಂತರ ಬ್ರಹ್ಮದೇವನು *ಭುವಃ* ಎಂಬ ಹೆಸರಿನ ಮಾನಸಪುತ್ರನನ್ನು ಪಡೆದನು. ಅವನೂ ಸಹ ಬ್ರಹ್ಮದೇವನನ್ನು ನಾನು ನಿಮಗೇನು ಮಾಡಲಿ ಎಂದು ಪ್ರಶ್ನಿಸಿದನು. ಬ್ರಹ್ಮದೇವನು ಅವನಿಗೂ ಸಹ ಕಪಿಲ-ನಾರಾಯಣರ ಬಳಿಗೆ ಹೋಗಲು ಆದೇಶಿಸಿದನು.

1. ಭೂತೇಂದ್ರಿಯ ಮನೋಬುದ್ಧಿತ್ರಿಗುಣಾದಿಷು ಸರ್ವಶಃ ।
ಯುಕ್ತಂ ನಿಯಾಮಕತಯಾ ಪಶ್ಯನ್ ಜಾನಾತಿ ಕೇಶವಂ ॥–*ಭಾಗ.ತಾ.3/10/36*
ಪಂಚಭೂತ + ದಶೇಂದ್ರಿಯ + ಮನಸ್ಸು + ಬುದ್ಧಿ + ತ್ರಿಗುಣ = 18 ತಿಳಿದವನೇ ಜ್ಞಾನಿಯು.

ನಾನು ಯಾವ ಸೇವೆ ಮಾಡಬೇಕಿದೆ ಹೇಳಿರಿ ಎಂದು ಕೈ ಮುಗಿದು ಕೇಳಿಕೊಂಡನು. ಅವರಿಬ್ಬರೂ ಭೂ ಎಂಬ ತನ್ನ ಪೂರ್ವಜನಿಗೆ ಹೇಳಿದ ಹರಿ ಚಿಂತನೆಯಲ್ಲಿ ತೊಡಗು ಎಂದರು. ಅವನೂ ಸಹ ಭಗವತ್ ಚಿಂತನೆ ಮಾಡಿ ಭಾಗವತರು ಹೊಂದುವ ಗತಿ ಹೊಂದಿದನು.

**ತಸ್ಮಿನ್ನಪಿ ಗತೇ ಪುತ್ರಂ ತೃತೀಯ ಮಸೃಜತ್ ಪ್ರಭುಃ ।**
**ಮೋಕ್ಷೋಪಾಯೇಽತಿ ಕುಶಲಂ ಭೂರ್ಭುವರ್ನಾಮ ತಂ ವಿಭುಃ ॥ 6 ॥**

ಭುವನು ಸಾಕ್ಷಾತ್ಕಾರ ಹೊಂದಿದ ನಂತರ ಬ್ರಹ್ಮದೇವನು ಮೋಕ್ಷೋಪಾಯ ಕುಶಲನಾದ 'ಭೂರ್ಭುವ'ನೆಂಬ ಪುತ್ರನನ್ನು ಮನಸ್ಸಿನಿಂದಲೇ ಸೃಷ್ಟಿಸಿದನು. ಅವನೂ ಸಹ ಹಿಂದಿನವರಂತೆ ಹರಿತತ್ತ್ವ ಚಿಂತನೆಯಲ್ಲಿ ತೊಡಗಿ ಅವರಂತೆ ಪರಮ ಪದವನ್ನು ಪಡೆದನು. ಬ್ರಹ್ಮತತ್ತ್ವ ತತ್ತ್ವರರಾದ ಈ ಮೂವರನ್ನೂ ಕಪಿಲ-ನಾರಾಯಣರು ತಮ್ಮೊಂದಿಗೆ ಕರೆದುಕೊಂಡು ತಮ್ಮ ಸ್ಥಾನ ಸೇರಿದರು.

## ಬ್ರಹ್ಮದೇವನ ಪುನಃ ತಪಸ್ಸು

**ಯಂ ಕಾಲಂ ತೌ ಗತೌ ಮುಕ್ತ್ವಾ ಬ್ರಹ್ಮಾ ತತ್ಕಾಲಮೇವ ಚ ।**
**ತೇಪೇ ಘೋರತರಂ ಭೂಯಃ ಸ ತಪಃ ಸಂಶಿತವ್ರತಃ ॥ 7 ॥**

**ನ ರರಾಮ ತತೋ ಬ್ರಹ್ಮಾ ಪ್ರಭುರೇಕಃ ತಪಶ್ಚರನ್ ।**
**ಶರೀರಾರ್ಧಮಥೋ ಭಾರ್ಯಾಂ ಸಮುತ್ಪಾದಿತವಾನ್ ಶುಭಾಮ್ ॥8॥**

ಹೀಗೆ ಕಪಿಲ ನಾರಾಯಣ ರೂಪಗಳು ಅದೃಶ್ಯರಾದ ಮೇಲೆ ಬ್ರಹ್ಮನು ಪುನಃ ವ್ರತನಿಷ್ಠನಾಗಿ ಘೋರ ತಪಸ್ಸನ್ನಾಚರಿಸಿದನು.[2]

ಏಕಾಂಗಿಯಾಗಿ ತಪಸ್ಸನ್ನಚರಿಸುತ್ತಿರುವ ಬ್ರಹ್ಮನಿಗೆ ಸಂತೋಷವಾಗದಿರಲೂ ತಾನೇ ಶುಭಲಕ್ಷಣಯುಕ್ತಳಾದ ಭಾರ್ಯೆಯನ್ನು ಸೃಷ್ಟಿಸಿದನು.

ಇವಳು ತನಗೆ ಎಲ್ಲ ರೀತಿಯಿಂದಲೂ ಅನುರೂಪಳಾಗಿದ್ದು ಸೃಷ್ಟಿಸುವುದರಲ್ಲಿ ಸಮರ್ಥಳಾಗಿದ್ದಳು. ಬ್ರಹ್ಮನು ಇವಳೊಂದಿಗೆ ರಮಿಸತೊಡಗಿದನು. ಇದರಿಂದಾಗಿ ಸಕಲಪ್ರಜಾಪತಿಗಳು, ಸಾಗರಗಳೂ, ನದಿಗಳೂ ಸೃಷ್ಟವಾದವು.

2. ಭೂಯಶ್ಚ ತಪ ಆತಿಷ್ಠ ವಿದ್ಯಾಂ ಚೈವ ಮದಾಶ್ರಯಾಂ ।
ತಾಭ್ಯಾಮಂತರ್ಹೃದಿ ಬ್ರಹ್ಮನ್ ಲೋಕಾನ್ ದ್ರಕ್ಷ್ಯಸ್ಯಪಾವೃತಾನ್ ॥–*ಭಾಗ. 3/10/30*

**ಸೃಜನ್ ಪ್ರಜಾಪತೀನ್ ಸರ್ವಾನ್ ಸಾಗರಾನ್ ಸರಿತಸ್ತಥಾ ।**

ಬ್ರಹ್ಮದೇವರಿಗೆ ಆಧಿಕಾರಿಕ ದೇವತೆಗಳಾದ್ದರಿಂದ ಸೃಷ್ಟಿಯಲ್ಲಿ ಇಚ್ಛೆ ಅವರ ಅಧಿಕಾರಕ್ಕೆ ಸಂಬಂಧಿಸಿದ್ದು ಹರಿಪ್ರೀತಿ ಕಾರಣವಾಯಿತು.

## ಗಾಯತ್ರೀ ಅಭಿವ್ಯಕ್ತಿ

**ತತೋಽಸೃಜನ್ ವೈ ತ್ರಿಪದಾಂ ಗಾಯತ್ರೀಂ ವೇದಮಾತರಮ್ ।**
**ಅಕರೋಚ್ಚೈವ ಚತ್ವಾರೋ ವೇದಾನ್ ಗಾಯತ್ರೀ ಸಂಭವಾನ್ ॥ 9 ॥**

ನಂತರ ಅಕಾರೋಪಕಾರಮಕಾರಗಳೆಂಬ ತ್ರ್ಯಕ್ಷರವಿರುವ ಓಂಕಾರವನ್ನೂ ಅದರ ವ್ಯಾಖ್ಯಾನದಂತಿರುವ *'ಭೂ ಭುವಃ ಸ್ವಃ'* ಯೆಂಬ ವ್ಯಾಹೃತಿಗಳನ್ನೂ, ಅದರ ವ್ಯಾಖ್ಯಾನಗಳಾದ ತ್ರಿಪಾದಗಳಿರುವ *ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್* ಎಂಬ ಗಾಯತ್ರಿಯನ್ನು, ಗಾಯತ್ರಿಯ ವ್ಯಾಖ್ಯಾನವಾದ ತ್ರಿವರ್ಗಗಳಿರುವ ಪುರುಷಸೂಕ್ತವನ್ನೂ, ಪುರುಷಸೂಕ್ತದ ಮೂರು ವರ್ಗಗಳ ವಿಸ್ತಾರವಾದ ಮೂರು ವೇದಗಳನ್ನೂ ಉಚ್ಚರಣೆಯಿಂದ ಅಭಿವ್ಯಕ್ತಿಗೊಳಿಸಿದರು.[3]

## ಪ್ರಜಾಪತಿಗಳ ಸೃಷ್ಟಿ

**ಆತ್ಮಾರ್ಥೇ ಚಾಸೃಜತ್ ಪುತ್ರಾನ್ ಲೋಕಕರ್ತೄನ್ ಪಿತಾಮಹಃ ।**
**ವಿಶ್ವೇ ಪ್ರಜಾನಾಂ ಪತಯೋ ಯೇಭ್ಯೋ ಲೋಕಾಃ ವಿನಿಃಸೃತಾಃ ॥ 10 ॥**

ನಂತರ ಬ್ರಹ್ಮದೇವನು ಭಗವಂತನ ಪ್ರೀತಿ ಉದ್ದೇಶದಿಂದ ಲೋಕಸ್ರಷ್ಟಾರಾದ ಪ್ರಜಾಪತಿಗಳನ್ನು ಸೃಷ್ಟಿಸಿದರು. ಇವರಿಂದಲೇ ಸಕಲ ಪ್ರಜೆಗಳೂ ಹುಟ್ಟಿದರು.[4]

3. 1) ಸಿಸೃಕ್ಷೋಃ ಪರಮಾದ್ ವಿಷ್ಣೋಃ ಪ್ರಥಮಂ ದ್ವೌ ವಿನಿಸ್ಸೃತೌ ।
ಓಂಕಾರಶ್ಚಾಥ ಶಬ್ದಶ್ಚ

2) ಅನಂತಮಾತ್ರಾಂತ ಮುದಾಹರಂತಿ ಯಂ ತ್ರಿಮಾತ್ರ ಪೂರ್ವಂ ಪ್ರಣವೋಚ್ಚಯಂ ಬುಧಾಃ ।

3) ತದ್ಭೇದಃ ಪೌರುಷಃ ಸೂಕ್ತಂ ವೇದಾಃ ಪುರುಷಸೂಕ್ತ ಗಾಃ ॥ – *ತಂತ್ರಸಾರ*

4. ಅಥಾಭಿಧ್ಯಾಯತಃ ಸರ್ಗಂ ದಶ ಪುತ್ರಾಃ ಪ್ರಜಜ್ಞಿರೇ ।
ಭಗವಚ್ಛಕ್ತಿಯುಕ್ತಸ್ಯ ಲೋಕಸಂತಾನ ಹೇತವಃ ॥
ಮರೀಚಿ ರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ।
ಭೃಗುರ್ವಸಿಷ್ಠೋ ದಕ್ಷಶ್ಚ ದಶಮಸ್ತತ್ರ ನಾರದಃ ॥ – *ಭಾಗ. 3/13/21–22*

ಬ್ರಹ್ಮದೇವನ ಜ್ಯೇಷ್ಠಪುತ್ರ ವಿಶ್ವೇಶನೆಂದು ಕರೆಯಲ್ಪಟ್ಟನು. ನಂತರ ಧರ್ಮನೆಂಬ ಮಗನನ್ನು ಸೃಷ್ಟಿಸಿದ ಮೇಲೆ ಹತ್ತು ಮಂದಿ ಮರೀಚ್ಯಾದಿ ಪುತ್ರರನ್ನು ಸೃಷ್ಟಿಸಿದನು.

ಇವರೆಲ್ಲರೂ ಅಥ = ಅನ್ನರಹಿನಾದ ಹರಿಯನ್ನು ಅರ್ವಂತಿ ಎಂಬಂತೆ ಹರಿಭಕ್ತರಾದ್ದರಿಂದ ಅಥರ್ವರೆನಿಸಿದರು.[5]

**ದಕ್ಷಂ ಮರೀಚಿಮತ್ರಿಂ ಚ ಪುಲಸ್ತ್ಯಂ ಪುಲಹಂಕ್ರತುಮ್ ।**
**ವಸಿಷ್ಠಂ ಗೌತಮಂ ಚೈವ ಭೃಗಮಾಂಗೀರಸಂ ಮನುಮ್ ॥ 11 ॥**

ಈ ಹದಿಮೂರು ಮಂದಿಯನ್ನೂ ಬ್ರಹ್ಮದೇವನು ತನ್ನ ಅವಯವಗಳಿಂದ ಸೃಜಿಸಿದನು. ವೈರಾಜನು ಮಾಡಿದ ಸೃಷ್ಟಿಯು ವಿರಾಡ್ರೂಪ ಧ್ಯಾನಕ್ಕೆ ಉಪಯುಕ್ತವಾದ್ದರಿಂದ ಅದನ್ನು ಹೇಳುವರು.

ಪಾತಾಲ–ಪಾದಮೂಲದಿಂದ, ಪಾದ ಪೃಷ್ಠಭಾಗ – ರಸಾತಲ, ಗಂಟು – ಮಹಾತಲ ತೊಡೆಯ ಕೆಳಭಾಗ – ವಿತಲ, ತೊಡೆಯ ಮೇಲ್ಭಾಗ – ಅತಲ, ಕಟಿಯಿಂದ ಭೂಮಿ, ನಾಭಿ–ಭುವಃ, ಉರಸ್ – ಸ್ವರ್ಗ, ಕಂಠ – ಮಹಃ, ಮುಖ – ಜನೋಲೋಕ, ಹೀಗೆ ಹದಿನಾಲ್ಕು ಸೃಷ್ಟಿಯಾಯಿತು.

ಬಾಹು – ಇಂದ್ರಾದಿಗಳು, ಕಿವಿ = ದಿಗ್ದೇವತೆಗಳು, ಕಣ್ಣು – ಸೂರ್ಯ, ರೆಪ್ಪೆ = ಅಹೋರಾತ್ರಾ್ಯಭಿಮಾನಿಗಳು, ಭ್ರೂ ವಿಲಾಸ = ಬ್ರಹ್ಮಲೋಕ, ನಾಲಗೆ – ವರುಣದೇವ, ಮಾತು – ಛಂದಸ್ಸುಗಳು, ಕೋರೆಹಲ್ಲು – ಸೂರ್ಯಚಂದ್ರರು, ದಂತ – ನಕ್ಷತ್ರಗಳು, ಹಾಸ – ಮಾಯೆ, ಮೇಲಿನ ತುಟಿ – ಲಜ್ಜೆ, ಅಧರ – ಲೋಭ, ಸ್ತನ – ಧರ್ಮ, ಬೆನ್ನು ಭಾಗ – ಅಧರ್ಮ, ಮೇಢ್ರ – ದಕ್ಷ ಪ್ರಜೇಶ, ವೃಷಣ – ಮಿತ್ರ, ಹೊಟ್ಟೆ – ಸಮುದ್ರಗಳು, ಅಸ್ಥಿ – ಪರ್ವತಗಳು, ನಾಡಿ – ನದಿಗಳು, ರೋಮ – ವೃಕ್ಷದೇವತೆಗಳು,

---

5. ವೈರಾಜಸೃಷ್ಟಿ :
ಪುರುಷರೂಪಗಳು ಮೂರಿದ್ದು, 1) ಮಹತತ್ತ್ವ ಸೃಷ್ಟಿಗೆ ಕಾರಣವಾದದ್ದು, 2) ಬ್ರಹ್ಮಾಂಡದಲ್ಲಿ ವ್ಯಾಪಿಸಿರುವ ರೂಪ, 3) ಜೀವಿಗಳ ಸ್ಥೂಲದೇಹದಲ್ಲಿರುವ ರೂಪ. ಇವುಗಳಲ್ಲಿ ಬ್ರಹ್ಮಾಂಡವ್ಯಾಪ್ತ ರೂಪವೇ 'ವಿರಾಡ್ರೂಪ'ವೆಂದು ಹೇಳಲ್ಪಡುತ್ತದೆ. ವಿರಾಡ್ರೂಪಿ ಭಗವಂತನಿಂದ ಅಧಿಷ್ಠಿತರಾದ ಬ್ರಹ್ಮದೇವರು 'ವೈರಾಜ'ವೆಂದು ಕರೆಯಲ್ಪಡುವರು. ಇವರು ಮಾಡಿದ ಸೃಷ್ಟಿ ವೈರಾಜ ಸೃಷ್ಟಿ.

ವೀರ್ಯ – ಅನ್ನ, ಪ್ರಾಣ – ವಾಯು, ಗತಿ – ಆಯುಸ್ಸು, ಮನಸ್ಸು – ಚಂದ್ರ, ಅಂತಃಕರಣ – ರುದ್ರದೇವ ಇತ್ಯಾದಿ.

**ಹದಿಮೂರು ಪುತ್ರರ ವಂಶ ವಿಸ್ತಾರ**

**ತ್ರಯೋದಶ ಸುತಾನಾಂ ತು ಯೇ ವಂಶಾಃ ವೈ ಮಹರ್ಷಿಣಾಮ್ ।**
**ಅದಿತಿಃ ದಿತಿಃ ದನುಃ ಕಾಲಾ ದನಾಯುಃ ಸಿಂಹಿಕಾ ಮುನಿಃ ।**
**ಪ್ರಬೋಧಾ ಸುರಸಾ ಕ್ರೋಧಾ ವಿನತಾ ಕದ್ರು ರೇವ ಚ ॥ 12 ॥**

ಜನಮೇಜಯನೇ, ಬ್ರಹ್ಮದೇವನ ವಿಶ್ವೇಶ, ಧರ್ಮ ಮೊದಲಾದ ಹದಿಮೂರು ಪ್ರಜಾಪತಿಗಳ ವಂಶ ವಿಸ್ತರಿಸುವೆ, ಕೇಳು,

ಬ್ರಹ್ಮದೇವನ ಪುತ್ರನಾದ ದಕ್ಷ[6]ನಿಗೆ ಅದಿತಿ, ದಿತಿ, ದನು, ಕಾಲಾ, ದನಾಯು, ಸಿಂಹಿಕಾ, ಮುನಿ, ಪ್ರಬೋಧಾ, ಸುರಸಾ, ಕ್ರೋಧಾ, ವಿನತಾ, ಕದ್ರುಯೆಂಬ ಹನ್ನೆರಡು ಮಂದಿ ಹೆಣ್ಣು ಮಕ್ಕಳು ಜನಿಸಿದರು.

**ನಕ್ಷತ್ರಾಣಿ ಚ ಭದ್ರಂ ತೇ ಸಪ್ತವಿಂಶತಿರೂರ್ಜಿತಾಃ ।**

ಅಶ್ವಿನೀ ಭರಣಿ ಮೊದಲಾದ 27 ನಕ್ಷತ್ರಾಭಿಮಾನಿಗಳೂ ದಕ್ಷನ ಪುತ್ರಿಯರೇ. ಇವರೆಲ್ಲರೂ ಚಂದ್ರನಿಗೆ ವಿವಾಹ ಮಾಡಿಕೊಟ್ಟಿದ್ದನು.

ಮರೀಚಿಯ ಪುತ್ರನಾದ ಕಶ್ಯಪನಿಗೆ ಈ ಹನ್ನೆರಡು ಮಂದಿ ಕನ್ಯೆಯರನ್ನೂ ಪಾಣಿಗ್ರಹಣ ಮಾಡಿಕೊಟ್ಟಿದ್ದನು.

**ಲಕ್ಷ್ಮೀಃ ಕೀತಿಸ್ತಥಾ ಸಾಧ್ಯಾ ವಿಶ್ವಾ ಕಾಮಾನುಗಾ ಶುಭಾ ।**
**ಏತಾಃ ಪಂಚ ವರಿಷ್ಠಾ ವೈ ಸುರಶ್ರೇಷ್ಠಾಯ ಭಾರತ ॥ 13 ॥**

6. **ದಕ್ಷ ಪ್ರಸೂತಿ** :ದಕ್ಷರು ಇಬ್ಬರು ಇರುವರು. ಒಬ್ಬನು ಸ್ವಾಯಂಭುವ ಮನ್ವಂತರನಾದರೆ, ಎರಡನೆಯವನು ಆರನೇ ಚಾಕ್ಷುಷ ಮನ್ವಂತರದವನು. ಸ್ವಾಯಂಭುವ ಮನ್ವಂತರದ ದಕ್ಷನು ಮನುಪುತ್ರಿ ಪ್ರಸೂತಿಯನ್ನು ವಿವಾಹವಾಗಿ 24 ಮಂದಿ ಕನ್ಯೆಯರನ್ನು ಪಡೆದ. ಶ್ರದ್ಧಾ, ಲಕ್ಷ್ಮೀ, ಧೃತಿ, ತುಷ್ಟಿ, ಪುಷ್ಟಿ, ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪುಷ್, ಶಾಂತಿ, ಸಿದ್ಧಿ, ಕೀರ್ತಿಯೆಂಬುವರು ಧರ್ಮಮೂರ್ತಿಯ ಪತ್ನಿಯರು. ಭೃಗು–ಖ್ಯಾತಿಯು, ರುದ್ರ – ಸತೀ, ಮರೀಚಿ – ಸಂಭೂತೆ, ಆಂಗಿರಸ – ಸ್ಮೃತಿ, ಪುಲಸ್ತ್ಯ – ಪ್ರೀತಿ, ಪುಲಹ – ಕ್ಷಮಾ, ಕ್ರತು – ಸನ್ನತಿ, ಅತ್ರಿ – ಅನಸೂಯಾ, ವಸಿಷ್ಠ – ಊರ್ಜಾ, ಅಗ್ನಿ – ಸ್ವಾಹಾ, ಪಿತೃಗಳು – ಸ್ವಧಾ – ಹೀಗೆ ಕೈಹಿಡಿದರು.

ಲಕ್ಷ್ಮೀ, ಕೀರ್ತಿ, ಸಾಧ್ಯಾ, ವಿಶ್ವಾ, ಮರುತ್ವತೀ ಮೊದಲಾದ ಹತ್ತು ಮಂದಿ ಪುತ್ರಿಯರನ್ನು ಬ್ರಹ್ಮದೇವನು ಧರ್ಮನಿಗೆ ವಿವಾಹ ಮಾಡಿಕೊಟ್ಟಿದ್ದನು.

ಧರ್ಮನ ಪತ್ನಿಯಾದ ಇಚ್ಛಾನುಸಾರ ರೂಪಗಳನ್ನು ಧರಿಸುವವಳೂ ಆದ ಸುರಭಿಯು ಗೋವಿನ ರೂಪ ತಳೆದು ಕಶ್ಯಪಬ್ರಹ್ಮನ ಸೇವೆಯಲ್ಲಿ ನಿರತಳಾದಳು. ಕಶ್ಯಪನು ಗೋಸಂತತಿಯ ಅಭಿವೃದ್ಧಿಗಾಗಿ ಇವಳೊಂದಿಗೆ ಬೆರೆತನು. ಇದರಿಂದಾಗಿ ಕಶ್ಯಪನು ಹನ್ನೊಂದು ಮಂದಿ ಪುತ್ರರನ್ನೂ ಪಡೆದನು. ಇವರೆಲ್ಲರೂ ಹೃಷ್ಟಪುಷ್ಟರೂ, ಧರ್ಮಿಷ್ಠರೂ, ಸಂಧ್ಯಾಕಾಲೀನ ತೇಜಸ್ಸಿನಿಂದ ಯುಕ್ತರಾಗಿದ್ದರು.

**ರೋದನಾದ್ ದ್ರಾವಣಾಚ್ಚೈವ ತತೋ ರುದ್ರಾ ಇತಿ ಸ್ಮೃತಾಃ ।**
**ನಿರ್ಋತಿಶ್ಚೈವ ಸರ್ಪಶ್ಚ ತೃತೀಯೋ ಹ್ಯಜ ಏಕಪಾತ್ ॥ 14 ॥**
**ಮೃಗವ್ಯಾಧಃ ಪಿನಾಕೀ ಚ ದಹನೋಽಥೇಶ್ವರಶ್ಚ ವೈ ॥ 15 ॥**
**ಅಹಿರ್ಬುಧ್ನ್ಯಶ್ಚ ಭಗವಾನ್ ಕಪಾಲೀ ಚಾಪರಾಜಿತಃ ।**
**ಸೇನಾನೀಶ್ಚ ಮಹಾತೇಜಾ ರುದ್ರಾ ಏಕಾದಶ ಸ್ಮೃತಾಃ ॥ 16 ॥**

ಇವರು ಹುಟ್ಟಿದ ಕೂಡಲೇ ರೋದಿಸುತ್ತ ಬ್ರಹ್ಮನ ಬಳಿ ಧಾವಿಸಿ ಬಂದರು. ರೋದನ–ದ್ರಾವಣದಿಂದ ರುದ್ರರೆಂದೆ ಪ್ರಸಿದ್ಧರಾದರು.

ಇವರ ಪವಿತ್ರ ನಾಮಗಳು ಕಲ್ಪಭೇದದಿಂದ ವಿಭಿನ್ನವಾಗಿವೆ. ನಿರ್ಋತಿ, ಸರ್ಪ ಇವಗಳೊಂದಿಗೆ ಅಜೈಕಪಾತ್, ಸ್ಥಾಣು, ವಿರೂಪಾಕ್ಷ, ಬಹುರೂಪ, ತ್ರ್ಯಂಬಕ, ಸುರೇಶ್ವರ, ಸಾವಿತ್ರ, ಜಯಂತ, ಋತ, ಪಿತೃರೂಪ, ವೃಷಾಕಪಿ ಶಂಬು, ಹವನ ಇತ್ಯಾದಿ ನಾಮಗಳಲ್ಲಿ ವ್ಯತ್ಯಾಸವಿರುತ್ತದೆ.

ಈ ಸುರುಭಿಯಲ್ಲಿಯೇ ಗೂಳಗಳೂ ವಿವಿಧ ಜಾತಿಯ ಹಸುಗಳೂ ಹುಟ್ಟಿದವು. ಇವಳಲ್ಲಿಯೇ ವ್ಯವಸಾಯ ಮಾಡದೇನೆ ಬೆಳೆಯುವ ಧಾನ್ಯಗಳು, ಉದ್ದು ಮೊದಲಾದವು, ಯವ ಧಾನ್ಯ, ತೆನೆಧಾನ್ಯ, ಆಡು, ಕುರಿ, ವತ್ಸಗಳು, ಅಮೃತ ಔಷಧಿ ಬಳ್ಳಗಳು ಇವೆಲ್ಲ ಜನಿಸಿದವು.

ಧರ್ಮನಿಗೆ ದಕ್ಷಪುತ್ರಿ ಲಕ್ಷ್ಮೀಯೆಂಬುವಳಲ್ಲಿ ಕಾಮನು ಹುಟ್ಟಿದನು. ಸಾಧ್ಯಾ ಎಂಬ ದಕ್ಷಪುತ್ರಿಯು ಸಾಧ್ಯರನ್ನು ಹಡೆದಳು.

ಕಶ್ಯಪಬ್ರಹ್ಮನ ಪತ್ನಿ ಸುರುಭಿಯು ಭವ, ಪ್ರಭವ, ಈಶಾನರೆಂಬುವರಿಗೆ

ಜನ್ಮವಿತ್ತಳು. ಇವರಲ್ಲದೆ ಅರುಂಧತೀ, ಆರುಣೀ, ವಿಶ್ವಾವಸು, ಬಲಧ್ರುವ, ಮತ್ಸರ ವಿಭೂತಿಗಳೂ ಸುರಭಿಯ ಸಂತಾನರೆ ಆಗಿರುವರು.

ಸಾಧ್ಯಾದೇವಿಯು ಇಂದ್ರನನ್ನು ಹೊಂದಿ ಸುಪರ್ವತ, ವಿಷ ನಾಗರೆಂಬ ಮಕ್ಕಳನ್ನು ಪಡೆದುಕೊಂಡಳು, ಧರ್ಮನು ಸುರಭಿಯಲ್ಲಿ ಧರ್ಮ, ವಿಶ್ವಾವಸು, ಸೋಮೇಶ್ವರ, ಪರ್ವತ, ಯೋಗೇಂದ್ರ, ವಾಯು, ನಿರ್ಋತಿಯೆಂಬ ಎಂಟು ಮಂದಿ ಪುತ್ರರನ್ನು ಪಡೆದನು.

**ವಿಶ್ವೇದೇವಾಸ್ತು ವಿಶ್ವಾಯಾಂ ಧರ್ಮಾಜ್ಜಾತಾ ಇತಿ ಶ್ರುತಿಃ ।**
**ಚಾಕ್ಷುಷಸ್ಯ ಮನೋರೇತೇ ॥ 17 ॥**

ವಿಶ್ವಾಯೆಂಬುವಳಲ್ಲಿ ಹತ್ತು ಮಂದಿ ವಿಶ್ವೇದೇವತೆಗಳೂ, ಧರ್ಮನಿಂದ ಜನಿಸಿದರು. ಹಿಂದೆ ಸುಧರ್ಮಾ ಶಂಖಪಾದ, ದಕ್ಷ, ವಪುಷ್ಮಂತ, ಅನಂತ ಮಹೀರಣ, ವಿಶ್ವಾವಸು, ಸುಪರ್ವಾ, ವಿಷ್ಟರ, ರುರು ಇವರೇ ವಿಶ್ವೇದೇವತೆಗಳಾದರು.[7] ಇವರು ಹಿಂದೆ ಚಾಕ್ಷುಷಮನು ಪುತ್ರರಾಗಿದ್ದರು.

ಮರುತ್ವತೀಯೆಂಬುವಳು ಮರುತ್ವಂತರೆಂಬ ದೇವತೆಗಳನ್ನು ಪಡೆದಳು. ಇವರು ಇಪ್ಪತ್ತನಾಲ್ಕು ಮಂದಿಯಿರುವರು. ಅಗ್ನಿ, ಚಕ್ಷು, ಹವಿ, ಜ್ಯೋತಿ, ಸಾವಿತ್ರ, ಮಿತ್ರ, ಅಮರ, ಶರವೃಷ್ಟಿ, ಸಂಕ್ಷಯ, ವಿರಜ, ಶುಕ್ರ, ವಿಶ್ವಾವಸು, ವಿಭಾವಸು, ಅಶ್ಮಂಶ, ಚಿತ್ರರಶ್ಮಿ, ನಿಷ್ಕುಪಿತ, ಹೂಯಮಾನ, ಹೂತಿ, ಚಾರಿತ್ರ, ಬಹುಪನ್ನಗ, ಬೃಹಂತ ಬೃಹದ್ರೂಪ, ಪರತಾಪನ ಎಂದು ಅವರ ಪವಿತ್ರ ನಾಮಧೇಯಗಳು.

### ಕಶ್ಯಪಸಂತಾನ –ದ್ವಾದಶಾದಿತ್ಯರು

**ಅದಿತ್ಯಾಂ ಜಜ್ಞಿರೇ ರಾಜನ್ ಆದಿತ್ಯಾಃ ಕಶ್ಯಪಾದಥ ।**
**ಇಂದ್ರೋ ವಿಷ್ಣುಃ ಭಗಸ್ತ್ವಷ್ಟಾ ವರುಣೋಽಂಶೋಽರ್ಯಮಾ ರವಿಃ ॥18॥**

7. **ವಿಶ್ವೇದೇವತೆಗಳು** : ಕ್ರತುದಕ್ಷ, ಸತ್ಯ–ವಸು, ಕಾಲ–ಕಾಮ, ಧೂರಿ–ಲೋಚನ, ಪುರೂರವ – ಆರ್ದ್ರವ. ಹೀಗೆ ಹತ್ತು ಮಂದಿ, ಇವರಿಗೆ ಕಾಲ, ರಾಮ, ಮುನಿ ಕುರುಜ, ಮನುಜ – ವೀಜ ರೋಚಮಾನ ಎಂಬುದಾಗಿಯೂ ನಾಮಾಂತರಗಳಿವೆ. [ಮತ್ಸ್ಯ–203]. ಮಾರ್ಕಂಡೇಯ ಪುರಾಣ 7 ರಲ್ಲಿ ಇವರು ಹರಿಶ್ಚಂದ್ರನನ್ನು ಪೀಡಿಸಿದ ವಿಶ್ವಮಿತ್ರರನ್ನು ಅಧಿಕ್ಷೇಪಿಸಿದ್ದರಿಂದ ಭೂಲೋಕದಲ್ಲಿ ಜನ್ಮವೆತ್ತಲು ಶಾಪ ನೀಡಿದರು. ಪ್ರಾರ್ಥಿಸಲಾಗಿ ವಿವಾಹಕ್ಕಿಂತ ಮೊದಲೇ ಮೃತಿ ಹೊಂದಿ ಶಾಪವಿಮುಕ್ತರಾಗಿರಿ ಎಂದರು. ಇವರೇ ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನರೆಂಬ ದ್ರೌಪದಿಯ ಮಕ್ಕಳಾದರು.

**ಪೂಷಾ ಮಿತ್ರಶ್ಚ ವರದೋ ಮನುಃ ಪರ್ಜನ್ಯ ಏವ ಚ ॥ 19 ॥**

*ಇತ್ಯೇತೇ ದ್ವಾದಶಾದಿತ್ಯಾಃ –*

ಕಶ್ಯಪನಿಂದ ಅದಿತಿಯಲ್ಲಿ ದ್ವಾದಶಾದಿತ್ಯರು[8] ಜನಿಸಿದರು. ಇಂದ್ರ, ವಿಷ್ಣು, ಭಗ, ತ್ವಷ್ಟಾ, ವರುಣ, ಅಂಶ, ಅರ್ಯಮಾ, ರವಿ, ಪೂಷಾ, ಮಿತ್ರ, ಮನು ಹಾಗೂ ಪರ್ಜನ್ಯ.

ಆದಿತ್ಯನಿಗೆ ಸರಸ್ವತಿಯಲ್ಲಿ ಇಬ್ಬರು ಲಕ್ಷಣಾವಂತ ಮಕ್ಕಳು ಹುಟ್ಟಿದರು. ರೂಪ–ಬಲದಲ್ಲಿ ಇವರಿಬ್ಬರಿಗೂ ಸಾಟಿಯಿದ್ದಿಲ್ಲ.

## ದನುಸಂತಾನ ದಾನವರು

ಕಶ್ಯಪರು ದನು ಪತ್ನಿಯಲ್ಲಿ ದಾನವರು ಹುಟ್ಟಿದರು. ವಿಪ್ರಚಿತ್ತಿ ಏಕಚಕು, ನಮುಚಿ, ನಿಕುಂಭ, ನರಕ, ಬಾಣ, ವಾತಾಪಿ, ಶಂಬರ ಮೊದಲಾದ ನಲವತ್ತು ಮಂದಿ ಪುತ್ರರನ್ನು ಪಡೆದಳು, ಕಾಲಾ ಎಂಬುವಳಿಂದ ಕಾಲಕೇಯರೂ ಕಾಲಕಾ ಎಂಬ ಇನ್ನೊಬ್ಬ ಪತ್ನಿಯಿಂದ ಹುಟ್ಟಿದವರೂ ಕಾಲಕೇಯರೇ. ಇವರು ಹಿರಣ್ಯಾಪುರ ವಾಸಿಗಳು. ಇವರನ್ನು ಅರ್ಜುನ ಕೊಂದು ಹಾಕಿದ. ಕಾಲೆಯ ಮಕ್ಕಳೂ ಕಾಲಕೇಯರೇ, ಹಗಲೆಲ್ಲ ಸಮುದ್ರದಲ್ಲಿ ಅಡಗಿಕೊಂಡು ರಾತ್ರಿ ಎದ್ದು ಬಂದು ಋಷಿಗಳನ್ನು ತಿನ್ನುತ್ತಿದ್ದರು. ಇವರು ಅಗಸ್ತ್ಯರ ಮೂಲಕ ನೀರನ್ನು ಖಾಲಿ ಮಾಡಿಸಿ ದೇವತೆಗಳೇ ಕೊಂದರು.

**ಕಾಲಾ ತು ಕಲಕೇಯಾಂಶ್ಚ ಹ್ಯಸುರಾನ್ ರಾಕ್ಷಸಾನಥ ।**

ಕಾಲೆಯು, ಅಸುರರನ್ನು, ರಾಕ್ಷಸರನ್ನು ಹಡೆದಳು.

**ದನಾಯುಷಾಯಾಃ ತನಯಾಃ ವ್ಯಾದಯಶ್ಚಾಧಯಸ್ತಥಾ ॥ 20 ॥**

ದನಾಯುವು ವೀರಿಣಿಯೆಂಬುವಳಲ್ಲಿ ದಕ್ಷನಿಂದ ಜನಿಸಿದ್ದಳು. ಇವಳು ಕಶ್ಯಪನಿಂದ ವಿಕ್ಷರ, ಬಲ, ವೀರ, ವೃತ್ರರೆಂಬ ನಾಲ್ಕು ಮಕ್ಕಳನ್ನು ಪಡೆದಳು. ಇವರಲ್ಲದೆ ಆಧಿ, ವ್ಯಾಧಿ ಎಂಬ ಮಕ್ಕಳೂ ಹುಟ್ಟಿದರು. ಮಾನಸಿಕ ವ್ಯಥೆ, ಶಾರೀರಿಕ ವ್ಯಥೆಗಳಿಗೆ ಅಭಿಮಾನಿಗಳವರು.

---

8. **ದ್ವಾದಶಾದಿತ್ಯರು :** ವಿಷ್ಣು ಸಾಕ್ಷಾತ್ ನಾರಾಯಣನೇ ಆಗಿರುವನು. ಇವನನ್ನು ಉರುಕ್ರಮವೆಂದು ಕರೆಯಲಾಗಿದೆ. ಇವನನ್ನು ಹಾಗೂ ಎಂಟನೆಯ ಕಕ್ಷೆಯ ಶಕ್ರನನ್ನು ಹೊರತುಪಡಿಸಿ ಉಳಿದೆಲ್ಲರೂ ಹದಿನೆಂಟನೆ ಕಕ್ಷೆಯಲ್ಲಿ ಬರುವರು. ವಿಶ್ವೇದೇವತೆಗಳು, ಅಷ್ಟವಸುಗಳು, ಏಕಾದಶ ರುದ್ರರು, 49 ಮರುತ್ತುಗಳೂ ಸಹ ಹದಿನೆಂಟನೆ ಕಕ್ಷೆಯಲ್ಲಿ ಸೇರುವರು.

ದಕ್ಷನ ಪುತ್ರಿಯಾದ ಸಿಂಹಿಕೆಯು ವಿಪ್ರಚಿತ್ತಿಯನ್ನು ವಿವಾಹವಾಗಿ ರಾಹು, ಸುಚಂದ್ರ, ಚಂದ್ರಹರ್ತಾ, ಚಂದ್ರಮರ್ದನರೆಂಬ ಮಕ್ಕಳನ್ನು ಪಡೆದಳು. ಇವರಲ್ಲದೆ ತ್ರ್ಯಂಶ, ಶಲ್ಯ, ನಭ, ವಾತಪಿ – ಇಲ್ವಲ ಕಾಲನಾಭ ಸ್ವರ್ಭಾನು [ಇವನೇ ರಾಹು] ಮಕ್ಕಳಿದ್ದರು.

**ಚತುಷ್ಪದಾನಿ ಸರ್ವಾಣಿ ಋತೇ ಗಾವಸ್ತು ಸೌರಭಾಃ ॥ 21 ॥**

ಮುನಿಯೆಂಬುವಳು ಸಮಸ್ತ ಗಂಧರ್ವರನ್ನು ಹಡೆದಳು, ಪ್ರಬೋಧಳು ಅಪ್ಸರಾಸ್ತ್ರೀಯರು ಜನನಿಯೆನಿಸಿದಳು. ಸುರಸಾದೇವಿಯಲ್ಲಿ ಸರೀಸೃಪಗಳು ಹುಟ್ಟಿದವು. ಕ್ರೋಧಾದೇವಿಯಲ್ಲಿ ಸಮಸ್ತ ಭೂತ ಪಿಶಾಚಿಗಳೂ ಹುಟ್ಟಿದರು. ಇವರಲ್ಲದೆ ಯಕ್ಷರು, ಗುಹ್ಯಕರೂ ನಾಲ್ಕು ಕಾಲಿನ ಪ್ರಾಣಿಗಳೆಲ್ಲವೂ ಕ್ರೋಧೆಯ ಮಕ್ಕಳು. ಗೋವುಗಳು ಮಾತ್ರ ಸುರಭಿಯ ಮಕ್ಕಳು.

ವಿನತಾದೇವಿಯಲ್ಲಿ ಅರುಣ ಹಾಗೂ ಗರುಡರೆಂಬ ಇಬ್ಬರು ಜನಿಸಿದರು. ಅರುಣನು ಸೂರ್ಯ ಸಾರಥಿಯಾದ, ಗರುಡನು ಪಾರ್ಥಸಾರಥಿಯ ವಾಹನವಾದನು.

ಕದ್ರೂದೇವಿಯು ನಾನಾ ವಿಧ ವಿಷಸರ್ಪಗಳಿಗೆ ಜನ್ಮವಿತ್ತಳು. ಹೀಗೆ ಸಮಸ್ತಲೋಕವೂ ಪರಸ್ಪರ ಸಹಯೋಗದಿಂದ ಅಭಿವೃದ್ಧಿಯಾದವೂ. ಇದನ್ನು ನಾನು ಕೃಷ್ಣದ್ವೇಪಾಯನರಿಂದ ಪುಷ್ಕರ ಪ್ರಾದುರ್ಭಾವ ಕಥೆ ಕೇಳುವಾಗ ಕೇಳಿದ್ದೆನು. ಅದನ್ನು ನಿನಗೆ ತಿಳಿಸಿದ್ದೇನೆ ಎಂದರು.

ಯಾರು ಈ ಕಥೆಯನ್ನು ಅಪ್ರಮತ್ತರಾಗಿ ಕೇಳುವರೋ ಅವರ ಇಷ್ಟಾರ್ಥ ಪೂರ್ಣವಾಗುವುದು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಸರ್ಪ ವಂಶಾವಳಿ ಎಂಬಲ್ಲಿ
ಹದಿನಾಲ್ಕನೆಯ ಅಧ್ಯಾಯವು ಸಮಾಪ್ತಿ

# ಅಥ ಪಂಚದಶ–ಷೋಡಶೋಽಧ್ಯಾಯಃ

## ಮಹಾಭಾರತ ಪ್ರಶಂಸೆ

**ಶ್ರುತಂ ನಃ ಪರಮಂ ಬ್ರಹ್ಮನ್ ಸ್ವವಂಶಚರಿತಂ ಮಹತ್ ।**
**ದಿವ್ಯ ಮನ್ಯೋನ್ಯ ಸಂಭೂತಂ ಮಾನಿತಂ ಬಹುಭಿಃ ಗುಣೈ ॥ 1 ॥**

ವೈಶಂಪಾಯನರೇ! ನಾನು ತಮ್ಮಿಂದ ನನ್ನ ಉತ್ತಮ ಹಾಗೂ ದಿವ್ಯವಾದ ಚರಿತ್ರೆಯನ್ನು ಕೇಳಿದೆ. ಇದು ಸಮಸ್ತರಿಂದಲೂ ಸನ್ಮಾನಿತವಾಗಿದೆ.

ಮಹಾಭಾರತವು ನಾನಾ ವಿಧ ಛಂದಸ್ಸುಗಳಿಂದಲೂ, ವೃತ್ತಗಳಿಂದಲೂ ಕೂಡಿದೆ. ಧರ್ಮಾರ್ಥಕಾಮಗಳೆಂಬ ತ್ರಿವರ್ಗದಿಂದಲೂ, ಇವುಗಳಲ್ಲಿ ಕಾಮವು ಪ್ರಧಾನ ಪಾತ್ರವಹಿಸುತ್ತಾ ಯುದ್ಧಾದಿಗಳು ಕಾಮದಿಂದಲೇ ಪ್ರವೃತ್ತರಾಗುತ್ತಾರೆ.

ಬ್ರಾಹ್ಮಣರ ಪ್ರಭಾವ ಆಸ್ತೀಕಾದಿಗಳ ಪ್ರಭಾವ, ಯೋಧರು ತೋರಿದ ಪರಾಕ್ರಮ, ವೈರಕ್ಕೆ ಪ್ರತಿಯಾಗಿ ಮಾಡುವ ಪ್ರಸಂಗಗಳು, ಪಾಂಡವರು ತಾವು ಮಾಡಿದ ಪ್ರತಿಜ್ಞಾ ಪೂರಣೆ, ಯಾವ ಪರಾಕ್ರಮಶಾಲಿಗಳನ್ನು ಶತ್ರುಗಳೂ ಪ್ರಶಂಸುತ್ತಿದ್ದರೋ ಅಂತಹವರ ಇತಿಹಾಸ ಇಲ್ಲಿದೆ. ಇದೊಂದು ವಿಶ್ವಕೋಶವೆ ಸರಿ.

**ವಂಶಯೋಃ ನಿರ್ವಿನಾಶಾಯ ನೃಪೇಣ ದ್ವಿಜಃ ವಿಗ್ರಹಾತ್ ॥ 2 ॥**

ದುಷ್ಟ ದುರ್ಯೋಧನನು ಪಾಂಡವರೊಂದಿಗೆ ಸಂಧಾನ ಮಾಡಿಕೊಂಡು

ಇರುತ್ತಿದ್ದರೆ ಮಹಾಭಾರತ ಸಂಗ್ರಾಮವೇರ್ಪಡುತ್ತಿದ್ದಿಲ್ಲ. ಅವನ ದುರಾಶೆಯೇ ಉಭಯವಂಶ ನಾಶವಾಗಲೂ ಕಾರಣವಾಯಿತು. ಕೌರವ-ಪಾಂಡವ ಮಹಾಸಂಗ್ರಾಮದಲ್ಲಿ ಯಾವ ಯಾವ ರಾಜರು ಮೃತರಾದರೋ ಅವರ ರಾಜ್ಯಗಳೆಲ್ಲವೂ ಅವರವರ ಮಕ್ಕಳಿಗೆ ಲಭಿಸಿತು.

ಕೌರವವಂಶದ ಪ್ರಸಿದ್ಧ ರಾಜನಾದ ಯುಧಿಷ್ಠಿರನು ಶ್ರೀಕೃಷ್ಣನ ಆದೇಶದಂತೆ ನಡೆಯುತ್ತಿದ್ದವನು. ತ್ರೈವರ್ಣಿಕರಿಗೂ ಸ್ವರ್ಗ ಮಾರ್ಗ ಉಪದೇಶಿಸುತ್ತಿದ್ದನು. ಶೂರರಾದವರಿಗೂ ವೀರಸ್ವರ್ಗ ಲಭಿಸುವ ಮಾರ್ಗ ತಿಳಿಸುತ್ತಿದ್ದ.

ಇವನು ನನಗೆಲ್ಲ ಗೊತ್ತಿದೆ ಎಂದು ಪ್ರಚಾರಕ್ಕಾಗಿ ಧರ್ಮೋಪದೇಶದಲ್ಲಿ ತೊಡಗಿದವನಲ್ಲ. ಸಮಸ್ತ ಪ್ರಾಣಿಗಳ ಹಿತವನ್ನು ಬಯಸಿ ಉಪದೇಶ ಮಾಡುತ್ತಿದ್ದ ಕರುಣಾಸಮುದ್ರ.

ಮಹಾಭಾರತದ ವಿಸ್ತಾರಕಥೆಯನ್ನು ದಿವ್ಯದೃಷ್ಟಿಯಿರುವನಿಗೂ ಸಹ ಒಂದೇ ದಿನ ಹೇಳಿ ಮುಗಿಸುವಂತಹದ್ದಲ್ಲ. ಬ್ರಹ್ಮನ ಒಂದು ದಿನದಲ್ಲಿ ನಡೆಯುವ ವಿಷಯಗಳನ್ನು ಕೇಳಬೇಕೆಂದು ಇಚ್ಛಿಸುವೆ. ದಯಾಮಾಡಿ ಹೇಳಿರಿ ಎಂದು ಪ್ರಾರ್ಥಿಸಿದನು.

## ಜ್ಞಾನ–ಯೋಗ

*ವೈಶಂಪಾಯನ ಉವಾಚ –*

**ಶೃಣುಷ್ವೈಕಮನಾಃ ರಾಜನ್ ಪಂಚೇಂದ್ರಿಯ ಸಮಾಹಿತಃ ।**
**ಕಥಾಂ ಕಥಯತೋ ರಾಜನ್ ನಿರ್ವಿಕಾರೇಣ ಚೇತಸಾ ॥ 3 ॥**

ರಾಜನೆ! ಬ್ರಹ್ಮದೇವನ ಹಗಲಿನಲ್ಲಿ ನಡೆಯುವ ಸೃಷ್ಟಿ ಚಿತ್ತರವನ್ನು ತಿಳಿಸುತ್ತೇನೆ. ಸಕಲೇಂದ್ರಿಯಗಳನ್ನೂ ಏಕಾಗ್ರಗೊಳಿಸಿ ಶ್ರವಣ ಮಾಡು.

ಭಗವಂತನ ವೇದಗಳಿಂದ ಪೂರ್ಣವಾಗಿ ಮುಖ್ಯವಾಗಿ ಪ್ರತಿಪಾದ್ಯ-ನಾಗಿರುವನು. ಕರ್ಮದ ಬಂಧ ಅವನಿಗಿಲ್ಲ. ಗುಣಸಂಪೂರ್ಣನಾಗಿದ್ದು ಸಕಲ ದೋಷ ದೂರನಾಗಿರುವನು. ಬ್ರಹ್ಮನು ಅವ್ಯಕ್ತ ಸ್ವಭಾವನಾಗಿದ್ದರೂ ಭಕ್ತ್ಯಾದಿಗಳಿಂದ ತನ್ನನ್ನು ವ್ಯಕ್ತಗೊಳಿಸುವನು. ಅತ್ಯಂತ ಸೂಕ್ಷ್ಮನಾದರೂ ತನ್ನಿಚ್ಛೆಯಿಲ್ಲದೆ ಕಾಣದವನು. ಭಗವಂತನೆ ಕಾರ್ಯ ಕಾರಣ ವಸ್ತುಗಳಲ್ಲಿ ವ್ಯಾಪ್ತನಾಗಿರುವನು. ಷೋಡಶ ಕಲಾತ್ಮಕ ಲಿಂಗದೇಹ ರಹಿತನೂ, ಪುರುಷಡ್ಗುಣ ಯುಕ್ತನೂ, ಇವನಿಂದಲೇ ಆದ್ಯಬ್ರಹ್ಮನು ಜನಿಸಿರುವನು.

ಈ ಮೂರ್ತಾತ್ಮಕ ಪ್ರಪಂಚಕ್ಕೆ ಸದಸದಾತ್ಮಕವಾಗಿದ್ದು ಕಾರಣಾತ್ಮನಾ ಸದ್ರೂಪವೂ ಕಾರ್ಯಾತ್ಮನಾ ಅನದ್ರೂಪವೂ ಆದ ಈ ಜಗತ್ತಿಗೆ ಮಹಾಲಕ್ಷ್ಮೀದೇವಿ ಅಭಿಮಾನಿಯು. ಅದೂ ಅವ್ಯಕ್ತವೆ, ಅವ್ಯಕ್ತಕ್ಕಿಂತಲೂ ಚಿತ್ ಪ್ರಕೃತಿಗಿಂತಲೂ ಶ್ರೀಹರಿಯು ಉತ್ತಮನಾಗಿರುವನು *[ಅವ್ಯಕ್ತಾತ್ ಪುರುಷಃ ಪರಃ]*. ಇವನಿಗಿಂತ ಉತ್ತಮ ಸಮವಾದ ವಸ್ತುವೊಂದಿಲ್ಲ. ಇವನೇ ತಾರತಮ್ಯಾವಧಿಭೂತನು.

ಕಟ್ಟಿಗೆಯಲ್ಲಿ ಅಗ್ನಿಯು ನಿಗೂಢವಾಗಿರುವಂತೆ ಸಕಲ ಪ್ರಾಣಿಗಳಲ್ಲಿಯೂ ಅಂತರ್ನಿಯಾಮಕನಾಗಿದ್ದರೂ ಮಥನದಿಂದ ಅಗ್ನಿ ತಿಳಿಯುವಂತೆ ಮನಸ್ಸಿನಿಂದ ಚಿಂತನೆ ಮಾಡಿದಾಗ ಮಾತ್ರ ತಿಳಿಯುವನು.

ಭಗವಂತನು ತನ್ನ ದಿವ್ಯ ಅದ್ಭುತ ದೇಹದಿಂದ ಸರ್ವಭೂತಗಳಲ್ಲಿದ್ದು ವ್ಯಾಪಾರ ಮಾಡಿ, ಮಾಡಿಸುವನು. ಅಣುತ್ವ-ಮಹತ್ವ ಧರ್ಮಗಳು ತಮ್ಮ ವಿರೋಧ ಪರಿಹರಿಸಿಕೊಂಡು ಯಾವಾಗಲೂ ಇವನಲ್ಲಿರುವುವು. ಸರ್ವಥಾ ನಾಶರಹಿತನೂ ಯುಗಾದಿಕೃತ್ ಆಗಿರುವನು.

**ಅವ್ಯಕ್ತಾತ್ ಪರಮಂ ಯತ್ ತನ್ನಾರಾಯಣೋ ವಿದುಃ ॥ 4 ॥**

ಹುಟ್ಟು ಸಾವು ಇಲ್ಲದವನು. ಸರ್ವ ವಸ್ತುಗಳಲ್ಲಿಯೂ ಇದ್ದರೂ ಸಮವಾದ ಶಕ್ತ್ಯಾದಿಗಳುಳ್ಳವನು. ಅವ್ಯಕ್ತವೆಂದು ಪ್ರಸಿದ್ಧ ಪ್ರಧಾನತತ್ತ್ವಕ್ಕಿಂತಲೂ ಪ್ರಧಾನನಾಗಿರುವನು. ಇವನನ್ನೆ '*ನಾರಾಯಣ*'ನೆನ್ನುವರು.

ಈ ಭಗವಂತನು ಕ್ಷೇತ್ರಕ್ಕಿಂತ ಅತ್ಯಂತ ವಿಲಕ್ಷಣನಾಗಿರುವನು. ಎಲ್ಲಾ ಅವಯುವಗಳಲ್ಲಿಯೂ ಕೈಕಾಲುಗಳ ಶಕ್ತಿಗಳುಳ್ಳವನು. ಸಕಲಾವಯವ-ಗಳಲ್ಲಿಯೂ ಕಣ್ಣು ತಲೆ ಮುಖಗಳ ಕಾರ್ಯ ಮಾಡುವ ಶಕ್ತಿಯುಳ್ಳವನು. ಎಲ್ಲಾ ಅವಯುವಗಳಲ್ಲಿಯೂ ಕೇಳುವ ಕಿವಿಯ ಕಾರ್ಯಶಕ್ತಿ ಹೊಂದಿರುವವನು. ಎಲ್ಲಾ ಅವಯುವಗಳೂ ಎಲ್ಲಾ ಅವಯುವಗಳ ಕಾರ್ಯವನ್ನು ಮಾಡುವ ಶಕ್ತಿವುಳ್ಳವುಗಳಾಗಿವೆ. ಜಗತ್ತಿನಲ್ಲಿರುವ ಸಕಲವಸ್ತುಗಳನ್ನೂ ವ್ಯಾಪಿಸಿರುವನು ಅವನು.

ಮೊದಲು ಪುರುಷವಾಚ್ಯನಾದ ಭಗವಂತನು ಆವಿರ್ಭವಿಸಿದನು. ಅವನಿಂದ ಚತುರ್ಮುಖ ಬ್ರಹ್ಮನು ಜನಿಸಿದನು. ಇವನಿಂದಲೇ ಸಮಸ್ತ ಯುಗಗಳೂ

ಯುಗಧರ್ಮಗಳೂ ಪ್ರವೃತ್ತವಾಗುತ್ತದೆ. ಈ ಸಮಸ್ತ ಪ್ರಪಂಚದಲ್ಲಿಯೂ ಶ್ರೀಹರಿಯು ವ್ಯಾಪ್ತನಾಗಿರುವನು. ಜಗತ್ತನ್ನು ಸೃಷ್ಟಿಸಿ ಜಗತ್ತಿನ ಚಲನೆಗಾಗಿ ಅವುಗಳಲ್ಲಿ ಪ್ರವೇಶಿಸಿದ ಇದರಿಂದಲೇ ಸರ್ವವನ್ನೂ ವ್ಯಾಪಿಸಿರುವುದರಿಂದ ಸರ್ವವೂ ಇವನೇ ಎನ್ನಲಾಗುತ್ತದೆ. ಜಡವಸ್ತುಗಳಿಗೆ ಚೇತನನಿಗೂ ಐಕ್ಯವನ್ನು ಶ್ರುತಿ ಮಿಥ್ಯಾ ದೃಷ್ಟಿ ಎಂದಿದೆ. ಈ ಸರ್ವತ್ರ ನಿಯಾಮಕ ರೂಪವನ್ನೇ ಚಿತ್ ಪ್ರಕೃತಿಗಿಂತ ಉತ್ತಮನೆಂದು ಜ್ಞಾನಿಗಳು ಉಪಾಸಿಸುವರು.

**ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ[1] ॥ 5 ॥**

ಭಗವಂತನು ಮೂರ್ತ ವಿಲಕ್ಷಣನಾದ್ದರಿಂದ ಸತ್‌ಭಿನ್ನನೆಂದೂ, ಅಮೂರ್ತ ಆಕಾಶಾದಿಗಳಿಂದ ವಿಲಕ್ಷಣನಾದ್ದರಿಂದ ಅಸದ್‌ಭಿನ್ನನೆಂದೂ ಹೇಳಲಾಗಿದೆ. ಜೀವಿಗಳ ಒಳಗೆ ಹೊರಗಿರುವವನು. ಸರ್ವತ್ರ ಗತಿವುಳ್ಳವನು. ಸೂಕ್ಷ್ಮನಾದ್ದರಿಂದ ಜೀವರ ಇಂದ್ರಿಯಗಳಿಗೆ ಆಗೋಚರನು.[2]

ಅಸತ್ ಅಮೂರ್ತ, ಸತ್, ಮೂರ್ತ ಇವುಗಳಿಗೆ ಕಾರಣ ಭಗವಂತನು. ಅವನನ್ನು ತಿಳಿಯಲೇಬೇಕು. ಜಗತ್ತನ್ನು ತಿಳಿಯುವ ಭರದಲ್ಲಿ ಜಗನ್ನಾಥನನ್ನು ಮರೆಯಲಾಗದು. ಭಗವಂತನು ಅಗಮ್ಯನಾದ್ದರಿಂದಲೂ ಅಸತ್ತೆನಿಸುವನು. *[ಅಗಮ್ಯತ್ವಾತ್ ಅಸನ್ನಾಮ]*. ಸತ್ – ಸುಖರೂಪಿಯಾದವನು. ಅವನೇ ಸಚ್ಛಬ್ದವಾಚ್ಯ ವಾಯುದೇವನಿಗೂ ಕಾರಣನೆಂದು ತಿಳಿಯಬೇಕು.

**ವಿಕಾರ ಪುರುಷೋಽವ್ಯಕಃ ಹ್ಯರೂಪೀ ರೂಪಮಾಶ್ರಿತಃ ॥ 6 ॥**

ನಾನಾವಿಧ ಆಕಾರ ಇದ್ದರೂ ಪುರುಷನು ಅವ್ಯಕ್ತನಾಗಿರುವನು. ಪ್ರಾಕೃತರೂಪ ರಹಿತನಾಗಿದ್ದರೂ ಚಿದಾನಂದಾತ್ಮಕ ರೂಪವಿರುವವನು *[ರೂಪೋಽಪ್ಯಸ್ಯಾಸ್ತಿ ಓಂ]*.

ಭಗವಂತನು ಅವ್ಯಕ್ತ ಸ್ವಭಾವನು, ಅಂದರೆ ತನ್ನಿಚ್ಛೆಯಿಲ್ಲದೆ ಅನ್ಯರಿಗೆ ಕಾಣಿಸಲಾರನು. ಪ್ರಕೃತಿ ಕಾರಣವಾದ ದೇಹಾದಿರಹಿತನು. ಅತ್ಯಂತ ಸೂಕ್ಷ್ಮನು.[3] ಆದರೆ ಭಕ್ತರಿಗೆ ವ್ಯಕ್ತನಾಗುವನು *[ದೃಶ್ಯತೇ ತು]* ಸರ್ವತ್ರ ವ್ಯಾಪ್ತನಾಗಿದ್ದರೂ ಗಾಳಿಯಂತೆ ಕಾಣಿಸಲಾರನು.

---

1. ಇದು, ಇದೇ ಅನುಪೂರ್ವಿಯಲ್ಲಿ ಗೀತೆಯ 13/14 ರಲ್ಲಿದೆ.
2. ಸದ್ಭಾವ ವಾಚಿನೋ ಶಬ್ದಾಃ ಸರ್ವೇತೇ ಸುಖವಾಚ ಕಾಃ ।
3. ತದವ್ಯಕ್ತಮಾಹ ಹಿ ಸೂಕ್ಷ್ಮಂ ತು ತದರ್ಹತ್ವಾತ್ ।

ಭಗವಂತನು ವಿವಿಧಾಕಾರನಾಗಿರುವನು *[ವಿಕಾರೊ ವಿವಿಧಾಕಾರಃ ಛಾಂ]* ಎಲ್ಲರಿಗೂ ಒಂದೇ ರೀತಿ ದರ್ಶನ ನೀಡದವನು. ಪ್ರಾಕೃತರೂಪರಹಿತನು. ಆದರೂ ಅದ್ಭುತವಾದ ರೂಪವಿರುವನು. *[ರೂಪೇಪನ್ಯಾಸಾಚ್ಚ]*.

ಯಾರಿಂದಲೂ ಯೋಚಿಸಲಿಕ್ಕೆ ಸಾಧ್ಯವಾಗದವನು. ಸ್ವಪ್ರದಾಸ ಶೂನ್ಯರಿಗೆ ಅಗೋಚರನು. ಕಟ್ಟಿಗೆಯಲ್ಲಿ ಅಗ್ನಿಯು ಇದ್ದರೂ ಗೂಢವಾಗಿರುವವನು.

**ಭೂತ ಭವ್ಯೋದ್ಭವೋ ನಾಥಃ ಪರಮೇಷ್ಠೀ ಪ್ರಜಾಪತಿಃ ।**
**ಪ್ರಭುಃ ಸರ್ವಸ ಲೋಕಸ್ಯ ನಾಮ ಚಾಸ್ಯೇತಿ ತತ್ತ್ವತಃ ॥ 7 ॥**

ಭೂತ ಭವಿಷ್ಯ ವರ್ತಮಾನ ವಸ್ತುಗಳಿಗೆ ಸ್ವಾಮಿಯು. ಬ್ರಹ್ಮನಿಯಾಮಕನು, ಪ್ರಜೆಗಳ ಪತಿ, ಸರ್ವಲೋಕ ಸ್ವಾಮಿಯು. ಪರಮೇಷ್ಠಿಯೆನಿಸಿದ ಬ್ರಹ್ಮದೇವನಿಗೂ ಪ್ರಜಾಪತಿ. ಹೃದಯಾಕಾಶದಲ್ಲಿ ಇರುವವನು. *[ಪರಮೆ ಹೃದಯಾಕಾಶೇ ತಿಷ್ಠತೀತಿ]*. ಪ್ರಜೆಗಳ ಪಾಲಕನಾದವನು *[ಪ್ರಜಾನಾಂ ಪಾಲನಾದ್ ವಿಷ್ಣುಃ]*. ಅಪದಿ ಎನಿಸಿದ ಗಾಯತ್ರಿಯಿಂದ ವ್ಯಕ್ತನಾದವನು. ಬ್ರಹ್ಮನ ಹೊರತಾಗಿ ಇತರರಿಂದ ಪೂರ್ಣವಾಗಿ ತಿಳಿಯಲ್ಪಡದಿದ್ದರಿಂದ ಗಾಯತ್ರಿಯ ಅಪದೀ *[ಬ್ರಹ್ಮಣೋ ಅನ್ಯೈಃ ನ ಗಮ್ಯತೇ]*. ಇದರಿಂದ ವ್ಯಕ್ತನಾದವನು ಹರಿಯು. ಇವನೇ ನಾರಾಯಣನು. ಹಿಂದೆ ಅವ್ಯಕ್ತನಾಗಿದ್ದು ಸೃಷ್ಟಿಕಾಲದಲ್ಲಿ ಸ್ವೇಚ್ಛೆಯಂತೆ ವ್ಯಕ್ತನಾಗುವನು.

**ಅಪದಾತ್ತು ಪದೋ ಜಾತಃ ತಸ್ಮಾನ್ನಾರಾಯಣೋಽಭವತ್ ।**
**ಅವ್ಯಕ್ತೋ ವ್ಯಕ್ತಿಯೋಗೇನ ಬ್ರಹ್ಮಯೋಗೇನ ಕಾಮತಃ ॥ 8 ॥**

'ಅ'ವೆಂಬ ಪದದಿಂದಲೇ ತ್ರಿಪದವಾದ ಓಂಕಾರ ಅಭಿವ್ಯಕ್ತವಾಯಿತು. ಓಂಕಾರ ವಾಚ್ಯನಾದವನೇ ನಾರಾಯಣ. ಅವ್ಯಕ್ತನಾಗಿದ್ದರೂ ರಾಮಕೃಷ್ಣಾದಿ ರೂಪದಿಂದ ಕಾಣಿಸಿಕೊಳ್ಳುವನು. ಅವನನ್ನು ವೇದಗಳಿಂದ ತಿಳಿಯಬಹುದು. ಹಾಗೂ ಬ್ರಹ್ಮವಿಷಯಕ ಭಕ್ತಿ ಯೋಗದಿಂದ ಮಾತ್ರ ಅವನನ್ನು ತಿಳಿಯಬಹುದು.

ಭಗವಂತನು *ಕರ್ತುಂ ಅಕರ್ತುಂ ಅನ್ಯಥಾಕರ್ತುಂ* ಸಮರ್ಥನು *[ಪ್ರಭುಃ]*.

ಅನ್ಯ ವಿಷಯಗಳಲ್ಲಿ ಮನಸ್ಸನ್ನಿಡದೆ ಶ್ರೀಹರಿಯಲ್ಲಿ ಮನಸ್ಸಿಡುವವನು ಬ್ರಹ್ಮದೇವನು. ಇವನಲ್ಲಿದ್ದು ಬ್ರಹ್ಮಭಾವ ನೆನಿಸುವನು.[4]

---

4. ಯದಾ ಪಶ್ಯಃ ಪಶ್ಯತೇ ರುಗ್ಮರೂಪಂ ।

**ಅಹಂತ್ವಿತಿ ಸಹೋವಾಚ ಪ್ರಜಾಃ ಸ್ರಕ್ಷ್ಯಾಮಿ ಭಾರತ ।**
**ಪ್ರಭವಃ ಸರ್ವಭೂತಾನಾಂ ಯಸ್ಯ ತಂತುರಿಮಾಃ ಪ್ರಜಾಃ ॥ 9 ॥**

ಭಗವಂತನು ತನ್ನನ್ನು ಅಹಂ ಎಂದ. ಇದರರ್ಥ. ಸೃಷ್ಟಿಸಿದ ವಸ್ತ್ರಗಳಲ್ಲಿ ಯಾವುದನ್ನಾದರೂ ಬಿಡಬಹುದು. ಆದರೆ ನಾನು ಅಹೇಯನಾದ್ದರಿಂದ ಅಹಂ ಶಬ್ದ ವಾಚ್ಯನಾಗಿರುವೆನು. ನಾನು ಬ್ರಹ್ಮನೆ ಮೊದಲಾದ ಪ್ರಜೆಗಳನ್ನು ಸೃಷ್ಟಿ ಮಾಡುವೆನು. ನಾನೇ ಸರ್ವಭೂತಗಳನ್ನು ಸೃಷ್ಟಿಸಿರುವೆನು. ಶೋಭನನಾದ ಬ್ರಹ್ಮದೇವನೂ ಸಹ ನನ್ನ ಸಂತಾನವೆ. ಸುತಂತುವೂ ಪ್ರಲಯದಲ್ಲಿ ಸುತಂತುವನ್ನು ಭೇದಿಸುವವನೂ ನಾನೇ.

ಪರಬ್ರಹ್ಮನಿಗೆ ಪ್ರಿಯನಾದ ಅಧಿಷ್ಠಾನ ವಾಯುವಿನಲ್ಲಿರುವನೆಂದರ್ಥ. ಭಗವಂತನು ಯಾವಾಗಲೂ ತನ್ನಿಂದ ಅಭಿನ್ನವಾದ ಪೂರ್ಣಾನಂದ–ಲ್ಲಿರುವನು.

ಈ ರೀತಿ ಭಗವಂತನು ಜಗತ್ತಿಗೆ ಕಾರಣನಾದ ಚತುರ್ಮುಖನನ್ನು ಸೃಷ್ಟಿಸಿ ನೀನು ಪ್ರಜೆಗಳನ್ನು ಸೃಷ್ಟಿಸು ಎಂದಾಗ ಸ್ವಾಮಿ ನನಗೆ ಸೃಷ್ಟಿಸುವಾಗ ನಿನ್ನ ವಿಸ್ಮರಣೆ ಬರದಂತೆ ರಕ್ಷಿಸು ಎಂದು ಪ್ರಾರ್ಥಿಸಿದರು. ಹರಿಯು ಹಾಗೆ ಆಗಲಿ ಎಂದನು. ಬ್ರಹ್ಮದೇವನು,

**ಸ್ವಭಾವಾಜ್ಜಾಯತೇ ಸರ್ವಂ ಸ್ವಭಾವಾಚ್ಚ ತಥಾಭವತ್ ।**
**ಅಹಂಕಾರಃ ಸ್ವಭಾವಾಚ್ಚ ತಥಾ ಸರ್ವಮಿದಂ ಜಗತ್ ॥ 10 ॥**

ಸ್ವತಂತ್ರನಾದ ಶ್ರೀಹರಿಯಿಂದ ಸರ್ವವುಂಟಾಗುತ್ತದೆ. *[ಸ್ವತಂತ್ರತ್ವಾತ್ ಸ್ವಭಾವಃ]* ಯಾರ ಅಧೀನನಾಗದೆ ಸ್ವಯಂ ತಾನೆ ಜಗತ್ತನ್ನು ನಿರ್ಮಿಸಿ ಸ್ಥಿತಿವುಂಟು ಮಾಡುತ್ತದೆ. ಸ್ವರೂಪಭೂತ ಐಶ್ವರ್ಯವುಳ್ಳ ಶ್ರೀಹರಿಯಿಂದಲೇ ಅಹಂವೆಂಬ ಲಿಂಗ ಶರೀರವೂ ಸಹ ಬ್ರಹ್ಮಾದಿಗಳಿಗೆ ಬರುವುದು ಶ್ರೀಹರಿಯಿಂದಲೇ ಅಷ್ಟೇಕೆ? ಜಗತ್ತಿನ ಸಕಲ ವ್ಯಾಪಾರಗಳೆಲ್ಲವೂ ಭಗವಂತನಿಂದಲೇ ನಡೆಯುತ್ತದೆ.[5]

ಸರ್ವತ್ರವ್ಯಾಪ್ತನೂ ಯಾರ ಆವಲಂಬನೆಯೂ ಬೇಕಿಲ್ಲದವನೂ ಭಕ್ತಿ

5. ಸ್ವಸಾಮರ್ಥ್ಯಾತ್ ಸ್ವಕರ್ಮಾಣಿ ರಮಯಾ ಸಹ ಕೇಶವಃ ।
ಕುರುತೇ ಸ್ವಯಮೇವೈಷಃ ಕಾನಿಚಿತ್ ಪುರುಷೋತ್ತಮಃ ॥

ಹೊರತಾಗಿ ಸಿಗದವನೂ, ಯುದ್ಧದಲ್ಲಿ ಜಯರೂಪನೂ, ವೇದಮಯನೂ ಹುಟ್ಟಿದ್ದೆಲ್ಲದಕ್ಕೂ ಆಶ್ರಯದಾತನೂ *[ಜಾತಮೋತಂ ಯಸ್ಮಿನ್].* ಗುಣಪೂರ್ಣನಾದ್ದರಿಂದ ಬ್ರಹ್ಮ ಶಬ್ದಾಭಿಧೇಯನು. ಇಂತಹ ಬ್ರಹ್ಮನಿಂದಲೇ ಜಗತ್ತು ನಡೆಯುತ್ತದೆ. ಬ್ರಹ್ಮನಲ್ಲಿದ್ದು ಸೃಷ್ಟಿಯನ್ನು ಮಾಡುವನು.[6]

ಹೀಗೆ ಪರಮಾತ್ಮನಿಂದ ಪ್ರೇರಿತನಾದ ಚತುರ್ಮುಖನು ನೀರನ್ನೇ ಮೊದಲು ಸೃಷ್ಟಿಸಿದನು. ಭಗವಂತನ ಅಧೀನನಾಗಿ ಜಗತ್ತನ್ನು ಧರಿಸುವುದರಿಂದ ಧಾತಾ[7] ಎಂದೂ ಪ್ರಸಿದ್ಧನಾದನು. ಈ ಹಿಂದೆ ವಾಯು ಶಬ್ದಿತ ಶ್ರೀಹರಿಯಿಂದ ಪ್ರಕಟವಾಗಿದ್ದ ಜಗತ್ತು ಬ್ರಹ್ಮನಿಂದ ವಿಸ್ತಾರ ಹೊಂದಿತು. ಬ್ರಹ್ಮನು ನೀರಿನಿಂದ ಪೃಥಿವೀಯನ್ನು ಬೇರ್ಪಡಿಸಲಿಚ್ಛಿಸಿ, ಜಲವನ್ನು ದ್ರವವನ್ನಾಗಿಯೂ, ಭೂಮಿಯನ್ನು ಘನೀಭೂತವಾಗಿಯೂ ಮಾಡಿದನು.

## ಪೃಥಿವೀ ನೀರಿನಲ್ಲಿ ಮುಳುಗಿತು

**ಘಲತ್ವಾತ್ ಸೀದಮಾನಾ ಚ ಸಲಿಲೇ ಸಲಿಲೋದ್ಭವಾ ।**
**ವ್ಯಾಜಹಾರ ಶುಭಾಂ ವಾಣೀಂ ಸಮಂತಾತ್ ಪೂರಯನ್ನಿವ ॥ 11 ॥**

ನೀರಿನಲ್ಲಿ ಕಾಣಿಸಿಕೊಂಡ ಪೃಥಿವಿಯು ತನಗೆ ಕಾರಣ ರೂಪವಾದ ಜಲದಲ್ಲಿ ಯಾವಾಗ ಮುಳುಗಿತೋ ಆಗ ಪೃಥಿವಿಯ ಅಭಿಮಾನಿ ದೇವತೆಯು ದಶದಿಕ್ಕುಗಳು ಮೊಳಗುವಂತೆ ಈ ಮಾತನ್ನಾಡಿದಳು.

"ಈ ನೀರಿನ ಆಳವಾದ ಮಡುವಿನಲ್ಲಿ ನಾನು ಮುಳುಗುತ್ತಿರುವೆನು. ನಾನು ಬಹಳ ವಿಕ್ಷೋಭೆಗೆ ಒಳಗಾಗಿದ್ದೇನೆ. ನಾನು ನೀರಿನ ಮೇಲೆ ಬರಬೇಕು. ನನ್ನನ್ನು ಮೇಲ್ಭಾಗಕ್ಕೆ ತರುವವರು ಯಾರಿದ್ದಾರೆ? ಯಾರಾದರೂ ಬಂದು ನನ್ನನ್ನು ಮೇಲೆ ಎತ್ತಿರಿ" ಎಂದಳು.

---

6. ಪ್ರಜಾಪತೀನಾಂ ಸ ಪತಿಃ ಚಕ್ಲೃಪೇ ಕಾನ್ ಪ್ರಜಾಪತೀನ್ ।
ಅನುಪ್ರವಿಶ್ಯ ಬ್ರಹ್ಮಾಣಂ ಪ್ರಾಣಂ ದಶವಿಧಂ ತಥಾ ॥
ಸರ್ಗಾಂಶ್ಚಿವಾನು ಸರ್ಗಾಂಶ್ಚ ಮನೂನ್ ಮನ್ವಂತರಾಧಿಪಾನ್ ॥ *-ಭಾ.ತಾ. 3/8/24*

7. ಧಾತಾ ವಿಧಾತಾ ಪರಮೋಽತ ಸಂದೃಕ್ ।

**ಊರ್ಧ್ವೇಽಹಂ ಸ್ಥಾತುಮಿಚ್ಛಾಮಿ ಸಂಸೀದಾಮ್ಯುದ್ಧರಸ್ವ ಮಾಮ್ ।**
**ಗಂಭೀರೇ ತೋಯವಿವರೇ ಮೂರ್ತಿವಿಕ್ಷೋಭಿತಾಂತರಮ್ ॥ 12 ॥**

**ವರಾಹರೂಪಮಾಸ್ಥಾಯ ನಿಪಪಾತ ಮಹಾರ್ಣವೇ ।**
**ಉದ್ಧೃತ್ಯ ಸೋಽವನಿಂ ತೋಯಾತ್ ಕೃತ್ವಾಕರ್ಮ ಸುದುಷ್ಕರಮ್ ॥ 13 ॥**

ನಂತರ ಭೂಮಿಯು ಮೂರ್ತರೂಪಳಾಗಿ ಪ್ರಕಟಗೊಂಡು ದಶದಿಕ್ಕುಗಳನ್ನೂ ಅವಲೋಕಿಸಿದಳು. ಯಾರಾದರೂ ತನ್ನನ್ನು ರಕ್ಷಿಸುವರಿದ್ದಾರೆಯೇ ಎಂದು ನೋಡಿದಳು. ಭೂದೇವಿಯ ಬಾಯಿಂದ ಹೊರಟ ನನ್ನನ್ನು ರಕ್ಷಿಸಿರಿ ಎಂಬ ಮಾತನ್ನು ಕೇಳಿ ಆಪದ್ರಕ್ಷಕನಾದ ಶ್ರೀಮನ್ನಾರಾಯನನು ಕಿಟಿರೂಪಧರಿಸಿ ಮಹಾಸಮುದ್ರದಲ್ಲಿ ನೆಗೆದನು. ಸ್ವಲ್ಪ ಹೊತ್ತಿನಲ್ಲಿಯೇ ಭೂಮಿಯನ್ನು ಎತ್ತಿ ಕೋರೆದಾಡೆಗಳಲ್ಲಿರಿಸಿಕೊಂಡು ಮೇಲೆ ಅವಳ ಕಕ್ಷೆಯಲ್ಲಿರಿಸಿ ಅನ್ಯರಿಂದಾಗದ ದುಷ್ಕರ ಕಾರ್ಯ ಮಾಡಿ ಮರೆಯಾದನು.

ಹಂದಿಯ ವೇಷ ಧರಿಸಿದ ಮಾತ್ರಕ್ಕೆ ಪ್ರಾಕೃತ ಹಂದಿಯಂತಲ್ಲ. ಅಪ್ರಾಕೃತವಾದ ಶುದ್ಧ ಚಿದಾನಂದಾತ್ಮಕ ಶರೀರವನ್ನೆ ಧರಿಸಿ ತೋರಿಸಿದ್ದ. ಸಕ್ಕರೆ ಅಚ್ಚಿನಲ್ಲಿ ರೂಪುಗೊಂಡ ಹಂದಿ ಸರ್ವತ್ರ ಮಧುರವೆ ಅಲ್ಲವೆ? ಹಾಗೆಯೆ.

ಸುವರ್ಣನಿರ್ಮಿತವಾದ ವಸ್ತು ಸುವರ್ಣಮಯವೆನಿಸುವುದಿಲ್ಲವೆ ಹಾಗೆಯೆ. ಸರ್ವತ್ರ ಬೆಳಕಿನ ಪುಂಜನಾದ ಇವನು ಆಕಾಶನೆಂದೆನಿಸಿ ಇಲ್ಲಿಯೆ ಚತುರ್ಮುಖನು ಉದ್ಭವಿಸಿದನು. ಈಗಲೂ ಸಮಸ್ತ ಜಗದುತ್ಪತ್ತಿ ಸ್ಥಾನನಾದ ಶ್ರೀಹರಿಯು ಪ್ರಜಾಸಂರಕ್ಷಣೆಗಾಗಿ ಒಂದು ರೂಪದಿಂದಿರುವನು.

ಈ ಭೂಮಿಯ ಮೇಲಿದ್ದು ಸರ್ವರಿಗೂ ಬಿಸಿಯನ್ನು ನೀಡುವ ಸೂರ್ಯದೇವನು ಸರ್ವತ್ರ ವ್ಯಾಪವಾಗಿರುವ ತನ್ನ ರಶ್ಮಿಗಳ ಮೂಲಕ ನಗುತ್ತಿರುವನಂತೆ ತೋರುತ್ತಾ ಭೂಮಿಯ ಮಧ್ಯಭಾಗ ಭೇದಿಸಿಕೊಂಡು ನೀರಿನ ಸಮೀಪ ಬರುತ್ತಾನೆ.

**ತಸ್ಯ ಮಂಡಲ ಮಧ್ಯಾತ್ ತು ನಿಃಸೃತಂ ಸೋಮಮಂಡಲಮ್ ॥ 14 ॥**

ಹೀಗೆ ಸೂರ್ಯನ ತಾಪದ ಕಾರಣದಿಂದಾಗಿ ಸೂರ್ಯನ ಮಧ್ಯಭಾಗದಿಂದ ಚಂದ್ರಮಂಡಲವು ಉದಯಿಸಿತು. ಚಂದ್ರನಲ್ಲಿ ಅಂತರ್ನಿಯಾಮಕನಾದ ಶ್ರೀಹರಿಯ ಅನುಗ್ರಹದಿಂದ ಸೋಮನು ದ್ವಿಜಗಣಗಳಿಗೆ ಅಧಿಪತಿಯಾದನು. ಹಾಗೂ ಇವನ ಸೌಮ್ಯತೆಯನ್ನು ದ್ವಿಜಗಣಗಳಲ್ಲಿ ಕಂಡುಬರುತ್ತದೆ.

ಸೋಮಮಂಡಲದಲ್ಲಿರುವ ಹಯಗ್ರೀವ ರೂಪಿ ಪರಮಾತ್ಮನಿಂದಲೇ ಸಕಲವೇದಾದಿ ಶಾಸ್ತ್ರಗಳು ಆವಿರ್ಭವಿಸಿದವು. *[ನಸ್ತೋ ಮುಖಾದಪಿ ನಿರಂತರಂ ಮುದ್ಗಿರಂತಂ ವಿದ್ಯಾ ಅಶೇಷತಃ]*

**ಸೋಮಮಂಡಲ ಪರ್ಯಂತಾತ್ ಪವನಃ ಸಮಜಾಯತ ॥ 15 ॥**

ಚಂದ್ರಮಂಡಲದ ಮಧ್ಯದಲ್ಲಿರುವ ಭಗವಂತನಿಂದಲೇ ಅವನ ಪ್ರಾಣ ವಾಯುವಿನಿಂದ ವಾಯುವು ಜನಿಸಿದ *[ಪ್ರಾಣಾದ್ ವಾಯುರಜಾಯತ]*.

ಭಗವಂತನು ತನ್ನ ಅವಯವಗಳಿಂದಲೇ ಸಕಲ ಲೋಕಗಳನ್ನೂ ಸೃಷ್ಟಿಸುವವನು. ಇದು ಸತ್ಯ ಸಂಗತಿ. ಚತುರ್ಮುಖನ ಅವಯವಗಳಿಂದ ಲೋಕಗಳು ಸೃಷ್ಟವಾಗಿವೆ ಎಂಬುದು ವ್ಯವಹಾರ ಮಾತ್ರ.

ಭಗವಂತನ ದ್ರವ್ಯವೊ ಅದೇ ಜಲವು. ಅವನ ಘನೀಭಾವವೇ ಪೃಥಿವಿಯು. ನೇತ್ರಗಳಿಂದಲೇ ಸೂರ್ಯ ಚಂದ್ರ ಸೃಷ್ಟಿ. ಭಗವಂತನ ಚೈತನ್ಯವಿರುವುದೋ ವಾಯುವಿನ ಜೊತೆ ಸೇರಿ ವಿವಿಧ ವ್ಯಾಪಾರ ಮಾಡುತ್ತದೆ *[ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ]*.

ಯಾವ ಕರ್ಣಛಿದ್ರವೊ ಅದುವೆ ಶ್ರೋತ್ರಾಭಿಮಾನಿ ದೇವತೆಗಳಿಗೆ ಕಾರಣ. ಶಾಸ್ತ್ರಗಳಿಗೂ ಆಶ್ರಯವು. *[ತೀರ್ಥಾನಾಂ ಕ್ಷೇತ್ರಂ, ಕರ್ಣೌ ದಿಶಾಂ]*.

ಭಗವಂತನು ಜೀವ ವಿಲಕ್ಷಣನಾದ್ದರಿಂದ ಅಜೀವನೆನಿಸುವನು. ಜೀವನಾದರೂ ಮುಖ್ಯಪ್ರಾಣನ ಅನುಗ್ರಹದಿಂದ ಪ್ರಾಣಧಾರಣೆ ಮಾಡಿ-ದವನು. ಇವನಿಂದಲೇ ಮುಖ್ಯಪ್ರಾಣನೂ ಬ್ರಹ್ಮನೂ ಪ್ರಾಣಧಾರಣೆ ಮಾಡಿ-ಕೊಂಡಿರುವರು.[8]

ಹೀಗೆ ಪುರುಷನಿಂದಲೇ ಪಾಂಚಭೌತಿಕ ಶರೀರವನ್ನು ಹೊಂದಿ ಚೇತನವು ವಾಸ ಮಾಡುವುದೇ ಆಗ ಅಲ್ಲಿ ಇಂದ್ರಿಯಾಭಿಮಾನಿ ಚೇತನರು, ಕಾರ್ಯ ನಿರ್ವಹಿಸುವರು.

ಹೀಗಾಗಿ ಬ್ರಹ್ಮದೇವರ ವಿರಾಟ್ ದೇಹದಲ್ಲಿಯೂ ಅಂತರ್ಯಾಮಿ

8. ಪ್ರಾಣಂ ಧಾರಯತೇ ಯಸ್ಮಾತ್ ಸ ಜೀವಃ ಪರಮೇಶ್ವರಃ ।
ಯತ್ ಪ್ರಸಾದಾತ್ ತು ಸ ಪ್ರಾಣಃ ಕುರುತೇ ಸ್ವಸ್ಯ ಧಾರಣಮ್ ॥*–ಭಾ.ತಾ.2/5/34*

ಶ್ರೀಹರಿಯು ವಾಸ ಮಾಡುವನು. ಯಾವ ಪ್ರಾಣಿ ಹೇಗಿದೆಯೋ ಅದೇ ಆಕಾರದಲ್ಲಿ ಶ್ರೀಹರಿಯು ಇರುತ್ತಾನೆ.

ಈ ಜೀವಾತ್ಮನು ಸ್ವತಂತ್ರಭಾವವಾದ ಶ್ರೀಹರಿಯಿಂದ ಹುಟ್ಟಿ, ಸ್ಥಿತಿ ಪಡೆದು ಭಯಾದಿಗಳಿಂದ ಕಂಪಿಸುತ್ತಾ, ಭಗವಂತನಿಂದಲೇ ಅಭಯರೂಪವಾದ ಮೋಕ್ಷವನ್ನು ಹೊಂದುತ್ತಾನೆ. ಎಲ್ಲರಿಗೂ ಮೋಕ್ಷಾದಿಗಳಿಲ್ಲ. ಅವರವರ ಯೋಗ್ಯತೆಯಂತೆ ಸ್ಥಾನಗಳನ್ನು ಹೊಂದುವರು. ಈ ನಿಯಮವು ಬ್ರಹ್ಮದೇವನಿಗೂ ಯುಕ್ತವಾಗುತ್ತದೆ. ಅದರೆ ಭಯಾದಿಗಳು ಇರದಿದ್ದರೂ ಅದನ್ನು ತೋರಿಸಿಕೊಳ್ಳುವನು. ಇದರಿಂದ ಹರಿಯ ಪ್ರೀತಿಲಾಭವಾಗುತ್ತದೆ.

**ಯಾವತ್ ತತ್ ಬ್ರಹ್ಮ ವಿಷಯಂ ನೋಪಯತಿ ಹ ತತ್ವತಃ ।**
**ತದಾ ಬ್ರಹ್ಮತ್ವಮಾಪನ್ನಃ ಪ್ರಲಯಾಗ್ರೇ ಪ್ರತಿಷ್ಠತಿ ॥ 16 ॥**

ಎಲ್ಲಿಯವರೆಗೂ ಪರಬ್ರಹ್ಮ ವಿಷಯಕ ವಿಚಾರ ಮಾಡುವುದಿಲ್ಲವೊ ಅಲ್ಲಿಯವರೆಗೂ ಈ ಅಶಾಂತಿ ತಪ್ಪಿದ್ದಲ್ಲ. ಜೀವಾತ್ಮನು ನಿತ್ಯನಾದರೂ ಶರೀರ ಸಂಬಂಧ ಪಡೆದು ಈ ಸಂಸಾರದಲ್ಲಿ ಸುತ್ತುತ್ತಿರುವನು.

ಅತಿಯಾದ ಇಂದ್ರಿಯ ವ್ಯಾಮೋಹದಿಂದಾಗಿ ಮೋಹಿತನಾಗಿ ಭಗವಂತನ ಸ್ವರೂಪ ತಿಳಿಯದೆ ತನ್ನ ಕರ್ಮಗಳಿಂದಾಗಿ ಹುಟ್ಟು ಸಾವುಗಳನ್ನು ಹೊಂದುವನು.

ಇಂತಹ ಇಂದ್ರಿಯಗಳೆಂಬ ಕುದುರೆಯನ್ನು ಮನಸ್ಸೆಂಬ ಹಗ್ಗದಿಂದ ಬಿಗಿಹಿಡಿದು ಆ ಮನಸ್ಸನ್ನು ಹರಿಯಲ್ಲಿ ಕೇಂದ್ರೀಕರಿಸಿದಾಗ ಮಾತ್ರವೆ ಬ್ರಹ್ಮತ್ವ ಹೊಂದುವನು = ಪೂರ್ಣನಾಗುವನು *[ಬ್ರಹ್ಮವಿದ್ ಬ್ರಹ್ಮಭವತಿ].*

ಇಂತಹ ಯೋಗವನ್ನು ಬಲ್ಲ ಯೋಗಿಗೆ ರಾಗದ್ವೇಷಗಳಿಂದಾಗಿ ಹೀನಾವಸ್ಥೆ ಹೊಂದುವುದಿಲ್ಲ. ಭಗವಂತನೊಬ್ಬನನ್ನು ಮಾತ್ರ ಕೇಂದ್ರೀಕರಿಸಿರುವ ಈ ಯೋಗಿಗೆ ಹಾವು–ಹಾರ ಒಂದೇ ಆಗಿರುತ್ತದೆ. ಮನಸ್ಸನ್ನು ಹರಿಯಲ್ಲಿಟ್ಟವನಿಗೆ ರಜೋಗುಣ ಕಾರ್ಯವಾದ ಕೆಟ್ಟ ಇಚ್ಛೆ ಹಾಗೂ ಕ್ರೋಧಗಳು ಕಾರ್ಯಹೀನವಾಗುವುವು.

ಇಂತಹವನಿಗೆ ಸಿದ್ಧಿಯಾಗಿರುತ್ತದೆ. ಇವನು ಹರಿಯು ಅನುಗ್ರಹದಿಂದಾಗಿ

ಭೂತಭವ್ಯವೇತ್ತನಾಗಿರುತ್ತಾನೆ. ಜೀವರ ಹುಟ್ಟು ಸಾವು ನರಕ-ಸ್ವರ್ಗವೆಲ್ಲವೂ ಕರತಲವಾಗುತ್ತವೆ. ಸಮಸ್ತ ಪ್ರಾಣಿಗಳ ಆಗು-ಹೋಗುಗಳನ್ನು ತಿಳಿದಿರುತ್ತಾನೆ.

**ಇಂದ್ರಿಯೈಃ ವ್ಯತಿರಿಕ್ತೋ ವೈ ಯದಾ ಭವತಿ ಯೋಗವಿತ್ ।**
**ತದಾ ಬ್ರಹ್ಮತ್ವಮಾಪನ್ನಃ ನ ಚ ಸಜ್ಜತಿ ಕರ್ಹಿಚಿತ್ ॥ 18 ॥**

ಮನಸ್ಸು ಸತ್ತೆಂಬ ಹರಿಯ ಬಳಿ ಸಾಗಬೇಕಾದರೆ ಆಧ್ಯಾತ್ಮಿಕ ಯೋಗವೆಂಬ ಯೋಗದ ಅಂಗಗಳನ್ನು ಅಳವಡಿಸಿಕೊಳ್ಳಬೇಕು. ಆಗ ಮನಸ್ಸು ಭಗವಂತನ ಹಾದಿ ಹಿಡಿಯುತ್ತದೆ.[9]

ಹೀಗೆ ಕಾಮ ಮೊದಲಾದ ನಿಗ್ರಹ ಮಾಡದೆ ಭಗವಂತನನ್ನು ಹೊಂದಲು ಸಾಧ್ಯವಿಲ್ಲ *[ನಾಶಾಂತೋ ನಾಸಮಾಹಿತಃ]*.

ಬಂಧಮೋಕ್ಷಗಳಿಗೆ ಕಾರಣ ಮನಸ್ಸೆ. ಅದರ ನಿಗ್ರಹವಾಗದೆ ಮೋಕ್ಷವಾಗದು. ಕರ್ಮಗಳನ್ನು ಬಿಡದೆ ವಿಷ್ಣುಪ್ರೀತಿಯ ಉದ್ದೇಶದಿಂದ ಮಾಡಿದಾಗ ಮಾತ್ರ ಕರ್ಮಗಳು ಬಂಧಕವಾಗುವುದಿಲ್ಲ. ಮಾನವನು ಆತ್ಮನಲ್ಲಿ ತೃಪ್ತನಾದಾಗ ಕರ್ಮಗಳು ಬಂಧಕವಾಗುವುದಿಲ್ಲ. ಜ್ಞಾನಾಗ್ನಿಯು ಸರ್ವಕರ್ಮಗಳನ್ನು ದಹಿಸಿ ಬಿಡುತ್ತದೆ.

**ಪಶ್ಯತೇ ಹೃದಯಂ ನೀಲಂ ಪರೇಭ್ಯೋ ಜ್ಞಾನ ಚಕ್ಷುಷಾ ।**
**ಬ್ರಹ್ಮಪ್ರೋಕ್ತಮಿವಾತ್ಮಾ ವೈ ವಿಮುಕ್ತೋ ದೇಹಬಂಧನಾತ್ ॥ 19 ॥**

ಹೀಗೆ ಸ್ವೋಚಿತಕರ್ಮಗಳನ್ನು ಭಗವಂತನ ಪ್ರೀತಿಗಾಗಿ ಮಾಡುತ್ತಾ ಇಂದ್ರಿಯ ನಿಗ್ರಹ ಮಾಡುವ ವ್ಯಕ್ತಿಗೆ ಲಿಂಗದೇಹವು ಸಡಿಲಗೊಳ್ಳುತ್ತದೆ. ಜ್ಞಾನಾಗ್ನಿಯಿಂದ ಕಾಮಾದಿ ಬೀಜಗಳು ಹುರಿದ ಬೀಜದಂತಾಗುತ್ತವೆ. ಇವನ ಆತ್ಮವು ವೇದೋಕ್ತ ತತ್ವಜ್ಞಾನಯುಕ್ತವಾಗುತ್ತದೆ.

ಅವನ ಹೃದಯ ಗ್ರಂಥಿಗಳೆಲ್ಲವೂ ಬಿಚ್ಚಿ ಹೋಗಿ, ನಿಶ್ಚಯಾತ್ಮಕ ಜ್ಞಾನ ಹೊಂದುವನು.

ತೇಜೋಮಯನಾದ ಈ ಹರಿಧ್ಯಾನೈಕ ಮನಸ್ಕನಾದ ಯೋಗಿಗೆ

---

9. ಯೋಗಸ್ಯ ಲಕ್ಷಣಂ ವಕ್ಷ್ಯೇ ಸಬೀಜಸ್ಯ ನೃಪಾತ್ಮಜೇ ।
ಮನೋ ಯೇನೈವ ವಿಧಿನಾ ಪ್ರಸನ್ನಂ ಯಾತಿ ಸತ್ಪಥಮ್ ॥

ಯೋಗಶಕ್ತಿಯಿಂದಾಗ ಕರ್ದಮರು ವಿಚಿತ್ರ ವಿಮಾನಾದಿಗಳನ್ನು ಸೃಷ್ಟಿಸಿದಂತೆಯೂ, ಸೌಭರಿಯು ಯೋಗಶಕ್ತಿಯಿಂದಾಗಿಯೇ ಐವತ್ತು ರೂಪ ಚಿತ್ರವಿಚಿತ್ರ ಐವತ್ತು ಗೃಹಗಳನ್ನು ನಿರ್ಮಿಸಿದ್ದು. ಭಗವದ್ ಜ್ಞಾನಿಯು ಲೋಕಗಳನ್ನು ಸೃಷ್ಟಿಸಬಲ್ಲ. ಅಥವಾ ನಾಶ ಮಾಡಲೂ ಬಲ್ಲನು. ತಿರ್ಯಗ್ಯೋನಿಯಲ್ಲಿರುವವರನ್ನೂ ಮುಕ್ತಗೊಳಿಸಬಲ್ಲ.

**ಸೃಜೇದಪಿ ಪರಂ ಲೋಕಂ ಸಂಹರೇದಪಿ ವಿದ್ಯಯಾ ।**
**ತಿರ್ಯಗ್ ಯೋನೌ ಗತಾಂಶ್ಚೈವ ಕರ್ಮಭಿಃ ನಿಯಮೋಪಮೈಃ ॥ 20 ॥**

**ಅಕ್ಷರಂ ಚ ಕ್ಷರಂ ಚೈವ ಯೋಗ ಕರ್ಮಾಭಿವಿದ್ಯತೆ ।**
**ನ ಕ್ಷರಂ ವಿದ್ಯತೇ ತತ್ರ ಯದ್ ಬ್ರಹ್ಮ ಕರ್ಮಭಿಃ ಧ್ರುವಮ್ ॥ 21 ॥**

ಯೋಗಿಗೆ ಯೋಗಕರ್ಮದಿಂದಾಗಿ ಕ್ಷರವೆನಿಸಿದ ಐಹಿಕ ಭೋಗಗಳು, ಅಕ್ಷರವೆನಿಸಿದ ಮೋಕ್ಷವೂ ಸಹ ಹೊಂದಬಹುದಾಗಿದೆ. ಅವನು ಮಾಡುವ ಕರ್ಮ ಸಕಾಮವೋ ನಿಷ್ಕಾಮವೋ ಎಂಬುದರ ಮೇಲಿದೆ. ಸಕಾಮಕರ್ಮದಿಂದಾಗಿ ನಶ್ವರ ಫಲ. ನಿಷ್ಕಾಮವಾದರೆ ಶಾಶ್ವತ ಫಲವು ಸಾಂಖ್ಯರೆನಿಸಿದ ಸನಕಾದಿಗಳು ಜ್ಞಾನಯೋಗಿಗಳಾಗಿದ್ದು ಅವರ ಕರ್ಮ ಹರಿಪ್ರೀತ್ಯುದ್ಧೇಕವಾದ್ದರಿಂದ ನಶ್ವರಲೋಕಗಳನ್ನು ಹೊಂದುವುದಿಲ್ಲ. ಜ್ಞಾನನಿಷ್ಠರಾದರೂ ಅಧಿಕಾರಿಕರಾದರೆ ಹರೀಚ್ಛೆಯಂತೆ ಲೋಕಸಂಗ್ರಹಕ್ಕಾಗಿ ಕರ್ಮಗಳನ್ನು ಮಾಡುತ್ತಿರಬೇಕಾಗುತ್ತದೆ.

ಪ್ರೀಯವ್ರತಾದಿರಾಜರು ಗೃಹಸ್ಥಾಶ್ರಮ ಕರ್ಮಗಳನ್ನು ನಿಷ್ಕಾಮನೆಯಿಂದ ಮಾಡುತ್ತಿದ್ದರೂ ಜ್ಞಾನಿಗಳಾಗಿಯೆ ಇದ್ದರು. ಇಂತಹವರಿಗೆ ನಶ್ವರಲೋಕ-ವಿರುವುದಿಲ್ಲ.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಯೋಗ ಕರ್ಮ ವಿವರಣೆ ಎಂಬಲ್ಲಿ
ಹದಿನೈದು-ಹದಿನಾರನೆಯ ಅಧ್ಯಾಯವು ಸಮಾಪ್ತಿ

## ಅಥ ಸಪ್ತದಶ-ಅಷ್ಟಾದಶ-ನವದಶ-ವಿಂಶ-ಏಕವಿಂಶೋಽಧ್ಯಾಯಃ

### ಬ್ರಹ್ಮನಿಂದ ಸೃಷ್ಟಿ ವಿಸ್ತಾರ

*ವೈಶಂಪಾಯನ ಉವಾಚ-*

**ಪೃಥಿವ್ಯಾಂ ಯತ್ ಛಿದ್ರಂ ತಪನೇನ ವಿವರ್ಧತಾ ।**
**ತಸ್ಮಿನ್ ನ್ಯಸ್ತೋಽಥ ಮೈನಾಕಃ ಸ್ವಭಾವ ವಿಹಿತೋಽಚಲಃ ॥ 1 ॥**

ವೈಶಂಪಾಯನರು ರಾಜನಿಗೆ ರಾಜನ್! ಈ ಹಿಂದೆ ಸಾವಿರಾರು ಕಿರಣಗಳುಳ್ಳ ಯಾವ ಸೂರ್ಯನು ಭೂಮಧ್ಯವನ್ನು ಸೀಳ ಮೇಲೆ ಬಂದಿರುವನೋ ಅವನಂತರ್ಯಾಮಿ ಭಗವಂತನು ಆ ಭೂ ರಂಧ್ರದಲ್ಲಿ ಮಧ್ಯೆ ಮೈನಾಕವೆಂಬ ಹೆಸರುಳ್ಳ ಮೇರುಪರ್ವತವನ್ನು ಸ್ಥಿರವಾಗಿಟ್ಟನು.

**ಪರ್ವಭಿಃ ಪರ್ವತತ್ವಂ ಚ ಲಭತೇ ನಾಮ ಸಂಜ್ಞಿತಮ್ ।**
**ಅಚಲಾದಚಲತ್ವಂ ಚ ಸ್ವಭಾವಾನ್ ಮೇರುರೇವ ಸಃ ॥ 2 ॥**

ಪರ್ವಗಳಿಂದ ಯುಕ್ತವಾಗಿದ್ದು *[ಪರ್ವೈಃ ತತಃ ಪರ್ವತಃ]* ಪರ್ವತವೆನಿಸಿದೆ. ಚಲನೆಯಿಲ್ಲದೆ ಸ್ಥಿರವಾಗಿರುವುದರಿಂದ 'ಅಚಲ'ವೆಂದು ಸ್ವಾಭಾವಿಕವಾಗಿಯೇ ಯಾರಿಂದಲೂ ಪ್ರೇರಿಸಲ್ಪಡದೆ 'ಮೇರು' ಎನಿಸಿದೆ. ಈ ಪರ್ವತದಲ್ಲಿ ಜ್ಞಾನಾನಂದಮಯ ಭಗವಂತನು ಇರುವನು. ಶ್ರೀಹರಿ ಹೊರತಾಗಿ ಬೇರಾರು ಪ್ರೇರಕರಿಲ್ಲದ ಈ ಪರ್ವತಕ್ಕೆ ಮೇರು ಎಂದು ಹೆಸರು *[ಈರಃ ಪ್ರೇರಕೋಽಸ್ಯ ಅನ್ಯೋ ನಾಸ್ತೀತಿ ಮೇರುಃ].*

ದ್ಯುಲೋಕವೆನಿಸಿದ ಮೇರುಪರ್ವತ-ಸೂರ್ಯಮಂಡಲ- ಇಂದ್ರ

ಸದನಕ್ಕಿಂತ ಎತ್ತರದಲ್ಲಿರುವ ಶ್ವೇತದ್ವೀಪ ಅನಂತಾಸನ - ವೈಕುಂಠಗಳಲ್ಲಿ ಯಾವಾಗಲೂ ಅಭಿವ್ಯಕ್ತನಾಗಿರುವನು. ಪುರು ಉತ್ಕೃಷ್ಟವಾದ ಮೋಕ್ಷವನ್ನು ನೀಡುವುದರಿಂದ ಪುರುಷನೆನಿಸಿದ ಭಗವಂತನು ಮುಕ್ತರಿಗೆ ವ್ಯಕ್ತನಾಗಿ ಯಾವಾಗಲೂ ಇರುವನು.

## ಮೇರು ಪರ್ವತ ವಿಸ್ತಾರಾದಿಗಳು

ಆ ಮೇರು ಪರ್ವತವೂ ಸುವರ್ಣಮಯವಾಗಿದ್ದು ದುಃಖರಹಿತರಾದ ಪುಣ್ಯವಂತರಾದ ದೇವತೆಗಳಿಗೂ ಮುನಿಗಳಿಗೂ ಆವಾಸ ಸ್ಥಾನವು.

ಅದನ್ನಾಶ್ರಿಸುವವರಿಗೆ ಅಭಿಲಷಿತ ಇಷ್ಟ ಪೂರ್ತಿ ಮಾಡಲು ಅಲ್ಲಿಯೇ ಚಿಂತಾಮಣಿ ಕಲ್ಪವೃಕ್ಷ ಕಾಮಧೇನುಗಳೂ ಇವೆ.

ಅದರ ಸುತ್ತಲೂ ಇಂದ್ರಾದಿ ದೇವತೆಗಳ ವಿಭಾವರೀ ಮೊದಲಾದ ಪಟ್ಟಣಗಳಿವೆ. ಶತಕೋಟಿಯೆಂಬ ಬ್ರಹ್ಮದೇವನ ಅರಮನೆಯಿದೆ. ಇದು ಜ್ಯೋತಿರ್ಮಯನಾದ ಭಗವಂತನಿಗೂ ಆವಾಸ ಸ್ಥಾನವು. ಇದರಲ್ಲಿ ಭಗವಂತನ ವಿಭೂತಿ ರೂಪವಿದೆ ಹರಿಯ ಸನ್ನಿಧಾನವಿದೆ.

ಇದನ್ನು ಯಾರೂ ಸರಿಯಾಗಿ ಅರ್ಥ ಮಾಡಿಕೊಂಡಿರುವುದಿಲ್ಲ. ಇಂದ್ರನು ವರ್ತುಲಾಕಾರದಂತೆ ತಿಳಿದರೆ ಪಂಚಕೋಣ ಬೃಹಸ್ಪತಿಗೆ ಕಾಣುತ್ತದೆ. ಇದಕ್ಕಾಗಿಯೆ 'ಮೇರು'ವು. ಯಾವುದೇ ವಾತಾವರಣಕ್ಕೂ ಜಗ್ಗದೆ ಅಚಲವಾಗಿ ನಿಂತಿದ್ದು 'ಅಚಲ'ವೆಂಬ ಸಾರ್ಥಕ ನಾಮಧೇಯ.

ಈ ಪರ್ವತವನ್ನೆ ಸೂರ್ಯನು ಪ್ರದಕ್ಷಿಣೆ ಬರುವನು. ಜಗತ್ತನ್ನೆ ಬೆಳಗಿಸಿರುವನು. ಚಂದ್ರ, ಸೂರ್ಯ, ನಕ್ಷತ್ರ, ತಾರಾಗ್ರಹಗಳೆಲ್ಲವೂ ಶಿಂಶುಮಾರನ ಆಡಳಿತಕ್ಕೆ ಒಳಪಟ್ಟು ಮೇರುವನ್ನು ಪ್ರದಕ್ಷಿಣೆ ಬರುವುದು, ಇಂತಹ ಶಿಂಶುಮಾರನಿಂದಲೇ ಜಗಚ್ಚಕ್ರ ನಡೆಯುವುದು.

ತಸ್ಮಿಂಸ್ತು ಪುರುಷೋ ವ್ಯಕ್ತೋ ವಸತಿ ಜ್ಯೋತಿ ಸಂಭವಃ ।
ತಸ್ಯ ಜ್ಯೋತಿರ್ಮಯಂ ರೂಪಂ ದೀಪ್ತಂ ಪುರುಷ ವಿಗ್ರಹಂ ॥ 3 ॥

**ವದನಾದಧಿನಿಷ್ಕ್ರಾಂತಂ ಜ್ವಲಂತಮಿವ ತೇಜಸಾ ।**
**ಚತುರ್ಭಿಃ ವದನೈಃ ಯುಕ್ತಂ ಚತುರ್ಭಿಶ್ಚ ದ್ವಿಜೋತ್ತಮೈಃ ॥ 4 ॥**

ಈ ಭಗವಂತನಿಂದಲೇ ಸುವರ್ಣಮಯ ಬ್ರಹ್ಮಾಂಡ ಹುಟ್ಟಿರುತ್ತದೆ. ಆ ಬ್ರಹ್ಮಾಂಡದಲ್ಲಿಯೇ ವಿರಾಟ್ ಅಥವಾ ಪುರುಷ ನಾಮಕ ಬ್ರಹ್ಮದೇವನು ಹುಟ್ಟಿದನು.

ಹೀಗೆ ಹರಿಯಿಂದ ಬ್ರಹ್ಮಾಂಡ, ಇದರಿಂದ ವಿರಾಟ್ ಹುಟ್ಟಿತು. ಬ್ರಹ್ಮದೇವನಿಗೆ ಬ್ರಹ್ಮಾಂಡದಿಂದ ಹುಟ್ಟಿದ ರೂಪಕ್ಕಿಂತ ಬೇರೆ ರೂಪವು ನಾಭಿಕಮಲದಿಂದ ಜನಿಸಿತು.

ಈ ಭಗವಂತನ ಮುಖದಿಂದ ಚತುರ್ಮುಖನು ನಾಲ್ಕು ಮುಖಗಳಿಗೆ ನಾಲ್ಕು ಬ್ರಾಹ್ಮಣಗಳು' ಅಂದರೆ ನಾಲ್ಕು ವೇದಗಳು ಆವಿರ್ಭವಿಸಿದವು. ಈ ವೇದಗಳೆಲ್ಲ ಹಯಗ್ರೀವರೂಪಿ ಭಗವಂತನ ನಿಶ್ವಾಸ ರೂಪದಿಂದ ಹೊರಬರುತ್ತದೆ.[2] ಹಯಗ್ರೀವ ರೂಪ ಬಂದ ವೇದಗಳನ್ನೆ ಪುನಃ ಬ್ರಹ್ಮದೇವನು ತನ್ನ ಮುಖಗಳಿಂದ ವ್ಯಕ್ತಗೊಳಿಸುವನು. ಹೀಗೆ ಭಗವಂತನ ಮುಖದಿಂದ ಬ್ರಹ್ಮದೇವನು ಮೊದಲು ಆವಿರ್ಭವಿಸಿದ್ದರಿಂದ ಆದ್ಯ ಬ್ರಹ್ಮಾ ಎಂದು ಬ್ರಾಹ್ಮಣ ಜಾತಿಗೆ ಪುಂಗವನೆಂದೂ ಕರೆಯಲ್ಪಟ್ಟನು. ಇದನ್ನೇ ವಕ್ತ್ರಂ ಬ್ರಹ್ಮ[3] ಸಮುದ್ಭೂತಂ.

ಹೀಗೆ ಜಗತ್ತನ್ನು ಸೃಷ್ಟಿ ಮಾಡಿದ ಶ್ರೀಹರಿಯು ಮಹಾಭೂತವೆನಿಸಿದ

---

1. ಬ್ರಹ್ಮ ಅಂದರೆ ಪರಬ್ರಹ್ಮ ಅವನನ್ನು ಮುಖ್ಯವಾಗಿ ಪ್ರತಿಪಾದಿಸುವ ವೇದಗಳೇ ಬ್ರಾಹ್ಮಣಗಳು .
ಬ್ರಹ್ಮ ಅಣತೀತಿ
ಸಸ್ತೋ ಮುಖಾದಪಿ ನಿರಂತರ ಮುದ್ಗಿರಂತಂ ವಿದ್ಯಾ ಅಶೇಷತ ॥ *–ತಂ.ಸಾರ.*
2. ತಸ್ಮಾದ್ಯಜ್ಞಾತ್ ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ ।
ಛಂದಾಂಸಿ ಜಜ್ಞಿರೇ ತಸ್ಮಾದ್ ಯಜುಸ್ತಸ್ಮಾದಜಾಯತ ॥ *–ಪು.ಸೂ–9*
3. ಯಸ್ಮಾತ್ ಯಜ್ಞಾಯತೇ ಚಾಂಗಾಲ್ಲೋಕವೇದಾದಿಕಂ ಹರೇಃ ।
ತನ್ನಾಮ ವಾಚ್ಯಮಂಗಂ ತತ್ ಯಥಾ ಬ್ರಹ್ಮಾದಿಕಂ ಮುಖಮ್ ॥
ಭಾವತ್ವಂ = ಭಾವೋ ಲೀಲಾಕ್ರಿಯಾ ಚೇಷ್ಟಾ । ಲೀಲೆಗಳು, ಸೃಷ್ಟ್ಯಾದಿಗಳನ್ನು ಮಾಡುವ ಸಾಮರ್ಥ್ಯವುಳ್ಳವನು.

ವರಾಹರೂಪಧರಿಸಿ ನೀರಿನಲ್ಲಿ ಮುಳುಗಿದ್ದ ಭೂಮಿಯನ್ನು ಮೇಲೆ ತಂದನು. ಜಗತ್ ಸೃಷ್ಟ್ಯಾದಿಗಳನ್ನು ಮಾಡುವ ಶ್ರೀಹರಿಗೆ ಇದೊಂದು ಲೀಲೆ.

**ತದೇವಂ ತನ್ಮಹದ್ಭೂತಂ ಪುನರ್ಭಾವತ್ವಮಾಗತಮ್ ।**
**ಉದ್ಧೃತಾ ಪೃಥಿವೀ ದೇವೀ ಪುರಸ್ತಾತ್ ಸಲಿಲಾಶಯಾತ್ ॥ 5 ॥**

ನಂತರ ಬ್ರಹ್ಮಸ್ಥಾನವಾದ ಬ್ರಹ್ಮಸದನಕ್ಕೆ ಹೋಗಿ ಪೂರ್ಣನಾಗಿಯೇ ಇರುವನು. ಲೋಕವಿಲಕ್ಷಣನಾದ್ದರಿಂದ ಅಲೋಕನೆನಿಸಿದ ಇವನನ್ನು ಲೋಕದಲ್ಲಿ ಸರ್ವರೂ ತಿಳಿಯಲೇಬೇಕಾದ್ದರಿಂದ ಲೋಕವೆನಿಸಿದ- [ಲೋಕವೆಂದರೆ ಸ್ವರೂಪ] *[ಆತ್ಮಾನಮೇವ ಲೋಕಮುಪಾಸೀತ]* ಮಹಾಭೂತದ ಕಾಲುಗಳ ಸಂಧಿಯಲ್ಲಿ ಒಂದು ಲಕ್ಷ ಯೋಜನ ಮೇರು ಪರ್ವತದ ಶಿಖರ ತುದಿಯಲ್ಲಿ ಬ್ರಹ್ಮ.ಸದನವಿತ್ತು. ಮೇರುಪರ್ವತದ ಎತ್ತರ ಒಂದು ಲಕ್ಷ ಯೋಜನವು. ನೋಡುವವರಿಗೆ ನೂರು ಯೋಜನದಂತೆ ಕಂಡೀತು. ಇದೇ ರೀತಿ ಅದರ ವಿಸ್ತಾರ ಒಂದೇ ರೀತಿಯಲ್ಲ. ಇಂದ್ರದೇವನಿಗೆ ವರ್ತುಲಾಕಾರವಾಗಿಯೂ, ಬೃಹಸ್ಪತ್ಯಾಚಾರ್ಯರಿಗೆ ಷಟ್ಕೋಣದಂತೆಯೂ ತೋರುತ್ತದೆ. ಹೀಗೆ ಜ್ಞಾನಿಗಳು ನೋಡುತ್ತಿದ್ದರೂ ನೋಡಲಾರರು. ಇದನ್ನು ಯಾರೂ ಸರಿಯಾಗಿ ತಿಳಿದಿಲ್ಲ. ಭಗವಂತನೊಬ್ಬನೆ ಇದರ ಉದ್ದ ಅಗಲ ತಿಳಿದವನು.

**ಅಥವಾ ನೈವ ಸಂಖ್ಯಾತುಂ ಶಕ್ಯಂ ಭೂತೇನ ಕೇನಚಿತ್ ।**
**ಚತುರ್ಭಿಃ ಪಾರ್ಶ್ವವಿಸ್ತಾರೈಃ ಶಿಲಾಭಿರಭಿಸಂವೃತೈಃ ।**
**ನಗಸ್ಯ ಯಸ್ಯ ರಾಜೇಂದ್ರ ವಿಸ್ತಾರೈ ಶತಯೋಜನೈಃ ॥ 6 ॥**

ಈ ಪರ್ವತದ ವಿಸ್ತಾರವಾದ ಪಾರ್ಶ್ವಭಾಗಗಳು ದೊಡ್ಡ ದೊಡ್ಡ ಶಿಲೆಗಳಿಂದ ಕೂಡಿರುವ ಪರ್ವತಗಳಿಂದ ಕೂಡಿದೆ.

ಈ ಶಿಲೆಗಳೆಂದರೆ ಅವಷ್ಟಂಭಗಿರಿಗಳೆಂದರ್ಥ. ನಾಲ್ಕೂ ದಿಕ್ಕಿನಲ್ಲಿಯೂ ಮಂದರ, ಮೇರುಮಂದರ, ಸುಪಾರ್ಶ್ವ, ಕುಮುದ ಎಂಬುದಾಗಿ ನಾಲ್ಕು ಗಿರಿಗಳಿಂದ ಯುಕ್ತವಾಗಿದೆ. ಇದರ ಸುತ್ತಳತೆ ಹಾಗೂ ಎತ್ತರ ಹತ್ತು ಸಾವಿರ ಯೋಜನಗಳು. ಇಲ್ಲಿ ನೂರು ಎಂದರೆ ಹತ್ತು ಸಾವಿರ ತೆಗೆದುಕೊಳ್ಳಬೇಕು. ಭುವನಕೋಶವನ್ನು ಭಾಗವತದಲ್ಲಿ ಹೇಳಿದಂತೆ ತಿಳಿಯಬೇಕು. ಬೇರೆ

ಗ್ರಂಥದಲ್ಲಿ ವ್ಯತ್ಯಾಸವಿದ್ದರೆ ಭಾಗವತಕ್ಕೆ ವಿರೋಧಬಾರದಂತೆ **ಅಳವಡಿಸಿಕೊಳ್ಳಬೇಕೆಂದು ಆಚಾರ್ಯರ ವಚನವಿದೆ.**[4]

**ಈ ಪರ್ವತಗಳ ವಿಸ್ತಾರಗಳಿವೆ.** ಇಲಾವೃತದ ದಕ್ಷಿಣಕ್ಕೆ ನಿಷಧ, ಹೇಮಕೂಟ, ಹಿಮಾಲಯಗಳಿವೆ. ಇವು ಹತ್ತು ಸಾವಿರ ಯೋಜನೆ ಎತ್ತರವಾಗಿವೆ.

**ಕೋಟಿ ಕೋಟಿ ಶತಗುಣೈಃ ಗುಣಿತಂ ಬ್ರಹ್ಮವಾದಿಭಿಃ ।**
**ರರಕ್ಷ ಪೃಥಿವೀ ಚೈವ ಭಗವಾನ್ ವಿಷ್ಣುನಾ ಸಹ ॥ 8 ॥**

ಹೀಗೆ ಸುತ್ತಲೂ ಇರುವ ಪರ್ವತಗಳು, ಇವೆ ಮೊದಲಾದವುಗಳ ವಿಸ್ತಾರ **ಕೋಟಿ ಕೋಟಿ ಮೈಲಿಗಳಾಗುತ್ತವೆ.** ಇವುಗಳನ್ನು ನಿತ್ಯವೂ ಹರಿಯನ್ನು ನೋಡಿರುವ ಜ್ಞಾನಿಗಳು ತಿಳಿಯುತ್ತಾರೆ.

ಇಂತಹ ಭೂಮಂಡಲವನ್ನು ಬ್ರಹ್ಮದೇವನು ಭಗವಂತನ ತೇಜಸ್ಸಿನಿಂದ ಉಪಬೃಂಹಿತನಾಗಿ ಪಾಲಿಸುವನು. ಇವನಿಗೆ ಮರುದ್ಗಣಗಳು, ದೇವೇಂದ್ರರು, ಏಕಾದಶರುದ್ರರು, ಅಷ್ಟವಸುಗಳು, ದ್ವಾದಶ ಆದಿತ್ಯರು, ದಶ ವಿಶ್ವೇದೇವತೆಗಳು, ವಿವಸ್ವಾನ್, ವರುಣಾದಿಗಳು ಸಹಾಯಕರಾಗಿರುತ್ತಾರೆ.

ಬ್ರಹ್ಮದೇವನಲ್ಲಿ ಯಾವ ಬ್ರಹ್ಮನೆಂಬ ವಿಷ್ಣುವಿರುವನೋ ಅವನು ಸರ್ವತ್ರ ಒಂದೇ ರೀತಿ ಸಾಮರ್ಥ್ಯೋಪೇತನಾಗಿರುವನು. ಅವನಲ್ಲಿ ಸ್ಥಾನಾದಿಗಳ ನಿಮಿತ್ತ ಶಕ್ತಿಹ್ರಾಸವಿರುವುದಿಲ್ಲ.

---

4. **ಇಂದ್ರಸ್ತು ವರ್ತುಲಾಕಾರಂ ಪಂಚಕೋಣಂ ಬೃಹಸ್ಪತಿಃ ।**
**ಪಶ್ಯಂತೋಽಪಿ ನ ಪಶ್ಯಂತಿ ಮೇರೋ ರೂಪಂ ವಿಪಶ್ಚಿತಃ ॥** *–ಬ್ರಹ್ಮಸೂ.ಭಾ.*
ಒಂಭತ್ತು ವರ್ಷಗಳು ಜಂಬೂದ್ವೀಪದಲ್ಲಿವೆ. ಒಳಗೆ ಇರುವ ಖಂಡವೇ ಇಲಾವೃತವು. ಇದರ ಮಧ್ಯಭಾಗದಲ್ಲಿಯೇ ಸುವರ್ಣಮಯ ಮೇರುವಿದೆ. ಇದು ಒಂದು ಲಕ್ಷಯೋಜನ ವಿಸ್ತಾರವಿದೆ. ಮೇಲ್ಭಾಗದಲ್ಲಿ 32 ಸಾವಿರ ಯೋಜನ ವಿಸ್ತಾರ. ಬುಡದಲ್ಲಿ ಹದಿನಾರು ಸಾವಿರ ಹೂತು ಹೋಗಿದೆ.
**ಪ್ರವಿಷ್ಟಃ ಷೋಡಶಾಧಸ್ತಾತ್ । ಮೂಲೇ ಷೋಡಶ ಸಾಹಸ್ರಃ,** ಈ ಮೇರುವಿನ ಮೇಲೆ ಬ್ರಹ್ಮಸದನವಿರುತ್ತದೆ.
**ಯಥಾ ಭಾಗವತೋಕ್ತಂ ಭೌವನಂ ಕೋಶಲಕ್ಷಣಮ್ ।**
**ತಸ್ಯಾವಿರೋಧತೋ ಯೋಜ್ಯಂ ಸರ್ವಗ್ರಂಥಾಂತರ ಸ್ಥಿತಂ ॥** *–ಭಾ.ತಾ.5/16/6*

**ಯತ್ತದ್ ವಿಷ್ಣುಮಯಂ ತೇಜಃ ಸರ್ವತ್ರ ಸಮತಾಂ ಗತಮ್ ।**

ಈ ಭಗವಂತನನ್ನು, ಸತ್ಯವ್ರತ ಪರಾಯಣರೂ, ವೇದವೇದಾಂತವೇತ್ತರಾದ ಜ್ಞಾನಿಗಳೂ ನಾನಾವಿಧ ಉಪವಾಸಾದಿ ವ್ರತಾನುಷ್ಠಾನಗಳಿಂದ ಆ ವಿಷ್ಣುವನ್ನು ಹೊಂದುವರು. ಈ ತೇಜಸ್ಸೇ ಗುಣಪೂರ್ಣವಾದ್ದರಿಂದ 'ಬ್ರಹ್ಮ' ಎಂದು ಕರೆಯಲ್ಪಡುತ್ತದೆ.

ಹೀಗೆ ಈ ಮೂರು ಲೋಕಗಳೂ ಬ್ರಹ್ಮದೇವನ ದಿನಕಲ್ಪದಲ್ಲಿ ಸುವ್ಯವಸ್ಥಿತ-ವಾಗಿ ಯೋಜಿಸಲ್ಪಡುತ್ತವೆ.

**ಅಹನಿ ಬ್ರಹ್ಮ ಚಾವ್ಯಕ್ತಂ ವ್ಯಕ್ತಂ ಪ್ರಾಣೇ ಪ್ರತಿಷ್ಠಿತಮ್ ॥ 9 ॥**

ಭಗವಂತನು ವಸ್ತುತಃ ಅವ್ಯಕ್ತ ಸ್ವಭಾವನಾಗಿರುವನು. ಆದರೂ ಮುಖ್ಯಪ್ರಾಣನಲ್ಲಿ ಸರ್ವದಾ ಅವನಲ್ಲಿದ್ದು ಪ್ರತಿಷ್ಠಿತನಾಗಿರುತ್ತಾನೆ. ಭಗವಂತನನ್ನು ಹುಡುಕಿದರೆ ಅವನು ಸಿಗಲಾರ. ಆದರೆ ವಾಯುವು ಶ್ರೀಹರಿಗೆ ಪ್ರಿಯವಾದ ಹಾಗೂ ಪ್ರಧಾನವಾದ ಅಧಿಷ್ಠಾನವಾದ್ದರಿಂದ ಅವನಲ್ಲಿ ವಿಶೇಷ ಸನ್ನಿಹಿತನಾಗಿರುತ್ತಾನೆ. ಅಂದರೆ ಅವನಲ್ಲಿ ವಿಶೇಷ ಸಾಮರ್ಥ್ಯವನ್ನು ಅಭಿವ್ಯಕ್ತಿಗೊಳಿಸುತ್ತಾನೆ. ಇದರಿಂದಾಗಿ ಬ್ರಹ್ಮದೇವನು ಸೃಷ್ಟ್ಯಾದಿ ವ್ಯಾಪಾರ ನಡೆಸುವನು.

ಹೀಗೆ ಪರಮಾತ್ಮನ ನಿಶ್ವಾಸ ರೂಪವಾಗಿ ಬಂದಿರುವ ವೇದಾದಿಗಳಲ್ಲಿ ಹೇಳಿರುವಂತೆ ವರ್ಣಾಶ್ರಮಗಳಿಗೆ ಹೇಳಿದಂತೆ ಮಾಡಿ ಅವರವರ ನಿತ್ಯಕರ್ಮದಲ್ಲಿ ಅಭಿರುಚಿವುಳ್ಳವರಾದರೆ ಸಿದ್ಧಿಯಾಗುತ್ತದೆ.

ಸ್ವವಿಹಿತ ಕರ್ಮವಾಗಿದ್ದು ಭಗವಂತನಲ್ಲಿ ಭಕ್ತಿಯಿಂದ ಕರ್ಮ ಮಾಡಬೇಕು. ಫಲವನ್ನು ಅವನಿಗೆ ಬಿಡಬೇಕು. ಇದನ್ನೆ ಛಲವಲ್ಲದ ಧರ್ಮವೆನಿಸುತ್ತದೆ.

ವೇದಪಾರಂಗತ ಋಷಿಗಳು ಅವರವರ ಯೋಗ್ಯಕರ್ಮ ಮಾಡುವುದು ಲೋಕಕ್ಕೆ ಹಿತವೆಂದು ತಿಳಿಸಿರುವರು.

**ಯದೇಕಂ ಬ್ರಹ್ಮಣಃ ಪಾದಂ ದಿಷ್ಟತ್ವಂ ಗಮಿತಂ ಪದಮ್ ॥ 10 ॥**

ಲೋಕದಲ್ಲಿ ಯಾವುದೇ ಫಲ ಬರಲು ಯಾವುದನ್ನು ಅದೃಷ್ಟ, ಪುಣ್ಯ ವಿಶೇಷ, ದಿಷ್ಟಯೆಂದು ಹೇಳುವರೊ ಅದು ಭಗವಂತನ ಪಾದವೆ ಸರಿ.[5] ಅಂದರೆ

---

5. ಉತ್ತಮಾನಾಂ ಹಿ ಪಾದೇನ ಸರ್ವಂ ರೂಪಂ ಹಿ ಕಥ್ಯತೇ ।
ವಿಷ್ಣೋಃ ಪದಮಿತಿ ಹ್ಯಸ್ಮಾತ್ ಪ್ರಥಿತಿಃ ವೈದಿಕೀ ಸ್ಮೃತಾ ॥ – *ಛಾಂ.ಉ.*

ಅವನ ಸ್ವರೂಪಭೂತ ಇಚ್ಛೆಯು. [ವಿಷ್ಣೋಃಪರಮಪದಂ ಎಂಬಲ್ಲಿ ಪದವೆಂದರೆ ಇಡೀ ಶರೀರವೆಂದು ಹೇಳಲಾಗಿದೆ].

**ಪಾದೋಽಸ್ಯ ವಿಶ್ವಾಭೂತಾನಿ** ಎಂಬಲ್ಲಿ ಸಮಸ್ತ ಪ್ರಪಂಚವೂ ಭಗವಂತನ ಒಂದು ಪಾದವಾಗಿದೆ. ಅಂದರೆ ಸಮಸ್ತ ಜಗತ್ತಿನಲ್ಲಿರುವ ಜೀವಿಗಳಿಗಿಂತಲೂ ಭಗವಂತನು ನಾಲ್ಕು ಪಟ್ಟು ಅಧಿಕವೆನಿಸಿರುವನು. ಇದೂ ಸಹ ಪಾಮರರ ಬುದ್ಧ್ಯಾರೋಹಕ್ಕಾಗಿ ಹೇಳಿರುವುದಷ್ಟೆ. ಅವನು ಅಪರಿಮಿತ ಜ್ಞಾನಾನಂದಾ-ದ್ಯೈಶ್ವರ್ಯಶಾಲಿಯು.

ಬ್ರಹ್ಮಜ್ಞಾನಿಗಳು ಇವನ ರೂಪಗಳು ಹತ್ತು, ನೂರು, ಸಾವಿರ, ಸಾವಿರ-ಲಕ್ಷ ರೂಪಗಳಿವೆ. ಹೀಗೆ ಬಹುರೂಪವುಳ್ಳವನನ್ನು ವಿಶ್ವರೂಪವೆನ್ನಬಹುದು.

ಹೀಗೆ ವಿಶ್ವರೂಪನಾದ ಬ್ರಹ್ಮನು ತನ್ನ ದೇವಿಯಿಂದ ವಿಪುಲಭೋಗಗಳನ್ನು ಸೃಷ್ಟಿಸಿ, ತನ್ನನ್ನು ಅನುಸರಿಸುವ ಕಶ್ಯಪಾದಿಗಳೊಂದಿಗೆ ಭೋಗ ಸಾಮಗ್ರಿಗಳನ್ನು ಉಪಭೋಗಿಸುತ್ತಾನೆ. ಯಾರು ಸಮಗ್ರ ವಸ್ತು ನ್ಯಾಸರೂಪವಾದ ಸನ್ಯಾಸವನ್ನು ಹೊಂದಿರುವರೋ ಹಾಗೂ ತನ್ಮೂಲಕವಾಗಿ ಮೋಕ್ಷೇಚ್ಛುಗಳಾಗಿರುವರೋ ಅವರಿಂದ ಮಾತ್ರ ಹೊಂದಲು ಯೋಗ್ಯನಾಗಿರುವನು. ಇಂತಹವರಲ್ಲಿ ಬ್ರಹ್ಮದೇವನು ಅಗ್ರಣಿಯಾಗಿರುವನು.

ಈ ಭಗವಂತನಿಂದಲೇ ಉತ್ಕೃಷ್ಟ, ಜ್ಞಾನ ಸಹಿತನಾದ್ದರಿಂದ ಸೋಮಶಬ್ದ ವಾಚ್ಯನಾದ ವಾಯುದೇವನ ಉತ್ಪತ್ತಿಯಾಯಿತು. ಊರ್ಧ್ವಲೋಕದಿಂದ ಧರೆಗೆ ಇಳಿದು ಬರುತ್ತಿದ್ದ ಜಲಧಾರೆಯಿಂದಲೇ ವಾಯುದೇವನಿಗೆ ಸಮಸ್ತ ಚರಾಚರ ಪ್ರಪಂಚಕ್ಕೆ ಅಧಿಪತಿಯನ್ನಾಗಿ ಅಭಿಷೇಕ ಮಾಡಲಾಯಿತು. ಜೀವಿಗಳು ಸರ್ವದಾ ಇರುವವು. ಆದ್ದರಿಂದ 'ಭೂತ' ಎನಿಸುತ್ತವೆ. *[ಅಸ್ತಿತ್ವಾದ್ ಭೂತನಾಮಾ ಜೀವಃ]* ಈ ಭೂತಗಳಿಗೆಲ್ಲ ನಿಯಾಮಕನೆ ಮಹಾಭೂತನು. ಭಗವಂತನ ಪಾದೋದಕವು ಭೂತೇಶನಾದ ಶಿವನ ಮೇಲೆ ಬಿದ್ದು ಅವನನ್ನು ಪವಿತ್ರೀಕರಿಸಿತು. ಶಿವನಾದರೂ ಈ ಪಾದೋದಕ ಧರಿಸಿ **ಬಾಹ್ಯತಃ ಅಶಿವನಾದರೂ ಅಂತತಃ** 'ಪರಮಶಿವ' ನೆನಿಸಿದ *[ತೀರ್ಥೇನ ಮೂರ್ಧ್ನಿ ಅಧಿಧೃತೇನ ಶಿವಃ ಶಿವೋಽಭೂತ್]*. ಪರಮಾತ್ಮನಿಂದ ಜನಿಸಿ ಛಿನ್ನ ಭಕ್ತನಾದ ಶಿವನ ಜಟಾಜೂಟದಲ್ಲಿ ಸೇರಿದ ಜಲಧಾರೆಯು ಕಲಕಲನಾದದ ಮೂಲಕ ಸಂತೋಷ ವ್ಯಕ್ತಪಡಿಸಿ 'ನದೀ' ಎನಿಸಿತು.

**ಸಾ ಬ್ರಹ್ಮಲೋಕಂ ಸಂಭಾವ್ಯ ಅಭಿಭೂಯ ಸಹಸ್ರಧಾ ।**
**ಗಾಂ ಗತಾ ಗಗನದ್ ದೇವೀ ಸಪ್ತದಾ ಪ್ರಸಸಾರ ಚ ॥ 11 ॥**

ಭಗವಂತನ ವಾಮನನು ತ್ರಿವಿಕ್ರಮನಾಗಿ ಬೆಳೆದು ಅವನ ಅಂಗುಷ್ಠದ ಉಗುರಿನ ಹೊಡೆತಕ್ಕೆ ನೂರು ಕೋಟಿ ಯೋಜನ ದಪ್ಪವಾಗಿದ್ದ ಕಟೌಹದಲ್ಲಿ ಬಿರುಕು ಕಾಣಿಸಿಕೊಂಡಿತು. ಅಲ್ಲಿಂದ ಬಾಹ್ಯೋದಕವು ಒಳಗೆ ನುಗ್ಗಿ ಬಂದಿತು. ಅದು ಸ್ವಾಭಾವಿಕವಾಗಿ ಬಿಳಿಯಾಗಿದ್ದರೂ ಭಗವಂತನ ಪಾದಗಳನ್ನು ತೊಳೆದದ್ದರಿಂದ ಕೆಂಪು ಪರಾಗದಿಂದಾಗಿ ರಕ್ತವರ್ಣದ್ದಾಗಿಯೇ ಎಂಬತಿತ್ತು. ಈ ನೀರು ಸಜ್ಜೀವರ ಒಳಗಿನ - ಹೊರಗಿನ ಪಾಪಾಪನೋದನ ಪಟುವಾಗಿದ್ದಿತು. ಸಾಕ್ಷಾತ್ತಾಗಿ 'ವಿಷ್ಣುಪದೀ' ಎಂದು ಹೆಸರನ್ನೂ ಈ ಜಲವನ್ನೇ ಶಿಂಶುಮಾರಲೋಕದಲ್ಲಿದ್ದ ಧ್ರುವರಾಜರು ನಮ್ಮ ವಂಶದಲ್ಲಿರುವ ಎಲ್ಲರಿಗೂ ಕುಲದೇವತೆಯಾದ ವಿಷ್ಣುವಿನ ಪಾದೋದಕವೆಂದು ಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸಿದರು.

ಧ್ರುವಲೋಕದೊಂದ ಸಪ್ತರ್ಷಿಲೋಕಕ್ಕೆ ಇಳಿದ ಜಲಧಾರೆಯ ಪ್ರಭಾವವನ್ನರಿತು ಗೌರವಪೂರ್ವಕ ಇಂದಿಗೂ ಧರಿಸಿರುತ್ತಾರೆ. ಸಪ್ತರ್ಷಿ ಲೋಕದಿಂದ ಸಾವಿರಾರು ಕೋಟಿ ಮಹಡಿಗಳಿಂದ ಯುಕ್ತವಾದ ಇಂದ್ರಾದಿ ದೇವತೆಗಳ ಪಟ್ಟಣಕ್ಕಿಳಿದಳು. ಅಲ್ಲಿಂದ ಚಂದ್ರ ಮಂಡಲಕ್ಕೆ ಬಿದ್ದು, ಮೇರುವಿನ ಶತಕೋಟಿಯೆಂಬ ಬ್ರಹ್ಮದೇವರ ನಿವಾಸದಲ್ಲಿ ಬಿದ್ದಿತು. ಅಲ್ಲಿ ನಾಲ್ಕು ವಿಭಾಗಗಳಾಗಿ ಒಡೆದು ಸೀತಾ, ಅಲಕನಂದ, ಚಕ್ಷು, ಭದ್ರಾ ನಾಲ್ಕು ಹೆಸರುಗಳಿಂದ ಪೂರ್ವದಿ ದಿಕ್ಕುಗಳಲ್ಲಿ ಹರಿದು ಸಪ್ತಸಾಗರಗಳನ್ನು ಸೇರುವಳು.

ಹೀಗೆ ಆಕಾಶ ಮಾರ್ಗದಿಂದ ಭೂಮಿಗೆ ಬಂದವಳೇ 'ಗಂಗೆ' *[ಗಾಂ ಭೂಮಿಂ ಗತಾ ಆಗತೇತಿ]* ಇವಳು ಏಳು *[ಜಾಹ್ನವಿ, ವೃದ್ಧಗಂಗಾ, ಕಲಿಂದೀ, ಸರಸ್ವತೀ, ಕಾವೇರೀ, ನರ್ಮದಾ, ವೇಣೀ]* ಕವಲುಗಳಾಗಿ ತನ್ನನ್ನು ವಿಭಾಗಿಸಿಕೊಂಡು ಸರ್ವತ್ರ ಪ್ರವಹಿಸತೊಡಗಿದಳು.

ರಾಜನೇ! ಈ ಗಂಗಾದೇವಿಯು ಅನೇಕಾನೇಕ ನದಿಗಳ ರೂಪದಿಂದ ತೀರ್ಥಗಳ ರೂಪದಿಂದಲೂ ಸಾವಿರಾರು ರೂಪಗಳಿಂದ ಶಾಖೆಗಳಾಗಿ

ವಿಭಾಗಿಸಿಕೊಂಡು ಅನೇಕ ರೂಪ ಹೊಂದಿ ಭೂಮಿಯನ್ನು ಪವಿತ್ರಗೊಳಿಸುವಳು.

ಇದರಿಂದಾಗಿ ಸಕಲ ಪ್ರಪಂಚವೂ ಸಕಲ ಪ್ರಾಣಿಗಳೂ ಆಹಾರ ಹೊಂದಿ ಸಕಲ ವ್ಯವಹಾರ ನಡೆಯುತ್ತದೆ.

**ತತೋ ಭೂತಾನಿ ರೋಹಂತಿ ಮಹಾಭೂತ ಫಲಾನಿ ಚ ।**
**ತತಃ ಸರ್ವೇ ಕ್ರಿಮಾರಂಭಾಃ ಪ್ರವರ್ತಂತೇ ಮನೀಷಿಣಾಮ್ ॥ 12 ॥**

ಪೃಥಿವೀ ಅಪ್ ತೇಜಸ್ಸುಗಳೆಂಬ ಮಹಾಭೂತಗಳ ಫಲವೆನಿಸಿದ ಭತ್ತ, ತೃಣಧಾನ್ಯ, ಶೂಕ ಧಾನ್ಯಾದಿಗಳು, ಅಭಿವೃದ್ಧಿ ಹೊಂದಿದವು. ಯಜ್ಞಯಾಗಾದಿಗಳು ಇದರಿಂದ ನಡೆಸುವಂತಾಯಿತು. ಭಗವಂತನ ಮುಖದಿಂದ ಅಭಿವ್ಯಕ್ತವಾದ ವೇದಗಳು ಉಪದೇಶಿಸಲ್ಪಟ್ಟಿತು. ಹೀಗೆ ನಾಲ್ಕು ಆಶ್ರಮಗಳು, ಬ್ರಹ್ಮ, ಉದ್ಗಾತಾ, ಹೋತೃ, ಅಧ್ವರ್ಯುಗಳೆಂಬ ನಾಲ್ಕು ಮಂದಿ ಯಜ್ಞಕ್ಕೆ ಅಧಿಪತಿಗಳಾದರು. ಇವರಿಗೆಲ್ಲ ಬ್ರಹ್ಮದೇವನು ಅಧಿಪತಿಯೆನಿಸಿದನು.

ಧರ್ಮವೆಂಬ ವೃಷಭಕ್ಕೆ ತಪಸ್ಸು, ಶೌಚ, ದಯಾ, ಸತ್ಯವೆಂಬ ನಾಲ್ಕು ಕಾಲುಗಳಿವೆ. ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಿಂದ ಈ ನಾಲ್ಕು ಪಾದಗಳು ಪುಷ್ಟವಾಗುತ್ತವೆ.

ಬ್ರಹ್ಮಚರ್ಯದಿಂದ ತಪಸ್ಸೆಂಬ ಪಾದವೂ ಗೃಹಸ್ಥಾಶ್ರಮ ಧರ್ಮಗಳಿಂದ ದಯೆಯೆಂಬ ಪಾದವೂ, ವಾನಪ್ರಸ್ಥದಿಂದ ಧರ್ಮದ ಮೂರನೆ ಪಾದವೂ ಬ್ರಹ್ಮಪರೋಕ್ಷ ಸಾಧನವಾದ ತುರೀಯಾಶ್ರಮದಿಂದ ನಾಲ್ಕನೇ ಪಾದವೂ ಪುಷ್ಟಿಗೊಳ್ಳುತ್ತದೆ. ಇವೆಲ್ಲ ಸ್ವರ್ಗ ಹೊಂದಲು ಹೇತುವೆನಿಸಿವೆ.

**ನ್ಯಾಯಾದ್ ಧರ್ಮೇಣ ಗುಹ್ಯೇನ ಸೋಮೋ ವರ್ಧತಿ ಮಂಡಲೇ ।**
**ಬ್ರಹ್ಮಣೋ ಬ್ರಹ್ಮಚರಣಾದ್ ವೇದಾ ವರ್ತಂತಿ ಶಾಶ್ವತಾಃ ॥ 13 ॥**

ನ್ಯಾಯವಾದ ಧರ್ಮಾಚರಣೆಯಿಂದ ಚಂದ್ರನು ತನ್ನ ಮಂಡಲದಲ್ಲಿ ಶೋಭಿಸುತ್ತಿರುತ್ತಾನೆ. ತನ್ಮೂಲಕ ಮನಸ್ಸು ಪ್ರಫುಲ್ಲವಾಗಿರುತ್ತದೆ. ವೇದಾಧ್ಯಯನಾದಿಗಳ ಮೂಲಕ ವೇದ ಪ್ರತಿಪಾದ್ಯ ಶ್ರೀಹರಿಯು ಸಂತುಷ್ಟನಾಗುತ್ತಾನೆ. ವೇದಗಳೆಲ್ಲವೂ ಶಾಶ್ವತವಾಗಿ ಶ್ರೀನಾರಾಯಣನ

ಬುದ್ಧಿಯಲ್ಲಿರುವಂತಹುವು. ಆದ್ದರಿಂದ ವೇದಗಳು ಅಪೌರುಷೆಯವೆನಸಿವೆ *[ಶಾಶ್ವತಾಹ ವಿಷ್ಣುಬದ್ಧಿ ಗಾಃ]*. ಸ್ವಾಧ್ಯಾಯದಿಂದಾಗಿ ವೇದಗಳು ಉಳಯುತ್ತವೆ. ವೇದೋಕ್ತವಾದ ಗೃಹಸ್ಥ ಧರ್ಮದಿಂದ ಯುಕ್ತರಾದವರನ್ನು ನೋಡಿ ಮೇರು ಶಿಖರದಲ್ಲಿ ಪಿತೃಗಳು ತೃಪ್ತರಾಗುವರು. ಋಷಿಗಳು ಗೃಹಸ್ಥ-ಧರ್ಮದಿಂದ ಪ್ರೀತರಾಗುವರು. ಋಷಿಗಳು ತಮ್ಮ ಗುಹ್ಯೇಂದ್ರಿಯವನ್ನು ನಿಗ್ರಹಿಸಿ ಸ್ವಸ್ತಿಕಾದಿ ಆಸನಜಯದಿಂದ ತತ್ತ್ವ ಸಾಕ್ಷಾತ್ಕಾರ ಮಾಡಿರುತ್ತಾ ಅವರು ಶಿರಸ್ಸು, ಗ್ರೀವಾ, ಕಾಯವನ್ನು ನೇರವಾಗಿಟ್ಟುಕೊಂಡು ನಾಭಿದೇಶದಲ್ಲಿ ಕೈಗಳನ್ನಿಟ್ಟು, ಸಕಲೇಂದ್ರಿಯಗಳನ್ನೂ ಹರಿಯಲ್ಲಿ ತೊಡಗಿಸಿ, ಅಪ್ರಮತ್ತರಾಗಿ ಧ್ಯಾನಿಸುವರು.

ಪಿತಾಮಹನಾದರೂ ಧ್ಯಾನೋಪಾಯದಿಂದ ಯೋಗೇಶ್ವರನಾದ ಭಗವಂತನನ್ನು ತಲೆಯಲ್ಲಿಟ್ಟು ಧ್ಯಾನ ಮಾಡುತ್ತಾ ಸೃಷ್ಟಿಯನ್ನು ಮಾಡುವ ವಿಧಾನವರಿತನು. ಹೀಗೆ ಬ್ರಹ್ಮದೇವನು ಪರಬ್ರಹ್ಮನನ್ನು ಹೊಂದುವ ಉಪಾಯದಿಂದಾಗಿ ಆಕಾಶದ ಮಧ್ಯದಲ್ಲಿ ಮತ್ತೊಬ್ಬ ಸಹಸ್ರಕಿರಣನಂತೆ ಕಂಡನು.

ಬ್ರಹ್ಮದೇವನು ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡಂತೆ ಮೂಢಾತ್ಮ ಪುರುಷರಿಂದ ಅಸಾಧ್ಯವು. ಅಧ್ಯಾತ್ಮ ನಿಷ್ಠರೂ ವೇದ ವಿದ್ವಾಂಸರೂ ಸತ್ಯವ್ರತಾಸಕ್ತರು ಮಾತ್ರ ದೇಹೇಂದ್ರಿಯಾಗಳಲ್ಲಿರುವ ಪರತತ್ತ್ವವನ್ನು ನೋಡಬಲ್ಲರು. ಇತರರಿಗೆ ಸಾಧ್ಯವಿಲ್ಲ.

ಕಣ್ಣಿನಲ್ಲಿ ಜ್ಯೋತಿಯಾಗಿರುವ, ಭಾಸ್ಕರ, ಚಂದ್ರರಲ್ಲಿರುವ, ಅಗ್ನ್ಯಾದಿಗಳಲ್ಲಿರುವ ಭಗವಂತನು ಅಧ್ಯಾತ್ಮ ವಿಷಯರತರಿಗೆ ಮಾತ್ರ ತೋರುವನು. ಸರ್ವತ್ರ ವ್ಯಾಪ್ತ ಹರಿಯನ್ನು ತಿಳಯದ ಮೂಢರು ಸರ್ವಪ್ರಾಣಿ ಹಿಂಸಾರತರಾಗಿ ಪರತತ್ತ್ವದಿಂದ ವಂಚಿತರಾಗುವರು.

**ನೇತ್ರಾಭ್ಯಾಂ ಜನಯದ್ ದೇವೋ ಋಗ್ವೇದಂ ಯಜುಷಾ ಸಹ ।**
**ಸಾಮವೇದಂ ಚ ಜಿಹ್ವಾಗ್ರಾತ್ ಅಥರ್ವಾಣಂ ಚ ಮೂರ್ಧತಃ ॥ 14 ॥**

ದೇವದೇವನು ತನ್ನ ಎರಡೂ ಕಣ್ಣುಗಳಿಂದ ಋಗ್, ಯಜುರ್ವೇದಗಳನ್ನೂ ಪ್ರಕಟಗೊಳಸಿದನು. ಸಾಮವೇದ ನಾಲಿಗೆ ತುದಿಯಿಂದಲೂ, ಲಲಾಟದಿಂದ ಅಥರ್ವಣವೇದವನ್ನೂ ಪ್ರಕಟಗೊಳಸಿದನು.

ವೇದಗಳು ಹಾಗೂ ವೇದಾಭಿಮಾನಿಗಳಾದರೂ ತಮ್ಮ ಗುರಿ ಯಾರೆಂದು ತಿಳಿದಿದ್ದರು. ಅದಕ್ಕೆಂದೆ 'ವೇದ' ಎಂದು ಹೆಸರು. ಹರಿಯ ಸ್ವರೂಪ ತಿಳಿದವರು ಎಂದೇ ವೇದವಾಚ್ಯರು. ಈ ವೇದಾಭಿಮಾನಿಗಳು ಭಗವಂತನ ಸ್ವರೂಪವನ್ನು ಚೆನ್ನಾಗಿ ತಿಳಿಸಿಕೊಡುವರು.

ಅಥರ್ವವೇದವು ಯಜ್ಞನಾಮಕ ಹರಿಯ ಶಿರಸ್ಥಾನೀಯವು. ಋಗ್ವೇದವು ಕುತ್ತಿಗೆ ಭುಜಗಳ ಮಧ್ಯಭಾಗವು. ಸಾಮವೇದವು ಯಜ್ಞಪುರುಷನ ಹೃದಯ ಹಾಗೂ ಪಾರ್ಶ್ವಗಳು, ಯಜುರ್ವೇದವು ನಾಭಿಯ ಕೆಳಭಾಗವು ಮುಂದಿನ ಭಾಗಗಳೆಲ್ಲವೂ ಅಭಿವ್ಯಕ್ತವಾಗುತ್ತವೆ. ವಸ್ತುತಃ ಕಾಲು, ಕೈ, ಶಿರಸ್ಸು, ಇವೆಲ್ಲ ಹರಿಯ ಸ್ವರೂಪಕ್ಕಿಂತ ಬೇರೆಯಾಗಿಲ್ಲ.

ಹೀಗೆ ವೇದದಿಂದಲೇ ತಿಳಿಯಬಹುದಾದ ಯಜ್ಞನಾಮಕ ಭಗವಂತನು, ಯಾವ ಪ್ರಾಣಿಗಳನ್ನೂ ಹಿಂಸಿಸದೆ ಸ್ವಹಿತ ಕರ್ಮಾನುಷ್ಠಾನ ಮಾಡುವ ಭಗವದ್ಭಕ್ತನಿಗೆ ಇಹ-ಪರಲೋಕಗಳಲ್ಲಿಯೂ ಸುಖದಾಯಕನಾಗುತ್ತಾನೆ.

ವಿಹಿತಕರ್ಮಾನುಷ್ಠಾನಗಳಿಂದ ಮನೋಯೋಗ ಲಭಿಸುತ್ತದೆ. ಯಜ್ಞ, (ಪರಮಾತ್ಮ ಪ್ರಾಪ್ತಿ ಸಾಧನಂ ಇಷ್ಟ, *(ಭಗವದ್ವಿಷಯಕ ಜ್ಞಾನ)* ಸತ್ರ = (ಸತಃ ತ್ರಂ = ತ್ರಾಣಂ) ಮೌನ = (ಭಗವಂತನನ್ನು ತಿಳಿಯುವ ಜ್ಞಾನ) ಇವೆಲ್ಲ ಬ್ರಹ್ಮಚರ್ಯೆಗಳು. ಇವು ಸನಾತನವಾಗಿವೆ. ಇದನ್ನು ತಿಳಿದವನು ಸಮಸ್ತ ಪ್ರಾಣಿ ಉತ್ಪತ್ತಿ ಕರ್ತನಾದ ಭಗವಂತನನ್ನು ತಿಳಿಯಬಲ್ಲ. ಹರಿಯನ್ನು ತಿಳಿದವನನ್ನೆ ಋಷಿಗಳು 'ಸಿದ್ಧ'ನೆಂದು 'ಜೀವನ್ಮುಕ್ತ'ನೆಂದು ಕರೆಯುವರು.

**ವೈಷ್ಣವಂ ಯಜ್ಞಮಿತ್ಯೇವಂ ಬ್ರುವತೇ ವೇದಪಾರಗಾಃ ॥ 15 ॥**

ವೇದವೇತ್ತರ ಅಭಿಪ್ರಾಯದಂತೆ ಶ್ರೀಹರಿಯಲ್ಲಿ ಮನಸ್ಸನ್ನಿಡುವುದು 'ವೈಷ್ಣವಯಜ್ಞ'ವೆನಿಸುತ್ತದೆ.

ಭಗವಂತನನ್ನು ತಿಳಿಯುವ ಮಾರ್ಗ ಹೇಗೆಂದು ಪ್ರಶ್ನಿಸಿದ ಜನಮೇಜಯನಿಗೆ ವೈಶಂಪಾಯನರು - ಭಗವಂತನನ್ನು ತಿಳಿಯಲು ಯಜ್ಞಯಾಗಾದಿ ಬಾಹ್ಯ ಕರ್ಮಗಳಿಂದ ಸಾಧ್ಯವಿಲ್ಲ. ಭಗವಂತನು ಅವೇದ್ಯನಾದರೂ ಸರ್ವಥಾ ಅವೇದ್ಯವೇನಲ್ಲ. ನಿಷ್ಕಾಮಕರ್ಮದಿಂದ ಭೇದ ದೃಷ್ಟಿಯಿಂದ, ಭಕ್ತಿಯಿಂದ, ವೈರಾಗ್ಯಗಳಿಂದಲೂ ಹರಿಯನ್ನು ನೋಡಬಹುದು *[ಭೇದದೃಷ್ಟ್ಯಾಭಿಮಾನೇನ ನಿಸ್ಸಂಗೇನಾಪಿ ಕರ್ಮಣಾ]*.

ಬ್ರಾಹ್ಮಣನಾದವನು ಅಹಂಕಾರ - ಮಮಕಾರ ರಹಿತನಾಗಿ ಬ್ರಹ್ಮನಲ್ಲಿ ಭಕ್ತಿಯುತನಾಗಿ ಪರೋಕ್ಷ ತತ್ವಜ್ಞಾನ ತಿಳಿದಿರಬೇಕು. ಇದರಿಂದ ಸಿದ್ಧಿಯನ್ನು ಹೊಂದುತ್ತಾನೆ. ಅಂತು ಫಲದಲ್ಲಿ ಆಸಕ್ತನಾಗದೆ ಬ್ರಹ್ಮನ ಪ್ರೀತಿಗಾಗಿ, ಬ್ರಹ್ಮಜ್ಞಾನ ಭಕ್ತಿ ಪುರಸ್ಸರವಾಗಿ ವೇದೋಕ್ತ ಪ್ರಕಾರದಿಂದ, ಬ್ರಾಹ್ಮಣರಿಂದ ಕೂಡಿ ಯಜ್ಞ ದಾನ, ತಪಸ್ಸು ಜಪಾದಿ ಆಚರಿಸಿದರೆ ಬ್ರಹ್ಮಪ್ರಾಪ್ತಿಯಾಗುತ್ತದೆ.

ಸದಾ ಶುಚಿಯಾಗಿ ಮನಸ್ಸಿನ ನಿಯಂತ್ರಣ ಹೊಂದಿ ಭಗವಂತನ ಪ್ರೀತಿಗಾಗಿಯೇ ಸ್ವೋಚಿತಕರ್ಮಗಳನ್ನಾಚರಿಸುತ್ತಾ, ಸರ್ವರಿಗೂ ಗುರು-ವೆನಿಸಿದ ವಾಯುದೇವನನ್ನು ಉಪಾಸನೆ ಮಾಡಬೇಕು.

ಮೋಕ್ಷ ಸಂಬಂಧಿಗಳಾದ ಶಮ, ದಮ, ಸ್ತಪಸ್, ಶೌಚಂ, ಕ್ಷಾಂತಿ, ಆರ್ಜವ ಜ್ಞಾನ ವಿಜ್ಞಾನ ಆಸ್ತಿಕ್ಯಗಳು ಬ್ರಾಹ್ಮಣನ ಧರ್ಮಗಳಾಗಿದ್ದು ಪ್ರಾತಃ ಸಾಯಂಕಾಲಗಳಲ್ಲಿ ಮಾಡುತ್ತಿರಬೇಕು. ವಿನೀತನೂ ಮನನಶೀಲನಿಗೆ ಸಿದ್ಧಿಯಾಗುತ್ತದೆ.

**ಸಂಪ್ರಪವ್ಯೇತ ಮನಸಾ ವೈಷ್ಣವಂ ಪದಮುತ್ತಮಮ್ ।**
**ಧ್ಯಾಯನ್ನೇವ ಪ್ರಸೀದೇತ ಸಮಾಹಿತಮತಿಃ ದ್ವಿಜಃ ॥ 17 ॥**

ಬ್ರಾಹ್ಮಣನು ಏಕಾಗ್ರಚಿತ್ತನಾಗಿ ವೈಷ್ಣವ ಸ್ವರೂಪವನ್ನು ಮನಸ್ಸಿನಲ್ಲಿ ಚಿಂತಿಸುತ್ತಲೇ ಭಗವಂತನ ಸ್ವರೂಪವನ್ನು ಹೊಂದಬೇಕು. ಹೀಗೆ ಹರಿಧ್ಯಾನ ಪರನಾಗಿಯೇ ಪ್ರಸನ್ನತೆ ಪಡೆದಿರಬೇಕು.

ಕಾಮಾದಿವಿಕಾರ ರಹಿತವಾದ ಮನಸ್ಸಿನಿಂದ ನಾನೇ ಯಾವುದನ್ನೂ ಸ್ವತಂತ್ರವಾಗಿ ಮಾಡುತ್ತಿಲ್ಲ ಎಂಬ ನಿರ್ಮಮತೆಯಿಂದ, ಸ್ವರೂಪಭೂತ ಆನಂದಾಭಿ ವ್ಯಕ್ತಿಯೆಂಬ ಮೋಕ್ಷದ ಸ್ವರೂಪ ತಿಳಿದು ಹರಿಯನ್ನು ಉಪಾಸಿಸಿದಾಗ ಈ ಸತ್ಯಭೂತ ಬಂಧನದಿಂದ ಮುಕ್ತನಾಗಿ ಪರಬ್ರಹ್ಮನನ್ನು ಹೊಂದುವನು.

ಆ ಭಗವಂತನನ್ನೆ ಅಧಿಕವಾಗಿ ಅಭೀಷ್ಟ ಧಾತೃವಾದ್ದರಿಂದ, ಚತುರ್ವಿಧ ನಾಶರಹಿತನಾದ್ದರಿಂದಲೂ ಅಕ್ಷರ ಶಬ್ದವಾಚ್ಯನಾಗಿರುವನು. ಅವನನ್ನೆ ಸನಾತನನಾಗಿರುವನು. *ನಾದೇನ ಸಹವರ್ತತ* ಎಂಬಂತೆ ವಿಧಿ ನಿಷೇಧ ರೂಪ ವೇದವೆಂಬ ಶಬ್ದದಿಂದ ಪ್ರತಿಪಾದ್ಯನು. ಈ ತತ್ವವನ್ನೇ ನಿಷ್ಕಾಮ-

ಕರ್ಮಯೋಗ, ಜ್ಞಾನಯೋಗಗಳಿಂದ ಸಾಕ್ಷಾತ್ಕಾರ ಮಾಡಿಕೊಳ್ಳಬಹುದೆಂದು ಶಾಸ್ತ್ರಗಳು ತಿಳಿಸಿವೆ.

**ಬ್ರಾಹ್ಮಣಾನಾಂ ವಿನೀತಾನಾಂ ವೈಷ್ಣವೇ ಪದಸಂಚಯೇ ।**
**ಸರ್ವದ್ರವ್ಯಾತಿರಿಕ್ತಾನಾನಾಂ ಕಾಮಯೋಗ ವಿಗರ್ಹಿಣಾಮ್ ॥ 18 ॥**

ಬ್ರಹ್ಮಜ್ಞರೂ, ವಿನೀತರೂ, ಸರ್ವಸ್ವತ್ಯಾಗ ಮಾಡಿದವರೂ ಕಾಮಕರ್ಮ-ನಿಂದಕರೂ ಆದ ಭಗವದ್ಭಕ್ತರಿಗೆ ಮಾತ್ರ ವಿಷ್ಣು ಸಂಬಂಧಿಯಾದ ಸ್ವರೂಪ ಹೊಂದಲು ಸಾಧ್ಯವಾಗುತ್ತದೆ ಹೊರತು ಅನ್ಯರಿಗಲ್ಲ.

ಪುನರ್ಭವರಹಿತವಾದ ಲೋಕಗಳು ಯಾರು ವಿಷ್ಣು ಪ್ರೀತಿಕರಗಳಾದ ಸಕಲ ಕರ್ಮಗಳನ್ನೂ ಮಾಡುವರೋ ವಿಷ್ಣು ವಿಷಯಕ ಕರ್ಮಗಳನ್ನಾಗಿ ಅರ್ಪಿಸುವರೋ ಅವರಿಗೆ ಮಾತ್ರ ಲಭಿಸುತ್ತದೆ. ಪ್ರತಿಕರ್ಮ ಆಚರಿಸಿದರೂ ಮನಸ್ಸಿನಲ್ಲಿಯೂ ಫಲದ ಆಕಾಂಕ್ಷೆ ಹೊತ್ತಿರದ ಜ್ಞಾನಿಗೆ ಕರ್ಮಯೋಗ-ದಲ್ಲಿಯೇ ಮೋಕ್ಷವು ಲಭಿಸುತ್ತದೆ.

ಗೃಹಸ್ಥಾದಿ ಆಶ್ರಮಗಳಿಗೆ ಯೋಗ್ಯವಾದ ಯಜ್ಞಾದಿ ಕರ್ಮಗಳನ್ನು ಸ್ವರ್ಗಾದಿ ಫಲೇಚ್ಛೆಯಿಂದ ಮಾಡಿದರೆ ಮಾತ್ರ ಕಾಮ್ಯ ಕರ್ಮಗಳೆನಿಸುತ್ತವೆ. ಜ್ಞಾನಕ್ಕಾಗಿ ಮಾಡಿದರೆ ನಿಷ್ಕಾಮವೆನಿಸುತ್ತದೆ. ಅಧಿಕಾರಿಗಳು ಕರ್ಮಾಧಿಕಾರಿಗಳು ಕರ್ಮಾನಧಿಕಾರಿಗಳೆಂದು ಇಬ್ಬಗೆ ಇರುವರು. ಕರ್ಮಾಧಿಕಾರಿಗಳಾದ ಜನಕಾದಿಗಳಿಗೆ ಕರ್ಮದಿಂದಲೇ ಸಿದ್ಧಿ, ಜ್ಞಾನಾಧಿಕಾರಿಗಳಿಗೆ ಜ್ಞಾನದಿಂದಲೇ ಸಿದ್ಧಿ, ಇಬ್ಬರೂ ಜ್ಞಾನಮಾರ್ಗಿಗಳೇ ಆಗಿರುವರು.

**ಆದಾನಾದ್ ಬಧ್ಯತೇ ಜಂತುಃ ನಿರಾದಾನಾತ್ ಪ್ರಮುಚ್ಯತೇ ॥ 19 ॥**

ವಿಷ್ಣು ಪ್ರೀತಿ ಉದ್ದೇಶದಿಂದ ಕರ್ಮ ಮಾಡದ ಹೊರತು ಈ ಜನರು ಕರ್ಮಬದ್ಧರೇ ಆಗುತ್ತಾರೆ. ಇದೊಂದು ಅವೈಷ್ಣವ ಕರ್ಮವೆನಿಸಿ ಬಂಧಕ-ವಾಗುತ್ತದೆ *[ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ].*

ನಿಷ್ಕಾಮ ಕರ್ಮಗಳೂ ಸಹ ಹಿಂದಿನ ಪುಣ್ಯದಿಂದಾಗಿ ಪ್ರಾಪ್ತವಾಗುತ್ತವೆ. ಯಾರು ಜ್ಞಾನ ಕರ್ಮೇಂದ್ರಿಯಗಳನ್ನೂ ಸಂಯಮನ ಮಾಡಿದರೂ ಇಂದ್ರಿಯಾರ್ಥಗಳನ್ನು ಮನಸ್ಸಿನಿಂದ ಧ್ಯಾನಿಸುತ್ತಿರುವನೋ ಅವನು

ಡಾಂಭಿಕನೆನಿಸಿ ಪುನಃ ಭೂಮಿಗೆ ಬರುವನು. ಜ್ಞಾನಯೋಗಿಯು ಪುನಃ ಈ ಸಂಸಾರಕ್ಕೆ ಬರಲಾರನು.

*ವೈಶಂಪಾಯನ ಉವಾಚ –*

**ತತೋऽನ್ಯಾಂ ಧಾರಣಾಂ ಗತ್ವಾ ಮನಸಾ ಸ ಪಿತಾಮಹಃ ।**
**ಬ್ರಹ್ಮಕರ್ಮ ಸಮಾರಂಭಂ ನಿರ್ಯುಕ್ತೇನಾಂತರಾತ್ಮನಾ ॥ 20 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! ಭಗವಂತನಲ್ಲಿ ಮನೋಯೋಗಯುಕ್ತನಾದ ಪಿತಾಮಹನು ಮನಸ್ಸಿನಲ್ಲಿ ಧಾರಣೆ ಮಾಡಿ ಮನಃ ಸಂಕಲ್ಪದ ಮೂಲಕವಾಗಿ ಪ್ರಜೆಗಳನ್ನು ಸೃಷ್ಟಿಸಲು ತೊಡಗಿದರು.

**ಚಕ್ಷುಷೋ ರೂಪಸಂಪನ್ನಾ ಹ್ಯಪ್ಸರಾಃ ಸೃಜತೇ ಪ್ರಭುಃ ॥ 21 ॥**

ಬ್ರಹ್ಮದೇವನು ತನ್ನ ಕಣ್ಣುಗಳಿಂದ ರೂಪಸಿಯರಾದ ಅಪ್ಸರಾಸ್ತ್ರೀಯರನ್ನು ಸೃಷ್ಟಿಸಿದನು. ಮೂಗಿನ ತುದಿಯಿಂದ ಸುಗಂಧವನ್ನು ಹೊರಸೂಸುವ ಗಂಧರ್ವ[6]ರನ್ನು ಸೃಷ್ಟಿಸಿದನು *[ಗಂಧಂ ಅರ್ವಂತಿ]*. ಈ ಗಂಧರ್ವರು ನೂರು ಮಂದಿ ಇರುವರು. ಇವರು 27ನೇ ಕಕ್ಷ್ಯೆಯಲ್ಲಿರುವರು. ಅಪ್ಸರೆಯರು ನೂರು ಮಂದಿ ಇರುವರು. ಇವರು ಊರ್ವಶಿ, ಪೂರ್ವಚಿತ್ತಿ, ಸಹಜನ್ಯಾ, ಮೇನಕಾ, ವಿಶ್ವಾಚೀ, ಘೃತಾಚೀ ಈ ಆರು ಅಪ್ಸರೆಯರು 19ನೇ ಕಕ್ಷೆಯಲ್ಲಿರುವರು. ತುಂಬುರು ಮೊದಲಾದ ಆರು ಮಂದಿಗಳಿರುವರು. ನೂರಾರು ಸಾವಿರಾರು ಗಂಧರ್ವರನ್ನು ಬ್ರಹ್ಮದೇವರು ಸೃಷ್ಟಿಸಿದ್ದಾರೆ. ಇವರೆಲ್ಲರೂ ನೃತ್ಯ-ವಾದ್ಯಗಳಲ್ಲಿಯೂ ಸಾಮಗಾನದಲ್ಲಿಯೂ ಯುದ್ಧರತರಾಗಿರುವರು. 'ಅಪ್' ಎಂದರೆ ರೂಪಸೌಂದರ್ಯವನ್ನು ಸರ ಹೊಂದಿದವರು ಎಂದು ಅಪ್ಸರೆಯರಿಗೆ ಹೆಸರು. ಕೆಲವರು ಸಮುದ್ರ ಮಥನ ಕಾಲದಲ್ಲಿ ಹುಟ್ಟಿ ಬಂದವರು [ಅಪ್+ಸರ].

---

6. **ಗಂಧರ್ವ** : ಗಂಧರ್ವರು ಯಾವಾಗಲೂ ಯುದ್ಧರತರು, ದೇವತೆಗಳಿಗೆ ದಾಸರಂತೆ. ಇವರಿಗೆ ಜಯ ಅಶಕ್ಯವಾದಾಗ ದೇವತೆಗಳು ಯುದ್ಧಕ್ಕೆ ಹೊರಡುವರು. ಕೆಲವರು ಗಾನರತರು, ಕೆಲವರು ನರ್ತಕರು, ಕೆಲವರು ವಾದ್ಯರತರು, ಚಾರಣರೆಂದರೆ ದೇವಚಾರಕರು.

**ಗಂಧರ್ವಾಸ್ತು ಸದಾ ಯುದ್ಧರತಾಃ ದೇವಾನುಗಾಃ ಯತಃ ।**
**ಕೇಚಿದ್ ಗಾನರತಾಃ ನಿತ್ಯಂ ಗಂಧರ್ವಾಃ ನರ್ತಕಾಃ ।**
**ಪರೇ ಕೇಚಿದ್ ವಾದ್ಯರತಾಃ ಚಾರಣಾಃ ದೇವಚಾರಕಾಃ ॥** –*ಬೃ.ಭಾ.*

**ಬ್ರಹ್ಮಯೋಗೇನ ಯೋಗಜ್ಞಃ ಸ್ವಯಂಭೂರ್ಭಗವಾನ್ ಪ್ರಭುಃ ।**
**ಚಾರುನೇತ್ರಾಂ ಸುಕೇಶಾಂತಾಂ ಸುಭ್ರೂಂ ಚಾರುನಿಭಾನನಾಮ್ ॥ 22 ॥**

ನಂತರ ಯೋಗಜ್ಞನಾದವನೂ ಬ್ರಹ್ಮನಲ್ಲಿ ಮನಸ್ಸನ್ನಲ್ಲಿಟ್ಟುವನೂ ಆದ ಚತುರ್ಮುಖನು ದಿವ್ಯನೇತ್ರಳೂ, ಪರಿಶುದ್ಧಳೂ, ಬ್ರಾಹ್ಮಣರಿಂದ ಸೇವಿಸಲ್ಪಟ್ಟವ, ವೇದಾಭಿಮಾನಿಯಾದ ಲಕ್ಷ್ಮಿದೇವಿಯಂತೆ ಇರುವ ಬ್ರಾಹ್ಮೀದೇವಿಯನ್ನು ಸೃಷ್ಟಿಸಿದನು. ಮುಖದ ಕಾಂತಿ, ಕೇಶಾಂತದ ಕಾಂತಿ, ಹುಬ್ಬುಗಳು ಮನೋಹರವಾಗಿದ್ದವು. ಹಸ್ತದಲ್ಲಿ ಶತದಳ ಕಮಲವನ್ನೂ ಹಿಡಿದು ಬಂದಿದ್ದಳು.

ಗಂಧರ್ವರನ್ನು ಅಪ್ಸರಸೆಯರನ್ನೂ ಸೃಷ್ಟಿಸಿದ ಬ್ರಹ್ಮನು ಸಾಮಗಾನ ಮಾಡುವ ವಿಧಾನವನ್ನೂ ರಚಿಸಿದನು. ಬ್ರಾಹ್ಮಣರಿಗಾಗಿ ಇದನ್ನು ರಚಿಸಿದ್ದನು.

**ಗಾನಪ್ರಭಾಷಂ ಸಂಚಕ್ರೇ ಗಂಧರ್ವಾನಾಮಶೇಷತಃ ॥ 23 ॥**

ಕಾಲುಗಳಿಂದ ಸಕಲ ಸ್ಥಾವರ-ಜಂಗಮ ಪ್ರಾಣಿಗಳನ್ನು, ಮನುಷ್ಯರು, ಕಿನ್ನರ, ಯಕ್ಷ ಕಿನ್ನರರು, ಪಿಶಾಚರು, ನಾಗರು, ರಾಕ್ಷಸರು, ಗಜ, ಸಿಂಹ ವ್ಯಾಘ್ರಾದಿಗಳನ್ನು, ಸಾವಿರಾರು ರೀತಿಯಾದ ಪಶುಗಳು, ನಾನಾ ರೀತಿಯಾದ ತೃಣಗಳನ್ನು, ಚತುಷ್ಪಾದಿಗಳು, ಇವುಗಳನ್ನು ಹಿಂದಿನ ಸಂಸ್ಕಾರಕ್ಕೆ ಅನುಸಾರವಾಗಿ ಅವುಗಳನ್ನು ಸೃಷ್ಟಿಸಿದನು. ಹೀಗೆಯೇ ಕೈಯಿಂದ ತೆಗೆದುಕೊಂಡು ತಿನ್ನುವ ಪ್ರಾಣಿಗಳನ್ನು, ಕೈಯಿಂದ ತಿನ್ನಬೇಕೆಂಬ ಇಚ್ಛೆವುಂಟಾಗಲು ಮನಸ್ಸನ್ನು ಸೃಷ್ಟಿಸಿದನು.

**ಯೇ ತು ಹಸ್ತಾನ್ನಿಖಾದಂತಿ ಕರ್ಮ ಪ್ರಾಪ್ತೇನ ಹೇತುನಾ ।**
**ಹಸ್ತೇಭ್ಯಃ ಕರ್ಮ ಸಸೃಜೇ ಮಂತವ್ಯಂ ಮನಸಾ ತಥಾ ॥ 24 ॥**

ಈ ಪ್ರಾಣಿಗಳಿಗೆ ಸುಖವಾಗಬೇಕೆಂದು ಜೀವನವೆ ಮೊದಲಾದ ವಿವಿಧ ಕಾರ್ಯಗಳನ್ನು ಸೃಷ್ಟಿಸಿದನು. ವಾಯುವಿನ ಮೂಲಕ ಮಲಮೂತ್ರ ವಿಸರ್ಜನೆ ಕಾರ್ಯವನ್ನೂ ಸೃಷ್ಟಿಸಿ ಪ್ರಾಣಿಗಳಿಗೆ ಸುಖವಾಗುವಂತೆ ಮಾಡಿದನು. ಮುಂದೆ ಉಪಸ್ಥ ಇಂದ್ರಿಯ ಸೃಷ್ಟಿಸಿ ಅದರಿಂದ ಆನಂದ ಹಾಗೂ ಸಂತಾನೋತ್ಪತ್ತಿ ಕ್ರಮವನ್ನೂ ಮಾಡಿದನು.

**ಹೃದಯಾದ್ ಸೃಜದ್ ಗಾವೋ ಬಾಹುಭ್ಯಾಂ ಪಕ್ಷಿಣಸ್ತಥಾ ।**
**ಅನ್ಯಾನಿ ಚೈವ ಸತ್ವಾನಿ ತೈಸ್ತೈಃ ವೇಷೈಃ ಪೃಥಗ್ ವಿಧೈಃ ॥ 25 ॥**

ಬ್ರಹ್ಮದೇವನು ಹೃದಯದಿಂದ ಗೋವುಗಳನ್ನೂ, ಭುಜಗಳಿಂದ ಪಕ್ಷಿಗಳನ್ನೂ, ಭಿನ್ನ ಭಿನ್ನ ವೇಷಗಳಿಂದ ಭಿನ್ನಭಿನ್ನವಾದ ಜಂತುಗಳನ್ನೂ ಸೃಷ್ಟಿಸಿದನು.

ಯೋಗೇಶ್ವರನಾದ ಬ್ರಹ್ಮದೇವನು ಭಗವಂತನಲ್ಲಿ ಮನಸ್ಸನ್ನಿಟ್ಟು, ಅದರ, ಬಲದಿಂದಾಗಿ ತನ್ನ ಎರಡು ಭ್ರೂಗಳ ಮಧ್ಯ ಭಾಗದಿಂದ ತೇಜಸ್ವಿಯೂ, ದಾಂತನೂ, ಬ್ರಹ್ಮವಂಶ ಪ್ರವರ್ತಕನೂ ಆದ ಅಂಗೀರಸ ಋಷಿಯನ್ನು ಸೃಷ್ಟಿಸಿದನು.

ಭೃಗುವನ್ನು ಲಲಾಟದಿಂದ ಸೃಷ್ಟಿಸಿದನು. *[ಭಾಗವತದಲ್ಲಿ ತ್ವಗಿಂದ್ರಿಯದಿಂದ ಭೃಗುವು, ಮುಖದಿಂದ ಅಂಗೀರಸರು ಹುಟ್ಟಿಸಿದರೆಂದಿದೆ].* ಸನತ್ಕುಮಾರರ ಹಾಗೂ ನಾರದರನ್ನು ತಲೆಯಿಂದಲೂ, ಸೃಷ್ಟಿಸಿದರು. ಪ್ರಾಣದಿಂದ ವಸಿಷ್ಠರು, ಕೈಯಿಂದ ಕ್ರತು, ನಾಭಿಯಿಂದ ಪುಲಹ, ಕಿವಿಗಳಿಂದ ಪುಲಸ್ತ್ಯರು, ಕಣ್ಣುಗಳಿಂದ ಅತ್ರಿಯು, ಮನಸ್ಸಿನಿಂದ ಮರೀಚಿಯು ಹುಟ್ಟಿದರು.

**ಅಭಿಷಿಕ್ತಂ ತು ಸೋಮಂ ಚ ಯೌವರಾಜ್ಯೇ ಪಿತಾಮಹಃ ।**
**ಬ್ರಾಹ್ಮಣಾನಾಂ ಚ ರಾಜಾನಂ ಶಾಶ್ವತಂ ರಜನೀಶ್ವರಮ್ ॥ 26 ॥**

ಚಂದ್ರನನ್ನು ಸೃಷ್ಟಿಸಿ ಯುವರಾಜನನ್ನಾಗಿ ಮಾಡಿದನು. ಚಂದ್ರನು ಬ್ರಾಹ್ಮಣರಿಗೆ ಶಾಶ್ವತವಾಗಿ ರಾಜನನ್ನಾಗಿ ಮಾಡಿದನು.

ಚಂದ್ರನಾದರೂ ಆಕಾಶದಲ್ಲಿ ತೇಜೋಮಯನಾಗಿ ಬೆಳಗುತ್ತಾ ಇತರ ಗ್ರಹಗಳೊಂದಿಗೆ ಆಕಾಶದಲ್ಲಿ ಸಂಚರಿಸುತ್ತಾನೆ. ಹೀಗೆ ಬ್ರಹ್ಮದೇವನು ಮಾನಸಿಕ ಸಂಕಲ್ಪದಂತೆ ವಿವಿಧ ಪ್ರಾಣಿಗಳನ್ನೂ ಸೃಷ್ಟಿಸಿದನು. ಆ ಪ್ರಾಣಿಗಳಿಗೆ ಸ್ಥಾನಮಾನ ಕಲ್ಪಿಸಿದನು. ಅವರ ಕ್ಷೇಮಕ್ಕಾಗಿ ನೂರಾರು ಸಾವಿರಾರು ಉಪಾಯಗಳನ್ನು ಕಲ್ಪಿಸಿದನು.

ಬ್ರಹ್ಮನೇವನು ಸೃಷ್ಟಿ ಮಾಡಿದ ಯಜ್ಞಗಳು, ಯೋಗಗಳು, ಸಾಂಖ್ಯ ತತ್ವ, ವಿಜ್ಞಾನ ಸ್ವಭಾವ, ಕ್ಷೇತ್ರ ಕ್ಷೇತ್ರಜ್ಞ, ಏಕತೆ, ನಾನಾಭಿನ್ನತೆ, ಪೃಥಕ್ತ್ವ ನಿಧನ, ಕಾಲ, ಕಾಲಕ್ಷಯಾದಿಗಳೆಲ್ಲವೂ ಬ್ರಹ್ಮಮಯವೆನಿಸಿದೆ.

ಭಗವಂತನೆ ಈ ಸೃಷ್ಟ್ಯಾದಿಗಳಿಗೆ ಪ್ರಧಾನೆನಿಸಿದ್ದಾನೆ. ಇದೆಲ್ಲ ಭಗವಂತನೆ ಬ್ರಹ್ಮನಲ್ಲಿದ್ದು ಸೃಷ್ಟಿಸುವನು.

ಜನಮೇಜಯ -

**ಶ್ರುತಂ ಬ್ರಹ್ಮಯುಗಂ ಬ್ರಹ್ಮನ್ ಯುಗಾನಾಂ ಪ್ರಥಮಂ ಯುಗಮ್ ।**
**ಕ್ಷತ್ರಸ್ಯಾಪಿ ಯುಗಂ ಬ್ರಹ್ಮನ್ ಶ್ರೋತುಮಿಚ್ಛಾಮ್ಯಹಂ ಪ್ರಭೋ ॥ 27 ॥**

ಬ್ರಾಹ್ಮಣೋತ್ತಮರೇ ! ನಾನು ತಮ್ಮಿಂದ ಎಲ್ಲ ಯುಗಗಳಿಗೂ ಪ್ರಥಮಯುಗವಾದ ಬ್ರಹ್ಮಯುಗದ ಅಥವಾ ಬ್ರಾಹ್ಮಣ ಸೃಷ್ಟಿಯ ವರ್ಣನೆ ಕೇಳಿದೆನು. ಈಗ ನಾನು ಹಲವಾರು ಉಪಾಯ ತಿಳಿದ, ಅನೇಕ ಪುರುಷರಿಂದ ಹೇಳಲ್ಪಟ್ಟ, ಯಜ್ಞಗಳಿಂದ ಶೋಭಿತವಾದ ಕ್ಷತ್ರಿಯ ಯುಗದ ವರ್ಣನೆಯನ್ನು ಕೇಳಲು ಇಚ್ಛಿಸುವೆ.

**ಏತತ್ತೇ ಕಥಯಿಷ್ಯಾಮಿ ಯಜ್ಞಕರ್ಮಭಿರರ್ಚಿತಮ್ ।**
**ದಾನಧರ್ಮೈಶ್ಚ ವಿವಿಧೈಃ ಪ್ರಜಾಭಿರುಪಶೋಭಿತಮ್ ॥ 28 ॥**

ರಾಜನೇ! ನಾನು ನಿನ್ನಿಚ್ಛೆಯಂತೆ ಯಜ್ಞ ಕರ್ಮಗಳಿಂದ ಪೂಜಿತವಾದ ದಾನಧರ್ಮಗಳಿಂದ ಸನ್ಮಾನಿತವಾದ ಬಹು ಸಂಖ್ಯಾಕ ಪ್ರಜೆಗಳಿಂದ ಕ್ಷತ್ರಿಯಯುಗವನ್ನು ತಿಳಿಸುತ್ತೇನೆ.

**ತೇಽಂಗುಷ್ಠಮಾತ್ರಾ ಮುನಯ ಆದತ್ತಾಃ ಸೂರ್ಯ ರಶ್ಮಿಭಿಃ ।**

ರಾಜನೇ! ಅಂಗುಷ್ಠ ಮಾತ್ರದಷ್ಟು ಯಾವ ಋಷಿಗಳಿರುವರೋ ಮೋಕ್ಷ ಪ್ರಾಪ್ತಿಯ ವಿಧಿಯಿಂದಲೂ ನಿರ್ವಿಘ್ನವಾದ ಕರ್ಮಗಳ ಪ್ರಭಾವದಿಂದಲೂ, ಸೂರ್ಯನ ಕಿರಣಗಳಿಂದಲೂ ಯಾರೂ ಗ್ರಹಿಸಲ್ಪಟ್ಟಿರುವರೋ, ಯಾರೂ ಸೂರ್ಯಮಂಡಲವನ್ನು ಭೇದಿಸಿಕೊಂಡು ಬ್ರಹ್ಮಲೋಕಕ್ಕೆ ಹೋಗುವರೋ, ಶಮದಮಾದಿಗಳಿಂದ ನಿವೃತ್ತಿಧರ್ಮವನ್ನು ಭಗವಂತನ ಪ್ರೀತಿಗಾಗಿ ಆಚರಿಸುವರೋ ಹರಿಯ ಪ್ರೀತಿಗಾಗಿ ನಿರಂತರವೂ ವೇದೋಕ್ತ ಕರ್ಮಗಳಲ್ಲಿ ತತ್ಪರರಾಗಿ ಬ್ರಹ್ಮಚರ್ಯ ವ್ರತ ನಿಷ್ಠರಾಗಿರುವರೋ

**ಪೂರ್ಣೇ ಯುಗಸಹಸ್ರಾಂತೇ ಪ್ರಭಾವೇ ಪ್ರಲಯಂ ಗತಾಃ ।**
**ಬ್ರಾಹ್ಮಣಾಃ ವೃತ ಸಂಪನ್ನಾಃ ಜ್ಞಾನಸಿದ್ಧಾಃ ಸಮಾಹಿತಾಃ ॥ 29 ॥**
**ದಕ್ಷಃ ಪ್ರಜಾಪತಿರ್ಭೂತ್ವಾ ಸೃಜತೇ ವಿಪುಲಾಃ ಗತಾಃ ।**

ಯಾರೂ ಪೂರ್ವಕಾಲದಲ್ಲಿ ಸಹಸ್ರ ಚತುರ್ಯುಗ ಮುಗಿಯುವವರೆಗೂ ಬ್ರಹ್ಮಲೋಕದಲ್ಲಿಯೇ ಇರುವರೋ, ಅವರು ಪ್ರಲಯ ಕಾಲವಾದ ಮೇಲೆ ಮುಂದಿನ ಕಲ್ಪದಲ್ಲಿ ಸದಾಚಾರ ಸಂಪನ್ನರಾದ ಬ್ರಾಹ್ಮಣರಾಗಿ ಹುಟ್ಟುತ್ತಾರೆ. ಇವರಲ್ಲಿ ಒಬ್ಬನು ಬ್ರಹ್ಮಪುತ್ರನಾದ ದಕ್ಷ ಪ್ರಜಾಪತಿಯಾಗುತ್ತಾನೆ. ಇವನು ವಿವಿಧವಾದ ವಿಭಿನ್ನರಾದ ಪ್ರಜೆಗಳನ್ನು ಸೃಷ್ಟಿಸುತ್ತಾನೆ.

**ಅಕ್ಷರಾದ್ ಬ್ರಾಹ್ಮಣಾಃ ಸೌಮ್ಯಾಃ ಕ್ಷರಾತ್ ಕ್ಷತ್ರಿಯಬಾಂಧವಾಃ ।**
**ವೈಶ್ಯಾಃ ವಿಕಾರತಶ್ಚೈವ ಶುದ್ರಾ ಧೂಮವಿಕಾರತಃ ॥ 30 ॥**

ಬ್ರಹ್ಮದೇವನ ಶುದ್ಧ ಸಾತ್ವಿಕ ಧರ್ಮದಿಂದ ಸೌಮ್ಯಗುಣದ ಸ್ವಭಾವದ ಬ್ರಾಹ್ಮಣರೂ, ರಜೋರಾಗದಿಂದ ಕೆಂಪುಗುಣದ ರಾಜಸ ಗುಣದ ಕ್ಷತ್ರಿಯರೂ, ಹಳದಿ ಬಣ್ಣದ ರಜೋಮಯ ವಿಕಾರದಿಂದ ವೈಶ್ಯರೂ, ಧೂಮವಿಕಾರವಾದ ಕಪ್ಪುಬಣ್ಣದ ತಮೋಗುಣದಿಂದ ಶೂದ್ರರೂ ಹುಟ್ಟಿದರು.

ಹೀಗೆ ವಿಷ್ಣುವಿನ ವಿಶೇಷ ಸನ್ನಿಧಾನವುಳ್ಳ ದಕ್ಷ ಪ್ರಜಾಪತಿಯು ಬ್ರಾಹ್ಮಣರೇ ಮೊದಲಾದ ವರ್ಣಗಳನ್ನು ಸೃಷ್ಟಿಸಿದರು. ಇವರೆಲ್ಲರೂ ಮನುಷ್ಯರೇ ಆದರೂ ಧರ್ಮಗಳೆಲ್ಲ ವಿಭಿನ್ನವಾಗಿರುತ್ತವೆ. *[ಏಕಲಿಂಗಾಃ ಪೃಥಗ್ ಧರ್ಮಾಃ].*

ಇವರು ಎರಡು ಕಾಲುಗಳಿಂದ ಕೂಡಿರುವ ಮನುಷ್ಯರು ಸೃಷ್ಟಿಯಲ್ಲಿ ಅದ್ಭುತ ಪ್ರಾಣಿಗಳು. ಇಂತಹ ಸೃಷ್ಟಿಯು ಪೂರ್ಣ ಸೃಷ್ಟಿಯೆನಿಸಿತು. ಭಗವಂತನನ್ನು ತಿಳಿಯುವ ಬುದ್ಧಿಯುಳ್ಳವರಾದ್ದರಿಂದ ಪೂರ್ಣವೆನಿಸಿತು. *[ದ್ವಿಪದಾಃ ಪರಮಾದ್ಭುತಾಃ].*

ಕರ್ಮಫಲಗಳನ್ನು ಅನುಭವಿಸುವ ಸಲುವಾಗಿ ಅವರವರ ವರ್ಣಗಳಿಂದ ಸಂಪನ್ನರಾಗಿರುತ್ತಾರೆ.

ಈ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣರೇ ಮೊದಲಾದ ಮೂರು ವರ್ಣದವರಿಗೆ ಮಾತ್ರ ವೇದೋಕ್ತವಾದ ವಿಧಿಗೆ ಅನುಸಾರವಾಗಿ ಕರ್ಮಾನುಷ್ಠಾನ ಯೋಗ್ಯರಾಗಿರುತ್ತಾರೆ. ಆದ್ದರಿಂದಲೇ ವೇದಾಧ್ಯಯನದ ಅಧಿಕಾರವಿರುತ್ತದೆ.

**ತ್ರಯಾಣಾಂ ವರ್ಣಜಾತಾನಾಂ ವೇದಪ್ರೋಕ್ತಾಃ ಕ್ರಿಯಾಃ ಸ್ಮೃತಃ ॥ 31 ॥**

ಭಗವಂತನೇ ತನ್ನ ಪ್ರಜ್ಞೆ ಹಾಗೂ ತೇಜಸ್ಸಿನ ಯೋಗದಿಂದ ಸಮರ್ಥಶಾಲಿ-ಯಾದ ಪ್ರಾಚೇತಸ ದಕ್ಷನೆಂಬುವುನಲ್ಲಿದ್ದು ಪ್ರಜಾ ಸೃಷ್ಟಿ ಮಾಡುವನು.

ಭಗವಂತನೆ ಈ ಸೃಷ್ಟ್ಯಾದಿಗಳಿಗೆ ಪ್ರಧಾನೆನಿಸಿದ್ದಾನೆ. ಇದೆಲ್ಲ ಭಗವಂತನೆ ಬ್ರಹ್ಮನಲ್ಲಿದ್ದು ಸೃಷ್ಟಿಸುವನು.

ಜನಮೇಜಯ –

**ಶ್ರುತಂ ಬ್ರಹ್ಮಯುಗಂ ಬ್ರಹ್ಮನ್ ಯುಗಾನಾಂ ಪ್ರಥಮಂ ಯುಗಮ್ ।**
**ಕ್ಷತ್ರಸ್ಯಾಪಿ ಯುಗಂ ಬ್ರಹ್ಮನ್ ಶ್ರೋತುಮಿಚ್ಛಾಮ್ಯಹಂ ಪ್ರಭೋ ॥ 27 ॥**

ಬ್ರಾಹ್ಮಣೋತ್ತಮರೇ ! ನಾನು ತಮ್ಮಿಂದ ಎಲ್ಲ ಯುಗಗಳಿಗೂ ಪ್ರಥಮಯುಗವಾದ ಬ್ರಹ್ಮಯುಗದ ಅಥವಾ ಬ್ರಾಹ್ಮಣ ಸೃಷ್ಟಿಯ ವರ್ಣನೆ ಕೇಳಿದೆನು. ಈಗ ನಾನು ಹಲವಾರು ಉಪಾಯ ತಿಳಿದ, ಅನೇಕ ಪುರುಷರಿಂದ ಹೇಳಲ್ಪಟ್ಟ, ಯಜ್ಞಗಳಿಂದ ಶೋಭಿತವಾದ ಕ್ಷತ್ರಿಯ ಯುಗದ ವರ್ಣನೆಯನ್ನು ಕೇಳಲು ಇಚ್ಛಿಸುವೆ.

**ಏತತ್ತೇ ಕಥಯಿಷ್ಯಾಮಿ ಯಜ್ಞಕರ್ಮಭಿರರ್ಚಿತಮ್ ।**
**ದಾನಧರ್ಮೈಶ್ಚ ವಿವಿಧೈಃ ಪ್ರಜಾಭಿರುಪಶೋಭಿತಮ್ ॥ 28 ॥**

ರಾಜನೇ! ನಾನು ನಿನ್ನಿಚ್ಛೆಯಂತೆ ಯಜ್ಞ ಕರ್ಮಗಳಿಂದ ಪೂಜಿತವಾದ ದಾನಧರ್ಮಗಳಿಂದ ಸನ್ಮಾನಿತವಾದ ಬಹು ಸಂಖ್ಯಾಕ ಪ್ರಜೆಗಳಿಂದ ಕ್ಷತ್ರಿಯಯುಗವನ್ನು ತಿಳಿಸುತ್ತೇನೆ.

**ತೇऽಂಗುಷ್ಠಮಾತ್ರಾ ಮುನಯ ಆದತ್ತಾಃ ಸೂರ್ಯ ರಶ್ಮಿಭಿಃ ।**

ರಾಜನೇ! ಅಂಗುಷ್ಠ ಮಾತ್ರದಷ್ಟು ಯಾವ ಋಷಿಗಳಿರುವರೋ ಮೋಕ್ಷ ಪ್ರಾಪ್ತಿಯ ವಿಧಿಯಿಂದಲೂ ನಿರ್ವಿಘ್ನವಾದ ಕರ್ಮಗಳ ಪ್ರಭಾವದಿಂದಲೂ, ಸೂರ್ಯನ ಕಿರಣಗಳಿಂದಲೂ ಯಾರೂ ಗ್ರಹಿಸಲ್ಪಟ್ಟಿರುವರೋ, ಯಾರೂ ಸೂರ್ಯಮಂಡಲವನ್ನು ಭೇದಿಸಿಕೊಂಡು ಬ್ರಹ್ಮಲೋಕಕ್ಕೆ ಹೋಗುವರೋ, ಶಮದಮಾದಿಗಳಿಂದ ನಿವೃತ್ತಿಧರ್ಮವನ್ನು ಭಗವಂತನ ಪ್ರೀತಿಗಾಗಿ ಆಚರಿಸುವರೋ ಹರಿಯ ಪ್ರೀತಿಗಾಗಿ ನಿರಂತರವೂ ವೇದೋಕ್ತ ಕರ್ಮಗಳಲ್ಲಿ ತತ್ಪರರಾಗಿ ಬ್ರಹ್ಮಚರ್ಯ ವ್ರತ ನಿಷ್ಠರಾಗಿರುವರೋ

**ಪೂರ್ಣೇ ಯುಗಸಹಸ್ರಾಂತೇ ಪ್ರಭಾವೇ ಪ್ರಲಯಂ ಗತಾಃ ।**
**ಬ್ರಾಹ್ಮಣಾಃ ವೃತ ಸಂಪನ್ನಾಃ ಜ್ಞಾನಸಿದ್ಧಾಃ ಸಮಾಹಿತಾಃ ॥ 29 ॥**
**ದಕ್ಷಃ ಪ್ರಜಾಪತಿರ್ಭೂತ್ವಾ ಸೃಜತೇ ವಿಪುಲಾಃ ಗತಾಃ ।**

ಯಾರೂ ಪೂರ್ವಕಾಲದಲ್ಲಿ ಸಹಸ್ರ ಚತುರ್ಯುಗ ಮುಗಿಯುವವರೆಗೂ ಬ್ರಹ್ಮಲೋಕದಲ್ಲಿಯೇ ಇರುವರೋ, ಅವರು ಪ್ರಲಯ ಕಾಲವಾದ ಮೇಲೆ ಮುಂದಿನ ಕಲ್ಪದಲ್ಲಿ ಸದಾಚಾರ ಸಂಪನ್ನರಾದ ಬ್ರಾಹ್ಮಣರಾಗಿ ಹುಟ್ಟುತ್ತಾರೆ. ಇವರಲ್ಲಿ ಒಬ್ಬನು ಬ್ರಹ್ಮಪುತ್ರನಾದ ದಕ್ಷ ಪ್ರಜಾಪತಿಯಾಗುತ್ತಾನೆ. ಇವನು ವಿವಿಧವಾದ ವಿಭಿನ್ನರಾದ ಪ್ರಜೆಗಳನ್ನು ಸೃಷ್ಟಿಸುತ್ತಾನೆ.

**ಅಕ್ಷರಾದ್ ಬ್ರಾಹ್ಮಣಾಃ ಸೌಮ್ಯಾಃ ಕ್ಷರಾತ್ ಕ್ಷತ್ರಿಯಬಾಂಧವಾಃ ।**
**ವೈಶ್ಯಾಃ ವಿಕಾರತಶ್ಚೈವ ಶುದ್ರಾ ಧೂಮವಿಕಾರತಃ ॥ 30 ॥**

ಬ್ರಹ್ಮದೇವನ ಶುದ್ಧ ಸಾತ್ವಿಕ ಧರ್ಮದಿಂದ ಸೌಮ್ಯಗುಣದ ಸ್ವಭಾವದ ಬ್ರಾಹ್ಮಣರೂ, ರಜೋರಾಗದಿಂದ ಕೆಂಪುಗುಣದ ರಾಜಸ ಗುಣದ ಕ್ಷತ್ರಿಯರೂ, ಹಳದಿ ಬಣ್ಣದ ರಜೋಮಯ ವಿಕಾರದಿಂದ ವೈಶ್ಯರೂ, ಧೂಮವಿಕಾರವಾದ ಕಪ್ಪುಬಣ್ಣದ ತಮೋಗುಣದಿಂದ ಶೂದ್ರರೂ ಹುಟ್ಟಿದರು.

ಹೀಗೆ ವಿಷ್ಣುವಿನ ವಿಶೇಷ ಸನ್ನಿಧಾನವುಳ್ಳ ದಕ್ಷ ಪ್ರಜಾಪತಿಯು ಬ್ರಾಹ್ಮಣರೇ ಮೊದಲಾದ ವರ್ಣಗಳನ್ನು ಸೃಷ್ಟಿಸಿದರು. ಇವರೆಲ್ಲರೂ ಮನುಷ್ಯರೇ ಆದರೂ ಧರ್ಮಗಳೆಲ್ಲ ವಿಭಿನ್ನವಾಗಿರುತ್ತವೆ. *[ಏಕಲಿಂಗಾಃ ಪೃಥಗ್ ಧರ್ಮಾಃ].*

ಇವರು ಎರಡು ಕಾಲುಗಳಿಂದ ಕೂಡಿರುವ ಮನುಷ್ಯರು ಸೃಷ್ಟಿಯಲ್ಲಿ ಅದ್ಭುತ ಪ್ರಾಣಿಗಳು. ಇಂತಹ ಸೃಷ್ಟಿಯು ಪೂರ್ಣ ಸೃಷ್ಟಿಯೆನಿಸಿತು. ಭಗವಂತನನ್ನು ತಿಳಿಯುವ ಬುದ್ಧಿಯುಳ್ಳವರಾದ್ದರಿಂದ ಪೂರ್ಣವೆನಿಸಿತು. *[ದ್ವಿಪದಾಃ ಪರಮಾದ್ಭುತಾಃ].*

ಕರ್ಮಫಲಗಳನ್ನು ಅನುಭವಿಸುವ ಸಲುವಾಗಿ ಅವರವರ ವರ್ಣಗಳಿಂದ ಸಂಪನ್ನರಾಗಿರುತ್ತಾರೆ.

ಈ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣರೇ ಮೊದಲಾದ ಮೂರು ವರ್ಣದವರಿಗೆ ಮಾತ್ರ ವೇದೋಕ್ತವಾದ ವಿಧಿಗೆ ಅನುಸಾರವಾಗಿ ಕರ್ಮಾನುಷ್ಠಾನ ಯೋಗ್ಯರಾಗಿರುತ್ತಾರೆ. ಆದ್ದರಿಂದಲೇ ವೇದಾಧ್ಯಯನದ ಅಧಿಕಾರವಿರುತ್ತದೆ.

**ತ್ರಯಾಣಾಂ ವರ್ಣಜಾತಾನಾಂ ವೇದಪ್ರೋಕ್ತಾಃ ಕ್ರಿಯಾಃ ಸ್ಮೃತಃ ॥ 31 ॥**

ಭಗವಂತನೇ ತನ್ನ ಪ್ರಜ್ಞೆ ಹಾಗೂ ತೇಜಸ್ಸಿನ ಯೋಗದಿಂದ ಸಮರ್ಥಶಾಲಿ-ಯಾದ ಪ್ರಾಚೇತಸ ದಕ್ಷನೆಂಬುವುನಲ್ಲಿದ್ದು ಪ್ರಜಾ ಸೃಷ್ಟಿ ಮಾಡುವನು.

**ತತೋ ನಿರ್ಮಾಣ ಸಂಭೂತಾಃ ಶೂದ್ರಾಃ ಕರ್ಮವಿವರ್ಜಿತಾಃ ॥ 32 ॥**

ತ್ರೈವರ್ಣಿಕರ ಸೇವೆಗಾಗಿ ಹಾಗೂ ಶಿಲ್ಪಾದಿ ಕರ್ಮಗಳಿಗಾಗಿಯೂ ಶೂದ್ರರನ್ನು ಸೃಷ್ಟಿಸಿದನು. ಇವರಿಗೆ ವೇದವಿದ್ಯಾಧಿಕಾರವಿರುವುದಿಲ್ಲ.

**ಯಥಾಗ್ನೌ ಧೂಮಸಂಘಾತೋ ಹ್ಯರಣ್ಯಾ ಮಥ್ಯಮಾನಯಾ ।**
**ಪ್ರಾದುರ್ಭೂತೋ ವಿಸರ್ಪನ್ ವೈ ನೋಪಯುಂಜಂತಿ ಕರ್ಮಣಿ ॥ 33 ॥**

ಅರಣಿಯಿಂದ ಜನಿಸುವ ಅಗ್ನಿಯೊಂದಿಗೇನೆ ಧೂಮ ಹುಟ್ಟಿದರೂ ಎಲ್ಲೆಡೆಯೆ ವ್ಯಾಪಿಸಿದ್ದರೂ ಕೂಡ ಬ್ರಾಹ್ಮಣರು ಯಜ್ಞಕ್ಕಾಗಿ ಅಗ್ನಿಯನ್ನು ಪಡೆಯುವನೇ ಹೊರತು ಹೊಣಿಯಿಂದ ಯಾವುದೇ ಉಪಯೋಗ ಪಡೆದುಕೊಳ್ಳುವುದಿಲ್ಲ. ಹಾಗೆಯೇ ಪೃಥಿವಿಯಲ್ಲಿ ಜನ್ಮತಾಳಿ ಸರ್ವತ್ರ ವ್ಯಾಪಿಸಿದ್ದರೂ ಅವರ ಉಪಯೋಗವನ್ನು ಪಡೆದುಕೊಳ್ಳುವುದಿಲ್ಲ.

ನಂತರ ದಕ್ಷ ಪ್ರಜಾಪತಿಗೆ ವೇದಕ್ಕೆ ಸ್ಥಾನಭೂತರಾದ, ಜ್ಞಾನಬಲಿಷ್ಠರೂ ಮಹಾತೇಜಸ್ವಿಗಳಾದ ಬ್ರಾಹ್ಮಣರು ಹುಟ್ಟಿದರು. ಅವರಿಗೆ ದಕ್ಷನು ಹೀಗೆ ಹೇಳಿದನು.

ಪುತ್ರರೇ! ನಾನು ನಿಮ್ಮ ಬಾಯಿಂದ ಈ ಪೃಥ್ವಿಯ ಅಂತವನ್ನು ಕೇಳಬಚ್ಛಿಸುವೆ. ನಾನು ಈ ಪೃಥ್ವಿಯ ಆದ್ಯಂತ ತಿಳಿದಿದ್ದೇನೆ. ನಿಮ್ಮಿಂದ ನಾನು ಪೃಥ್ವಿಯ ನಿರ್ಣಯ ಕೇಳಿ ನಿಮ್ಮಲ್ಲಿ ಜ್ಞಾನಬಲವೆಷ್ಟಿದೆ ಎಂದು ತಿಳಿದ ನಂತರವೆ ಸೃಷ್ಟಿಗೆ ಅನುಮತಿ ನೀಡುವೆನು.

**ವಿಪುಲತ್ವಾದ್ಧಿ ಕ್ಷೇತ್ರಾಣಾಂ ಮಮಾಪಿ ವಿಪುಲಾಃ ಪ್ರಜಾಃ ।**

ಏಕೆಂದರೆ ಭೂಮಿಕ್ಷೇತ್ರವು ವಿಸ್ತಾರವಾಗಿದ್ದರೆ ಮಾತ್ರ ನನ್ನ ಪ್ರಜೆಗಳೂ ಸಹ ವಿಪುಲರಾಗಿರಲು ಸಾಧ್ಯ. ಜನಮೇಜಯನೇ ತಂದೆಯ ವಚನದಂತೆ ವಿಸ್ತಾರವಾದ ಭೂಮಿಯ ಅಂತವನ್ನು ತಿಳಿಯಲೆಂದು ಹೊರಟ ದಕ್ಷಪುತ್ರನಿಗೆ ಭೂದೇವಿಯು ತನ್ನ ದರ್ಶನ ನೀಡಲಿಲ್ಲ.[7]

---

7. ಭಾಗವತದಲ್ಲಿ ಪ್ರಜಾಭಿವೃದ್ಧಿಗೆ ಪ್ರಯತ್ನ ಮಾಡುತ್ತಿದ್ದ ಹತ್ತು ಸಾವಿರ ಹರ್ಯಶ್ವರೆಂಬ ದಕ್ಷಪುತ್ರರ ಬಳಿ ನಾರದರು ಸಮೀಪಿಸಿ ಹರ್ಯಶ್ವರೇ!
ಪಾಲಕರಾದ ನೀವು ಭೂಮಿಯ ಕೊನೆಯನ್ನು ಕಾಣದೆ ಪ್ರಜೆಗಳನ್ನು ಹೇಗೆ ಸೃಷ್ಟಿಸುವಿರಿ ಎಂದರು.

**ನ ತೇಷಂ ದರ್ಶಯದ್ ದೇವೀ ಚಕ್ಷುಷಾ ರೂಪಮಾತ್ಮನಃ ।**
**ಪ್ರಜಾಪತಿಸುತಾನಾಂ ವೈ ವಿಪುಲಸಾರ ಮಿಚ್ಛತಾಮ್ ॥ 34 ॥**

ಕಲಿಯುಗ ಮುಗಿದು ಕೃತಯುಗ ಬಂದಾಗ ಭಗವಂತನಿಂದ ಪ್ರೇರಿತಳಾದ ಭೂದೇವಿಯು ಸಮಸ್ತ ಪ್ರಾಣಿಗಳಿಗೂ ಜನ್ಮದಾತೆಯಾದಳು. ಮೊಟ್ಟೆ ಇಟ್ಟು ಹೊರಬರುವ ಅಂಡಜ ಪ್ರಾಣಿಗಳೂ, ಬೆವರಿನಿಂದ ಜನಿಸುವ ಹೇನು ಮೊದಲಾದ ಪ್ರಾಣಿಗಳನ್ನೂ ಸೃಷ್ಟಿಸಿದಳು.

ಹಾಗೆಯೇ ಭೂದೇವಿಯು ಕರ್ಮಫಲವನ್ನು ಭೋಗಿಸುವ ಪ್ರಾಣಿಗಳಿಗೆ ಕೆಲವರಿಗೆ ಸೂಕ್ಷ್ಮರೂಪವನ್ನೂ, ಕೆಲವು ಲಘುರೂಪವನ್ನೂ, ಸ್ಥೂಲರೂಪಗಳನ್ನು ನೀಡಿದನು.

**ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ**

**ದಕ್ಷ ಸೃಷ್ಟಿ ಎಂಬಲ್ಲಿ**
**17, 18, 19, 20, 21ನೇ ಅಧ್ಯಾಯವು ಸಮಾಪ್ತಿ**

---

1) ವಿರಕಪುರುಷ ರಾಜ್ಯವನ್ನು, 2) ಹೊರಹೋಗಲು ದಾರಿಯಿಲ್ಲದ ಬಿಲವನ್ನು 3) ಅನೇಕ ರೂಪ ಸ್ತ್ರೀಯನ್ನೂ, 4) ಸ್ವೈರಿಣಿಯ ಗಂಡನನ್ನೂ, 5) ಎರಡೂ ಕಡೆಗೆ ಹರಿಯುವ ನದಿಯನ್ನೂ, 6) ಇಪ್ಪತ್ತೈದು ಸಂಖ್ಯೆಯ ಮನೆಯನ್ನೂ, 7) ಆಶ್ಚರ್ಯಕಥೆ ಹೇಳುವ ಹಂಸವನ್ನೂ, 8) ಕತ್ತಿಯ ಅಲಗಿನಂತೆ ಚೂಪಾದ ಸ್ವತಃ ತಿರುಗುವ ವಸ್ತುವನ್ನೂ, ತಿಳಿಯದೆ ಆತ್ಮಾನಾತ್ಮ ವಿವೇಕ ಶೂನ್ಯರಾಗಿ ತಂದೆಯ ಆದೇಶವನ್ನಾದರೂ ಹೇಗೆ ನಡೆಸುತ್ತೀರಿ ಎಂದು ಗುಹ್ಯಭಾಷೆಯಲ್ಲಿ ಹೇಳಿದರು. ಇದರರ್ಥ ಹೀಗಿದೆ.

1) ಅನಾದಿ ಲಿಂಗ ಶರೀರದಿಂದ ಕೂಡಿದ ಶರೀರನಾಶೋಪಾಯ ತಿಳಿಯದೆ ಕೇವಲ ಸೃಷ್ಟಿಯಿಂದೇನು ಲಾಭ. ಈಶ್ವರನೆಂಬ ಪ್ರಧಾನ ನಿಯಾಮಕನನ್ನು ತಿಳಿಯದೆ 2) ಯಾವ ಹರಿಯನ್ನು ತಿಳಿದವನು ಪುನಃ ತಿರುಗಿ ಬರುವುದಿಲ್ಲವೋ ಅಂತಹ ಬ್ರಹ್ಮನನ್ನೂ ತಿಳಿಯದೆ, 3) ಸ್ವೈರಿಣೀ ಸ್ತ್ರೀಯಂತೆ, ತನ್ನ ಇಚ್ಛೆಯಂತೆ ಸಂಚಾರ ಮಾಡುವ ಮನಸ್ಸನ್ನು ಹರಿಯಲ್ಲಿಡದೆ, 4) ಕೆಟ್ಟ ಸ್ತ್ರೀಯನ್ನೂ ಹೊಂದಿ ಹರಿಯ ವ್ಯಾಪಾರ ತಿಳಿಯದವನಂತೆ, 5) ಸೃಷ್ಟಿ-ಸಂಹಾರಗಳೆಂಬ ಸಂಸಾರದಲ್ಲಿ ಬಿದ್ದವನಿಗೆ ಹರಿಯ ಬಂಧಕಶಕ್ತಿ ತಿಳಿಯದು. 6) ಇಪ್ಪತ್ತೈದು ತತ್ವಗಳಿಗೆ ಆಶ್ರಯನಾದ ಪುರುಷನನ್ನು ತಿಳಿಯದೆ, 7) ಭಾರತಾದಿ ಶಾಸ್ತ್ರ ತಿಳಿಯದೆ, 8) ಕಾಲಚಕ್ರವನ್ನು ತಿಳಿಯದ ಎಂದರ್ಥ ಎಂದು ಹೇಳಿರುವರು.

# ಅಥ ದ್ವಾವಿಂಶೋಽಧ್ಯಾಯಃ

## ದಕ್ಷ ಸೃಷ್ಟಿ

**ಸಾಧ್ವಹಂ ಶ್ರೋತುಮಿಚ್ಛಾಮಿ ತ್ರೇತಾಯಾಂ ಬ್ರಾಹ್ಮಣೋತ್ತಮ ।**
**ಯದ್ ಜ್ಞಾತ್ವಾ ಸರ್ವವಿದ್ಯಾನಾಂ ಪರಂ ಪಶ್ಯೇಯಮವ್ಯಯಮ್ ॥ 1 ॥**

ಜನಮೇಜಯನು ಹೇಳುವನು – ವೈಶಂಪಾಯನರೇ! ತ್ರೇತಾಯುಗದ ಯಜ್ಞಧರ್ಮದಲ್ಲಿ ಯಾವ ತತ್ವ ಅಡಗಿದೆಯೋ ಅದನ್ನು ನನಗೆ ತಿಳಿಸಿ ಕೊಡಿ. ಇದರ ಮೂಲಕ ನಾಶರಹಿನಾದ ಪರಬ್ರಹ್ಮನ ಮಹಿಮೆಯನ್ನು ತಿಳಿಯಬಯಸುವೆ ಎಂದಾಗ,

ವೈಶಂಪಾಯನರು ಹೀಗೆಂದರು.

**ದಕ್ಷಸ್ತು ಪುನರಾಲಂಬ್ಯ ಸ್ತ್ರೀಭಾವಂ ಪುರುಷೋತ್ತಮಃ ।**
**ಯೋಗಾದ್ ಯೋಗೇಶ್ವರಾತ್ಮಾನಂ ನಿಷಣ್ಣೋ ಗಿರಿಮೂರ್ಧನಿ ॥ 2 ॥**

ಮಹಾರಾಜ ಜನಮೇಜಯನೇ! ಪುರುಷಶ್ರೇಷ್ಠನಾದ ದಕ್ಷಪ್ರಜಾಪತಿಯು ತನ್ನ ಯೋಗಶಕ್ತಿಯಿಂದಾಗಿ ಸ್ತ್ರೀರೂಪಧರಿಸಿ ಪರ್ವತ ಶಿಖರದಲ್ಲಿ ಕುಳಿತ್ತಿದ್ದನು.

ಈ ಸ್ತ್ರೀರೂಪವಾದರೂ ಅವನದೇ ಒಂದು ಸ್ವರೂಪವಾಗಿದ್ದಿತು. ಆ ಸ್ತ್ರೀ ರೂಪವಾದರೂ ಅತ್ಯಂತ ಮನೋಹರವಾಗಿದ್ದಿತು. ಸುಂದರವಾದ ಮಂಡಿ, ಮೊಣಕಾಲು ಕಟಿ ಪ್ರದೇಶ ಸ್ಥೂಲವಾಗಿದ್ದಿತು. ಅವಳ ಹುಬ್ಬುಗಳು ಸುಂದರವೂ, ಮುಖವು ಕಮಲದಂತೆ ಇದ್ದವು. ಕಡೆಗಣ್ಣು ರಕ್ತವರ್ಣವಾಗಿದ್ದು ಸಮಸ್ತ ಪ್ರಾಣಿಗಳಿಗೂ ಆಕರ್ಷಕವಾಗಿದ್ದಿತು.

**ದಕ್ಷಃ ಪುರುಷರೂಪೇಣ ಸ್ತ್ರೀರೂಪಮಪಹಾಯ ವೈ ।**
**ದರ್ಶನೇ ಸರ್ವಭೂತಾನಾಂ ಕಾಂತಃ ಕಾಂತತರೋಽಭವತ್ ॥ 3 ॥**

ನಂತರ ಸ್ತ್ರೀರೂಪ ತ್ಯಜಿಸಿ ಪುರುಷ ರೂಪದಿಂದ ನಿಂತನು. ಈಗ ದಕ್ಷನು ಸಮಸ್ತ ಪ್ರಾಣಿಗಳಿಗೂ ಕಮನೀಯನಾಗಿ ಕಂಡನು. ದಕ್ಷನು ದೇಹಾರ್ಧ ಸಂಯೋಗದಿಂದ ಕಮಲಕಾಂತಿಯ ರೂಪಸಿರಿಯ ಹೆಣ್ಣು ಮಕ್ಕಳನ್ನು ಪಡೆದನು. ನಂತರ ಸ್ತ್ರೀರೂಪ ತ್ಯಜಿಸಿ ಪುರುಷರೂಪವನ್ನೇ ಧರಿಸಿದನು. ಈ ಸ್ತ್ರೀಯರು ಅರವತ್ತು ಸಂಖ್ಯೆಯಲ್ಲಿದ್ದರು. ಆ ಕನ್ಯೆಯರನ್ನು ವೇದೋಕ್ತ ಬ್ರಾಹ್ಮ.ವಿಧಿಯಿಂದ ವಿವಾಹ ಮಾಡಿಕೊಟ್ಟನು.

**ಪ್ರದದೌ ದಶ ಧರ್ಮಾಯ ಕಾಶ್ಯಪಾಯ ತ್ರಯೋದಶ ।**
**ಸಪ್ತವಿಂಶತಿ ಸೋಮಾಯ ಪತ್ನೀಹೇತೋಃ ಸಮಾಹಿತಃ ॥ 4 ॥**

ಇವರಲ್ಲಿ ಹತ್ತು ಪುತ್ರಿಯರನ್ನೂ ಧರ್ಮನಿಗೂ, ಕಶ್ಯಪರಿಗೆ ಹದಿಮೂರು ಚಂದ್ರಮನಿಗೆ ಇಪ್ಪತ್ತೇಳು, ಅರಿಷ್ಟನೇಮಿಗೆ ನಾಲ್ಕು ಮಂದಿಯನ್ನೂ, ಬಹುಪುತ್ರನಿಗೆ ಇಬ್ಬರನ್ನು, ಕೃಶಾಶ್ವನಿಗೆ ಇಬ್ಬರು ಪುತ್ರಿಯರನ್ನೂ, ಅಂಗೀರಸನಿಗೆ ಒಬ್ಬಳನ್ನೂ ವಿವಾಹ ಮಾಡಿಕೊಟ್ಟನು.

**ದಕ್ಷೋ ದತ್ವಾಥ ತಾಃ ಕನ್ಯಾಃ ಬ್ರಹ್ಮಕ್ಷೇತ್ರಂ ಪ್ರಪದ್ಯ ಚ ।**
**ಬ್ರಹ್ಮಣಾಧ್ಯುಷಿತಂ ಪುಣ್ಯಂ ಸಮಾಹಿತ ಮನಾಃ ಮನಿಃ ॥ 5 ॥**

ಹೀಗೆ ದಕ್ಷನು ತನ್ನ ಅರವತ್ತು ಮಂದಿ ಪುತ್ರಿಯರನ್ನು ದಾನ ಮಾಡಿ ನಂತರ ಬ್ರಹ್ಮಕ್ಷೇತ್ರವೆನಿಸಿದ ಪ್ರಯಾಗಕ್ಕೆ ಹೋದನು. ಬ್ರಹ್ಮನ ವಾಸಕ್ಷೇತ್ರವಾಗಿದ್ದು ಪುಣ್ಯತೀರ್ಥಕ್ಷೇತ್ರವಾಗಿತ್ತು. ದಕ್ಷನು ಅಲ್ಲಿಗೆ ಹೋಗಿ ಮನಸ್ಸನ್ನು ಭಗವಂತನಲ್ಲಿ ಏಕಾಗ್ರಗೊಳಿಸಿ ಧ್ಯಾನ ಮಾಡಿದನು. ತಪಸ್ಸನ್ನಾಚರಿಸುತ್ತಲೇ ಜಿಂಕೆಗಳೊಡನೇ ಭೂಮಂಡಲವನ್ನೆಲ್ಲ ಸಂಚರಿಸಿದನು. ಮೃಗಗಳು ಹೇಗೆ ಹುಲ್ಲು ಹಣ್ಣು ಮೂಲಗಳಿಂದ ಜೀವಿಸುವಂತೆ ದಕ್ಷನು ಕೂಡ ತೃಣಾದಿಗಳಿಂದ ಜೀವಿಸುತ್ತಿದ್ದನು. ಇದರಿಂದಾಗಿ ದಕ್ಷನ ತಪಸ್ಸು ನಿರಂತರವಾಗಿ ವೃದ್ಧಿಸುತ್ತಲೇ ಇದ್ದಿತು. ಅವನ ತಪಸ್ಸಿನಿಂದಾಗಿ ಮೃಗಗಳು ಆನಂದ ಹೊಂದಿದ್ದವು. ಪರಸ್ಪರ ಹಿಂಸಭಾವವನ್ನು ತೊರೆದು ಇದ್ದವು.

**ಬ್ರಾಹ್ಮಣಾಃ ಸ್ತೋತ್ರ ಸಂಸಿದ್ಧಾಃ ಜನಿತ್ರೇ ಪ್ರಥಮೇ ಪದೇ ।**
**ಬ್ರಾಹ್ಮಣಾಧ್ಯುಷಿತತ್ವಾಚ್ಚ ಬ್ರಹ್ಮಕ್ಷೇತ್ರ ಮಿಹೋಚ್ಯತೇ ॥ 6 ॥**

ಬ್ರಾಹ್ಮಣರಾದರೂ ನಿರಂತರ ಪುಣ್ಯಕರ್ಮಗಳನ್ನು ಮಾಡುತ್ತಿದ್ದರು. ಅವರು ತಪಸ್ಸಿನಿಂದ ಪಾಪಗಳನ್ನು ಭಸ್ಮಗೊಳಿಸಿಕೊಂಡಿದ್ದರು. ಅವರು ದಕ್ಷನ ಅಹಿಂಸಾ ಪ್ರಧಾನವಾದ ವೈರತ್ಯಾಗರೂಪ ತಪಸ್ಸನ್ನು ನೋಡಿ ಆನಂದ ಭರಿತರಾದರು. ಹೀಗೆ ಬ್ರಾಹ್ಮಣರಿಂದ ವಾಸಿಸಲ್ಪಟ್ಟದ್ದರಿಂದ ಬ್ರಹ್ಮಕ್ಷೇತ್ರವೆನಿಸಿತು ಆ ಕ್ಷೇತ್ರ.

ಯಾವುದು ಮೊದಲು ಅವ್ಯಕ್ತವಾಗಿದ್ದಿತೋ ಅದು ತನ್ನ ಸ್ವಭಾವವನ್ನು ಅತಿಕ್ರಮಿಸಿ ನಡೆಯಲು ಸಾಧ್ಯವಾಗದೆ ವ್ಯಕ್ತವಾಗಿ ಪರಿಣಮಿಸುತ್ತದೆ. ಈ ಸಮಸ್ತ ಪ್ರಜೆಗಳೂ ವ್ಯಕ್ತ ಹಾಗೂ ಅವ್ಯಕ್ತವಾಗಿ ಪರಿಣಾಮ ಹೊಂದುತ್ತಲೇ ಇರುತ್ತದೆ.

**ಸ್ಥಾವರಾ ಜಂಗಮಾಶ್ಚೈವ ಸ್ಥೂಲ ಸೂಕ್ಷ್ಮಾಶ್ಚ ಭಾರತ ।**
**ಕಾಲಯೋಗೇನ ಯೋಗಜಾ ಭವಂತಿ ನ ಭವಂತಿ ಚ ॥ 7 ॥**

ರಾಜನೇ! ಸ್ಥಾವರ-ಜಂಗಮ, ಸೂಕ್ಷ್ಮ-ಸ್ಥೂಲ ಈ ಸಮಸ್ತ ಪ್ರಾಣಿಗಳೂ ಕಾಲನಾಮಕ ಭಗವಂತನ ಇಚ್ಛಾನುಸಾರ ಯೋಗಜ್ಞರೂ ಆಗಬಹುದು ಅಥವಾ ಆಗದೆಯೂ ಇರಬಹುದು.

ಸಕಲ ಪ್ರಜೆಗಳೂ ಕಶ್ಯಪ ಋಷಿಯ ಮೂಲಕವಾಗಿ ದಕ್ಷ ಕನ್ಯೆಯರ ಗರ್ಭದಲ್ಲಿ ಉತ್ಪನ್ನರಾದರು. ಇವರೆಲ್ಲರೂ ಕಾಲರೂಪವಾದ ಭಗವಂತನಿಂದ ಕೂಡಿ ಅಕ್ಷಯ ಸ್ವಭಾವದಿಂದ ಯುಕ್ತರಾಗಿರುತ್ತಾರೆ.

**ಆದಿತ್ಯಾ ವಸವೋ ರುದ್ರಾಃ ವಿಶ್ವೇದೇವಾಃ ಮರುದ್ಗಣಾಃ ।**
**ನಾಗಾಶ್ಚಾನೇಕ ಶಿರಸಃ ಸಾಧ್ಯಾ ವೈ ಪನ್ನಗಾಸ್ತಥಾ ॥ 8 ॥**

ಆದಿತ್ಯರು, ವಸು, ರುದ್ರರು, ದಶವಿಶ್ವೇದೇವತೆಗಳು, 49 ಮರುದ್ಗಣಗಳು, ಅನೇಕ ಹೆಡೆಯಿರುವ ನಾಗರು, ಸಾಧ್ಯರು, ಸರ್ಪಗಳು, ಗಂಧರ್ವರು, ಕಿನ್ನರರು, ಯಕ್ಷ-ಸುಪರ್ಣ- ಗರುಡರು ಹಾಗೂ ಗೋವುಗಳೊಂದಿಗೆ ಇತರ ಅಜ ಕುರಿ ಮೊದಲಾದ ಪ್ರಾಣಿಗಳು, ಮನುಷ್ಯರು, ಚರಾಚರ ಜೀವಿಗಳು, ಪರ್ವತಗಳು, ಗಜ-ಸಿಂಹ-ಹುಲಿಗಳು, ರೆಕ್ಕೆಗಳಿರುವ ಕುದುರೆಗಳು, ಖಡ್ಗಮೃಗಗಳು, ಕೊಂಬುಗಳಿರುವ ಎತ್ತು, ಜಿಂಕೆಗಳು, ಚೌದಂತ ಗಜಗಳು, ಕಾಮರೂಪಿಗಳಾದ ಪ್ರಾಣಿಗಳೆಲ್ಲವೂ ಕಶ್ಯಪರಿಂದ ದಕ್ಷ ಪುತ್ರಿಯರಲ್ಲಿ ಜನ್ಮವೆತ್ತಿದವು.

**ತೇಷಾಂ ರೂಪೈಸ್ತಥಾ ಗಾತ್ರೈಃ ತೈಃ ಶೀಲೈಃ ತೈಃ ಪರಾಕ್ರಮೈಃ ।**
**ಮುನಯಃ ಪುನರುದ್ಭೂತಾಃ ಧರ್ಮಕ್ಷೇತ್ರೇ ಸನಾತನೇ ॥ 9 ॥**

ಹಿಂದಿನ ಕಲ್ಪದಲ್ಲಿ ಋಷಿಗಳ, ಮುನಿಗಳ ರೂಪವೆತ್ತು ಜನಿಸಿದ್ದ ಅವರ ರೂಪಗಳಿಂದಲೂ ಶರೀರದಿಂದಲೂ, ಸ್ವಭಾವ-ಪರಾಕ್ರಮಗಳಿಂದಲೂ ಸಂಪನ್ನರಾಗಿದ್ದವರು. ಸನಾತನ ಭೂಮಿಯಾದ ಭಾರತ ವರ್ಷದಲ್ಲಿ ಪುನಃ ಜನ್ಮ ತಾಳಿದರು.

ಇವರೆಲ್ಲರೂ ವೇದೋಕ್ತ ಮಾರ್ಗದಲ್ಲಿ ನಡೆಯುವವರೂ, ಧರ್ಮನಿಷ್ಠರೂ ಕ್ಷೇತ್ರವೆನಿಸಿದ ಇಪ್ಪತ್ತನಾಲ್ಕು ತತ್ವಗಳ ಸಂಘಾತವೆನಿಸಿದ ಶರೀರದಲ್ಲಿರುವ ಭಗವಂತನನ್ನು ತಿಳಿದವರೂ ಆದ ಅವರೆಲ್ಲರೂ ಬ್ರಹ್ಮನ ಮಾನಸ ನಿರ್ಮಿತ ಸೃಷ್ಟಿಯಲ್ಲಿ ಬಂದರು.

**ಶಿಲೋಂಛವೃತ್ತಯಃ ಖ್ಯಾತಾಃ ಸಪತ್ನೀಕಾಃಫ ದೃಢವ್ರತಾಃ ।**
**ಸರ್ವೇ ತ್ವೇತೇ ದಿವಿಚರಾಃ ಭವಂತಿ ಚರಿತವ್ರತಾಃ ॥ 10 ॥**

ಯಾವ ಗೃಹಸ್ಥರು ತಪಸ್ಸಿನಿಂದ ಸಿದ್ಧಿಯನ್ನು ಹೊಂದಿದವರೂ, ಯಾವ ಬ್ರಹ್ಮಚಾರಿಗಳು ಗುರು ಸೇವಾತತ್ಪರರಾಗಿ ಬ್ರಹ್ಮಚರ್ಯ ಪಾಲನದ ಮೂಲಕವಾಗಿ ಸಿದ್ಧಿ ಪಡೆದಿರುವರೋ, ಯೋಗ ಮಾರ್ಗ ಹಿಡಿದು ಯೋಗಿಗಳಾಗಿದ್ದರೋ, ಯಾವ ಬ್ರಾಹ್ಮಣರು ಸತ್ಕರ್ಮಾನುಷ್ಠಾನ ಮಾಡುವುದಕ್ಕಾಗಿ ಬಹುಕ್ಲೇಶದಿಂದ ಜೀವನ ನಡೆಸಿರುವರೋ, ಯಾರು ಶಿಲವೃತ್ತಿ – ಉಂಛವೃತ್ತಿಯವನ್ನವಲಂಬಿಸಿ ಪ್ರಸಿದ್ಧರಾಗಿರುವರೋ ಯಾರೂ ಪತ್ನಿಯೊಂದಿಗೆ ಕುಟುಂಬದಲ್ಲಿ ಜೀವನ ನಡೆಸುತ್ತ ಇರುವರೋ ಇವರೆಲ್ಲರೂ ಗಗನಚಾರಿಗಳಾದ ದೇವತೆಗಳಾಗುತ್ತಾರೆ.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಕಶ್ಯಪ ಸೃಷ್ಟಿ ಎಂಬಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು ಸಮಾಪ್ತಿ

# ಅಥ ತ್ರಯೋವಿಂಶೋಽಧ್ಯಾಯಃ

## ಬ್ರಹ್ಮ ಯಜ್ಞ ವರ್ಣನಮ್

*ವೈಶಂಪಾಯನ ಉವಾಚ–*

**ಪಿತಾಮಹಂ ಪುರಸ್ಕೃತ್ಯ ಮೇರುಪೃಷ್ಠೇ ಸಮಾಹಿತಾಃ ।**
**ಜಟಾಜಿನಧರಾ ವಿಪ್ರಾಃ ತ್ಯಕ್ತಕ್ರೋಧಾಃ ಜಿತೇಂದ್ರಿಯಾಃ ॥ 1 ॥**

ವೈಶಂಪಾಯನರು ಹೇಳುವರು – ಜನಮೇಜಯನೇ! ಜಟಾಧಾರಿಗಳೂ, ಕೋಪ ತ್ಯಜಿಸಿದವರೂ, ಜಿತೇಂದ್ರಿಯರಾದ ಬ್ರಾಹ್ಮಣರು ಏಕಾಗ್ರನಾದ ಭಗವಂತನಲ್ಲಿಯೇ ನೆಟ್ಟ ಮನಸ್ಸಿನವರಾಗಿದ್ದರು. ಅವರು ಬ್ರಹ್ಮದೇವನನ್ನು ಮುಂದೆ ಮಾಡಿಕೊಂಡು ಮೇರುಪರ್ವತದ ಹಿಂದಿನ ಭಾಗಕ್ಕೆ ಹೋದರು.

**ಪರ್ವತಾಂತರ ಸಂಸಿದ್ಧೇ ಬಹುಪಾದಪ ಸಂವೃತೇ ।**
**ಧಾತುರಂಜಿತ ಶಿಲೇ ಸಮೇ ನಿಸ್ತೃಣ ಕಂಟಕೇ ॥ 2 ॥**

ಮೇರುವಿನ ಪ್ರದೇಶವಾದರೂ ಇತರ ಪರ್ವತಗಳಿಂದ ಸುತ್ತುವರೆಯಲ್ಪಟ್ಟಿತ್ತು. ಪುಷ್ಪ ಫಲಭರಿತ ಅನೇಕ ವೃಕ್ಷಗಳಿಂದ ಶೋಭಾಯಮಾನವಾಗಿದ್ದಿತು. ಪರ್ವತದಲ್ಲಿ ಗೈರಿಕಾದಿ ಅನೇಕ ಧಾತುಗಳಿಂದ ವಿಚಿತ್ರಿತವಾಗಿದ್ದಿತು.

ಹುಲ್ಲು ಮುಳ್ಳುಗಳಿಂದ ಕೂಡಿರದೆ ಸಮತಟ್ಟಿನಲ್ಲಿದ್ದಿತು. ಪರಬ್ರಹ್ಮನನ್ನು ಪ್ರತಿಪಾದಿಸುವ ತ್ರಯೀ ಎನಿಸಿದ ಮೂರು ವೇದಗಳ ಉದಾತ್ತಾನುದಾತ್ತಾದಿ ಪಂಚಸ್ವರಗಳಿಂದ ಬ್ರಾಹ್ಮಣರು ವೇದಗಳನ್ನು ಮಂತ್ರ ಜಪ ರೂಪ ಯಜ್ಞ ವಾಚರಿಸುತ್ತಿದ್ದರು. ಅವರಾದರೂ ನಿರಂತರ ವಿಷ್ಣು ವ್ರತ ಪರಾಯಣರಾಗಿದ್ದರು.

ಎಲ್ಲಾ ಬ್ರಾಹ್ಮಣರೂ ಸಹ ಅಗ್ನಿಯಲ್ಲಿ ನಿಯಾಮಕನಾಗಿರುವ ಅಂಗನೇತೃವಾದ ವಿಷ್ಣುವನ್ನೇ ಉಪಾಸಿಸುತ್ತಿದ್ದರು. ಮಂತ್ರ ಪ್ರತಿಪಾದ್ಯ ಭಗವಂತನೇ ಆಗಿದ್ದರೂ ಮಂತ್ರಗಳಲ್ಲಿ ಬರುವ ವಿಷಯಗಳಲ್ಲಿ ವಿಭೇದವಿದ್ದುದರಿಂದ ಅಗ್ನಿಯಲ್ಲಿ ಅನೇಕ ಭೇದ ಕಲ್ಪಿಸಿಕೊಂಡು ಅವರು ಅಗ್ನಿಯು ಏಕವಾಗಿದ್ದರೂ ದಕ್ಷಿಣಾಗ್ನಿ-ಗಾರ್ಹಪತ್ಯ ಆಹವನೀಯವೆಂದು ವಿಭಾಗಿಸಿ ಅಗ್ನಿ ಸ್ಥಾಪಿಸಿದರು.

**ಏಕ ಏವಃ ಮಹಾನಗ್ನಿಃ ಹವಿಷಾ ಸಂಪ್ರವರ್ತತೇ ।**
**ಸ್ವಧಾಕಾರೇಣ ಧರ್ಮಜ್ಞ ಮಂತ್ರಾಣಾಂ ಕಾರ್ಯಸಿದ್ಧಯೇ ॥ 3 ॥**

ಹೀಗೆ ಒಂದೇ ಅಗ್ನಿಯು ಮೂರು ರೂಪಗಳಲ್ಲಿ ಅಭಿವ್ಯಕ್ತವಾಯಿತು. ಹೀಗೆ. ಅವರು ಬ್ರಹ್ಮತತ್ವ ತಿಳದುಕೊಂಡರು. ಹೀಗೆ ಒಂದೇ ಮಹಾನಗ್ನಿಯು ಸ್ವಧಾಕಾರದ ಹವಿಸ್ಸಿನಿಂದ ದೊಡ್ಡದಾಗಿ ಪರಿಣಮಿಸಿತು. ಮೇರುವಿನ ಹಿಂಭಾಗಕ್ಕೆ ಸಕಲ ಪ್ರಾಣಿವರ್ಗದಿಂದಲೂ ಸೇವಿತನಾದ ಬ್ರಹ್ಮದೇವನು ಹಾಗೂ ಸ್ವಯಂ ಬ್ರಹ್ಮಜ್ಞಾನಿಯಾದ ದಕ್ಷ ಪ್ರಜಾಪತಿಯೂ ಬಂದರು. ಅವನು ಸಕಲ ಬ್ರಾಹ್ಮಣರ ಹಾಗೂ ಪ್ರಾಣಿಗಳ ಜನಕನೂ ಆಗಿರುವನು.

**ದಂಡೀ ಚಮೀ ಶರೀ ಖಡ್ಗೀ ಶೀಖೀ ಪದ್ಮನಿಭಾನನಃ ।**
**ಅಭವನ್ ನ್ಯಸ್ತ ಸಂತಾಪೋ ಜಿತಕ್ರೋಧೋ ಜಿತೇಂದ್ರಿಯಃ ॥ 4 ॥**
**ಯಜತೇ ಪುಷ್ಕರೇ ಬ್ರಹ್ಮಾ ಮೇದಯಾ ಸಹ ಸಂಗತಃ ।**
**ಇಂದ್ರ ಪ್ರೋಕ್ತಾನಿ ಸಾಮಾನಿ ಗೀಯಂತೇ ಬ್ರಹ್ಮವಾದಿಭಿಃ ॥ 5 ॥**

ಆ ದಕ್ಷನಾದರೂ ಕೈಗಳಲ್ಲಿ ದಂಡ, ಗುರಾಣಿ, ಬಾಣ, ಕತ್ತಿಯನ್ನು ಧರಿಸಿ ಶಿಖೆಯನ್ನು ಧರಿಸಿದ್ದನು. ಕಮಲದಂತಹ ಮುಖವುಳ್ಳ ದಕ್ಷನು, ಯಾವುದೇ ತಾಪತ್ರಯಕ್ಕೆ ಸಿಲುಕದೇ ಕ್ರೋಧವನ್ನು ತ್ಯಜಿಸಿ, ಶಾಂತಮನಸ್ಸಕನಾಗಿದ್ದನು.

ಅಲ್ಲೊಂದು ಪುಷ್ಕರವಿದ್ದಿತು. ಬ್ರಹ್ಮದೇವನು ತನ್ನ ಮಡದಿ ಮೇಧೆಯೊಂದಿಗೆ ಯಜ್ಞಕ್ಕೆ ಕುಳತಿದ್ದನು. ಬ್ರಹ್ಮವಾದಿಗಳಾದರೂ ಇಂದ್ರಪ್ರೋಕ್ತವಾದ ಸಮವೇದ ಮಂತ್ರಗಳನ್ನು ಗಾನ ಮಾಡಲಾರಂಭಿಸಿದರು.

ಹೋಮಕ್ಕಾಗಿ ಹವಿಷ್ಯಗಳಾದ ಘೃತ, ಕ್ಷೀರ, ಜವೆಗೋಧಿ, ಭತ್ತ ಇಡಲ್ಪಟ್ಟಿದ್ದವು. ಶಮೀಯನ್ನು ಮಥನ ಮಾಡಿ ಜನಿಸಿದ ಅಲೌಕಿಕಾಗ್ನಿಯನ್ನು ಬ್ರಹ್ಮದೇವನು ಸಿದ್ಧಗೊಳಸಿದ್ದನು.

**ನ ಹ್ಯಲ್ಪಂ ವಿಹಿತಂ ದ್ರವ್ಯಂ ಯಥಾಗ್ನಿರ್ಯಜ್ಞ ಕರ್ಮಣಿ ।**
**ಪ್ರವರ್ತಯೇದ್ ವಿಭಾಗೈರ್ವಾ ಹುತದ್ರವ್ಯಮಯಂ ಖಲಮ್ ॥ 6 ॥**

ಯಜ್ಞದಲ್ಲಿ ಅರಣಿಯನ್ನು ಮಥಿಸಿ ಜನಿಸಿದ ಅಗ್ನಿಯಲ್ಲಿ ಹೋಮದ್ರವ್ಯಗಳನ್ನು ಆಹುತಿ ರೂಪದಲ್ಲಿ ಹೋಮಿಸುವಂತೆ ಅಲ್ಪವಾದ ದ್ರವ್ಯಗಳನ್ನು ಹೋಮಿಸಲು ವಿಧಿಯಿರುವುದಿಲ್ಲ.

ಅವಧಾನ ಧರ್ಮದಿಂದ ಹವಿಸ್ಸುಗಳನ್ನು ಪ್ರತ್ಯೇಕವಾಗಿರಿಸಿ ಪ್ರತ್ಯೇಕವಾಗಿಯೆ ವಿಧ್ಯುಕ್ತ ರೀತಿಯಲ್ಲಿ ಹೋಮಿಸಬೇಕು. ಇದರಿಂದ ಮಾತ್ರ ಉತ್ತಮ ಬಲಾದಿ ಸಂಪತ್ತು ಹಾಗೂ ಉತ್ತಮ ಹರಿಪ್ರೀತಿಯೆಂಬ ಫಲವು ಪ್ರಾಪ್ತವಾಗುತ್ತದೆ. ಫಲ ಹಾಗೂ ಬಲವು ಹೋಮದ್ರವ್ಯಕ್ಕೆ ಅನುಸಾರವಾಗಿದ್ದು ಹೋಮಿಯವು ಬೃಹತ್ತಾದರೆ ಬೃಹತ್ಫಲ. ಅಲ್ಪದ್ರವ್ಯವಾದರೆ ಅಲ್ಪ ಫಲ. ಆದರೆ ಭಗವತ್ಪ್ರೀತಿಯೆಂಬ ಆತ್ಮಯಜ್ಞದಲ್ಲಿ ಮೋಕ್ಷ ರೂಪ ಫಲವೊಂದೆ ಇರುತ್ತದೆ.

ಬ್ರಹ್ಮದೇವ ನಡೆಸಿದ ಈ ಬೃಹತ್ತಾದ ಯಜ್ಞದಲ್ಲಿ ವಿಧಿವಿಧಾನ ತಿಳಿದ ಬ್ರಹ್ಮವೇತ್ತರು ವಿಧಿವಿಹಿತ ಆಹುತಿಗಳನ್ನು ಮಂತ್ರಪೂರ್ವಕವಾಗಿ ಅಗ್ನಿಗೆ ಸಮರ್ಪಿಸುತ್ತಿದ್ದರು.

**ಷಣ್ಮಾಸಾಂಶ್ಚತುರೋ ವೇದಾನ್ ಸಂಬಭಾಷೇ ಬೃಹಸ್ಪತಿಃ ।**
**ಬ್ರಹ್ಮಣೋ ವಿತತೇ ಯಜ್ಞೇ ಪರಯಾ ಬ್ರಹ್ಮಸಂಪದಾ ॥ 7 ॥**

ಬ್ರಹ್ಮದೇವನ ಈ ವಿಸ್ತಾರ ಹೋಮದಲ್ಲಿ ಬ್ರಹ್ಮಸ್ಥಾನವನ್ನಲಂಕರಿಸಿದ್ದ ಬೃಹಸ್ಪತ್ಯಚಾರ್ಯರು ಆರು ತಿಂಗಳವರೆಗೂ ಚತುರ್ವೇದ ಪಾರಾಯಣ, ಉಪನಿಷತ್ತು ಹಾಗೂ ಕರ್ಮಕಾಂಡಗಳ ಪ್ರತಿಪಾದ್ಯನಾದ ಶ್ರೀಹರಿಯ ಗುಣಗಾನ ಮಾಡುತ್ತಿದ್ದರು.

ಬ್ರಾಹ್ಮಣರ ಮಂತ್ರಘೋಷಗಳು, ವೇದಪ್ರವಚನದಿಂದಾಗಿ ಆ ಯಜ್ಞಮಂಟಪವು ಮತ್ತೊಂದು ಬ್ರಹ್ಮನ ಸಭೆಯಂತೆ ಕಾಣಿಸುತ್ತಿತ್ತು.

ಯಜ್ಞವು ಬ್ರಹ್ಮದೇವನ ಮುಖಾರವಿಂದದಿಂದ ಪ್ರಕಟವಾಗಿ ಶ್ರುತಿ ಅಪೌರುಷೇಯ ಶ್ರುತಿಗೆ ಅನುಸಾರವಾಗಿ ಬೃಹಸ್ಪತಿಯ ಪ್ರವಚನದಿಂದ ಅತ್ಯಂತವಾಗಿ ವಿಜೃಂಭಿಸುತ್ತಿತ್ತು.

ಆ ಯಜ್ಞಮಂಟಪದಲ್ಲಿ ವಿಧಿವತ್ತಾಗಿ ಸಮಿತ್ತುಗಳು, ಸೋವರಸವಿಡುವ

ಕಲಶಗಳು, ಸ್ರುಕ್-ಸ್ರುವಗಳು, ಬಾಹ್ಯ ಪ್ರಣೀತಾದಿ ಪಾತ್ರೆಗಳು, ಪೂರ್ಣ ಕುಂಭಗಳಿಂದಲೂ ಶೋಭಿಸುತ್ತಿತ್ತು.

ಯವಗಳು, ಚರುಗಳು, ತುಪ್ಪ ಹಾಗೂ ನೀರಿನ ಭಾಜನಗಳಿಂದಲೂ ಯಜ್ಞಕ್ಕಾಗಿ ಪ್ರಾಪ್ತವಾಗಿದ್ದ ಸಂಪತ್ತುಗಳು, ಹಾಲು ಹಿಂಡುವ ಹಸುಗಳು ಕರುಗಳು, ಇವುಗಳಿಂದ ಶೋಭಿಸುತ್ತಿತ್ತು.

ಯಜ್ಞೇಶ್ವರನು ವೇದಮಂತ್ರಗಳ ಧ್ವನಿಗಳಿಂದಲೂ ದಕ್ಷಿಣಾ ರೂಪವಾದ ವಯಸ್ಸಿನಿಂದಲೂ, ತಪೋರೂಪವಾದ ಜ್ಞಾನದಿಂದಲೂ ವೃದ್ಧಿ ಹೊಂದುತ್ತ ಬ್ರಹ್ಮಜ್ಞಾನಮಯನಾಗಿ ಕಾಣುತ್ತಿದ್ದ.

**ಬ್ರಹ್ಮಾ ಜುಹೋತಿ ತಾಂಸ್ತಸ್ಮಾನ್ ಮರುದ್ಭಿಃ ಸಹಿತಸ್ತದಾ ।**
**ವೇದಪ್ರೋಕ್ತೇನ ವಿಧಿನಾ ಸರ್ವಪ್ರಾಣಾಭೃತಾಂ ನೃಪ ॥ 8 ॥**

ಈ ಯಜ್ಞದಲ್ಲಿ ಬ್ರಹ್ಮದೇವನು ಮರುದ್ಗಣಗಳೊಂದಿಗೆ ಮಾನಸಿಕ ಪದಾರ್ಥಗಳಿಂದಲೂ, ತುಪ್ಪವೇ ಮೊದಲಾದ ಹವನೀಯಗಳಿಂದಲೂ ಹೋಮಿಸುತ್ತಿದ್ದನು.

ದೇವತೆಗಳೆಲ್ಲರೂ ತೇಜೋಮಯ ರೂಪವಾಗಿ ಬ್ರಹ್ಮದೇವನ ಯಜ್ಞದಲ್ಲಿ ಉಪಸ್ಥಿತರಾಗಿದ್ದರಿಂದ ಇವನ ಯಜ್ಞವು ವಿಶಿಷ್ಟವೆನಿಸಿತ್ತು? ಬ್ರಹ್ಮದೇವನು ಪೂರ್ವೋಕ್ತ ಅಗ್ನಿಯಲ್ಲಿ ಅಗ್ನಿಷ್ಟೋಮವನ್ನು ಮಾಡುತ್ತಿದ್ದನು. ಸಭಾಮಂಟಪವು ಸದಸ್ಯರಿಂದ ತುಂಬಿ ಎಲ್ಲಾ ದೇವತೆಗಳೂ ಭೂಮಂಡಲಕ್ಕೆ ಬಂದಿರುವರೋ ಎಂಬಂತ್ತಿತ್ತು.

ಈ ಯಜ್ಞಕ್ಕೆ ವೇದ ವೇದಾಂತ ಪಾರಂಗತರಾಗಿ ವಿನೀತರೂ ತಪಸ್ಸಿನಿಂದ ಕೃಶರೂ ಆದ ಬ್ರಹ್ಮವೇತ್ತ ಋಷಿಗಳು ಬಂದು ಹೋಗುತ್ತಿದ್ದರು. ಇದರಿಂದಾಗಿ ಯಜ್ಞ ಮಂಟಪವು ಸ್ವರ್ಗದಲ್ಲಿ ಪ್ರತಿಷ್ಠಿತವಾಗಿರುವುದೋ ಎಂದು ಭಾಸಮಾನವಾಗುತ್ತಿತ್ತು.

ಈ ಯಜ್ಞದಲ್ಲಿ ಋಕ್ ಯಜುರ್ ಸಾಮವೇದಗಳ ಪಾರಾಯಣ ನಡೆಯುತ್ತಿತ್ತು. ಇಲ್ಲಿ ಸಮಸ್ತ ಧರ್ಮಬಲ್ಲವನಾದ ಅಂಗಿರಸ ಋಷಿಯ ಪುತ್ರ ಬೃಹಸ್ಪತಿಯೇ ಹೋತೃವೂ, ಬ್ರಹ್ಮನೂ ಆಗಿದ್ದನೆಂದ ಮೇಲೆ ಯಜ್ಞವನ್ನು ವರ್ಣಿಸುವುದೇನು.

**ಹೋತಾಚೈವಾಭವದ್ ರಾಜನ್ ಬ್ರಹ್ಮತ್ವೇಚ ಬೃಹಸ್ಪತಿಃ ।**
**ಸರ್ವಧರ್ಮವಿದಾಂ ಶ್ರೇಷ್ಠಃ ಪುರಾಣೋ ಬ್ರಹ್ಮಸಂಭವಃ ॥ 9 ॥**

ಯಜ್ಞವು ಸಂಪನ್ನತರವಾಗಿ ನಡೆಯುತ್ತಿತ್ತು. ಯಜಮಾನನಾದ ಬ್ರಹ್ಮದೇವನು ಯಜ್ಞರೂಪಿಯೂ, ಯಜ್ಞಪತಿಯೂ, ಯಾಗ ಮಾಡುವವನೂ, ಯಜ್ಞಫಲಭೋಕ್ತೃವಾದ ಶ್ರೀಹರಿಯನ್ನು ಪೂಜಿಸಿ ತಾನು ನಡೆಸಿದ ಈ ಯಜ್ಞದಿಂದಾಗಿ ಹರಿಪ್ರೀತಿವುಂಟಾಗಿ ಮುಂದೆ ವಿಷ್ಣುಪದ ಹೊಂದಿದನು. ಈ ವಿಷ್ಣುವಿನ ಪದದಲ್ಲಿ ಆಸಕ್ತರಾದ ಋಷಿಮುನಿಗಳು ಇಂದ್ರಿಯ ಸಮೂಹದಲ್ಲಿದ್ದರೂ ಅವುಗಳಲ್ಲಿ ಆಸಕ್ತಿ ಹೊಂದಲಾರರು.

**ಯಜ್ಞಾವಸಾನೇ ಶೈಲೇಂದ್ರಂ ದ್ವಿಜೇಭ್ಯಃ ಪ್ರದದೌ ಪ್ರಭುಃ ।**
**ನ ಶೇಕುಃ ಪ್ರವಿಭಾಗಾರ್ಥಂ ಭೇತ್ತುಂ ಸರ್ವೋದ್ಯಮೈರಪಿ ॥ 10 ॥**

ಯಜ್ಞವು ಪರಿಸಮಾಪ್ತಿಯಾದ ಮೇಲೆ ಬ್ರಹ್ಮದೇವನು ಸಮಸ್ತ ಪ್ರಾಣಿಗಳಲ್ಲಿ ದಯೆಯನ್ನು ಹೊಂದಿ ಸುವರ್ಣಮಯ ಪರ್ವತವನ್ನು ಬ್ರಾಹ್ಮಣರಿಗೆ ದಾನ ನೀಡಿದನು.

ಆ ಪರ್ವತವನ್ನು ಯಥಾಯೋಗ್ಯ ವಿಭಾಗಿಸಿಕೊಳ್ಳಲು ಬಹುವಾಗಿ ಪ್ರಯತ್ನಿಸಿದರು. ಆದರೂ ಅದನ್ನು ವಿಭಾಗಿಸಲು ಅಸಮರ್ಥರಾದರು. ಅದನ್ನು ಕಿತ್ತಲು ಶಕ್ಯರಾಗದೆ ಶ್ರಮ ಹೊಂದಿ ಭೂಮಿಯಲ್ಲಿ ಕುಳಿತರು. ಅವರ ಮುಖಗಳು ಬಾಡಿದ್ದವು. ಆಗ ಸುಪಾರ್ಶ್ವನೆಂಬ ಮಧುರ ವಾಕಿನ ಪರ್ವತನು ಅವರ ಬಳಿ ಬಂದು ನಮಸ್ಕರಿಸಿ ಹೀಗೆಂದನು.

**ನ ಹಿ ಶಕ್ಯೋ ಬಲಾದ್ ಭೇತ್ತುಂ ಯುಷ್ಮಾಭಿರಸುಸಂಗಿಭಿಃ ।**
**ಅಪಿ ವರ್ಷಶತೈರ್ದಿವ್ಯೈಃ ಪರಸ್ಪರ ವಿರೋಧಿಭಿಃ ॥ 11 ॥**

ಬ್ರಾಹ್ಮಣರೇ! ನೀವೆಲ್ಲರೂ ಸ್ವಾರ್ಥಿಗಳಾಗಿದ್ದು ತಮ್ಮ ಇಂದ್ರಿಯ ಪೋಷಣೆಯಲ್ಲಿಯೇ ತೊಡಗಿದ್ದು ಪರಸ್ಪರ ವಿರೋಧಿಗಳಾಗಿರುವಿರಿ. ಹೀಗಿರುವ ನೀವು ನೂರು ದಿವ್ಯ ವರ್ಷಗಳ ಕಾಲ ಪ್ರಯತ್ನಪಟ್ಟರೂ ಈ ಪರ್ವತವನ್ನು ಭೇದಿಸಲಾರಿರಿ. ಇದನ್ನು ಭೇದಿಸಲು ನೀವೆಲ್ಲರೂ ಒಂದಾಗಿರಬೇಕು. ಏಕಾಗ್ರಚಿತ್ತರಾಗಬೇಕು. ಹೀಗೆ ಪರಸ್ಪರ ವಿರೋಧವಿಲ್ಲದೆ ಒಂದೇ ಬಾರಿಗೆ ಭೇದಿಸಿದರೆ ಮಾತ್ರ ಸುಖವಾಗಿ ಭೇದಿಸಬಹುದು. ರಾಗ-ದ್ವೇಷಗಳಿಂದ ಕೂಡಿದ ಮನಸ್ಸಿನಲ್ಲಿ ಬಲ ಸಾಮರ್ಥ್ಯವು ಹೆಚ್ಚುವುದಾದರೂ

ಭಗವನ್ನಿಷ್ಠೆ ಶೂನ್ಯವಾಗುತ್ತಿತ್ತು. ಯಾವಾಗ ಮನಸ್ಸು ರಾಗ ದ್ವೇಷಗಳಿಂದ ರಹಿತವಾಗುತ್ತದೆಯೋ ಆಗ ಬ್ರಹ್ಮತತ್ವಜ್ಞಾನದಲ್ಲಿ ಆಸಕ್ತಿ ಹೆಚ್ಚುತ್ತದೆ. ಆದ್ದರಿಂದ ಮನಸ್ಸನ್ನು ಮುಕ್ತಗೊಳಿಸಿರಿ. ನಾನೂ ನಿಮಗೆ ಸದ್ಗುರುವಿನಂತೆ ಸಹಾಯ ಮಾಡುವೆನು. ನನ್ನ ಸಹಾಯ ಹಸ್ತದ ಅವಲಂಬನೆಯಿಂದಾಗಿ ಪರ್ವತದಿಂದ ನೂರಾರು ಬಂಡೆಗಳು ಉದರುತ್ತವೆ. ಗೈರಿಕಾದಿ ಧಾತುಗಳೂ ಕೆಳಗೆ ಹರಿಯುತ್ತವೆ. ಸರ್ಪಗಳು ಉರುಳುತ್ತವೆ ಎಂದನು.

ಇವನ ಮಾತನ್ನು ಕೇಳಿ ಎಲ್ಲರೂ ಸುಮ್ಮನಾದರು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಬ್ರಹ್ಮಯಜ್ಞ ಎಂಬಲ್ಲಿ
ಇಪ್ಪತ್ತಮೂರನೆಯ ಅಧ್ಯಾಯವು ಸಮಾಪ್ತಿ

## ಅಥ ಚತುರ್ವಿಂಶೋಽಧ್ಯಾಯಃ

*ವೈಶಂಪಾಯನ ಉವಾಚ–*

**ಬಲಿಹೋರ್ಮಾಶ್ಚ ವರ್ಧಂತೇ ಅಹನ್ಯಹನಿ ಭಾರತ ।**

**ದ್ವಿಜಾನಾಂ ತಪಸಾಢ್ಯಾನಾಂ ಗೃಹಧರ್ಮೇಷು ತಿಷ್ಠತಾಮ್ ॥ 1 ॥**

**ದೇವತಾರ್ಚಾಶ್ಚ ಪೂಜ್ಯಂತೇ ತದ ಪ್ರಭೃತಿ ಭಾರತ ।**

**ತೇಷಾಂ ಬ್ರಹ್ಮವಿದಾಂ ರಾಜನ್ ಪೃಥಿವ್ಯಾಂ ಬ್ರಹ್ಮವಾದಿಭಿಃ ॥ 2 ॥**

**ವಾಸಂ ಯತ್ರ ಪ್ರಕುರ್ವಂತಿ ದೃಷ್ಟ್ವಾ ಭಗವತಃ ಕ್ರಿಯಾಮ್ ।**

**ತಪೋಽರ್ಥಿನೋ ಮಹಾಭಾಗಾ ಬ್ರಹ್ಮಚರ್ಯವ್ರತೇ ಸ್ಥಿತಾಃ ॥ 3 ॥**

ವೈಶಂಪಾಯನರು ಜನಮೇಜಯನೇ! ಹೇಳುವರು – ರಾಜನೇ ಯಾರು ಬ್ರಹ್ಮಜ್ಞಾನವೇತ್ತರೂ, ತಪೋಧನರು ಆದ ಬ್ರಾಹ್ಮಣರ ಗೃಹಗಳಲ್ಲಿ ಗೃಹಸ್ಥಧರ್ಮ ಸ್ವೀಕರಿಸಿದ ನಂತರ ಅವರ ಮನೆಗಳಲ್ಲಿ ನಿರಂತರವಾಗಿ ವೈಶ್ವದೇವಾದಿ ಪಂಚಯಜ್ಞಾದಿಗಳು, ಅಗ್ನಿಹೋತ್ರಾದಿಗಳೂ ನಡೆಯಬೇಕಾಗುತ್ತದೆ. ಹಾಗೆಯೇ ದೇವತಾಪ್ರತಿಮೆಗಳಲ್ಲಿ ಭಗವಂತನ ಅರ್ಚನೆಯು ನಡೆಯಬೇಕಾಗುತ್ತದೆ. ಇಂತಹ ದರ್ಭೆ ಸಮಿತ್ತುಗಳಿಂದ ತುಂಬಿರುವ ಪುಣ್ಯತಮವಾದ ತಪ್ಪಲು ಪ್ರದೇಶದಲ್ಲಿ ಚತುರ್ಮುಖ ಮಾಡಿದ ಯಜ್ಞ ಕ್ರಿಯೆ ನಡೆದ ಸ್ಥಳದಲ್ಲಿ ಬ್ರಾಹ್ಮಣರು ವಾಸ ಮಾಡಲಿಚ್ಛಿಸುವರು. ಸಮಸ್ತ ಬಯಕೆಗಳಿಂದ ಮುಕ್ತರಾದ ಯತಿಗಳೂ ಸಹ ನಿವಾಸ ಮಾಡಲು ಇಚ್ಛೆ ಮಾಡುವರು. ಕಾಡಿನಲ್ಲಿ ಸಿಗುವ ಫಲ ಮೂಲಗಳಿಂದಲೇ ಜೀವಿಸುವ

ವಾನಪ್ರಸ್ಥಾಶ್ರಮೋಚಿತ ಕರ್ಮವನ್ನಾಚರಿಸುವವರೂ ಸಹ ಈ ಭೂಮಿಯಲ್ಲಿ ವಾಸ ಮಾಡಲಿಚ್ಛಿಸುವರು.

ಬೇರೆ ಯಾರನ್ನೂ ಬೇಡದೆ ಯದೃಚ್ಛಾಲಾಭ ಸಂತುಷ್ಟರಾದ ಕೃಷ್ಣಾಜಿನ ನಾರು ಮಡಿ ಧರಿಸಿರುವ ಜಿತೇಂದ್ರಿಯರಾಗಿ ವ್ರತನಿಷ್ಠರಾದ ಬ್ರಾಹ್ಮಣರು ಕೂಡ ಇಲ್ಲಿ ವಾಸಿಸಲಿಚ್ಛಿಸುವರು.

ಆಶ್ರಮಧರ್ಮ ಪಾಲಿಸುವ ಬ್ರಾಹ್ಮಣರು – ಬ್ರಹ್ಮಚಾರಿಗಳೂ ಸಹ ಇಲ್ಲಿ ವಾಸಿಸಲು ಇಚ್ಛಿಸುವರು.

**ನಾವೇದವಿದ್ವಾನಾಗಚ್ಛೇತ್ ನಾಪಿ ರೌದ್ರಂ ವ್ರತಂ ಚರೇತ್ ।**
**ನ ಚ ತ್ಯಾಗೇನ್ ಗಚ್ಛೇತ ಗೃಹಧರ್ಮಂ ನ ಚ ತ್ಯಜೇತ್ ॥ 4 ॥**

ವೇದಗಳ ಜ್ಞಾನವನ್ನು ಸಂಪಾದಿಸದೆ ಬ್ರಹ್ಮಚರ್ಯಾಶ್ರಮ ತ್ಯಜಿಸಬಾರದು. ಹಾಗೂ ಗೃಹಸ್ಥಾಶ್ರಮ ಸ್ವೀಕರಿಸಬಾರದು. ತುರೀಯಾಶ್ರಮ ಸ್ವೀಕಾರವೂ ನಿಷಿದ್ಧ.

ವೇದಗಳ ಜ್ಞಾನ ಪರಿಪೂರ್ಣವಾದ ಮೇಲೆಯೇ ಮುಂದು ಮುಂದಿನ ಆಶ್ರಮ ಸ್ವೀಕರಿಸಬಹುದು. ಹಾಗೆಯೇ ವೇದಗಳ ಪ್ರತಿಪಾದ್ಯ ಭಗವಂತನನ್ನು ತಿಳಿದುಕೊಳ್ಳದೆ ಕಠಿಣವಾದ ಸನ್ಯಾಸಾಶ್ರಮ ಸ್ವೀಕರಿಸಬಾರದು.

ಋಗ್ವೇದಿಗಳು ಮೊದಲು ಋಗ್ವೇದ ಅಧ್ಯಯನ ಮಾಡಬೇಕು. ಸಂತಾನರಹಿತರಾಗಲಿ, ಗೃಹಸ್ಥಾಶ್ರಮ ಸ್ವೀಕರಿಸದವರು ವೇದಾಂತ ಶ್ರವಣ ಮಾಡಿದರು ಅದರ ಫಲವಾದ ಜ್ಞಾನವನ್ನೂ ಹೊಂದುವರು. ತಪಸ್ಸು ಮಾಡಿದವರೂ ಹಾಗೂ ಗುರುಸೇವೆಯನ್ನು ಮಾಡಿದವರೂ ಜ್ಞಾನವನ್ನು ಪಡೆದುಕೊಳ್ಳುತ್ತಾರೆ. ವೇದಾಂತ ಶ್ರವಣದಿಂದಲೂ ಬ್ರಾಹ್ಮಣರೂ ಸಹ ಜ್ಞಾನ ಹೊಂದುವರು. ಯಾರು ಗುರುಮುಖೇನ ಅಧ್ಯಯನ ಮಾಡಿಲ್ಲವೋ ಅಂತಹ ಬ್ರಾಹ್ಮಣರಿಂದ ರಾಜನು ಶೂದ್ರೋಚಿತವಾದ ತ್ರೈವರ್ಣಿಕ ಸೇವೆಯನ್ನು ಮಾಡಿಸಬೇಕು.

ಯಾವನು ಬ್ರಾಹ್ಮಣನಾಗಿ ಹುಟ್ಟಿದ್ದು ಕೂಡ ವೇದದಲ್ಲಿ ಆದರವಿಲ್ಲವೊ ಅಂತಹವನನ್ನು ಬ್ರಾಹ್ಮಣನೇ ಅಲ್ಲ.

ಬ್ರಹ್ಮಚರ್ಯೆ ಹಾಗೂ ಗೃಹಸ್ಥಾಶ್ರಮಗಳಲ್ಲಿ ಯಾರ ಮನಸ್ಸು ವೇದಾಧ್ಯಯನ,

ಅಧ್ಯಾಪನಗಳಲ್ಲಿಯೇ ಏಕಾಗ್ರವಾಗಿರುವುದೋ ಅವನನ್ನೆ ಬ್ರಾಹ್ಮಣ-ನೆನಿಸುವನು. ಹಾಗಾಗಿ ಬ್ರಾಹ್ಮಣನು ತನ್ನ ಯಾವುದೇ ಕರ್ಮಾಚರಣೆಯ ಪೂರ್ವದಲ್ಲಿ ವೇದಾಧ್ಯಯನವಿರಲೇಬೇಕು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ವೇದಗಳ ಜ್ಞಾನ ಎಂಬಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯವು ಸಮಾಪ್ತಿ

## ಅಥ ಪಂಚವಿಂಶೋಽಧ್ಯಾಯಃ

### ಬ್ರಹ್ಮದೇವನ ಸತ್ಕಾರ

**ತೇ ತು ಗೋಬ್ರಾಹ್ಮಣಾಃ ನಾಗಾಃ ಚಂದ್ರಾದಿತ್ಯ ಪುರಸ್ಕೃತಾಃ ।**
**ಬ್ರಾಹ್ಮಣಾನ್ ಪೂಜಯನ್ ದೇವಾನ್ ವಸುಭಿಃ ಬ್ರಹ್ಮಸಂಭವೈಃ ॥ 1 ॥**
**ನಾರದ ಪ್ರಮುಖಾಶ್ಚೈವ ಗಂಧರ್ವಾ ಋಷಯೋ ನೃಪ ।**
**ಕುರ್ವಂತಿ ಸತತಂ ಯಜ್ಞೇ ಕ್ರಮಪ್ರಾಪ್ತಂ ಪಿತಾಮಹಮ್ ॥ 2 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! ನಾಗಗಳು, ಗೋವುಗಳು ಹಾಗೂ ಬ್ರಾಹ್ಮಣರೆಲ್ಲರೂ ಸೂರ್ಯಚಂದ್ರರನ್ನು ಮುಂದೆ ಮಾಡಿಕೊಂಡು ಬ್ರಹ್ಮನಿಂದ ಸಮುದ್ಭೂತವಾದ ಸಂಪತ್ತನಿಂದ ಬ್ರಾಹ್ಮಣ ಹಾಗೂ ದೇವತೆಗಳನ್ನು ಆರಾಧನೆ ಮಾಡಿದರು.

ಈ ಸಂದರ್ಭದಲ್ಲಿ ಉಪಸ್ಥಿತರಾಗಿದ್ದ ನಾರದರೆ ಪ್ರಮುಖರಾದ ಗಂಧರ್ವರು ಋಷಿವರ್ಯರೂ ಬ್ರಹ್ಮದೇವನಿಗೂ ವಿಶೇಷ ಸತ್ಕಾರಗಳನ್ನು ಮಾಡಿದರು.

ಬ್ರಾಹ್ಮಣರೆಲ್ಲರೂ ಪಂಚೇಂದ್ರಿಯಗಳಿಂದ ಉಪಲಕ್ಷಿತ ಏಕಾದಶ ಇಂದ್ರಿಯಗಳನ್ನೂ ತಮ್ಮ ವಶದಲ್ಲಿಟ್ಟುಕೊಂಡಿದ್ದು, ಸರ್ವಭೂತಗಳಿಗೂ ಪ್ರಿಯವನ್ನುಂಟು ಮಾಡುವವರಾಗಿದ್ದರು. ಅವರ ಮಾತುಗಳಿಂದ ಸರ್ವಪ್ರಾಣಿಗಳೂ ಸಂತಸ ಹೊಂದುತ್ತಿದ್ದವು. ಅಂತಹ ವಿಪ್ರರು ಮಧುರಲಾಪದಿಂದ ಪೂಜ್ಯ ಬ್ರಹ್ಮದೇವನು ಪ್ರಶಂಸಿಸಲ್ಪಟ್ಟಾಗ ಇದೆಲ್ಲವೂ ಹರಿಯ ಪರಮಾನುಗ್ರಹವೆಂದು ಹೇಳಿದರು. ನಂತರ ಬ್ರಹ್ಮದೇವನು ತನ್ನ ಪುತ್ರ ಕಶ್ಯಪನನ್ನು ಕುರಿತು ಹೀಗೆಂದನು.

**ಭವಾನಪಿ ಸುತೈಃ ಸಾರ್ಧಂ ಯಕ್ಷ್ಯತೇ ವಸುಧಾತಲೇ ।**
**ಕ್ರತುಭಿಃ ಪರಮ ಪ್ರಾಪ್ತೈಃ ಸಂಪೂರ್ಣವರ ದಕ್ಷಿಣೈಃ ॥ 3 ॥**

ಕಶ್ಯಪನೇ! ನೀನೂ ಸಹ ನಿನ್ನ ಪುತ್ರರೊಂದಿಗೆ ಭೂಮಿಯಲ್ಲಿ ಪೂರ್ಣ ಹಾಗೂ ಶ್ರೇಷ್ಠವಾದ ದಕ್ಷಿಣೆಗಳಿಂದ ಯುಕ್ತವಾದ ಯಜ್ಞಗಳನ್ನು ಅನುಷ್ಠಾನ ಮಾಡುವವನಾಗು.

ಹೀಗೆ ಮಾಡಿದಾಗ ಇದರ ಪ್ರಭಾವದಿಂದಾಗಿ ಪ್ರಜೆಗಳೂ ಕೂಡ ನಿನ್ನನ್ನು ಹಾಗೂ ನಿನ್ನ ಪುತ್ರ ದೇವತೆಗಳನ್ನು ಯಜ್ಞಾದಿಗಳಿಂದ ಸಂತುಷ್ಟಗೊಳಿಸುವರು. ಹೀಗಾಗಿ ಈ ಜಗಚ್ಚಕ್ರದಲ್ಲಿರುವ ನಾವು ನಮ್ಮ ವಿವಿಧ ಚಟುವಟಿಕೆಗಳಿಂದ ಭಗವಂತನಿಗೆ ಪ್ರೀತಿಕರವಾದ ಸತ್ಕಾರ್ಯಗಳನ್ನೆ 'ಯಜ್ಞ'ವೆನ್ನುವರು. ಜಗತ್ತಿನ ಸಮೃದ್ಧಿಗೆ ಈ ಯಜ್ಞವೇ ಕಾರಣ. ಹೀಗೆ ಲೋಕಕಲ್ಯಾಣ ಸಾಧನೆಗಾಗಿ ಜಗಚ್ಚಕ್ರಪ್ರವರ್ತನೆಗಾಗಿ ಪ್ರತಿಯೊಬ್ಬನೂ ತನ್ನ ಕರ್ತವ್ಯ ಮಾಡಲೇಬೇಕು.

ವೇದದಿಂದ ಭಗವಂತ - ಅವನಿಂದ ಕ್ರಿಯೆ - ಯಜ್ಞ- ಮಳೆ - ಬೆಳೆ ಪ್ರಾಣಿಗಳು. ಹೀಗೆ ನಿರ್ಬಂಧವಿಲ್ಲದ ಹರಿಯೇ ಶಿಕ್ಷಣಕ್ಕಾಗಿ ಕರ್ಮ ಮಾಡುತ್ತಿರುವಾಗ ನಾವು ಮಾಡದಿದ್ದರೆ ಹೇಗೆ?

ಬ್ರಹ್ಮದೇವನು ಕಶ್ಯಪರಿಗೆ ಹೀಗೆ ಹೇಳಿದಾಗ ಯಕ್ಷ-ರಾಕ್ಷಸರು, ಸಕಲದೇವತೆಗಳೆಲ್ಲರೂ ವಿರೋಧ ವ್ಯಕ್ತಪಡಿಸುವವರಾಗಿ ಹೀಗೆಂದರು.

**ವಯಂ ಯಕ್ಷ್ಯಾಮಹೇ ಪೂರ್ವಂ ಪೂರ್ವಂ ಯಕ್ಷ್ಯಾಮಹೇ ವಯಂ ।**
**ಏವಮನ್ಯೋನ್ಯ ಸಂರಂಭಾತ್ ವಿದ್ಯಂತೇ ಬಲದರ್ಪಿತಾಃ ॥ 4 ॥**

ನಾವು ಮೊದಲು ಯಜ್ಞ ಮಾಡುತ್ತೇವೆ ಎಂದು ಕೂಗಾಡಲಾರಂಭಿಸಿದರು. ಕೋಪಾವಿಷ್ಟರಾಗಿದ್ದ ಯಕ್ಷರಾಕ್ಷಸರು - ದೇವತೆಗಳು ಬಲಿಷ್ಠರಾಗಿದ್ದರು. ಅವರಿಬ್ಬರೂ ಸಹ ಭುಜಗಳನ್ನೆತ್ತಿಕೊಂಡು ಯುದ್ಧಕ್ಕೆ ಸಿದ್ಧರಾದರು. ಇಬ್ಬರಲ್ಲಿಯೂ ಜಯ ಹೊಂದುವ ಅಭಿಲಾಷೆಯಿಂದ ಕೊಟ್ಟಿಗೆಯಲ್ಲಿರುವ ಗೂಳಿಗಳಂತೆ ಯುದ್ಧದಲ್ಲಿ ತೊಡಗಿದರು. ಋಷಿಗಳಿಂದ ತಡೆಯಲ್ಪಟ್ಟರೂ ಹೊಡದಾಡಿಕೊಂಡು ಮೃತ್ಯುವಿಗೆ ಅತಿಥಿಗಳಾದರು.

**ನಿವಾರ್ಯಮಾಣಾ ಯುದ್ಧ್ಯಂತೇ ವೃಷಭಾ ಇವ ಗೋಕುಲೇ ।**
**ಪ್ರಯುದ್ಧಾ ಯುದ್ಧ ಸಂಕ್ರಾಂತಾಃ ಸರ್ವೇ ಪ್ರಾಣಜಯೈಷಿಣಃ ॥ 5 ॥**

ಕೋಪಗೊಂಡಿದ್ದ ಯೋಧರ ಪಾದಗಳ ಸಂಘಟ್ಟನೆಯಿಂದಾಗಿ

ಭೂಮಂಡಲವೆ ಕಂಪಿಸಿತು. ಬಹಳ ಪುರುಷರಿಂದ ತುಂಬಿದ್ದ ದೋಣಿಯು ನಾಶ ಹೊಂದುವಂತೆ ಭೂಮಂಡಲದ ಪರಿಸ್ಥಿತಿ ಆಯಿತು.

ಪರ್ವತಗಳೆಲ್ಲವೂ ಆನೆಗಳು ಘೀಳಿಡುವಂತೆ ಶಬ್ದ ಮಾಡುತ್ತಾ ಸೀಳಿ ಹೋಯಿತು. ಬಿರುಗಾಳಿಯ ಹೊಡೆತದಿಂದಾಗಿ ಬೃಹತ್ತಾದ ನದಿಗಳ ನೀರೆಲ್ಲವೂ ಉಲ್ಲೋಲಕಲ್ಲೋಲವಾದವು.

**ಪರ್ವತಾಶ್ಚ ವಿಶೀರ್ಯಂತೇ ನರ್ದಮಾನಾ ಗಜಾ ಇವ ।**
**ಚುಕ್ಷುಭುಶ್ಚ ಮಹಾನದ್ಯಃ ತಾಡಿತಾ ಮಾತರಿಶ್ವನಾ ॥ 6 ॥**

## ಮಧು ಸಂಹಾರ

**ತತಃ ಸಮಭವದ್ ಯುದ್ಧಂ ಮಧೋ ವಿಷ್ಣೋಶ್ಚ ಭಾರತ ।**
**ಪ್ರಮಮಾಥ ಮಧೋರ್ವಿಷ್ಣುಃ ಸಮಗ್ರಂ ಬಲಪೌರುಷಮ್ ॥ 7 ॥**

ನಂತರ ಮಧುದೈತ್ಯನಿಗೂ ವಿಷ್ಣುವಿಗೂ, ಸಮಸ್ತ ಪ್ರಾಣಿಗಳಿಗೂ ಭಯವುಂಟು ಮಾಡುವ ಯುದ್ಧವು ಆರಂಭವಾಯಿತು. ಭಗವಂತನು ಮಧುದೈತ್ಯನ ಸಕಲ ಬಲ ಪೌರುಷಗಳನ್ನು ನಾಶ ಮಾಡಿದನು. ನೀರು ಹೇಗೆ ಅಗ್ನಿಯನ್ನು ಶಮನಗೊಳಿಸುವುದೋ ಹಾಗೆ ವಿಷ್ಣುವು ಮಧುವಿನ ಸಾಮರ್ಥ್ಯವನ್ನು ಶಾಂತಗೊಳಿಸಿದನು. ಇದೆಲ್ಲವೂ ಭಗವಂತನಲ್ಲಿ ಸದೃಢ ಭಕ್ತಿ ಮಾಡದೆ ದ್ವೇಷ ಮಾಡುವವರ ಗತಿ ಹೀಗೆ ಇರುತ್ತದೆ.

ಈ ರೀತಿಯಾಗಿ ಸಾತ್ವಿಕ ರಾಜಸ ತಾಮಸ ಗುಣಾನುಸಾರವಾಗಿ ಯಥಾಮತಿ ಯಥಾ ಯೋಗ್ಯವಾಗಿ ತಾವು ಮುಂದೆ ತಾವು ಮುಂದೆಯೆಂಬ ಸ್ಪರ್ಧೆಯಿಂದ ಹಲವು ರಾಜರೂ ಬ್ರಾಹ್ಮಣರೂ ಯಜ್ಞ ಯಾಗ ಮಾಡುವರು. ಶೂದ್ರರೂ ಸಹ ನಾವು ಮಾಡುತ್ತೇವೆಂದು ಮುಂದೆ ಬರುವರು. ಇವರೆಲ್ಲರೂ ತ್ರಿವಿಧ ಮನೋಧ್ಯೇಯವನ್ನಿಟ್ಟುಕೊಂಡು ಪರಸ್ಪರ ಜಯೇಚ್ಛೆಯಿಂದಲೇ ಯಾಗಾದಿಗಳಲ್ಲಿ ತೊಡಗುವರು. ಪರಮಾತ್ಮನ ಅಪಾರ ಮಹಿಮೆ ತಿಳಿಯದೆ, ತಾವು ಮಾಡಿದ ಕರ್ಮ ಅವನಿಗರ್ಪಿಸಿದೆ, ಐಹಿಕ ಕಾಮನೆಯಿಂದ ಯಾವ ಕರ್ಮ ಮಾಡಿದರೂ ಅದರಿಂದ ಫಲ ಅಲ್ಪವೆ. ಇದು ಮುಂದಾಗುವ ವಿಷಯವೆಂದು ತಿಳಿಯಿರಿ.

**ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ**
**ಮಧು-ಮಧುಸೂದನ ಯುದ್ಧ ಎಂಬಲ್ಲಿ**
**ಇಪ್ಪತ್ತೈದನೆಯ ಅಧ್ಯಾಯವು ಸಮಾಪ್ತಿ**

# ಅಥ ಷಡ್ವಿಂಶೋಽಧ್ಯಾಯಃ

## ಮಧು ಮಾಧವ ಘೋರ ಯುದ್ಧ

**ಬಲವಾನ್ ಸ ತು ದೈತೇಯೋ ಮಧುಃ ಭೀಮಪರಾಕ್ರಮಃ ।**
**ಬಬಂಧ ಪಾಶೈಃ ನಿಶಿತೈಃ ಮಹೇಂದ್ರಂ ಪರ್ವತಾಂತರೇ ॥ 1 ॥**

ವೈಶಂಪಾಯನರು ಜನಮೇಜಯನಿಗೆ – ಮಹಾಪರಾಕ್ರಮಿಯಾದ ಮಧು ದೈತ್ಯನು ಇಂದ್ರದೇವನ ಸಂಪತ್ತನ್ನು ಸೂರೆಗೊಳ್ಳುವ ದುರೇಚ್ಛೆಯಿಂದ ಪರ್ವತದ ಮಧ್ಯ ಪ್ರದೇಶದಲ್ಲಿ ದೇವೇಂದ್ರನನ್ನು ನಿಶಿತಪಾಶಗಳಿಂದ ಕಟ್ಟಿ ಹಾಕಿದನು.

ಈ ಪಾಶಗಳು ಮರ್ಮವು ಯಾರಿಗೂ ತಿಳಿಯಲಾರದು *[ಮರ್ಮ–ವಿವರ್ಜಿತೈಃ]*. ಈ ಪಾಶಗಳು ಉಕ್ಕಿನಿಂದ ನಿರ್ಮಿತವೂ ವಿಚಿತ್ರವೂ ಅಭೇದ್ಯವೂ ಆಗಿತ್ತು. ನಂತರ ದರ್ಮದಾಂಧನು ವಿಷ್ಣು–ರುದ್ರರನ್ನೆ ಯುದ್ಧಕ್ಕೆ ಕರೆದನು. ಇದೊಂದು ವಿನಾಶಕಾಲೇ ವಿಪರೀತ ಬುದ್ಧಿಃ ಎಂಬುದನ್ನು ಜ್ಞಾಪಿಸುತ್ತದೆ.

**ವಿಷ್ಣುಮೇವಾಗ್ರಣೀ ರುದ್ರ ಮಾಹ್ವಯದ್ ಯುದ್ಧದುರ್ಮದಃ ।**
**ಮಧ್ಯೇ ಗಣಾನಾಂ ಸರ್ವೇಷಾಂ ಕಾಲಸ್ಯ ವಶಮಾಗತಃ ॥ 2 ॥**

ಮಧುವಿನ ಭಯದಿಂದ ಅವನ ಅಧೀನರಾದ ದೈತ್ಯರೆಲ್ಲರೂ ಎರಡು ಭಾಗವನ್ನಾಗಿ ಮಾಡಿಕೊಂಡು ಕೆಲವರು ರುದ್ರನನ್ನು ಮತ್ತೆ ಕೆಲವರು ವಿಷ್ಣುವನ್ನು ಎದುರಿಸಿದರು.

ಈ ಸಂದರ್ಭದಲ್ಲಿ ವಾದ್ಯಗೀತೆ ನೃತ್ಯಗಳಲ್ಲಿ ಚತುರರಾದ ಗಂಧರ್ವ ಕಿನ್ನರರೆಲ್ಲರೂ ಹಸನ್ಮುಖರಾಗಿ ಶ್ರೀಹರಿಯ ಆದೇಶದಂತೆ ವೀಣಾವಾದ್ಯಾದಿ- ಗಳನ್ನು ಗಾನ ಮಾಡಲಾರಂಭಿಸಿದರು.

**ಮನೋ ಮಧೋಃ ವಿಧುನ್ವಂತಿ ಯುಧ್ಯಮಾನಸ್ಯ ರಾಗಿಣಃ ॥ 3 ॥**

ಈ ವೀಣಾದಿ ವಾದ್ಯಗಳು ಸಂಗೀತಲೋಲನಾದ ಮಧುವಿನ ಮನಸ್ಸನ್ನು ಚಂಚಲಗೊಳಿಸಿತ್ತು. ತಮೋಗುಣ ಪ್ರಧಾನನಾದ ಮಧುವಿನ ಬಲವನ್ನು ಕ್ಷೀಣಗೊಳಿಸಲೆಂದೇ ಬ್ರಹ್ಮನ ಆದೇಶದಂತೆ ವೀಣೆ ನುಡಿಸುತ್ತಿದ್ದರು.

**ಮಧೋಃ ಬಲಾರ್ಥಂ ಮಧುನೊ ನಿಯೋಗಾತ್ ಪದ್ಮಯೋಗಿನಃ ।**
**ಏತಾನ್ ವಿಕಾರನ್ ಕುರ್ವಂತಿ ಗಂಧರ್ವಾಃ ಸತ್ಯವಾದಿನಃ ॥ 4 ॥**

ಮಧುವಿನ ಅನುಯಾಯಿಗಳಾದ ದಾನವರೂ ಸಹ ಆ ಗಾನ ಕೇಳಿ ತಾವೂ ಗಾನ ಮಾಡಲಾರಂಭಿಸಿದರು.

**ಮಧೋಶ್ಚ ಮನ ಆಕ್ಷಿಪ್ಯ ಪಶ್ಯನ್ ಯೋಗೇನ ಚಕ್ಷುಷಾ ।**
**ಮಂದರಂ ಪ್ರಯತೇ ವಿಷ್ಣುಃ ಗೂಢೋಽಗ್ನಿರಿವ ದಾರುಷು ॥ 5 ॥**

ಹೀಗೆ ವೀಣನಾದದ ಮೂಲಕ ಮಧುವಿನ ಮನಸ್ಸು ವಿಕ್ಷೇಪಗೊಂಡಿರುವುದನ್ನು ನೋಡಿದ ವಿಷ್ಣುವು ಅರಣಿಯಲ್ಲಿರುವ ಅಗ್ನಿಯಂತೆ ನಿಗೂಢನಾಗಿ ಮಂದರಪರ್ವತದಲ್ಲಿ ಅಂತರ್ಧಾನ ಹೊಂದಿದನು.

ಋಷಿಗಳು ಕೂಡ ಬ್ರಹ್ಮದೇವನಿಂದ ಕೂಡಿ ಅದೃಶ್ಯರಾದರು.

ಮಹಾಮಾಯಾವಿಯಾದ ಮಧು ದೈತ್ಯನು ವಿಷ್ಣುವನ್ನೆ ಹಿಂಬಾಲಿಸಿಕೊಂಡು ಕೋಪದಿಂದ ವಿಷ್ಣುವಿಗೆ ಮುಷ್ಟಿಯಿಂದ ಹೊಡೆದನು.

**ವಿಷ್ಣುಂ ಸೋಽಭ್ಯಹತ್ ಕ್ರುದ್ಧಃ ಮಧುಃ ಮಧುನಿಭೇಕ್ಷಣಃ ॥ 6 ॥**

ಈ ಪ್ರಹಾರದಿಂದ ಹೂವಿನ ಮಾಲೆಯಿಂದ ಆನೆಗೆ ಹೊಡೆದಂತೆ ವಿಷ್ಣುವು ಒಂದು ಹೆಜ್ಜೆಯೂ ವಿಚಲಿತನಾಗದೆ ಸ್ಥಿರವಾಗಿಯೆ ನಿಂತಿದ್ದ.

ಭಗವಂತನೂ ಕೂಡ ದೈತ್ಯೇಂದ್ರನ ಎದೆಗೆ ಬಲವಾಗಿ ಹೊಡೆದಾಗ ರಕ್ತ ಕಾಣುತ್ತಾ ಮೊಣಕಾಲೂರಿ ಭೂಮಿಗೆ ಕುಸಿದ.

**ಸ ಪಪಾತ ಮಹೀಂ ತೂರ್ಣಂ ಜಾನುಭ್ಯಾಂ ರುಧಿರಂ ವಮನ್ ॥ 7 ॥**

ಹೀಗೆ ಬಿದ್ದು ಮೂರ್ಚಿತನಾಗಿರುವ ದೈತ್ಯನನ್ನು ಕೊಲ್ಲಲು ಅವಕಾಶವಿದ್ದರೂ ಯುದ್ಧದ ನಿಯಮಗಳನ್ನು ತಿಳಿದಿದ್ದ ಹರಿಯು ಕೊಲ್ಲಲಿಲ್ಲ. ದೈತ್ಯನು ಪುನಃ ಎಚ್ಚೆತ್ತು ಬಾಹು ಯುದ್ಧಕ್ಕೆ ಸಜ್ಜಾದನು. ಮಧು (ದೈತ್ಯ) ಮಾಧವ(ಪರಮಾತ್ಮ)ರು ಪರಸ್ಪರ ಕಠೋರ ಮಾತನಾಡುತ್ತಾ ವಾಗ್ಯುದ್ಧ ಮಾಡಿದರು. ಸಿಂಹನಾದ ಮಾಡಿದರು. ಬಾಹು ಯುದ್ಧವಾರಂಭವಾಯಿತು. ಎರಡು ಸಲಗಗಳು ಪರಸ್ಪರ ಜಯೇಚ್ಛೆಯಿಂದ ಕಾದಾಡುತ್ತಿರುವಂತೆ ತೋರಿದರು.

ಉಭಯರು ಯುದ್ಧ ನಿಪುಣರು, ಸತ್ಯಪರಾಕ್ರಮಿಗಳು ಆಗಿದ್ದರು. ಮಾಂಸಾಕಾಂಕ್ಷಿಗಳಾದ ಪಕ್ಷಿಗಳು ತಮ್ಮ ರೆಕ್ಕೆಗಳಿಂದ ಬಡಿದಾಡಿಕೊಳ್ಳುವಂತೆ ವೀರರಾದ ಮಧು ಮಾಧವರು ಪರಸ್ಪರ ಸೆಳೆದುಕೊಂಡು ಯುದ್ಧ ಮಾಡುತ್ತಿದ್ದರು.

ಪರಸ್ಪರವಾಗಿ ಹೊಡೆದಾಡುತ್ತಿದ್ದಾಗ ಪರ್ವತದ ತುದಿಯಲ್ಲಿರುವ ಗೈರಿಕಾದಿ ಧಾತುಗಳ ಮೂಲಕ ಕೆಂಪಾದ ನೀರು ಬರುವಂತೆ ಇವರ ಪರ್ವತದಂತಹ ದೇಹದಿಂದ ಕೆಂಪುರಕ್ತ ಹೊರಬರುತ್ತಿತ್ತು. ಅಪ್ರಾಕೃತ ಶರೀರಿ ವಿಷ್ಣುವು ಪ್ರಾಕೃತರಕ್ತ ತೋರಿಸಿದ ಅಷ್ಟೆ.

ಪಾದಗಳ ಸಂಘರ್ಷಣೆಯಿಂದಾಗಿ ಭೂಮಿಯು ಬಿರುಕುಬಿಟ್ಟಿತು. ಈ ಕಥಾವ್ಯಾಜದಿಂದ ಲೋಕದಲ್ಲಿ ದೈತ್ಯರ ಸ್ಥಾನದಲ್ಲಿ ಮಹಾಮೋಹವನ್ನೂ, ವಿಷ್ಣುವಿನ ಸ್ಥಾನದಲ್ಲಿ ಸಾತ್ವಿಕಭಾವವಾದ ಬುದ್ಧಿವಿವೇಕವನ್ನು ಇಟ್ಟುಕೊಂಡು ಮೋಹಕ್ಕೂ-ವಿವೇಕಕ್ಕೂ ಯಾವ ರೀತಿ ಘರ್ಷಣೆ ನಡೆಯುತ್ತದೆ ಎಂದು ಭವಿಷ್ಯ ಸೂಚಿಸುತ್ತಿದ್ದರು.

ಈ ಯುದ್ಧದ ಉಪಕ್ರಮ - ಉಪಸಂಹಾರ ನೋಡಿದಾಗ ಮೋಹಕ್ಕೆ ಪರಾಜಯ, ವಿವೇಕಕ್ಕೆ ಜಯವೂ ಸಿದ್ಧವೆಂದು ನಿರೂಪಿತವಾಗುತ್ತದೆ.

## ವಿಶ್ವರೂಪ ಪ್ರದರ್ಶನ

**ಸ್ತುತಯೋ ವಿಷ್ಣು ಸಂಯುಕ್ತಾಃ ಸತ್ಯಾಃ ಸತ್ಯಪರಾಕ್ರಮೇ ॥ 8 ॥**

ಈ ಸಮಯದಲ್ಲಿ ಪುಷ್ಕರದ ಗಗನದ ಕಡೆಯಿಂದ ವಿಷ್ಣುವನ್ನು ಪ್ರಶಂಸಿಸುವ

ಸ್ತೋತ್ರವು ಕೇಳ ಬರುತ್ತಿತ್ತು. ಸಿದ್ಧ ಗಂಧರ್ವಾದಿಗಳು ಅವನ ಅಮಿತ-ಪರಾಕ್ರಮವನ್ನು ಪದಜಾಲಗಳಿಂದ ಸ್ತುತಿ ಮಾಡುತ್ತಿದ್ದರು. ಹೀಗೆ ನಾನಾ ರೀತಿಯಿಂದ ಸ್ತುತಿಸಲ್ಪಟ್ಟ ವಿಷ್ಣುವು ತನ್ನ ವಿಶಾಲವಾದ ದೇಹವನ್ನು ಸ್ಮರಿಸಿದನು.

ಶ್ರೀಹರಿಯ ಆಜ್ಞೆಯಂತೆ ಶಿರೋಮಧ್ಯದಲ್ಲಿ ರುದ್ರದೇವನೂ, ಹೃದಯದಲ್ಲಿ ಬ್ರಹ್ಮನೂ, ನೇತ್ರಗಳಲ್ಲಿ ಚಂದ್ರಾದಿತ್ಯರೂ, ಜಂಘೆಯಲ್ಲಿ ಅಷ್ಟವಸುಗಳೂ, ಸಂಧಿಗಳಲ್ಲಿ ಸಾಧ್ಯರೂ, ನಾಲಿಗೆಯಲ್ಲಿ ವೈಶ್ವಾನರಾಗ್ನಿಯೂ ಸರಸ್ವತಿಯೂ, ಜಾನುಗಳಲ್ಲಿ ಮರುತ್ತುಗಳೂ, ವರುಣನೂ ಕಾಣಿಸಿದರು. ಈ ದೇವತೆಗಳನ್ನು ದೇಹದಲ್ಲಿಟ್ಟುಕೊಂಡು ತನ್ನ ಸಾಮರ್ಥ್ಯದಿಂದಲೇ ಮಧುವನ್ನು ಚೆನ್ನಾಗಿ ಮರ್ದಿಸಿದನು.

**ಕೃತ್ವಾ ತು ವೇದಮಯಂ ರೂಪಂ ಸರ್ವದೇವಮಯಂ ವಪುಃ ।**
**ಶಿರೋಮಧ್ಯೇ ಮಹಾದೇವೋ ಬ್ರಹ್ಮಾ ತು ಹೃದಯೇ ಸ್ಥಿತಃ ।**
**ಅಸುರಂ ಪೀಡಯಾಮಾಸ ಕ್ರೋಧಾದ್ ರಕ್ತಾಂತಲೋಚನಃ ॥ 9 ॥**

ಮಧುವಿಗೆ ಹೊಡೆದ ಬಲವಾದ ಪೆಟ್ಟುಗಳಿಂದ ಅವನ ದೇಹವೆಲ್ಲವೂ ಸೀಳಿ ಹೋಗಿ ಅವನ ಮೇದಸ್ಸಿನಿಂದ ಭೂಮಿಯು ಶ್ವೇತಾಂಬರಿ ಸ್ತ್ರೀಯಂತೆ ಕಾಣುತ್ತಿತ್ತು.

ಹೀಗೆ ಮಧುದೈತ್ಯನ ಮೇದಸ್ಸಿನಿಂದ ಕೂಡಿದ ಭೂಮಿಯು 'ಮೇದಿನೀ' ಎಂದು ಪ್ರಸಿದ್ಧವಾಯಿತು. ಹೀಗಾಗಿ ಭೂಮಿಯು ಶುದ್ಧವಾಗಲು ಗೋಮಯ ಲೇಪನ ಅವಶ್ಯವಾಯಿತು.

**ಮೇದಿನೀತ್ಯೇವ ಶಬ್ದಶ್ಚ ಲಬ್ಧಂ ಪೃಥಿವ್ಯಾ ನರೋತ್ತಮ ॥ 10 ॥**

ಹೀಗೆ ಮಧುವಿನ ಸಂಹಾರದಿಂದಾಗಿ ಇಂದ್ರದೇವನ ಅಭೇದ್ಯ ಪಾಶಗಳೂ ಕಳಚಿಹೋದವು. ವಿವೇಕಿಯಾದ ಸಜ್ಜನರ ಸಂಸಾರವೆಂಬ ಅಛೇದ್ಯಾಭೇದ್ಯ ಪಾಶವೂ ತುಂಡಾಗಿ ಸಂಸಾರ ಬಂಧದಿಂದ ಮುಕ್ತರಾಗುವರು.

ಮಧುನಾಮಕ ದೈತ್ಯನನ್ನು ಕೊಂದ ಕುರುಹಾಗಿ ಮಧುವಾಹಿನಿಯಾದ ಪುಷ್ಕಲವಾದ ನೀರುಳ್ಳ ಮನೋಹರವಾದ ಮಧುತೀರ್ಥವನ್ನು ನಿರ್ಮಿಸಿದ.

ಈ ನದಿಯು ಬ್ರಹ್ಮದೇವನ ಆಜ್ಞೆಯಂತೆ ಪುಷ್ಕರತೀರ್ಥ ಸೇರಿತು. ಶ್ರೀಮನ್ನಾರಾಯಣನೂ ಸಹ ಪುಷ್ಕರದ ತೀರದಲ್ಲಿ ಒಂಭತ್ತು ಸಾವಿರದ ನೂರು ವರ್ಷ ತಪಸ್ಸನ್ನಾಚರಿಸಿದನು. ರುದ್ರ ವಾಯುಗಳೂ ಮಾಡಿರುವರು. ತಪಸ್ಸನ್ನು ಹೇಗೆ ಮಾಡಬೇಕೆಂದು ಶಿಕ್ಷಣ ನೀಡಿದರಷ್ಟೆ.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಮಧು ಸಂಹಾರ ಎಂಬಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಸಮಾಪ್ತಿ

# ಅಥ ಸಪ್ತವಿಂಶೋಽಧ್ಯಾಯಃ

## ಪೃಥುವಿನ ರಾಜ್ಯಭಾರ

**ಬ್ರಹ್ಮನ್ ಖಿಲೇ ವರ್ತಮಾನೇ ನಿರ್ಮಿರ್ಯಾದೇ ಮಹಾಗ್ರಹೇ ।**
**ಅವಿನಾಶೇ ಚ ಭೂತಾನಾಂ ಕಥಮಾಸನ್ ಪ್ರಜಾಸ್ತದಾ ॥ 1 ॥**

ರಾಜನು – ಗುರುಗಳೇ – ಸಂಸಾರವು ಅಗಾಧವೂ ಅಕ್ಷಯ ಸಾಗರದಂತಿದೆ. ದುಸ್ತರವೂ ಹೌದು. ಸರ್ವ ಅವಧ್ಯ ಜಲಗ್ರಹಗಳಿಂದ ತುಂಬಿರುವ ಈ ಸಂಸಾರ ಸಾಗರದಲ್ಲಿ ತಾಮಸರೆ ತುಂಬಿದ್ದು ತಾಮಸಗುಣಗಳ ಕಾರ್ಯವಾದ ಹಿಂಸೆ, ಕೊಲೆ, ದ್ವೇಷಗಳಿಂದಲೇ ತುಂಬಿರುವಾಗ ನಮ್ಮಂತಹ ಸಾಮಾನ್ಯ ಜನರಿಗೆ ಈ ಸಂಸಾರದಿಂದ ಬಿಡುಗಡೆ ಹೊಂದುವುದು ದುಸ್ಸಾಧ್ಯವೆ ಎನಿಸುತ್ತದೆ. ಇದರಿಂದ ಬಿಡುಗಡೆ ಮಾರ್ಗ ಹೇಗೆ ತಿಳಿಸಿರಿ ಎಂದಾಗ, ವೈಶಂಪಾಯನರು – ರಾಜನೇ! ಸಾಮಾನ್ಯವಾಗಿ ಅಜ್ಞ ಜನರು ಹೆಚ್ಚಿನ ಸಾಧನೆ ಆಚರಿಸಲು ಅಶಕ್ಯರಾದರೂ ಸ್ವಸ್ವವಿಹಿತ ಕರ್ಮಗಳನ್ನು ಭಕ್ತಿಯಿಂದ ಭಗವದಾರಾಧನ ರೂಪದಲ್ಲಿ ಮಾಡಿ ಸಿದ್ಧಿ ಹೊಂದಬಹುದು. ಇದಕ್ಕೊಂದು ದೃಷ್ಟಾಂತ ಹೇಳುವೆ ಕೇಳು.

**ಅಭ್ಯಷಿಂಚತ್ ಪೃಥು ವೈನ್ಯಂ ಪುರಾ ರಾಜ್ಯೇ ಪ್ರಜಾಪತಿಃ ॥ 2 ॥**

ಪೂರ್ವದಲ್ಲಿ ಪೃಥುವು ಧರ್ಮದಿಂದ ಪ್ರಜಾಪಾಲನೆ ಮಾಡುತ್ತಿರುವಾಗ ದೇವತೆಗಳೇ ಮೊದಲಾದವರು ಗಂಧಮಾದನ ಪರ್ವತದಲ್ಲಿ ಅನೇಕ ನಿಯಮಗಳನ್ನಾಚರಿಸುತ್ತಾ ಬಳಲಿದ್ದರು.

ವಸಂತ ಋತುವಿನ ವೈಶಾಖವಾಗಿದ್ದ ಕಾಲವದು. ಗಂಧಮಾದನ ಪರ್ವತದ ತಪ್ಪಲಿನಲ್ಲಿ ಕುಳಿತಿದ್ದ ದೇವದಾನವರು ಎಲ್ಲಾ ಕಡೆಯಿಂದಲೂ ಕಾಲಧರ್ಮವಾಗಿ ಹೊರಚೆಲ್ಲುತ್ತಿದ್ದ ಸುಗಂಧ ವಾಯುವು ಹೊರಬರುತ್ತಿತ್ತು. ಅದರ ವಾಸನೆ ಆಘ್ರಾಣಿಸಿದ ಅವರೆಲ್ಲರಿಗೂ ದರ್ಪ ಹೊಂದಿದರು. ಮದಭರಿತ ತಾಮಸ ದೈತ್ಯರೂ ಪಾರತ್ರಿಕ ಸುಖವನ್ನು ಮರೆತು ಐಹಿಕ ಸುಖವನ್ನೆ ಅಪೇಕ್ಷಿಸಿದರು. ಹೀಗೆ ಪರಸ್ಪರ ಮಾತಾಡಿಕೊಂಡರು.

## ಸಮುದ್ರಮಥನ

**ಪುಷ್ಪಮಾತ್ರಸ್ಯ ಯದ್ ವೀರ್ಯಂ ಕಿಂ ತಸ್ಯ ಫಲತೋ ಭವೇತ್ ॥ 3 ॥**

ಮಿತ್ರರೇ! ಈ ಪರ್ವತದಲ್ಲಿರುವ ಪುಷ್ಪಗಳ ಸುಗಂಧವೇ ನಮ್ಮನ್ನೆಲ್ಲ ಈ ರೀತಿ ಮೈಮರೆಯುವಂತೆ ಮಾಡಿರುವಾಗ ಅವುಗಳ ಫಲಕ್ಕೆ ಎಷ್ಟು ಶಕ್ತಿಯಿರಬಹುದು?

**ತಸ್ಮಾದ್ ವಯಂ ಪಯೋಮಧ್ಯೇ ಓಷಧ್ಯೋ ನಿರ್ಮಥಾಮಹೇ ।**
**ಮಂದರೇಣ ವಿಶಾಲೇನ ಬಲಿನಾ ಕಾಮರೂಪಿಣಾ ॥ 4 ॥**

ಆದ್ದರಿಂದ ನಾವೆಲ್ಲರೂ ಸೇರಿ ನಮ್ಮ ಸಾಮರ್ಥ್ಯದಿಂದ ಸಮುದ್ರವನ್ನು ಮಥಿಸಿ ಸಮಸ್ತ ಔಷಧಿಗಳನ್ನೂ ಅವುಗಳ ಉತ್ತಮವಾದ ಫಲಸಾರವನ್ನು ಅನುಭವಿಸೋಣ.

ಮಂದರಪರ್ವತವು ಕಾಮರೂಪಿಯೂ ವಿಶಾಲವು ಆಗಿದ್ದು ಆ ಪರ್ವತವನ್ನೇ ಕಡಗೋಲನ್ನಾಗಿ ಮಾಡೋಣ. ಅದರಿಂದ ಬಂದ ಅಮೃತರಸವನ್ನು ನಾವೆಲ್ಲರೂ ಕುಡಿಯೋಣ. ನಾವೂ ಕಾಮರೂಪಿಗಳಾಗಿಯೂ, ಬಲಿಷ್ಠರಾಗಿಯೂ ಜರಾಮರಣ ವರ್ಜಿತರಾಗಿಯೂ ಮೆರೆದು ದಿಗ್ವಿಜಯ ಮಾಡೋಣ.

**ವಿಷ್ಣುರೇವಾಗ್ರಣೀಃ ತೇಷಾಂ ಭವಿಷ್ಯತಿ ಮಹಾಬಲಃ ।**
**ದಿವಂ ಚ ವಸುಧಾಂ ಚ ಭೋಕ್ಷ್ಯಾಮಃ ಸಹ ಶತ್ರುಭಿಃ ॥ 5 ॥**

ದೇವತೆಗಳಿಗೆ ಪರಮಾರಾಧ್ಯನೆಂದರೆ ಮಹಾಬಲಿಷ್ಠನಾದ ವಿಷ್ಣುವೆ. ನಾವೆಲ್ಲರೂ ಸೇರಿ ಸಂಪಾದಿಸಿದ ಅಮೃತದ ಸೇವನೆಯಿಂದಾಗಿ ಸ್ವರ್ಗಾದಿಲೋಕಗಳನ್ನು ಗೆದ್ದು ಸ್ವರ್ಗ ಭೂಮಿಗಳ ಸುಖ ನಾವೇ

ಅನುಭವಿಸೋಣ. ಹೀಗೆ ಗುಪ್ತವಾಗಿ ಮಾತನಾಡಿಕೊಳ್ಳುತ್ತಿದ್ದನ್ನು ತಿಳಿದ ದೇವತಾವೃಂದವು ವಿಷ್ಣುವಿನ ಸಲಹೆ ಪಡೆದು ಗುಪ್ತವಾಗಿ ದೈತ್ಯ ದಾನವರೊಡನೆ ಮೈತ್ರಿಯನ್ನು ಸಂಪಾದಿಸಿದಂತೆ ನಟಿಸಿದರು.

**ಪ್ರಭಾಷ್ಯ ವಚನಂ ದೈತ್ಯಾಃ ಮಂದರಸ್ಯ ಪ್ರಕಂಪನೇ ।**
**ಸಮುದ್ಧರ್ತುಂ ಪ್ರಧಾವಂತಃ ಕಂಪಯಂತಿ ಸಮ ಮೇದಿನೀಮ್ ॥ 6 ॥**
**ನ ಶಕ್ನುಸ್ತೇ ಸಮುದ್ಧರ್ತುಂ ಶೈಲೇಂದ್ರಂದನು ವಂಶಜಾಃ ॥ 7 ॥**

## ಮಂದರ ಪರ್ವತ ಕಿತ್ತಲು ಪ್ರಯತ್ನ

ದೇವ–ದೈತ್ಯರು ಸೇರಿ ಹನ್ನೊಂದು ಸಾವಿರ ಯೋಜನ ಭೂಮಿಯಲ್ಲಿ ಹುದುಗಿದ್ದ ಮಂದರ ಪರ್ವತ ಕಿತ್ತಲು ಸಾಧ್ಯವಾಗಲಿಲ್ಲ. ಭಾಗವತದಲ್ಲಿ ದೇವತೆಗಳೇ ಕಿತ್ತರು ಎಂದಂತಿದೆ. ವಸ್ತುತಃ ಶ್ರೀಹರಿಯೇ ಮಂದರವನ್ನು ಕಿತ್ತು ಗರುಡನ ಮೇಲಿಟ್ಟಾಗ ತಮಗೆ ಪರ್ವತ ಹೊರಲು ಶಕ್ತಿ ಇದೆಯೋ ಇಲ್ಲವೋ ನೋಡಲು ಗರುಡನಿಂದ ಎತ್ತಿಕೊಂಡರು. ಪರ್ವತದಡಿ ಸಿಕ್ಕಿ ನಲುಗಿದರು. ಪುನಃ ದೇವತೆಗಳೂ ಅಸುರರೂ ಪರೀಕ್ಷಿಸಲು ಸೆಳೆದಾಗ ಪರ್ವತವೂ ಪುಡಿ ಮಾಡಿತು. ಪರ್ವತ ಕಿತ್ತಲು ದೇವತೆಗಳು ಅಸುರರು ಹೋದಾಗ ಶ್ರೀಹರಿಯು ಗರುಡನ ಮೇಲೆ ಅಲ್ಲಿಗೆ ಬಂದಿದ್ದ ಅವನೇ ಕಿತ್ತು ಇಟ್ಟ. ದೈತ್ಯರು ಸೆಳೆಯಲು ಹೋದಾಗ ಪರ್ವತ ಬಿದ್ದು ಮೊಣಕಾಲು ಮುರಿದುಕೊಂಡರು *[ನಿಪೇತುಃ ಜಾನುಭಿಃ ಘೃಷ್ಟಾಃ].*

ನಂತರ ದೇವತೆಗಳು ತಪಸ್ಸಿನಿಂದ ದಗ್ಧಕಿಲ್ಬಿಷರಾಗಿದ್ದು ಕಾಮರೂಪಿಗಳಾದ ಅವರು ತಪೋ ಬಲದಿಂದ ಬ್ರಹ್ಮದೇವನನ್ನು ಒಲಿಸಿದರು. ಬ್ರಹ್ಮದೇವನು ಲೋಕಹಿತಕ್ಕಾಗಿ ಹೀಗೆಂದನು.

**ಆದಿತ್ಯೈಃ ವಸುಭಿಃ ಚೈವ ರುದ್ರೈಶ್ಚ ಸಮರುದ್ಗಣೈಃ ।**
**ಸಮೇತ್ಯ ಸಹಿತೈಃ ಸರ್ವೈ ಶಕ್ಯಃ ಉದ್ಧರಿತುಂ ಗಿರಿಃ ॥ 8 ॥**

ದೈತ್ಯರೇ! ನೀವೆಲ್ಲರೂ ದೇವತಾಗಣವನ್ನು ಉಪೇಕ್ಷಿಸಿ ಲೋಭದಿಂದಾಗಿ ಪೂರ್ಣಫಲ ನಮಗೆ ಸಿಗಲೆಂದು ಪರ್ವತ ತರಲು ಹೊರಟಿರಿ. ಇದಕ್ಕಾಗಿ ಅದನ್ನು ಕಿತ್ತಲಾಗಲಿಲ್ಲ. ದೇವತೆಗಳೊಂದಿಗೆ ಹೋಗಿ ಪರ್ವತವನ್ನು ಕಿತ್ತು ತರಬಹುದೆಂದು ಅಶರೀರವಾಣಿಯಲ್ಲಿ ಅರುಹಿದನು.

ದೇವತೆಗಳೆಲ್ಲರೂ ಸೇರಿದರೂ ಪರ್ವತವನ್ನೆತ್ತಲೂ ಸಾಧ್ಯವಾಗಲಿಲ್ಲ.

**ಸಮುದ್ರ ತುರ್ಣ ಮಶಕ್ತಾಃ ವೈ ಸರ್ವೇ ದೇವಗಣಾಸ್ತದಾ ।**

**ನಾನೌಷಧೀಃ ಸಮಾನೀಯ ದೇವದೈತೇಯ ದಾನವಾಃ ॥ 9 ॥**

ನಾನಾ ಬಗೆಯ ಔಷಧಿ ಮೂಲಿಕೆಗಳನ್ನು ಸಮುದ್ರ ಹಾಕಿ, ಪರ್ವತವನ್ನು ತುಪ್ಪವು ಅಧಿಕವಾಗಿದ್ದ ಕ್ಷೀರ ಸಮುದ್ರದಲ್ಲಿ ತೇಲಿಬಿಟ್ಟು ತಾವೂ ವಿಹರಿಸಿ ನಂತರ ವಾಸುಕಿಯನ್ನು ಪರ್ವತಕ್ಕೆ ಸುತ್ತಿ ಬಹುಕಾಲ ಮಥನಗೈದರು. ಭಾಗವತದಲ್ಲಿ 'ಘೃತಾಬ್ಧಿಂ' ಎಂದಿದೆ. ಘೃತಕ್ಷೀರಗಳಿಂದ ಅಧಿಕವಾದ ಸಮುದ್ರವೆಂದರ್ಥ.

## ಸಮುದ್ರಮಥನ

**ಸಮಾಃ ಸಹಸ್ರಂ ಮಥಿತಂ ಜಲಮೋಷಧೀಭಿಃ ಸಹ ।**

**ಕ್ಷೀರಭೂತಂ ಸಮಾಯೋಗಾದ್ ಅಮೃತಂ ಸಮಪದ್ಯತ ॥ 10 ॥**

**ರೂಪೇಣಾನ್ಯೇನ ದೇವಾನಾಂ ಮಧ್ಯೆ ಚಕ್ರಗದಾಧರಃ ।**

**ಚಕರ್ಷ ನಾಗರಾಜಾನಂ ದೈತ್ಯ ಮಧ್ಯೇಽಪರೇಣ ಚ ॥ 11 ॥**

ಹೀಗೆ ಬಹುಕಾಲ ಮಥನದಿಂದ ಸಕಲೌಷಧಿಗಳಿಂದ ಕೂಡಿದ ಜಲವು ಕ್ಷೀರದಂತೆ ಶುದ್ಧವಾಯಿತು.

ಪರ್ವತವು ಮುಳುಗುವ ಸ್ಥಿತಿ ಒದಗಿದಾಗ ಕೂರ್ಮರೂಪದಿಂದ ಎತ್ತಿ ಹಿಡಿದ. ಮಥನದ ವೇಗದಿಂದಾಗಿ ಪರ್ವತ ಹಾರುತ್ತಿತ್ತು. ಹರಿಯು ಕೈಯಿಂದ ಒತ್ತಿ ಹಿಡಿದ. ವಾಸುಕಿಗೆ ಶ್ರಮವಾಗದಂತೆ ಪರ್ವತ ಪುಡಿಯಾಗದಂತೆಯೂ ರಕ್ಷಿಸಿ ತಾನೆ ಮಥನವನ್ನು ಮಾಡಿದ.

ಮಥನದಿಂದ ಮೊದಲು ವಿಷಮತವಾದ ನಾನೇ ದೇವರು ಎಂಬ ಮತವು ಉದಯಿಸಿದಂತೆ, ಮೊದಲು ಸರ್ವರನ್ನು ಗ್ರಾಸ ಮಾಡುವ ಕಾಲಕೂಟ ವಿಷ ಮೇಲೆ ಬಂದಿತು. ಅದನ್ನು ಒಂದು ಬಿಂದು ತೆಗೆದು ರುದ್ರನಿಗೆ ಯಶಸ್ಸು ಬರಲೆಂದು ನೀಡಿದಾಗ, ನಾಮತ್ರಯ ಉಚ್ಚಾರಣೆ ಪೂರ್ವಕ ರುದ್ರನು ಸ್ವೀಕರಿಸಿದನು. ಈ ನಾಮತ್ರಯ ಪ್ರಭಾವ ಹಾಗೂ ವಾಯುವಿನ ಸ್ಪರ್ಶದಿಂದಾಗಿ ಮೃತನಾಗದೆ ನೀಲಕಂಠನಾದ.

**ಅನಾಯಾಸತ್ ಪಪೌ ವಾಯುಃ ಸರ್ವೇಷಾಂ ರಕ್ಷಣಾಯ ಚ ॥ 12 ॥**

ವಾಯುವಾದರೂ ಅನಾಯಾಸವಾಗಿ ಕುಡಿದು ನಿರ್ವಿಕಾರನಾಗಿದ್ದನು.

ನಂತರ ಮಥನ ನಡೆದಾಗ ಮದ್ಯವು ಆವಿರ್ಭವಿಸಿತು. ವಾಯುವಿನ ಸ್ಪರ್ಶವಾಗದ ಮದ್ಯವನ್ನು ದೈತ್ಯರು ಸ್ವೀಕರಿಸಿದರು. ಪಾವನವಾಗಬೇಕಾದರೆ ಪವನನ ಅಮೃತಕರ ಸ್ಪರ್ಶ ಬೇಕು. ಆಗ ವಿಷ್ಣುವಿಗೆ ನೈವೇದ್ಯಕ್ಕೆ ಬರುತ್ತದೆ. ಹರಿವಾಯುಗಳಿಗೆ ಅರ್ಪಿಸದೆ ತಿನ್ನುವ ಜನಾಂಗ ಮುಂದೆ ಬರುವ ಸೂಚನೆ. ಈ ಮದ್ಯವು ಹರಿಯು ಸರ್ವೋತ್ತಮನೆಂದರೂ ವಾಯು ಜೀವೋತ್ತಮ-ನೆಂದು ಒಪ್ಪದವರು ಸಂಸಾರ ಮದ್ಯದಲ್ಲಿರುವರೆಂಬ ಸೂಚನೆ.

## ಉಚ್ಚೈಶ್ರವಸ್ ಕುದುರೆ

**ಶಶಾಂಕೋ ವಿಮಲಶ್ಚಾಪಿ ಸಮುತ್ತಸ್ಥಃ ಸಮಂತತಃ ।**
**ಉಚ್ಚೈಃ ಶ್ರವಾಃ ಹಯೋರಮ್ಯಃ ॥ 13 ॥**

ಉಚ್ಚೈಃಶ್ರವ ಎಂಬ ಬಿಳ ಬಣ್ಣದ ಏಳು ಮುಖಗಳುಳ್ಳ ಕುದುರೆಯು, ನಾಲ್ಕು ದಂತಗಳಿರುವ ಬಿಳಿಯಾದ ಪೂರ್ವ ದಿಕ್ಕಿನ ಭೂಮಿಯನ್ನು ಹೊತ್ತಿರುವ ಐರಾವತ – ಪುಂಡರೀಕ – ವಾಮನ – ಕುಮುದ – ಅಂಜನ – ಪುಷ್ಪದಂತ ಸಾರ್ವಭೌಮ – ಸುಪ್ರತೀಕವೆಂಬ ಅಷ್ಟದಿಗ್ಗಜಗಳು ಉದ್ಭವಿಸಿದವು.

ಇದೇ ರೀತಿ ಸಾವಿರಾರು ಜಾತಿಯ ಅಪ್ಸರೆಯರೂ ಹುಟ್ಟಿದ್ದರು. ನೀರಿಂದ ಬಂದವರಾದ್ದರಿಂದಲೇ [ಅಪ್+ಸರ] ಅಪ್ಸರೆಯರು. ಇದೇ ರೀತಿ ದೇವತೆಗಳ ಆಯುಧಗಳು ಅಭರಣ – ಕೌಸ್ತುಭಮಣಿ– ಕಾಮಧೇನು ಎಂದರೆ ಸುರಭಿಯು, ಚಂದ್ರ–ಪಾರಿಜಾತಾದಿಗಳು ಉದ್ಭವಿಸಿದವು.

ಮುಂದೆ ಮಥನದಿಂದ ಸಾಕ್ಷಾತ್ ಲಕ್ಷ್ಮೀದೇವಿಯು ನಿತ್ಯ ಸ್ವರೂಪಳಾದರೂ ಮತ್ತೊಂದು ರೂಪದಿಂದ ಆವಿರ್ಭವಿಸಿದಳು. ಅವಳನ್ನು ಭಗವಂತನೆ ವರಿಸಿದ.

## ಧನ್ವಂತರೀ ಪ್ರಾದುರ್ಭಾವ

**ಧನ್ವಂತರಿಶ್ಚ ಭಗವಾನ್ ಪ್ರಾದುರ್ಭೂತೋ ಹರಿನ್ಮಣಿಃ ॥ 14 ॥**

ಈ ಸಮಯದಲ್ಲಿಯೇ ಇಂದ್ರ ನೀಲಮಣಿ ಸದೃಶ ಕಾಂತಿವುಳ್ಳ ಬಲಗೈಯಲ್ಲಿ ಅಮೃತಬಡಿಸುವ ಕಲಶವನ್ನೂ, ಎಡಗೈಯ್ಯಲ್ಲಿ ಸುಧಾಪೂರ್ಣ ಕಲಶವನ್ನು ಹೊತ್ತು ಧನ್ವಂತರಿಯೆಂಬ ಶ್ರೀಹರಿಯು ಆವಿರ್ಭವಿಸಿದನು.

**ತಜ್ಜಹ್ರು: ಅಸುರಾಃ ಪೂರ್ವಮಾಕ್ರಾಂತಾ ಲೋಭಮನ್ಯುನಾ ॥ 15 ॥**

ಅಸುರರಾದರೂ ದೇವತೆ ಇಲ್ಲದಂತೆ ಮಾಡಿ ತಾವೇ ಸರ್ವವನ್ನು ಪಡೆಯಬೇಕೆಂಬ ಲೋಭ ಹಾಗೂ ದ್ವೇಷದಿಂದ ಅಮೃತ ತುಂಬಿದ ಕಲಶವನ್ನು ಅಪಹರಿಸಿದರು. ಹೀಗೆ ದೈತ್ಯರನ್ನು ಸತ್ಯಚ್ಯುತರನ್ನಾಗಿಸಲು ಅಮೃತಪಾನಾ ಯೋಗ್ಯರೆಂದು ತಿಳಿಸಲು ಶಕ್ತಿಯಿದ್ದರೂ ಹರಿ ಸುಮ್ಮನಿದ್ದ.

## ಮೋಹಿನೀ ವೇಷ ತಳೆದ ಶ್ರೀಹರಿ

ಯಾವಾಗ ದೈತ್ಯರು ಅಮೃತ ಕಲಶವನ್ನುಪಹರಿಸಿದರೂ ಯಾರೊಬ್ಬರೂ ಕುಡಿಯಲಾಗಲಿಲ್ಲ.

**ನ ತು ಕೇಚಿತ್ ಪಿಬಂತಿ ಸ್ಮ ದೈತ್ಯಾ ನೈವ ಚ ದಾನವಾಃ ॥ 16 ॥**

ಶ್ರೀಹರಿಯು ಅದ್ಭುತವಾದ ಸ್ತ್ರೀರೂಪ ಧರಿಸಿದ. ವಿಶಾಲ ನೇತ್ರಗಳು ಬೃಹನ್ನಿತಂಬಗಳು, ಕಲಶೋಪಮಸ್ತನ ನೋಡಿ ಮೋಹಗೊಂಡರು. ತನ್ನ ಮೋಹಕ ಶಕ್ತಿಯಿಂದ ಯಥಾಯೋಗ್ಯ ವಿಭಾಗಗೈಯ್ಯುವೆ ಎಂದು ಹೇಳಿ ದೇವತೆಗಳಿಗೆಲ್ಲ ಅಮೃತವನ್ನು ಹಂಚಿ ಬಿಟ್ಟನು.

**ಚಿಚ್ಛೇದಾಥ ಹರಿಃ ಸಂಖ್ಯೇ ರಾಹೋಶ್ಚಕ್ರೇಣ ಕಂ ತದಾ ॥ 17 ॥**

ಈ ಮಧ್ಯೆ ಅಮೃತಕ್ಕಾಗಿ ಸಹಸ್ರವರ್ಷ ತಪಸ್ಸು ಮಾಡಿದ ರಾಹುವಿಗೆ ಅಮೃತ ನೀಡಿ ತಲೆ ಕಡಿದು ಹಾಕಿದ ಭಗವಂತ.

## ದೇವತೆಗಳಿಗೆ ಮುಕ್ತಿ

ಹೀಗೆ ರಾಹುವಿನ ತಲೆ ಉರುಳಿಸಿ ದೇವತೆಗಳಿಗೆ ಮಾತ್ರ ಅಮೃತವನ್ನು ನೀಡಿದ್ದು ಸುರರಿಗೆ ಮೋಕ್ಷ ನಿಶ್ಚಯವಾಗಿ ಸಿಗುತ್ತದೆ. ಅಸುರ ಸ್ವಭಾವದವರಿಗೆ ಯಾವ ರೀತಿಯಿಂದಲೂ ಮೋಕ್ಷ ಸಿಗುವುದಿಲ್ಲ. ಅತೀ ಉತ್ಸಾಹ ತೋರಿದರೆ ರಾಹುವಿಗೆ ಶಿರಶ್ಚೇಧ ಉಂಟಾಗುತ್ತದೆ ಎಂದು ತೋರಿಸಿದ ಶ್ರೀಹರಿ.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ದೇವತೆಗಳಿಗೆ ಅಮೃತಪ್ರಾಪ್ತಿ ಎಂಬಲ್ಲಿ
ಇಪ್ಪತ್ತೇಳನೆಯ ಅಧ್ಯಾಯವು ಸಮಾಪ್ತಿ

## ಅಥ ಅಷ್ಟಾವಿಂಶೋಽಧ್ಯಾಯಃ

### ಬಲಿಯ ರಾಜಸೂಯಯಾಗ

**ನಿಹತೇ ದೈತ್ಯ ಸಂಘಾತೇ ವಿಷ್ಣೋಶ್ಚಾತಿಪರಾಕ್ರಮೇ ।**
**ದೈತೇಯಾಃ ದಾನವೇಯಾಶ್ಚ ಕಿಮಿಚ್ಛಂತಿ ಪರಾಕ್ರಮಾತ್ ॥ 1 ॥**

ಗುರುಗಳೇ! ಅದ್ಭುತ ಸಾಮರ್ಥ್ಯ ಹೊಂದಿದ್ದ ಭಗವಂತನಿಂದ ಏಟುತಿಂದು ಸೋತು ಹೋದ ದೈತ್ಯ ದಾನವರು ತಮ್ಮಲ್ಲಿದ್ದ ಪರಾಕ್ರಮದಿಂದ ಏನೇನು ಮಾಡಿದರು?

ರಾಜನೇ! ಮಹಾಪರಾಕ್ರಮಿಗಳಾದ ದೈತ್ಯದಾನವರು ದೇವತೆಗಳೆಲ್ಲರೂ ಇನ್ನೂ ಭಗವಂತನ ಮಹಿಮೆಗೆ ಸೋತು ಪುನಃ ಪುನಃ ಭಕ್ತಿಯಿಂದ ಧ್ಯಾನದಲ್ಲಿ ಆಸಕ್ತರಾಗುತ್ತಿದ್ದರೆ ದೈತ್ಯರಾದರೂ ತಾಮಸಿ ಸ್ವಭಾವಕ್ಕೆ ಅನುಗುಣವಾಗಿ ಉತ್ತಮ ಪುರುಷಾರ್ಥ ಪಡೆಯಲು ಯತ್ನಿಸದೆ ಅಲ್ಪವಾದ ಐಹಿಕ ಭೋಗ ಭಾಗ್ಯಗಳನ್ನೇ ಬಯಸುವರು. ಇದಕ್ಕಾಗಿ ಒಂದು ಇತಿಹಾಸ ಹೇಳುವೆ ಕೇಳು.

**ಈಜೇ ಬಹು ಸುವರ್ಣೇನ ರಾಜ ಸೂಯೇನ ಪಾರ್ಥಿವಃ ।**
**ಗಂಗಾಯಮುನಯೋಃ ಮಧ್ಯೇ ಯದಭೂದ್ ವಿಪುಲಂ ತಪಃ ॥ 2 ॥**

ಬಹು ಹಿಂದೆ ಬಲಿಚಕ್ರವರ್ತಿಯು ದಾನವನಾದರೂ ಪ್ರಾಯಶಃ ಧರ್ಮಿಷ್ಠನೆಂಬ ಖ್ಯಾತಿಗಳಿಸಿ ಬೇಡಿದವರಿಗೆಲ್ಲ ನೀಡುವ ಕೊಡುಗೈ ದಾನಿಯೆಂದು ಪ್ರಖ್ಯಾತನಾಗಿದ್ದನು.

ಇಂದ್ರನ ಸ್ವರ್ಗಾಧಿಪತ್ಯ ಪಡೆಯಬೇಕೆಂಬ ಹಂಬಲದಿಂದ ರಾಜಸೂಯ-ಯಾಗವನ್ನು ಮಾಡುತ್ತಾ ಬಂದನು.

ಬಹು ದಕ್ಷಿಣಾಕವಾದ ರಾಜಸೂಯಯಾಗ ಒಂದೊಂದೇ ಮುಗಿದು ನೂರನೇ ರಾಜಸೂಯಯಾಗವನ್ನು ಪ್ರಾರಂಭಿಸಿದನು. ಆ ರಾಜಸೂಯಯಾಗಕ್ಕೆ ವೇದ ವಿದ್ವಾಂಸರು, ಮಹಾವ್ರತ ಪರಾಯಣರೂ ಬಂದರು.

ಈ ರಾಜಸೂಯಯಾಗ ನಿರ್ವಿಘ್ನವಾಗಿ ನೆರವೇರಿದರೆ ಇಂದ್ರನಂತೆ ತಾನೂ 'ಶತಕ್ರತು'ವೆಂಬ ಪಟ್ಟ ಹೊಂದಬಹುದು. ಭೂಮಿಯಲ್ಲಿ ಮಾಡಿದ ನೂರು ರಾಜಸೂಯಯಾಗದ ಫಲವೆಂದರೆ ಸ್ವರ್ಗಾಧಿಪತ್ಯ ಪ್ರಾಪ್ತಿಯೇ ಆಗಿದ್ದು ಅದಕ್ಕಾಗಿ ಶ್ರದ್ಧೆಯಿಂದ ನಡೆಸಿದ್ದನು.

### ಶುಕ್ರಾಚಾರ್ಯರ ಅಧ್ವರ್ಯುತ್ವ

**ಶುಕ್ರಸ್ತು ಸಹ ಪುತ್ರೇಣ ದೈತ್ಯಂ ಯಾಜಯತೇ ಪ್ರಭುಃ ॥ 3 ॥**

ಪುತ್ರನಿಂದ ಒಡಗೂಡಿದ ಶುಕ್ರಾಚಾರ್ಯರೇ ಬಲಿಯ ಯಾಗದಲ್ಲಿ ಹೋತೃಗಳಾಗಿ ಯಾಗ ಮಾಡಿಸುತ್ತಿದ್ದರು.

ಅಸುರ ಗಣ ಮಧ್ಯದಲ್ಲಿ ಮಹಾ ತೇಜಸ್ವಿಯಾದ ಬಲಿಚಕ್ರವರ್ತಿಯು ಬಂದವರಿಗೆಲ್ಲ – ನಿಮಗೇನು ಬೇಕೋ ಕೇಳಿರಿ, ನಾನು ನಿಮ್ಮ ಇಚ್ಛೆಯನ್ನೂ ಪೂರೈಸಲು ಸದಾ ಸಿದ್ಧನಾಗಿರುವೆ ಎಂದು ಹೇಳುತ್ತಿದ್ದನು.

**ಕಾಮಾದ್ ವರಂ ದದಾತೀತಿ ತದ್ ವೈ ಸಂಪ್ರತಿಪದ್ಯತಾಮ್ ।**
**ವಿಷ್ಣುಃ ವಾಮನರೂಪೇನ ಭಿಕ್ಷಾಂ ತಾಂ ಪ್ರತಿಗೃಹ್ಣತಿ ।**
**ಹಿರಣ್ಯಕಶಿಪೋಃ ಹಸ್ತಾದ್ ದ್ವೇಪದೇ ಪದಮೇವ ಚ ॥ 4 ॥**

### ವಾಮನರೂಪೀ ಶ್ರೀಹರಿ

ಇದೇ ಸಮಯ ಸಾಧಿಸುತ್ತಿದ್ದ ಶ್ರೀಹರಿಯು ಅದಿತಿದೇವಿಯಲ್ಲಿ ವಾಮನ-ರೂಪಧರಿಸಿ ಬಲಿಯ ಮನೆಗೆ ಬಂದನು. ಇಂದ್ರನ ಕಾರ್ಯ ಸಾಧಿಸಲು ಯಾಗ ಶಾಲೆ ಪ್ರವೇಶಿಸಿ ರಾಜನಿಂದ ಆದರಿಸಲ್ಪಟ್ಟ. ಸ್ವಾಗತ ತಮಗೆ, ನಿಮಗೆ ಈಪ್ಸಿತವಾದದ್ದನ್ನು ಬೇಡಿರಿ ಎಂದಾಗ ವಾಮನನು ನನ್ನ ಬೇಡಿಕೆ ಅಷ್ಟು ದೊಡ್ಡದೇನಲ್ಲ. ನನ್ನ ಹೆಜ್ಜೆಯ ಅಳತೆಯಷ್ಟು ಭೂಮಿ ದಾನ ಕೊಟ್ಟರೆ ಅಷ್ಟೇ

ಸಾಕು. ಬಲಿಗೆ ಆಶ್ಚರ್ಯ, ಚಕ್ರವರ್ತಿಯಾದ ನನ್ನನ್ನು ಸ್ತುತಿಸಿ ಕೇವಲ ಮೂರು ಹೆಜ್ಜೆ ಭೂಮಿಯನ್ನು ಕೇಳುವುದೇ? ನನಗದು ಅಪಮಾನ ಎಂದರೂ ಕೇಳಲಿಲ್ಲ. ವಿಧಿಯಿಲ್ಲದೆ ಮೂರು ಹೆಜ್ಜೆಯ ಭೂದಾನ ಕೊಡಲು ಸಂಕಲ್ಪ ಮಾಡಿದ.

**ತತಃ ಕ್ರಮಿತುಮಾರೇಬೇ ವಿಷ್ಣುಃ ಸತ್ಯಪರಾಕ್ರಮಃ ।**
**ತ್ರೀನ್‌ಲೋಕಾನ್ ಮುನಿಭಿಃ ಕ್ರಾಂತ್ಯೈಃ ದಿವ್ಯಂವಪುರಧಾರಯನ್ ॥ 5 ॥**

ಮೂರು ಹೆಜ್ಜೆ ದಾನವಾಯಿತು. ವಾಮನ ತನ್ನ ತ್ರಿವಿಕ್ರಮ ರೂಪವನ್ನು ಪ್ರಕಟಗೊಳಿಸಿದ. ಒಂದು ಪಾದದಿಂದ ಕೆಳಗಿನ ಸಮಸ್ತ ಲೋಕಗಳನ್ನೂ, ಭೂಮಂಡಲವನ್ನೂ ವ್ಯಾಪಿಸಿದ. ತನ್ನ ಎರಡನೆ ಕಾಲನ್ನೆತ್ತಿ ಅದು ಮೇಲಿನ ಸಮಸ್ತ ಲೋಕಗಳನ್ನು ಆಕ್ರಮಿಸುತ್ತಾ ಸಾಗಿತು. ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕವನ್ನೂ ವ್ಯಾಪಿಸಿತು. ಮೂರನೆ ಪಾದ ವಿನ್ಯಾಸಕ್ಕೆ ತಲೆಯನ್ನೆ ಒಡ್ಡಿದ ಬಲಿ ಸ್ವಾತ್ಮಾರ್ಪಣೆ ಮಾಡಿದ. ಬಲಿದಾನವೆಂದು ಪ್ರಖ್ಯಾತವಾಯಿತು.

ಬಲಿಯ ಸ್ಥಾನಮಾನ ತಪ್ಪಿತು *[ಕ್ಷೀಣರಿಕ್ತಃ]* ಜ್ಞಾತಿಗಳು ತೊರೆದಿದ್ದಾರೆ. ಗುರುಗಳ ಶಾಪ. ಆದರೂ ಸತ್ಯವನ್ನು ಬಿಡಲಿಲ್ಲ. ಹೀಗಾಗಿ ಸ್ವಭಾವತ ಭಕ್ತನನ್ನು ದೂರದ ಸುತಳಲೋಕದಲ್ಲಿಟ್ಟು ಅವನ ಮನೆಯಲ್ಲಿಯೆ ವಾಸ ಮಾಡಿದ. ಮೂರ್ಲೋಕ ಒಡೆತನ ಹೋದರೇನಾಯಿತು. ಮೂರ್ಲೋಕದೊಡೆಯ ತನ್ನ ಮನೆಯ ಮುಂದೆ ನಿಂತಿದ್ದಾನೆ! ಮುಂದಿನ ಸಾವರ್ಣಿಯಲ್ಲಿ ಇಂದ್ರಪದವಿಯೂ ಸಿಗುವಂತೆ ಮಾಡಿದ ಶ್ರೀಹರಿ.

**ಹೃತರಾಜ್ಯಾಸ್ತು ದೈತೇಯಾಃ ಪಾತಾಲವಿವರಂ ಗತಾಃ ॥ 6 ॥**

ಮಿಕ್ಕುಳಿದ ದೈತ್ಯರೆಲ್ಲರೂ ಆಶ್ರಯವಿಲ್ಲದೆ ಪಾತಾಳಕ್ಕೆ ಹೊರಟರು. ದೈತ್ಯ ಸೈನ್ಯವು ತಮ್ಮ ಆಯುಧ ಸಾಮಾಗ್ರಿ ಹೊತ್ತು ಪಾತಾಳ ವಿವರ ಸೇರಿದರು.

ಪ್ರಕೃತ ಇಂದ್ರನ ಸ್ಥಾನದಲ್ಲಿ ಪುನಃ ಇಂದ್ರದೇವನು ಅಭಿಷೇಕಿಸಲ್ಪಟ್ಟ. ಹೀಗೆ ಮಹಾಮಹಿಮೋಪೇತನಾದ ಶ್ರೀಹರಿಯ ಮಹಿಮೆ.

ಇದರಿಂದಾಗಿ ಬಲಿಯಂತೆ ಹರಿಗೆ ಸ್ವಲ್ಪ ಸ್ಥಳ ನೀಡಿದರೆ ಸಾಕು. ಅವನು

ನಮ್ಮ ಬದುಕೆಲ್ಲ ಸುಖಮಯವನ್ನಾಗಿಸುತ್ತಾನೆ. ಶ್ರೀಹರಿಗೆ ನಮ್ಮಲ್ಲಿ ಜಾಗ ಕೊಡದೆ ಕಲಿಗೆ ಪೂರ್ಣ ಅವಕಾಶ ನೀಡುತ್ತಿರುವೆವು. ಅವನು ನಮ್ಮ ಸರ್ವಸ್ವ ಕಬಳಿಸುತ್ತಾನೆ.

**ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ**
**ವಾಮನಾವತಾರ ಎಂಬಲ್ಲಿ**
**ಇಪ್ಪತ್ತೆಂಟನೆಯ ಅಧ್ಯಾಯವು ಸಮಾಪ್ತಿ**

# ಅಥ ಏಕೋನತ್ರಿಂಶೋಽಧ್ಯಾಯಃ

## ದಕ್ಷಯಜ್ಞನಾಶ

**ತತೋ ಮಹತಿ ವೃತ್ತಾಂತೇ ಸ್ಥಿತೇ ರಾಜ್ಯೇ ಮಹೋದಯೇ ।**
**ದೇವತಾನಾಂ ಮನುಷ್ಯಾಣಾಂ ಸಹವಾಸೋಽಭವತ್ ತದಾ ॥ 1 ॥**

ವೈಶಂಪಾಯನರು ರಾಜನೇ! ಬಹು ಹಿಂದೆ ದೇವತೆಗಳು ಭೂಮಿಗೆ ಇಳದು ಬಂದು ಮನುಷ್ಯೋತ್ತಮರಿಂದ ಕೂಡಿಕೊಂಡೆ ವ್ಯವಹರಿಸುತ್ತಿದ್ದರು.

ಮನುಷ್ಯೋತ್ತಮರೂ ಸಹ ಯಜ್ಞಯಾಗಾದಿಗಳಂದ ದೇವತೆಗಳನ್ನೂ ಆರಾಧಿಸಿ ತೃಪ್ತಿಪಡಿಸುತ್ತಿದ್ದರು. ಹೀಗೆ ವಿಧಿವತ್ತಾಗಿ ಶ್ರದ್ಧಾ ಭಕ್ತಿಯಿಂದ ಆರಾಧನೆ ಮಾಡುತ್ತಿದ್ದಾಗ ದೇವತೆಗಳೂ ಸಹ ಸ್ವತಃ ತಾವೇ ಅಲ್ಲಿಗೆ ಬಂದು ತಮಗೆ ನೀಡಿದ ಹವಿರ್ಭಾಗಗಳನ್ನು ಪ್ರತ್ಯಕ್ಷವಾಗಿಯೆ ಸ್ವೀಕರಿಸುತ್ತಿದ್ದರು.

ಅಧ್ಯಾತ್ಮ ತತ್ವ ಮರ್ಮಗಳನ್ನೂ ಉಪದೇಶಿಸುತ್ತಿದ್ದರು.

**ಪ್ರಾಚೇತಸಂ ತತೋದಕ್ಷಂ ದೀಕ್ಷಿತ್ವಾ ವೈ ಬೃಹಸ್ಪತಿಃ ।**
**ವಾಜಿಮೇಧಾಯ ಭಗವಾನ್ ಋಷಿಭಿಃ ಪರಿವಾರಿತಃ ॥ 2 ॥**

ಹಿಂದೆ ಪ್ರಚೇತಸನ ಪುತ್ರನಾದ ದಕ್ಷಪ್ರಜಾಪತಿಯು ಅನೇಕ ವಿದ್ವಜ್ಜನರಿಂದ ಕೂಡಿಕೊಂಡು ಬೃಹಸ್ಪತ್ಯಾಚಾರ್ಯರ ಅಧ್ವರ್ಯುತನದಲ್ಲಿ ಅಶ್ವಮೇಧ ಯಾಗ ಮಾಡಲು ದೀಕ್ಷೆ ನೀಡಿದನು.

ಆ ಯಾಗದಲ್ಲಿ ಬ್ರಹ್ಮಾದಿ ದೇವತೆಗಳೂ ಋಷಿಗಳೂ ಸಭಾಸದರೂ ಸನ್ನಿಹಿತರಾಗಿದ್ದರು.

**ತಸ್ಮಿನ್ ಮಾತಾಮಹೇ ಯಜ್ಞೇ ದಕ್ಷಸ್ಯ ವಿದಿತಾತ್ಮನಃ ।**
**ಶಾಮಿತ್ರ ಮಕರೋದ್ ರುದ್ರೋ ಭಾಗಾರ್ಥೇ ಸಹ ನಂದಿನಾ ॥ 3 ॥**

ಒಂದು ಬಾರಿ ದೇವಾದಿಗಳಿಂದ ಮಂಡಿತವಾದ ಆ ಯಾಗಶಾಲೆಗೆ ದಕ್ಷ ಪ್ರಜಾಪತಿಯು ಬಂದಾಗ ಸಭಾಸದರೆಲ್ಲರೂ ಎದ್ದು ನಿಂತು ಗೌರವ ಸೂಚಿಸಿದರು. ಬ್ರಹ್ಮ ಹಾಗೂ ರುದ್ರ ದೇವರಿಬ್ಬರು ಮಾತ್ರ ಏಳಲ್ಲಿಲ್ಲ. ಗೌರವ ನೀಡಲಿಲ್ಲ. ಬ್ರಹ್ಮದೇವನು ತಂದೆಯಾಗಿದ್ದರಿಂದ ಏಳಬೇಕಾಗಿದ್ದಿಲ್ಲ. ರುದ್ರನು ತನ್ನ ಮಗಳು ಸತಿಯನ್ನು ಕೈಹಿಡಿದ ಮಗಳ ಗಂಡನೆನಿಸಿದ್ದರಿಂದ ಎದ್ದು ಗೌರವ ನೀಡಬೇಕಿತ್ತು ಎಂದು ದಕ್ಷ ಇಚ್ಛಿಸಿದ್ದ.

## ದಕ್ಷ ಯಜ್ಞಧ್ವಂಸ

ತನ್ನನ್ನು ಸತ್ಕರಿಸಲಿಲ್ಲವೆಂಬ ರೋಷದಿಂದ ಅವಾಚ್ಯ ನುಡಿಗಳಿಂದ ಹೀಯಾಳಿಸಿ ನಿಂದಿಸಿ 'ನಿನಗೆ ಇಂದ್ರೋಪೇಂದ್ರರಿಂದ ಜೊತೆಗೆ ಹವಿರ್ಭಾಗವಿಲ್ಲದೆ ಹೋಗಲಿ' ಎಂದು ಶಪಿಸಿದ.

ರುದ್ರದೇವನಾದರೂ ತಾನೂ ಸ್ವರೂಪದಲ್ಲಿ ಉತ್ತಮನೂ ಅಪರೋಕ್ಷಿಯೂ, ಆದ್ದರಿಂದ ದಕ್ಷನಿಗೆ ಅಭ್ಯುತ್ಥಾನಾದಿಗಳಿಂದ ಗೌರವಿಸಲಿಲ್ಲ.

ಇದನ್ನರಿಯದ ದಕ್ಷನು ಸಂಪತ್ತಿನ ಮದ, ಅಧಿಕಾರ ಮದದಿಂದಾಗಿ ಅಳಿಯನನ್ನು ಅವಮಾನಿಸಿದ. ಇದರಿಂದಾಗಿ ರುದ್ರದೇವನ ಉಗ್ರತ್ವಕ್ಕೆ ದಕ್ಷನು ಬಲಿಯಾಗಬೇಕಾಯಿತು.

ರುದ್ರದೇವನನ್ನು ಅವಮಾನಿಸಲೆಂದೇ ದಕ್ಷನು ಎರಡು ಯಾಗಗಳನ್ನು ಮಾಡಿದನು. ಯಾಗಕ್ಕೆ ಹೋಗಬೇಡವೆಂದರೂ ಸತಿಯು ಪತಿಯ ಮಾತನ್ನು ಮೀರಿ ಹೋದಳು. ತಂದೆಯಿಂದ ಅವಮಾನಿತಳಾಗಿ ಯೋಗ ಬಲದಿಂದ ಅಗ್ನಿಯಲ್ಲಿ ದೇಹತ್ಯಾಗ ಮಾಡಿದಳು. ಭವಿಷ್ಯದವರಿಗೆ - ಪತಿ - ಅತ್ತೆ ಮಾವ ಮೊದಲಾದ ಗುರುಪ್ರಾಯದವರ ಮಾತು ಮೀರಿ ಹೋದರೆ ಮರಣದಂತಹ ದುಃಖಪ್ರಾಪ್ತವಾಗುತ್ತದೆ ಎಂದು ಸೂಚಿತ.

ಇದರ ಪ್ರತೀಕಾರಕ್ಕಾಗಿ ರುದ್ರದೇವನು ತನ್ನದೆ ಆದ ವೀರಭದ್ರವೆಂಬ ರೂಪವನ್ನು ಜಟಾಜಟ ಬಡಿದು ಸೃಷ್ಟಿಸಿ ದಕ್ಷ ಯಜ್ಞ ನಾಶಕ್ಕಾಗಿ ಕಳುಹಿಸಿದ.

**ರುದ್ರಸ್ಯೈವ ಹಿ ತದ್ ರೂಪಂ ದ್ವಿಧಾಭೂತಂ ತದೀಪ್ಸಯಾ ।**
**ಜಾತಃ ಪರಮಧರ್ಮಾತ್ಮಾ ನಂದೀ ಪುರುಷವಿಗ್ರಹಃ ॥ 4 ॥**

ರುದ್ರದೇವನ ಅಪ್ಪಣೆಯಂತೆ ವೀರಭದ್ರ ಹಾಗೂ ಭೂತಗಣಗಳು ನಂದಿಯು ಸಹ ಪುರುಷ ರೂಪಧರಿಸಿ ಹೊರಟರು.

**ಶಿಖಾಬಿಃ ಜಟಾಭಿಶ್ಚೈವ ತ್ರ್ಯಕ್ಷೈ ಶಂಕುಕರ್ಣಿಭಿಃ ।**
**ಚೀರಿಭಿಶ್ಚರ್ಮಿಭಿಶ್ಚೈವ ಕೂಟ ಮುದ್ಗರ ಪಾಣಿಭಿಃ ।**
**ಏತೈಃ ಪರಿವೃತೋ ದೇವೋ ಮಖಂ ತಂ ಸಮುಪಾರುಜತ್ ॥ 5 ॥**

ರುದ್ರದೇವನ ಭೂತಗಣದಲ್ಲಿ ವೀರಭದ್ರನಂತೆ ಭಯಂಕರ ರೂಪವುಳ್ಳವರೂ, ಡೊಳ್ ಹೊಟ್ಟೆಯವರು, ಮೇಲ್ಮುಖನೇತ್ರರೂ, ಜಟಾಧಾರಿಗಳೂ ನಾರು ಚರ್ಮ ಮೊದಲಾದವನ್ನುಟ್ಟವರೂ, ಮುದ್ಗರ ಗದ ಪಾಣಿಗಳೂ ಡಿಂಡಿಮ ಭೇರಿ ಮೃದಂಗ ವೇಣು ವಾದ್ಯಧರಿಸಿರುವವರೂ ಇದ್ದು ಭಯಂಕರವಾಗಿ ಶಬ್ಧ ಮಾಡುತ್ತಾ ವೀರಭದ್ರನೊಂದಿಗೆ ಯಜ್ಞಶಾಲೆ ಪ್ರವೇಶಿಸಿದರು.

**ಉಗ್ರಾಯುಧಧರೋ ದೇವಃ ಸಪಿನಾಕ ಇವಾಂತಕಃ ।**
**ಕಾಲಾಗ್ನಿರಿವ ದೀಪ್ತಾರ್ಚಿಃ ಜಗದ್ದಗ್ಧುಮಿವೋದ್ಯತಃ ॥ 6 ॥**

ರುದ್ರರೂಪಿ ವೀರಭದ್ರನು ಉಗ್ರಯುಧಗಳನ್ನು ಧರಿಸಿ ಪಿನಾಕವೆಂಬ ಆಯುಧವನ್ನು ಧರಿಸಿ ನೋಡುವವರಿಗೆ ಅಂತಕನಂತೆ ತೋರುತ್ತಿದ್ದನು. ಅವನ ತೇಜೋ ಜ್ವಾಲೆಗಳಂದ ಜಗತ್ತನ್ನೆ ಸುಡಲು ಹೊರಟಿರುವನಂತೆ ಯಜ್ಞಶಾಲೆ ಪ್ರವೇಶಿಸಿದ.

**ನಂದೀಪಿನಾಕಪಾಣಿಶ್ಚ ಜಘ್ನ ತುಃ ಮಖಮುತ್ತಮಮ್ ।**
**ಯೂಪಮುತ್ಕ್ಷಿಪ್ಯ ಧಾವಂತಿ ನಿಶಾಚರಗಣಾಸ್ತಥಾ ॥ 7 ॥**

ವೀರಭದ್ರನೊಂದಿಗೆ ಬಂದಿದ್ದ ನಂದಿಯೂ ಯಾಗಶಾಲೆ ಪ್ರವೇಶಿಸಿ ಯಜ್ಞ ಕುಂಡಾದಿಗಳನ್ನು ನಾಶ ಮಾಡಲಾರಂಭಿಸಿದ.

ಅವನ ಸೈನಿಕರು ನಿಶಾಚರ – ಪಿಶಾಚಾದಿ ಗಣಗಳು ಯೂಪ ಸ್ತಂಭವನ್ನೆ ಕಿತ್ತು ಬಿಸಾಡಿದವು. ಮುನಿ ಜನರನ್ನು ಹಿಡಿದು ಓಡಿಸಿದರು.

ಅವರೆಲ್ಲರೂ ಯಾಗೀಯ ಹವಿಸ್ಸನ್ನು ಹಾಲು ಮೊಸರು ತುಪ್ಪ ಮೊದಲಾದವುಗಳನ್ನು ಉದ್ದವಾದ ನಾಲಗೆಗಳಂದ ತಿಂದು ಕುಡಿದು ಸೂರೆಗೊಳಸಿದರು. ಕೆಲವರು ಯಾಗೀಯ ಪಶುವನ್ನೆ ತಿಂದು ತೇಗಿದರು.

ಕೆಲವರು ಯಾಗಾಗ್ನಿಯಲ್ಲಿ ನೀರನ್ನು ಎರೆಚಿ ಅಗ್ನಿಯನ್ನು ಶಾಂತ-ಗೊಳಿಸಿದರು. ಕೆಲವರು ಸೋಮರಸ ಅಪಹರಿಸಿದರೆ ಕೆಲವರು ದರ್ಭೆಗಳನ್ನೇ ಎಸೆದು ಬಿಸುಟರು. ಯಾಗಾಗ್ನಿ ತಯಾರಿಸುವ ಅರಣಿಯನ್ನು ಪುಡಿ ಮಾಡಿದರು. ಅವರೆಲ್ಲರೂ ಹಗಲು-ರಾತ್ರಿ ಬಿಡದೆ ಯಜ್ಞವನ್ನು ಸಮೂಲವಾಗಿ ಧ್ವಂಸ ಮಾಡಿದರು.

ಅನ್ನಭಕ್ತನಾದ ಶಿವನನ್ನು ಅವಮಾನಿಸಿ ಮಾಡುವ ಯಾವುದೇ ಯಾಗದ ಗತಿ ಇಷ್ಟೇ ಎಂದು ತೋರಿಸಿದರು.

**ಏವಂ ದಿವಾರಾತ್ರೌ ಚ ಭಿದ್ಯಮಾನೋ ಮಹಾಮಖಃ ॥ 8 ॥**

ವೀರಭದ್ರನು ಬ್ರಹ್ಮನಿಂದ ತನಗೆ ಕೊಡಲ್ಪಟ್ಟಿದ್ದ ಧನುಸ್ಸನ್ನು ಬಾಣದೊಂದಿಗೆ ಹಿಡಿದು ಆ ಮಹಾಕ್ರತುವಿಗೆ ಹೊಡೆದನು. ಆಗ ಆ ಯಜ್ಞಾಭಿಮಾನಿಯು ಜಿಂಕೆಯಾಗಿ ಹಾರಿ ಬ್ರಹ್ಮನಿಗೆ ಶರಣು ಹೊಂದಿತು. ಅದೇ 'ಮೃಗಶಿರಾ' ನಕ್ಷತ್ರ.

ಬ್ರಹ್ಮದೇವನು ಮೃಗಶಿರಾ ನಕ್ಷತ್ರವನ್ನು ಕುರಿತು ಮೃಗರೂಪ ತಾಳಿದ ಯಜ್ಞಾಭಿಮಾನಿಯೇ! ನೀನು ಇನ್ನು ಮುಂದೆ ಮೃಗಶಿರಾ ಸಂಜ್ಞೆಯ ನಕ್ಷತ್ರ ರೂಪದಿಂದಲೇ ಶಾಶ್ವತವಾಗಿ ಆಕಾಶದಲ್ಲಿರು. ನಿನಗೆ ಈ ಬಾಣದಿಂದ ಯಾವುದೇ ಬಾಧೆ ಬಾರದಿರಲಿ. ನೀನು ಅಶ್ವಿನ್ಯಾದಿ ನಕ್ಷತ್ರಗಳಿಂದ ಕೂಡಿದ್ದು ಈಶಾನನಿಂದ ಕೂಡಿಕೊಂಡಿರು ಎಂದನು.

## ಕಾಮನಬಿಲ್ಲಿನ ಉತ್ಪತ್ತಿ

**ಕ್ಷತಜಂ ಬಹುವರ್ಣಂ ಚ ಕ್ಷೇತ್ರಂ ಮಂಡಲಸಂಜ್ಞಿತಮ್ ।**
**ನಿಮಿತ್ತ ಭೂಭೂತಂ ಭೂತಾನಾಂ ವರ್ಷೇ ವರ್ಷಪ್ರದಂ ತಥಾ ॥ 9 ॥**

ಬಾಣದ ಪ್ರಹಾರದಿಂದ ಉಂಟಾದ ಗಾಯದಿಂದ ಹೊರಬಂದ ದಿವ್ಯ ರಕ್ತವು ವೇಗವಾಗಿ ಓಡಿ ಬರುತ್ತಿರುವಾಗ ಮೇಲೆದ್ದ ಧೂಳುಗಳೊಂದಿಗೆ ಮಿಶ್ರವಾಗಿ ನಾನಾ ಬಣ್ಣಗಳಿಂದ ಪ್ರಕಾಶಿಸುತ್ತದೆ. ನೀನು ಓಡಿ ಬಂದ ಪ್ರದೇಶವು 'ಮಂಡಲ'ವೆಂದು, ವರ್ಷ ಋತುವಿನಲ್ಲಿ ನಾನಾ ವರ್ಣವುಳ್ಳದ್ದಾಗಿ, ಅರ್ಧಮಂಡಲಾಕಾರವಾಗಿ ವೃಷ್ಟಿ ಬೀಳುವ ಚಿಹ್ನೆಯಾಗಿ ಆಕಾಶದಲ್ಲಿ ಕಾಮನ ಬಿಲ್ಲು ಅಥವಾ ಇಂದ್ರಧನುಸ್ಸಿನ ರೂಪವಾಗಿ ಪ್ರಕಾಶಿಸು. ಇದನ್ನು ನೋಡಿ

ಪ್ರಾಣಿಗಳಿಗೆ ಸುಖದುಃಖಗಳ ಸೂಚನೆಯಾಗಲಿ. ಮಾನವರ ನೇತ್ರ-ಮನಸ್ಸಿಗೆ ಅಚ್ಚರಿವುಂಟು ಮಾಡಲಿ, ಹಗಲಿನಲ್ಲಿ ಮಾತ್ರ ತೋರಲಿ ರಾತ್ರಿ ತೋರದಿರಲಿ ಎಂದು ಅಭಯವಿತ್ತನು.

ಇತ್ತ ವೀರಭದ್ರನ ಭಯದಿಂದ ಯಾಗಶಾಲೆಯಲ್ಲಿದ್ದವರೆಲ್ಲ ದಿಕ್ಕಾಪಾಲಾಗಿ ಓಡಿ ಹೋಗುತ್ತಿದ್ದರು. ನಂದಿ ಹಾಗೂ ವೀರಭದ್ರರು ಮಾತ್ರ 'ಬ್ರಹ್ಮದಂಡ'ದಂತೆ ಸ್ಥಿರವಾಗಿ ನಿಂತಿದ್ದರು.

**ಯುಗಾಂತಕಾಲೇ ಜ್ವಲಿತೋ ಬ್ರಹ್ಮದಂಡ ಇವೋದ್ಯತಃ ॥ 10 ॥**

ಈ ಸಂದರ್ಭದಲ್ಲಿ ಯಜ್ಞಕ್ಕಾಗಿ ಬಂದಿರುವ ದೇವತೆಗಳು ಋಷಿಗಳು ಭಗವಂತನನ್ನು ಪ್ರಾರ್ಥಿಸಿದರು. ಕೂಡಲೇ ಭಗವಾನ್ ನಾರಾಯಣನು ನಾಲ್ಕು ಭುಜಗಳಲ್ಲಿಯೂ ಶಂಖಚಕ್ರಗದಾ ಧನುರ್ಬಾಣ ಹಿಡಿದು ವೀರಭದ್ರನ ಮುಂದೆ ನಿಂತನು.

## ವಿಷ್ಣು ವೀರಭದ್ರರ ಯುದ್ಧ

**ವಿಷ್ಣುಃ ಶೃಂಗ ಸಮುದ್ಭೂತಂ ಪ್ರಗೃಹ್ಯ ವಿಪುಲಂ ಧನುಃ ।**
**ಪ್ರಗೃಹ್ಯ ಸೋಽಗ್ರತೋಽತಿಷ್ಠತ್ ರುದ್ರಾಯೋದ್ಯತಪ್ರಾಣಯೇ ॥ 11 ॥**

ಶ್ರೀವಿಷ್ಣುವು ಶಂಖವನ್ನೂದಿದನು. ವಿಷ್ಣುವೆ ಯುದ್ಧ ಸನ್ನದ್ಧನಾದದ್ದನ್ನು ನೋಡಿ ಆದಿತ್ಯರು, ವಸುಗಳೂ, ಇತರ ದೇವತೆಗಳೂ ವಿಷ್ಣುವನ್ನು ಸುತ್ತುವರಿದು ನಿಂತರು. ಮರುತ್ತುಗಳು ವಿಶ್ವೇದೇವತೆಗಳು ರುದ್ರನ ಭಾಗವಹಿಸಿದರು.

## ರುದ್ರ ನೀಲಕಂಠನಾದ

ವೀರಭದ್ರನಾದರೂ ಅಸುರಾವೇಶದಿಂದಾಗಿ ವಿಷ್ಣುವಿನ ಸರ್ವಾಂಗಗಳಲ್ಲಿಯೂ ಬಾಣಗಳ ಮಳೆಗರೆದ. ಅಕುತೋಭಯ ವಿಷ್ಣುವು ಸ್ಥಿರವಾಗಿ ಅಲ್ಲಿಯೆ ನಿಂತಿದ್ದ. ಅಸುರಾವೇಶ ಪ್ರಯುಕ್ತ ಹೊಡೆದ ವೀರಭದ್ರನ ಮೇಲೆ ಕೋಪವನ್ನೂ ಮಾಡಲಿಲ್ಲ. ಆದರೂ ಅಸುರಾವೇಶ ತೊಲಗಿಸಲೆಂದು ಬಾಣದಿಂದ ವೀರಭದ್ರನಿಗೆ ಹೊಡೆದ. ಅದನ್ನು ಲೆಕ್ಕಿಸದೆ ನಿಂತಿದ್ದ ವೀರಭದ್ರನ ಮೇಲೆ ಹರಿದ ವಿಷ್ಣುವು ಅವನು ಕುತ್ತಿಗೆಯನ್ನು ಹಿಚುಕಿದಾಗ ಶಿವನು 'ನೀಲಕಂಠ'ನಾದ.

**ತತ�ः ಪ್ರಸಭಮಾಪ್ಲುತ್ಯ ರುದ್ರಂ ವಿಷ್ಣುಃ ಸನಾತನಮ್ ।**
**ಕಂಠೇ ಜಗ್ರಾಹ ಭಗವಾನ್ ನೀಲಕಂಠಃ ತತೋऽಭವತ್ ॥ 12 ॥**

ಮೊದಲೇ ನೀಲಕಂಠನಾಗಿದ್ದು ಅಸುರಾವೇಶದಿಂದ ನೀಲಕಂಠನು ತಾನೆಂದು ತಿಳಿಯದೆ ಯುದ್ಧ ಮಾಡುತ್ತಿದ್ದ ವೀರಭದ್ರನ ಕತ್ತು ಒತ್ತಿ ನೀಲಕಂಠತ್ವ ಜ್ಞಾನವುಂಟು ಮಾಡಿದ. ಇದರಿಂದ ಅಸುರಾವೇಶ ಹೋದ ವೀರಭದ್ರನು ಸ್ತುತಿಸಿದನು.

**ಅನಾದಿ ನಿಧನೋ ದೇವೋ ಕ್ಷಮ್ಯತಾಂ ಹಿ ಭವಾನ್ ಮಮ ।**
**ಕರ್ಮಣಾಂ ಚೈವ ಕರ್ತಾ ಚ ವಿಕರ್ತಾ ಚೈವ ಭಾರತ ।**
**ಅಶೇಷತ್ವಾಚ್ಚ ಭೂತಾನಾಂ ಸರ್ವಭೂತೇಷು ಚೋತ್ತಮಃ ॥ 13 ॥**

ಭಗವಂತನೆ ! ನೀನೆ ಕರ್ತನು ಕರ್ಮನು ವಿಷಮಕರ್ತನೂ ಸರ್ವಪ್ರಾಣಿ- ಗಳಲ್ಲಿಯೂ ನೀನೇ ಉತ್ತಮೋತ್ತಮವಾಗಿರುವಿ. ಹೀಗೆ ಸ್ತುತಿಸುತ್ತಿದ್ದಂತೆಯೇ ಅಶರೀರವಾಣಿ ಕೇಳಿದವು.

'ಶಶ್ವದೇಕ ಪ್ರಕಾರನಾದ ಅನಾದಿ ನಿತ್ಯನಾದ ನಿನಗೆ ಅನಂತ ವಂದನೆಗಳು' ಎಂದು, ಇದು ಅದೃಶ್ಯರಾಗಿದ್ದ ಸಿದ್ಧಪುರುಷರು ಬಾಯಿಂದ ಹೊರಟಿದ್ದವು.

## ನಂದಿಯ ಅಸುರಾವೇಶ

**ನಂದೀ ಪಿನಾಕ ಮುದ್ಯಮ್ಯ ಬಲವಾನ್ ರುದ್ರಸಂಭವಃ ।**
**ಮೂರ್ಧನ್ಯಭಿಜಘಾನಾಜೌ ವಿಷ್ಣುಂ ಕ್ರೋಧೇನ ಮೂರ್ಛಿತಃ ॥ 14 ॥**

ರುದ್ರನ ಭಂಟನಾದ ನಂದಿಯು ಅಸುರಾವೇಶದಿಂದಾಗಿ ಶ್ರೀವಿಷ್ಣುವಿನ ಮೇಲೆ ಪಿನಾಕವೆಂಬ ಧನಸ್ಸನ್ನೆತ್ತಿ ವಿಷ್ಣು ತಲೆಗೆ ಹೊಡೆದನು. ವಿಷ್ಣುವಾದರೂ ನಂದಿಯನ್ನು ಅಲ್ಲಾಡದಂತೆ ಸ್ತಂಬನ ಮಾಡಿಬಿಟ್ಟನು *[ಸ್ತಂಭಯಾಮಾಸ ಹರಿಃ].*

## ರುದ್ರನಿಗೆ ಯಜ್ಞಭಾಗ

**ಪ್ರಸನ್ನಃ ಕಲ್ಪಯಾಮಾಸ ಭಾಗಂ ರುದ್ರಾಯ ಧೀಮತೇ ।**
**ವಿಷ್ಣುಃ ಧರ್ಮಪರೋ ನಿತ್ಯಂ ತ್ಯಕ್ತಕಾಮಃ ಸುರೋತ್ತಮಃ ॥ 15 ॥**

ಶ್ರೀವಿಷ್ಣುವು ಶಾಂತಚಿತ್ತನಾಗಿ ಅವರೊಳಗಿನ ವಿವಾದವನ್ನು ಅನಾಯಾಸ- ವಾಗಿ ಪರಿಹರಿಸಿದನು.

ರುದ್ರದೇವನು ಮಾವನಾದ ನನಗೆ ಅಗೌರವ ಮಾಡಿದ್ದರಿಂದ ಹವಿರ್ಭಾಗ ಹೊಂದುವುದು ಬೇಡವೆಂದಿದ್ದರೂ ವಿಷ್ಣುವು ಬ್ರಹ್ಮನ ಅಂತರ್ಯಾಮಿಯಾದ ತನ್ನನ್ನೆ ಧ್ಯಾನಿಸುತ್ತಿದ್ದನು. ಉತ್ತಮಾಧಿಷ್ಠಾನದಲ್ಲಿ ಧ್ಯಾನ ಮಾಡುತ್ತಿರುವಾಗ ಅಧಮಾಧಿಷ್ಠಾನದಲ್ಲಿ ಉಪಾಸನೆ ಬೇಕಾಗಿಲ್ಲವೆಂಬ ಧರ್ಮವನ್ನು ತಿಳಿದಿದ್ದ ರುದ್ರದೇವನಿಗೆ ಯಜ್ಞಭಾಗ ನೀಡುವಂತೆ ಮಾಡಿದನು.

ದಕ್ಷನಿಗೆ ಬಸ್ತ ಮುಖ ನೀಡಿಸಿ, ದಕ್ಷನಿಂದ ಇದು ನೀವು ನೀಡಿದ ಶಿಕ್ಷೆಯಲ್ಲ – ಅನುಗ್ರಹದ ಶ್ರೀರಕ್ಷೆ ಎಂದು ಪ್ರಾರ್ಥಿಸುವಂತೆ ಮಾಡಿದನು. ಮಾತ್ರವಲ್ಲದೆ ದಕ್ಷಯಜ್ಞವು ಅಪೂರ್ಣವಾಗದಂತೆ ಪುನಃ ಪೂರ್ಣಗೊಳಿಸುವಂತೆ ಮಾಡಿದನು. ಅಂಗೋಪಾಂಗಹೀನರಾಗಿದ್ದ ಭಗನ ಕಣ್ಣು, ಹಲ್ಲು ಹೋದ ಪೂಷನ ದಂತಗಳು, ಭೃಗುವಿನ ಗಡ್ಡವೆಲ್ಲವೂ ಪುನಃ ಪಡೆದರು.

ಈ ಭಾಗದಲ್ಲಿ ತಿಳಿಯಬೇಕಾದದ್ದು, ಭಗವದ್ಭಕ್ತನಾದ ಶಿವನನ್ನು ದ್ವೇಷಿಸಿದ ದಕ್ಷ ಪ್ರಜಾಪತಿಯು *ತದ್ಭಕ್ತ ದ್ವೇಷ ಏವ ಚ* ಎಂಬಂತೆ ಹರಿಯನ್ನೆ ದ್ವೇಷಿಸಿದಂತಾಯಿತು. ಹೀಗಾಗಿ ದಕ್ಷನು ಎಷ್ಟೇ ಸಾಂಗೋಪಾಂಗವಾಗಿ ಯಜ್ಞ ಮಾಡಿದ್ದರೂ ಬ್ರಹ್ಮ–ವಿಷ್ಣುಗಳು ಬರಲಿಲ್ಲ. ಮುಂದೆ ತಪ್ಪಿನ ಅರಿವಾದ ಮೇಲೆ ಬಂದು ಯಜ್ಞವನ್ನು ಪೂರ್ತಿ ಮಾಡಿಸಿದರು. **ಅಪೂಜಯಿತ್ವಾ ವಿಘ್ನೇಶಂ ಅಸಂಭಾವ್ಯಂ ಕಪಾಲಿನಂ** ಎಂಬಂತೆ **ಹರಿಯು ತಾಳ ತನ್ನವರವ ಹೇಳನವ**.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ದಕ್ಷ ಯಜ್ಞ ಪರಿಪೂರ್ಣ ಎಂಬಲ್ಲಿ
ಇಪ್ಪತ್ತೊಂಭತ್ತನೆಯ ಅಧ್ಯಾಯವು ಸಮಾಪ್ತಿ

# ಅಥ ತ್ರಿಂಶೋಽಧ್ಯಾಯಃ

## ವರಾಹಾವತಾರ ಕಥೆ

*ಜನಮೇಜಯ –*

**ಕಿಮಾತ್ಮಕೋ ವರಾಹೋಽಸೌ ಕಾ ಮೂರ್ತಿಃ ಕಾಸ್ಯ ದೇವತಾ ॥ 1 ॥**

ವೈಶಂಪಾಯನರೇ ! ವರಾಹರೂಪಿಯೆಂದರೆ ಯಾರು? ಅವನ ವಿಶೇಷ ಕಾರ್ಯಗಳೇನು? ಅವನ ಪ್ರಾದುರ್ಭಾವದ ಹಿನ್ನೆಲೆಯೇನು? ತಿಳಿಸಿ ಎಂದಾಗ.

ವೈಶಂಪಾಯನರು – ರಾಜನೆ ಹಿಂದೆ ಬ್ರಹ್ಮನ ಪುತ್ರನಾದ ಆದಿ ಹಿರಣ್ಯಾಕ್ಷನು ಬ್ರಹ್ಮನನ್ನೆ ಅಡ್ಡಗಟ್ಟಿದ. ಬ್ರಹ್ಮನ ಪ್ರಾರ್ಥನೆಯಂತೆ ಬಿಳಿಹಂದಿಯ ವೇಷ ತಾಳಿದ. ಭೂಮಿಯು ತಾನೆ ಕಕ್ಷೆಯಿಂದ ಕಳಚಿ ನೀರಿನಲ್ಲಿ ಮುಳುಗಿತ್ತು. ಅದನ್ನು ಹರಿಯು ತರುತ್ತಿರುವಾಗ ಆದಿ ಹಿರಣ್ಯಾಕ್ಷನು ಅಡ್ಡಗಟ್ಟಿದಾಗ ಅವನನ್ನು ಕೋರೆಹಲ್ಲಿನಿಂದಲೇ ಕೊಂದು ಹಾಕಿದ.

ಆದಿಹಿರಣ್ಯಾಕ್ಷನೇ ದಿತಿಯ ಮಗನಾದ ಹಿರಣ್ಯಾಕ್ಷ ಸೇರಿ ಭೂಮಿಯನ್ನು ತಾನೆ ಮುಳುಗಿಸಲು ತೊಡಗಿದ್ದ. ಅದನ್ನು ತರಲು ನೀಲವರಾಹ ವೇಷಧರಿಸಿ ಅವನನ್ನು ಕೊಂದು ಭೂಮಿಯ ಉದ್ಧಾರ ಮಾಡಿದ.

ಈ ಮಹಾವರಾಹ ರೂಪವೆ ಯಜ್ಞ ವರಾಹವೆನಿಸಿದೆ. ವರಾಹನ ಚರ್ಮದಲ್ಲಿ ವೇದಗಳು, ಕೂದಲಲ್ಲಿ ದರ್ಭೆಯೂ, ಕಣ್ಣಿನಲ್ಲಿ ತುಪ್ಪವೂ, ಪಾದಗಳಲ್ಲಿ ಚಾತುರ್ಹೋತ್ರ, ಬಾಯಲ್ಲಿ ಸ್ರುಕ್, ಮೂಗು–ಸ್ರುವ, ಉದರದಲ್ಲಿ ಇಡಾಪಾತ್ರೆ, ಕಿವಿಗಳಲ್ಲಿ ಚಮಸ ಪಾತ್ರೆ ಮೊದಲಾದವು ಇವೆ.

ರಾಜನೇ! ಹಿಂದೆ ಬ್ರಹ್ಮಾಂಡವು ಹಿರಣ್ಮಯವಾಗಿದ್ದಿತು. ಬ್ರಹ್ಮದೇವನು

ಜಗತ್ತನ್ನು ಸೃಷ್ಟಿಸಲು ಅಧೋಮುಖವಾಗಿದ್ದ ಬ್ರಹ್ಮಾಂಡವನ್ನು ಊರ್ಧ್ವಮುಖವನಾಗಿ ಮಾಡಿ ದಿಕ್ಕು ವಿದಿಕ್ಕುಗಳೆಂಬ ಎಂಟು ವಿಭಾಗ ಮಾಡಿದನು *[ಭೂಯೋಽಷ್ಟಧಾ ಬಿಭೇಧ]*.

ಈ ಬ್ರಹ್ಮಾಂಡದಲ್ಲಿಯೆ 5 ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಪಂಚಭೂತ ತನ್ಮಾತ್ರ ಮನಸ್ಸು ಅಹಂಕಾರ ಮೊದಲಾದವುಗಳನ್ನು ಸೃಷ್ಟಿಸಿದನು. ಬ್ರಹ್ಮಾಂಡದ ಮಧ್ಯಾಕಾಶವಾದರೂ ವಿಚಿತ್ರ ವರ್ಣಗಳುಳ್ಳ ಮೇಘಗಳಿಂದ ತುಂಬಿರುತ್ತಿತ್ತು. ಅದರಿಂದ ಬಂದ ನೀರೆ ನದಿಗಳು. ಸರೋವರ ಸಮುದ್ರಗಳಾದವು. ಹೀಗಾಗಿ ಭೂಮಿಯು ಬಹುಯೋಜನ ವಿಸ್ತೃತಗಳಾದ ಪರ್ವತಗಳು ಮಹಾನದ್ಯಾದಿಗಳು, ಸಪ್ತಮಹಾಸಾಗರಗಳು, ಅವಶಿಷ್ಟ ಭೂಭಾಗಗಳಿಂದಲೂ ಅಸಹ್ಯ ಭಾರದಿಂದಾಗಿ ಭೂಮಿಯ ಅಭಿಮಾನಿ-ದೇವತೆಯು ಭೂಭಾರ ಸಹಿಸದೆ ಜಲಮಯವಾದ ಗರ್ಭೋದಕ ಮಹಾಸಮುದ್ರದಲ್ಲಿ ಮುಳುಗಿದಳು.

**ಪೀಡಿತಾ ಗುರುಭಿರ್ದೇವೀ ಪೃಥಿವೀ ವ್ಯಥಿತಾಽಭವತ್ ।**
**ಅಶಕ್ತಾ ವೈ ಧಾರಯಿತು ಮಧಃ ಸಾ ಪ್ರವಿವೇಶ ಹ ॥ 2 ॥**

ಭಗವಂತನ ಅಪಾರ ಸೃಷ್ಟಿ ವ್ಯಾಪಾರವನ್ನು ಸಹಿಸದ ಭೂಮಿಯು ಮುಳುಗಿ ಹೋದದ್ದನ್ನು ಕಂಡು, ಭೂದೇವಿಯ ಭಕ್ತಿಯುಕ್ತ ಪ್ರಾರ್ಥನೆಯಿಂದಲೂ ಅವಳಲ್ಲಿರುವ ಪ್ರೀತಿಯಿಂದಲೂ ಉದ್ಧರಿಸಬೇಕೆಂದು ಇಚ್ಛಿಸಿದನು.

**ಉದ್ಧಾರಾರ್ಥಂ ಮನಶ್ಚಕ್ರೇ ಲೋಕಾನಾಂ ಹಿತಕಾಮ್ಯಯಾ ॥ 3 ॥**

ಭೂಮಿಯು ಸ್ತೋತ್ರ ಮಾಡಿದ್ದು –

ಭಗವಂತನೇ, ಈ ಜಗತ್ತೆಲ್ಲವೂ ನಿನ್ನಿಂದ ಸೃಷ್ಟವಾಗಿ, ನಿನ್ನಿಂದ ಸ್ಥಿತಿ ಪಡೆದು ನಿನ್ನಿಂದಲೇ ಶಾಂತವಾಗುತ್ತದೆ. ಸಕಲ ಚರಾಚರ ಪ್ರಪಂಚವನ್ನು ನೀನೆ ಧರಿಸುವೆ. ನೀನು ಧರಿಸಿದ್ದನ್ನೆ ನಾನು ಧರಿಸುವೆನು. ನಾನು ಈಗ ಮುಳುಗಿದ್ದೇನೆ, ನನ್ನನ್ನು ಉದ್ಧರಿಸು.

**ತ್ರಾಯಸ್ವ ಮಾಂ ಸುರಶ್ರೇಷ್ಠ ತ್ವಾಮೇವ ಶರಣಂಗತಾಮ್ ॥ 4 ॥**

ಹೀಗೆ ಪ್ರಾರ್ಥಿಸಿದಾಗ ಭಗವಂತನು ವರಾಹವತಾರ ಧರಿಸಿದನು.

**ನೀಲಮೇಘ ಪ್ರತೀಕಾಶಂ ಮೇಘಸ್ತನಿತ ನಿಸ್ವನಮ್ ।**
**ಮಹಾಗಿರೇಃ ಸಂಹನನಂ ಶ್ವೇತ ದೀಪ್ತೋಗ್ರ ದಂಷ್ಟಿಣಮ್ ॥ 5 ॥**

ಮೊದಲು ವರಾಹನು ದಶಯೋಜನ ವಿಸ್ತಾರ ಶತಾದಿ ಯೋಜನ ವಿಸ್ತಾರವಾಗಿ ಬೆಳೆದು ನೀಲಬಣ್ಣದ ಮಹಾಪರ್ವತದಂತೆ ವರಾಹ ರೂಪಧರಿಸಿ ಗರ್ಜಿಸುತ್ತಾ, ಶ್ವೇತದ್ವೀಪದಂತಿರುವ ಕೋರೆದಾಡೆವುಳ್ಳವನಾಗಿ ಆವಿರ್ಭವಿಸಿದನು.

**ಪ್ರಭುಃ ಲೋಕಹಿತಾರ್ಥಾಯ ದಂಷ್ಟ್ರಾಗ್ರೇಣೋಜ್ಜಹಾರ ಗಾಮ್ ॥ 6 ॥**

ಸರ್ವಲೋಕಹಿತಕ್ಕಾಗಿ ಮುಳುಗಿದ್ದ ಭೂಮಿಯನ್ನು ಕೋರೆಹಲ್ಲಿನಿಂದೆತ್ತಿ ತಂದು ಕಕ್ಷೆಯಲ್ಲಿಟ್ಟನು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಭೂಮ್ಯುದ್ಧರಣ ಎಂಬಲ್ಲಿ
ಮೂವತ್ತನೆಯ ಅಧ್ಯಾಯವು ಸಮಾಪ್ತಿ

## ಅಥ ಏಕತ್ರಿಂಶೋಽಧ್ಯಾಯಃ

### ಲೋಕಗಳಲ್ಲಿ ಆಧಿಪತ್ಯ

**ಏವಂ ಯಜ್ಞವರಾಹೇಣ ಭೂತ್ವಾ ಭೂತ ಹಿತಾರ್ಥಿನಾ ।**
**ಉದ್ಧೃತ್ಯ ಪೃಥಿವೀ ದೇವೀ ಲೋಕಾನಾಂ ಹಿತಕಾಮ್ಯಯಾ ॥ 1 ॥**

ನಂತರ ವರಾಹನು ಈ ವಿಶಾಲಭೂಮಿಯಲ್ಲಿ ಉನ್ನತ ಪರ್ವತಗಳನ್ನೂ ಮಹಾನದಿಗಳು ಹರಿಯುವ ಮಾರ್ಗಗಳನ್ನು ಪಾವನತ್ವಾದಿ ಮಹಾತ್ಮೆಯನ್ನೂ ಸ್ನಾನಪಾನಾದಿಗಳಿಂದಾಗುವ ಫಲ ತಾರತಮ್ಯವನ್ನೂ ನಿರ್ಮಿಸಿದನು.

ಪೃಥಿವಿಯನ್ನು ಚತುರ್ದಲ ಪದ್ಮಾಕಾರವನ್ನಾಗಿ ಮಾಡಿ ಅದರಲ್ಲಿ ಭರತಖಂಡ ಕೇತುಮಾಲ-ಭದ್ರಾಶ್ವ ಕುರುಖಂಡಗಳನ್ನು ನಿರ್ಮಿಸಿ ನಾಲ್ಕು ಸಮುದ್ರಗಳನ್ನು ಕಲ್ಪಿಸಿದನು.

### ಮೇರುಸೃಷ್ಟಿ

ಹೀಗೆ ಭೂಮಿಯು ಮಧ್ಯಭಾಗದಲ್ಲಿ ಸುವರ್ಣಾತ್ಮಕ ಮೇರುಪರ್ವತವನ್ನು ನಿರ್ಮಿಸಿದನು. ಪೂರ್ವದಿಕ್ಕಿನಲ್ಲಿ ನೂರು ಯೋಜನವಾದ ಉದಯಪರ್ವತ ನಿರ್ಮಿಸಿದನು. ಆ ಪರ್ವತದಲ್ಲಿ ನಿರಂತರದಲ್ಲಿಯೂ ಫಲಪುಷ್ಪ ಬಿಡುವ ವೃಕ್ಷಲತಾದಿಗಳನ್ನು ನಿರ್ಮಿಸಿದನು.

ಹಾಗೆಯೆ ನೂರು ಯೋಜನ ಅಗಲ ಮುನ್ನೂರು ಯೋಜನ ಉದ್ದವಾದ 'ಸೌಮನಸ' ಪರ್ವತ ನಿರ್ಮಿಸಿ ಅದರಲ್ಲಿ ರತ್ನ ವೈಢೂರ್ಯಾದಿಗಳ ಖನಿಜವನ್ನಾಗಿಸಿದನು. ಇದನ್ನೆ 'ಕೈಲಾಸಪರ್ವತ'ವೆನ್ನುವರು.

ಮತ್ತೊಂದೆಡೆ 'ಶತಶೃಂಗ' ಪರ್ವತವನ್ನೂ ಅದರಲ್ಲಿ ಸಾವಿರಾರು ಉಪಪರ್ವತಗಳನ್ನೂ ನಿರ್ಮಿಸಿದನು.

ಇನ್ನೊಂದೆಡೆಯಲ್ಲಿ ಹಿಮಾಲಯ ಪರ್ವತವನ್ನೂ ಗಹನಗಳಾದ ದುರ್ಗ ಪ್ರದೇಶಗಳನ್ನೂ ಗುಹೆಗಳನ್ನೂ ನಿರಂತರ ಹರಿಯುತ್ತಿರುವ ಶೀತಲಗಂಗಾದಿ ನದಿಗಳನ್ನೂ, ಅವುಗಳನ್ನು ದ್ವಿಜೋತ್ತಮರು ಸೇವಿಸಿ ಪಾವನರಾಗುವಂತೆ ಮಾಡಿದನು.

ಇದನ್ನೆ 'ವಸೋರ್ಧಾರಾ' ಎಂದು ಶ್ರುತಿಗಳಲ್ಲಿ ಹೇಳಿದೆ.

ಈ ನದಿಗಳೆಲ್ಲ ಪೂರ್ವದಿಕ್ಕಿನಲ್ಲಿ ಪ್ರವಹಿಸುತ್ತಾ ಪರಮಪಾವನಗೊಳಿಸುತ್ತಾ ನೂರಾರು ಮುಖಗಳಿಂದ ಸಮುದ್ರ ಸೇರುವುವು.

## ಭೂ ವಿಸ್ತಾರ ವರ್ಣನೆ

ನಂತರ 'ಋಷಭಾಚಲ'ವೆಂಬ ಬಹು ಯೋಜನ ವಿಸ್ತಾರ ಪರ್ವತವನ್ನು, ಪುಷ್ಪಹಾಸವೆಂಬ ಪರ್ವತವನ್ನೂ ನೂರು ಯೋಜನವಿರುವ ಮಹೇಂದ್ರ ಪರ್ವತವನ್ನೂ ಸಂಪತ್ ಸಮೃದ್ಧ ಮಲಯ ಪರ್ವತವನ್ನೂ ಅವುಗಳಲ್ಲಿ ಪುಣ್ಯ ನದಿಗಳು ಹರಿಯುವಂತೆಯೂ ಮಾಡಿದನು.

ಹೀಗೆ ಮೈನಾಕ-ವಿಂಧ್ಯಪರ್ವತಗಳೂ ರಚಿತವಾದವು.

ಪಶ್ಚಿಮದಲ್ಲಿ ಅಸ್ತಾಚಲವನ್ನೂ, ಇನ್ನೂ ಅನೇಕ ಉಪಪರ್ವತಗಳನ್ನು ನಿರ್ಮಿಸಿ ಪಾವಿತ್ರ್ಯತೆಗಾಗಿ ತನ್ನ ಸನ್ನಿಧಾನವಿಟ್ಟನು.

ವರಾಹಪರ್ವತ, ಸಹಸ್ರಕೂಟ, ಪರ್ವತ ನಿರ್ಮಿಸಿ 'ಘೃತಧಾರೆ'ಯೆಂಬ ನದಿಯನ್ನು, ಉತ್ತರದಲ್ಲಿ ಅತೀ ಎತ್ತರವಾದ 'ಸೌಮ್ಯ'ವೆಂಬ ಪರ್ವತ ನಿರ್ಮಿಸಿದನು. ಉತ್ತರದಿಕ್ಕಿನಲ್ಲಿಯೂ ಅನೇಕ ಪುಣ್ಯತೀರ್ಥಗಳೂ ಇವೆ.

## ಪರ್ವತಗಳಿಗೆ ರೆಕ್ಕೆಗಳು

ಈ ಪರ್ವತಗಳಿಗೆ ರೆಕ್ಕೆಗಳಿದ್ದು ಆಗಾಗ್ಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂಚರಿಸುತ್ತಿದ್ದವು. ಇದು ಭಗವಂತನದೆ ಕೊಡಿಗೆ.

**ಸರ್ವೇ ಚೈವ ಕ್ಷಿತಧರಾಃ ಸಪಕ್ಷಾಃ ಕಾಮರೂಪಿಣಃ ॥ 2 ॥**

ಇದರಿಂದಾಗಿ ಪ್ರಾಣಿಗಳ ಸಮುದಾಯವಿರುವ ಪ್ರದೇಶದಲ್ಲಿ ಹಾರಿ ಬಂದಾಗ ಪರ್ವತಗಳ ಅಡಿಗೆ ಸಿಕ್ಕಿ ಸಾವಿರಾರು ಪ್ರಾಣಿಗಳು ಮೃತರಾಗುತ್ತಿದ್ದರು.

ಇಂದ್ರದೇವನು ರೆಕ್ಕೆಗಳನ್ನು ಕತ್ತರಿಸಿ ಹಾಕಿದ. ಮೈನಾಕನನ್ನು ಮಾತ್ರ ವಾಯುದೇವನನ್ನು ರೆಕ್ಕೆ ಸಹಿತ ಸಮುದ್ರಕ್ಕೆ ಹಾಕಿದ.

ಅಂದಿನಿಂದ ಪರ್ವತಗಳಿಗೆ 'ಅಚಲ' ಎಂದಾಯಿತು.

## ಹಿರಣ್ಯಗರ್ಭಾದಿ ಉತ್ಪತ್ತಿ

ಮುಂದೆ ವರಾಹನು ಸ್ಥಾವರ ಜಂಗಮಾತ್ಮಕ ಪ್ರಾಣಿಗಳನ್ನು ಸೃಷ್ಟಿಸಲಿಚ್ಛಿಸಿದನು. ಹೀಗೆ ಸಂಕಲ್ಪಿಸಿದ ಕೂಡಲೇ ಅವನ ಮುಖದಿಂದ ಪುರುಷರೂಪಿ ಬ್ರಹ್ಮದೇವ ಹೊರಬಂದು ನನ್ನ ಸೃಷ್ಟಿಗೆ ಏನು ಪ್ರಯೋಜನವೆಂದಾಗ,

## ಬ್ರಹ್ಮನಿಂದ ಪ್ರಪಂಚ ವಿಸ್ತಾರ

**ಏಷಪ್ರಜಾಪತಿಃ ಪೂರ್ವಮಭವದ್ ಭುವನಾಧಿಪಃ ॥ 3 ॥**

ದೇವದೇವನು ಮಂದಹಾಸದಿಂದ 'ಅನೇಕ ರೂಪಗಳನ್ನು ಸೃಷ್ಟಿಸಿ ಈ ಪ್ರಪಂಚ ವಿಸ್ತಾರಗೊಳಿಸು' ಎಂದನು.

ಈ ಪ್ರಪ್ರಥಮ ಪುರುಷನೆ ಹಿರಣ್ಯಗರ್ಭನೆಂದು ಪ್ರಸಿದ್ಧನಾಗಿರುವನು.

ಬ್ರಹ್ಮದೇವನು ಸೃಷ್ಟಿ ಹೇಗೆ ಮಾಡುವುದೆಂದು ಚಿಂತಿಸುತ್ತಿರುವಾಗಲೇ 'ಓಂಕಾರವು' ಕೇಳಿಸಿತು. ಅದನ್ನು ಭೂ-ಅಂತರಿಕ್ಷ ಸ್ವರ್ಗಲೋಕಗಳಲ್ಲಿಯೂ ಕೇಳಿಸುವಂತೆ ಉಚ್ಚರಿಸಿದನು.

ಇದರಿಂದ ಓಂಕಾರದ ಅರ್ಥವಾದ ಭೂಮಿ-ಆಕಾಶ-ಸ್ವರ್ಗಗಳೆಂಬ ಮೂರು ಲೋಕಗಳೂ, *ಭೂಃ ಭುವಃ ಸ್ವಃ* ಯೆಂಬ ವ್ಯಾಹೃತಿಯು ಅಭಿವ್ಯಕ್ತವಾಯಿತು.. ನಂತರ ಸವಿತೃದೇವತಾಕವಾದ ಗಾಯತ್ರಿ ಪುರುಷಸೂಕ್ತ ಸಕಲ ವೇದಗಳನ್ನೂ ಚಿಂತಿಸಿದನು.

ಈ ಓಂಕಾರ ವ್ಯಾಹೃತಿ ಗಾಯತ್ರೀ ಪುರುಷಸೂಕ್ತಗಳನ್ನೆ ಧ್ಯಾನಿಸುತ್ತಿರುವಾಗ ಭಗವಂತನ ನಿರ್ದೋಷ ಗುಣಪೂರ್ಣತ್ವಾದಿ ಮಹಿಮೆಗಳನ್ನು ಕಂಡನು.

## ಸನಕಾದಿ ಸೃಷ್ಟಿ

**ತತಸ್ತಸ್ಯೈವ ಮನಸಃ ಸನಃ ಸನಕ ಏವ ಚ ।**
**ಸನಾತನಶ್ಚ ಭಗವಾನ್ ವರದಶ್ಚ ಸನಂದನಃ ॥ 4 ॥**

ಬ್ರಹ್ಮನ ಮನಸ್ಸಿನಿಂದಲೇ ಸನ, ಸನಕ, ಸನಾತನ, ಸನಂದನ, ಸನತ್ಕುಮಾರನು, ಸನತ್ಸುಜಾತರೆಂಬ ಆರು ಮಂದಿ ಊರ್ಧ್ವರೇತಸ್ಕರಾದ ಮುನಿಗಳಾದರು.

## ಮರೀಚ್ಯಾದಿ ಸೃಷ್ಟಿ

ನಂತರ ಬ್ರಹ್ಮದೇವನು ಮರೀಚಿ – ಅತ್ರಿ – ಪುಲಸ್ತ್ಯ – ಪುಲಹ – ಕ್ರತು – ಭೃಗು – ಅಂಗೀರಸ – ಮನುಯೆಂಬ ಎಂಟು ಮಂದಿ ಮಹರ್ಷಿಗಳನ್ನು ಸೃಷ್ಟಿಸಿದನು. ಪಿತೃದೇವತೆಗಳೂ ಸೃಷ್ಟರಾದರು.

ಹೀಗೆ ಸಾವಿರಾರು ವರ್ಷ ಕಳೆಯುತ್ತಿದ್ದಂತೆ ಪ್ರಜೆಗಳ ಸಂಸಾರವೆ ಲೋಕದಲ್ಲಿ ತುಂಬಿತು.

ಹೀಗೆ ಪ್ರತಿಯುಗದಲ್ಲಿ ಹುಟ್ಟುವುದು, ಸ್ಥಿತಿ ನಂತರ ಸಾಯುವುದು ಇದೊಂದು ಭಗವಂತನ ಲೀಲೆಯಾಯಿತು.

## ದಕ್ಷಾದಿಗಳ ಜನ್ಮ

**ಅಂಗುಷ್ಠಾದ್ ದಕ್ಷಿಣಾದ್ ದಕ್ಷಃ ಉತ್ಪನ್ನೋ ಭಗವಾನ್ ಋಷಿಃ ।**
**ತಸ್ಯೈವ ಚ ಪುನರ್ಭಾರ್ಯಾ ವಾಮಾಂಗುಷ್ಠಾದ ಜಾಯತ ॥ 5 ॥**

ಬ್ರಹ್ಮದೇವನ ಬಲ ಅಂಗುಷ್ಠದಿಂದ ದಕ್ಷನೂ, ಎಡ ಅಂಗುಷ್ಠದಿಂದ ಅವನ ಭಾರ್ಯೆಯೂ ಜನಿಸಿದರು. ದಕ್ಷನು ಅವಳಲ್ಲಿ ಅನೇಕ ಲೋಕಮಾತೆ-ಯೆರೆನಿಸಿದ ಸ್ತ್ರೀಯರನ್ನು ಪಡೆದ. ಅವರಲ್ಲಿ ಅದಿತಿ, ದಿತಿ, ದನು, ಕದ್ರೂ ಮೊದಲಾದ ಹದಿಮೂರು ಮಂದಿ ಕಶ್ಯಪರಿಗೂ, ಅರುಂಧತೀ, ವಸು, ಯಾಮಿ, ಲಂಬಾ, ಮೊದಲಾದವರನ್ನು ಬ್ರಹ್ಮಪುತ್ರ ಮನುವಿಗೂ ವಿವಾಹ ಮಾಡಿದ.

ಧರ್ಮನಿಗೆ ಕೀರ್ತಿ, ಧೃತಿ, ಪುಷ್ಟಿ, ಬುದ್ಧಿ, ಮೇಧಾದಿ, ಹತ್ತು ಮಂದಿಯನ್ನು ವಿವಾಹ ಮಾಡಿಕೊಟ್ಟ.

ಅತ್ರಿಗೋತ್ರದಲ್ಲಿ ಚಂದ್ರನಿಗೆ ಅಶ್ವಿನ್ಯಾದಿ 27 ನಕ್ಷತ್ರ ದೇವತೆಗಳನ್ನೂ ವಿವಾಹ ಮಾಡಿದ, ಚಂದ್ರನಿಗೆ ರೋಹಿಣಿಯು ಮುದ್ದು ಮಡದಿಯಾಗಿದ್ದಳು.

## ಕಶ್ಯಪ ಸಂತಾನ

ಕಶ್ಯಪರಿಂದ ಅದಿತಿಯಲ್ಲಿ ಅರ್ಯಮಾ ವರುಣ ಮಿತ್ರ ಮೊದಲಾದ ಆದಿತ್ಯರು ಹನ್ನೆರಡು ಮಂದಿಯಾದರು. ಇದರಲ್ಲಿ ವಿಷ್ಣುವಿನ ಒಂದು ರೂಪವೂ ಸೇರಿದೆ.

## ದಿತಿಯಲ್ಲಿ ದೈತ್ಯರು

**ದಿತ್ಯಾಃ ಪುತ್ರದ್ವಯಂ ಜಜ್ಞೇ ಕಶ್ಯಪಾದಿತಿ ನಃ ಶ್ರುತಮ್ ॥ 6 ॥**

ದಿತಿಗೆ ಕಶ್ಯಪರಿಂದ ಹಿರಣ್ಯಾಕ್ಷ-ಹಿರಣ್ಯಕಶಿಪು ಎಂಬ ಇಬ್ಬರು ಪುತ್ರರಾದರು.

ಹಿರಣ್ಯಕಶಿಪುವಿಗೆ ಕಯಾಧುವಿನಲ್ಲಿ ಪ್ರಹ್ಲಾದ – ಅನುಹ್ಲಾದ – ಸಂಹ್ಲಾದಃ ಹ್ಲಾದ ಹ್ರದ ಅನುಹ್ರದರೆಂಬ ಐದು ಮಂದಿ ಪುತ್ರರು.

ಪ್ರಹ್ಲಾದನಿಗೆ ವಿರೋಚನ – ಜಂಭ–ಸುಜಂಭರೆಂಬ ಮೂವರು ಮಕ್ಕಳು. ವಿರೋಚನನ ಮಗನೆ ಬಲಿಚಕ್ರವರ್ತಿ. ಅವನಿಗೆ ಬಾಣಾಸುರನು, ಬಾಣನಿಗೆ ಇಂದ್ರದಮನನು ಆದನು.

## ದನು ಸಂತಾನ

ದನುವಿನಲ್ಲಿ ಕಶ್ಯಪರಿಂದಲೇ ವಿಪ್ರಚಿತ್ತಿಯೆಂಬ ದಾನವನಾದನು. ಇವನು 'ಅಕ್ರೋಧಾ' ಯೆಂಬುವಳಲ್ಲಿ ರೌದ್ರರು, ಕ್ರೂರರೂ ಆದ ಮಕ್ಕಳನ್ನು ಪಡೆದನು. ಇವರೆ ಕ್ರೋಧವಶ ದೈತ್ಯರು.

ಸಿಂಹಿಕಾಯೆಂಬುವಳಲ್ಲಿ ವಿಪ್ರಚಿತ್ತಿಯು ಸೈಂಹಿಕೇಯೆರೆಂಬ ದೈತ್ಯರನ್ನು ಪಡೆದನು. ಇವರಲ್ಲಿ ಸೂರ್ಯ–ಚಂದ್ರ ವಿವಮರ್ದನನಾದ ರಾಹುವು ಜ್ಯೇಷ್ಠನು.

## ನಾಗಗಳ ಸಂತಾನ

ಕದ್ರೂ ದೇವಿಯು ಸಾವಿರ ಹೆಡೆಗಳುಳ್ಳ ಶೇಷದೇವ, ವಾಸುಕೀ, ತಕ್ಷಕ ಮೊದಲಾದ ಸರ್ಪಗಳು ಜನಿಸಿದವು.

ವಿನತೆಯಲ್ಲಿ ತಾರ್ಕ್ಷ್ಯ–ಗರುಡ–ಅರಿಷ್ಟನೇಮಿ–ಅರುಣ–ಆರುಣಿರೆಂಬ ಪುತ್ರರಾದರು.

ಪ್ರಾಧಾಯೆಂಬುವಳು ದೇವತೆಗಳ ವರದಿಂದಾಗಿ ಎಂಟು ಅಪ್ಸರರನ್ನು ಪುತ್ರರನ್ನಾಗಿ ಪಡೆದಳು. ಇವಳೇ, ಅನವದ್ಯಾ–ಅನೂಕಾ–ಅನೂನಾ–ಅನಂಗ –ಸುಭಗಾ–ಭಾಸೀ ಎಂಬ ಕನ್ಯೆಯರನ್ನೂ ಪಡೆದಳು.

ಹೀಗೆ 'ಮುನಿ'ಯೆಂಬುವಳಲ್ಲಿಯೂ ಅಲಂಬುಸಾ, ಮಿಶ್ರಕೇಶೀ ತಿಲೋತ್ತಮಾ ಸುರೂಪಾ ಲಕ್ಷಣಾದಿಗಳು ಜನಿಸಿದರು.

ಮೇನಕಾ ರಂಭಾ ವಿಶ್ವಾಚೀ ಘೃತಾಚೀ ಊರ್ವಶ್ಯಾದಿಗಳು ಜನಿಸಿದರು. ಹೀಗೆ ಬ್ರಹ್ಮದೇವನು ಅವರವರ ಗುಣಕರ್ಮಾನುಸಾರವಾಗಿ ಅವರವರನ್ನು ಸೃಷ್ಟಿಸಿ – ಅವರವರನ್ನು ಆಯಾಯ ವ್ಯಾಪಾರಗಳಲ್ಲಿ ಅಧಿಪತಿಯನ್ನಾಗಿ ಮಾಡಿದನು.

## ಬ್ರಹ್ಮದೇವನ ಆಧಿಪತ್ಯ ವ್ಯವಸ್ಥೆ

**ತ್ರಯಾಣಾಮಪಿ ಲೋಕಾನಾಮಾದಿತ್ಯಾನಾಂಚ ಭಾರತ ।**
**ಚಕಾರ ಶಕ್ರಂ ರಾಜಾನಮಾದಿತ್ಯ ಸಮತೇಜಸಮ್ ॥ 7 ॥**

ನಂತರ ಬ್ರಹ್ಮದೇವನು ಆಯಾಯ ದೇವತೆಗಳನ್ನು ಅಧಿಪತಿಯನ್ನಾಗಿ ಮಾಡಲುದ್ಯುಕ್ತನಾದನು. ಇಂದ್ರದೇವನನ್ನು ದೇವರಾಜನನ್ನಾಗಿಯೂ ಮಾಡಿದನು.

ಯಜ್ಞ - ತಪಸ್ಸು - ಗ್ರಹ - ನಕ್ಷತ್ರ - ಬ್ರಾಹ್ಮಣ - ಔಷಧಿ - ವನಸ್ಪತಿಗಳಿಗೂ ಚಂದ್ರನನ್ನು ನಿಯಮಿಸಿದನು.

ಸಕಲ ಪ್ರಜಾಪತಿಗೆ ಅಧಿಪತಿಯನ್ನಾಗಿ ದಕ್ಷನು ನಿಯುಕ್ತನಾದನು. ಜಲಾಶಯಗಳಿಗೆ ವರುಣ, ಕಾಲ ಮೃತ್ಯುಸ್ವರೂಪನಾದ ಅಗ್ನಿಯನ್ನು ಪಿತೃಗಳಿಗೂ, ಗಂಧಾದಿ ಪೃಥಿವ್ಯಾಪಿ ಮನುಷ್ಯಾದಿ ಸಕಲ ಪ್ರಾಣಿಗಳಿಗೂ ಪ್ರಧಾನ ವಾಯುವನ್ನೂ, ಸಮಸ್ತ ಭೂತ-ಪ್ರೇತ ಪಿಶಾಚ, ಮೃತ್ಯು ಉತ್ಪಾತ ಬಲಗ್ರಹಾದಿ, ಮಹಾವ್ಯಾಧಿಗಳಿಗೂ ಸಮಸ್ತ ವ್ರತ ನಿಯಮಾದಿಗಳಿಗೆ ಮಹಾರುದ್ರನನ್ನೂ, ಸರ್ವಯಕ್ಷರಕ್ಷ ಗುಹ್ಯಕರಿಗೂ ಧನಾದಿ ಸಂಪತ್ತು ರತ್ನಾದಿಗಳಿಗೆ ಕುಬೇರನನ್ನೂ, ಕೋರೆಹಲ್ಲುಗಳುಳ್ಳ ಸರ್ಪಗಳಿಗೆ ಶೇಷದೇವನನ್ನೂ, ನಾಗಗಳಿಗೆ ವಾಸುಕಿಯು, ಉಳಿದ ಉರಗಗಳಿಗೆ ತಕ್ಷಕನಾದನು. ಸಾಗರಗಳು ಮೇಘಗಳು ವೃಷ್ಟಿಗಳಿಗೂ ಪರ್ಜನ್ಯನೂ, ಗಂಧರ್ವರಿಗೆ ಚಿತ್ರರಥನೂ, ಅಪ್ಸರರಿಗೆ ಕಾಮನೂ, ಚತುಷ್ಪಾದ ಪ್ರಾಣಿಗಳಿಗೆ ನಂದಿಯೂ, ದೈತ್ಯರಿಗೆಲ್ಲ ಹಿರಣಾಕ್ಷನೂ, ಅಶುಭ ಉತ್ಪಾತಗಳಿಗೆ ರಾಹುವೂ, ತಿಥಿ ಪಕ್ಷ ಕರಣ ಮೊದಲಾದ ಕಾಲಗಳಿಗೆ ಸಂವತ್ಸರಾಭಿಮಾನಿಯೂ, ಇಂದ್ರಾದಿಗಳಿಗೆ ಅಷ್ಟ ದಿಕ್ಪಾಲಕತ್ವವನ್ನೂ ನೀಡಿದನು.

## ದೇವಾಸುರ ಯುದ್ಧ

**ಕದಾಚಿತ್ ತು ಸಪಕ್ಷಾಸ್ತೇ ಪರ್ವತಾಃ ಧರಣೀಧರಾಃ ।**
**ತದಾಸುರಾಣಾಂ ನಿಲಯಂ ಹಿರಣ್ಯಾಕ್ಷೇಣ ಪಾಲಿತಮ್ ॥ 8 ॥**

ಭಗವಂತ ಮಾಯಾ ಪ್ರಭಾವದಿಂದ ಹಿಂದೆ ಪರ್ವತಗಳಿಗೆ ರೆಕ್ಕೆಗಳಿದ್ದವು. ತಮ್ಮ ಸ್ಥಾನವನ್ನು ಬಿಟ್ಟು ಹಾರಾಡಿ ಲೋಕೋಪದ್ರವಕಾರಿಯಾಗಿದ್ದವು. ಒಂದು ಬಾರಿ ಈ ಪರ್ವತಗಳು ಹಾರುತ್ತಾ ಹಿರಣ್ಯಾಕ್ಷಪಾಲಿತವಾದ ಸ್ಥಾನಕ್ಕೆ ಬಂದು ಹಿರಣ್ಯಾಕ್ಷನಿಗೆ - ಮಿತ್ರರೇ! ಲೋಕದಲ್ಲಿ ಪ್ರಧಾನಗಳಾದ ಲೋಕಗಳ

ಆಧಿಪತ್ಯವು ದೇವತೆಗಳಿಗೆ ನೀಡಲಾಗಿದ್ದು, ಅವರು ದರ್ಪದಿಂದ ನೀವು ಜ್ಯೇಷ್ಠರಾಗಿದ್ದರೂ ಅವರೆ ಸಾರ್ವಭೌಮರಾಗಿರುವರು. ಇದು ಅನ್ಯಾಯ-ವೆಂದವು. ಈ ಮಾತುಗಳು ದೈತ್ಯರಿಗೆಲ್ಲ ಇದು ಸರಿಯೆಂದು ತೋರಿತು. ಲೋಭದಿಂದಾಗಿ ದೇವತೆಗಳ ಸಕಲ ಅಧಿಕಾರವನ್ನು ತಾವೇ ಪಡೆದುಕೊಳ್ಳಲು ಯುದ್ಧವನ್ನು ಸಾರಿದರು. ಹಿರಣ್ಯಾಕ್ಷನ ಆದೇಶದಂತೆ ನಾನಾವಿಧ ಆಯುಧಧಾರಿಗಳಾಗಿ ದೇವತೆಗಳ ಮೇಲೆ ಬಿದ್ದರು.

ದೇವತೆಗಳೆಲ್ಲರೂ ಈ ವಾರ್ತೆ ತಿಳಿದು ಯುದ್ಧ ಸನ್ನಾಹ ಪ್ರಾರಂಭಿಸಿದರು. ಚದುರಂಗ ಬಲದೊಂದಿಗೆ ಮಹಾಯುದ್ಧಧರಿಸಿ ಇಂದ್ರನೊಂದಿಗೆ ಹೊರಟರು.

ಹಿರಣ್ಯಾಕ್ಷನೂ ಪುರಂದರನನ್ನು ಎದುರಾದನು. ಹಾಗೂ ತೀಕ್ಷ್ಣವಾದ ಆಯುಧಗಳಿಂದ ದೇವಸೈನ್ಯವನ್ನು ಹೊಡೆದನು. ದಾರಣಗಳಾದ ಅನೇಕ ಅಸ್ತ್ರಗಳನ್ನು ಬಾಣಗಳು ಕೊಡಲಿಗಳಿಂದ ಹೊಡೆದರು.

ದೇವತೆಗಳೂ ಸಹ ಮಹಾಸುರನಾದ ಹಿರಣ್ಯಾಕ್ಷನನ್ನು ಎದುರಿಸಿದರು. ಎರಡೂ ಕಡೆಯ ಸೈನ್ಯದವರು ನುಗ್ಗಿ ಹೊಡೆದಾಡಿಕೊಳ್ಳಲಾರಂಭಿಸಿದರು. ಗದಾಪ್ರಹಾರ ಬಾಣಗಳ ಸುರಿಮಳೆ ಬಾಹುಯುದ್ಧಗಳಿಂದ ಹೊಡೆದು ಕೊಂಡರು.

ರಣಾಜಿರದಲ್ಲಿ ಭಯಂಕರ ಹಿರಣ್ಯಾಕ್ಷನಿಂದ ಮರ್ದಿತರಾದ ದೇವಾದಿಗಳು ಎಲ್ಲೂ ಚಲಿಸದಂತೆ ಸ್ತಬ್ಧರಾದರು. ದೈತ್ಯೇಂದ್ರನ ಸಂಮೋಹನಾಸ್ತ್ರದಿಂದ ದೇವೇಂದ್ರನೂ ಸಹ ಓಡಿ ಹೋಗಲಾಗಲಿಲ್ಲ.

## ವರಾಹನಿಂದ ಹಿರಣ್ಯಾಕ್ಷ ವಧೆಯು

ಈ ಸಂದರ್ಭದಲ್ಲಿ ಭಕ್ತರಾದ ದೇವತೆಗಳ ಅವಸ್ಥೆಯನ್ನು ನೋಡಿ ಭಕ್ತವತ್ಸಲನಾದ ಶ್ರೀಹರಿಯು ಮಹಾವರಾಹ ರೂಪದಿಂದ ಹಿರಣ್ಯಾಕ್ಷನನ್ನು ಕೊಲ್ಲಲು ಆವಿರ್ಭೂತನಾದನು.

**ತತೋ ದೈತ್ಯದ್ರವಕರಂ ಪೌರಾಣಂ ಶಂಖಮುತ್ತಮಮ್ ।**
**ಧಮನ್ ವಕ್ತ್ರೇಣ ಬಲವಾನ್ ಆಕ್ಷಿಪದ್ ದೈತ್ಯಜೀವಿತಮ್ ॥ 9 ॥**

ವರಾಹನು ತನ್ನ ಪುರಾತನವಾದ ಶಂಖವನ್ನು ಜೋರಾಗಿ ಊದಿದನು. ಕರಗಳಲ್ಲಿ ಚಕ್ರಗದಾದಿಗಳನ್ನು ಹಿಡಿದು ನಾನೆ ಪುರುಷೋತ್ತಮನೆಂದು ತಿಳಿಸುತ್ತಾ ಶಂಖನಾದದಿಂದ ದೈತ್ಯರ ಹೃದಯವನ್ನು ನಡುಗಿಸಿದನು.

ದೈತ್ಯರೆಲ್ಲರೂ ಧೈರ್ಯ ಹೊಂದಿ ವರಾಹನ ಮುಂದೆ ಬಂದು ನಿಂತರು. ಹಾಗೂ ಅನೇಕ ಆಯುಧಗಳಿಂದ ವರಾಹನನ್ನು ಹೊಡೆದರು.

## ಹಿರಣ್ಯಾಕ್ಷವಧೆ

ಆದರೂ ವರಾಹನು ಅಚಲ ಪರ್ವತದಂತೆ ನಿಂತಿದ್ದನು. ಹಿರಣ್ಯಕನು ತನ್ನ ಮಹಾಶಕ್ತಿಯೆಂಬ ಆಯುಧದಿಂದ ವರಾಹನ ಎದೆಗೆ ಬಿಸಟನು.

**ಹುಂಕಾರೇಣೈವ ನಿರ್ಭರ್ತ್ಸ್ಯ ಪಾತಯಾ ಮಾಸ ಭೂತಲೇ ॥ 10 ॥**

ಆದರೆ ಆ ಆಯುಧವು ವರಾಹನ ಬಳ ಬರುತ್ತಿದ್ದಂತೆ 'ಹುಂ' ಎಂದು ಘರ್ಜಿಸಿ ಕೆಳಗೆ ಬೀಳಿಸಿದನು. ಹೀಗೆ ಹಿರಣ್ಯಾಕ್ಷನ ಶಕ್ತಿಪಾತವಾದಾಗ ಬ್ರಹ್ಮದೇವನು ಸಾಧು ಸಾಧು ಎಂದನು.

## ಚಕ್ರಪ್ರಯೋಗ

ಶಕ್ತಿ ಆಯುಧವು ಭೂಮಿಗೆ ಬೀಳಿಸಿದ ವರಾಹನು ತನ್ನ ಮಹಾಶಕ್ತಿಯುತವಾದ ಸಾವಿರಾರು ಅಲಗುಗಳಿಂದ ಕೂಡಿದ ಚಕ್ರವನ್ನು ದೈತ್ಯನ ಮೇಲೆ ಪ್ರಯೋಗಿಸಿದನು.

**ಓರಣ್ಮಯಂ ವಜ್ರಹತಂ ಮೇರುಶೃಂಗಗಮಿವೋತ್ತಮಮ್ ।**
**ತತಃ ಸ್ಥಿತಸ್ಯೈವ ಶಿರಸ್ತಸ್ಯ ಭೂಮೌ ಪಪಾತ ಹ ॥ 11 ॥**

ಆ ಕ್ಷಣವೆ ವಜ್ರಾಘಾತದಿಂದ ಹಿರಣ್ಮಯ ಮೇರು ಪರ್ವತವು ಬೀಳುವಂತೆ ಬುಡ ಕಡಿದ ಮರುಭೂಮಿಗೆ ಉರುಳುವಂತೆ ದೈತ್ಯನ ಶಿರಸ್ಸು ಉರುಳಿತು.

ಹಿರಣಾಕ್ಷ ನು ಚಕ್ರದಿಂದ ಹತನಾದ ಮೇಲೆ ಭಯಗ್ರಸ್ತ ದೈತ್ಯ ಸೈನ್ಯವೆಲ್ಲ ಪಲಾಯನ ಮಾಡಿತು. ಶ್ರೀಹರಿಯ ಅನುಗ್ರಹದಿಂದಾಗಿ ದೇವತೆಗಳಿಗೆ ಜಯ ದೊರೆಯಿತು.

ಹಿರಣ್ಯಾಕ್ಷನು ಮಹಾಲೋಭಗಳಿಗೆ ಸಂಕೇತನು. ಲೋಭಕ್ಕೆ ಸಹಾಯ ಮಾಡಲು ದೈತ್ಯರಂತೆ ಇತರ ಕಾಮನೆಗಳು. ಇಂತಹ ದುಷ್ಟೂರವಾದ ಕಾಮ ಹೊಂದಲು ಮಹಾಲೋಭಗಳನ್ನು ತೋರಿಸುತ್ತಾರೆ. ಇಂತಹ ಸಂದರ್ಭದಲ್ಲಿ ಶಾಸ್ತ್ರಜನ್ಯಜ್ಞಾನವೂ ಮರೆತು ಹೋಗುತ್ತದೆ. ಇಂದ್ರದೇವನೂ ಸಹ ಹಿರಣ್ಯಾಕ್ಷನ ಸಮ್ಮೋಹನೆಗೆ ಒಳಗಾದಂತೆ ಇಂತಹ ಸಂದರ್ಭದಲ್ಲಿ ಭಗವಂತನ ಹೊರತು ರಕ್ಷಕರಿರುವುದಿಲ್ಲ. ಭಗವಂತನನ್ನು ನೆನೆದಾಗ ಶಂಖ ಹಾಗೂ ಚಕ್ರಗಳಿಂದ

ಮಹಾಲೋಭಿಯನ್ನು ಉರುಳಿಸಿದಂತೆ ವೇದವೇದಾಂತವೆಂಬ ಜ್ಞಾನದಿಂದ ನಮ್ಮ ಮಹಾಮೋಹ ನಾಶ ಮಾಡಿಕೊಳ್ಳಬೇಕು.

ವರಾಹನು ಹಿರಣ್ಯಾಕ್ಷನನ್ನು ಕೊಂದಿದ್ದಲ್ಲದೆ ಇಂದ್ರಾದಿ ದೇವತೆಗಳು ಸ್ತಂಭನ ರೂಪಬಂಧನದಿಂದಲೂ ಬಿಡಿಸಿದನು.

ಇದರಿಂದ ಸಂತುಷ್ಟರಾದ ದೇವತೆಗಳು ವರಾಹನನ್ನು ನಾನಾ ವಿಧ ಸ್ತೋತ್ರಗಳಿಂದ ಪ್ರಾರ್ಥಿಸಿದರು.

ಶ್ರೀಹರಿಯೇ! ನಾವೆಲ್ಲರೂ ನಿನ್ನ ಪಾದಸೇವೆಯನ್ನೆ ಬಯಸುತ್ತಿರುವವರು ಎಂದು ಪ್ರಾರ್ಥಿಸಲು – ಹರಿಯು ಇಂದ್ರಾದಿದೇವತೆಗಳೇ! ನನ್ನ ಆಜ್ಞಾನುಸಾರವಾಗಿ ಹಿಂದೆ ಹೇಗಿತ್ತು ಹಾಗೆಯೇ ಪುನಃ ನಿಮ್ಮ ಪದಗಳು ಪ್ರಾಪ್ತವಾಗಿವೆ. ಅದನ್ನು ಹೊಂದಿ ನ್ಯಾಯ ರೀತಿಯಲ್ಲಿ ನನ್ನಿಂದಲೇ ಉಪದೇಶಿಸಲ್ಪಟ್ಟ ನನ್ನ ಆಜ್ಞಾರೂಪ ವೇದಗಳನ್ನು ಯಥಾವತ್ತಾಗಿ ಪರಿಪಾಲಿಸಿ ಸುಖವಾಗಿರಿ.

ದೇವೇಂದ್ರನೇ! ಯಾರು ವ್ರತನಿಯಮಾದಿಗಳಲ್ಲಿ ಆಸಕ್ತರಾಗಿದ್ದು ಯಜ್ಞ–ಯಾಗಾದಿ ನಿರತರೂ ಸದ್ಧರ್ಮಶೀಲರೂ, ಸತ್ಯಸಂಧರೂ, ಅಸೂಯಾ ರಹಿತರೂ, ದಾನಶೂರರು, ಸ್ವವರ್ಣಾಶ್ರಮಾಚಾರ ನಿರತರೂ ಆದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೂ ಸಹ ಅದರ ಫಲರೂಪವಾದ ಸ್ವರ್ಗಾದಿ ಉತ್ತಮ ಲೋಕ ಹೊಂದಿ ಸುಖವಾಗಿರಲಿ.

ಸದ್ಧರ್ಮರಿಗೆ ಸುಖವೂ ಶ್ರೇಯಸ್ಸು, ಅಧರ್ಮಿಗಳಿಗೆ ಪಾಪಿಗಳಿಗೆ ದುಃಖವೂ, ಅಶ್ರೇಯಸ್ಸು ತಪ್ಪುವುದಿಲ್ಲ. ಇದಲ್ಲದೆ ವರ್ಣಾಶ್ರಮಾಚಾರಗಳಲ್ಲಿ ಶ್ರದ್ಧೆಯಿಲ್ಲದವರು, ನಿಷಿದ್ಧ ಕಾಮಕರೂ, ಅಧರ್ಮನಿರತರೂ, ಅರ್ಥಪರರು ಮೂರ್ಖರು ಅನ್ಯಾಯಶೀಲರೂ ಬ್ರಾಹ್ಮಣ ದ್ವೇಷಿಗಳು ನಾಸ್ತಿಕರೂ ಸಹ ನರಕಾದಿ ಅನರ್ಥ ಹೊಂದುವರು. ಇದಕ್ಕೆ ಹಿರಣ್ಯಾಕ್ಷ ಹಾಗೂ ಅವನ ಅನುಯಾಯಿಗಳೇ ಸಾಕ್ಷಿ. ಇದು ಎಲ್ಲ ಯುಗಗಳಲ್ಲಿಯೂ ಕಾಲದಲ್ಲಿಯೂ ಸತ್ಯ. ನನ್ನ ಆದೇಶವನ್ನು ಪಾಲನೆ ಮಾಡುತ್ತಿದ್ದವರಿಗೆ ಇಹ–ಪರಗಳಲ್ಲಿಯೂ ಸುಖವೆ. ನನ್ನ ಆಜ್ಞೆಯಲ್ಲಿ ನಿರತರಾದವರಿಗೆ ಶತ್ರುಗಳು ಬಾಧಿಸಲಾರರು ಎಂದು ಹೇಳಿ ಅಂತರ್ಧಾನನಾದನು.

ದೇವೇಂದ್ರನೆ ಮೊದಲಾದ ದೇವತೆಗಳು ತಮ್ಮ ಸ್ಥಾನಗಳಿಗೆ ಹೋಗಿ ತಮ್ಮ ಅಧಿಪತ್ಯ ಪಡೆದರು. ಚಾಡಿ ಹೇಳಿದ ಪರ್ವತಗಳ ರೆಕ್ಕೆಗಳನ್ನು ಇಂದ್ರದೇವ

ಕತ್ತರಿಸಿ ಹಾಕಿದ. ಮೈನಾಕನು ಮಾತ್ರ ವಾಯುದೇವನಿಂದ ಸಮುದ್ರದಲ್ಲಿ ಎಸೆಯಲ್ಪಟ್ಟು ಪಾತಾಳದಿಂದ ಹೊರಬರುತ್ತಿದ್ದ ದೈತ್ಯರನ್ನು ಬಾರದಂತೆ ತಡೆಯಲ್ಪಟ್ಟಿತು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ದೇವತೆಗಳಿಂದ ವರಾಹನ ಸ್ತುತಿ ಎಂಬಲ್ಲಿ
ಮೂವತ್ತೊಂದನೆಯ ಅಧ್ಯಾಯವು ಸಮಾಪ್ತಿ

## ಅಥ ದ್ವಾತ್ರಿಂಶೋಽಧ್ಯಾಯಃ

### ಹಿರಣ್ಯಕಶಿಪು ತಪಸ್ಸು

**ವಾರಾಹ ಏಷ ಕಥಿತೋ ನಾರಸಿಂಹ ಮತಃ ಶೃಣು ॥ 1 ॥**

ಕೃತಯುಗದ ಕಡೆಯಲ್ಲಿ ಹರಿಯು ನೃಸಿಂಹಾವತಾರ ಧರಿಸಿ ಹಿರಣ್ಯಕಶಿಪುವನ್ನು ಸಂಹಾರ ಮಾಡಿದ ಕಥೆ ಹೇಳುವೆ ಕೇಳು.

ಹಿರಣ್ಯಾಕ್ಷನನ್ನು ಒಂದು ಹಂದಿ ರೂಪಿ ಹರಿಯು ಕೊಂದದ್ದನ್ನು ಕೇಳಿ ಅತ್ಯಂತ ಕ್ರುದ್ಧನಾದ ಹಿರಣ್ಯಕಶಿಪುವು ತಾನು ಅವಧ್ಯನಾಗಲು ಬಯಸಿ ಮಂದರ ದ್ರೋಣಿಯಲ್ಲಿ ತಪಸ್ಸನ್ನಾಚರಿಸಿದನು.

**ದಶ ವರ್ಷ ಸಹಸ್ರಾಣಿ ಶತಾನಿ ದಶ ಪಂಚ ಚ ॥ 2 ॥**

ಅವನು ಜಲದಲ್ಲಿದ್ದು ಹನ್ನೊಂದು ಸಾವಿರದ ಐನೂರು ವರ್ಷ ತಪಸ್ಸನ್ನಾಚರಿಸಿದ.

ಈತನ ಶಮ-ದಮ ಬ್ರಹ್ಮಚರ್ಯೆ ತಪಸ್ಸು ನಿಯಮಾಚರಣೆಗಳಿಂದ ಬ್ರಹ್ಮದೇವನು ಸುಪ್ರೀತನಾಗಿ ಹಂಸದ ಮೇಲೆ ಸಕಲ ದೇವತೆಗಳೊಂದಿಗೆ ಹಿರಣ್ಯಕನಿದ್ದಲ್ಲಿಗೆ ಬಂದನು.

**ಬ್ರಹ್ಮಾ ಪ್ರೀತೋಽಭವತ್ ತಸ್ಯ ತಪಸಾ ನಿಯಮೇನ ಚ ॥ 3 ॥**

ಹಿರಣ್ಯಕನೇ, ನಿನ್ನ ತಪಸ್ಸಿನಿಂದ ಪ್ರೀತನಾಗಿ ವರ ನೀಡಲೆಂದೆ ಬಂದಿರುವೆನು. ವರ ಬೇಡು.

**ವರಂ ವರಯ ಭದ್ರಂ ತೇ ಯಥೇಷ್ಟಂ ಕಾಮಮಾಪ್ನುಹಿ ॥ 4 ॥**

## ಹಿರಣ್ಯಕನ ವರದ ಪಟ್ಟಿ

ಬ್ರಹ್ಮನೇ ನೀನು ವರ ಕೊಡುವುದಾದರೆ ನನ್ನನ್ನು ಅವಧ್ಯನನ್ನಾಗಿಸು. ಅದು ಸಾಧ್ಯವಿಲ್ಲವೆಂದಾದರೆ

1) ದೇವ, ಅಸುರ, ಗಂಧರ್ವ, ಯಕ್ಷ, ರಕ್ಷೊ, ಉರಗ, ಮಾನವ, ಪಿಶಾಚಗಳಿಂದಾಗಲೀ, 2) ಋಷಿಗಳು ಶಾಪದಿಂದಾಗಲಿ, 3) ಶಸ್ತ್ರಗಳಿಂದ, 4) ಅಸ್ತ್ರಗಳಿಂದ, 5) ಪರ್ವತಗಳಿಂದ, 6) ವೃಕ್ಷಗಳಿಂದ, 7) ಒಣಗಿದ ಹಸಿಯ ವಸ್ತುವಿನಿಂದ, 8) ಅಥವಾ ಇನ್ನಾವುದೇ ವಸ್ತುವಿನಿಂದಾಗಲಿ ಮರಣ ಬರಬಾರದು.

## ಹಿರಣ್ಯಕಶಿಪುವಿಗೆ ವರ

ಸ್ವರ್ಗದಲ್ಲಾಗಲೀ, ಪಾತಾಳಾದಿ ಲೋಕಗಳಲ್ಲಿ, ಆಕಾಶದಲ್ಲಾಗಲೀ, ಭೂಮಿಯಲ್ಲಾಗಲೀ, ರಾತ್ರಿಯಲ್ಲಾಗಲೀ ಹಗಲಲ್ಲಾಗಲಿ ಯಾವ ವಿಧದಿಂದಲೂ ನನಗೆ ಮರಣ ಏರ್ಪಡಬಾರದು.

**ಭವೇಯಮಹಮೇವಾರ್ಕಃ ಸೋಮೋ ವಾಯುಃ ಹುತಾಶನಃ ।**
**ಸಲಿಲಂ ಚಾಂತರಿಕ್ಷಂ ಚ ನಕ್ಷತ್ರಾಣಿ ದಿಶೋ ದಶ ॥ 5 ॥**

ಬ್ರಹ್ಮದೇವನೇ! ನಾನೇ ಸೂರ್ಯನು, ಚಂದ್ರನೂ, ವಾಯುವೂ, ಅಗ್ನಿಯೂ, ನೀರು, ಅಂತರಿಕ್ಷವೂ, ನಕ್ಷತ್ರಗಳೂ, ದಶದಿಕ್ಕುಗಳು, ಕ್ರೋಧಾಭಿಮಾನಿಯೂ, ವಾಮಭಾಗಾಭಿಮಾನಿಯೂ, ವರುಣ, ಇಂದ್ರನೂ, ಯಮನೂ, ಕುಬೇರನೂ, ಯಕ್ಷಾಧಿಪತಿಯೂ, ಕಿಂಪುರುಷಾಧಿಪತಿಯೂ ಆಗಬೇಕು. ಇವರೆಲ್ಲರೂ ನನ್ನ ಅಧೀನದಲ್ಲಿಯೇ ಇರಬೇಕು. ದಿವ್ಯಾಸ್ತ್ರಗಳು, ಶಸ್ತ್ರಗಳೂ ಮೂರ್ತಿ-ಮತ್ತಾಗಿಯೆ ಯುದ್ಧದಲ್ಲಿ ಬರಲಿ ಎಂದಾಗ, ಬ್ರಹ್ಮದೇವನು ನೀನು ಕೇಳಿದ ವರಗಳೆಲ್ಲವೂ ಅದ್ಭುತ ವರಗಳಾಗಿದ್ದು ನಾನು ನಿನಗೆ ಕರುಣಿಸಿರುವೆನು. ಆದರೂ ಹುಟ್ಟಿದವನು ಸಾಯಬೇಕಲ್ಲವೆ. ಅದಕ್ಕೆ ಒಂದು ಅವಧಿ ಹೇಳು ಎಂದಾಗ,

**ಪಾಣಿಪ್ರಹಾರೇಣೈಕೇನ ಸಭೃತ್ಯ ಬಲವಾಹನಮ್ ।**
**ಯೋ ಮಾಂ ನಾಶಯಿತುಂ ಶಕ್ತಃ ಸ ಮೇ ಮೃತ್ಯುರ್ಭವಿಷ್ಯತಿ ॥ 6 ॥**

ಯಾವನು ಕೇವಲ ಕೈಗಳಿಂದಲೇ ಭೃತ್ಯ ಸೈನ್ಯ ವಾಹನ ವಿಶಿಷ್ಟನಾದ ನನ್ನನ್ನು

ಹೊಡೆದು ಕೊಲ್ಲತ್ತಕ್ಕವನೋ ಅಂತಹವನಿಂದ ನನಗೆ ಮರಣವೇರ್ಪಡಲಿ ಎಂದನು. ಬ್ರಹ್ಮದೇವನು ಹಾಗೆ ಆಗಲಿ ಎಂದು, ವೈರಾಜಕ್ಕೆ ಹೋಗಿ ಸೇರಿದನು.

## ದೇವತೆಗಳ ಆತಂಕ

ನಂತರ ದೇವತೆಗಳೆಲ್ಲರೂ ಬ್ರಹ್ಮನ ಬಳಿ ಬಂದು ನೀನು ನೀಡಿದ ಈ ವರದಿಂದಾಗಿ ನಮ್ಮನ್ನು ಇನ್ನೂ ಅವನು ಉಳಿಸೋದಿಲ್ಲ ಎಂದರು.

**ಅವಶ್ಯಂ ತ್ರಿದಶಾಸ್ತೇನ ಪ್ರಾಪ್ತವ್ಯಂ ತಪಸಃ ಫಲಮ್ ।**
**ತಪಸೋಽಂತೇಽಸ್ಯ ಭಗವಾನ್ ವಧಂ ವಿಷ್ಣುಃ ಕರಿಷ್ಯತಿ ॥ 7 ॥**

ದೇವತೆಗಳೇ! ಯಾರೇ ತಪಸ್ಸು ಮಾಡಿದರೂ ನಾನು ಫಲ ನೀಡಲೇಬೇಕು. ಇವನ ತಪಸ್ಸಿನ ಫಲವಾಗಿ ಈ ವರಗಳನ್ನು ನೀಡಿರುವೆ. ಈ ತಪಸ್ಸಿನ ಫಲ ಮುಗಿಯುವವರೆಗೂ ಕಾಯಲೇಬೇಕು. ನೀವು ಭಗವಂತನನ್ನು ತಪಸ್ಸಿನ ಮೂಲಕ ಸಂತೋಷಗೊಳಿಸಿರಿ. ನಿಮಗೆ ಅನುಗ್ರಹಿಸುವನು ಎಂದರು.

## ಹಿರಣ್ಯಕನ ಪೀಡೆ

ಹಿರಣ್ಯಕಶಿಪುವು ಬ್ರಹ್ಮದೇವನ ವರದಿಂದಾಗಿ ಮದೋನ್ಮತ್ತನಾಗಿ ಲೋಕದ ಪ್ರಜೆಗಳನ್ನು ಪೀಡಿಸತೊಡಗಿದನು. ಅವನು ಮುನಿ ಜನರನ್ನೂ ವ್ರತ ನಿಯಮಿತರಾದ ಬ್ರಾಹ್ಮಣರನ್ನೂ ಸಾತ್ವಿಕರನ್ನೂ ಬಲಾತ್ಕಾರವಾಗಿ ಹಿಂಸಿಸುತ್ತಾ, ಮೂರು ಲೋಕಗಳನ್ನು ವಶಪಡಿಸಿಕೊಂಡು ಸ್ವರ್ಗದಲ್ಲಿಯೂ ತನ್ನ ಆಡಳಿತ ವ್ಯಾಪಿಸುತ್ತಾ, ದೇವತೆಗಳ ಯಜ್ಞಾದಿ ಕರ್ಮಗಳಿಗೆ ವಿಘ್ನವನ್ನುಂಟು ಮಾಡಿದನು.

ಆಗ ದೇವತೆಗಳೂ, ಸಿದ್ಧರೂ, ಸಾಧ್ಯರೂ, ವಸು ರುದ್ರಾದಿಗಳೆಲ್ಲರೂ ಭಗವಂತನನ್ನೆ ಶರಣು ಹೊಂದಿದರು.

ಭಗವಂತನೇ! ಸಕಲ ಸೃಷ್ಟಿಕರ್ತನೂ ಶತ್ರುಪಕ್ಷ ಭಯಂಕರನೂ ನೀನೆ ಆಗಿರುವೆ. ಈ ಹಿರಣ್ಯಕಶಿಪುವಿನ ಬಾಧೆಯಿಂದ ನಮ್ಮನ್ನು ಮುಕ್ತಗೊಳಿಸಿ ಕಾಪಾಡು ಎಂದರು.

**ತ್ವಂ ಹಿ ನಃ ಪರಮೋಧಾತಾ ತ್ವಂ ಹಿ ನಃ ಪರಮೋ ಗುರುಃ ।**
**ತ್ವಂ ಹಿ ನಃ ಪರಮೋದೇವೋ ಬ್ರಹ್ಮಾದೀನಾಂ ಸುರೋತ್ತಮ ॥ 8 ॥**
**ತ್ರಾಯಸ್ವ ಜಹಿ ದೈತ್ಯೇಂದ್ರಂ ಹಿರಣ್ಯಕಶಿಪುಂ ಪ್ರಭೋ ॥ 9 ॥**

ದೇವತೆಗಳೇ! ಭಯ ಪಡಬೇಡಿರಿ ! ನಾನು ನಿಮಗೆ ಅಭಯ ನೀಡಿದ್ದೇನೆ. ನಿಮ್ಮ ಸ್ಥಾನಗಳಿಗೆ ಹೋಗಿರಿ. ಬ್ರಹ್ಮನ ವರದರ್ಪಿತನಾದ ಈ ಹಿರಣ್ಯನನ್ನು ಕೊಂದು ಹಾಕುತ್ತೇನೆ ಎಂದನು.

ಹೀಗೆ ಅಭಯ ನೀಡಿ ಅವನನ್ನು ಸಂಹಾರ ಮಾಡುವ ಸಂಕಲ್ಪ ಮಾಡಿ ಹಿಮಾಲಯದ ಪಾರ್ಶ್ವದ ಕಡೆಗೆ ತೆರಳಿದನು.

## ನರಸಿಂಹಾವತಾರ

ಯಾವ ರೂಪ ಧರಿಸಿ ಇವನನ್ನು ಸಂಹರಿಸಲಿ ಎಂದು ಆಲೋಚಿಸಿ ಬ್ರಹ್ಮದೇವನ ವರವನ್ನು ಉಳಿಸಬೇಕು ಎಂದು ಯೋಚಿಸಿ ತಾನು ಯಾರಲ್ಲಿಯೂ ಜನಿಸಿದವನಂತೆ ನೂತನ ಹಾಗೂ ಅದ್ಭುತ ಪ್ರಾದುರ್ಭಾವವನ್ನು ತೋರಿಸಲು ನೃಸಿಂಹಾಕಾರನಾಗಿ ಓಂಕಾರ ಶಬ್ದವನ್ನು ಜೋರಾಗಿ ಉಚ್ಚರಿಸುತ್ತಾ ಸಿಂಹನಾದ ಮಾಡುತ್ತಾ ಹಿರಣ್ಯಕಶಿಪುವಿನ ಆಸ್ಥಾನಕ್ಕೆ ಬಂದನು.

**ತೇಜಸಾ ಭಾಸ್ಕರಾಕಾರಃ ಕಾಂತ್ಯಾ ಚಂದ್ರ ಇವಾಪರಃ ।**
**ನರಸ್ಯ ಕೃತ್ವಾರ್ಧತನುಂ ಸಿಂಹಸ್ಯಾರ್ಧತನುಂ ವಿಭುಃ ॥ 10 ॥**

ನೃಸಿಂಹನು ಸೂರ್ಯನಂತೆಯೂ ಚಂದ್ರನಂತೆಯೂ ಅಗ್ನಿಯಂತೆಯೂ ಜ್ವಲಿಸುತ್ತಾ, ಮುಖವು ಸಿಂಹಾಕಾರನಾಗಿ, ಉಳಿದ ಭಾಗ ಮನುಷ್ಯಾಕಾರನಾಗಿ ಆರ್ಭಟಿಸುತ್ತಾ ಸಭೆಗೆ ಬಂದ.

ಆ ಹಿರಣ್ಯಕನ ಸಭಾಮಂದಿರವು ಅನೇಕ ರತ್ನವೈಡೂರ್ಯಗಳಿಂದ ಅಲಂಕೃತವಾಗಿ ಶತಯೋಜನ ವಿಸ್ತಾರವಾಗಿತ್ತು.

ಹಿರಣ್ಯಕಶಿಪುವು ರತ್ನಾಭರಣ ಭೂಷಿತನಾಗಿ ಸುವರ್ಣಮಯದ ನಾನೂರು ಮೊಳ ಪರಿಮಿತ ಸಿಂಹಾಸನದಲ್ಲಿ ಆಸೀನನಾಗಿದ್ದನು. ಸಕಲ ದೇವತೆಗಳೂ ಅಪ್ಸರಾಸ್ತ್ರೀಯರೂ ಅವನನ್ನು ಸೇವಿಸುತ್ತಿದ್ದರು.

ಅನಂತರ ಹಿರಣ್ಯಕಶಿಪುವಿನ ಸಭಾಮಂದಿರಕ್ಕೆ ಕಾಲಮೃತ್ಯುವಿನಂತೆ ಇರುವ ಬೂದಿಮುಚ್ಚಿದ ಕೆಂಡದಂತೆ ಗುಂಗುರು ಕೇಸರಗಳಿಂದ ವ್ಯಾಪ್ತವಾದ ನೃಸಿಂಹ ರೂಪ ನೋಡಿ ಹಿರಣ್ಯನ ಹಾಗೂ ಅವನ ಪರಿವಾರದವರೆಲ್ಲ ಆಶ್ಚರ್ಯದಿಂದ ಇದೇನಿದು ವಿಚಿತ್ರ ರೂಪವು? ಸಾವಿರಾರು ಚಂದ್ರರು ಉದಯಿಸಿದಂತೆ ಕಾಂತಿವುಳ್ಳ ಈ ಮೃಗ ಯಾವುದು?

## ಪ್ರಹ್ಲಾದನ ಭಗವಜ್ಞಾನ

**ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ನಾಮ ವೀರ್ಯವಾನ್ ।**
**ದಿವ್ಯೇನ ಚಕ್ಷುಷಾ ಸಿಂಹಮಪಶ್ಯದ್ ದೇವಮಾಗತಮ್ ॥ 11 ॥**

ಹಿರಣ್ಯಕನ ಪುತ್ರನಾದ ಭಗವದ್ಭಕ್ತ ಪ್ರಹ್ಲಾದನು ಮಾತ್ರ ಸಭೆಗೆ ಬಂದಿರುವವನು ಸಾಕ್ಷಾನ್ನಾರಾಯಣನೆಂದೆ ತಿಳಿದನು. ತಂದೆಯನ್ನು ಕುರಿತು ತಂದೆಯೇ ಈ ಪರಮಾದ್ಭುತವೂ ಘೋರತರವೂ ಆದ ಈ ರೂಪ ದೈತ್ಯರನ್ನು ಸಂಹರಿಸಲೆಂದೆ ಬಂದಿರುವುದೆಂದು ನನ್ನ ಭಾವನೆ.

ಈ ಅದ್ಭುತ ರೂಪದಲ್ಲಿ ಸಕಲದೇವತೆಗಳೂ ಸನ್ನಿಹಿತರಾಗಿದ್ದಾರೆ. ಚತುರ್ಮುಖಾದಿ ದೇವತೆಗಳೂ ಸಹ ಇವನ ಲಲಾಟಾದಿಗಳಲ್ಲಿ ಇದ್ದು ಈತನ ಉಪಾಸನೆ ಮಾಡುತ್ತಿರುವರು. ಸಮಸ್ತ ಜಗತ್ತು ಇವನಲ್ಲಿ ತೋರುತ್ತಿದೆ ಎಂದಾಗ ಹಿರಣ್ಯಕನು ತನ್ನ ದೈತ್ಯರಿಗೆ,

**ಮೃಗೇಂದ್ರೋ ಗೃಹ್ಯತಾಂ ಶೀಘ್ರಂ ಅಪೂರ್ವಾಂ ತನುಮಾಶ್ರಿತಂ ।**
**ಯದಿ ವಾ ಸಂಶಯಃ ಕಶ್ಚಿದ್ ವಧ್ಯತಾಂ ವನಗೋಚರಃ ॥ 12 ॥**

## ನೃಸಿಂಹನನ್ನು ಬಂಧಿಸಲು ಆದೇಶ

ದೈತ್ಯರೇ, ಈ ವಿಚಿತ್ರಾ ಕೃತಿಯಿಂದ ಬಂದಿರುವ ನರಸಿಂಹನನ್ನು ಬೇಗನೆ ಹಿಡಿದು ಬಂಧಿಸಿರಿ ಅಥವಾ ಹರಿಯೆಂದೇ ಸಂಶಯವಿದ್ದರೆ ಕೊಂದು ಹಾಕಿರಿ.

ದೈತ್ಯರೆಲ್ಲರೂ ಸೇರಿ ನೃಸಿಂಹನನ್ನು ಸುತ್ತುವರೆದು ತಮ್ಮ ಸಾಮರ್ಥ್ಯ ತೋರಿಸಿದರು. ನೃಸಿಂಹನು ಉಚ್ಚಧ್ವನಿಯಿಂದ ಗರ್ಜಿಸುತ್ತಾ ಭಯಂಕರ ಘೋರವಾದ ಬಾಯಿ ತೆರೆದು ಕಾಲಾಂತರ ಯಮನಂತೆ ಸಭೆಯನ್ನೆ ನಾಶ ಮಾಡಲಾರಂಭಿಸಿದ. ಸಭೆಯೇ ನಾಶವಾಗುತ್ತಿರಲು ಹಿರಣ್ಯಕಶಿಪುವೇ ಬಂದು ಕೋಪದಿಂದ ನರಸಿಂಹನೊಂದಿಗೆ ಯುದ್ಧ ಮಾಡುತ್ತಾ ನಾನಾ ವಿಧ ಅಸ್ತ್ರಶಸ್ತ್ರಗಳನ್ನು ಎಸೆದ.

## ನೃಸಿಂಹನ ಮೇಲೆ ಅಸ್ತ್ರಗಳ ಸುರಿಮಳೆ

ಕಾಲದಂಡವನ್ನೂ, ಭೈರವಾಸ್ತ್ರ ಕಾಲಚಕ್ರ, ವಿಷ್ಣುಚಕ್ರದಂತಿರುವ ಚಕ್ರ, ಅಜಿತ ಚಕ್ರ, ಇಂದ್ರ ಚಕ್ರ, ಋಷಿ ಚಕ್ರ, ಬ್ರಹ್ಮಚಕ್ರ, ಶುಷ್ಕಾಶನಿ, ರೌದ್ರಶೂಲ, ಕಂಕಾಲ ಮುಸಲಾಯುಧ, ಬ್ರಹ್ಮಶಿರೋಽಸ್ತ್ರ, ಬ್ರಹ್ಮಾಸ್ತ್ರ, ಐಷಿಕಾಸ್ತ್ರ, ಕಾಪಾಲಾಸ್ತ್ರ, ಕಿಂಕರಾಸ್ತ್ರ, ಕ್ರೌಂಚಾಸ್ತ್ರ, ಹಯಶಿರಾಸ್ತ್ರ, ಸೌಮ್ಯಾಸ್ತ್ರ, ಪೈಶಾಚಾಸ್ತ್ರ, ಸರ್ಪಾಸ್ತ್ರ,

ಜೃಂಭಣಾಸ್ತ್ರ, ಮೊದಲಾದ ಅಸ್ತ್ರಗಳನ್ನು ಒಂದಾದ ಮೇಲೆ ಮತ್ತೊಂದರಂತೆ ಅಗ್ನಿಯಲ್ಲಿ ಆಹುತಿ ನೀಡಿದಂತೆ ನೃಸಿಂಹಾಗ್ನಿಯಲ್ಲಿ ಹೋಮಿಸುತ್ತಲೇ ಇದ್ದನು. ಎಲ್ಲಾ ಅಸ್ತ್ರಗಳೂ ನೃಸಿಂಹಾಸ್ತ್ರಕ್ಕೆ ಬಲಿಯಾದವು.

## ದೈತ್ಯರ ಅಸ್ತ್ರಗಳು ಹೂಮಾಲೆಯಾದವು

**ಏತಾನ್ಯಸ್ತ್ರಾಣಿ ಸರ್ವಾಣಿ ಹಿರಣ್ಯಕಶಿಪುಸ್ತದಾ ।**
**ಚಿಕ್ಷೇಪ ನಾರಸಿಂಹಸ್ಯ ದೀಪ್ತಸ್ಯಾಗ್ನೇಃ ಯಥಾಹುತಿಃ ॥ 13 ॥**

ದೈತ್ಯವರ್ಗವೂ ಕೂಡ ನಾನಾ ವಿಧ ಆಯುಧಗಳಿಂದಲೂ ವಜ್ರಾಯುಧ ಶೂಲ - ಉಲೂಖಲಾದಿಗಳಿಂದ ಹೊಡೆಯಿತು. ಹೀಗಾದರೂ ನೃಸಿಂಹರೂಪಿಯು ಸ್ವಲ್ಪವೂ ಬೆದರದೆ ಕದಲದೆ ಗಾಯವನ್ನೂ ಹೊಂದದೆ ಸ್ಥಿರವಾಗಿ ನಿಂತಿದ್ದನು.

ದೈತ್ಯರು ಸಾವಿರಾರು ಸಂಖ್ಯೆಯಲ್ಲಿದ್ದು ನಾನಾ ವಿಧ ಆಯುಧಗಳನ್ನು ಪ್ರಯೋಗಿಸುತ್ತಿದ್ದರೂ ಅವೆಲ್ಲವೂ ಸುಂದರ ಕುಸುಮ ಮಾಲೆಗಳಾಗಿ ನೃಸಿಂಹನನ್ನು ಅಲಂಕರಿಸಿದವು. ಇದರಿಂದ ದೈತ್ಯರು ಕಂಗಾಲಾದರು.

## ಹಿರಣ್ಯಕಶಿಪುವಿನ ವಧೆ

**ಜಹಿ ದೇವ ದಿತೇಃ ಪುತ್ರಂ ದಾನವಂ ಲೋಕನಾಶನಮ್ ।**
**ತನ್ನಾಶಯ ಹಿತಾರ್ಥಾಯ ಲೋಕಾನಾಂ ಸ್ವಸ್ತಿ ವೈ ಕುರು ॥ 14 ॥**
**ದೇವಾರಿಃ ದಿತಿಜೋ ದೃಪ್ತೋ ನೃಸಿಂಹಂ ಸಮುಪಾದ್ರವತ್ ।**
**ಸಮುತ್ಪತ್ಯ ತತಃ ತೀಕ್ಷ್ಣೈಃ ಮೃಗೇಂದ್ರೇಣ ಮುಹಾನಖೈಃ ॥ 15 ॥**

ಈ ಸಂದರ್ಭದಲ್ಲಿ ಸಕಲ ದೇವತೆಗಳೂ ನೃಸಿಂಹನನ್ನು ಪ್ರಾರ್ಥಿಸಿದರು. ಲೋಕಕಂಟಕನೂ ದುರಾಚಾರಿಯೂ ಹಿರಣ್ಯಕನನ್ನು ಸಂಹಾರ ಮಾಡು ಎಂದು ಪ್ರಾರ್ಥಿಸಿದರು.

ಈ ಮಧ್ಯದಲ್ಲಿ ದೇವಶತ್ರುವಾದ ಹಿರಣ್ಯಕಶಿಪುವು ದೈತ್ಯರಿಂದ ಪ್ರಾರ್ಥಿತನಾಗಿ ಯುದ್ಧ ಮಾಡಲು ನೃಸಿಂಹನೆಡೆಗೆ ಓಡಿ ಬರುತ್ತಿದ್ದನು. ಇದನ್ನೆ ಕಾಯುತ್ತಿದ್ದ ನೃಸಿಂಹನು ಕೂಡಲೇ ಅವನನ್ನು ಹಿಡಿದು ತೊಡೆಯಲ್ಲಿರಿಸಿ ಅಂಗಾತ ಮಲಗಿಸಿ ಕದಲದಂತೆ ಅದುಮಿ ಹಿಡಿದು ಓಂಕಾರ ಸಹಿತ ಮಹಾನಾದ ಮಾಡುತ್ತಾ ತೀಕ್ಷ್ಣವಾದ ಪ್ರತ್ಯೇಕ ವಜ್ರಾಯುಧದಂತಿರುವ ತನ್ನ ಕೂರುಗುರುಗಳಿಂದಲೇ ಹಿರಣ್ಯನ ಎದೆಯನ್ನು ಹೊಟ್ಟೆಯನ್ನು ಸೀಳಿ ಕೊಂದು ಹಾಕಿದನು.

**ತತ್ರೋಂಕಾರ ಸಹಾಯೇನ ವಿದಾರ್ಯ ನಿಹತೋ ಯುಧಿ ॥ 16 ॥**

ದೇವತೆಗಳೆಲ್ಲ ನೃಸಿಂಹನನ್ನು ವಿಧವಿಧವಾಗಿ ಸ್ತುತಿಸಿದರು.

ನೃಸಿಂಹನು ಅಲ್ಲಿಯೇ ಅಂತರ್ಹಿತನಾದನು.

ದುಷ್ಟಶಕ್ತಿಗಳು ಎಷ್ಟೇ ಸಂಖ್ಯೆಯಲ್ಲಿದ್ದರೂ, ಎಷ್ಟೇ ಆಯುಧ ಅಸ್ತ್ರಗಳಿದ್ದರೂ ನೃಸಿಂಹದೇವರ ಪಾದ ಹಿಡಿದವರಿಗೆ ಏನನ್ನೂ ಮಾಡಲಾರವು. ಸಮುದ್ರದ ನೀರು ಉಪ್ಪು, ನೋಡಿದರೆ ಅನುಭವಕ್ಕೆ ಬಾರದು. ಬಾಯಲ್ಲಿ ಹಾಕಿಕೊಂಡರೆ ಕಣಕಣಗಳಲ್ಲಿ ತೋರುವುದು. ಹೀಗಾಗಿ ಪ್ರಪಂಚದ ಅಣುರೇಣು ತೃಣಕಾಷ್ಠಗಳಲ್ಲಿಯೂ ಭಗವಂತ ಇದ್ದು ರಕ್ಷಿಸುತ್ತಿರುವನು. ಇದನ್ನು ತಿಳಿಯದೆ ಹಿರಣ್ಯಕಶಿಪುವಿನಂತೆ ವರ್ತಿಸುವ ಲೋಕಕಂಟಕರನ್ನು ಭಗವಂತ ನಾಶ ಮಾಡಿ ಭಕ್ತರನ್ನು ಕಾಪಾಡುವನು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ನೃಸಿಂಹವತಾರ ಎಂಬಲ್ಲಿ
ಮೂವತ್ತೆರಡನೆಯ ಅಧ್ಯಾಯವು ಸಮಾಪ್ತಿ

# ಅಥ ತ್ರಯಸ್ತ್ರಿಂಶೋಽಧ್ಯಾಯಃ

## ರುಕ್ಮಿಣಿಯ ಪುತ್ರ ಹಂಬಲ

**ಕಿಮರ್ಥಂ ಭಗವಾನ್ ವಿಷ್ಣುಃ ದೇವದೇವೋಜನಾರ್ದನಃ ।**
**ಗತಃ ಕೈಲಾಸ ಶಿಖರಮಾಲಯಂ ಶಂಕರಸ್ಯ ಚ ॥ 1 ॥**

**ಕೇಶವೇನ ಪುರಾ ವಿಪ್ರಕುರ್ವತಾ ತಪ ಉತ್ತಮಂ ।**
**ಅರ್ಚಿತೋ ದೇವದೇವೇನ ಶಂಕರಶ್ಚೇತಿ ನಃ ಶ್ರುತಮ್ ॥ 2 ॥**

ಜನಮೇಜಯನು ವೈಶಂಪಾಯನರಿಗೆ ಗುರುಗಳೇ! ಹಿಂದೆ ತಾವು ಶ್ರೀಕೃಷ್ಣನು ಕೈಲಾಸದಲ್ಲಿರುವ ಶಿವನ ಮಂದಿರಕ್ಕೆ ಹೋದನೆಂದು ಅಲ್ಲಿ ನಾರದಾದಿಗಳಿಂದ ಪರಿವೃತನಾದ ಶಂಕರನನ್ನು ಏತಕ್ಕಾಗಿ ಕಂಡನು. ಕೇಶವನು ತಪಸ್ಸನ್ನಾಚರಿಸಿದನೆಂದು ಹೇಳಿದಿರಿ.

ಜಗಜ್ಜನ್ಮಾದಿ ಕಾರಣನಾದ ಶ್ರೀಕೃಷ್ಣನು ಶಿವನನ್ನು ಕುರಿತು ತಪಸ್ಸನ್ನು ಮಾಡಿದನೆಂದರೆ ಯಾವ ಕಾರ್ಯಕ್ಕಾಗಿ, ಇದರಿಂದ ತಿಳಿಯಬಹುದಾದ ಲೋಕಶಿಕ್ಷಣವೇನು ಎಂದು ಹೇಳಿರಿ ಎಂದಾಗ.

ವೈಶಂಪಾಯನರು ರಾಜನೇ! ಇದೊಂದು ಗೋಪ್ಯ ವಿಚಾರವಾಗಿದ್ದು ಮೂರ್ಖರಿಗೆ ಅಯೋಗ್ಯರಿಗೆ ಈ ವಿಚಾರ ಪ್ರಚಾರ ಮಾಡಬಾರದು.

**ನ ಚಾಶುಶ್ರೂಷವೇ ವಾಚ್ಯಂ ನೃಶಂಸಾಯಾನೃಜವೇ ।**
**ನಾನಧೀತಾಯ ವಕ್ತವ್ಯಂ ಪುಣ್ಯಂ ಪುಣ್ಯವತಾ ಸದಾ ॥ 3 ॥**

ಒಂದು ಬಾರಿ ಶ್ರೀಕೃಷ್ಣನು ದ್ವಾರಕೆಯಲ್ಲಿ ಯಾದವರಿಂದ ಕೂಡಿಕೊಂಡಿದ್ದನು. ತನ್ನ ಅಂತಃಪುರದಲ್ಲಿದ್ದ ರುಕ್ಮಿಣಿಯಿಂದ ಸರಸಸಲ್ಲಾಪದಲ್ಲಿ ತೊಡಗಿದ್ದನು. ರುಗ್ಮಿಣಿಯು ಒಂದು ದಿನ ಕೃಷ್ಣನ ಮುಂದೆ ಸ್ವಾಮಿಯೇ! ನಿನ್ನಿಂದ ನಾನು ಬಹುಗುಣ ಸಂಪನ್ನನಾದ ಪುತ್ರನನ್ನು ಪಡೆಯಬೇಕೆಂದಿರುವೆ.

**ಪುತ್ರಮಿಚ್ಛಾಮಿ ದೇವೇಶ ತ್ವತ್ತೋ ಮಾಧವ ನಂದನಮ್ ।**
**ಬಲಿನಂ ರೂಪಸಂಪನ್ನಂ ತ್ವಯ್ಯೈವ ಸದೃಶಂ ವಿಭೋ ॥ 4 ॥**

ನೀನು ಅನುಗ್ರಹಿಸುವ ಪುತ್ರನು ಬಲಿಷ್ಠನೂ ಸುರೂಪ ಸುಗುಣ ನಿನಗೆ ಸದೃಶನೂ ತಪೋನಿಧಿಯೂ ಯಾದವರಲ್ಲಿ ಅಗ್ರಗಣ್ಯನೂ ಸರ್ವಶಾಸ್ತ್ರಾರ್ಥ ಕುಶಲನೂ ಆಗಿರುವ ಸುಪುತ್ರನನ್ನು ಹೊಂದುವ ಇಚ್ಛೆಯನ್ನು ಈ ಭಕ್ತಳಾದ ನನಗೆ ಅನುಗ್ರಹಿಸು ಎಂದಳು.

ಶ್ರೀಕೃಷ್ಣನು ರುಕ್ಮಿಣಿ! ನೀನು ಬಯಸಿದಂತೆ ವೀರಾಗ್ರಣಿಯನ್ನು ಅನುಗ್ರಹಿಸುವೆನು ಇದು ನಿಶ್ಚಯವೆಂದನು.

**ದಾತಾಸ್ಮಿ ತಾದೃಶಂ ಪುತ್ರಂ ಯಂ ತ್ವಮಿಚ್ಛಸಿ ಭಾಮಿನಿ ।**
**ಅವಶ್ಯಂ ತವ ದಾಸ್ಯಾಮಿ ಪುತ್ರಂ ಶತ್ರು ನಿಬರ್ಹಣಮ್ ॥ 5 ॥**

ಲೋಕದಲ್ಲಿ ತತ್ಪುತ್ರರಿಂದಲೇ ನರಕಾದಿ ಅನರ್ಥ ಗೆಲ್ಲಬಹುದಾಗಿದೆ. 'ಪುತ್' ಎಂಬ ದುಃಖಮಯ ನರಕದಿಂದ ತಂದೆ ತಾಯಿಂದಿರನ್ನು ಪಾರು ಮಾಡುವವನೇ ಪುತ್ರ. 'ಆತ್ಮಾವೈಪುತ್ರನಾಮಾಸಿ' ಎಂಬಂತೆ ತಂದೆಯೇ ಒಂದು ರೂಪದಿಂದ ಪತ್ನಿಯಲ್ಲಿ ಪ್ರವೇಶಿಸಿ ಪುತ್ರನಾಗಿ ಹುಟ್ಟುವನು. ಸತ್ಪುತ್ರರನ್ನು ಕಂಡರೆ ಇಂದ್ರದೇವನೆ ಭಯಪಡುವನು.

**ನರಕಂ ಪುದಿತಿ ಖ್ಯಾತಂ ದುಃಖಂ ಚ ನರಕಂ ವಿದುಃ ।**
**ಪುದಃ ತ್ರಾಣಾತ್ ತತಃ ಪುತ್ರ ಮಿಹೇಚ್ಛತಿ ಪರತ್ರ ಚ ॥ 6 ॥**

ಸತ್ಪುತ್ರನಿಲ್ಲದೆ ಉಭಯತ್ರ ಗತಿ ಇಲ್ಲ. ಆದರೆ ಕುಪುತ್ರನಿಂದ ಕುಲವನ್ನೆ ದುಃಖಕ್ಕೀಡು ಮಾಡುವುದರಿಂದ ಇಂತಹ ಸಂತಾನಕ್ಕಿಂತ ಬಂಜೆತನವೇ ಲೇಸು.

ಆದ್ದರಿಂದ ನಿನಗೆ ಸುಪುತ್ರನಾದ ಮಗನನ್ನೆ ಕರುಣಿಸುವೆ. ಅದಕ್ಕಾಗಿ ನಾನು ಕೈಲಾಸಪರ್ವತಕ್ಕೆ ಹೋಗಿ ಪಾರ್ವತೀ ಸಹಿತನಾದ ಶಂಕರನನ್ನು

ಬ್ರಹ್ಮಚರ್ಯೆ ತಪಸ್ಸಿನಿಂದ ಸಂತೋಷಪಡಿಸಿ ಅವನ ಅನುಗ್ರಹದಿಂದ ಸುಪುತ್ರನನ್ನು ಪಡೆಯುವೆ.

**ತತೋಽಪಾಸ್ಯ ಮಹಾದೇವಂ ಶಂಕರಂ ನೀಲಲೋಹಿತಮ್ ।**
**ತತೋ ಲಬ್ಧಾಸ್ಮಿ ಪುತ್ರಂ ತೇ ಭವಾದ್ ಭೂತಹಿತೇ ರತಾತ್ ॥ 7 ॥**

ಇಂದೇ ನಾನು ಶಿವನನ್ನು ಕಾಣಲು ಕೈಲಾಸಕ್ಕೆ ಹೊರಡುವೆನು. ಭಗವಂತನ ಆಜ್ಞೆಯಂತೆ ಶಿವನು ಮೋಹಶಾಸ್ತ್ರಗಳನ್ನು ರಚಿಸಿದನು. ಅದರಲ್ಲಿ ಕೈಲಾಸಯಾತ್ರೆ, ಪುತ್ರನಿಗಾಗಿ ಹನ್ನೆರಡುವರ್ಷ ತಪಸ್ಸು ಇತ್ಯಾದಿ ವರ್ಣಿತವಾಗಿರುತ್ತವೆ. ಇದು ದರ್ಶನ ಭಾಷೆಯಿಂದ ಹರಿವಂಶದಲ್ಲಿ ವರ್ಣಿತವಾಗಿದೆ. ಸಂತಾನ ಗೋಪಾಲಕೃಷ್ಣನಿಗೆ ಸಂತಾನಕ್ಕೆ ಬರವಿಲ್ಲವಿಷ್ಟೆ. ಶ್ರೀಕೃಷ್ಣಾವತಾರ ಮರ್ತ್ಯರಿಗೆ ಶಿಕ್ಷಣ ನೀಡಲೆಂದು ಬಂದಿರುವ ರೂಪವಾದ್ದರಿಂದ ಉತ್ತಮ ಸಂತಾನ ಇಚ್ಛಿಸುವವರು ಶಿವಪಾರ್ವತಿಯ ಉಪಾಸನೆ ಮಾಡಿ ಎಂದು ಭವಿಷ್ಯಕ್ಕೆ ಶಿಕ್ಷಣ.

ಶಿವನನ್ನು ಕುರಿತು ಶಿವನೇ! ಕೃತಾದಿಗಳಲ್ಲಿ ನಾನು ಅವತರಿಸಿ ಜನರ ಶಿಕ್ಷಣಕ್ಕಾಗಿ ವರವನ್ನು ನಿನ್ನಿಂದ ಪಡೆಯುವೆ *[ತ್ವಾಮಾರಾಧ್ಯ ವರಂ ಗ್ರಹೀಷ್ಯಾಮಿ]* ಇತ್ಯಾದಿಗಳಿಂದ ಗುಪ್ತವಾದ ಈ ಪ್ರಕರಣವನ್ನು ಜನಮೇಜಯನೇ ತಿಳಿ.

**ತತ್ರಗತ್ವಾ ಮಹಾದೇವಂ ನಮಸ್ಕೃತ್ಯ ಸಹೋಮಯಾ ।**
**ಪ್ರವಿಶ್ಯ ಬದರೀಂ ಪುಣ್ಯಾಂ ಮುನಿ ಜುಷ್ಟಾಂ ತಪೋಮಯಿಮ್ ॥ 8 ॥**

ರುಕ್ಮಿಣೀ, ಆದ್ದರಿಂದ ನಾನು ಕೈಲಾಸಕ್ಕೆ ಹೋಗಿ ಉಮಾಸಹಿತ ಶಿವನನ್ನು ನಮಸ್ಕರಿಸಿ ಅಲ್ಲಿಂದ ಮುನಿಗಳ ತಪಸ್ಸಿಗೆ ಸಿದ್ಧಭೂಮಿಯೆನಿಸಿದ ಬದರಿಗೆ ಹೋಗುವೆನು. ಅಲ್ಲಿ ಪರಮಪಾವನೆಯಾದ ಗಂಗೆಯು ಹರಿಯುತ್ತಿರುವಳು. ಹೀಗೆ ಹೇಳಿ ಅವಳನ್ನು ಸಂತೈಸಿದನು.

ಶ್ರೀಕೃಷ್ಣನು ಸರ್ವಜ್ಞನೂ ಸರ್ವಶಕ್ತನೂ ಸರ್ವಸ್ವತಂತ್ರನೂ ಸರ್ವೇಶ್ವರನೂ ಆಗಿದ್ದರೂ ಈ ರೀತಿ ಲೋಕವಿಡಂಬನೆ ಮಾಡುತ್ತಾ ಮಾನುಷರಾದಾಗ ಮನುಷ್ಯರಂತೆಯೂ ಚೇಷ್ಟೇ ಮಾಡಬೇಕು. ತಮ್ಮ ನಿಜಶಕ್ತಿ ಪ್ರದರ್ಶಿಸಬಾರದೆಂಬ ನೀತಿಯನ್ನರುಹಲು ಹೀಗೆ ಮಾನುಷರಂತೆ ನಟಿಸಿದನು.

ಹರಿಯು ಬ್ರಹ್ಮನಲ್ಲಿ ಅಂತರ್ಯಾಮಿಯಾಗಿದ್ದು ಬ್ರಹ್ಮನೆನಿಸಿದರೆ, ಶಿವನಲ್ಲಿ ಶಿವಾಂತರ್ಯಮಿಯಾಗಿ ಶಿವನೆನಿಸುವನು. ತ್ರಿಮೂರ್ತಿಗಳು ಎಂದಿಗೂ ಒಂದಾಗಲಾರದು. ಹರಿಹರರು ಸಮಾನರಲ್ಲ ಹಾಗೂ ಇತರರಿಂದ ಹರಿಗೆ ಆಗಬೇಕಾದದ್ದೇನೂ ಇಲ್ಲ. ಇದೇ ಪರಮರಹಸ್ಯವು.

**ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ**
**ಶ್ರೀಕೃಷ್ಣನ ಕೈಲಾಸಯಾತ್ರೆ ಎಂಬಲ್ಲಿ**
**ಮೂವತ್ತಮೂರನೆಯ ಅಧ್ಯಾಯವು ಸಮಾಪ್ತಿ**

# ಅಥ ಚತುಸ್ತ್ರಿಂಶೋಽಧ್ಯಾಯಃ

## ದ್ವಾರಕೆ ರಕ್ಷಣೆಗೆ ಆದೇಶ

ರಾಜನೇ! ಪ್ರಾತಃಕಾಲ ಕೈಲಾಸಕ್ಕೆ ಹೊರಡಲು ನಿಶ್ಚೈಯಿಸಿದ ಕೃಷ್ಣನು ಪ್ರಾತಕಾಲೀನ ಆಹ್ನಿಕ ಮುಗಿಸಿ, ಬ್ರಾಹ್ಮಣರಿಗೆ ದಾನಾದಿಗಳನ್ನು ನೀಡಿ ನಮಸ್ಕರಿಸಿ ಸಭಾಮಂಟಪ ಪ್ರವೇಶಿಸಿದನು.

ತನ್ನವರಾದ ಬಲದೇವ, ಸಾತ್ಯಕೀ, ಉಗ್ರಸೇನಾದಿ ಯಾದವರೆಲ್ಲರನ್ನು ಕರೆಸಿದನು. ಹಾಗೆಯೆ ಮಹಾಬುದ್ಧಿಶಾಲಿಯಾದ ಉದ್ಧವನನ್ನು ಕರೆಸಿ ಹೀಗೆಂದನು.

**ಶೃಣ್ವಂತು ಮಮ ವಾಕ್ಯಾನಿ ಯಾದವಾಃ ಸರ್ವ ಏವ ಹಿ ।**
**ಬಾಲ್ಯಾತ್ ಪ್ರಭೃತಿ ಯೋಯತ್ನಃ ಮಮ ದುಷ್ಟನಿಬರ್ಹಣೇ ॥ 1 ॥**

ಯಾದವರೆ ನನ್ನ ಮಾತನ್ನು ಕೇಳಿರಿ. ಉದ್ಧವನೆ ನೀನು ಕೇಳು. ನಾನು ಬಾಲ್ಯದಾರಭ್ಯ ದುಷ್ಟರನ್ನು ನಿಗ್ರಹ ಮಾಡುವುದರಲ್ಲಿಯೇ ನನ್ನನ್ನು ತೊಡಗಿಸಿಕೊಂಡಿದ್ದೇನೆ. ಪೂತನಾವಧಾದಿ ನೀವೆಲ್ಲರೂ ಅದನ್ನು ನೋಡಿರುವಿರಿ.

ಗೋವು ಗೋಪಿಯರ ರಕ್ಷಣೆಗಾಗಿ ಗೋವರ್ಧನೋದ್ಧಾರ, ಚಾಣೂರ, ಮುಷ್ಟಿಕಾದಿಗಳ ವಧೆ, ಕಂಸನನ್ನು ತೃಣಪ್ರಾಯನಾಗಿ ಮಾಡಿರುವೆ. ಯಾದವರ ರಕ್ಷಣೆಗಾಗಿಯೇ ದ್ವಾರಕೆಯನ್ನು ಸಮುದ್ರದಲ್ಲಿ ನಿರ್ಮಿಸಿ ಸುಭದ್ರವಾಗಿಯೂ ಮಾಡಿರುವೆ.

ನನ್ನಿಂದಲೇ ನರಕಾಸುರ ಶೃಗಾಲರನ್ನು ಸದೆ ಬಡೆದು ರಾಜ್ಯಕನ್ಯೆಯರನ್ನು ಬಿಡಿಸಿ ತಂದಿರುವೆ.

**ಪೌಂಡ್ರೋ ವೀರ್ಯವತಾಂ ನೇತಾ ದ್ವೇಷ್ಟಾ ಚಾಸೌ ಸದಾ ಮಮ ।**
**ಏಕಾಂತಶತ್ರುರಸ್ಮಾಕಂ ಛಿದ್ರಾನ್ವೇಷೀ ಸದಾ ಮಮ ॥ 2 ॥**

ಪ್ರಸ್ತುತ ದುಷ್ಟಾಗ್ರೇಸರನ್ನೂ ಪುಂಡ್ರದೇಶಾಧಿಪತಿ ಪೌಂಡ್ರಕನು ಹುಟ್ಟಿನಿಂದಲೂ ನಮ್ಮನ್ನು ದ್ವೇಷಿಸುತ್ತಾ ಇರುವನಲ್ಲದೆ ಅವಕಾಶ ಒದಗಿದರೆ ದ್ವಾರಕೆಗೆ ಮುತ್ತಿಗೆ ಹಾಕಿ ಸೋಲಿಸಲೂ ಹವಣಿಸುತ್ತಿರುವನು.

## ದ್ವಾರಕಾ ರಕ್ಷಣೆಗೆ ಪ್ರಯತ್ನ

ಆದ್ದರಿಂದ ಪೌಂಡ್ರಕನು ವೀರನೂ ಆಗಿದ್ದು ಹೇಗೆ ಅವನು ದ್ವಾರಕೆಯನ್ನು ಆಕ್ರಮಣ ಮಾಡಲಾರನೊ ಹಾಗೆ ನಾವೆಲ್ಲರೂ ಅತಿ ಜಾಗರೂಕರಾಗಿರಬೇಕು.

**ಅಹಂ ತು ಯಾಸ್ಯೇ ಕೈಲಾಸಂ ಕುತಶ್ಚಿತ್ ಕಾರಣಾನ್ ನೃಪಾಃ ।**
**ಯಾವದಾಗಮನಂ ಮಹ್ಯಂ ತಾವದ್ ಯತ್ತಾ ಭವಂತ್ವಿಹ ॥ 3 ॥**

ಮಿತ್ರರೇ! ನಾನಾದರೂ ಕಾರ್ಯಾಂತರದಿಂದಾಗಿ ಕೈಲಾಸಕ್ಕೆ ಹೋಗುತ್ತಿದ್ದೇನೆ. ನಾನು ಬರುವವರೆಗೂ ನೀವೆಲ್ಲರೂ ಅತಿ ಜಾಗ್ರತೆಯಿಂದ ಇದ್ದು ಅಸ್ತ್ರಶಸ್ತ್ರಗಳನ್ನು ಸಿದ್ಧಗೊಳಿಸಿ ಪೌಂಡ್ರಕನು ದ್ವಾರಕೆಗೆ ಪ್ರವೇಶ ಮಾಡದಂತೆ ಎಚ್ಚರಿಕೆ-ಯಿಂದಿರಬೇಕು.

ಕತ್ತಿ ಮೊದಲಾದ ಆಯುಧಗಳಿಂದ ಸಜ್ಜಾಗಿದ್ದು ಮಹಾದ್ವಾರಗಳನ್ನೆಲ್ಲ ಭದ್ರಗಳಾದ ಬೀಗಗಳಿಂದ ಬಿಗಿದು ತೆಗೆಯಲಾಗದಂತೆ ರಕ್ಷಿಸಬೇಕು. ನಾನು ಬರುವವರೆಗೂ ನಿಮ್ಮಲ್ಲಿ ಯಾರೂ ಬೇಟೆ, ಆಟಕ್ಕಾಗಲಿ, ದ್ವಾರಕೆಯಿಂದ ಹೊರಗೆ ಹೋಗಬಾರದು ಎಂದು ಎಚ್ಚರಿಕೆ ನೀಡಿದನು.

## ಸಾತ್ಯಕಿಗೆ ವಿಶೇಷ ಎಚ್ಚರ

**ಸಾತ್ಯಕೇ ಶೃಣು ಮದ್ವಾಕ್ಯಂ ಯತ್ತೋ ಭವ ಯುಧಾಂ ವರ ।**
**ತ್ವಂ ಖಡ್ಗೀ ಗದೀ ಭೂತ್ವಾ ಚಾಪಪಾಣಿಃ ಪ್ರಮತ್ತವಾನ್ ॥ 4 ॥**

ಸಾತ್ಯಕೀ! ನೀನು ಮಾತ್ರ ಬಹು ಎಚ್ಚರಿಕೆ ವಹಿಸಬೇಕು. ಕತ್ತಿ, ಗುರಾಣಿ, ಕವಚಧರಿಸಿ ದ್ವಾರಕೆಯನ್ನು ಅಪ್ರಮತ್ತನಾಗಿ ರಕ್ಷಿಸುತ್ತಿರಬೇಕು.

ನಿದ್ರಾಪರವಶನಾಗದೆ ಶಾಸ್ತ್ರಾರ್ಥ ವಿಚಾರದಲ್ಲಿ ಆಸಕ್ತನಾಗದೆ ರಕ್ಷಣೆ ಮಾಡು. ನಾನಿಲ್ಲದಿದ್ದಾಗ ಪರಕೀಯರು ದ್ವಾರಕೆಯನ್ನು ಪ್ರವೇಶಿಸುವಂತೆ ಮಾಡಿ ಅಪಹಾಸ್ಯಕ್ಕೀಡು ಮಾಡಬೇಡ ಎಂದಾಗ, ಸಾತ್ಯಕಿಯು ಹಾಗೆ ಆಗಲಿ ಎಂದನು.

ನಂತರ ಶ್ರೀಕೃಷ್ಣನು ಉದ್ಧವನಿಗೂ – ನೀನು ಈ ರಕ್ಷಣಾ ಕಾರ್ಯದಲ್ಲಿ ಪ್ರಧಾನ ಪಾತ್ರವಹಿಸಬೇಕು. ಸರ್ವವನ್ನೂ ಬಲ್ಲ ನಿನಗೆ ಹೇಳುವುದೇನಿದೆ. ಎಂದಾಗ, ಸ್ವಾಮಿ ಅಂತಹ ಮಹತ್ವ ನನ್ನಲ್ಲಿ ಏನಿದೆ? ನಂತರ ಬಲರಾಮ ಉಗ್ರಸೇನರಿಗೂ ರಕ್ಷಣೆಯ ವಿಷಯ ಹೇಳಿದನು. ಅಗ್ರಜ! ನೀನು ಎಚ್ಚರದಿಂದ ಇದ್ದರೆ ಇಡೀ ಜಗತ್ತಿನಲ್ಲಿಯೇ ಯಾವುದೇ ಕ್ಷೋಭೆಯಾಗಲಾರದು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ದ್ವಾರಕ ರಕ್ಷಣೆಗೆ ಶ್ರೀಕೃಷ್ಣನ ಆದೇಶ ಎಂಬಲ್ಲಿ
ಮೂವತ್ತನಾಲ್ಕನೆಯ ಅಧ್ಯಾಯವು ಸಮಾಪ್ತಿ

# ಅಥ ಪಂಚತ್ರಿಂಶೋಽಧ್ಯಾಯಃ

## ಗರುಡಾಗಮನ–ಬದರೀ ಪ್ರಯಾಣ

**ವಾಹನಂ ದೇವದೇವಸ್ಯ ದಾನವೀಗರ್ಭಕೃಂತನಃ ।**
**ಪ್ರಾದುರಾಸೀನ್ ಮಹಾವೀರ್ಯಃ ಕೇಶವಸ್ಯಾಗ್ರತಸ್ತದಾ ॥ 1 ॥**

**ಪಸ್ಪರ್ಶ ಪಾಣಿನಾ ಕೃಷ್ಣಃ ಸ್ವಾಗತಂ ತಾರ್ಕ್ಷ್ಯ ಪುಂಗವಮ್ ॥ 2 ॥**

ಶ್ರೀಕೃಷ್ಣನು ಕೈಲಾಸಕ್ಕೆ ತೆರಳಲು ತನ್ನ ವಾಹನ ಗರುಡನನ್ನು ಸ್ಮರಿಸಿದನು. ಸ್ಮರಿಸುತ್ತಿರುವಂತೆಯೇ ನಾಗಾರಿಯು ಅವನ ಮುಂದೆ ನಿಂತನು. ಮಂಡಿಯೂರಿ ನಮಸ್ಕರಿಸಿದನು.

ಶ್ರೀಕೃಷ್ಣನು ಭಕ್ತಾಗ್ರೇಸರನಾದ ಗರುಡನ ಅಂಗಾಂಗಗಳನ್ನು ತನ್ನ ಅಮೃತಮಯ ಹಸ್ತದಿಂದ ಪಸರಿಸಿ ಆತನನ್ನು ಸ್ವಾಗತಿಸಿದನು.

ನಂತರ ತನ್ನ ಕೈಲಾಸಯಾತ್ರೆಯನ್ನು ಶಿವದರ್ಶನಾಕಾಂಕ್ಷಿಯಾಗಿ ಹೊರಡುತ್ತಿರುವ ವಿಷಯ ಹೇಳಿ ಅವನ ಹೆಗಲ ಮೇಲೇರಿ ಕುಳಿತು, ಅಲ್ಲಿ ತನ್ನನ್ನು ಬೀಳ್ಕೊಡಲು ನೆರೆದಿದ್ದ ಯಾದವರಿಗೆಲ್ಲ ಹೋಗಿ ಬರುವೆನೆಂದು ಹೇಳಿ ಹೊರಟನು.

ನಂತರ ಶ್ರೀಕೃಷ್ಣನು ಈಶಾನ್ಯ ದಿಕ್ಕಿಗೆ ಹೋದನು. ಗರುಡನು ವೇಗವಾಗಿ ತೆರಳುತ್ತಿದ್ದಾಗ ಮೂರು ಲೋಕಗಳೇ ನಡುಗುವಂತಿತ್ತು. ಗಗನದಲ್ಲಿ ಗರುಡವಾಹನನನ್ನು ವಿಧವಿಧ ಸ್ತೋತ್ರಗಳಿಂದ ಗಂಧರ್ವಾದಿಗಳು ಸ್ತುತಿಸಿದರು.

**ನಮಸ್ತೇ ಸಕಲೇಶಾಯ ನಿರ್ಗುಣಾಯ ಗುಣಾತ್ಮನೇ ।**
**ನಾರಾಯಣ ನಮೋ ದೇವ ಕೃಷ್ಣ ಕೃಷ್ಣ ಹರೇ ಹರೇ ॥ 3 ॥**

ಹೀಗೆ ಶ್ರೀಕೃಷ್ಣನು ಸಿದ್ಧ ಗಂಧರ್ವರ ಸ್ತುತಿ ಆಲಿಸುತ್ತಾ ತಾನು ಹಿಂದೆ ನರನಾರಾಯಣ ರೂಪದಿಂದ ಹತ್ತು ಸಾವಿರ ವರ್ಷ ತಪಸ್ಸು ಮಾಡಿದ್ದ ಬದರಿಗೆ ಬಂದನು.

**ಯತ್ರ ಪೂರ್ವಂ ಸ್ವಯಂ ವಿಷ್ಣುಃ ತಪಸ್ತೇಪೇ ಸುದಾರುಣಮ್ ।**
**ವರ್ಷಾಯುತಂ ತಪಸ್ತಪ್ತಂ ವಿಷ್ಣುನಾ ಪ್ರಭವಿಷ್ಣುನಾ ॥ 4 ॥**

ಯಾವ ಬದರಿಯಲ್ಲಿ ಪಾವನೆಯಾದ ಸುರನದಿಯು ಹರಿಯುತ್ತಿರುವುದೋ ಯಾವ ಪುಣ್ಯಕ್ಷೇತ್ರದಲ್ಲಿ ವೃತ್ರಾಸುರನನ್ನು ಕೊಂದ ಇಂದ್ರದೇವನು ಬ್ರಹ್ಮಹತ್ಯಾ ಪರಿಹಾರಕ್ಕಾಗಿ ಹತ್ತು ವರ್ಷ ತಪಸ್ಸನ್ನಾಚರಿಸಿದನೋ

**ಸಿದ್ಧ ಕ್ಷೇತ್ರಮಿದಂ ಪ್ರಾಹುಃ ಋಷಯೋ ವೀತಮತ್ಸರಾಃ ।**
**ವಿಶಾಲಾಂ ಬದರೀಂ ವಿಷ್ಣುಸ್ತಾಂ ದ್ರಷ್ಟುಂ ಸಕಲೇಶ್ವರಃ ॥ 5 ॥**

ಯಾವ ಕ್ಷೇತ್ರದ ಸ್ಮರಣೆಯಿಂದಲೆ ಮಾನವರು ಉತ್ತಮಲೋಕವನ್ನು ಹೊಂದುವರೋ ಯಾವ ಸ್ಥಳದ ಮಹಿಮೆಯಿಂದಾಗಿ ಶತ್ರುಗಳೂ ಮಿತ್ರರಾಗುವರೋ, ಯಾವುದು ಸ್ವರ್ಗಕ್ಕೆ ಹಾಕಿದ ಮೆಟ್ಟಿಲೆಂದು ಪ್ರಸಿದ್ಧಿ ಹೊಂದಿದೆಯೋ ಅಂತಹ ಸರ್ವಸಿದ್ಧಿ ಕ್ಷೇತ್ರವಾದ ವಿಶಾಲ ಬದರಿಯನ್ನು ಸಾಯಂಕಾಲ ತಲುಪಿದನು.

ಅನೇಕ ಋಷಿ ಮುಖ್ಯರು ಅವನನ್ನು ಸ್ವಾಗತಿಸಿದರು. ಹರಿಯು ಗರುಡನಿಂದ ಇಳಿದು ದೇವತೆಗಳೊಂದಿಗೆ ಸೇರಿಕೊಂಡನು.

ಶ್ರೀಕೃಷ್ಣನು ಬಂದ ವಿಷಯ ತಿಳಿದ ಕೂಡಲೇ ವಶಿಷ್ಠ ವಾಮದೇವಾದಿ ಅನೇಕ ಋಷಿಗಳು ಮುನಿಜನರೂ ಅರ್ಘ್ಯಪಾದ್ಯದಿ ಉಪಚಾರ ಸಾಮಾಗ್ರೀ ಹಿಡಿದು ಕೃಷ್ಣ ದರ್ಶನಾಕಾಂಕ್ಷಿಯಾಗಿ ಬಂದರು. ಹಾಗೂ ಸಾಷ್ಟಾಂಗ ಪ್ರಣಾಮಗೈದರು. ಉಪಚಾರ ನೀಡಿದರು. ಮುನಿವರರೇ! ನೀವು ಈವರೆಗೂ ಮಾಡಿರುವ ತಪಸ್ಸು ವೃದ್ಧಿಯಾಗಿ ಸಫಲವಾಗಲಿ ಎಂದು ಹರಸಿದ.

## ಶ್ರೀಕೃಷ್ಣನ ತಪಸ್ಸಮಾಧಿ

ಶ್ರೀಕೃಷ್ಣನು ಹಿಂದೆ ತಾನು ತಪಸ್ಸನ್ನು ಮಾಡಿದ್ದನೋ ಅಂತಹ ಗಂಗಾನದಿಯ ಉತ್ತರ ಪುಣ್ಯ ಸ್ಥಳದಲ್ಲಿದ್ದ ತಪೋವನದ ಆಶ್ರಮದಲ್ಲಿ ತಪಸ್ಸಿಗಾಗಿ ಕುಳಿತನು.

ಅಷ್ಟರಲ್ಲಿಯೇ, ಓಡಿ ಓಡಿ ಆ ಮೃಗಗಳನ್ನು ಕೊಂದು ಹಾಕಿರಿ. ಶ್ರೀಕೃಷ್ಣನು ದಯ ಮಾಡಿಸಿರುವನು. ಸ್ವಾಮಿನ್ ಶ್ರೀಕೃಷ್ಣನೇ ನಾನು ನಿನಗೆ ಅನಂತಾನಂತ ಪ್ರಣಾಮ ಮಾಡುತ್ತಿರುವೆನು ಎಂಬ ಮಾತುಗಳು, ಸಿಂಹಗರ್ಜನೆ, ಬೇಟೆ ನಾಯಿಗಳ ಬೊಗಳುವ ಶಬ್ದಗಳೂ ಇವುಗಳಿಂದ ಕೋಲಾಹಲವೇರ್ಪಟ್ಟಿತ್ತು.

**ಏಷ ವಿಷ್ಣುರಯಂ ಕೃಷ್ಣೋ ಹರಿರೀಶ ಇತೋಽಚ್ಯುತಃ ।**
**ನಮೋಽಸ್ತು ವಿಷ್ಣೋ ದೇವೇಶ ಸ್ವಾಮಿನ್ ಮಾಧವ ಕೇಶವ ॥ 6 ॥**

ಶ್ರೀಕೃಷ್ಣನು ತನ್ನ ತಪಸ್ಸಿಗೆ ವಿಘ್ನವುಂಟು ಮಾಡುವ ಶಬ್ದವೆಲ್ಲಿಂದ ಬರುತ್ತಿದೆ. ಸ್ತುತಿಸುವ ಶಬ್ದಗಳೂ ಕೇಳಿಸುತ್ತಿವೆ ಎಂದು ಯೋಚಿಸುತ್ತಾ ಸುತ್ತಲೂ ದೃಷ್ಟಿಸಿದನು.

ಬೇಟೆಯಾಡುವ ಮೃಗಗಳನ್ನು ಹಿಂಬಲಿಸುತ್ತಾ ಮಹಾಘೋರ ಪಿಶಾಚಿಗಳೂ, ಭೂತಗಳೂ ಕಂಡುಬಂದವು. ಅವು ಅತ್ಯಂತ ವಿಕಾರವಾಗಿ ಅರಚುತ್ತಿದ್ದವು. ರಕ್ತಮಾಂಸಗಳನ್ನು ತಿನ್ನುತ್ತಾ ವಿಕಾರ ರೂಪಗಳಿಂದ ಕಾಣಿಸಿಕೊಂಡವು.

ರಾಜನೇ! ಇಂತಹ ಘೋರಾರಣ್ಯದಲ್ಲಿ ಶ್ರೀಕೃಷ್ಣನ ಸುತ್ತಲೂ ಪಿಶಾಚಿಗಳೂ ಮೃಗಗಳೂ, ಬೇಟೆಗಾರರು ನಿಂತರು. ಅವುಗಳಲ್ಲಿ ಪ್ರಧಾನಗಳಾದ ಎರಡು ಪಿಶಾಚಿಗಳು ಮುಂದೆ ಬಂದು ನಿಂತವು. ಅವುಗಳಿಗೆ ಉದ್ದವಾದ ನಾಲಿಗೆ, ಜೋತು ಬಿದ್ದ ಕೂದಲುಗಳು, ಬಾಯಲ್ಲಿ ಮಾಂಸತುಂಡುಗಳು ವಿಕಾರ ಸ್ವರದಿಂದ ಕೂಗುತ್ತಾ ಮಧ್ಯೆ ಮಧ್ಯೆ ಬಾಯಲ್ಲಿ ಕೃಷ್ಣ – ಮಾಧವ ಎಂದು ಹರಿನಾಮಗಳನ್ನು ಉಚ್ಚರಿಸುತ್ತಾ ವಿಷ್ಣುವು ನಮಗೆಂದು ದರ್ಶನ ನೀಡುವನೋ, ಎಲ್ಲಿರುವನೋ, ಎಂದು ಕಾಣಸಿಗುವನೋ ಎಂದು ಹಂಬಲಿಸುತ್ತಿದ್ದವು.

**ಕದಾನು ದ್ರಕ್ಷ್ಯತೇ ವಿಷ್ಣುಃ ಇದಾನೀಂ ಕ್ವ ತಿಷ್ಠತಿ ।**
**ಸ್ವಾಮಿನಃ ಕುತ್ರ ವಸತಿಃ ಕುತೋ ದ್ರಷ್ಟುಂ ಯತಾಮಹೇ ॥ 7 ॥**

ಜನ್ಮಾಂತರಗಳಲ್ಲಿ ಮಾಡಿದ ಪಾಪಗಳಿಂದಾಗಿ ಈ ಪೈಶಾಚ ಜನ್ಮ ಪ್ರಾಪ್ತವಾಗಿದೆ. ಲೋಕದಲ್ಲಿ ಮಾನವರು ಅಜ್ಞಾನಕ್ಕೆ ಸಿಲುಕಿ ಬಾಲ್ಯದಲ್ಲಿ ಜ್ಞಾನಶೂನ್ಯರಾಗಿಯೂ, ಯೌವನದಲ್ಲಿ ವಿಷಯದಲ್ಲಿ ಆಸಕ್ತರಾಗಿ ವಿವೇಕ ಶೂನ್ಯರಾಗಿ ಸ್ವಧರ್ಮಗಳನ್ನಾಚರಿಸದೆ ಮತ್ತರಾಗಿ ಶ್ರೇಯೋಮಾರ್ಗದಿಂದ ವಂಚಿತರಾಗುವರು. ವೃದ್ಧಾಪ್ಯದಲ್ಲಿ ನಾನಾ ವಿಧ ರೋಗ ರುಜಿನಗಳಿಂದ ಪೀಡಿತರಾಗಿ ಕಾಲವಶರಾಗಿ ನರಕಾದ್ಯನರ್ಥ ಹೊಂದುವರು. ಅನೇಕ

ಜನ್ಮವೇತ್ತಿ ಅಲ್ಲಿಯೂ ಜ್ಞಾನವಿಲ್ಲದೆ ಪರರ ಧನಕನಕಾದಿ ಪರನಾರಿಯರನ್ನು ಅಪಹರಿಸಿ ಹೀಗೆಲ್ಲ ನಾನಾ ವಿಧ ಹಿಂಸೆಗಳಿಗಾಗಿ ನರಕಾದಿ ಅನರ್ಥ ಹೊಂದಿ ನಾನಾ ವಿಧ ದುಃಖಪಡುವರು. ನಾವು ಮಾಡಿದ್ದೆಲ್ಲ ಇಂತಹುದೆ ಅದಕ್ಕಾಗಿ ಈ ಪಿಶಾಚ ಜನ್ಮ ಬಂದಿದೆ.

ಈ ಎಲ್ಲಾ ದುಷ್ಕರ್ಮಗಳಿಗೆ ಒಂದೇ ಔಷಧಿ. ಚಕ್ರಶಂಖಗದಾಪದ್ಮಧಾರಿಯದ ನಾರಾಯಣನನ್ನು ಭಕ್ತಿಯಿಂದ ಭಜಿಸುವುದು.

ಆದ್ದರಿಂದ ಅವನನ್ನು ಹುಡುಕಿ ಕಾಣಲೇಬೇಕು ಎಂದು ಹೇಳುತ್ತಾ ಶ್ರೀಕೃಷ್ಣನ ಮುಂದೆ ನಿಂತವು.

## ಘಂಟಾಕರ್ಣ ಪಿಶಾಚಿಗಳು

**ವಿಲೋಕಯಾಂಚಕ್ರತುಃ ತೌ ಪಿಶಾಚೌ ದೇವಕೀ ಸುತಮ್ ।**
**ಕೋ ಭವಾನ್ ಕಸ್ಯ ವಾ ಮರ್ತ್ಯ ಕುತಶ್ಚಾಗಮ್ಯತೇ ತ್ವಯಾ ॥ 8 ॥**
**ಕಿಮರ್ಥಮಿಹ ಸಂಪ್ರಾಪ್ತಃ ವನೇ ಘೋರೇ ಮೃಗಾಕುಲೇ ॥ 9 ॥**

ತರುವಾಯ ಶ್ರೀಕೃಷ್ಣನು ಬೆಂಕಿಯ ಕೊಳ್ಳಿಯನ್ನು ಹಿಡಿದಿರುವ ವಿಕೃತಾಕಾರದ ಪಿಶಾಚಿಗಳನ್ನು ನೋಡಿದನು.

ಆಗಲೇ ಪಿಶಾಚಿಗಳು ಆತನನ್ನು ಸಮೀಪಿಸಿ – ತಾವು ಯಾರು? ಯಾರ ಮಗ? ಘೋರಾರಣ್ಯಕ್ಕೆ ಬಂದ ಕಾರಣವೇನು? ನಿನ್ನನು ನೋಡಿದರೆ ಸುಂದರನಾದ ವಿಷ್ಣುವಿನಂತೆಯೇ ತೋರುತ್ತಿರುವೆ. ನಿನ್ನನ್ನು ನೋಡುತ್ತಿದ್ದರೆ ಕಮಲಪತ್ರ ನಯನನಾದ ವಿಷ್ಣುವೇ ನಮ್ಮನ್ನು ಉದ್ಧರಿಸಲು ಬಂದಂತಿದೆ ಎಂದಾಗ,

**ಲೋಕಾನಾಮಥ ಪಾತಾಸ್ಮಿ ಶಾಸ್ತ್ರ ದುಷ್ಟಸ್ಯ ಸರ್ವದಾ ।**
**ಯದುವಂಶೇ ಸಮುತ್ಪನ್ನಃ ಕ್ಷಾತ್ರಂ ವೃತ್ತಮನುಷ್ಠಿತಃ ॥ 10 ॥**

ಕೃಷ್ಣನು ವನೇಚರರೇ ನಾನು ಕ್ಷತ್ರಿಯನಾಗಿರುವೆ. ಹಾಗೂ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುತ್ತಿರುವೆ. ನಾನು ಕೈಲಾಸಾಧಿಪತಿ ಶಿವನನ್ನು ನೋಡಲು ಕೈಲಾಸಕ್ಕೆ ಹೊರಡಲು ಬಂದಿರುವೆನು.

ನೀವಿಬ್ಬರೂ ಯಾರಾಗಿರುವಿರಿ. ಈ ಬ್ರಾಹ್ಮಣಾಶ್ರಮಕ್ಕೆ ಏಕೆ ಬಂದಿರುವಿರಿ. ಈ ಕ್ಷೇತ್ರವು ಪುಣ್ಯಕರವಾಗಿದ್ದು ಋಷಿಮುನಿ ಬ್ರಾಹ್ಮಣಾದಿಗಳಿಗೆ ಧ್ಯಾನ ಪ್ರವಚನಾದಿಗಳಿಗೆ ಪ್ರಸಿದ್ಧವಾದ ಸ್ಥಳ. ತಪಸ್ವಿಗಳಿಗೂ ಸಿದ್ಧಪುರುಷರಿಗೆ ಸಾಧನ

ಕ್ಷೇತ್ರವಾದ ಇಲ್ಲಿಗೆ ಮಾಂಸಭೋಜಿಗಳಾದ ಪಿಶಾಚಿಗಳಿಗೆ ಇಲ್ಲಿ ಸಂಚಾರ ನಿಷಿದ್ಧವು.

**ಅಹಮಸ್ಯ ತು ದೇಶಸ್ಯ ರಕ್ಷಿತಾ ನಾತ್ರ ಸಂಶಯಃ ।**
**ವ್ಯತಿಕ್ರಮೋ ಯದಿ ಭವೇತ್ ಶಾಸ್ತಾಸ್ಮಿ ಯತ್ನತಃ ॥ 11 ॥**

ಕೃತಘ್ನರು ದುಷ್ಟರು ನಾಸ್ತಿಕರಾಗಲಿ ಬರಬಾರದ ದೇಶವಿದು. ಈ ಪುಣ್ಯಕ್ಷೇತ್ರಕ್ಕೆ ರಕ್ಷಕನು ನಾನಾಗಿರುವೆನು. ನೀವಾರು? ನಿಮ್ಮ ಈ ದಂಡುಗಳಿಂದ ಋಷಿಮುನಿಗಳ ತಪೋಭಂಗವಾಗಬಹುದು. ಇಲ್ಲಿಂದ ಹೊರಟು ಹೋದರೆ ನಿಮಗೆ ಕ್ಷೇಮ.

ಹೀಗೆ ಹೇಳಲ್ಪಟ್ಟ ಪಿಶಾಚಿಗಳು ತಮ್ಮ ವಿಚಾರ ಹೇಳಲುಪಕ್ರಮಿಸಿದವು.

**ಘಂಟಾಕರ್ಣೋಽಸ್ಮಿ ನಾಮ್ನಾಹಂ ಪಿಶಾಚೋ ಘೋರದರ್ಶನಃ ।**
**ಧನದಸ್ಯಾನುಗಂತಾಹಂ ಸಾಕ್ಷಾದ್ ರುದ್ರಸಖಸ್ಯ ಚ ॥ 12 ॥**

ನಾನು ಘಂಟಾಕರ್ಣನೆಂಬ ಪಿಶಾಚಿಯು. ನಾನು ಶಿವನ ಮಿತ್ರನಾದ ಕುಬೇರನ ಅನುಯಾಯಿಯಾಗಿದ್ದು ಮದ್ಯಮಾಂಸ, ರಕ್ತಪಾನ ಮಾಡುವ ಘೋರ ಪಿಶಾಚಿಯು, ಇವನು ನನ್ನ ಸಹೋದರ ಹೆಸರು ಗಜಕರ್ಣ. ನಾನು ಸಾಕ್ಷತ್ ಅಂತಕನಿಗೂ ಅಂತಕನಾಗಿರುವೆನು.

ನಾನು ಮಾಡುತ್ತಿರುವ ಈ ಮೃಗಬೇಟೆ ವಿಷ್ಣು ಪೂಜೆಗಾಗಿ ನನ್ನ ಜೀವನಕ್ಕಾಗಿಯೂ ಇದೆ. ಈ ಬೇಟೆ ನಾಯಿಗಳೇ ನನ್ನ ಪರಿವಾರ.

ನಾನು ಭೂಗಣ ಸೇವಿತವಾದ ಕೈಲಾಸದಿಂದಲೇ ಬಂದಿರತಕ್ಕ ನಾನು ಪಾಪಕೃತ್ಯಗಳನ್ನೆಸಗುತ್ತಾ ಕಿವಿಗಳಿಗೆ ಎರಡು ಘಂಟೆಗಳನ್ನು ಕಟ್ಟಿ ಯಾರಾದರೂ ಹರಿನಾಮ ಹೇಳಿದರೆ ಆ ಹೆಸರು ಕೇಳಿಸಬಾರದಂತೆ ಕಿವಿಯನ್ನು ಹಂದಾಡಿಸುವೆನು. ವಿಷ್ಣುವನ್ನೆ ದೂಷಿಸುತ್ತಾ ಕೈಲಾಸವಾಸಿಯಾದ ಶಂಕರನನ್ನು ಸಮೀಪಿಸಿ ಸದಾ ಅವನನ್ನೆ ಧ್ಯಾನಿಸುತ್ತಿದ್ದೆ. ಪ್ರಸನ್ನನಾದ ಶಿವನು ವರ ಬೇಡು ಎಂದ ನಾನಾದರೂ

**ತತೋ ಮುಕ್ತಿರ್ಮಯಾ ತತ್ರ ಪ್ರಾರ್ಥಿದೇವಸನ್ನಿಧೌ ।**
**ಮುಕ್ತಿಪ್ರದಾತಾ ಸರ್ವೇಷಾ ವಿಷ್ಣುರೇವ ನ ಸಂಶಯಃ ।**
**ತಸ್ಮಾದ್ ಗತ್ವಾ ಚ ಬದರೀಂ ತತ್ರಾರಾಧ್ಯ ಜನಾರ್ದನಂ ॥ 13 ॥**

ಆದ್ದರಿಂದ ನೀನು ಬದರಿಕಾಶ್ರಮಕ್ಕೆ ಹೋಗು, ಅಲ್ಲಿ ನರ-ನಾರಾಯಣಾಶ್ರಮದಲ್ಲಿ ಜನಾರ್ದನನನ್ನು ಆರಾಧಿಸಿ ಮುಕುಂದನಿಂದಲೇ ಮುಕ್ತಿಯನ್ನು ಹೊಂದುವವನಾಗು ಎಂದನು.

ಗೋವಿಂದನೆ ಸರ್ವೋತ್ತಮನೆಂಬ ರುದ್ರನ ಆದೇಶ ಪಡೆದು ಇಲ್ಲಿಗೆ ಬಂದಿರುವೆನು.

ಇದಲ್ಲದೆ ಪಶ್ಚಿಮ ಸಮುದ್ರದ ತೀರದಲ್ಲಿ ದ್ವಾರಾವತೀಯೆಂಬ ಪಟ್ಟಣದಲ್ಲಿ ಪುರುಷೋತ್ತಮನಾದ ಶ್ರೀಹರಿಯು ಕೃಷ್ಣ ರೂಪದಿಂದ ಇರುವನಂತೆ, ಅವನನ್ನು ನೋಡಲೆಂದು ಪರಿವಾರ ಸಹಿತ ಹೊರಟಿರುವೆ., ಈಗ ನಡುರಾತ್ರಿಯಾಗಿದೆ. ನೀನು ನಿನ್ನ ಸ್ಥಾನಕ್ಕೆ ಹೊರಡು, ಎಂದು ಹೇಳಿ ದರ್ಭಾಸನ ಹಾಕಿ ಭಗವಂತನನ್ನೆ ಧ್ಯಾನಿಸತೊಡಗಿದವು. ಭಗವಂತನನ್ನೇ ನಾನಾ ನಾಮಗಳಿಂದ ಸ್ತುತಿಸಿದವು. ಸ್ವಾಮಿಯೇ! ನಮ್ಮ ಪಾಪದ ಫಲವಾಗಿ ಈ ನೀಚ ಪಿಶಾಚ ಜನ್ಮ ಬಂದಿದೆ. ಇದು ಬೇಗನೆ ತೊಲಗಲಿ. ಇಂತಹ ನೀಚಯೋನಿಯು ಎಂದಿಗೂ ನನಗೆ ಬಾರದಿರಲಿ, ನಿನ್ನನ್ನು ಸದಾ ಸ್ಮರಿಸುವಂತಹ ಬುದ್ಧಿಯನ್ನೇ ನೀಡುವವನಾಗು, ನಿನಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು. ಹೀಗೆ ಚಿಂತಿಸುತ್ತಾ ಯೋಗ ಸಮಾಧಿಗೆ ಹೊರಟನು.

## ಘಂಟಾಕರ್ಣನಿಗೆ ಹರಿ ಸಾಕ್ಷಾತ್ಕಾರ

**ತತಃ ಸ ವಿಷ್ಣುಃ ಭಗವಾನ್ ಪಿಶಾಚಂ ದೃಷ್ಟವಾಂಸ್ತದಾ ।**
**ಚಿಂತಯಂತಂ ಸ್ವಮಾತ್ಮಾನಂ ಶುದ್ಧ ಬುದ್ದಿ ಸಮನ್ವಿತಮ್ ॥ 14 ॥**

ಜನಮೇಜಯನೇ! ಘಂಟಾಕರ್ಣನು ಏಕಾಂತದಲ್ಲಿ ಚಿತ್ತಶುದ್ಧಿಯಿಂದ ಕೆಲವು ಕಾಲ ಪರ್ಯಂತ ಹರಿಧ್ಯಾನ ನಿರತನಾಗಿ ಭಗವಂತನನ್ನು ನೆನೆಯುತ್ತಾ, ತನ್ನ ಪವಿತ್ರ ನಾಮಗಳನ್ನು ಉಚ್ಚರಿಸುತ್ತಾ ಅನನ್ಯ ಭಕ್ತಿಯಿಂದ ತನ್ನನ್ನೆ ವಿಶ್ವಾಸವಿಟ್ಟು ನಂಬಿರುವುದನ್ನು ಕಂಡ ಶ್ರೀಕೃಷ್ಣನು ಇವನ ಪೂರ್ವಸಂಚಿತ ಪುಣ್ಯರಾಶಿಗಳನ್ನು ವಿಚಾರ ಮಾಡಿದನು.

**ಧನದಸ್ಯೋಪದೇಶೇನ ಪಠನ್ ಸುಬಹುಶಃ ಕ್ಷಿತೌ ।**
**ವಾಸುದೇವೇತಿ ಕೃಷ್ಣೇತಿ ಮಾಧವೇತಿ ಚ ಮಾಂ ಸದಾ ॥ 15 ॥**

ಹಿಂದೆ ಈತನು ಕುಬೇರನ ಸೇವಕನಾಗಿದ್ದು ಅವನ ಉಪದೇಶದಿಂದಾಗಿ ಪಾವನ ನಾಮಗಳನ್ನು ಗೋವಿಂದ, ನಾರಾಯಣ, ವಾಸುದೇವ, ಮುಕುಂದ, ಕೃಷ್ಣಾಚ್ಯುತ, ಮಾಧವ, ನೃಸಿಂಹ, ದೇವೇಶ, ಹರೇ ಮುರಾರೇ ಇತ್ಯಾದಿ ಸಹಸ್ರಾರು ನಾಮಗಳಿಂದ

**ಸ್ವಪನ್ ಜಾಗ್ರನ್ ತಥಾ ತಿಷ್ಠನ್ ಭುಂಜನ್ ಗಚ್ಛನ್ ತಥಾ ವದನ್ ।**
**ಭಕ್ಷಯನ್ ಮಾಂಸಪಿಟಕಂ ಪಿಬನ್ ಶೋಣಿತಮೇವ ಚ ॥ 16 ॥**
**ಸರ್ವೇಷ್ವಪಿ ಚ ಕಾರ್ಯೇಷು ಕರ್ತಾಹಮಿತಿ ಮನ್ಯತೇ ।**

ಜಾಗ್ರತ್-ಸ್ವಪ್ನ-ನಿಂತಾಗ-ಕೂತಾಗ-ಭುಂಜಿಸುವಾಗ-ನಡೆಯುವಾಗ-ಮಾತನಾಡುವಾಗ ಮಾಂಸರಾಶಿ, ರಕ್ತಪಾನ ಪ್ರಾಣಿಹಿಂಸಾದಿ ಕ್ರೂರ ಕಾರ್ಯಗಳಲ್ಲಿಯೂ ಶ್ರೀಹರಿಯೇ ಮುಖ್ಯಕರ್ತನೆಂದು ದೃಢವಾಗಿ ತಿಳಿದು ಹೇಳುತ್ತಿರುವನು.

ನಿಷಿದ್ಧ ಘೋರ ಪಾಪಕರ್ಮಗಳಿಗೂ ಹರಿನಾಮವು ಪ್ರಾಯಶ್ಚಿತ್ತವಾಗಿದ್ದು ಹರಿನಾಮ ಸ್ಮರಣದಿಂದ ಪಾಪಗಳೆಲ್ಲ ನಿವೃತ್ತಿ ಹೊಂದುವ ಕಾಲಬಂದಿದೆ.

**ಆದರ್ಶಯತ್ ಸ್ವಮಾತ್ಮಾನಂ ಅನನ್ಯಸ್ಯ ಜಗತ್ಪತಿಃ ।**
**ಶುದ್ಧೇಽಂತಃಕರಣೇ ತಸ್ಯ ಪಿಶಾಚಸ್ಯಾಪಿ ಭೂಮಿಪ ॥ 17 ॥**

ಹೀಗೆ ನಿರ್ಧರಿಸಿದ ಶ್ರೀಕೃಷ್ಣನು ಅವನ ಶುದ್ಧಂತಃಕರಣದಲ್ಲಿ ತನ್ನ ನಿಜ ಸ್ವರೂಪವನ್ನು ತೋರಿಸಿ ಅನುಗ್ರಹಿಸಿದನು.

ಆ ಪಿಶಾಚಿಯು ಪ್ರಾರಬ್ಧ ಕರ್ಮಶೇಷದಿಂದ ನೀಚಯೋನಿ ಪ್ರಾಪ್ತವಾಗಿದ್ದರೂ ಯೋಗ್ಯ ಜೀವಿಯಾದ್ದರಿಂದ ಆತನಿಗೆ ಪಿಶಾಚ ಜನ್ಮ ನಿವೃತ್ತಿಯ ಕಾಲವೂ ಬಂದಿತ್ತು. ಹೀಗಾಗಿ ಹರಿಯನ್ನು ಸಾಕ್ಷಾತ್ಕರಿಸಿದ.

ಪೀತಕೌಶೇಯಧಾರಿಯೂ, ಕಮಲನಯನನೂ, ನೀಲಮೇಘಶ್ಯಾಮನೂ ಶಂಖಚಕ್ರಾದಿಗಳು ಪೀತಾಂಬರ ಗದಾ ಕಿರೀಟಾದಿಗಳು ಕೌಸ್ತುಭ ಶ್ರೀವತ್ಸಚಿಹ್ನಿತನೂ, ಸುಂದರನೂ, ಗರುಡನ ಮೇಲೆ ಆಸೀನನು, ಚತುರ್ಭುಜನು, ಅನಾದಿನಿಧನನೂ ಮಾಯಾಪತಿಯೂ ನಿರಸ್ತಕುಹಕನೂ, ಬುದ್ಧಿಗಮ್ಯನೂ ಸದಾ ನಿರ್ಮಲನೂ ಆದ ಭಗವಂತನನ್ನು ನೋಡಿ ಆನಂದ ಹೊಂದಿದ. ಅವರ ಭಕ್ತಿಗೆ ಮೆಚ್ಚಿ ಹೃದಯ ಕಮಲದಲ್ಲಿ ಶ್ರೀಕೃಷ್ಣ ಕಾಣಿಸಿದ.

ಹೀಗೆ ಮನಸ್ಸಿನಲ್ಲಿಯೆ ಸಾಕ್ಷಾತ್ಕಾರ ಹೊಂದಿದ ಜಗನ್ನಾಥನನ್ನು ತೃಪ್ತಿಕರವಾಗಿ

ಕಂಡು ನಯನಗಳನ್ನು ಮುಚ್ಚದೆ ಅಂತರ್ದೃಷ್ಟಿಯಿಂದಲೇ ನೋಡಿ ಕೃತಾರ್ಥನಾದೆನು ಎಂದು ತಿಳಿದನು.

ಆಹಾ! ನಾನೇ ಧನ್ಯನು ಹರಿಯು ಪ್ರಸನ್ನನಾಗಿ ಅನುಗ್ರಹಿಸಿರುವನು. ನನಗೆ ಇದಕ್ಕಿಂತ ಭಾಗ್ಯ ಬೇರೇನಿದೆ. ನನ್ನ ಪಾಪ ಪರ್ವತಗಳು ಪುಡಿಯಾದವು. ನನ್ನ ಇಂದ್ರಿಯಗಳು ಸ್ವಾಧೀನವಾಗಿದ್ದು ನನ್ನ ಸಾಧನೆಗೆ ಅನುವು ಮಾಡಿಕೊಟ್ಟವು. ಇದೆಲ್ಲ ಭಗವಂತನ ನಾಮಸ್ಮರಣೆಯ ಪ್ರಭಾವ. ಇನ್ನು ನನ್ನ ಪಿಶಾಚ ಪರಿವಾರದವರನ್ನು ಬಿಟ್ಟು ಬಿಡುವೆನು. ನನ್ನ ತಮ್ಮ ಗಜಕರ್ಣನೂ ಹರಿಭಕ್ತನೇ.

**ಏತೇಭ್ಯೋऽಪಿ ಪಿಶಾಚೇಭ್ಯೋ ನಿರ್ಮುಕ್ತಃ ಸಾಂಪ್ರತಂ ತಥಾ ।**
**ಯೋऽಸೌ ಮಮಾನುಜಃ ಸಾಕ್ಷಾತ್ ಸ ಚ ಭಕ್ತಃ ತಥಾ ಹರೌ ॥ 18 ॥**

ಹರಿಯ ಅನುಗ್ರಹವಾದರೆ ಈತನೂ ವಿಷ್ಣುವನ್ನು ಹೊಂದಬಹುದು. ಹೀಗೆ ಆಲೋಚಿಸಿ ಮೊದಲು ತನ್ನನ್ನು ಸುತ್ತಿದ್ದ ಆಂತ್ರಪಾಶಗಳನ್ನು ಕಿತ್ತೆಸೆದು ಬಾಹ್ಯ ನೇತ್ರವನ್ನು ತೆರೆದು ಸುತ್ತಲೂ ನೋಡಿದನು. ಪೂರ್ವಾವಸ್ಥೆ ಹೊಂದಿ ಸುಖಿಯಾದನು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಘಂಟಾಕರ್ಣನಿಗೆ ಶ್ರೀಕೃಷ್ಣನ ದರ್ಶನ ಎಂಬಲ್ಲಿ
ಮೂವತ್ತೈದನೆಯ ಅಧ್ಯಾಯವು ಸಮಾಪ್ತಿ

# ಅಥ ಷಟ್‌ತ್ರಿಂಶೋಽಧ್ಯಾಯಃ

## ಘಂಟಾಕರ್ಣನ ಕೃಷ್ಣ ಸ್ತುತಿ

**ಅಯಂ ವಿಷ್ಣುರಯಂ ವಿಷ್ಣುರಿತ್ಯೂಚೇ ಪಿಶಿತಾಶನಃ ।**
**ಸಮಾಧೌ ಯಥಾ ದೃಷ್ಟಃ ಸೋಽಯಮತ್ರಾಪಿ ದೃಶ್ಯತೇ ॥ 1 ॥**

ರಾಜನೇ, ಪಿಶಾಚಿಯು ತನ್ನ ಯೋಗ ಸಮಾಧಿಯಲ್ಲಿ ಜಗದೊಡೆಯ ಶ್ರೀಹರಿಯನ್ನು ಹೃದಯಾಂಬರದಲ್ಲಿ ಪ್ರತ್ಯಕ್ಷೀಕರಿಸಿದ್ದನೋ, ಕಣ್ಣು ಬಿಟ್ಟಾಗ ಅವನ ಅದೇ ಲಕ್ಷಣಗಳಿಂದ ಕೂಡಿರುವ ಶ್ರೀಕೃಷ್ಣನನ್ನು ನೋಡಿದನು. ಇವನು ವಿಷ್ಣುವೇ ನಿಶ್ಚಯವಾಗಿಯೂ ವಿಷ್ಣುವೆ ಆಗಿರುವನು.

**ಸಮಾಧೌ ಚ ಯಥಾ ದೃಷ್ಟಃ ಸೋಽಯಮತ್ರಾಪಿ ದೃಶ್ಯತೇ ॥ 2 ॥**

ಹಾಗೂ ಅವನ ಗುಣ ರೂಪ ಕ್ರಿಯಾದಿಗಳನ್ನೂ ಕೊಂಡಾಡಲಾರಂಭಿಸಿದನು. ದೇವದೇವನೇ! ಯಾವ ನೀನು ನನಗೆ ಯೋಗ ಸಮಾಧಿಯಲ್ಲಿ ಪ್ರಸನ್ನನಾಗಿ ನಿನ್ನ ದಿವ್ಯರೂಪ ಸಾಕ್ಷಾತ್ಕಾರ ಕರುಣಿಸಿದೆಯೋ ಆತನೇ ನೀನಾಗಿರುವಿ.

ನೀನು ಚಕ್ರ ಗದಾ ಶಾಂರ್ಗಾದಿ ಆಯುಧ ಧರಿಸಿದ ಪುರುಷಸೂಕ್ತ ಪ್ರಮೇಯನಾದ ಜಗತ್ ಪ್ರಸೂತಿ ಸ್ಥಿತಿ ನಾಶ ಕಾರಣನೂ, ನನಗೆ ದರ್ಶನವಿತ್ತು ಅನುಗ್ರಹಿಸಿದ ಮಹಾನುಭಾವನೇ ನೀನಾಗಿರುವಿ.

ಸರ್ವತ್ರ ವ್ಯಾಪ್ತನಾದ ವಿಷ್ಣುವು, ಸರ್ವತ್ರ ಜಯಶೀಲನಾದ್ದರಿಂದ ಜಿಷ್ಣುವು, ಸರ್ವಲೋಕ ರಕ್ಷಕನಾದ್ದರಿಂದ ಜಗನ್ನಾಥನೂ, ಸಮಸ್ತಪ್ರಾಣಿ ಅಂತರ್ಯಾಮಿಯೂ ಅನಾದಿ ಪುರುಷನಾದ್ದರಿಂದ ಪುರಾಣ ಪುರುಷನೂ,

ವಿಶ್ವಕರ್ತನೂ, ಶಶ್ವದೇಕಪ್ರಕಾರನೂ ನಿರ್ವಿಕಾರನೂ ಆಗಿರುವಿ. ಎದೆಯಲ್ಲಿ ಕೌಸ್ತುಭಮಣಿ ಧರಿಸಿರುವ, ರಾತ್ರಿಯು ಪೂರ್ಣಚಂದ್ರನಿಂದ ಬೆಳಗುವಂತೆ ಸಮಸ್ತಲೋಕಗಳೂ ಪೂರ್ಣಗುಣನಾದ ನಿನ್ನಿಂದ ಬೆಳಗುತ್ತಿವೆ.

**ಯೋಸೌ ಪೃಥ್ವೀಂ ದಧಾರಾಶು ದಂಷ್ಟ್ರಯಾ ಜಲಸಂಚಯಾತ್ ।**
**ಬಲಿಂ ಬಲಾದೇಷ ಹರಿಃ ಸ ವಾಮನಃ ಸ್ತುತಶ್ಚ ಭಕ್ತ್ಯಾ ಮುನಿಭಿಃ ಪುರಾತನೈಃ ॥ 3 ॥**

**ದಂಷ್ಟ್ರಾಕರಾಲಃ ಸುಮಹಾನ್ ಹತ್ವಾ ಯೋ ದಾನವಾನ್ ರಣೇ ।**

ಈ ಸಾಕ್ಷಾತ್ ನೀನೇ ವರಾಹ ರೂಪ ತಾಳಿ ಜಲಧಿಯಲ್ಲಿ ಮುಳುಗಿದ್ದ ಭೂಮಿಯನ್ನೆತ್ತಿದವನು.

ದಾನವೇಂದ್ರನಾದ ಬಲಿಚಕ್ರವರ್ತಿಯನ್ನು ವಟುವಾಮನ ರೂಪದಿಂದ ಛಲದಿಂದ ವಂಚಿಸಿ ಮೂರ್ಲೋಕಾಧಿಪತ್ಯವನ್ನು ಬಲಿಯಿಂದ ಇಂದ್ರನಿಗೆ ನೀಡಿದವನೂ,

ಉಗ್ರವಾದ ಕೋರೆಹಲ್ಲುಗಳಿಂದ ಸಿಂಹನರ ರೂಪನಾಗಿ ಹಿರಣ್ಯಕಶಿಪುವನ್ನೂ ಕೊಂದವನೂ ನೀನೆ. ಪುಟ್ಟ ಪ್ರಹ್ಲಾದಗೆ ಪಟ್ಟವ ಕಟ್ಟಿದವ ನೀನೆ.

ದೇವಾಸುರರು ಉದಧಿಯನ್ನು ಮಥಿಸಲು ಪರ್ವತವು ನೆಲ ಸೇರಿದಾಗ ಕೂರ್ಮರೂಪ ಧರಿಸಿ ಮಂದರ ಬೆನ್ನ ಮೇಲೆ ಧರಿಸಿದ ಕೂರ್ಮನೂ ನೀನೆ. ಭೃಂಗು ವಂಶದಲ್ಲಿ ಜನಿಸಿದ ಜಾಮದಗ್ನ್ಯನೂ, ಮೋಹಿನೀ ವೇಷಧರಿಸಿ ದೇವತೆಗಳಿಗೆ ಅಮೃತ ಹಂಚಿದವನೂ, ಲೋಕಕಂಟಕ ಮಧು ಕೈಟಭರನ್ನೂ ಕೊಂದವನೂ ನೀನೆ. ಅಣುವೂ ಮಹತ್ತೂ ಮೊದಲಾದ ವಿರುದ್ಧ ಧರ್ಮ ನಿನ್ನಲ್ಲೇ ಇರುತ್ತವೆ. ನೀನು ಲೋಕ ವಿಲಕ್ಷಣನು. ಶ್ರೀರಾಮ ನಾಮದಿಂದ ರಾವಣಾದಿ ನಿಶಾಚರ ಧ್ವಂಸಿಯೂ, ಶ್ರೀಕೃಷ್ಣನಾಗಿ ಪೂತನಾಜೀವಿತಹರಣ ಧೇನುಕಾಸುರ ಮಥನನೂ, ಕಾಳಿಯ ನಾಗ ವಿಷ ನಿಹಂತೃವೂ, ಗೋವರ್ಧನೋದ್ಧಾರಿಯೂ, ಅಕ್ರೂರನಿಗೆ ದಿವ್ಯರೂಪಪ್ರದರ್ಶಕನೂ, ರಜಕ ಶಿರೋಹಾರಿಯೂ, ಕುಬ್ಜಾಗಂಧಾನುಲಿಪ್ತನೂ, ಶಿವಧನುಸ್ಸನ್ನು ಭಂಗಿಸಿ- ದವನೂ, ಕುವಲಯಾಪೀಡದರ್ಪಹಾರಿಯೂ, ಚಾಣೂರಾಂಧ್ರ ನಿಷೂದನನೂ, ಸಾಂದೀಪಿನೀ ಪುತ್ರ ತಂದು ನೀಡಿದವನೂ, ನರಕಾಸುರ ವಿಧ್ವಂಸಿಯೂ, ಶ್ರೀಕೃಷ್ಣನೇ ನೀನೆ ಆಗಿರುವಿ, ಇಂತಹ ಮಹಾಮಹಿಮೋಪೇತ ಶ್ರೀಹರಿಯನ್ನು ಇಂದು ನೋಡುತ್ತಿದ್ದೇನೆ.

**ಸ ಏಷ ಭಗವಾನ್ ವಿಷ್ಣುರದ್ಯ ದೃಷ್ಟೋ ಜನಾರ್ದನಃ ।**
**ಕೃತಕೃತ್ಯೋऽಸ್ಮಿ ಸಂಜಾತಃ ಸಾಯುಜ್ಯಂ ಪ್ರಾಪ್ತವಾನಹಂ ॥ 4 ॥**

ನಿಜವಾಗಿಯೂ ನಾನು ಹಿಂದಿನ ಜನ್ಮಗಳಲ್ಲಿ ಪುಣ್ಯವನ್ನಾಚರಿಸಿರಬೇಕು. ನಿನಗೇನು ಹೇಳಲೂ ತೋಚುತ್ತಿಲ್ಲ. ನಿನಗೆ ಅನಂತಾನಂತ ವಂದನೆಗಳನ್ನು ಅರ್ಪಿಸುವೆ ಎಂದು ಸ್ತುತಿಸಿದನು.

## ಘಂಟಾ ಕರ್ಣನಿಂದ ನೈವೇದ್ಯ

ರಾಜನೇ! ಘಂಟಾಕರ್ಣನು ಆನಂದೋದ್ರೇಕದಿಂದ ಯಥೇಚ್ಛವಾಗಿ ನಗುತ್ತಾ, ಕುಣಿಯುತ್ತಾ, ಹರಿಯ ಸ್ಮರಣೆ ಮಾಡುತ್ತಾ ವಂದಿಸುತ್ತಾ ತನ್ನ ಹತ್ತಿರದಲ್ಲಿದ್ದ ಬ್ರಾಹ್ಮಣನ ಶವವನ್ನು ಸೀಳ ಮಾಂಸಖಂಡಗಳನ್ನು ತೊಳೆದು ಒಂದು ಪಾತ್ರೆಯಲ್ಲಿ ಹಾಕಿ ಶ್ರೀಕೃಷ್ಣನ ಮುಂದೆ ಇಟ್ಟು

**ಗೃಹಾಣ ಮೇ ಜಗನ್ನಾಥ ಭಕ್ಷ್ಯಂ ಯೋಗ್ಯಂ ತವ ಪ್ರಭೋ ।**
**ಭವಾದೃಶೈಃ ಜಗನ್ನಾಥ ಗ್ರಾಹ್ಯಂ ಸರ್ವಾತ್ಮನಾ ಹರೇ ॥ 5 ॥**

**ದತ್ತಂ ಯದ್ ಭಕ್ತಿನಮ್ರೇಣ ಗ್ರಾಹ್ಯಂತತ್ ಸ್ವಾಮಿನಾ ಹರೇ ॥ 6 ॥**

ಜಗನ್ನಾಥನೇ! ನಾವು ಭಕ್ತಿಯಿಂದ ಅರ್ಪಿಸಿರುವ ಈ ಮಾಂಸವನ್ನು ಸ್ವೀಕರಿಸು. ಭಕ್ತರು ಭಕ್ತಿಯಿಂದ ಏನನ್ನು ಅರ್ಪಿಸುವರೋ ಅದನ್ನು ಶ್ರೀಹರಿಯು ಸ್ವೀಕರಿಸಲೇಬೇಕಷ್ಟೆ! ನಮ್ಮಂತಹ ಮಾಂಸಭಕ್ಷಕ ಪಿಶಾಚಿಗಳಿಗೆ ಯೋಗ್ಯಾಯೋಗ್ಯ ವಿಚಾರ ತಿಳಿದಿಲ್ಲ. ದೋಷವಿಲ್ಲದಿದ್ದರೆ ಸ್ವೀಕರಿಸೋಣವಾಗಲಿ ಎಂದಾಗ ಅವರ ನಿರ್ವ್ಯಾಜ ಭಕ್ತಿಗೆ ಶ್ರೀಕೃಷ್ಣನು, ಹರಿಭಕ್ತಿಗೆ ಮನಸ್ಸಿನಲ್ಲಿಯೆ ಸಂತೋಷ ಹೊಂದಿ ಹೀಗೆಂದನು.

**ಅಲಮೇತೇನ ಸರ್ವತ್ರ ಪಿಶಾಚ ಪಿಶಿತಾಶನ ।**
**ಅಸ್ಪೃಶ್ಯಂ ಮಾದೃಶೈರೇತದ್ ಬ್ರಾಹ್ಮಣ್ಯಂ ಶವಮುತ್ತಮಮ್ ॥ 7 ॥**

ಎಲೋ ಮಾಂಸಾದನೇ. ಈ ಬ್ರಾಹ್ಮಣರ ಶವದ ಮಾಂಸ ನಮ್ಮಂತವರಿಗೆ ಸ್ಪರ್ಶಿಸಲೂ ಯೋಗ್ಯವಲ್ಲ. ಆದರೂ ನೀನಿಟ್ಟಿರುವ ಭಕ್ತಿಗೆ ನಾನು ಮೆಚ್ಚಿರುವೆನು. ನಿನ್ನ ಅಂತಃಕರಣಾದಿಗಳೆಲ್ಲವೂ ನಾಮೋಚ್ಚಾರಣೆಯಿಂದಲೇ ಪವಿತ್ರಗಳಾಗಿವೆ.

**ಅಸ್ಮತ್ ಸಂಕೀರ್ತನಾಚ್ಛಶ್ವತ್ ಶುದ್ಧಂ ಹಿ ಕರಣಂ ತವ ।**
**ಅತೀವ ಮನಸಾ ಪ್ರೀತಃ ಇತ್ಯುಕ್ತ್ವಾ ಭಗವಾನ್ ಹರಿಃ ॥ 8 ॥**

ನನಗೆ ಪರಿಶುದ್ಧ ಮನಸ್ಸಿನಿಂದ ನಾಮ ಸಂಕೀರ್ತನಾದಿಗಳನ್ನು ಮಾಡಿದರೆ ಸಾಕು. ನಾನು ಕ್ರೀತನಾಗುವೆನು.

## ಪಿಶಾಚಿಗಳಿಗೆ ಮುಕ್ತಿ

ಹೀಗೆ ಹೇಳುತ್ತಾ ಶ್ರೀಕೃಷ್ಣನು ಆ ಪಿಶಾಚಿಗಳನ್ನು ಸಮೀಪಿಸಿ ತನ್ನ ಪವಿತ್ರವಾದ ಅಮೃತಮಯ ಹಸ್ತದಿಂದ ಆ ಘಂಟಾಕರ್ಣನ ಸರ್ವಾಂಗಗಳನ್ನೂ ಸ್ಪರ್ಶ ಮಾಡಿದನು. ಕೂಡಲೇ ದಿವ್ಯರೂಪ ಸ್ವರ ಯುಕ್ತರಾದ ಉತ್ತಮ ಗಂಧರ್ವರಾದರು *[ಚಕಾರ ಸ್ಪರ್ಶ ಮಾತ್ರೇಣ ದಿವ್ಯರೂಪ ಸ್ವರಾನ್ವಿತೌ].*

## ಪಿಶಾಚಿ-ಗಂಧರ್ವರೂಪ ಪಡೆಯಿತು

**ಗಂಧರ್ವ ಇವ ಗಾಯಂಸ್ತು ಸಿದ್ಧಃ ಸಿದ್ಧ ಇವ ಸ್ವಯಮ್ ।**
**ಸಾಕ್ಷಾತ್ ಸ್ಪೃಷ್ಟಂ ತದಾ ವಿಷ್ಣೋಃ ಕರೇಣ ಮೃದುಪೂರ್ವಕಮ್ ॥ 9 ॥**

ಕೂಡಲೇ ಘಂಟಾಕರ್ಣನ ಪಿಶಾಚರೂಪ ಮಾಯವಾಗಿ ದಿವ್ಯ ಗಂಧರ್ವನಂತೆ ಸುಂದರವೂ, ಸರ್ವಾಂಗ ಸೌಷ್ಠವವುಳ್ಳ, ಅನೇಕಾಭರಣ ಭೂಷಿತವಾದ ಪೀತಾಂಬರಧಾರಿಯಾದ ಸಾಕ್ಷಾತ್ ದೇವೇಂದ್ರನಂತೆ ಇರುವ ಗಂಧರ್ವನಾಗಿ ಮಾರ್ಪಟ್ಟು ಗಾನ ಮಾಡಿದನು.

ಇದೆಲ್ಲವೂ ಶ್ರೀಹರಿಯ ಕರ ಸ್ಪರ್ಶದ ಮಹಿಮೆ. ಈಗಲೂ ಮುನಿಜನರೂ ಸಹ ಘೋರವಾದ ತಪಸ್ಸನ್ನಾಚರಿಸಿದರೂ ಇಂತಹ ಸುಂದರ ರೂಪ ಹೊಂದಲಾರರು.

*ಶ್ರೀಕೃಷ್ಣನು ಹೀಗೆಂದನು -*

**ತತಃ ಪ್ರೋವಾಚ ಭಗವಾನ್ ಸ್ಥಿತಂ ಕಾಮಮಿವಾಪರಮ್ ।**
**ಅಕ್ಷಯ್ಯಃ ಸ್ವರ್ಗವಾಸಸ್ತೇ ಯಾವದಿಂದ್ರೋ ವಸಿಷ್ಯತಿ ॥ 10 ॥**
**ತಾವತ್ ಸ್ವರ್ಗೀ ಭವಾನಸ್ತು ಶಾಸನಾನ್ ಮಮ ನಾನ್ಯತಃ ॥ 11 ॥**

ಭಗವಂತನು ಸಾಕ್ಷಾತ್ ಮನ್ಮಥನಂತಿರುವ ಪುರುಷನನ್ನು ಕುರಿತು ಭಕ್ತನೇ! ಇಂದ್ರದೇವನು ಇರುವಷ್ಟು ಕಾಲವೂ ನಿನಗೆ ಸ್ವರ್ಗಲೋಕದಲ್ಲಿ ವಾಸವು ದೊರೆಯಲಿ. ನಂತರ ನಿನಗೆ ಸಾಯುಜ್ಯಲೋಕವೂ ದೊರೆಯಲಿ. ಇದು ನನ್ನ ಶಾಸನ. ಇನ್ನೇನು ಬೇಕೋ ಕೇಳು ಎಂದಾಗ,

ಘಂಟಾಕರ್ಣನು ನನಗೆ ನಿನ್ನಲ್ಲಿ ನಿರುಪಾಧಿಕ ಭಕ್ತಿಯು ಸದಾ ಬರಲಿ ಎಂದಾಗ ಹಾಗೆ ಆಗಲಿ ಎಂದನು.

## ಬ್ರಾಹ್ಮಣ ಶವ ಬದುಕಿತು

**ಇತ್ಯುಕ್ತ್ವಾ ಭಗವಾನ್ ಕೃಷ್ಣಃ ಉತ್ಥಾಪ್ಯ ಬ್ರಾಹ್ಮಣಂ ತದಾ ।**
**ತೇನ ಸ್ತುತಃ ಜಗನ್ನಾಥಃ ಪೂಜಯಿತ್ವಾ ಚ ತಂ ದ್ವಿಜಮ್ ॥ 12 ॥**

ನಂತರ ಶ್ರೀಕೃಷ್ಣನು ಆ ಬ್ರಾಹ್ಮಣ ಶವವನ್ನು ಹಿಡಿದೆಬ್ಬಿಸಿದ. ಕೂಡಲೇ ಜೀವಂತನಾಗಿ ಶ್ರೀಕೃಷ್ಣನನ್ನು ಸ್ತುತಿಸಲಾರಂಭಿಸಿದ.

ಗೋವಿಂದನೂ ಸಹ ಅಲ್ಲಿಂದ ಹೊರಟು ಮುನಿಗಳ ಆಶ್ರಮದ ಕಡೆ ಹೊರಟನು.

ಈ ಕಥೆಯನ್ನು ಶ್ರವಣ ಮಾಡತಕ್ಕವರಿಗೆ ಶ್ರೀಹರಿಯಲ್ಲಿ ಭಕ್ತಿ ಮನಶ್ಶುದ್ಧಿ ಸ್ವರ್ಗಾದಿ ಉತ್ತಮಲೋಕ ಸಿದ್ಧಿಸುವುದು.

**ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ**
**ಘಂಟಾಕರ್ಣನಿಗೆ ಶ್ರೀಕೃಷ್ಣನಿಂದ ಮೋಕ್ಷ ಎಂಬಲ್ಲಿ**
**ಮೂವತ್ತಾರನೆಯ ಅಧ್ಯಾಯವು ಸಮಾಪ್ತಿ**

# ಅಥ ಸಪ್ತತ್ರಿಂಶೋಽಧ್ಯಾಯಃ

## ಶ್ರೀಕೃಷ್ಣನ ತಪೋ ನಟನೆ

*ವೈಶಂಪಾಯನಃ –*

**ತತಃ ಸ ಭಗವನ್ ವಿಷ್ಣುಃ ಮುನಿಭ್ಯಃ ತತ್ವಮಾದಿತಃ ।**
**ಕಥಯಾಮಾಸ ಯದ್ ವೃತ್ತಂ ಪಿಶಾಚಸ್ಯ ಮಹಾತ್ಮನಃ ॥ 1 ॥**

ವೈಶಂಪಾಯನು ಜನಮೇಜಯನಿಗೆ ರಾಜನೇ! ನಂತರ ಶ್ರೀಕೃಷ್ಣನು ಮಹಾಭಕ್ತನಾದ ಪಿಶಾಚಿಯ ವಿಷಯವಾಗಿ ನಡೆದ ವೃತ್ತಾಂತವನ್ನೆಲ್ಲ ಬದರಿಕಾಶ್ರಮದಲ್ಲಿ ನೆರೆದಿದ್ದ ಮುನಿಜನರಿಗೆ ವಿಸ್ತಾರವಾಗಿ ಹೇಳಿದನು.

ಮುನಿಜನರೆಲ್ಲ ಅತ್ಯಾಶ್ಚರ್ಯದಿಂದ ಶ್ರೀಕೃಷ್ಣನೇ! ನಿನ್ನ ಪರಮಾನುಗ್ರಹದಿಂದ ಪ್ರಾಪ್ತವಾದ ನಿನ್ನ ಸಂದರ್ಶನದಿಂದಲೇ ಘಂಟಕರ್ಣನ ಸರ್ವ ಪಾಪರಾಶಿಗಳು ನಷ್ಟವಾಗಿ ಪುಣ್ಯಕರ್ಮಗಳ ಪರಿಪಾಕಾವಸ್ಥೆಗೆ ಬಂದಿರಬೇಕು. ನಿನ್ನ ದಿವ್ಯ ಸಂದರ್ಶನ ಪಡೆದ ಅವನೇ ಧನ್ಯ ಎಂದು ಶ್ರೀಕೃಷ್ಣನನ್ನು ಸತ್ಕರಿಸಿದರು.

ರಾತ್ರಿ ಕಳೆದು ಸೂರ್ಯೋದಯವಾಗುತ್ತಿರಲು ಶ್ರೀಕೃಷ್ಣನು ಪ್ರಾತರಾಹ್ನಿಕ ಮುಗಿಸಿ ಕೈಲಾಸಯಾತ್ರೆ ಕೈಗೊಂಡನು.

**ತತಃ ಪ್ರಭಾತೇ ವಿಮಲೇ ಸೂರ್ಯೇ ಚಾಭ್ಯುದಿತೇ ಸತಿ ।**
**ಆರುಹ್ಯ ಗರುಡಂ ವಿಷ್ಣುಃ ಯಯೌ ಕೈಲಾಸಮುತ್ತಮಮ್ ॥ 2 ॥**

ತಾನು ಗರುಡನನ್ನು ಏರಿ ಹೊರಡುವಾಗ ಅವರಿಗೂ ಕೈಲಾಸಕ್ಕೆ ಬರಲು ಆದೇಶಿಸಿದನು *[ಭವದ್ಭಿಸ್ತತ್ರ ಗಂ ತವ್ಯಮ್].*

ಯಾವ ಕೈಲಾಸದಲ್ಲಿ ತಪಸ್ಸು ಮಾಡಿದ ಲೋಕಪಾಲಕರನೇಕರು ಸಿದ್ಧಪುರುಷರಾಗಿದ್ದರೋ, ಧನಾಧಿಪತಿ ಕುಬೇರನೂ ಶಿವನನ್ನು ನಿರಂತರ ಆರಾಧಿಸುತ್ತಿದ್ದನೋ, ಉತ್ತಮ ಹಾಗೂ ಹಂಸಗಳಿಗೆ ಆಶ್ರಯವಾದ ಮಾನಸಸರೋವರವೂ ಎಲ್ಲಿ ರಾರಾಜಿಸುತ್ತಿದೆಯೋ, ನಂದಿಯು ಶಿವನನ್ನು ಅನನ್ಯ ಭಕ್ತಿಯಿಂದ ಉಪಾಸಿಸುವನೋ, ಸಮುದ್ರಗಾಮಿಗಳಾದ ಗಂಗಾದಿ ಅನೇಕ ಪವಿತ್ರ ನದಿಗಳು ಹುಟ್ಟಿ ಹರಿಯುವವೋ,

**ಯತ್ರ ವಿಶ್ವೇಶ್ವರಃ ಶಂಭುಃ ಅಚ್ಛಿನದ್ ಬ್ರಹ್ಮಣಃ ಶಿರಃ ॥ 3 ॥**

ಎಲ್ಲಿ ಶಿವನು ಬ್ರಹ್ಮದೇವನ ಐದನೆ ತಲೆಯನ್ನು ಕತ್ತರಿಸಿ ಚತುರ್ಮುಖ-ನನ್ನಾಗಿಸಿದನೋ, ಎಲ್ಲಿ ಋಷಿ ಪ್ರಾರ್ಥಿತನಾದ ಹಿಮಾಲಯನು ತನ್ನ ಮಗಳನ್ನು ಶಿವನಿಗೆ ಧಾರೆಯೆರೆದು ಕೊಟ್ಟ ಗಿರಿಜೆಯು ಶಿವನೊಂದಿಗೆ ಇರುವಳೋ, ಯಾವ ಶ್ರೀಹರಿಯು ಯಾವ ಕೈಲಾಸದಲ್ಲಿ ಬಹುಕಾಲ ಪುಷ್ಕರ ಶತಪತ್ರಗಳಿಂದ ಅರ್ಚಿಸಿ ಶಿವನಿಂದ ಕಾಮಾಭಿಮನ್ಯಮಾನವಾದ ಚಕ್ರವನ್ನು ಪಡೆದನೋ, ಯಾವ ಕೈಲಾಸದಲ್ಲಿ ಸಿದ್ಧ, ಗಂಧರ್ವ, ಕಿನ್ನರಾದಿಗಳು ತಮ್ಮ ಪ್ರಿಯತಮೆಯರೊಂದಿಗೆ ಮಧುಪಾನಮತ್ತರಾಗಿ ವಿಹರಿಸುತ್ತಾ ಸಂತೋಷ-ಗೊಳ್ಳುವರೋ, ಯಾವ ದಶಕಂಠ ರಾವಣನು ತನ್ನ ವಿಂಶತಿ ಭುಜಗಳಿಂದಲೂ ಕೈಲಾಸ ಕಿತ್ತಲು ತೊಡಗಿ ಭಂಗ ಪಟ್ಟನೋ ಅಂತಹ ಕೈಲಾಸಕ್ಕೆ ಶ್ರೀಕೃಷ್ಣನು ಬಂದನು *[ತಪಸ್ಸಿನ ಆಂತರ್ಯ]*.

**ತಮಾರುಹ್ಯ ಮಹಾಶೈಲಂ ದೇವಕೀನಂದನೋ ಹರಿಃ ।**
**ಮಾನಸಸ್ಯೋತ್ತರಂ ತೀರಂ ಜಗಾಮ ಯದುನಂದನಃ ॥ 4 ॥**

**ತಪಶ್ಚರ್ತುಂ ಕಿಲ ಹರಿಃ ವಿಷ್ಣುಃ ಸರ್ವೇಶ್ವರಃ ಶಿವಃ ।**
**ಜಟೀ ಚೀರೀ ಜಗನ್ನಾಥೋ ಮಾನುಷಂ ವಪುರಾಸ್ಥಿತಃ ॥ 5 ॥**

### ತಪಸ್ಸಿನ ಆಂತರ್ಯ

ಶ್ರೀಕೃಷ್ಣನು ಶಿವನಿಗೆ ಅಸುರ ಮೋಹಕ್ಕಾಗಿ ನಿನ್ನಿಂದ ವರ ಪಡೆಯುವೆ ಎಂದು ವರ ನೀಡಿದ್ದು, ಹಾಗೆಯೆ ದ್ವಾಪರದ ಕಡೆಯಲ್ಲಿಯೂ ಮಾನವನಾಗಿ ಅವತರಿಸಿ ನಿನ್ನನ್ನಾರಾಧಿಸಿ ವರ ಪಡೆಯುವೆ ಎಂಬುದನ್ನು ಸತ್ಯ ಮಾಡಲು, ಹಾಗೆಯೇ ಶಿವನೇ! ನೀನು ನನ್ನಿಂದ ಕಲ್ಪಿತವಾದ ಆಗಮಗಳಿಂದ ದುಷ್ಟರನ್ನು ನನ್ನಿಂದ

ವಿಮುಖಗೊಳಿಸು. ಅತಥ್ಯ ಹಾಗೂ ವಿತಥ್ಯಗಳನ್ನು ಪ್ರಚಾರಪಡಿಸು ಎಂದು ಹೇಳಿದ ಮಾತನ್ನು ಸತ್ಯ ಮಾಡುವ ಉದ್ದೇಶದಿಂದಲೇ ರುಕ್ಮಿಣಿಯು ನನಗೆ ಉತ್ತಮ ಪುತ್ರ ಬೇಕು ಎಂದಿದ್ದಳು. ವಸ್ತುತಸ್ತು ವಕ್ರಾಸುರನನ್ನು ಕೊಲ್ಲಲು ಶ್ರೀಕೃಷ್ಣ ತನ್ನ ಉದರದಿಂದ ಪ್ರದ್ಯುಮ್ನನನ್ನು ಸೃಷ್ಟಿಸಿದ್ದ. ಹೀಗಾಗಿ ತನ್ನ ಮಾತು ಸತ್ಯಗೊಳಿಸಲೆಂದೆ ಬದರಿಗೆ ಬಂದಿದ್ದ. ಶಿವನಾದರೂ ಕೃಷ್ಣನಿಗೆ ನಾನು ನಿನಗೆ ಮಗನನ್ನು ಕೊಡುತ್ತಿಲ್ಲ. ನಿನ್ನ ಮಗನನ್ನು ನೀನು ಈಗಾಗಲೇ ಸೃಜಿಸಿರುವೆ. ಅದನ್ನೆ ಅಜ್ಞಾನಿಗಳು ಶಿವನಿಂದ ದತ್ತವೆಂದು ಮೋಹಗೊಳ್ಳಲಿ ಎಂದು ಪುತ್ರ ವರವನಿತ್ತ.

ಶ್ರೀಕೃಷ್ಣನಾದರೂ ಗರುಡನಿಂದ ಇಳಿದು ಜಟಾವಲ್ಕಲಧಾರಿಯಾಗಿ ತಪಸ್ವಿಗಳಂತೆ ಪರಿಶುದ್ಧವಾದ ಮಾನಸದ ಉತ್ತರ ಪಾರ್ಶ್ವದಲ್ಲಿ ಕುಳಿತು ಶಿವನ ವರಕ್ಕಾಗಿ ತಪಸ್ಸಿನ ನಾಟಕವಾಡಿದರೂ ಶಿವನಂತರ್ಯಾಮಿಯಾದ ತನ್ನನ್ನೆ ಧ್ಯಾನಿಸಿದ.

**ದ್ವಾದಶಾಬ್ದಂ ತಪಶ್ಚರ್ತುಂ ಮನೋದಧೇ ತತೋ ಹರಿಃ ।**
**ಫಾಲ್ಗುನೇನ ತು ಮಾಸೇನ ಸಮಾರೇಭೇ ಜಗತ್ಪತಿಃ ॥ 6 ॥**

ಹನ್ನೆರಡು ವರ್ಷ ತಪಸ್ಸನ್ನಾಚರಿಸಲು ಸಂಕಲ್ಪಿಸಿದ ಶ್ರೀಕೃಷ್ಣನು ಫಾಲ್ಗುಣದಲ್ಲಿ ಶಾಕವನ್ನೆ ತಿನ್ನುತ್ತಾ ತಪಸ್ಸನ್ನಾಚರಿಸುತ್ತಿದ್ದನು. ಯಾರಿಗೂ ಇವನ ತಪಸ್ಸಿನ ಉದ್ದೇಶ ತಿಳಿಯಲಿಲ್ಲ.

**ಗರುಡಃ ಕಾಶ್ಯಪಸುತಃ ಇಂಧನಾನಿ, ಚಕ್ರರಾಜೋಽಥ ಪುಷ್ಪಾಣಿ ।**
**ದಿಕ್ಷು ಸರ್ವಾಸು ಸರ್ವತ್ರ ರರಕ್ಷ ಜಲದಸ್ತದಾ ॥ 7 ॥**
**ಖಡ್ಗ ಆಹೃತ್ಯ ಯತ್ನೇನ ಕುಶಾನ್ ।**
**ಗದಾ ಕೌಮೋದಕೀ ಚೈವ ಪರಿಚರ್ಯಾಂ ಚಕಾರ ಹ ॥ 8 ॥**

ಶ್ರೀಕೃಷ್ಣನು ತಪಸ್ಸನ್ನಚರಿಸುತ್ತಿದ್ದಾಗ ಹೋಮಕ್ಕಾಗಿ ಸಮಿತ್ತು ಇಂಧನಗಳನ್ನು ಸಂಗ್ರಹಿಸಿ ತಂದನು. ಚಕ್ರಾಭಿಮಾನಿಕಾಮನು ಪುಷ್ಪಗಳನ್ನೂ ಶಂಖಾಭಿಮಾನಿಯೂ ಸರ್ವತ್ರ ರಕ್ಷಣೆಯನ್ನೂ, ನಂದಕವು ದರ್ಭೆಯನ್ನೂ, ಗದೆಯು ಇತರ ಸೇವೆಯನ್ನೂ, ಶಾರ್ಙ್ಗಧನುಸ್ಸು ಭೃತ್ಯನಂತೆ ನಿಂತಿತ್ತು.

ವಿಷ್ಣುವು ಇಂಧನಾದಿಗಳಿಂದ ವಿಧಿಪೂರ್ವಕವಾಗಿ ರುದ್ರಾಂತರ್ಯಾಮಿ ತನ್ನ ರೂಪವನ್ನೆ ವಿಷಯೀಕರಿಸಿದ್ದನು. ಶ್ರೀಕೃಷ್ಣನ ದಿನವ್ರತ ಮಾಸವ್ರತ ವರ್ಷವ್ರತ.[1]

**ಏಕಸ್ಮಿನ್ನೇಕದಾ ಮಾಸೇ ಭುಂಜಾನೋ ನಿಯತಾತ್ಮವಾನ್ ।**
**ದ್ವಿತೀಯೇ ತ್ವಥ ಪರ್ಯಾಯೇ ಭುಂಜನ್ನೇಕೇನ ಕೇಶವಃ ॥ 9 ॥**
**ಏಕಸ್ಮಿನ್ ವತ್ಸರೇ ಭುಂಜನ್ ತಥೈವೈಕೇನ ಕೇನಚಿತ್ ॥ 10 ॥**

ಒಂದೊಂದು ರಾಶಿಯನ್ನು ಒಂದು ದಿನದಲ್ಲಿ ವರ್ಷವನ್ನಾಗಿ ಮಾಡಿ ಉಪವಾಸಾದಿ ನಿಯಮಗಳನ್ನು ಮನಸ್ಸಿನಲ್ಲಿ ಮಾಡಿಕೊಂಡು, ನೂರೈವತ್ತು ಶ್ವಾಸಕಾಲಗಳಿಂದ ಮಾಸವ್ರತವನ್ನೂ, ಸಂವತ್ಸರ ವ್ರತವನ್ನೂ ಮಾಡಿ ಮುಗಿಸಿದ.

ಈ ರೀತಿ ನಿಯಮದ ಪರಿಪಾಲನೆಯಿಂದ ಕಠಿಣ ತಪಸ್ಸನ್ನಾಚರಿಸುವಂತೆ ತೋರ್ಪಡಿಸಿದನು.

ಇಂತಹ ತಪಸ್ಸು ಪರಿಸಮಾಪ್ತಿಗೊಳ್ಳಲು ಒಂದು ಮಾಸವಿರುವಾಗ ಅಂದರೆ ನೂರೈವತ್ತು ಉಸಿರಾಟ ಬಾಕಿಯಿರುವಾಗ ಅಗ್ನಿಯಲ್ಲಿ ತನ್ನನ್ನೆ ಉದ್ಧೇಶಿಸಿ ಆಹುತಿ ನೀಡುತ್ತಾ, ವೇದ ಮಂತ್ರಗಳನ್ನು ಅರಣ್ಯಕವನ್ನು ಪಠಿಸುತ್ತಾ ಪ್ರಣವ ಮಂತ್ರವನ್ನು ಹೇಳುತ್ತಾ ಗೃಹಸ್ಥರಿಗೂ, ವಾನಪ್ರಸ್ಥರಿಗೂ, ಸನ್ಯಾಸಿಗಳಿಗೂ ತಪಸ್ಸಿನ ರೀತಿ ತೋರಿಸುತ್ತಾ ತನ್ನಲ್ಲಿ ಎಲ್ಲಾ ಆಶ್ರಮಗಳೂ ನೆಲೆ ನಿಂತಿವೆ ಎಂದು ಜಗತ್ತಿಗೆ ಸಾರಿದನು.

**ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ**
**ಶ್ರೀಕೃಷ್ಣನ ತಪೋವರ್ಣನೆ ಎಂಬಲ್ಲಿ**
**ಮೂವತ್ತೇಳನೆಯ ಅಧ್ಯಾಯವು ಸಮಾಪ್ತಿ**

---

1. **ದಿನವ್ರತ, ಮಾಸವ್ರತ, ವರ್ಷವ್ರತ :**
ಶ್ರೀಕೃಷ್ಣನು ತಪಸ್ಸನ್ನಾಚರಿಸುತ್ತಿದ್ದಾಗ ದಿನಕ್ಕೆ ಇಪ್ಪತ್ತೊಂದು ಸಾವಿರದ ಆರುನೂರು ಉಸಿರಾಟಗಳಿರುತ್ತವೆ. ದಿನಕ್ಕೆ ಐದು ಉಸಿರಾಟದಂತೆ [5 x 30=150] ತಿಂಗಳಿಗೆ ನೂರೈವತ್ತು ಉಸಿರಾಟವಾಗುತ್ತದೆ. ಒಂದು ವರ್ಷಕ್ಕೆ ಸಾವಿರದ ಎಂಟನೂರು

ಶ್ವಾಸಗಳಿಂದ [150 x 2 = 1800] 1800 x 12 = 21600] ಹನ್ನೆರಡು **ತಿಂಗಳಿಗೆ 21600 ಉಸಿರಾಟಗಳಾಗುತ್ತವೆ.** ಒಂದು ದಿನ ಹನ್ನೆರಡು ವರ್ಷವೆನ್ನುವಾಗ ಇಪ್ಪತ್ತೊಂದು ಸಾವಿರದ ಆರುನೂರು ಶ್ವಾಸಗಳಿಂದ ಹನ್ನೆರಡು ವರ್ಷಗಳಾಗುತ್ತವೆ. ಇದನ್ನೆ ಇಲ್ಲಿ ಒಂದನೇ ವರ್ಷದಲ್ಲಿ ಒಂದೊಂದು ಮಾಸಕ್ಕೆ ಒಂದಾವರ್ತಿಯಂತೆ **ಭೋಜನವನ್ನು** ಎರಡನೆ ವರ್ಷದಲ್ಲಿ ಎರಡೆರಡು ಮಾಸಕ್ಕೊಂದುವರ್ತಿಯಂತೆಯೂ ಕಠಿಣ ತಪಸ್ಸನ್ನಾಚರಿಸಿದನೆಂದಿದೆ. ಇಲ್ಲಿ ಭೋಜನವೆಂದರೆ ಭುಜಪರಿಪಾಲನ ಅಭ್ಯವಹಾರ ಎಂಬರ್ಥವಿದ್ದು, ದಿನವ್ರತ–ಮಾಸವ್ರತ–ಸಂವತ್ಸರ ವ್ರತವನ್ನು ಪರಿಪಾಲನ ಮಾಡಿ ಹನ್ನೆರಡು ವರ್ಷ ಮಾಡಬೇಕಿದ್ದ ತಪಸ್ಸನ್ನು ಒಂದೇ ದಿನದಲ್ಲಿ ಬೃಹಸ್ಪತಿಯನ್ನು ಹನ್ನೆರಡು ರಾಶಿಗಳಲ್ಲೂ ಸಂಚರಿಸುವಂತೆ ಮಾಡಿ ಆ ಒಂದು ದಿನವು ಹನ್ನೆರಡು ವರ್ಷವೆ ಆಗುವಂತೆ ಮಾಡಿದ್ದು ಅಭ್ಯವಹಾರವೆಂದಿಟ್ಟುಕೊಂಡರೂ ಅಭಿತಃ **ಬೃಹಸ್ಪತಿಂ ದ್ವಾದಶ ರಾಶೌ** ವ್ಯವಹಾರ ಸಂಚಾರವೆಂದಿಟ್ಟುಕೊಳ್ಳಬೇಕು.

21600 x 24 = 900 ಉಸಿರಾಟ. ಎರಡು ಗಂಟೆಗೆ ಒಂದು ವರ್ಷದಂತೆ 1800 ಉಸಿರಾಟವಾಯಿತು. 1800 x 12 = 21600 ಉಸಿರಾಟ ಮಾಡಿ ಎರಡು ಘಂಟೆ ಒಮ್ಮೆ ಒಂದೊಂದು ರಾಶಿಯಲ್ಲಿ ಗುರುಸಂಚಾರ.

**ಏಕಸ್ಮಿನ್ನಹ್ನಿ ಭಗವಾನ್ ರಾಶಿಂ ರಾಶಿಂ ಚ ವತ್ಸರಮ್ ।**

**ಕಲ್ಪಯಿತ್ವೋಪವಾಸಾದೀನ್ ಮನಸಾ ನಿಯಮಾನಪಿ ॥**

**ಮಾಸವ್ರತಂ ಸಾರ್ಧಶತಶ್ವಾಸಕಾಲೈರಕಲ್ಪಯತ್ ।**

**ಮನಸ್ಯೈವ ಸ್ವಭಕ್ತಾನಾಂ ದ್ವಾದಶಾಬ್ದ ಫಲಾಪ್ತಯೇ ॥** *–ತಾ.ನಿ.22/177–178*

ಒಂದು ದಿನಕ್ಕೆ 24 ಘಂಟೆಗಳು, 24 ಘಂಟೆಯಲ್ಲಿ 21600 ಉಸಿರಾಟ ಮಾಡಿದನೆಂದರೆ ಒಂದು ಘಂಟೆಗೆ 900 ಉಸಿರಾಟವಾಯಿತು. 21600 x 24 = 900. ಎರಡು ಗಂಟೆಗೆ ಒಂದು ಬಾರಿ ಬೃಹಸ್ಪತಿಯನ್ನು ಒಂದೊಂದು ರಾಶಿಯಲ್ಲಿರಿಸಿದ. 24 ಗಂಟೆಯಲ್ಲಿ 12 ರಾಶಿ ಸಂಚಾರ ಮಾಡಿಸಿ ಕಾಲನಿಯಾಮಕ ತಾನೆಂದು ತೋರಿಸಿದ. ಅದ್ಭುತ ಮಹಿಮೆ ನಮ್ಮ ಶ್ರೀಕೃಷ್ಣ.

. . . .

# ಅಥ ಅಷ್ಟತ್ರಿಂಶೋಽಧ್ಯಾಯಃ

## ಶ್ರೀಕೃಷ್ಣನ ಬಳಿ ರುದ್ರೇಂದ್ರಾದಿ ಆಗಮನ

**ತತಃ ಇಂದ್ರಃ ಸ್ವಯಂ ತತ್ರ ಆರುಹ್ಯ ಗಜ ಮುತ್ತಮಮ್ ।**
**ದ್ರಷ್ಟುಂ ಸರ್ವೇಶ್ವರಂ ವಿಷ್ಣುಂ ತಪಸ್ಯಂತಂ ಸಮಾಯಯೌ ॥ 1 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ, ದೇವದೇವನಾದ ಶ್ರೀಕೃಷ್ಣನು ತಪಸ್ಸನ್ನಾಚರಿಸುತ್ತಿರುವುದನ್ನು ತಿಳಿದ ಇಂದ್ರಾದಿ ದೇವತೆಗಳು ಅವನನ್ನು ನೋಡಲು ಕೈಲಾಸಕ್ಕೆ ಬಂದರು.

ಇಂದ್ರನು ಐರಾವತವನ್ನೇರಿಯು, ಯಮಧರ್ಮ ಮಹಿಷವನ್ನೇರಿ, ಹಂಸವನ್ನೇರಿದ ವರುಣನು ಶ್ವೇತಛತ್ರ, ಶ್ವೇತವ್ಯಜನವನ್ನು ಹಿಡಿದು ಬಂದನು.

ಹೀಗೆ ಅನೇಕ ದೇವತೆಗಳೂ, ಆದಿತ್ಯರು ವಸುಗಳೂ, ರುದ್ರರೂ, ಗಂಧರ್ವ ಕಿನ್ನರ ಯಕ್ಷರೆಲ್ಲರೂ ದರ್ಶನಾಕಾಂಕ್ಷಿಗಳಾಗಿ ಬಂದರು. ಪರ್ವತ ಹಾಗೂ ನಾರದರೂ ಇತರ ಮುನಿಗಳೂ ಬಂದಿಳಿದರು. ಎಲ್ಲರೂ ಚಂಚಲಾಕ್ಷರಾಗಿ ಶ್ರೀಕೃಷ್ಣನನ್ನು ನೋಡುತ್ತಿದ್ದರು.

**ಆಶ್ಚರ್ಯಂ ಖಲು ಪಶ್ಯಧ್ವಂ ನ ಭೂತಂ ನ ಭವಿಷ್ಯತಿ ।**
**ಯೋಗಿಧ್ಯೇಯಃ ಸ್ವಯಂ ಕೃಷ್ಣಃ ಯತ್ ತಪ್ಯತಿ ಗುರುಃ ಸ್ವಯಮ್ ॥ 2 ॥**
**ಕೋನ್ವತ್ರ ಸಮಯೋ ಭೂಯಾದಿತಿ ತೇ ಮೇನಿರೇ ಗಣಾಃ ।**

ಇದೇನಾಶ್ಚರ್ಯ! *ನ ಭೂತಂ ನ ಭವಿಷ್ಯತಿ* ಎಂಬಂತೆ ಹಿಂದೆಂದೂ ನಡೆಯದ

ಮುಂದೂ ಆಗದಂತಿರುವ ಆಶ್ಚರ್ಯವೇ ಇದಾಗಿದೆ. ಯೋಗಿಗಳ ತಪಸ್ಸುಗಳಲ್ಲಿ ಧ್ಯೇಯನಾದವನೇ ಈ ಕೃಷ್ಣನು. ಸಾಕ್ಷಾತ್ತಾಗಿ ತಾನೇ ತಪಸ್ಸಿಗೆ ಕುಳಿತಿರುವನೆಂದರೆ ಅವನ ಧ್ಯೇಯಮೂರ್ತಿ ಯಾರಿರಬಹುದು, ಯಾವ ಉದ್ದೇಶಕ್ಕಾಗಿ ಈತಪೋನುಷ್ಠಾನ.

## ಶಿವಪಾರ್ವತಿಯರ ಆಗಮನ

ಹೀಗೆ ಆಶ್ಚರ್ಯದಿಂದ ವಿಚಾರ ನಡೆಸುತ್ತಿರುವಾಗ ಭೂತಗಣಾಧ್ಯಕ್ಷನಾದ ಶಿವನು ತನ್ನ ಪಾರ್ವತಿಯೊಂದಿಗೆ ಲೋಕಹಿತೈಷಿಯಾದ ಕೃಷ್ಣನನ್ನು ನೋಡಲು ಬಂದನು. *[ಯಯೌ ಶಿವಃ ಭವಾನ್ಯಾ ಸಹ ಭೂತಸಂಘೈಃ].*

## ಶಿವನ ವೈಭವ

ಶಿವನು ಜಟಾಜೂಟ ಧರಿಸಿದವನೂ, ಧನುರ್ಬಾಣಧಾರಿಯೂ, ಖಡ್ಗವನ್ನು ಹಿಡಿದು, ಒಂದು ಕೈಲಿ ದರ್ಭಪುಂಜವನ್ನೂ, ಮತ್ತೊಂದು ಕೈಯಲ್ಲಿ ದೀಪವನ್ನೂ, ಡಮರುಗ ಮತ್ತೊಂದು ಹಸ್ತದಲ್ಲಿ ತ್ರಿಶೂಲಪಾಣಿಯಾಗಿ, ತಲೆಯಲ್ಲಿ ಚಂದ್ರನ ಕಲೆ, ರುದ್ರಾಕ್ಷಿ ಕೊರಳಲ್ಲಿ, ಧರಿಸಿ ಬಿಳಿಯಾದ ನಂದಿಯನ್ನೇರಿ ತನ್ನ ಪ್ರೀಯೆಯೊಂದಿಗೆ ಪಿಂಗಲವರ್ಣದ ವೈರಾಗ್ಯಾಧಿಪತಿ ಶಿವನು.

**ಉಮಾಸ್ತನದ್ವಂದ್ವ ಸಮರ್ಪಿತಾನನಃ ತಯಾಸಮಾಶ್ಲಿಷ್ಯ ನಿಪೀಡಿತಾಧರಃ ।**
**ಗಂಗಾಂಬು ವೀಕ್ಷಲಿತ ಚಂದ್ರಶೇಖರಃ ಮಹೋರಗೈಃ ಬದ್ಧಜಟಃ ಸನಾತನಃ॥**

ನಮ್ಮಿಂದಲೇ ಜಗತ್ತಿಗೆ ದಾಂಪತ್ಯ ಜೀವನವೆಂಬ ತತ್ವ ತಿಳಿಸುತ್ತಾ ಉಮೆಯ ಸ್ತನದ್ವಂಧ್ವಗಳಲಿ ಆಗಾಗ ತನ್ನ ಮುಖವನ್ನಿಡುತ್ತಾ ಅವಳ ಅಧರಪಾನ ಮಾಡುತ್ತಾ ಬಂದನು. ಗಂಗಾಂಬುವಿನಿಂದ ಪವಿತ್ರೀಕೃತ ಗಾತ್ರನೂ ಸರ್ಪಭೂಷಣನೂ ರುಂಡಕಪಾಲ ಮಾಲೆಗಳನ್ನು ಧರಿಸಿ ಶಿವನು ಕೇಶವನನ್ನು ಕಾಣಲು ಬಂದನು.

ಈ ಶಿವನೇ ಪಂಚಭೂತ ತನ್ಮಾತ್ರಾ ಜ್ಞಾನಕರ್ಮೇಂದ್ರಿಯ ಮನಸ್ಸಿಗೆ ಕಾರಣವಾದ ಅಹಂಕಾರಾತ್ಮಕನೋ, ಮಹೇಶ್ವರನೆಂದು, ಕಾಣಾದನಿಗೆ ಜ್ಞಾನ ನೀಡಿದವನೆಂದು, ದಕ್ಷಾಯಜ್ಞಧ್ವಂಸಿಯೆಂದೂ, ಭೂತೇಶ ಭೂತಗಳಿಗೆ ಭಾವನನೆಂದು, ಸುಂದರನಾದ ದೇವನನ್ನು ಚಿಂತಿಸುವ ವಾಮದೇವನೆಂದೂ, ನಗ್ನನೂ, ವ್ಯಾಘ್ರ ಗಜಾಂಬರಧಾರಿಯೆಂದೂ, ನಾಗಭೂಷಣನೆಂದೂ, ಅಷ್ಟಮೂರ್ತಿಯೆಂದೂ, ಶಾಂತಮೂರ್ತಿಯೆಂದೂ ಕ್ರೋಧಾಭಿಮಾನಿ-

ಯೆಂದೂ, ಮನೋಭಿಮಾನಿಯೆಂದೂ, ಗಿರೀಶನೆಂದು ನೀಲ ಲೋಹಿತ-ನೆಂದೂ ಕರೆಯುವರೋ ಆ ಪರಶಿವನು ಭೂತಗಳಿಂದ ಕೂಡಿಕೊಂಡು ಶ್ರೀಕೃಷ್ಣನ ಬಳಿ ಬಂದನು.

ಶಿವನ ಪರಿವಾರದವರಾದ ಸಾವಿರಾರು ಭೂತಗಳು ವಿರೂಪಾಕ್ಷ, ಕುಂಡಧಾರ, ಕುಮದ್ವಹ, ಘಂಟಾಕರ್ಣ, ದೀರ್ಘರೋಮಾ, ದೀರ್ಘಭುಜ, ಸಿಂಹಮುಖ, ವ್ಯಾಘ್ರವಕ್ತ್ರ, ತ್ರಿಬಾಹು, ಪಂಚಬಾಹು ಮೊದಲಾದವರೂ ನರ್ತನ ಕೇಕೆ ಹಾಕುತ್ತಾ ಬಂದರು. ಸರ್ವರೂ ಘೋರ ರೂಪದಿಂದ ಭಯಂಕರರಾಗಿದ್ದರು.

ಕೆಲವರು ಪ್ರೇತಗಳನ್ನು ತಿನ್ನುವವರು, ಪ್ರೇತಗಳನ್ನು ಹಿಡಿದು ಬೇರೆ ಕಡೆಗೆ ರವಾನಿಸುವವರೂ, ಶವದ ರಕ್ತಮಾಂಸ ಭಕ್ಷಕರು ಇದ್ದರು. ಕಪಾಲಧಾರಿ-ಗಳಾಗಿ, ಜಟಾಧಾರಿಗಳೂ, ಬೊಕ್ಕತಲೆಯವರೂ, ನಾನಾಕಾರವುಳ್ಳ ಘೋರ ಪಿಶಾಚಿಗಳೂ ಬಂದವು.

ಮುನಿ ಜನರು, ಋಷಿವರ್ಯರೂ ಸಹ ಬಂದಿದ್ದು ವೇದಗಳನ್ನು ಸಾಮವನ್ನು ಪಠಿಸುತ್ತ ಕುಶಪಾಣಿಗಳಾಗಿ ಪರಮೇಶ್ವರನನ್ನು ಕೌಪೀನಧಾರಿಗಳಾದ ಕೆಲವರು ಶಂಕರನನ್ನು ಭಕ್ತಿಯಿಂದ ಸ್ತುತಿಸುತ್ತಿದ್ದರು.

ಹೀಗಾಗಿ ಶಿವನ ಒಂದು ಪಾರ್ಶ್ವದಲ್ಲಿ ಸಾಧುಸಂತರೂ ಮತ್ತೊಂದೆಡೆಯಲ್ಲಿ ಭೂತಪ್ರೇತ ಪಿಶಾಚ ಗಣಗಳೂ ಮತ್ತೊಂದೆಡೆಯಲ್ಲಿ ಸಿದ್ಧ ಚಾರಣ ಗಂಧರ್ವಾದಿಗಳು, ಮುಂದೆ ಅಪ್ಸರಾಸ್ತ್ರೀಯರು ಪರಮಶಿವನ ಮಹಿಮೆಯನ್ನು ಹಾವಭಾವಗಳಿಂದ ಪ್ರದರ್ಶನ ಮಾಡುತ್ತಾ ವೈಭವದಿಂದ ಶ್ರೀಕೃಷ್ಣನ ಬಳಿ ಶಿವನನ್ನು ಕರೆತಂದರು.

ಹೀಗೆ ಶಿವನು ತನ್ನ ಪಾರ್ವತಿ ಹಾಗೂ ಪ್ರೀತ್ಯಾಸ್ಪದಗಳಾದ ಗಂಗೆಯಿಂದಲೂ ಪಿಶಾಚಾದಿಗಣ ಪರಿವೃತನಾಗಿ ಶ್ರೀಕೃಷ್ಣನಿರುವ ಸ್ಥಳಕ್ಕೆ ಬಂದರು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಶ್ರೀಕೃಷ್ಣನ ತಪಸ್ಸನ್ನು ನೋಡಲು
ದೇವಾನುದೇವತೆಗಳ ಆಗಮನ ಎಂಬಲ್ಲಿ
ಮೂವತ್ತೆಂಟನೆಯ ಅಧ್ಯಾಯವು ಸಮಾಪ್ತಿ

## ಅಥ ಏಕೋನಚತ್ವಾರಿಂಶೋಽಧ್ಯಾಯಃ

### ಶ್ರೀಕೃಷ್ಣನ ಶಿವಸ್ತುತಿ

**ಏವಂ ಬಹುವಿಧೈಃ ಭೂತೈಃ ಪಿಶಾಚೈರುರಗೈಃ ಸಹ ।**
**ಆಗತ್ಯ ಭಗವಾನ್ ರುದ್ರಃ ಶಂಕರೋ ವೃಷವಾಹನಃ ॥ 1 ॥**
**ದದರ್ಶ ವಿಷ್ಣುಂ ದೇವೇಶಂ ತಪಂತಂ ತಪ ಉತ್ತಮಂ ॥ 2 ॥**

ರಾಜನೇ ಕೇಳು, ಹಿಂದೆ ಹೇಳಿದಂತೆ ಶಿವನು ವಿವಿಧ ಭೂತ ಪಿಶಾಚಾದಿಗಳಿಂದ ಕೂಡಿ ಉಗ್ರ ತಪೋನಿರತರಾದ ವಿಷ್ಣು ರೂಪಿ ಕೃಷ್ಣನನ್ನು ಕಂಡನು.

ಶ್ರೀಕೃಷ್ಣನಾದರೂ ಗರುಡನು ತಂದ ಸಮಿತ್ತುಗಳಿಂದಲೂ, ಚಕ್ರನು ತಂದ ಹೂಗಳಿಂದಲೂ, ನಂದಕ ಖಡ್ಗ ತಂದ ದರ್ಭೆಗಳಿಂದಲೂ, ಗದನ ಪರಿಚರ್ಯೆಯಿಂದಲೂ, ಶಾರ್ಙ್ಗನ ರಕ್ಷಣೆಯಲ್ಲಿಯೂ ವಿಧಿಪೂರ್ವಕವಾಗಿ ದ್ರವ್ಯಗಳಿಂದಲೂ ಗೋಘೃತದಿಂದಲೂ ಹೋಮಿಸುತ್ತಿದ್ದನು.

**ಅಚಿಂತ್ಯಂ ಸರ್ವಭೂತಾನಾಂ ಧ್ಯಾಯಂತಂ ಕಿಮಪಿ ಪ್ರಭುಮ್ ॥ 3 ॥**

ಶ್ರೀಕೃಷ್ಣನಾದರೂ ತಪಸ್ಸಿನಲ್ಲಿ ಯಾರಿಂದಲೂ ಹೀಗೆ ಎಂದು ಚಿಂತಿಸಲಾಗದ, ಪ್ರಭುವಾದ ಅತಿಶಯಿತ ಸುಖರೂಪಿಯಾದ್ದರಿಂದ ಕಿಂ ಎನಿಸುವ ತನ್ನ ರೂಪವನ್ನೇ ಚಿಂತಿಸುತ್ತಿದ್ದನು.

ಇವನನ್ನು ಕಂಡ ಶಿವ ವೃಷಭದಿಂದ ಇಳಿದು, ಪ್ರಸನ್ನಾತ್ಮನಾಗಿ ಸಂತೋಷದಿಂದ ಕಂಡನು.

**ಜಯ ಚಕ್ರಗದಾಪಾಣೇ ಜಯ ಶೂಲಿಂಸ್ತ್ರಿಲೋಚನ ।**
**ಇತಿ ತೇ ಮುನಯಃ ಸರ್ವೇ ಪ್ರಣಾಮಂ ಚಕ್ರಿರೇ ಹರಿಮ್ ॥ 4 ॥**

ಅದೇ ಕಾಲಕ್ಕೆ ಅಲ್ಲಿ ನೆರೆದಿರುವ ಸಮಸ್ತ ಭೂತ ಪ್ರೇತ ಪಿಶಾಚ ಗುಹ್ಯಕ ಮುನಿವರ್ಯರೂ ಬ್ರಾಹ್ಮಣೋತ್ತಮರೂ ಇತರರೂ ಸಹ ತಮ್ಮ ಸ್ವಾಮಿಯನ್ನು ಜಯ ಶಬ್ದ ಪೂರ್ವಕವಾಗಿ ಉದ್ಧಾರ ಮಾಡಿದರು. ಶಿವನೆ ನಿನಗೆ ಜಯವಾಗಲಿ ಎಂದರು. ಶ್ರೀಹರಿಗೆ ಜಯವಾಗಲಿ ಎಂದು ಕೂಗಿದರು.

## ಕೃಷ್ಣನಿಂದ ರುದ್ರಸ್ತುತಿ

ಶ್ರೀಕೃಷ್ಣನಾದರೂ ತನ್ನನ್ನು ಕಾಣಲು ಬಂದಿರುವ ಶಿವನ ಅಂತರ್ಯಾಮಿ ತನ್ನನ್ನೆ ಅನೇಕ ನಾಮಗಳಿಂದ ಸ್ತುತಿಸಿದನು.

**ನಮಸ್ತೇ ಶಿತಿಕಂಠಾಯ ನೀಲಗ್ರೀವಾಯ ವೇಧಸೇ ।**
**ನಮಸ್ತೇ ಶೋಚಿಷೇ ಅಸ್ತು ನಮಸ್ತೇ ಉಪವಾಸಿನೇ ॥ 5 ॥**

ಹೇ ವಿಷಕಂಠ ನೃಸಿಂಹನೇ, ಜಗಜ್ಜನ್ಮಾದಿಕರ್ತನೆ, ಸೂರ್ಯಚಂದ್ರಾದಿಗಳಿಗೆ ಕಾಂತಿಪ್ರದನೆ *[ಯಸ್ಯಭಾಸಾಸರ್ವಮಿದಂ ವಿಭಾತಿ]* ಭಕ್ತರ ಸಮೀಪವೆ ಇರುವವನೇ, ವಿಶ್ವಮೂರ್ತಿ – ವಿಶ್ವವೂ ಯಾರಲ್ಲಿ ಅಡಗಿದೆಯೋ ಅವನು. ಗದೀ – ಕಾಮೋದಕೀ ಗದೆ ಧರಿಸಿದವನು, ಭಕ್ತಾಭೀಷ್ಟ ಸೇಚಕ *[ಮೀಢುಷೇ]* *ವರ್ಷ = ಭಕ್ತರಾಭೀಷ್ಟಕನು [ಭಕ್ತೇಷ್ಟವರ್ಷಣಾದ್ ವೃಷಃ]*

ವೃಷರೂಪಿನ್ = ಧರ್ಮಸ್ವರೂಪಿಯು, ಅಮೂರ್ತಸ್ವರೂಪನು [ಅಮೂರ್ತಾಯ ಅಜಗವವೆಂಬ ಧನಸ್ಸನು ಹಿಡಿದವ **[ಪಿನಾಕೀ]**], ದುಃಖ ಲೇಶರಹಿತ ಸುಖ ಪಾನ ಮಾಡುವವನು. ಕುಬ್ಜಳಿಗೆ ಅನುಗ್ರಹಿಸಿದವನು. ಕೂಪದಂತೆ ಗಂಭೀರ ನಿತ್ಯಶುದ್ಧನು **(ಶಿವಃ)**. ಸರ್ವದಾ ಸಂತುಷ್ಟನೂ, ವಿಶ್ವನಾಮಕನೂ, ದುಷ್ಟದೂಷಕನೂ, ಮಂಗಳನೂ ಸುಖಕ್ಕೆ ನಿರ್ಣಾಯಕನು, ವೇದಗಳಲ್ಲಿ ಪ್ರತಿಪಾದ್ಯನೂ ಸರ್ವಪ್ರಾಣಿ ಭಕ್ಷಕನಾದರೂ ಸುಖರೂಪಿಯೂ *[ಗಿರಶಃ]*.

ಪಾಪಹಾರಕನೂ, ರೇಚಕ ಪೂರಕನು *(ಹಿಪ್ರಾಯ)* ಹರಿಹರ – ಶತ್ರು ನಾಶಕನೂ ಭಕ್ತರಿಗೆ ಅಘೋರನೂ, ದುಷ್ಟಘೋರನೂ, ಚರ್ಮಮಯ

ಶರೀರದಲ್ಲಿರುವವನು. ಇತ್ಯಾದಿ ನಾಮಗಳಿಂದ ಶ್ರೀಕೃಷ್ಣನು ಶಿವನ ಅಂತರ್ಯಾಮಿ ತನ್ನನ್ನೆ ಸ್ತುತಿಸಿ ದೈತ್ಯರನ್ನು ಮೋಹಿಸಿದನು.

**ಕ್ಷಮಸ್ವ ಭಗವನ್ ದೇವ ಭಕ್ತೋಽಹಂ ತ್ರಾಹಿ ಮಾಂ ಹರ ।**
**ತ್ರಾಹಿ ಭಕ್ತಾನ್ ಸದಾ ದೇವ ಭಕ್ತಪ್ರಿಯ ಸದಾ ಹರ ॥ 6 ॥**

ಸರ್ವಾತ್ಮನ್ ಹರನೇ ನಾನು ನಿನ್ನ ಭಕ್ತನಾಗಿರುವೆನು. ನನ್ನನ್ನು ರಕ್ಷಿಸು, ಸಮಸ್ತ ಲೋಕಗಳನ್ನೂ ಸರ್ವವಿಧದಿಂದಲೂ ಕಾಪಾಡು. ಈ ವಿಧವಾಗಿ ಅಜ್ಞಜನರ ಮೋಹಕ್ಕೋಸ್ಕರವೊ ಎಂಬಂತೆ ಸ್ತುತಿ ವಿಡಂಬನೆ ಮಾಡಿದನು.

## ಶಿವನಿಂದ ವಿಷ್ಣುಸ್ತುತಿ

**ತತೋ ವೃಷಧ್ವಜೋ ದೇವಃ ಶೂಲೀ ಸಾಕ್ಷಾದುಮಾಪತಿಃ ।**
**ಕರಂ ಕರೇಣ ಸಂಸ್ಪೃಶ್ಯ ವಿಷ್ಣೋಃ ಚಕ್ರಧರಸ್ಯ ಚ ॥ 7 ॥**
**ಪ್ರೋವಾಚ ಭಗವಾನ್ ರುದ್ರಃ ಕೇಶವಂ ಗರುಡಧ್ವಜಮ್ ॥ 8 ॥**

ರಾಜನೇ ಕೇಳು ! ಗರುಡಧ್ವಜನು ವೃಷಭಧ್ವಜನನ್ನು ಸ್ತೋತ್ರ ಮಾಡಿ ಸ್ತೋತ್ರ ಮಾಡಿದಾಗ ಉಮಾಪತಿಯಾದ ರುದ್ರನು ತನ್ನ ಎರಡೂ ಕರಗಳನ್ನು ಜೋಡಿಸಿ, ದೇವತೆಗಳಿಗೂ ಮುನಿಗಳಿಗೂ ಕೇಳಿಸುವಂತೆ ಹೀಗೆಂದನು.

**ತಪಶ್ಚರ್ಯಾ ಕಿಮರ್ಥಂ ತೇ ಪ್ರಾರ್ಥನಾ ತವ ಕಾ ವಿಭೋ ।**
**ಸ್ವಯಂ ವಿಷ್ಣುರ್ಭವಾನ್ ನಿತ್ಯಃ ತಪಸ್ತ್ವಂ ತಪತಾಂ ಹರೇ ॥ 9 ॥**
**ಪುತ್ರಾರ್ಥಂ ಯದಿ ತೇ ದೇವ ತಪಶ್ಚರ್ಯಾ ಜನಾರ್ದನ ।**
**ಪುತ್ರೋದತ್ತಃ ಮಯಾದೇವ ಪೂರ್ವಮೇವ ಜಗತ್ಪತೇ ॥ 10 ॥**

ದೇವ ದೇವೇಶ! ಏನಿದು ನಿನ್ನ ಈ ಕಠಿಣತರ ತಪಶ್ಚರ್ಯೆ ಏತಕ್ಕಾಗಿ? ನಿನ್ನ ಪ್ರಾರ್ಥನೆ ಏನು? ನೀನೇ ಸಾಕ್ಷಾತ್ ಮಹಾವಿಷ್ಣು ರೂಪನಾಗಿದ್ದು ಸರ್ವಮುನಿಗಳೆಲ್ಲರ ತಪಸ್ಸಿಗೂ ನೀನೆ ಎಂದು *'ತಪಾಂಸಿ ಸರ್ವಾಣಿ ಚ ಯದ್ವದಂತಿ'* ಶ್ರುತಿ ಹೇಳುತ್ತಿದೆ. ಧ್ಯೇಯ ಸ್ವರೂಪನು ನೀನೇ ಆಗಿರುವಾಗ ನಿನ್ನ ತಪಸ್ಸಿಗೆ ಧ್ಯೇಯ ಯಾವುದು?

ಪುತ್ರ ಸಂತಾನಕ್ಕಾಗಿ ಈ ತಪಸ್ಸನ್ನಾಚರಿಸುತ್ತಿರುವೆಯಾದರೆ ಈ ಹಿಂದೆಯೆ ನಿನಗೆ ಪೂರ್ವದಲ್ಲಿಯೆ ನೀಡಿರುತ್ತೇನೆ.

**ಶ್ರುಣು ತತ್ರಾಪಿ ಭಗವಾನ್ ಕಾರಣಂ ಕಾರಣಾತ್ಮಕ ॥ 11 ॥**

ಇದಕ್ಕೂ ಒಂದು ಕಾರಣವಿದೆ. ಹಿಂದೆ ನಾನು ಯಾವುದೋ ಒಂದು ಕಾರಣಕ್ಕಾಗಿ ಹತ್ತು ಸಾವಿರ ವರ್ಷ ಮಹಾತಪಸ್ಸನ್ನಚರಿಸುತ್ತಿದ್ದೆನು. ಅದೇ ಸಮಯದಲ್ಲಿ ನನ್ನನ್ನು ಮೆಚ್ಚಿಸಲು ತಂದೆಯಿಂದ ಅನುಮಿತಳಾದ ಪಾರ್ವತಿಯು ಸೇವೆ ಸಲ್ಲಿಸುತ್ತಿದ್ದಳು. ದೇವೇಂದ್ರನು ನನ್ನ ತಪಸ್ಸಿಗೆ ಭಯಪಟ್ಟು ಹಾಗೂ ತಪೋಭಂಗಕ್ಕಾಗಿ ಪಂಚಬಾಣನಿಗೆ ಆಜ್ಞಾಪಿಸಿದ. ಮನ್ಮಥನಾದರೂ ಪುಷ್ಪಮಯ ಬಾಣಗಳನ್ನು ಪ್ರಯೋಗಿಸಿದನು. ವಸಂತನು ಸುತ್ತಮುತ್ತಲಿನ ವಾತಾವರಣವನ್ನು ಶೃಂಗಾರಮಯವನ್ನಾಗಿಸಿದ. ಪಾರ್ವತಿಯು ಪೂಜೆಗಾಗಿ ಪುಷ್ಪಾದಿಗಳನ್ನು ತಂದುಕೊಡುತ್ತಿದ್ದಳು.

**ಲಕ್ಷ್ಯಂ ಮಾಮಕರೋತ್ ತತ್ರ ಬಾಣಸ್ಯ ಪ್ರೇಷಿತಸ್ಯ ಚ ।**
**ಏಷಾ ಮಾಂ ಸೇವತೇ ತತ್ರ ದಾನಾತ್ ಪುಷ್ಪಾದಿನಾ ಹರೇ ॥ 12 ॥**

ಇದೇ ಸಂದರ್ಭ ನೋಡಿ ಮರೆಯಾಗಿದ್ದು ನನಗೆ ಬಾಣ ಪ್ರಯೋಗ ಮಾಡಿದ. ನನ್ನ ಮನಸ್ಸು ಕದಲಲು ಕಾರಣವಾಯಿತು. ಮನ್ಮಥನ ವ್ಯಾಪಾರ ತಿಳಿಯಿತು. ತಪೋಭಂಗಕ್ಕೆ ಕಾರಣನಾದ ಕಾಮನ ಮೇಲೆ ಮಹಾಕೋಪವುಂಟಾಗಿ ಮೂರನೇ ಕಣ್ಣಿನಿಂದ ಸುಟ್ಟು ಹಾಕಿದೆನು.

**ಅಚಿಂತಯಂ ತದಾ ವಿಷ್ಣೋ ಶಕ್ರಸ್ಯೈತಚ್ಚಿಕೀರ್ಷಿತಮ್ ॥ 13 ॥**

ಇದೆಲ್ಲ ವಿಚಾರಿಸಿದಾಗ ಭಯಗೊಂಡ ದೇವೇಂದ್ರನ ಕಾರ್ಯವೆಂದು ತಿಳಿದು ರತೀದೇವಿಯ ದೀನ ಪ್ರಾರ್ಥನೆ ಹಾಗೂ ಮನ್ಮಥನ ಮೇಲೆ ದಯೆಯಿಂದಾಗಿ ಬ್ರಹ್ಮದೇವನ ಆದೇಶದಿಂದಲೂ ನಾನು ನಿನಗೆ ಕಾಮನೆ ನಿನ್ನ ಮಗನಾಗಿ ಹುಟ್ಟಲು ಅನುಗ್ರಹಿಸಿರುವೆನು.

**ಜ್ಯೇಷ್ಠಸ್ತವ ಸುತೋ ದೇವ ಪ್ರದ್ಯುಮ್ನೇತ್ಯಭಿವಿಶ್ರುತಃ ।**
**ಸ್ಮರಂ ತಂ ವಿದ್ಧಿ ದೇವೇಶ ನಾತ್ರ ಕಾರ್ಯಾ ವಿಚಾರಣಾ ॥ 14 ॥**

ಕಾಮನೇ ನಿನಗೆ ಜ್ಯೇಷ್ಠಪುತ್ರನಾಗಿ ಪ್ರದ್ಯುಮ್ನನಾಗಿ ಹುಟ್ಟುವನು.

ಇದು ಯಥಾರ್ಥ ವಿಚಾರವೆಂದು ದೃಢಪಡಿಸುವುದಕ್ಕೋಸ್ಕರ ಸರ್ವರೂ ಕೇಳುವಂತೆ ಅಂಜಲಿಪುಟನಾಗಿ ಹೀಗೆ ವಿಜ್ಞಾಪಿಸಿಕೊಂಡನು.

**ಯತ್ತತ್ ಕಾರಣ ಮಾಹುಸ್ತತ್ ಸಾಂಖ್ಯಾಃ ಪ್ರಕೃತಿ ಸಂಜ್ಞಕಮ್ ॥ 15 ॥**

ಲೋಕದಲ್ಲಿ ಯಾವುದನ್ನು ಪ್ರಧಾನ ಕಾರಣವನ್ನು ಪ್ರಕೃತಿ ಎನ್ನುವರು. ಇದರಿಂದ ಮಹತತ್ವ ಹುಟ್ಟುವುದು. ಪ್ರಕೃತಿಯು ಸತ್ವರಜಃ ತಮಸ್ಸು ಇದನ್ನೇ ಇಟ್ಟುಕೊಂಡು ಈ ಬ್ರಹ್ಮಾಂಡ ಸೃಷ್ಟಿಸುವೆ. ನೀನು ಚೇತನ ಪ್ರಕೃತಿ ಜಡಪ್ರಕೃತಿಗೂ ನೀನು ಕಾರಣನು. ಈ ಅಹಂಕಾರದಿಂದಲೇ ಪೃಥಿವ್ಯಾದಿ ಪಂಚಭೂತಗಳು ಹುಟ್ಟುವುದು. ಪಂಚಜ್ಞಾನೇಂದ್ರಿಯ – ಕರ್ಮೇಂದ್ರಿಯ-ಗಳನ್ನೂ ನೀನೆ ಸೃಷ್ಟಿಸಿ ಅವುಗಳ ದ್ವಾರಾ ನೀನೇ ವ್ಯಾಪಾರ ಮಾಡಿಸುವಿ.

ಸಂಹಾರ ಕಾಲದಲ್ಲಿ ರುದ್ರನಾದ ನನ್ನಲ್ಲಿದ್ದು ನೀನೇ ಸಂಹರಿಸುವವನು.

ದೇವದೇವನೇ! ಪುರುಷಸೂಕ್ತ ಹೇಳಿರುವಂತೆ ಸಮಸ್ತ ಲೋಕಗಳಲ್ಲಿಯೂ ವ್ಯಾಪ್ತನಾಗಿರುವಿ. *'ಅತ್ಯತಿಷ್ಠದ್ದಶಾಂಗುಲಮ್'.*

ವ್ಯಾಪ್ತನಾದ ನೀನೆ ವಿಷ್ಣುವು. ಜಗತ್ತಿಗೆ ನೀನೆ ಸರ್ವಸ್ವಾಮಿಯೆಂದು ನಿನ್ನ ವಿರಾಟ್ ರೂಪದಿಂದ ಜಗತ್ತಿಗೆ ಪ್ರದರ್ಶಿಸಿರುವಿ.

ನಿನ್ನ ಮುಖದಿಂದ ಬ್ರಾಹ್ಮಣರು, ಭುಜದಿಂದ ಕ್ಷತ್ರಿಯರೂ, ತೊಡೆಯಿಂದ ವೈಶ್ಯರೂ, ಪಾದದಿಂದ ಶೂದ್ರ ಜಾತಿಯವರೂ ಜನಿಸಿರುವರು.

ಚಂದ್ರನು ನಿನ್ನ ಮನಸ್ಸಿನಿಂದಲೂ, ಮುಖದಿಂದ ಅಗ್ನಿಯೂ ಇಂದ್ರನೂ, ಪ್ರಾಣದಿಂದ ವಾಯುವೂ, ನಾಭಿಯಿಂದ ಅಂತರಿಕ್ಷಲೋಕವೂ, ತಲೆಯಿಂದ ಸ್ವರ್ಗವೂ, ಶ್ರೋತ್ರದಿಂದ ದಶದಿಕ್ಕುಗಳೂ ಹುಟ್ಟಿ ಅವುಗಳಲ್ಲೆಲ್ಲ ವ್ಯಾಪಿಸಿದ್ದು ವಿಷ್ಣುವೆಂಬ ಅನ್ವರ್ಥನಾಮ ಹೊಂದಿರುವಿ. ನೀರಿಗೆ ಆಶ್ರಯನಾದ ನೀನು ನಾರಾಯಣನೇ, ದೋಷದೂರಳಾದ ಲಕ್ಷ್ಮಿಗೂ ಮುಕ್ತರಿಗೂ ಆಶ್ರಯನಾಗಿರುವಿ.

**ಹರಸಿ ಪ್ರಾಣಿನೋ ದೇವ ತತೋ ಹರಿರಿತಿ ಸ್ಮೃತಃ ।**
**ಶಂಕರೋಽಸಿ ಸದಾ ದೇವ ತತಃ ಶಂಕರತಾಂ ಗತಾಃ ॥ 16 ॥**

ಪ್ರಾಣಿಗಳನ್ನು ಹರಣ ಮಾಡುವ ನೀನು ಹರಿಯು, ಸರ್ವರಿಗೂ "ಶಂ" ಸುಖವನ್ನು ನೀಡುತ್ತೀಯೆ ಶಂಕರನೆನಿಸಿರುವಿ.

ಬೃಹಧಾತುವು ಗುಣಗಳಿಂದ ಪರಿಪೂರ್ಣನೆಂದು ಹೇಳುತ್ತಾ 'ಬ್ರಹ್ಮ' ಎಂದು

ತಿಳಿಸುತ್ತದೆ. ಮಧುಗಳಾದ ಇಂದ್ರಿಯಗಳನ್ನು ನಿಗ್ರಹಿಸಿರುವ ನೀನು ಮಧುಸೂದನನೆಂದೂ, ಸರ್ವೇಂದ್ರಿಯ ಪ್ರೇರಕನಾದ ನೀನು ಹೃಷಿಕೇಶನಾಗಿರುವಿ.

**ಕ ಇತಿ ಬ್ರಹ್ಮಣೋ ನಾಮ ಈಶೋಽಹಂ ಸರ್ವದೇಹಿನಾಮ್ ।**
**ಆವಾಂ ತವಾಂಗಸಂಭೂತೌ ತಸ್ಮಾತ್ ಕೇಶವ ನಾಮವಾನ್ ॥ 17 ॥**

ಕ ಎಂದರೆ ಬ್ರಹ್ಮದೇವನು, ಈಶ ನಾನು ನಮ್ಮೀರ್ವರನ್ನೂ ಸೃಷ್ಟಿಸಿದವ ನೀನು ಹೀಗಾಗಿ ನೀನೇ ಕೇಶವನು. ತಾಯಿಯಾಗಿ ಮಾ ಶಬ್ದ ವಾಚ್ಯಳಾದ ಲಕ್ಷ್ಮೀದೇವಿಗೂ ನೀನೂ ಧವನು. ಗೋಶಬ್ದ ವಾಚ್ಯವಾದ ವೇದರಾಶಿಯನ್ನು ನೀನು ಬಲ್ಲೆಯಾದ್ದರಿಂದ ಗೋವಿಂದನು.

**ಮಾ ವಿದ್ಯಾ ಚ ಹರೇಃ ಪ್ರೋಕ್ತಾ ತಸ್ಯಾ ಈಶೋ ಯತೋ ಭವಾನ್ ।**
**ತಸ್ಮಾನ್ ಮಾಧವನಾಮಾಸಿ ಧವಃ ಸ್ವಾಮೀತಿ ಶಬ್ಧಿತಃ ॥ 18 ॥**

**ಗೌರೇಷಾ ತು ಯತೋ ವಾಣೀ ತಾಂ ಚ ವೇದ ಯತೋ ಭವಾನ್ ।**
**ಗೋವಿಂದಸ್ತು ತತೋ ದೇವಃ ಮುನಿಭಿಃ ಕಥ್ಯತೇ ಭವಾನ್ ॥ 19 ॥**

ಮೂರು ವೇದಗಳನ್ನೂ ಸೇರಿಸಿ 'ತ್ರಿ' ಎನ್ನಬಹುದು. ಅವುಗಳನ್ನು ಮೀರಿ ನಿಂತಹವನೆಂದೇ ನೀನು ತ್ರಿವಿಕ್ರಮನು.

ಅಣುವಾದ್ದರಿಂದ ವಾಮನನೂ, ಸರ್ವಜ್ಞನಾದ್ದರಿಂದ ಮುನಿಯು, ಸರ್ವಜಗತ್ತನ್ನು ನಿಯಮಿಸುವುದರಿಂದ 'ಯತಿ'ಯೆನಿಸಿರುವೆ. ತಪಸ್ಸನ್ನು ಮಾಡುತ್ತಿರುವ ನೀನು ತಪಸ್ವೀ ಎನಿಸಿರುವಿ. ಸರ್ವಭೂತವಾಸಾಶ್ರಯನಾಗಿ ಭೂತಾವಾಸನೂ, ಸರ್ವಭೂತಗಳಿಗೂ ನನಗೂ ಸ್ವಾಮಿಯಾಗಿದ್ದು ಈಶನೆಂದು, ಈಶ್ವರನೆಂದೂ ಕರೆಸುವೆ.

**ಅಕ್ಷರಾಣಾಮಕಾರಸ್ತ್ವಂ ಸ್ಫೋಟಸ್ತ್ವಂ ವರ್ಣಸಂಶ್ರಯಃ ।**
**ರುದ್ರಾಣಾಮಹಮೇವಾಸಿ ವಸೂನಾಂ ಪಾವಕೋ ಭವಾನ್ ॥ 20 ॥**

ಅಕ್ಷರಗಳಲ್ಲಿ ಅಕಾರವಾಚ್ಯನಾಗಿರುವಿ, ವರ್ಣಗಳಲ್ಲಿರುವ ಪದಸ್ಫೋಟ, ಅರ್ಥ ಸ್ಫೋಟ, ವಾಕ್ಯಸ್ಫೋಟಗಳು ನೀನಾಗಿರುವೆ. ರುದ್ರಗಳಲ್ಲಿ ಪ್ರಧಾನರುದ್ರನಾಗಲು ನಿನ್ನ ಸನ್ನಿಧಾನವೆ ಕಾರಣ *[ರುದ್ರಾಣಾಂ ಶಂಕರಶ್ಚಾಸ್ಮಿ]*. ವಸೂಗಳಿಗೆ ಇತರಗಿಂತ ಶ್ರೇಷ್ಠತ್ವ ತಂದು ಕೊಡುವವನು *[ವಸೂನಾಂ ಪಾವಕ್‌ಶ್ಚಾಸ್ಮಿ]*

## ವಿಭೂತಿ ರೂಪ ವರ್ಣನೆ

ಎಂಟು ಮಂದಿ ವಸುಗಳಲ್ಲಿ ಅಗ್ನಿಯೆಂಬ ವಸುವಿಗೆ ಶ್ರೇಷ್ಠತ್ವ ತಂದು ಕೊಡುತ್ತಾ ಪಾವಕ ಎಂಬ ಹೆಸರಿನಿಂದ ಅವನಲ್ಲಿರುವವನು.

ಅಕ್ಷರಗಳಲ್ಲಿದ್ದು ಅಕಾರಕ್ಕೆ ಆಧಿಕ್ಯ ತಂದು ನೀಡುವವನು.

ಅಶ್ವತ್ಥ ಎಂಬ ಹೆಸರನಿಂದ ಅಶ್ವತ್ಥದಲ್ಲಿದ್ದು ಇತರ ವೃಕ್ಷಗಳಂದ ಶ್ರೇಷ್ಠತೆ ತಂದಿಟ್ಟವನು. ಲೋಕಗುರುವಾದ ಬ್ರಹ್ಮನಲ್ಲಿದ್ದು ಶ್ರೇಷ್ಠನನ್ನಾಗಿರುವಂತೆ ಮಾಡುವವನು. ಮೇರುಪರ್ವತದಲ್ಲಿ ಅಂತರ್ಗತನಾಗಿದ್ದು ಇತರ ಪರ್ವತಗಳಗಿಂತ ಶ್ರೇಷ್ಠತ್ವ ನೀಡಿದವನು. ನಾರದನೆಂಬ ಹೆಸರಿನಿಂದ ನಾರದನಲ್ಲಿದ್ದು ದೇವರ್ಷಿಗಳಲ್ಲೆಲ್ಲ ಶ್ರೇಷ್ಠತ್ವ ತಂದಿಟ್ಟವನು.

ಪ್ರಹ್ಲಾದಯೆಂಬ ಹೆಸರಿನಿಂದ ಪ್ರಹ್ಲಾದನಲ್ಲಿದ್ದು ಇತರ ದೈತ್ಯರಿಗಿಂತ ಶ್ರೇಷ್ಠತ್ವ ನೀಡಿದವನು. ವಾಸುಕಿಯಲ್ಲಿದ್ದು ಇತರ ಸರ್ಪಗಳಗಿಂತ ಶ್ರೇಷ್ಠತ್ವ ನೀಡಿದವನು. ಗುಹ್ಯಕರಲ್ಲಿ ಕುಬೇರನಿಗೆ ಶ್ರೇಷ್ಠತ್ವ ನೀಡಿದ ಕುಬೇರ ನೀನೇ. ನೀರಲ್ಲಿ ವಾಸ ಮಾಡುವ ಜೀವಿಗಳಲ್ಲಿ ವರುಣನಲ್ಲಿದ್ದು ಶ್ರೇಷ್ಠನೆಂದು ಮಾಡಿದವನು. ನದಿಗಳಲ್ಲಿ ತ್ರಿಪಥಗೆ ಗಂಗೆಯೂ ನೀನೆ.

ನೀನು ಸಕಲ ಭೂತಗಳಗೂ ಆದಿಭೂತನೂ. ಅಧಿಭೂತನೂ, ಮಧ್ಯಸ್ಥನೂ, ಅಂತಿಮಸ್ಥನೂ ನೀನೆ. ನಿನ್ನಂದಲೇ ಈ ಜಗತ್ತೆಲ್ಲ ಹುಟ್ಟಿರುವುದು.

**ಅಹಂ ತ್ವಂ ಸರ್ವಗೋ ದೇವ ತ್ವಮೇವಾಹಂ ಜನಾರ್ದನ ।**
**ಆವಯೋರಂತರಂ ನಾಸ್ತಿ ಶಬ್ದೈರರ್ಥೈಃ ಜಗತ್ಪತೇ ॥ 21 ॥**

ಸರ್ವತ್ರ ವ್ಯಾಪ್ತನಾದ ನಿನ್ನಿಂದಲೇ ನಾನು ಸರ್ವಪ್ರಾಣಿಗಳಲ್ಲಿ ಮನೋ-ನಿಯಾಮಕನಾಗಿರುವೆನು. ನೀನೇ ನನ್ನಲ್ಲಿಯೂ ಅಂತರ್ನಿಯಾಮಕನಾಗಿದ್ದು ಅಹೇಯನಾದ್ದ ಅಹಂವಾಚ್ಯನಾಗಿರುವಿ. ನನ್ನ ಅಂತರ್ನಿಯಾಮಕ ರೂಪಕ್ಕೂ ನಿನಗೂ ಶಬ್ದದಿಂದಲೂ ಅರ್ಥದಿಂದಲೂ ಯಾವುದೇ ವ್ಯತ್ಯಾಸವಿರುವುದಿಲ್ಲ.

**ನಾಮಾನಿ ತವಗೋವಿಂದ ಯಾನಿಲೋಕೇ ಮಹಾಂತಿ ಚ ।**
**ತಾನ್ಯೇವ ಮಮ ನಾಮಾನಿ ನಾತ್ರ ಕಾರ್ಯಾ ವಿಚಾರಣಾ ॥ 22 ॥**

ಮಹಾರ್ಥಗಳನ್ನು ಕೊಡುವ ಯಾವ ನಾಮಗಳವೆಯೋ ಅವೆಲ್ಲವೂ ನಿನ್ನ

ನಾಮಗಳೇ ಆಗಿವೆ. ಸಕಲ ಶಬ್ದಗಳ ಪ್ರವೃತ್ತಿ ನಿಮಿತ್ತಗಳು ನಿನ್ನಲ್ಲಿಯೇ ಮುಖ್ಯವಾಗಿದೆ. ಆ ನಿನ್ನ ನಾಮಗಳೆಲ್ಲವೂ ನನ್ನ ನಾಮವಾಗಿವೆ ಎಂದರೆ ನನ್ನಲ್ಲಿ ಅಂತರ್ನಿಯಾಮಕ ರೂಪಕ್ಕೂ ಇದ್ದೇ ಇದೆ.

## ವಿಭೂತಿ ರೂಪಗಳು

ನಿನ್ನ ಉಪಾಸನೆಯೆ ನನ್ನ ಅಂತರ್ಯಾಮಿಯ ಉಪಾಸನೆಯು. ನಿನ್ನನ್ನು ದ್ವೇಷ ಮಾಡಿದ್ದಾದರೆ ನನ್ನ ಅಂತರ್ಯಾಮಿಯಾದ ದೇವನನ್ನು ದ್ವೇಷಿಸಿದಂತೆ.

**ತ್ವದುಪಾಸಾ ಜಗನ್ನಾಥ ಸೈವಾಸ್ತಿ ಮಮ ಗೋಪತೇ ।**
**ಯಶ್ಚ ತ್ವಾಂ ದ್ವೇಷ್ಟಿ ದೇವೇಶ ಸಮಾಂ ದ್ವೇಷ್ಟಿ ನ ಸಂಶಯಃ ॥ 23 ॥**

ಹೀಗೆ ಚೇತನಾಚೇತನಾತ್ಮಕ ಜಗತ್ತೆಲ್ಲವೂ ನಿನ್ನದೆ ಸೃಷ್ಟಿ ನೀನಿಲ್ಲದೆ ಇದಾವುದೂ ಇರಲಾರದು.

ಯಾವುದು ಇದೆಯೋ ಯಾವುದು ಹಿಂದೆ ಇತ್ತೊ, ಯಾವುದು ಮುಂದೆ ಹುಟ್ಟುವುದೋ ಈ ಭೂತ, ಭವಿಷ್ಯ, ವರ್ತಮಾನ ವಸ್ತುಗಳೆಲ್ಲ ನಿನ್ನಿಂದಲೇ ನಡೆಯುವುದು ಹೊರತು ನೀನಿಲ್ಲದೆ ಇಲ್ಲ. ದೇವತೆಗಳೆಲ್ಲರೂ ನಿನ್ನ ಗುಣಗಳನ್ನೇ ಋಗ್ಯಜುಸಾಮಗಳಿಂದ ಕೊಂಡಾಡುವರು.

**ಕಿಮುಚ್ಯತೇ ಮಯಾ ದೇವ ಸರ್ವಂ ತ್ವಂ ಭೂತಭಾವನ ।**
**ನಮಸ್ಕರೋಮಿ ಸರ್ವಾತ್ಮನ್ ವಂದೇ ತ್ವಾಮಹಮೀಶ್ವರ ॥ 24 ॥**

ನಾನು ಏನೇನು ನಿನ್ನ ವರ್ಣನೆ ಮಾಡಿರುವೆನೋ ಅವೆಲ್ಲವೂ ನಿನ್ನ ಅನುಗ್ರಹದಿಂದ ಮಾಡಿರುವೆನು. ನಿನಗೆ ವಂದಿಸುವೆನು.

**ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ**
**ಶಿವನಿಂದ ಹರಿಸರ್ವೋತ್ತಮತ್ವ ಪ್ರತಿಪಾದನೆ ಎಂಬಲ್ಲಿ**
**ಮೂವತ್ತೊಂಬತ್ತನೆಯ ಅಧ್ಯಾಯವು ಸಮಾಪ್ತಿ**

ಭವಿಷ್ಯ ಪರ್ವ **40** ಭವಿಷ್ಯ ಪರ್ವ

## ಅಥ ಚತ್ವಾರಿಂಶೋಽಧ್ಯಾಯಃ

### ರುದ್ರನಿಂದ ಶ್ರೀಕೃಷ್ಣ ತತ್ತ್ವ ಉಪದೇಶ

**ಇತ್ಯುಕ್ತ್ವಾ ದೇವದೇವೇಶಂ ಮುನೀನಾಹ ಪುನಃ ಶಿವಃ ।**
**ಏವಂ ಜಾನೀತ ಹೇ ವಿಪ್ರಾ ಯೇ ಭಕ್ತಾಃ ದ್ರಷ್ಟು ಮಾಗತಾಃ ॥ 1 ॥**

ಹೀಗೆ ಮಹಾದೇವನು ಶ್ರೀಕೃಷ್ಣನನ್ನು ಸ್ತುತಿಸಿ ವಂದಿಸಿ ಅಲ್ಲಿ ನೆರೆದಿದ್ದ ಮುನಿಗಳಿಗೆ ಹೀಗೆ ಉಪದೇಶಿಸಿದನು.

ವಿಪ್ರರೇ, ಯಾವ ವಿಷ್ಣುವನ್ನು ನೋಡಲು ಇಲ್ಲಿಗೆ ಬಂದಿರುವಿರಿ. ಅವನ ಸ್ವರೂಪ ತಿಳಿಸುವೆ, ಕೇಳಿರಿ.

**ಏತದೇವ ಪರಂ ವಸ್ತು ನೈತಸ್ಮಾತ್ ಪರಮಸ್ತಿ ವಃ ।**
**ಏತದೇವ ಸದಾ ವಿಪ್ರಾಃ ಧ್ಯೇಯಂ ಸತತಮಾನಸೈಃ ॥ 2 ॥**
**ಏತದ್ ವಃ ಪರಮಂ ಶ್ರೇಯಃ ಏತದ್ ವಃ ಪರಮಂ ಧನಮ್ ।**
**ಏತದ್ ವೋ ಜನ್ಮನಃ ಕೃತ್ಯಂ ಏತದ್ ವಃ ತಪಸಃ ಫಲಮ್ ॥ 3 ॥**
**ಏಷ ವಃ ಪುಣ್ಯನಿಲಯ ಏಷ ಧರ್ಮಃ ಸನಾತನಃ ॥ 4 ॥**

ಈತನೇ ಪ್ರಪಂಚದಲ್ಲಿ ಉತ್ತಮೋತ್ತಮವಾದ ಪರಾತ್ಪರ ವಸ್ತುವು. ಇವನಿಗಿಂತ ಮಿಗಿಲಾದ ವಸ್ತು ಪ್ರಪಂಚದಲ್ಲಿಯೇ ಇರುವುದಿಲ್ಲ.

ಈ ಉತ್ತಮ ವಸ್ತುವನ್ನೇ ಏಕಾಗ್ರತೆಯಿಂದ ಧ್ಯಾನಿಸಿ ಧನ್ಯರಾಗಿರಿ. ಈ ವಸ್ತುವಿನ ಧ್ಯಾನವೆ ಉತ್ತಮವಾದ ತಪಸ್ಸು. ಇದೆ ನಿಮಗೆ ಶ್ರೇಯೋಮಾರ್ಗವು.

ಇವನೇ ಪ್ರಧಾನವಾದ ಧನವು. ಈತನೆ ನಿಮ್ಮ ಜನ್ಮ ಸಾಫಲ್ಯ ಕಾರಣನು. ನಿಮ್ಮ ತಪಸ್ಸಿನ ಧ್ಯೇಯನು. ಸನಾತನ ಧರ್ಮ ಸ್ವರೂಪನು ನಿಮಗೆಲ್ಲ ಮೋಕ್ಷಪ್ರದಾತನು.

ಬ್ರಹ್ಮಜ್ಞಾನಿಗಳೆಲ್ಲರೂ ಸಮಸ್ತ ಗುಣಪೂರ್ಣನೂ ನಿರ್ದೋಷಿಯುಯೆಂದು ಸ್ತುತಿಸುವರು. ಸರ್ವೋತ್ತಮನೂ, ಸನ್ಮಾರ್ಗಪ್ರದರ್ಶಕನೆಂದೂ ಒಪ್ಪುವರು.

**ನಾನ್ಯೋ ಜಗತಿ ದೇವೋऽಸ್ತಿ ವಿಷ್ಣೋಃ ನಾರಾಯಣಾತ್ ಪರಃ ।**
**ಓಮಿತ್ಯೇವಂ ಸದಾ ವಿಪ್ರಾಃ ಪಠತ ಧ್ಯಾತ ಕೇಶವಮ್ ॥ 5 ॥**

ಈತನಿಗೆ ಸಮಾನನು ಅಧಿಕನೂ ಏಳನೇ ರಸದಂತೆ ಇರುವುದಿಲ್ಲ. ಇವನನ್ನು ಓಂಕಾರ ಪ್ರತಿಪಾದ್ಯನೆಂದು ಮನನಾದಿಗಳಿಂದ ಧ್ಯಾನಿಸಿರಿ. ಇದು ನಿಮಗೆ ಯೋಗ್ಯವಾಗಿದೆ. ಈತನು ನಿಮ್ಮ ಸಂಸಾರ ತಾರಕನು. ತಪೋಧನರೇ! ನಿಮ್ಮ ಅಂತಃಕರಣವು ಶುದ್ಧವಾಗಿದ್ದರೆ ಮಾತ್ರ ವಿಷ್ಣುವು ಪ್ರಸನ್ನನಾಗುವನು. ಮನಸ್ಸಿನ ಶುದ್ಧಿಯು ಮನೋನಿಯಾಮಕನಾದ ನನ್ನನ್ನು ಉಪಾಸಿಸಿ ನನ್ನ ಅನುಗ್ರಹ ಹೊಂದಿದಾಗ ಈ ವಿಷ್ಣುವನ್ನು ತಿಳಿಯಬಹುದಾಗಿದೆ. *[ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃತ್]*. ಹೀಗಾಗಿ ನಾನೇ ನಿಮಗೆ ಉಪದೇಶಿಸಿರುವೆನು

## ಋಷಿಗಳೆಲ್ಲರ ಸಂಶಯ ಪರಿಹಾರ

**ಉಪಾಯೋऽಯಂ ಮಯಾ ಪ್ರೋಕ್ತಃ ನಾತ್ರ ಸಂದೇಹ ಇತ್ಯಪಿ ।**
**ತಥಾಕುರುತ ವಿಪ್ರೇಂದ್ರಾಃ ಯಥಾ ದೇವಃ ಪ್ರಸೀದತಿ ॥ 6 ॥**

ನೀವೆಲ್ಲರೂ ಮನಃಶುದ್ಧಿಗಾಗಿ ಪ್ರಯತ್ನಪೂರ್ವಕವಾಗಿ ಸರ್ವಪಾಪ ಕಳೆದುಕೊಳ್ಳಲು ಪ್ರಯತ್ನಿಸಿರಿ. ಹರಿಯು ಪ್ರಸನ್ನನಾಗುವನು. ಎಂದು ಉಪದೇಶಿಸಿದನು.

ರಾಜನೇ! ಈ ರೀತಿ ಮಹಾದೇವನು ಉಪದೇಶವನ್ನು ಕೇಳಿದ ಮುನಿವರ್ಯರೆಲ್ಲರೂ ಅವನ ಉಪದೇಶದಿಂದ ಭಗವಂತನ ತತ್ವವನ್ನು ಸರಿಯಾಗಿ ತಿಳಿದರು. ಅವರೆಲ್ಲರೂ ಅಂಜಲಿಬದ್ಧರಾಗಿ ಹೀಗೆಂದರು.

**ಏವಮೇವೇತಿ ತಂ ವಿಪ್ರಾಃ ಪ್ರಾಹುಃ ಪ್ರಾಂಜಲಯೋ ಹರಮ್ ।**
**ಭಿನ್ನೋ ನಃ ಸಂಶಯಃ ಸರ್ವೋ ಗೃಹಿತೋಽರ್ಥಃ ಸ ತಾದೃಶಃ ॥ 7 ॥**

ಮಹದೇವನೇ! ನಮಗಿರುವ ಸಂಶಯಗಳೆಲ್ಲ ಪರಿಹೃತವಾದವು. ಇದಕ್ಕಾಗಿಯೇ ತಮ್ಮ ಸನ್ನಿಧಾನವುಳ್ಳ ಈ ಪುಣ್ಯಸ್ಥಳಕ್ಕೆ ನಾವೆಲ್ಲರೂ ಬಂದಿರುವೆವು ಎಂದರು.

ನಿಮ್ಮ ಶ್ರೀಹರಿ ಹರರ ಸಮಾಗಮದಿಂದಾಗಿ ನಿಮ್ಮಿಬ್ಬರಲ್ಲಿರುವ ಶಿವನಾರಾಯಣಃ ಎಂಬ ವೇದ ಮಾತಿನ ಆಂತರಿಕಾರ್ಥವನ್ನು ತಿಳದೆವು. ಬ್ರಹ್ಮನ ಒಳಗಿರುವವನು - ರುದ್ರನ ಒಳಗಿರುವವನೂ ಈ ಭಗವಂತನೆ ಎಂದು ತಿಳದು ನಮ್ಮ ಮಹಾಮೋಹ ಪರಿಹಾರವಾಯಿತು ಎಂದರು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಮಹಾದೇವನ ಉಪದೇಶ ಎಂಬಲ್ಲಿ
ನಲವತ್ತನೆಯ ಅಧ್ಯಾಯವು ಸಮಾಪ್ತಿ

# ಅಥ ಏಕಚತ್ವಾರಿಂಶೋಽಧ್ಯಾಯಃ

## ಪೌಂಡ್ರಕ ವಧ

ಹೀಗೆ ಉಪದೇಶದಿಂದ ಸಂತುಷ್ಟರಾಗಿ ನಮಸ್ಕರಿಸಿ ದೇವತೆಗಳೆಲ್ಲರು ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು. ಶ್ರೀಕೃಷ್ಣನೂ ಕೂಡ ಗರುಡನ್ನೇರಿ ಸಾವಿರಾರು ಮುನಿಗಳಿರುವ ಬದರಿಕಾಶ್ರಮಕ್ಕೆ ಬಂದನು.

ಏತಸ್ಮಿನ್ನೇವ ಕಾಲೇ ತು ಪೌಂಢ್ರೋ ನೃಪವರೋತ್ತಮ ।
ವೃಷ್ಣಿಶತ್ರುಸ್ತದಾ ರಾಜಾ ಕೃಷ್ಣದ್ವೇಷೀ ಬಲಾತ್ ತದಾ ॥ 1 ॥
ನೃಪಾನ್ ಸರ್ವಾನ್ ಸಮಾಹೂಯ ಪ್ರೋವಾಚ ನೃಪಸಂಸದಿ ।
ವೃಷ್ಣಯಸ್ತೇ ಬಲೋನ್ಮತ್ತಾಃ ಕೃಷ್ಣಮಾಶ್ರಿತ್ಯ ಗರ್ವಿತಾಃ ॥ 2 ॥

ವೈಶಂಪಾಯನರು ಜನಮೇಜಯನಿಗೆ ರಾಜನೇ, ಕೃಷ್ಣನು ಬದರಿಗೆ ಹೋಗಿದ್ದಾಗಲೇ ಯುದ್ಧ ದುರ್ಮದನಾದ ಯಾದವ ಶತ್ರುವೂ ಕೃಷ್ಣ ದ್ವೇಷಿಯೂ ಆದ ಪೌಂಡ್ರಕ ವಾಸುದೇವನು ತನ್ನ ಸಾಮಂತರಾಜರನ್ನೆಲ್ಲ ಒಂದೆಡೆ ಸೇರಿಸಿ ಹೀಗೆ ಪ್ರಸ್ತಾಪಿಸಿದನು.

ಮಿತ್ರರಾಜರೇ! ನಿಮ್ಮೆಲ್ಲರ ಸಹಾಯದಿಂದಾಗಿ ನನ್ನ ಭುಜ ಬಲದಿಂದಲು ಭೂಮಂಡಲವನ್ನೆಲ್ಲ ಗೆದ್ದಂತಾಯಿತು. ರಾಜರೆಲ್ಲರೂ ಸೋತು ನಮ್ಮ ಅಂಕೆಯಲ್ಲಿ ಬಂದರು.

ಆದರೆ ಆ ನೀಚ ಯಾದವರು ಮಾತ್ರ ಕೃಷ್ಣನ ಆಶ್ರಯ ಪಡೆದು ನನಗೆ ಕಪ್ಪ ಕೊಡದೆ ಅವಮಾನಿಸುತ್ತಿರುವರು.

**ಅಹಂ ಚಕ್ರೀತಿ ಗರ್ವೋಽಭೂತ್ ತಸ್ಯ ಗೋಪಸ್ಯ ಸರ್ವದಾ ।**
**ಶಂಖೀ ಚಕ್ರೀ ಗದೀ ಶಾರ್ಙ್ಗೀ ಶರೀ ತೂಣೀ ಸಹಾಯವಾನ್ ॥ 3 ॥**
**ಲೋಕೇ ಚ ಮಮ ಯನ್ನಾಮ ವಾಸುದೇವೇತಿ ಸಾಂಪ್ರತಮ್ ॥ 4 ॥**

ಈ ಗೋಪಾಲಬಾಲನಿಗೆ ತಾನು ಚಕ್ರಪಾಣಿಯೆಂಬ ಜಂಭ ಹೊಂದಿದ್ದಾನೆ. ಹಾಗೆಯೆ ಶಂಖ, ಚಕ್ರ, ಗದೆ, ಶಾರ್ಙ್ಗವೆಂಬ ಧನಸ್ಸುಳ್ಳವನೆಂದೂ ಬಹಳ ದುರಹಂಕಾರಿಯಾಗಿರುವನು.

ವಸುದೇವನ ಮಗನಾದ ನಾನೇ ನಿಜವಾಗಿಯೂ ವಾಸುದೇವನು. ನನ್ನ ಹೆಸರನ್ನೇ ವಾಸುದೇವನು ಇಟ್ಟುಕೊಂಡಿರುವನು.

**ತಸ್ಯ ಚಕ್ರಸ್ಯ ಯಚ್ಚಕ್ರಂ ಮಮಾಪಿ ನಿಶಿತಂ ಮಹತ್ ।**
**ಸಹಸ್ರಾರಂ ಮಹಾಘೋರಂ ತಸ್ಯ ಚಕ್ರಸ್ಯ ನಾಶನಮ್ ॥ 5 ।**
**ಮಮಾಪ್ಯೇತದ್ ಧನುರ್ದಿವ್ಯಂ ಶಾಙ್ಗಂ ನಾಮ ಮಹಾರವಮ್ ।**
**ಗದಾ ಕೌಮೋದಕೀ ನಾಮ ಮಮೇಯಂ ಬೃಹತೀ ದೃಢಾ ।**
**ಖಡ್ಗೋ ನಂದಕ ನಾಮಾಸೌ ಮಮಾಯಂ ವಿಪುಲಂ ದೃಢಃ ॥ 6 ॥**

ಅವನ ಚಕ್ರವು ಕೇವಲ ಹೆಸರಿಗೆ ಮಾತ್ರ ಚಕ್ರ. ಆದರೆ ನನ್ನ ಚಕ್ರವು ಅತ್ಯಂತ ನಿಶಿತವಾಗಿದ್ದು ಸಾವಿರಾರು ಅರಗಳಿದ್ದು ಅಪ್ರತಿಹತವಾದದ್ದು.

ನನ್ನ ಧನುಸ್ಸಿಗೆ ಶಾಙ್ಗವೆಂಬ ಹೆಸರಿದೆ. ನನಗೂ ಕೌಮೋದಕೀ ಎಂಬ ಮಹಾಪ್ರಮಾಣದ ದೃಢತರ ಗದೆಯಿದೆ. ಇದು ಮೂವತ್ತು ಸಹಸ್ರ ತೊಲದಷ್ಟು ಭಾರದ ಉಕ್ಕಿನಿಂದ ತಯಾರಿಸಿದ್ದು. ಅವನಲ್ಲಿದ್ದಂತೆ ನನಗೂ ನಂದಕವೆಂಬ ಖಡ್ಗವಿದೆ. ಅದು ಅಂತಕನಿಗೂ ಅಂತಕವಾಗಿದ್ದು ಕೃಷ್ಣನ ಖಡ್ಗಕ್ಕೂ ನಾಶಕವಾಗಿರುತ್ತದೆ.

ರಾಜರೇ! ನೀವೆಲ್ಲರೂ ಸಹ ನನ್ನನ್ನೇ ಗದೀ ಎಂದೂ ಖಡ್ಗೀ, ಶಂಖೀ ಚಕ್ರೀಯೆಂದು ಹಾಗೂ ಕೃಷ್ಣನನ್ನೂ ಜಯಿಸುವವನೆಂದು ತಿಳಿದು ಹಾಗೆಯೆ ವ್ಯವಹರಿಸಿರಿ.

ಶ್ರೀಕೃಷ್ಣನು ನನ್ನ ಮುಂದೆ ತೃಣಪ್ರಾಯನು.

**ಏಕೋಽಹಂ ವಾಸುದೇವೋ ಹಿ ಹತ್ವಾ ತಂ ಗೋಪದಾರಕಮ್ ।**
**ಸಖ್ಯುಃ ಮಮ ಬಲಾದ್ಧಂತಾ ನರಕಸ್ಯ ಮಹಾತ್ಮನಃ ॥ 7 ॥**

ಆ ಗೋಪದಾರಕನು ನನ್ನ ಮಿತ್ರನಾದ ನರಕಾಸುರನನ್ನು ಕೊಂದು ಹಾಕಿದ ಅವನನ್ನು ಕೊಂದು ಹಾಕುವೆನು?

ನನ್ನ ಮಾತು ಕೇಳದ ಯಾರಾದರೂ ಸರಿಯೇ ಅವರನ್ನು ಕೊಂದು ಹಾಕುವೆನು. ನನ್ನ ವಿರುದ್ಧವಾಗಿರುವವರಿಗೆ ಸಾವಿರ ಸುವರ್ಣಭಾರ ದಂಡ ವಿಧಿಸುವೆನು.

ಈ ಮಾತನ್ನು ಕೇಳಿದ ವೀರಾಗ್ರಣಿಗಳು ಮನದಲ್ಲಿಯೇ ಇವನ ಪೊಳ್ಳು ಮಾತುಗಳನ್ನು ಕೇಳಿ ಮನದಲ್ಲಿಯೆ ಹೀಯಾಳಿಸಿದರು. ಕೆಲವು ಮಧ್ಯಮರು ಅವನ ಮಾತಿಗೆ ಒಪ್ಪಿದರು. ಅಧಮರಾದರೂ ಮದಬಲದಿಂದ ಹಿಗ್ಗಿ ತಾವೂ ಕೂಡ ಯುದ್ಧ ಸನ್ನಾಹ ಮಾಡಿಕೊಂಡು ಯುದ್ಧದಲ್ಲಿ ಕೃಷ್ಣನನ್ನು ಗೆಲ್ಲೋಣ ಎಂದರು.

## ಪೌಂಡ್ರಕ ನಾರದ ಸಂವಾದ

**ನಾರದಃ ಸರ್ವಲೋಕಜ್ಞಃ ಪೌಂಡ್ರಸ್ಯ ನಗರಂ ಪ್ರತಿ ।**
**ಅವತೀರ್ಯ ನಭೋಭಾಗಾತ್ ಪೌಂಡ್ರಸ್ಯ ನಗರಂ ಪ್ರತಿ ॥ 8 ॥**

ರಾಜನೇ! ಅದೇ ಸಮಯಕ್ಕೆ ದೇವತಾಕಾರ್ಯ ಚತುರನಾದ ನಾರದರು ಸರ್ವವೃತ್ತಾಂತವನ್ನೂ ತಿಳಿದ ನಾರದರು ಕೈಲಾಸದಿಂದ ಹೊರಟು ಆಕಾಶಮಾರ್ಗದಿಂದ ಪೌಂಡ್ರಕನ ಪುರಕ್ಕೆ ಹೊರಟರು. ರಾಜನ ಸಭೆಗೆ ಪ್ರವೇಶ ಮಾಡಿ ಅರ್ಘ್ಯಪಾದ್ಯಾದಿ ಉಪಚಾರ ಸ್ವೀಕರಿಸಿ ಉತ್ತಮಾಸನದಲ್ಲಿ ಕುಳಿತರು.

**ಕುಶಲಂ ಪೃಷ್ಟವಾನ್ ಭೂಯೋ ನೃಪಃ ಸ ಮುನಿಸತ್ತಮಂ ।**

ಪೌಂಡ್ರಕನು ನಾರದರ ಕುಶಲ ಪ್ರಶ್ನೆ ಮಾಡಿ ನಾರದರೇ !

**ಅಗಮ್ಯಂ ತವ ವಿಪ್ರೇಂದ್ರ ಬ್ರಹ್ಮಾಂಡೇ ನ ಹಿ ಕಿಂಚಿನ ॥ 9 ॥**

ತಾವು ತ್ರಿಲೋಕ ಸಂಚಾರಿಗಳಾಗಿ ಎಲ್ಲಿಗೆ ತೆರಳಿದರೂ ನಿಮ್ಮ ನಡೆಗೆ ತಡೆಯಿರುವುದಿಲ್ಲ. ನೀವು ಮಹಾತ್ಮರೆಂದು ದೇವತಾ ಸಭೆಯಲ್ಲಿಯೂ ಪ್ರಸಿದ್ಧರಾಗಿರುವಿರಿ.

ನಾರದರೇ! ತಾವು ಎಲ್ಲಿ ಎಲ್ಲಿಗೆ ಸಂಚರಿಸಿ ಹೋಗುವಿರೋ ಅಲ್ಲೆಲ್ಲ ವೀರ್ಯಸಂಪನ್ನರಾದ ಪೌಂಡ್ರಕ ವಾಸುದೇವನೆ ನಿಜವಾದ ವಾಸುದೇವನು ಎಂದು ಅವನೇ ಶಂಖೀ, ಚಕ್ರೀ, ಗದೀ, ಖಡ್ಗೀಯಾಗಿರುವನು. ಪ್ರಬಲ

**ಅಹಂ ಚಕ್ರೀತಿ ಗರ್ವೋಽಭೂತ್ ತಸ್ಯ ಗೋಪಸ್ಯ ಸರ್ವದಾ ।**
**ಶಂಖೀ ಚಕ್ರೀ ಗದೀ ಶಾರ್ಂಗೀ ಶರೀ ತೂಣೀ ಸಹಾಯವಾನ್ ॥ 3 ॥**
**ಲೋಕೇ ಚ ಮಮ ಯನ್ನಾಮ ವಾಸುದೇವೇತಿ ಸಾಂಪ್ರತಮ್ ॥ 4 ॥**

ಈ ಗೋಪಾಲಬಾಲನಿಗೆ ತಾನು ಚಕ್ರಪಾಣಿಯೆಂಬ ಜಂಭ ಹೊಂದಿದ್ದಾನೆ. ಹಾಗೆಯೆ ಶಂಖ, ಚಕ್ರ, ಗದೆ, ಶಾರ್ಙ್ಗವೆಂಬ ಧನಸ್ಸುಳ್ಳವನೆಂದೂ ಬಹಳ ದುರಹಂಕಾರಿಯಾಗಿರುವನು.

ವಸುದೇವನ ಮಗನಾದ ನಾನೇ ನಿಜವಾಗಿಯೂ ವಾಸುದೇವನು. ನನ್ನ ಹೆಸರನ್ನೇ ವಾಸುದೇವನು ಇಟ್ಟುಕೊಂಡಿರುವನು.

**ತಸ್ಯ ಚಕ್ರಸ್ಯ ಯಚ್ಚಕ್ರಂ ಮಮಾಪಿ ನಿಶಿತಂ ಮಹತ್ ।**
**ಸಹಸ್ರಾರಂ ಮಹಾಘೋರಂ ತಸ್ಯ ಚಕ್ರಸ್ಯ ನಾಶನಮ್ ॥ 5 ।**
**ಮಮಾಪ್ಯೇತದ್ ಧನುರ್ದಿವ್ಯಂ ಶಾಙ್ಗಂ ನಾಮ ಮಹಾರವಮ್ ।**
**ಗದಾ ಕೌಮೋದಕೀ ನಾಮ ಮಮೇಯಂ ಬೃಹತೀ ದೃಢಾ ।**
**ಖಡ್ಗೋ ನಂದಕ ನಾಮಾಸೌ ಮಮಾಯಂ ವಿಪುಲಂ ದೃಢಃ ॥ 6 ॥**

ಅವನ ಚಕ್ರವು ಕೇವಲ ಹೆಸರಿಗೆ ಮಾತ್ರ ಚಕ್ರ. ಆದರೆ ನನ್ನ ಚಕ್ರವು ಅತ್ಯಂತ ನಿಶಿತವಾಗಿದ್ದು ಸಾವಿರಾರು ಅರಗಳದ್ದು ಅಪ್ರತಿಹತವಾದದ್ದು,

ನನ್ನ ಧನುಸ್ಸಿಗೆ ಶಾಙ್ಗವೆಂಬ ಹೆಸರಿದೆ. ನನಗೂ ಕೌಮೋದಕೀ ಎಂಬ ಮಹಾಪ್ರಮಾಣದ ದೃಢತರ ಗದೆಯಿದೆ. ಇದು ಮೂವ್ವತ್ತು ಸಹಸ್ರ ತೊಲದಷ್ಟು ಭಾರದ ಉಕ್ಕಿನಿಂದ ತಯಾರಿಸಿದ್ದು. ಅವನಲ್ಲಿದ್ದಂತೆ ನನಗೂ ನಂದಕವೆಂಬ ಖಡ್ಗವಿದೆ. ಅದು ಅಂತಕನಿಗೂ ಅಂತಕವಾಗಿದ್ದು ಕೃಷ್ಣನ ಖಡ್ಗಕ್ಕೂ ನಾಶಕವಾಗಿರುತ್ತದೆ.

ರಾಜರೇ! ನೀವೆಲ್ಲರೂ ಸಹ ನನ್ನನ್ನೇ ಗದೀ ಎಂದೂ ಖಡ್ಗೀ, ಶಂಖೀ ಚಕ್ರೀಯೆಂದು ಹಾಗೂ ಕೃಷ್ಣನನ್ನೂ ಜಯಿಸುವವನೆಂದು ತಿಳಿದು ಹಾಗೆಯೆ ವ್ಯವಹರಿಸಿರಿ.

ಶ್ರೀಕೃಷ್ಣನು ನನ್ನ ಮುಂದೆ ತೃಣಪ್ರಾಯನು.

**ಏಕೋಽಹಂ ವಾಸುದೇವೋ ಹಿ ಹತ್ವಾ ತಂ ಗೋಪದಾರಕಮ್ ।**
**ಸಖ್ಯುಃ ಮಮ ಬಲಾದ್ಧಂತಾ ನರಕಸ್ಯ ಮಹಾತ್ಮನಃ ॥ 7 ॥**

ಆ ಗೋಪದಾರಕನು ನನ್ನ ಮಿತ್ರನಾದ ನರಕಾಸುರನನ್ನು ಕೊಂದು ಹಾಕಿದ ಅವನನ್ನು ಕೊಂದು ಹಾಕುವೆನು?

ನನ್ನ ಮಾತು ಕೇಳದ ಯಾರಾದರೂ ಸರಿಯೇ ಅವರನ್ನು ಕೊಂದು ಹಾಕುವೆನು. ನನ್ನ ವಿರುದ್ಧವಾಗಿರುವವರಿಗೆ ಸಾವಿರ ಸುವರ್ಣಭಾರ ದಂಡ ವಿಧಿಸುವೆನು.

ಈ ಮಾತನ್ನು ಕೇಳದ ವೀರಾಗ್ರಣಿಗಳು ಮನದಲ್ಲಿಯೇ ಇವನ ಪೊಳ್ಳು ಮಾತುಗಳನ್ನು ಕೇಳಿ ಮನದಲ್ಲಿಯೆ ಹೀಯಾಳಿಸಿದರು. ಕೆಲವು ಮಧ್ಯಮರು ಅವನ ಮಾತಿಗೆ ಒಪ್ಪಿದರು. ಅಧಮರಾದರೂ ಮದಬಲದಿಂದ ಹಿಗ್ಗಿ ತಾವೂ ಕೂಡ ಯುದ್ಧ ಸನ್ನಾಹ ಮಾಡಿಕೊಂಡು ಯುದ್ಧದಲ್ಲಿ ಕೃಷ್ಣನನ್ನು ಗೆಲ್ಲೋಣ ಎಂದರು.

## ಪೌಂಡ್ರಕ ನಾರದ ಸಂವಾದ

**ನಾರದಃ ಸರ್ವಲೋಕಜ್ಞಃ ಪೌಂಡ್ರಸ್ಯ ನಗರಂ ಪ್ರತಿ ।**
**ಅವತೀರ್ಯ ನಭೋಭಾಗಾತ್ ಪೌಂಡ್ರಸ್ಯ ನಗರಂ ಪ್ರತಿ ॥ 8 ॥**

ರಾಜನೇ! ಅದೇ ಸಮಯಕ್ಕೆ ದೇವತಾಕಾರ್ಯ ಚತುರನಾದ ನಾರದರು ಸರ್ವವೃತ್ತಾಂತವನ್ನೂ ತಿಳಿದ ನಾರದರು ಕೈಲಾಸದಿಂದ ಹೊರಟು ಆಕಾಶಮಾರ್ಗದಿಂದ ಪೌಂಡ್ರಕನ ಪುರಕ್ಕೆ ಹೊರಟರು. ರಾಜನ ಸಭೆಗೆ ಪ್ರವೇಶ ಮಾಡಿ ಅರ್ಘ್ಯಪಾದ್ಯಾದಿ ಉಪಚಾರ ಸ್ವೀಕರಿಸಿ ಉತ್ತಮಾಸನದಲ್ಲಿ ಕುಳಿತರು.

**ಕುಶಲಂ ಪೃಷ್ಟವಾನ್ ಭೂಯೋ ನೃಪಃ ಸ ಮುನಿಸತ್ತಮಂ ।**

ಪೌಂಡ್ರಕನು ನಾರದರ ಕುಶಲ ಪ್ರಶ್ನೆ ಮಾಡಿ ನಾರದರೇ !

**ಅಗಮ್ಯಂ ತವ ವಿಪ್ರೇಂದ್ರ ಬ್ರಹ್ಮಾಂಡೇ ನ ಹಿ ಕಿಂಚಿನ ॥ 9 ॥**

ತಾವು ತ್ರಿಲೋಕ ಸಂಚಾರಿಗಳಾಗಿ ಎಲ್ಲಿಗೆ ತೆರಳಿದರೂ ನಿಮ್ಮ ನಡೆಗೆ ತಡೆಯಿರುವುದಿಲ್ಲ. ನೀವು ಮಹಾತ್ಮರೆಂದು ದೇವತಾ ಸಭೆಯಲ್ಲಿಯೂ ಪ್ರಸಿದ್ಧರಾಗಿರುವಿರಿ.

ನಾರದರೇ! ತಾವು ಎಲ್ಲಿ ಎಲ್ಲಿಗೆ ಸಂಚರಿಸಿ ಹೋಗುವಿರೋ ಅಲ್ಲೆಲ್ಲ ವೀರ್ಯಸಂಪನ್ನರಾದ ಪೌಂಡ್ರಕ ವಾಸುದೇವನೆ ನಿಜವಾದ ವಾಸುದೇವನು ಎಂದು ಅವನೇ ಶಂಖೀ, ಚಕ್ರೀ, ಗದೀ, ಖಡ್ಗೀಯಾಗಿರುವನು. ಪ್ರಬಲ

ರಾಜನೆಂದೂ ಕೇಳಿದದ್ದನ್ನೆಲ್ಲ ನೀಡುವ ಉದಾರಿಯೆಂದೂ ದುಷ್ಟರನ್ನು ಶಾಸನ ಮಾಡುವವನೆಂದೂ ಅವನ ಶಾಸನ ಮೀರುವವರಿಗೆ ದಂಡಿಸುವವನೆಂದೂ, ರಾಜಾಧಿರಾಜನೆಂದೂ ಬಲಿಷ್ಠರಿಗೂ ಬಲಿಷ್ಠನೆಂದೂ, ಅಜೇಯನೆಂದೂ ತಿಳಿಸಬೇಕು. ಈಗ ಯಾವನೋ ಒಬ್ಬ ಗೊಲ್ಲನ ಮಗ ಕೃಷ್ಣನೂ ವಾಸುದೇವನೆಂಬ ಹೆಸರನ್ನು ನನ್ನ ಹೆಸರನ್ನಿಟ್ಟುಕೊಂಡಿರುವನು. ಅವನು ನನಗಿದ್ದಂತೆ ಬಲವಿರುವುದಿಲ್ಲ. ಅವನು ಕೇವಲ ಗೊಲ್ಲ ಬಾಲಕನು. ಚಾಪಲ್ಯ ಮಾತ್ಸರ್ಯಗಳಿಂದಾಗಿ ನನ್ನ ಹೆಸರನ್ನಿಟ್ಟುಕೊಂಡಿರುವನು.

ನಾನೇ ಪ್ರಧಾನ ವಾಸುದೇವನೆಂದು ನೀವು ಹೋದಲ್ಲೆಲ್ಲ ಪ್ರಚಾರ ಮಾಡಬೇಕು.

ನಾನು ಸದ್ಯದಲ್ಲಿಯೇ ಕೃಷ್ಣನ ಆವಾಸ ಸ್ಥಾನವಾದ ದ್ವಾರಕೆಗೆ ಮುತ್ತಿಗೆ ಹಾಕಿ ಪಟ್ಟಣವನ್ನು ಸೂರೆಗೊಳ್ಳುವೆನು.

ಸಾಮಂತ ರಾಜರೆಲ್ಲ ನನ್ನೊಂದಿಗೆ ಯುದ್ಧ ಮಾಡಲಿರುವರು. ನನಗೆ ಅತೀವೇಗವಾಗಿ ಓಡಬಲ್ಲ ಕುದುರೆಗಳು, ವಾಯುವೇಗದಿಂದ ಓಡುವ ರಥಗಳು, ಸಾವಿರಾರು ಒಂಟೆಗಳು, ಹತ್ತು ಸಾವಿರ ಮಹಾಗಜಗಳೂ ಹಾಗೂ ಅಸಂಖ್ಯಾತ ಪದಾತಿಗಳೂ ಇರುವರು.

**ಸರ್ವತ್ರಗಃ ಸದಾಚಾಸ್ಮಿ ಯಾವದ್ ಬ್ರಹ್ಮಾಂಡ ಸಂಸ್ಥಿತಿಃ ।**
**ಆಚಾರ್ಯಃ ಸರ್ವಕಾರ್ಯೇಷು ಗಮನೇ ಕೇನಚಿನ್ ನೃಪ ॥ 10 ॥**

**ಮಹೀಂ ಶಾಸತಿ ದೇವೇಶೇ ಚಕ್ರಪಾಣೌ ಜನಾರ್ದನೇ ।**
**ಕೋ ನಾಮ ವಕ್ತುಮೇವೇದಂ ಕೃಷ್ಣೇ ಶಾಸತಿ ಗೋಮತೀ ॥ 11 ॥**
**ಆದಿದೇವಃ ಪುರಾಣಾತ್ಮಾ ದರ್ಪಂ ತೇ ವ್ಯಪನೇಷ್ಯತಿ ॥ 12 ॥**

ನಾರದರೇ ! ನನ್ನ ಶಕ್ತಿ ಸಾಮರ್ಥ್ಯಗಳನ್ನೆಲ್ಲ ಸರ್ವತ್ರ ಪ್ರಸಿದ್ಧಿಗೊಳಿಸಿರಿ. ಇಂದ್ರದೇವನಿಗೂ ತಿಳಿಸಿರಿ.

ನಾರದರು ಪೌಂಡ್ರಕನೇ !

ರಾಜನೇ ನಿನ್ನ ಬುದ್ಧಿಗೆ ಏನು ಹೇಳಲಿ! ಸರ್ವತ್ರ ವ್ಯಾಪ್ತನೂ ದೇವೋತ್ತಮವಾದ ಕಾರಣ ಮಹಾವಿಷ್ಣುವೆನಿಸಿದ್ದಾನೆ. ಇಂತಹ ಶ್ರೀಹರಿಯು ಚಕ್ರಪಾಣಿಯಾಗಿ ಬಂದು ಪರಿವಾರದಿಂದ ಸಹಿತ ದುಷ್ಟರನ್ನು ನಿಗ್ರಹಿಸುತ್ತಾ

ಶಿಷ್ಟರನ್ನು ರಕ್ಷಿಸುತ್ತಾ ಇರಲು ಆತನಿಗಿಂತ ಮಿಗಿಲಾದ ವಾಸುದೇವ ಬೇರೆಯಾರಿರುವರು.

ತೇಜೋಮಯನಾದ ಶ್ರೀಕೃಷ್ಣನೇ ರಾಜಾಧಿರಾಜನಾಗಿ ಇರುತ್ತಿರಲು ಆತನ ಮುಂದೇ ಪೌಂಡ್ರಕ ವಾಸುದೇವನೆ ಪ್ರಧಾನ ವಾಸುದೇವನೆಂದೂ ಸರ್ವಶಕ್ತನೆಂದೂ ಹೇಳಲು ಯಾರಿಗೆ ಸಾಮರ್ಥ್ಯವಿರುವುದು?

ಕೃಷ್ಣನ ಅದ್ಭುತ ಶಕ್ತಿ ಸಾಮರ್ಥ್ಯಗಳನ್ನೂ ಮಹಾಮಹಿಮೆಗಳನ್ನೂ ಅರಿಯದ ಮೂರ್ಖರು ಹಾಗೆ ಹೇಳಯಾರು. ಅಚಿಂತ್ಯ ವೈಭವವುಳ್ಳ ಶ್ರೀಕೃಷ್ಣನು ನಿನ್ನ ಅಹಂಕಾರವನ್ನು ನಿಜವಾಗಿಯೂ ಹೋಗಲಾಡಿಸದಿರನು.

**ಹರಿಃ ಸರ್ವತ್ರಗೋ ವಿಷ್ಣುರ್ದರ್ಪಂ ತೇ ವ್ಯಪನೇಷ್ಯತಿ ॥ 13 ॥**

ನೀನಾಡುವ ಮಾತುಗಳೆಲ್ಲ ಹಾಸ್ಯಾಸ್ಪದವಾಗಿರುತ್ತದೆ. ಶ್ರೀಕೃಷ್ಣನ ಶಂಖ ಚಕ್ರ ಗದಾ ಖಡ್ಗ ಮೊದಲಾದ ಆಯುಧಗಳು ಶ್ರೀಕೃಷ್ಣನಿಗಲ್ಲದೆ ಇತರರಿಗೆ ಲಭಿಸಲಾರವು. ಇದು ನಿನಗೆ ಅತೀವ ಹಾಸ್ಯಸ್ಪದ ಕಾಲವು ಬಂದೊದಗಿದೆ.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ನಾರದ-ಪೌಂಡ್ರಕ ಸಂವಾದ ಎಂಬಲ್ಲಿ
ನಲವತ್ತೊಂದನೆಯ ಅಧ್ಯಾಯವು ಸಮಾಪ್ತಿ

# ಅಥ ದ್ವಿಚತ್ವಾರಿಂಶ-ತ್ರಿಚತ್ವಾರಿಂಶೋऽಧ್ಯಾಯಃ

## ದ್ವಾರಕಾಕ್ರಮಣ

**ತತಃ ಕ್ರುದ್ಧೋ ಮಹಾರಾಜ ಪೌಂಡ್ರೋ ಮದಬಲಾನ್ವಿತಃ ।**
**ನಾರದಂ ವಿಪ್ರವರ್ಯಂ ತಂ ಪ್ರೋವಾಚ ನೃಪಸಂಸದಿ ॥ 1 ॥**

ನಾರದರ ಮಾತಿನಿಂದ ಸಿಟ್ಟುಗೊಂಡು ನಾರದರೇ ಏನಿಂದಿರಿ. ಈಗ ನಾನೇ ರಾಜಾಧಿರಾಜನು. ನೀವು ಬ್ರಾಹ್ಮಣರೊಂದಿಗೆ ಎಲ್ಲಿ ಬೇಕಾದರೂ ಹೋಗಿರಿ.

ಅಥವಾ ಮಹಾಮುನಿಯೆಂಬ ಅಹಂಕಾರವಿದ್ದರೆ ಶಾಪ ಕೊಡಿ ಅದಕ್ಕೆಲ್ಲಾ ನಾನು ಭಯ ಪಡುವವನಲ್ಲ.

ನೀವು ಮಹಾಬುದ್ಧಿವಂತನೆಂದು ನನಗೆ ಭಯಪಡಿಸುವಿರಾ, ಈಗಲೇ ಇಲ್ಲಿಂದಲೇ ಹೊರಟು ಹೋಗಿ ಎಂದು ಬಿರುಸಾಗಿ ನುಡಿದ.

**ಭೀತಸ್ತ್ವತ್ತೋ ಮಹಾಬುದ್ಧೇ ಗಚ್ಛತ್ವಂ ಕಾಮಮದ್ಯ ಹಿ ॥ 2 ॥**

ನಾರದರು ಏನೂ ಮಾತನಾಡದೆ ಹೊರಟು ಆಕಾಶ ಮಾರ್ಗವಾಗಿ ಬದರಿಕಾಶ್ರಮಕ್ಕೆ ಹೋಗಿ ನಡೆದ ವಾರ್ತೆಯನ್ನು ತಿಳಿಸಿದರು.

**ಸ ಗತ್ವಾ ವಿಷ್ಣುಸಂಕಾಶಂ ವಿಷ್ಣೋಃ ಸರ್ವಂ ಶಶಂಸ ಹ ॥ 3 ॥**

ಶ್ರೀಕೃಷ್ಣನು ನಾರದರಿಗೆ ನಾರದರೇ ಆ ನೀಚ ಏನನ್ನೂ ಹೇಳಲಿ ನಾನಾದರೂ ನಾಳೆಯೇ ಆತನ ದುರಹಂಕಾರವನ್ನು ಹೋಗಲಾಡಿಸುವೆನು.

ಇತ್ತ ಪೌಂಡ್ರಕ ವಾಸುದೇವನು ಮಹಾರಥಿಕರಿಂದಲೂ ಸಹಸ್ರ ಗಜ, ಕುದುರೆ

ರಥ ಪದಾತಿಗಳಿಂದ ಕೂಡಿ ಕೋಟಿ ಸಂಖ್ಯಾಕವಾದ ಶಸ್ತ್ರಾಸ್ತ್ರಗಳಿಂದಲೂ ಏಕಲವ್ಯನೇ ಮೊದಲಾದ ಯೋಧರಿಂದಲೂ ಕೂಡಿ ಯುದ್ಧಕ್ಕೆ ಸಿದ್ಧನಾದನು.

**ಪತ್ತಯೋ ದೀಪಿಕಾಹಸ್ತಃ ರಾತ್ರೌ ತಮಸಿ ದಾರುಣೇ ॥ 4 ॥**

**ಅಗ್ನ್ಯರ್ಕ ಸದೃಶಾಕಾರಂ ಯಯೌ ದ್ವಾವರತೀಮನು ।**
**ಹಂತುಮೈಚ್ಛಜ್ಜಗನ್ನಾಥಂ ವೃಷ್ಣೀಂಶ್ಚೈವ ಸಮಂತತಃ ॥ 5 ॥**

ಅವನ ಸೈನ್ಯದಲ್ಲಿ 8 ಸಾವಿರ ರಥಗಳೂ, 10 ಸಾವಿರ ಆನೆಗಳು, ಹತ್ತುಕೋಟಿ ಪದಾತಿಗಳು, ಅನೇಕ ಸಹಸ್ರ ಕುದುರೆಗಳಿದ್ದವು. ಇವರೆಲ್ಲ ರಾತ್ರಿಯಲ್ಲಿಯೇ ಪಂಜುಗಳನ್ನು ಹಿಡಿದು ದ್ವಾರಕೆಗೆ ಮುತ್ತಿದರು.

ಶ್ರೀಕೃಷ್ಣನು ಕೈಲಾಸಕ್ಕೆ ಮಾರನೇ ದಿನವೆ ಪೌಂಡ್ರಕನು ಏಕಲವ್ಯನಿಂದ ಸಹಿತ ಮೂರು ಅಕ್ಷೌಹಿಣೀ ಸಹಿತ ದ್ವಾರಕೆ ಮುತ್ತಿದ. ಇಂತಹ ಚದುರಂಗ ಬಲದಿಂದ ದ್ವಾರಕೆಯನ್ನು ಮುತ್ತಿ ಅಲ್ಲಿನ ಪ್ರಬಲ ಯೋಧರೆನ್ನೆಲ್ಲ ಬಲಾತ್ಕಾರವಾಗಿ ಸೆಳೆದ ಪುರದ ದ್ವಾರದಲ್ಲಿ ಸೇನೆ ನಿಲ್ಲಿಸಿದ.

ಸಾಮಂತರಾಜರೇ! ಕೃಷ್ಣನ ಬಾಹುಬಲವನ್ನವಲಂಬಿಸಿ ಕೊಬ್ಬಿರುವ ಯಾದವರನ್ನೆಲ್ಲ ಕೊಲ್ಲಲಿಚ್ಛಿಸಿದ ಪೌಂಡ್ರಕನು ಈಗಾಗಲೇ ದ್ವಾರಕೆಗೆ ಅಪಾರ ಸೇನಾವಾಹಿನಿಯೊಂದಿಗೆ ಮುತ್ತಿರುವನೆಂದು ಉಚ್ಚಧ್ವನಿಯಿಂದ ಯಾದವರಿಗೆ ತಿಳಿಸಿರಿ ಎಂದಾಗ, ಪೌಂಡ್ರಕನ ಆದೇಶದಂತೆ ಸೈನಿಕರು ಡಂಗುರ ಸಾರಿದರು. ಆ ವಾರ್ತೆಯನ್ನು ಪುರದ್ವಾರಪಾಲಕರು ರಾಜಸಭೆಯಲ್ಲಿ ತಿಳಿಸಿದರು.

**ಸಿಂಹನಾದಂ ಪ್ರಕುರ್ವಂತಃ ಶಸ್ತ್ರಧಾರಾಸಮಾಕುಲಾಃ ।**
**ಕುತೋಽಯಂ ವೃಷ್ಣಿಪ್ರವರಃ ಕುತೋ ರಾಜಾ ಜಗತ್ಪತಿಃ ।**
**ಕುತೋನು ಬಲಭದ್ರಶ್ಚ ಕುತೋ ಹಾರ್ದಿಕ್ಯ ಏವ ಚ ॥ 6 ॥**

ಶತ್ರು ಪಕ್ಷೀಯ ರಾಜರುಗಳು ಯುದ್ಧ ಲಾಲಸೆಯಿಂದ ಸಾವಿರಾರು ಮಂದಿ ಪಂಜುಗಳನ್ನು ಸಾವಿರಾರು ಕೈಯಲ್ಲಿ ಧರಿಸುತ್ತ, ಅತ್ತಿಂದತ್ತ ಸಂಚರಿಸುತ್ತಾ ತಮ್ಮ ಶಸ್ತ್ರಾ ವಸ್ತ್ರಗಳನ್ನು ಸಿದ್ಧಪಡಿಸಿ, ಸಿಂಹನಾದ ಮಾಡುತ್ತಾ ಖಡ್ಗವನ್ನು ಝುಳಪಿಸುತ್ತಾ "ಆ ಜಗತ್ಪತಿಯೆನಿಸಿದ ಯದುವೀರ ಶ್ರೀಕೃಷ್ಣನು ಎಲ್ಲಿರುವನು?

ಬಲಭದ್ರನ್ನೆಲ್ಲಿ ಅಡಗಿಹನು? ಸಾತ್ಯಕಿ ಹಾರ್ದಿಕ್ಯ ಎಲ್ಲಿರುವರು? ಈಗ ಯುದ್ಧಕ್ಕಾಗಿ ಬರಲಿ" ಎಂದು ಕೂಗುತ್ತಾ ದ್ವಾರಕೆಯನ್ನು ಮುತ್ತಿದರು.

## ಯಾದವರ ಯುದ್ಧೋದ್ಯೋಗ

**ತತಶ್ಚ ಯಾದವಾಃ ಸರ್ವೇ ದೃಷ್ಟ್ವಾ ಸೈನಿಕ ಸಂಚಯಮ್ ।**
**ರಾತ್ರೌ ಚ ವ್ಯಸನಂ ಪ್ರಾಪ್ತಂ ಮಹಾಶಸ್ತ್ರಸಮಾಕುಲಮ್ ॥ 7 ॥**

ರಾಜನ್ ಜನಮೇಜಯನೇ! ಪ್ರಲಯ ಕಾಲದಲ್ಲಿ ಎದ್ದ ಚಂಡಮಾರುತದಿಂದ ಮೇಲೆದ್ದ ಮೇಘಗಳಂತೆ ನಡುರಾತ್ರಿಯಲ್ಲಿ ಶಸ್ತ್ರಾಸ್ತ್ರ ಸಹಿತ ಚದರುಂಗ ಬಲದಿಂದ ಪೌಂಡ್ರಕನು ತಮ್ಮ ಪಟ್ಟಣವನ್ನು ಮುತ್ತಿದ್ದನ್ನು ಕಂಡು ಯಾದವರೆಲ್ಲರೂ ಧೈರ್ಯದಿಂದ ತಮ್ಮ ತಮ್ಮ ಆಯುಧಗಳನ್ನೆತ್ತಿಕೊಂಡು ಹೊರಡಲುನುವಾದರು. ನಡುರಾತ್ರಿಯಾಗಿದ್ದರಿಂದ ಕಗ್ಗತ್ತಲೆಯ ನಿವಾರಣೆಗಾಗಿ ಯಾದವ ಸೈನಿಕರು ಉರಿಯುವ ಪಂಜುಗಳನ್ನು ಹಿಡಿದು ಹೊರಟರು.

ಯಾದವರ ತಂಡದಲ್ಲಿ ಪ್ರಧಾನರಾದ ಬಲರಾಮ, ಸಾತ್ಯಕಿ, ಹಾರ್ದಿಕ್ಯ ಬುದ್ಧಿಶಾಲಿ ಉದ್ಧವಾದಿಗಳು ಕವಚಧರಿಸಿ ರಾತ್ರಿಯಲ್ಲಿ ಯುದ್ಧ ಸಿದ್ಧರಾದರು.

ಕೆಲವರು ಖಡ್ಗಪಾಣಿಗಳಾಗಿ ಗದಾಪಾಣಿಗಳಾಗಿದ್ದು ಬಾಹು ಯುದ್ಧಕ್ಕೂ ಸಿದ್ಧರಾಗಿ ನಿಂತರು.

**ತತೋ ವಿತಿಮಿರೋ ದೇಶಃ ಸಮಂತಾತ್ ಸಮಪದ್ಯತ ।**
**ಯುದ್ಧಂ ಸಮಭವತ್ ಘೋರಂ ವೃಷ್ಣಿಭಿಃ ಶತ್ರುಭಿಃ ಸಹ ॥ 8 ॥**

ರಾತ್ರಿಯಲ್ಲಿದ್ದ ಕತ್ತಲೆಯು ಪಂಜುಗಳ ಬೆಳಕಿನಿಂದ ದೂರವಾಯಿತು. ಉಭಯ ಸೈನ್ಯವು ಯುದ್ಧದಲ್ಲಿ ತೊಡಗಿದವು. ಎರಡೂ ಕಡೆ ಅಶ್ವಾರೋಹಿಗಳು ಇತರ ಅಶ್ವಾರೋಹಿಗಳೊಂದಿಗೂ, ಗಜಾರೋಹಿಗಳೂ ಗಜಾರೋಹಿಗಳೊಂದಿಗೂ, ರಥಾರೂಢರು ಪರಸ್ಪರ ಹೊಡೆದುಕೊಂಡರು. ಸಾವಿರಾರು ಸೈನಿಕರು ಮಡಿದರು. ಇವರ ಮಾಂಸಾಶಿಗಳಾಗಿ ರಣಭೂಮಿಯಲ್ಲಿ ಭೂತ ಪಿಶಾಚಿಗಳು ಕಾಣತೊಡಗಿದವು. ರಣಭೇರಿ, ಶಂಖನಾದ, ಸಿಂಹನಾದಗಳಿಂದ ಭೀಕರ ರಣವಾದ್ಯಗಳಿಂದ ರಣಭೂಮಿ ತುಂಬಿ ಹೋಗಿತ್ತು.

ಈ ಯುದ್ಧದಲ್ಲಿ ರಾಜರು ಶಸ್ತ್ರಾಸ್ತ್ರ ಪೀಡಿತರಾಗಿ ಭೂಮಿಗೆ ಬಿದ್ದರು. ಆಭರಣಗಳೂ, ಕಿರೀಟಗಳು ಕೆಲವರ ಕೈಕಾಲುಗಳು ಮುರಿದವು.

## ಏಕಲವ್ಯನ ಯುದ್ಧ

**ಏತಸ್ಮಿನ್ನಂತರೇ ಶೂರ ಏಕಲವ್ಯೋ ನಿಷಾದಪಃ ।**
**ಧನುರ್ಗೃಹ್ಯ ಮಹಾಘೋರಂ ಕಾಲಾಂತಕ ಯಮೋಪಮಃ ॥ 9 ॥**

ಈ ಸಮಯದಲ್ಲಿ ಏಕಲವ್ಯನು ಎಂಭತ್ತೆಂಟು ಸಾವಿರ ಸೈನ್ಯ ಹೊಂದಿದ್ದು ಪ್ರಲಯ ಯಮನಂತೆ ಬಾಣಗಳಿಂದ ಯಾದವರ ಸೈನ್ಯವನ್ನು ಹೊಡೆಯಲಾರಂಭಿಸಿದನು.

ಏಕಲವ್ಯನು ನಿಶಠಸಾರಣ ಹಾರ್ದಿಕ್ಯ ವಸುದೇವ ಉದ್ಧವರ ಮೇಲೆ ಬಾಣದ ವೃಷ್ಟಿಗರೆದನು.

ಸಾತ್ಯಕಿಯೆಲ್ಲಿರುವನು? ಬಲರಾಮನೆಲ್ಲಿ? ಎಂದು ಸಿಂಹನಾದ ಮಾಡುತ್ತಾ ಇದ್ದನು. ಇವನ ಬಲದ ಮುಂದೆ ಸೈನಿಕರು ನಿಲ್ಲಲಾಗಲಿಲ್ಲ.

ಹೀಗೆ ಯುದ್ಧದಲ್ಲಿ ಎಲ್ಲೆಡೆಯಿಂದಲೂ ಯುದ್ಧದಲ್ಲಿ ಹೊಡೆಯಲ್ಪಡುತ್ತಿರಲು ಹಾಗೂ ತಮ್ಮ ಕೈಯ್ಯಲ್ಲಿದ್ದ ಪಂಜಿನ ದೀಪವು ಶಾಂತವಾದಂತಾಗಲು ಬೇರೆ ದೊಡ್ಡ ಪಂಜುಗಳನ್ನು ತರಲು, ಹಾಗೂ ಏಕಲವ್ಯನಿಗೆ ಬಾಣಪ್ರಯೋಗ ಮಾಡಲಾಗದಂತೆ ತಾವೇ ಕೆಲವು ದೀಪಗಳನ್ನು ಆರಿಸಿದಾಗ ಎಲ್ಲೆಲ್ಲೂ ನಿಶ್ಶಬ್ದತೆವುಂಟಾಯಿತು.[1]

**ದೀಪಿಕಾಸು ಪ್ರಶಾಂತಾಸು ನಿಶ್ಶಬ್ಧೇ ಸತಿ ಸರ್ವತಃ ।**
**ಜಿತಮಿತ್ಯೇವ ಯಾನ್ ಮತ್ವಾ ಪೌಂಢ್ರಕೋ ವಾಕ್ಯಮಬ್ರವೀತ್ ॥ 10 ॥**

ಹೀಗೆ ಯಾದವರು ಹೆಚ್ಚಿನ ಶಸ್ತ್ರಾಸ್ತ್ರಗಳನ್ನು ತರಲು ಹಾಗೂ ಉಜ್ವಲವಾದ ದೀಪಗಳನ್ನು ತರಲು ಕೋಟೆಗೆ ಹೋಗಿ ಮರೆಯಾದಾಗ ಪೌಂಢ್ರಕನು ತಾನು ಗೆದ್ದೆವೆಂದೆ ಭಾವಿಸಿ ಹೀಗೆಂದನು. ಯಾದವರು ಸೋತು ಪಲಾಯನ ಮಾಡಿದ್ದಾರೆ. ನೀವೆಲ್ಲರೂ ದ್ವಾರಕೆಯ ಕೋಟೆಗಳನ್ನು ಕುಲತ

1. ಪ್ರಕಾಶೇ ಸತಿ ದೃಷ್ಟ್ವಾ ಶರೈಃ ವಿಧ್ಯೇದಿತಿ ಭಯೇನ ದೀಪಾನ್ ನಾಶಿತವಂತಃ ॥ – *ವಾದಿರಾಜರು*

ಕುಠಾರಾದಿಗಳಿಂದ ಧ್ವಂಸ ಮಾಡಿರಿ. ಅಂತಃಪುರದ ಸ್ತ್ರೀಯರನ್ನು, ಕನ್ನಿಕೆಯರನ್ನೂ ದಾಸಿಯರನ್ನೂ ಬಂಧಿಸಿ, ಸುವರ್ಣ ರಾಶಿ ವಶಪಡಿಸಿಕೊಳ್ಳಿ ಎಂದ. ಅವರೆಲ್ಲರೂ ಪ್ರಾಸಾದ ಒಡೆಯಲುದ್ಯುಕ್ತರಾದರು. ಪೂರ್ವದಲ್ಲಿ ದ್ವಾರದ ರಕ್ಷಕ ಸಾತ್ಯಕಿಯು ನೋಡಿ ಕೋಟೆಯನ್ನು ಭೇದಿಸದಂತೆ ಮುಂದೆ ನಿಂತು ಯುದ್ಧ ಮಾಡಿದ. ಬಲರಾಮನೂ ಬಂದು ಸೇರಿದ.

**ದೀಪಿಕಾ ದೀಪಿತೇ ದೇಶೇ ಯಯೌ ಸಾತ್ಯಕಿರುತ್ತಮಃ ।**
**ದೀಪಿಕಾಭಿಶ್ಚ ಸರ್ವತ್ರ ಪುರೋವೃತ್ತಾಭಿರೀಶ್ವರಾಃ ॥ 11 ॥**

ಪೂರ್ವದ್ವಾರ ಭೇದಿಸಲು ಮುಂದಾದಾಗ ಸಾತ್ಯಕಿಯು ದಾರುಕನು ಸಿದ್ಧಪಡಿಸಿದ ರಥವನ್ನೇರಿ ಕೇಶವನ ಮಾತನ್ನು ನೆನೆಯುತ್ತ ಹೊರಟನು.

ಹಾಗೆಯೆ ಬಲರಾಮ, ಉದ್ಧವ, ಹಾರ್ದಿಕ್ಯರೂ ಯುದ್ಧಕ್ಕೆ ಹೊರಟರು ಯಾದವ ಸೈನಿಕರೂ ಸಹ ಆನೆ, ಕುದುರೆ ಮೊದಲಾದವುಗಳಲ್ಲಿ ಕುಳಿತು ದೊಡ್ಡ ದೊಡ್ಡ ಪ್ರದೀಪಗಳನ್ನು ಹಿಡಿದಿರುವವರನ್ನು ಅನುಸರಿಸಿ ಪೂರ್ವದ್ವಾರದ ಕಡೆ ಯುದ್ಧಕ್ಕೆ ನಿಂತರಲ್ಲದೆ ದೀವಿಟಿಗಳಿಂದ ಮಾರ್ಗಗಳನ್ನು ಬೆಳಗಿಸಿದರು.

ಹೀಗೆ ದೀವಿಟಿಕೆಗಳಿಂದ ಪ್ರಕಾಶಿತವಾದ ದೇಶಕ್ಕೆ ಸಾತ್ಯಕಿಯು

**ಸ್ಥಿತೇ ಸೈನ್ಯೇ ಮಹಾಘೋರೇ ದೀಪಿಕಾ ದೀಪಿತೇ ಪಥಿ ।**
**ವಾಯವ್ಯಾಸ್ತ್ರಂ ಸಮಾದಾಯ ಯೋಜಯಿತ್ವಾಮಹಾಶರಂ ॥ 12 ॥**

ದೀಪಗಳಿಂದ ಯುದ್ಧ ಮಾರ್ಗವು ಸ್ಪಷ್ಟವಾಗಿ ಕಾಣುತ್ತಿರಲು ಶಿನಿವೀರನು ತನ್ನ ಬಾಣದಲ್ಲಿ ವಾಯವ್ಯಾಸ್ತ್ರವನು ಸಂಧಾನಿಸಿ ಕೋಟೆ ಭಂಜಕರ ಮೇಲೆ ಬಿಟ್ಟ. ಆ ವಾಯುವ್ಯಾಸ್ತ್ರವು ಅವರೆಲ್ಲರನ್ನೂ ಬಿರುಗಾಳಿಯಂತೆ ದೂರ ಎಸೆಯಿತು.

ಇದೇ ಸಮಯದಲ್ಲಿ ಸಾತ್ಯಕಿಯೂ ವಿಷಲಿಪ್ತ ಬಾಣಗಳನ್ನು ಶತ್ರು ಸೈನ್ಯದ ಮೇಲೆ ಪ್ರಯೋಗಿಸಿದನು. ನಾನು ಕೃಷ್ಣನ ಭೃತ್ಯನು ನಾನೇ ವಾಸುದೇವನೆಂದು ಹೇಳುತ್ತಿದ್ದ ಪೌಂಡ್ರಕನೆಲ್ಲಿ? ಈ ದುಷ್ಟನು ವೀರನಾಗಿದ್ದಲ್ಲಿ ಕಳ್ಳನಂತೆ ರಾತ್ರಿಯಲ್ಲಿ ದ್ವಾರಕೆಗೆ ಮುತ್ತಿಗೆ ಹಾಕುತ್ತಿರಲಿಲ್ಲ ಎಂದಾಗ ಪೌಂಡ್ರಕನು –

**ಸ್ತ್ರೀಹಂತಾ ಪಶುಹಂತಾ ಚ ಕ್ವ ಚ ಸ್ವಾಮೀತಿ ಸೇವಿತಃ ।**
**ಸ ಇದಾನೀಂ ಕ್ವ ವರ್ತೇತ ಗೃಹೀತ್ವಾ ಮಮ ನಾಮ ತತ್ ॥ 13 ॥**

**ಹಂತಾ ಸಖ್ಯುಃ ಮಹಾವೀರ್ಯೋ ನರಕಸ್ಯ ಮಹಾತ್ಮನಃ ।**
**ತ್ವಯಿರಕ್ಷಾಂ ಸಮಾದಿಶ್ಯ ಗೋಪಃ ಕೈಲಾಸ ಪರ್ವತಮ್ ॥ 14 ॥**

ನಿನ್ನ ಸ್ವಾಮಿಯೆನಿಸಿದ ಕೃಷ್ಣನೆಲ್ಲಿರುವನು? ಅಬಲ ಸ್ತ್ರೀಯರನ್ನು ದುರ್ಬಲರನ್ನು ವೀರಾಗ್ರಣಿಯೆನಿಸಿದ, ಯಾದವರಿಗೆಲ್ಲ ತಾನೇ ಸ್ವಾಮಿಯೆಂದು ಹೇಳಿಕೊಳ್ಳುತ್ತಿರುವ ಕೃಷ್ಣನು ಎಲ್ಲಿರುವನು? ನನ್ನ ಪರಮಮಿತ್ರನಾದ ನರಕಾಸುರನನ್ನು ಮೋಸದಿಂದ ಕೊಂದು ಹಾಕಿದವನು. ಅವನನ್ನೆ ಕೊಂದರೆ ನೀವಾರು ಇಲ್ಲಿ ನಿಲ್ಲಲಾರಿರಿ. ಸಾತ್ಯಕಿಯೇ! ನಿನ್ನನ್ನು ಪುರ ರಕ್ಷಣೆಯ ಭಾರವಹಿಸಿ ಕೈಲಾಸಕ್ಕೆ ಹೋಗಿರುವೆನೆಂದು ಕೇಳಿದೆ. ನೀನು ವೀರನಾಗಿದ್ದಲ್ಲಿ ನನ್ನೊಂದಿಗೆ ಯುದ್ಧಕ್ಕೇಳು ಎಂದು ಧನುರ್ಬಾಣಗಳನ್ನು ಹಿಡಿದು ಸಿದ್ಧನಾದನು.

## ಪೌಂಡ್ರಕ – ಸಾತ್ಯಕಿ ಯುದ್ಧ

**ಉವಾಚ ವಚನಂ ರಾಜನ್ ವಾಸುದೇವಂ ನೃಪಾಧಮಃ ।**
**ಕೋನಾಮ ಜಗತಾಂ ನಾಥಮಿತ್ಥಂ ಬ್ರೂಯಾಜ್ಜೀವಿಷುಃ ॥ 15 ॥**
**ಜಿಹ್ವಾ ತೇ ಶತಧಾ ದೀರ್ಯಾದ್ ವದತಃ ತಾದೃಶಂ ವಚಃ ॥ 16 ॥**

ಈ ಮಾತಿನಿಂದ ಸಿಟ್ಟುಕೊಂಡ ಸಾತ್ಯಕಿಯು ಕೃಷ್ಣನನ್ನು ಭಕ್ತಿಯಿಂದ ಮನಸ್ಸಿನಲ್ಲಿ ಸ್ಮರಿಸುತ್ತಾ ಹೀಗೆಂದನು.

ಈ ಭೂಮಿಯಲ್ಲಿ ಬದುಕಬೇಕೆಂಬ ಇಚ್ಛೆವುಳ್ಳ ಯಾರು ತಾನೆ ಶ್ರೀಕೃಷ್ಣನನ್ನು ಹೀಗೆ ಇಂತಹ ಮಾತುಗಳನ್ನು ಆಡಿಯಾನು? ಎಲೋ ನರಾಧಮ ಇಂತಹ ನೀಚ ಮಾತನ್ನು ಆಡುವ ನಿನ್ನನ್ನು ಸ್ವಾಗತ ಮಾಡಲು ಸಾಕ್ಷಾತ್ ಮೃತ್ಯುವೆ ಬರುವನೆಂದು ತಿಳಿ. ಅಷ್ಟೇಕೇ ನಾನೇ ನಿನ್ನ ಶಿರಸ್ಸನ್ನು ಭೇದಿಸಿ ವಾಸುದೇವನೆಂಬ ಹೆಮ್ಮೆ ಹೊಂದಿದ್ದ ನಿನ್ನ ಹೆಸರು ಇಲ್ಲವಾಗುವಂತೆ ಮಾಡುತ್ತೇನೆ.

## ಸಾತ್ಯಕಿಯ ಪೌರುಷೋಕ್ತಿ

**ಏಕ ಏವ ಜಗನ್ನಾಥಃ ಕರ್ತಾ ಸರ್ವಸ್ಯ ಸರ್ವಗಃ ।**
**ಯದಸೌ ಭಗವಾನ್ ವಿಷ್ಣುಃ ನಾಗಮಿಷ್ಯತಿ ಸಾಂಪ್ರತಮ್ ॥ 17 ॥**

ಜಗನ್ನಾಥನೆಂದರೆ ಸಕಲರಿಗೂ ಸರ್ವಕಾಲದಲ್ಲಿಯೂ ಕರ್ತಾ ಒಬ್ಬನೇ ಅವನೇ ಶ್ರೀಕೃಷ್ಣನು. ಅವನು ಬರುವುದರೊಳಗೆ ಪಲಾಯನ ಮಾಡು. ನಿನ್ನ ಭಯದಿಂದ ಹೋಗಿದ್ದು ಅಲ್ಲ. ಅವನಿಗೆ ನೀನು ತೃಣಪ್ರಾಯ.

ತವಾಂಗ ತಿಲಶಃ ಕೃತ್ವಾ ಶ್ವಭ್ಯೋ ದಾಸ್ಯಾಮಿ ರಾಜಕ ॥ 18 ॥

ನೀನು ನನ್ನೊಂದಿಗೆ ಯುದ್ಧ ಮಾಡಿದರೆ ನಿನ್ನನ್ನು ತಿಲದಷ್ಟು ಪುಡಿ ಮಾಡಿ ಹದ್ದು, ನರಿಗಳಿಗೆ ಬಲಿ ಕೊಡುವೆ ಎಂದು ಹೇಳಿ ಚೂಪಾದ ಬಾಣದಿಂದ ಹೊಡೆದು ರಕ್ತ ಸುರಿಸುವಂತೆ ಮಾಡಿದ. ಪೌಂಡ್ರಕನು ಪುಂಖಾನು ಪುಂಖವಾಗಿ ಬಾಣಗಳನ್ನು ಬಿಟ್ಟು ರಥದ ಒಂದೇ ಬದಿಯಲ್ಲಿ ಬಿದ್ದನು. ಹಾಗೂ ಸಾರಥಿ, ಕುದುರೆಗಳಿಗೂ ಹೊಡೆದು ಗಾಯಗೊಳಿಸಿದನು. ಸಾತ್ಯಕಿಯೂ ಸಹ ವಕ್ಷಸ್ಥಳಕ್ಕೆ ಬಾಣ ಹೊಡೆದು ರಕ್ತ ಸುರಿಯುವಂತೆ ಮಾಡಿದನು. ಹಾಗೂ ಸಾರಥಿಯ ತಲೆ ಹಾರಿಸಿದನು. ಸುಧಾರಿಸಿಕೊಂಡು ಗದೆಯನ್ನು ಬಿಸಾಡಿದನು. ಸಾತ್ಯಕಿಯು ಎಡಗೈಯಿಂದ ಆ ಗದೆಯನ್ನು ತಡೆಹಿಡಿದನು. ನಂತರ ಶಕ್ತ್ಯಾಖ್ಯ ಅಸ್ತ್ರ ಬಿಟ್ಟನು. ಅದನ್ನು ಬಾಣಗಳಿಂದ ಹಿಮ್ಮೆಟ್ಟಿಸಿದನು.

ನಂತರ ಗದಾಯುದ್ಧವು ಪ್ರಾರಂಭವಾಯಿತು. ಇಬ್ಬರು ಗದೆಗಳಿಂದ ಹೊಡೆದುಕೊಂಡರು. ನಂತರ ಮುಷ್ಠಿ ಯುದ್ಧವೂ, ಜಾನು ಯುದ್ಧವೂ ಕರತಲ ಯುದ್ಧ ಕೇಶಾಕೇಶೀ ಯುದ್ಧವಾಯಿತು. ಇಬ್ಬರೂ ಪರಸ್ಪರ ವಿಜಯಾಕಾಂಕ್ಷಿಗಳಾಗಿ ಹೊಡೆದುಕೊಂಡರು.

## ಬಲರಾಮ - ಏಕಲವ್ಯರ ಯುದ್ಧ

ಏತಸ್ಮಿನ್ನಂತರೇ ಕ್ರುದ್ಧಃ ಏಕಲವ್ಯೋ ನಿಷಾಧಿಪಃ ।
ಬಲಭದ್ರ ಮಭಿ ಕ್ಷಿಪ್ರಂ ಧನುರಾದಾಯ ಸತ್ವರಮ್ ॥ 19 ॥

ಬಲರಾಮ ಹಾಗೂ ಏಕಲವ್ಯನಿಗೆ ಯುದ್ಧವಾಯಿತು. ಅನೇಕ ಬಾಣಗಳಿಂದ ಪರಸ್ಪರ ಹೊಡೆದುಕೊಂಡರು. ಏಕಲವ್ಯನ ೮೦ ಸಾವಿರ ಸೈನಿಕರೂ ನಾನಾ ವಿಧ ಆಯುಧಗಳಿಂದ ಬಲರಾಮನನ್ನು ಆಕ್ರಮಿಸಿದರು. ನಾನಾ ವಿಧ ಆಯುಧಗಳನ್ನೆಸೆದರು. ಬಲರಾಮನಾದರೂ ನೇಗಿಲಿನಿಂದ ಶತ್ರುಗಳನ್ನು ಸೆಳೆದು ಒನಕೆಯಿಂದ ಮಣ್ಣಿನ ಹೆಂಟೆಯಂತೆ ಒಡೆದು ಹಾಕಿದನು.

ಹೀಗೆ ಕ್ಷಣ ಮಾತ್ರದಲ್ಲಿ ನಿಷಾಧ ಯೋಧರನು ಸಂಹರಿಸಿದನು. ಗದಾಘಾತದಿಂದ ಏಕಲವ್ಯನನ್ನೂ ಹೊಡೆದು ಮೂರ್ಛೆಗೊಳಿಸಿದನು. ಸ್ವಲ್ಪ ಹೊತ್ತಿನ ಮೇಲೆ ಎಚ್ಚೆತ್ತು ಗದೆಯನ್ನೆತ್ತಿಕೊಂಡು ಬಲರಾಮನ ಕಡೆಗೆ ನುಗ್ಗಿ ಬಲರಾಮನ ಜತ್ರು ದೇಶಕ್ಕೆ ಬಲವಾಗಿ ಹೊಡೆದನು. ಬಲದೇವನೂ ಅವನನ್ನು ಹೊಡೆದನು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಏಕಲವ್ಯ-ಬಲರಾಮರ ಯುದ್ಧ ಎಂಬಲ್ಲಿ
ನಲವತ್ತೆರಡು-ನಲವತ್ತಮೂರನೆಯ ಅಧ್ಯಾಯವು ಸಮಾಪ್ತಿ

# ಅಥ ಚತುಶ್ಚತ್ವಾರಿಂಶೋಽಧ್ಯಾಯಃ

## ಶ್ರೀಕೃಷ್ಣನ ಆಗಮನ

**ತತಃ ಪ್ರಭಾತೇ ವಿಮಲೇ ಭಗವಾನ್ ದೇವಕೀಸುತಃ ।**
**ಗಂತುಮೈಚ್ಛತ್ ಜಗನ್ನಾಥಃ ಪುರಂ ಬದರಿಕಾಶ್ರಮಾತ್ ॥ 1 ॥**

ರಾತ್ರಿ ಕಳೆದು ಬೆಳಗಾಗುತ್ತಿರುವಂತೆಯೇ ಗರುಡನ ಮೇಲೇರಿ ಶ್ರೀಕೃಷ್ಣನು ದ್ವಾರಕೆಗೆ ಬಂದನು. ಅಷ್ಟರಲ್ಲಿ ಯುದ್ಧ ನಡೆಯುತ್ತಿರುವುದನ್ನು ನೋಡಿದನು. ಪ್ರಾಯಶಃ ಸಾತ್ಯಕಿಯು ಶತ್ರುವಿನೊಂದಿಗೆ ಹೋರಾಡುತ್ತಿರಬೇಕೆಂದು ಇದು ಪೌಂಡ್ರಕನೆ ನಾನಿಲ್ಲದಿರುವಾಗ ಯುದ್ಧ ಹೂಡಿರಬೇಕು ಎಂದು ಪಾಂಚಜನ್ಯವನ್ನು ಊದಿದನು. ಶಬ್ದ ಕೇಳ ಯಾದವರೆಲ್ಲರೂ ಶ್ರೀಕೃಷ್ಣನ ಬಳ ಬಂದರು. ಗರುಡನಿಗೆ ತನ್ನ ಲೋಕಕ್ಕೆ ಹೋಗಲು ಹೇಳ, ದಾರುಕನು ಸಿದ್ಧಪಡಿಸಿದ್ದ ರಥದಲ್ಲಿಯೇ ಕುಳತು ಯುದ್ಧ ರಂಗಕ್ಕೆ ಬಂದನು.

ಪೌಂಡ್ರಕನು ಸಾತ್ಯಕಿಯನ್ನು ಬಿಟ್ಟು ಕೃಷ್ಣನೊಂದಿಗೆ ಹೋರಾಡಲು ಬಂದ. ಕೃಷ್ಣನೇ! ಇಷ್ಟು ದಿನ ಎಲ್ಲಿಗೆ ಹೋಗಿದ್ದಿ. ನಿನ್ನನ್ನು ಎದುರಿಸಲು ಕಾಯುತ್ತಿರುವೆ. ನಿನ್ನನ್ನು ಕೊಂದು ಇನ್ನು ಮುಂದೆಯೂ ಮುಖ್ಯವಾಸುದೇವನೆಂದೆ ಮೆರೆದಾಡುವೆನು. ಆಯುಧಪಾಣಿಯಾಗಿ ಯುದ್ಧಕ್ಕೆ ಬಾ ಎಂದಾಗ ಶ್ರೀಕೃಷ್ಣನು ಒಂದೇ ಕ್ಷಣದಲ್ಲಿ ವಿರಥನನ್ನಾಗಿಯೂ, ನಿರಾಯುಧನನ್ನಾಗಿಯೂ ಮಾಡಿದನು. ಪೌಂಡ್ರಕನು ತನ್ನ ಪಟ್ಟಣಕ್ಕೆ ತೆರಳ ಪುನಃ ದೂತನನ್ನು ಕಳಸಿ ವಾಸುದೇವ ನಾನೊಬ್ಬನೇ, ವಾಸುದೇವಾವತಾರನೂ ನಾನೇ. ಲೋಕದ ಕಷ್ಟ ನಿವಾರಣೆ ಮಾಡುವವನೂ ನಾನೆಯೆಂದು ಲೋಕದ ಕಷ್ಟಗಳನ್ನು

ಪರಿಹರಿಸುವ ಚಕ್ರಾದಿಗಳೆಲ್ಲ ನನ್ನವೆ ಆಯುಧಗಳು. ಅವುಗಳನ್ನು ಕೊಟ್ಟು ಶರಣಾಗು ಎಂದನು.

## ಶ್ರೀಕೃಷ್ಣ ಪೌಂಡ್ರಕ ಯುದ್ಧ

ಇವನ ಮಾತನ್ನು ಕೇಳಿ ಯಾದವರೆಲ್ಲ ನಕ್ಕರು. ಶ್ರೀಕೃಷ್ಣನು ನಿನ್ನ ಚಿಹ್ನೆಗಳಾದ ಆಯುಧಗಳನ್ನು ನಿನ್ನ ಮೇಲೆಯೆ ಹಾಕುತ್ತೇನೆ ಎಂದು ದೂತನಿಗೆ ಹೇಳಿ ಕಳುಹಿಸಿದ. ಪುನಃ ಯುದ್ಧ ಪ್ರಾರಂಭವಾಯಿತು.

ರಥದಲ್ಲಿ ಚಿನ್ನದಿಂದ ಮಾಡಿದ ಗರುಡನ ಮೇಲೆ, ಕೃತ್ರಮವಾದ ಚಕ್ರಾದಿ ಆಯುಧಗಳನ್ನು ಮಾಡಿಸಿಕೊಂಡು, ಶ್ರೀವತ್ಸ ಚಿಹ್ನೆಗಾಗಿ ಎದೆಯನ್ನೇ ಸುಟ್ಟುಕೊಂಡಿದ್ದನು. ಚತುರ್ಭುಜನಾಗಲು ಎರಡು ಚಿನ್ನೆ ಕೈಗಳನ್ನು ಕಟ್ಟಿಕೊಂಡು ನಾಟಕದ ವೇಷಧಾರಿಯಂತೆ ಇದ್ದ ಇವನನ್ನು ನೋಡಿ ಶ್ರೀಕೃಷ್ಣನು ನಕ್ಕನು.

**ತತಶ್ಚಕ್ರಂ ಸಮಾದಾಯ ನಿಶಿತಂ ರಕ್ತಭೋಜನಮ್ ।**
**ಜಘಾನ ತೇನ ಗೋವಿಂದಃ ಪೌಂಡ್ರಕಂ ನೃಪಸತ್ತಮಂ ॥ 2 ॥**

ನಂತರ ಅಸ್ತ್ರಶಸ್ತ್ರಗಳನ್ನು ಮಳೆಗರೆಯುತ್ತಿದ್ದ ಪೌಂಡ್ರಕನನ್ನು ಪರಾಭವಗೊಳಿಸಿ ಸುದರ್ಶನ ಚಕ್ರದಿಂದ ಅವನ ತಲೆಯನ್ನು ಕತ್ತರಿಸಿ ಹಾಕಿದ ಹಾಗೂ ಅವನ ತಾಯಿಯ ತಂದೆ ಕಾಶಿರಾಜನ ತಲೆಯನ್ನು ತೆಗೆದು ಹಾಕಿದನು.

ಚಕ್ರವು ಅವನನ್ನು ತರಿದು ಶ್ರೀಕೃಷ್ಣನ ಕೈ ಸೇರಿತು.

## ಏಕಲವ್ಯ ವಧ

ನಂತರ ಏಕಲವ್ಯನು ಬಲರಾಮನಿಂದ ಸೋತು ಹೋಗಿ ಶಿವನನ್ನು ಕುರಿತು ತಪಸ್ಸು ಮಾಡಿ ಶಿವನಿಂದ ಅಜೇಯತ್ವ ವರ ಪಡೆದ. ಶಿವ ನೀಡಿದ ವರದಿಂದಾಗಿ ದೃಪ್ತನಾಗಿ ಪುನಃ ಶ್ರೀಕೃಷ್ಣನೊಂದಿಗೆ ಯುದ್ಧಕ್ಕೆ ಬಂದ.

ಶ್ರೀಕೃಷ್ಣನಾದರೂ ದ್ವೀಪಾಂತರಕ್ಕೆ ಹೋಗಿ ಶಿವನಿಂದ ವರ ಪಡೆದು ಬಂದಿರುವ ದೈತ್ಯನಾದ ಏಕಲವ್ಯನನ್ನು ಚಕ್ರದಿಂದ ಅವನ ತಲೆಯನ್ನು ಕತ್ತರಿಸಿ ಹಾಕಿದ.

ಪೌಂಡ್ರಕನ ತಲೆ ಕತ್ತರಿಸಿದ ಮೇಲೆ, ಕಾಶೀರಾಜ ಪೌಂಡ್ರಕನ ತಾಯಿಯ ತಂದೆಯು ಯುದ್ಧಕ್ಕೆ ಬಂದನು. ಅವನನ್ನು ಬಾಣದಿಂದ ಶಿರಸ್ಸನ್ನು ತೆಗೆದು ಅದೇ ಬಾಣವನ್ನೇ ಕಾಶಿನಗರದೊಳಗೆ ಕಳುಹಿಸಿದ. ಕಾಶೀರಾಜನ ಮಗನಾದ

ಸುದಕ್ಷಿಣನೂ ಮಹಾಪಾಪಿಯಾಗಿದ್ದು ಪೌಂಡ್ರಕ-ಕಾಶಿರಾಜರಂತೆ ಇವನನ್ನು ತಮಸ್ಸಿಗೆ ಕಳುಹಿಸಬೇಕೆಂಬ ಇಚ್ಛೆಯಂತೆ ಹಾಗೆ ಮಾಡಿದನು.

ನಗರದೊಳಗೆ ಬಿದ್ದಿದ್ದ ಕಾಶಿರಾಜನ ತಲೆಯನ್ನು ನೋಡಿದ ಅವನ ಮಗ ಸುದಕ್ಷಿಣ ಪಿತೃಕಾರ್ಯ ಮುಗಿಸಿದ.

ಶಿವನನ್ನುದ್ಧೇಶಿಸಿ ಉಗ್ರ ತಪಸ್ಸನ್ನು ಕೈಗೊಂಡ ಶಿವ ಮೈ ತೋರಿದ.

ಶ್ರೀಕೃಷ್ಣನನ್ನು ನಾಶ ಮಾಡುವ ಉಪಾಯವೇನು ಎಂದ. ಶಿವನೂ ಸಹ ಅಸುರರಿಂದ ಪೀಡಿತನಾಗಿ ಭಕ್ತನಾದರೂ ಸುದಕ್ಷಿಣನಿಗೆ ದಕ್ಷಿಣಾಗ್ನಿ ಕುಂಡದಲ್ಲಿ ಭೂತಾಕಾರದ ಅಗ್ನಿಯನ್ನು ಸೃಷ್ಟಿಸಿ ಸುದಕ್ಷಿಣನಿಗೆ ನೀಡಿದ.

## ಸುದರ್ಶನದಿಂದ ಮಾಟ ದೂರ ಸರಿಯಿತು

ಸುದಕ್ಷಿಣನೇ! ಈ ದಕ್ಷಿಣಾಗ್ನಿಯಲ್ಲಿ ಆಭಿಚಾರಿಕ ಹೋಮ ಮಾಡು. ಇದರಿಂದ ಮೇಲೆದ್ದು ಭೂತಗಳೊಂದಿಗೆ ನನ್ನ ಪ್ರಮಥಗಣಗಳೂ ಸೇರಿ ದ್ವಾರಕೆಯನ್ನು ನಾಶ ಮಾಡುತ್ತವೆ ಎಂದಾಗ, ಅಭಿಚಾರ ಹೋಮ ಮಾಡಿ ದಕ್ಷಿಣಾಗ್ನಿಯನ್ನು ದ್ವಾರಕೆಗೆ ಅಟ್ಟಿದ. ಅದು ದ್ವಾರಕೆಯನ್ನು ಸುಡುತ್ತಿದೆ ಎಂದು ವಾರ್ತೆ ಕೇಳ ಪಗಡೆಯಾಡುತ್ತಿದ್ದ ಶ್ರೀಕೃಷ್ಣನಾದರೂ ಆಭಿಚಾರಿಕಾಗ್ನಿಯನ್ನು ತಡೆಯಲು ಚಕ್ರವನ್ನಾದೇಶಿಸಿದ. ಚಕ್ರವು ಆಭಿಚಾರಿಕಾಗ್ನಿಯನ್ನು ಬಹುದೂರ ಓಡಿಸಿತು. ಆಭಿಚಾರಿಕಾಗ್ನಿಯೂ ಸಹ ಪ್ರಧಾನಾಗ್ನಿಯ ಪುತ್ರನೆಂದೆ ದೂರ ಓಡಿಸಿತು, ಕೊಲ್ಲಲಿಲ್ಲ. ಆಭಿಚಾರಿಕ ದೇವತೆ ತನ್ನ ಉದ್ಧೇಶ ಫಲಿತವಾಗದಿದ್ದರೆ ಯಾರು ಪ್ರಯೋಗಿಸಿದಿರೋ ಅವರನ್ನೇ ಮುಗಿಸುತ್ತದೆ. ಹೀಗಾಗಿ ಅಗ್ನಿ ಬಂದು ಸುದಕ್ಷಿಣ ಪರಿವಾರದವರನ್ನು ಸುಟ್ಟು ಹಾಕಿತು. ಇವರು ಆಳುತ್ತಿದ್ದ ಕಾಶಿಯನ್ನು ಸುಟ್ಟು ಕೃಷ್ಣನ ಕೈ ಸೇರಿತು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಸುದಕ್ಷಿಣ ಸಂಹಾರ ಎಂಬಲ್ಲಿ
ನಲವತ್ತನಾಲ್ಕನೆಯ ಅಧ್ಯಾಯವು ಸಮಾಪ್ತಿ

# ಅಥ ಪಂಚಚತ್ವಾರಿಂಶೋಽಧ್ಯಾಯಃ

## ಶ್ರೀಕೃಷ್ಣನಿಂದ ಕೈಲಾಸಯಾತ್ರಾ ವರ್ಣನೆ

**ಉವಾಚ ವಚನಂ ಕಾಲೇ ಭಗವಾನ್ ದೇವಕೀ ಸುತಃ ।**
**ದೃಷ್ಟಂ ಕೈಲಾಸಶಿಖರಂ ಶಂಕರೋ ಲೋಕ ಶಂಕರಃ ।**
**ಸ ತು ಮಹ್ಯಂ ಯದುವರಾಃ ಪ್ರೀತಿಮಾಂಶ್ಚ ದದೌ ವರಮ್ ॥ 1 ॥**

ಬಲರಾಮನು ಏಕಲವ್ಯನನ್ನು ದೇಶಭ್ರಷ್ಟಗೊಳಿಸಿದ್ದನು. ಶ್ರೀಕೃಷ್ಣನು ಅವನನ್ನು ಕೊಂದು ಹಾಕಿ ದ್ವಾರಕೆಗೆ ಪ್ರವೇಶಿಸಿದನು. ಸುಧರ್ಮಸಭೆಯಲ್ಲಿ ಆಸೀನನಾಗಿದ್ದ ಶ್ರೀಕೃಷ್ಣ ಯದುವೀರರನ್ನು ಕುರಿತು ತನ್ನ ಕುತೂಹಲವಾದ ಕೈಲಾಸಯಾತ್ರೆಯ ಬಗ್ಗೆ ವಿವರಿಸಿದನು.

ನಾನು ಕೈಲಾಸಕ್ಕೆ ಹೋಗಿ ಶಿವನನ್ನು ಸಾಕ್ಷಾತ್ಕರಿಸಿಕೊಂಡೆನು. ಅವನು ಸಂಪ್ರೀತನಾಗಿ ನನಗೆ ವರವೊಂದನ್ನು ನೀಡಿದನು. ನಾನು ಕೈಲಾಸಕ್ಕೆ ಹೋದಾಗ ಅಲ್ಲಿಗೆ ದೇವತೆಗಳು, ತಪೋಧನರೂ ಬಹು ಸಂಖ್ಯೆಯಲ್ಲಿ ಸೇರಿದ್ದರು.

**ದೃಷ್ಟ್ವಾ ಮಾಂ ಶಂಕರಶ್ಚೈವ ಪ್ರೀತಃ ಸ್ತುತ್ವಾ ಸಮಾಯಯೌ ॥ 2 ॥**

ಶಂಕರನೂ ಸಹ ನನ್ನನ್ನು ನೋಡಿ ಅನೇಕ ವೇದವಾಕ್ಯಗಳಿಂದ ಸ್ತುತಿಸಿದನು. ಅಲ್ಲಿ ಮೊದಲು ರಾತ್ರಿಯಲ್ಲಿ ನಾನು ಅತ್ಯುದ್ಭುತ ಸಂಗತಿ ನೋಡಿದೆ. ಘೋರರೂಪಿಗಳಾದ ಎರಡು ಪಿಶಾಚಿಗಳು ನನ್ನನ್ನು ಕಂಡು ಸಂತೋಷಪಟ್ಟವು. ಸಜ್ಜೀವರಾದ ಆ ಪಿಶಾಚಿಗಳಿಗೆ ನಾನು ಸದ್ಗತಿ ನೀಡಿದೆನು.

ಇತ್ಯಾದಿ ವಿಷಯವನ್ನು ತಿಳಿಸಿದನು. ಯಾದವರೆಲ್ಲರೂ ಸಂತೋಷಪಟ್ಟು ತಮ್ಮ ತಮ್ಮ ಸ್ಥಾನಕ್ಕೆ ಹೋದರು.

**ರುಕ್ಮಿಣೀ ಸತ್ಯಭಾಮಾಭ್ಯಾಮಾಚಚಕ್ಷೇ ಯಥಾಭವತ್ ।**
**ತೇ ಪ್ರೀತೇ ಪ್ರೀತಿಯುಕ್ತೇನ ಕೇಶವೇನ ಸಮನ್ವಿತೇ ॥ 3 ॥**

ಆಮೇಲೆ ಶ್ರೀಕೃಷ್ಣ ರುಕ್ಮಿಣೀ ಸತ್ಯಭಾಮೆಯರ ಮನೆಗೂ ಹೋಗಿ ವೃತ್ತಾಂತವನ್ನು ತಿಳಿಸಿದ. ಅವರಿಬ್ಬರೂ ವಿದಿತ. ವೃತ್ತಾಂತರಾಗಿ ಸಂತೋಷಪಟ್ಟರು. ಶ್ರೀಕೃಷ್ಣನಾದರೂ ಲೋಕಶಿಕ್ಷಣಕ್ಕಾಗಿ ಆಗಾಗ್ಗೆ ಬ್ರಾಹ್ಮಣ ಭೋಜನ ಯಥೇಷ್ಟ ಭೂರಿ ದಕ್ಷಿಣೆಗಳಿಂದಲೂ ಸಂತೋಷಪಡಿಸಿ, ಪಿತೃದೇವತೆಗಳನ್ನೂ ದೇವತೆಗಳನ್ನೂ ಪ್ರೀತಿ ಪಡುಸುತ್ತಾ ರಾಜ್ಯವನ್ನು ನಿಷ್ಕಂಟಕವಾಗಿ ಪಾಲಿಸಿದನು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಶ್ರೀಕೃಷ್ಣನಿಂದ ಕೈಲಾಸ ಯಾತ್ರಾ ವರ್ಣನೆ ಎಂಬಲ್ಲಿ
ನಲವತ್ತೈದನೆಯ ಅಧ್ಯಾಯವು ಸಮಾಪ್ತಿ

## ಅಥ ಷಟ್‌ಚತ್ವಾರಿಂಶೋಽಧ್ಯಾಯಃ

### ಹಂಸಡಿಭಿಕರ ಜನ್ಮ

**ಭೂಯ ಏವ ದ್ವಿಜಶ್ರೇಷ್ಠ – ಶಂಖ ಚಕ್ರ ಗದಾಭೃತಃ ।**
**ಚರಿತಂ ಶ್ರೋತುಮಿಚ್ಛಾಮಿ ವಿಸ್ತರೇಣ ತಪೋಧನ ॥ 1 ॥**

ವೈಶಂಪಾಯನರೇ! ಶ್ರೀಕೃಷ್ಣನ ಮಹಿಮೆಗಳನ್ನು ಎಷ್ಟು ಕೇಳಿದರೂ ನನಗೆ ಅಲಂಬುದ್ಧಿ ಬರುತ್ತಿಲ್ಲ. ಪುನಃ ಕೃಷ್ಣದೇವನ ಮಹಿಮಾ ವಿಶೇಷ ತಿಳಿಯಪಡಿಸಿರಿ ಎಂದಾಗ ಹಂಸ-ಡಿಭಿಕರ ಕಥೆಯನ್ನು ಹೇಳ-ಲಾರಂಭಿಸಿದರು.

**ಬಭೂವತುಃ ಸುಸಂಪನ್ನೇ ಅನಪತ್ಯೇ ನೃಪೋತ್ತಮ ॥ 2 ॥**

ರಾಜನೇ, ಪೂರ್ವದಲ್ಲಿ ಬ್ರಹ್ಮದತ್ತನೆಂಬ ಸಾಲ್ವ ದೇಶದ ರಾಜನಿದ್ದ. ಅವನು ದಯಾಪರನು ಧರ್ಮಿಷ್ಟನೂ ಆಗಿದ್ದನು. ಅವನಿಗೆ ಸದ್ಗುಣಿಯರಾದ ಇಬ್ಬರು ಪತ್ನಿಯಿದ್ದರು. ಇವರಿಗೂ ಸಂತಾನವಾಗಿರಲಿಲ್ಲ.

ಬ್ರಹ್ಮದತ್ತನಿಗೆ ಒಬ್ಬ ಮಿತ್ರಸಹನೆಂಬ ಒಬ್ಬ ಬ್ರಾಹ್ಮಣ ಮಿತ್ರನಿದ್ದನು. ರಾಜನಂತೆ ಈ ಸದಾಚಾರಿಗೂ ಮಕ್ಕಳಾಗಿರಲಿಲ್ಲ. ಒಮ್ಮೆ ರಾಜನು ವಿಚಾರ ಮಾಡಿ ಹತ್ತು ವರ್ಷಗಳಷ್ಟು ಕಾಲ ಶಿವನನ್ನು ಆರಾಧಿಸಿದನು.

ಇತ್ತ ಮಿತ್ರಸಹನು ಸಹ ವಿಷ್ಣುವನ್ನು ವೈಷ್ಣವ ಯಾಗಗಳಿಂದ ಸಂತೋಷ ಪಡಿಸಿದನು.

**ಪುತ್ರಾರ್ಥಂ ಶೂಲಿನಂ ಶರ್ವಂ ದಶ ವರ್ಷಾಣ್ಯನನ್ಯಧೀಃ ।**
**ಸ ವಿಪ್ರೋ ವೈಷ್ಣವಂ ಸತ್ರಂ ಪುತ್ರಾರ್ಥೀ ಸಮಯೋಜಯತ್ ॥ 3 ॥**

ರಾಜನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ವರಬೇಡೆಂದು ಕೇಳಿದಾಗ ನನಗೆ ಇಬ್ಬರು ಗಂಡುಮಕ್ಕಳಾಗಲಿ ಎಂದ. ತಥಾಸ್ತು ಎಂದ. *[ಪುತ್ರೌ ಮಮ ಭವೇತಾಂ].*

ರಾಜನು ಬೆಳಗ್ಗೆ ಎದ್ದು ಶಿವನ ವರವನ್ನು ರಾಣಿಯರಿಗೆ ಹೇಳಿದನು. ಮಿತ್ರಸಹನಿಗೆ ಅವನ ಯಾಗಗಳಿಂದ ಪ್ರೀತನಾದ ಕೇಶವನು ಒಬ್ಬ ಮಗನನ್ನು ಕರುಣಿಸಿದನು *[ಪುತ್ರಮೇಕಂ ದದೌ ತಸ್ಮೈ].*

ಕ್ರಮೇಣ ರಾಣಿಯರಿಬ್ಬರು ಗರ್ಭಧರಿಸಿ ಪುತ್ರರನ್ನು ಹಡೆದರು. ಬ್ರಾಹ್ಮಣನಿಗೂ ಒಬ್ಬ ವೈಷ್ಣವ ಪುತ್ರನಾದನು. ಜಾತಕರ್ಮಾದಿ ಸಂಸ್ಕಾರ ನಡೆದವು.

ಈ ಮೂವರು ಬಾಲಕರು ಒಟ್ಟಿಗೆ ಬೆಳೆದರು. ಸಕಲ ವೇದ ಶಾಸ್ತ್ರಗಳನ್ನು ಧನುರ್ವಿದ್ಯೆಯನ್ನು ಕಲಿತರು.

**ಹಂಸೋ ಜ್ಯೇಷ್ಠಃ ನೃಪಸುತಃ ಡಿಂಭಕೋಽನಂತರೋಽಭವತ್ ।**
**ಸ ಚ ವಿಪ್ರಸುತೋ ರಾಜನ್ ಜನಾರ್ದನ ಇತಿ ಸ್ಮೃತಃ ॥ 4 ॥**

ಈ ರಾಜಪುತ್ರರಲ್ಲಿ ಹಂಸ-ಡಿಭಿಕರೆಂದು, ಬ್ರಾಹ್ಮಣ ಪುತ್ರನಿಗೆ ಜನಾರ್ದನನೆಂಬ ಹೆಸರಿತ್ತು.

### ಹಂಸ –ಡಿಭಿಕರ ತಪಸ್ಸು

ಹಂಸ–ಡಿಭಿಕರು ಯೋಗ್ಯ ವಯಸ್ಕರಾರು. ಶಿವನನ್ನು ಕುರಿತು ತಪಸ್ಸನ್ನು ಮಾಡಲು ಇಚ್ಛಿಸಿದರು. ಅದಕ್ಕಾಗಿ ಹಿಮಾಲಯ ಸೇರಿದರು. ವಾಯ್ವಾಹಾರ – ಜಲಾಹಾರ ಮಾತ್ರ ಸ್ವೀಕರಿಸಿ ಉಗ್ರವಾದ ತಪಸ್ಸನ್ನಾಚರಿಸಿದರು.

**ಏಕಾಗ್ರೌ ಪ್ರಯತೌ ಭೂತ್ವಾ ವಾಯ್ವಂಬುಪ್ರಾಶಿನೌ ನೃಪ ॥ 5 ॥**

ಅವರಿಬ್ಬರೂ ಅಜೇಯತ್ವ ಹಾಗೂ ಅವಧ್ಯತ್ವವನ್ನು ಶಿವನಿಂದ ಪಡೆದರು. ಇಷ್ಟೇ ಅಲ್ಲದೆ ಶತ್ರು ಭಯಂಕರಗಳಾದ ಅಸ್ತ್ರಶಸ್ತ್ರಗಳು ಬೇಕು. ನಿನ್ನ ಪಾಶುಪತಾಸ್ತ್ರವನ್ನೂ ಬ್ರಹ್ಮಕಪಾಲವನ್ನೂ, ಅಭೇದ್ಯ ಕವಚವನ್ನೂ ಅಚ್ಛೇದ್ಯವಾದ ಧನುಸ್ಸನ್ನೂ ಹಾಗೂ ಪರಶು ಎಂಬ ಮಹಾಯುಧವನ್ನು ನೀಡಬೇಕು.

**ಆವಾಮಜಯ್ಯೌ ಸರ್ವಾತ್ಮನ್ ಏಷ ನೌ ಪ್ರಥಮೋ ವರಃ ।**
**ರೌದ್ರಾಸ್ತ್ರಾಣಾಂ ಚ ಸಂಗ್ರಹಃ ॥ 6 ॥**
**ಮಾಹೇಶ್ವರಂ ತಥಾ ರೌದ್ರಮಸ್ತ್ರಂ ಬ್ರಹ್ಮಶಿರೋ ಮಹತ್ ।**
**ಅಭೇದ್ಯಂ ಕವಚಂ ದಿವ್ಯಮಚ್ಛೇದ್ಯಂ ಚಾಪಿ ಕಾರ್ಮುಕಮ್ ॥ 7 ॥**

ಇದಲ್ಲದೆ ನಾವು ಶತ್ರುಗಳಿಂದ ಹೋರಾಡುವಾಗ ನಮ್ಮ ರಕ್ಷಣೆಗಾಗಿ ಎರಡು ಮಹೋದರ ಕುಂಡಧಾರಿಗಳೆಂಬ ಭೂತಗಳನ್ನೂ ಬೇಡಿದರು. ಶಿವನು ಹಾಗೆ ಆಗಲಿ ಎಂದು ವರ ನೀಡಿ ಅಂತರ್ಧಾನನಾದನು. ಮಹೋದರನಿಗೆ ವಿರೂಪಾಕ್ಷವೆಂದೂ ಹೆಸರು. ಇವರು ಶಿವನ ಅನುಚರರು. ದೇವಯೋನಿಯಲ್ಲಿ ಹುಟ್ಟಿದವರು. ಶಿವನ ವರದಿಂದಾಗಿ ಅಜೇಯತ್ವವೂ ಬಂದಿತ್ತು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಹಂಸ-ಡಿಭಿಕರಿಗೆ ಶಿವನಿಂದ ವರ ಎಂಬಲ್ಲಿ
ನಲವತ್ತಾರನೆಯ ಅಧ್ಯಾಯವು ಸಮಾಪ್ತಿ

# ಅಥ ಸಪ್ತಚತ್ವಾರಿಂಶೋಽಧ್ಯಾಯಃ

## ಹಂಸಡಿಭಿಕರಿಗೆ ಶಿವ ವರದಾನ

ಶಿವನ ವರದಿಂದಾಗಿ ಶಸ್ತ್ರಾಸ್ತ್ರ ಸಂಗ್ರಹಿಸಿ ಧನುರ್ಬಾಣಧಾರಿಗಳಾಗಿ ಕವಚಧರಿಸಿ ಸರ್ವರಿಂದಲೂ ಅಜೇಯರಾಗಿ ಈ ವರ ಕರುಣಿಸಿದ ಶಿವನನ್ನೇ ಸರ್ವಾತ್ಮನಾ ಭಜಿಸುತ್ತಿದ್ದರು *[ಅತ್ಯಂತಭಕ್ತೌ ದೇವೇಶೇ].*

ಭಸ್ಮಧಾರಣೆ, ತ್ರಿಪುಂಡ್ರ ಜಟಾಧಾರಿಗಳಾಗಿ ರುದ್ರಾಕ್ಷಿಮಾಲೆಗಳನ್ನು ಧರಿಸಿ – ನಮಃ ಶಿವಾಯ ಎಂದು ಪಂಚಕ್ಷರಿ ಮಂತ್ರ ತತ್ಪರರಾಗಿ ನಿತ್ಯೋತ್ಸವ ಮಾಡುತ್ತಿದ್ದರು. ಆದರೆ ಸ್ವಭಾವತಃ ವಿಷ್ಣುದ್ವೇಷಿಯಾಗಿದ್ದರು.

ನಂತರ ತಮ್ಮ ಮನೆಗೆ ಬಂದು ನಡೆದ ವೃತ್ತಾಂತ ತಂದೆ ತಾಯಿಗಳಿಗೆ ತಿಳಿಸಿದರು.

ಇತ್ತಲಾಗಿ ಬ್ರಾಹ್ಮಣ ಪುತ್ರ ಜನಾರ್ದನನೂ ಧರ್ಮಿಷ್ಠನಾಗಿಯೂ ಜಿತೇಂದ್ರಿಯನಾಗಿಯೂ ವಿಷ್ಣುವನ್ನು ಆರಾಧಿಸುತ್ತಿದ್ದನು. ವಿಷ್ಣುವೂ ಇವನ ಮೇಲೆ ಸಂತುಷ್ಟನಾಗಿದ್ದನು.

ಕ್ರಮೇಣ ಹಂಸ–ಡಿಭಿಕರು, ಜನಾರ್ದನನೂ ವಿವಾಹವಾದರು.

## ದುರ್ವಾಸರ ಆಶ್ರಮಕ್ಕೆ ಹಂಸ ಡಿಭಿಕರು

ಹಂಸ ಡಿಭಿಕರೊಮ್ಮೆ ಜನಾರ್ದನನೊಂದಿಗೆ ಭೇಟಿಗಾಗಿ ಹೋಗಿ ಅನೇಕ ಪ್ರಾಣಿಗಳ್ನು ಭೇಟಿಯಾಡಿ ಶ್ರಮದಿಂದ ಅಲ್ಲಿಯೆ ಇದ್ದ ಸರೋವರದಲ್ಲಿ ಸ್ನಾನಾದಿಗಳನ್ನು ಮಾಡಿದರು. ಆಗ ಅಲ್ಲಿಯೆ ಸಮೀಪದಲ್ಲಿ ವೇದಮಂತ್ರ–

ಗಳನ್ನುಚ್ಚರಿಸುತ್ತ ಶಬ್ದ ಕೇಳಿ ಆ ಆಶ್ರಮಕ್ಕೆ ನಡೆದೆ ಹೋದರು. ಅದು ಕಶ್ಯಪರು ಮಾಡುತ್ತಿದ್ದ ವೈಷ್ಣವ ಯಾಗವಾಗಿದ್ದು ಅಲ್ಲಿಗೆ ಹೋಗಿ ಅಲ್ಲಿದ್ದ ಮುನಿಗಳನ್ನು ನಮಸ್ಕರಿಸಿದರು. ಅವರು ಈ ಮೂವರಿಗೂ ಉಚಿತ ಸತ್ಕಾರ ಮಾಡಿದರು.

ಆದಾದ ಮೇಲೆ ಹಂಸ ಡಿಭಿಕರು ಅಲ್ಲಿ ನೆರೆದಿದ್ದ ಮುನಿಗಳಿಗೆ ಋಷಿಗಳೇ ನಮ್ಮ ತಂದೆಯ ಕೈಲಿ ನಾವು ರಾಜಸೂಯ ಯಾಗ ಮಾಡಿಸುವವರಿದ್ದೇವೆ. ಅದಕ್ಕಾಗಿ ತಾವೆಲ್ಲರೂ ತಮ್ಮ ಹೋಮದ ಸಾಮಾಗ್ರೀ ಸಹಿತವಾಗಿ ನಮ್ಮ ಅರಮನೆಗೆ ಬರತಕ್ಕದ್ದು.

ರಾಜಸೂಯ ಯಾಗಕ್ಕೆ ರಾಜರನ್ನು ಗೆಲ್ಲಲು ಈಗಿಂದಲೇ ಪ್ರಾರಂಭಿಸುತ್ತೇವೆ ಎಂದರು. ಯಾಗ ಆಗುವುದಾದರೆ ನಾವೆಲ್ಲರೂ ಬರುವೆವು ಎಂದರು.

## ಹಂಸ ಡಿಭಿಕರ ಔದ್ಧತ್ಯ

ಹಂಸ ಡಿಭೀಕರು ಕಾಣಿಕೆಯನ್ನು ತೆಗೆದುಕೊಂಡು ಬರಲು ಪುಷ್ಕರತೀರ್ಥದ ಉತ್ತರಕ್ಕೆ ಹೊರಟರು. ದುರ್ವಾಸರ ಆಶ್ರಮವು ಸಿಕ್ಕಿ ಒಳಗೆ ಹೋಗಿ ರುದ್ರಾಂಶರಾದ ದುರ್ವಾಸರನ್ನು ನೋಡಿದರು.

ಮೂರು ಸಾವಿರ ಯತೀಶ್ವರರಿಂದ ಕೂಡಿದ್ದ, ವಿಷ್ಣುವನ್ನೇ ನಿರಂತರ ಧ್ಯಾನಿಸುತ್ತಿದ್ದ ಕಾವಿಧರಿಸಿ ಕೌಪೀನ ಧರಿಸಿದ ದೂರ್ವಾಸರನ್ನು ನೋಡಿ ಮೋಹದಿಂದ ದರ್ಪದಿಂದ ಹೀಗೆಂದರು.

**ಕೋ ನ ಮಾಸವ ಮಹಾಭೂತಃ ಕಾಷಾಯೀ ವರ್ಣವಿತ್ತಮಃ ।**
**ಕಶ್ಚಾಯಂ ಆಶ್ರಮೋ ನಾಮ ವಿಹಾಯ ಚ ಗೃಹಾಶ್ರಮಂ ॥ 1 ॥**
**ತಂ ವಿನಾನ್ಯೇನ ರೂಪೇಣ ವರ್ತತೇ ಯೋಽತಿ ಮೂರ್ಖವತ್ ।**
**ಸ್ಥಾಪಯಿಷ್ಯಾಮಹೇ ಸರ್ವಾನ್ ಮಂದಬುದ್ಧೀನಿಮಾನ್ ಗೃಹೇ ॥ 2 ॥**

ಕಾಷಾಯ ವಸ್ತ್ರ ಕೌಪೀನ ಧರಿಸಿ ಮಹಾಭೂತದಂತೆ ಕುಳಿತಿರುವ ಇವನಾರು? ಗೃಹಸ್ಥಾಶ್ರಮ ಬಿಟ್ಟು ಜನರನ್ನು ವಂಚಿಸಲು ಈ ಕಾಷಾಯ ವೇಷ ಧರಿಸಿದ್ದಾನೆ. ಈ ಮೂರ್ಖರೂ ಸಹ ಇವನನ್ನು ಅನುಸರಿಸುತ್ತಿದ್ದಾರೆ. ಇವರಿಗೆ ಸರಿಯಾಗಿ ಬುದ್ಧಿ ಕಲಿಸಬೇಕು ಎಂದು ಅವರ ಹತ್ತಿರ ಬಂದು ಸನ್ಯಾಸವನ್ನು ನಿಂದೆ ಮಾಡಿ ಗೃಹಸ್ಥಾಶ್ರಮವನ್ನು ಪ್ರಶಂಸಿಸಿದರು. ಮೂರ್ಖ ಬ್ರಾಹ್ಮಣನೇ! ನೀನೊಬ್ಬ ಡಂಭಾಚಾರಿಯೆಂದೆ ನನ್ನ ಭಾವನೆ. ಈ ಜನರೆಲ್ಲರನ್ನೂ ಐಹಿಕ–ಪಾರಿತ್ರಿಕ

ಸುಖವಿಲ್ಲದಂತೆ ಹಾಳು ಮಾಡುತ್ತಿರುವಿ. ನಿನಗೆ ಜೀವಿಸಬೇಕೆಂಬ ಆಸೆಯಿದ್ದರೆ ಈ ಸನ್ಯಾಸ ಬಿಟ್ಟು ಗೃಹಸ್ಥಾಶ್ರಮ ಹೊಂದು ಎಂದರು.

**ಸಮಾಪ್ತ ಆಯುಷಃ ಶೇಷೋ ಬ್ರಹ್ಮದಂಡಹತೌ ಯುವಾಮ್ ॥ 3 ॥**

ಇವರ ಮಾತನ್ನು ಕೇಳಿದ ಜನಾರ್ದನನು - ರಾಜಪುತ್ರರೇ, ನೀವಿಬ್ಬರೂ ಈ ಯತಿಗಳನ್ನು ಹೀಗೆ ನಿಂದಿಸಬಾರದಿತ್ತು. ನಿಜವಾಗಿಯೂ ಮೂಢಾತ್ಮರಾದ ನೀವಿಬ್ಬರೂ ಶಾಸ್ತ್ರೋಕ್ತವಾದ ಯತಿಧರ್ಮವನ್ನು ನಿಂದಿಸುತ್ತಾ ದೂರ್ವಾಸರಿಗೆ ಅಶ್ರಾವ್ಯ ಹಾಗೂ ಘೋರ ನಿಂದಾ ಮಾತುಗಳ-ನ್ನಾಡುತ್ತಿರುವಿರಿ, ಇದು ಇವರ ಬ್ರಹ್ಮ ಶಾಪದಿಂದಾಗಿ ನಿಮ್ಮ ಆಯುಸ್ಸನ್ನು ಕಳೆದುಕೊಂಡಿರಿ ಎಂದು ಹೇಳುತ್ತಾ ವೇದಾಂತ ಶಾಸ್ತ್ರಗಳಲ್ಲಿ ಹೇಳಿರುವ ನಾಲ್ಕು ಆಶ್ರಮ ಹಾಗೂ ಸನ್ಯಾಸಾಶ್ರಮವು ಶ್ರೇಷ್ಠವಾಗಿದ್ದು ಮೋಕ್ಷ ಮಾರ್ಗವಾಗಿದೆ ಎಂದು ಹೇಳಿದರೂ ಅವರು ಕೇಳಲಿಲ್ಲ.

ನಿಮ್ಮ ಮಿತ್ರನಾಗಿ ಈ ತರಹದ ಮಾತುಗಳನ್ನು ಕೇಳಲಾರೆನು. ವಿಷ ಕುಡಿಯಲೇ ಬಂಡೆಕಲ್ಲು ಹಾಕಿಕೊಂಡು ಸಾಯಲೇ ಅಥವಾ ಮಿತ್ರರಾದ ನಿಮ್ಮನ್ನೆ ಬಿಟ್ಟುಬಿಡಲೇ ಎಂದು ಹೇಳುತ್ತಾ ಋಷಿಗಳ ಪಾದದಲ್ಲಿ ಬಿದ್ದು ಕ್ಷಮೆಯಾಚಿಸಿದ.

**ಕುರ್ವನ್ನಿವ ತದಾ ಲೋಕಾನ್ ಭಸ್ಮಭೂತಾನಿಮಾನ್ ನೃಪ ।**
**ಬ್ರಾಹ್ಮಣಂ ಚಕ್ಷುಷಾ ಪಶ್ಯನ್ ಸೌಮ್ಯೇನಾನ್ಯೇನ ಕೇವಲಮ್ ॥ 4 ।**

ಹೀಗೆ ನಿಂದಿಸಿದ ಹಂಸಡಿಭಿಕರನ್ನು ಕ್ರುದ್ಧನಾಗಿ ಮೂರು ಲೋಕಗಳನ್ನೆ ಸುಟ್ಟು ಹಾಕುವವನಂತೆ ತೀಕ್ಷ ನೇತ್ರದಿಂದ ನೋಡುತ್ತಾ, ಇನ್ನೊಂದು ಕಣ್ಣಿನಿಂದ ಜನಾರ್ದನನ ಮೇಲೆ ಸೌಮ್ಯದೃಷ್ಟಿ ಬೀರುತ್ತಾ ಹೀಗೆಂದರು.

**ದರ್ಪಂ ವಾಂ ಲೋಕವಿಖ್ಯಾತಃ ಶಂಖಚಕ್ರಗದಾಧರಃ ।**
**ವ್ಯಪನೇಷ್ಯತಿ ಮಂದಜ್ಞಾ ಕಿಂ ವಕ್ಷ್ಯಾಮಿ ಸಾಂಪ್ರತಮ್ ॥ 5 ॥**

ನಿನಗೆ ಶಕ್ತಿಯಿದ್ದರೆ ನಮ್ಮೆಲ್ಲರನ್ನೂ ಧ್ವಂಸ ಮಾಡು. ನಿಮ್ಮ ದುಷ್ಕೃತ್ಯಕ್ಕೆ ವಿಳಂಬವೇಕೆ? ನಿಮ್ಮಂತಹ ದುರಹಂಕಾರಿಗಳಲ್ಲದೆ ನಮ್ಮ ಮುಂದೆ ಹೀಗೆ ಯಾರು ತಾನೆ ಮಾತನಾಡಬಲ್ಲರು. ನಿಮ್ಮಿರ್ವರ ದರ್ಪವನ್ನು ಶ್ರೀಕೃಷ್ಣನೆ ಮುರಿಯುತ್ತಾನೆ.

**ಕೌಪೀನಂ ಚಿಚ್ಛಿದೇ ಕ್ರೂರಃ ಕೃತಾಂತ ಇವ ಸತ್ತಮ ॥ 6 ॥**

**ದೂರ್ವಾಸಾಃ ಸತ್ಯಧರ್ಮಸ್ತು ಹಂತುಮೀಶೋಽಪಿ ತಂ ತತಃ ।**
**ತಥಾಪಿ ನ ಕರೋಮ್ಯಂತಂ ಯತಯೋ ಹ್ಯತ್ರ ತೇ ವಯಮ್ ॥ 7 ॥**

ಎಂದು ಹೇಳಿ ಅಲ್ಲಿಂದ ಹೊರಡಲುನುವಾದನು. ಆದರೆ ಹಂಸನು ದೂರ್ವಾಸರನ್ನು ಹೋಗಗೊಡದೆ ಅವರ ಕೌಪೀನವನ್ನು ಹರಿದು ಹಾಕಿದನು.

ಮೂರ್ಖನೆ ನಿನ್ನನ್ನು ಈ ಕ್ಷಣದಲ್ಲಿಯೇ ನಾಶ ಮಾಡಬಲ್ಲೆ. ಆದರು ಯತಿಗಳಾದ್ದರಿಂದ ಆ ಕೆಲಸ ಮಾಡುವುದಿಲ್ಲವೆಂದರು.

ಜನಾರ್ದನರು – ಹಾ ಏನಿದು ಅತ್ಯಚಾರಯೆಂದು ಯಾವಚ್ಛಕ್ತಿ ತಡೆದನು. ಧರ್ಮರಕ್ಷಕನಾದ ಶ್ರೀಕೃಷ್ಣನಿದ್ದಾಗಲು ಇಂತಹ ಅಧರ್ಮವನ್ನು ನೋಡಿಯೂ ಅವನೇನೂ ಮಾಡಲಿಲ್ಲವಾದರೆ ಧರ್ಮವು ನಾಶ ಹೊಂದಿದಂತೆಯೇ ಸರಿ ಎಂದು ಹೇಳಿ ಹಂಸನನ್ನು ನಡೆನಡೆ! ಎಂದು ಹೇಳಿ ಜನಾರ್ದನನಿಗೆ ವರ ನೀಡಿದರು. ನಿನಗೆ ಹರಿಯಲ್ಲಿ ಭಕ್ತಿವುಂಟಾಗಲಿ. ನಿನಗೆ ಹರಿಯ ಸಮಾಗಮವಾಗುತ್ತದೆ ಎಂದರು.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಜನಾರ್ದನನಿಗೆ ವರ ಎಂಬಲ್ಲಿ
ನಲವತ್ತೇಳನೆಯ ಅಧ್ಯಾಯವು ಸಮಾಪ್ತಿ

# ಅಥ ಅಷ್ಟಚತ್ವಾರಿಂಶೋऽಧ್ಯಾಯಃ

## ದುರ್ವಾಸರು ದ್ವಾರಕೆಗೆ

**ತತಸ್ತೌ ಹಂಸಡಿಭಕೌ ಕ್ರುದ್ಧೌ ಕಾಲೇನ ಚೋದಿತೌ ।**
**ಶಿಕ್ಯಂ ಕಮಂಡಲುಂ ಚೈವ ದ್ವಿದಲಂ ದಾರುಮೇವ ಚ ॥ 1 ॥**
**ದಂಡಾನ್ ಪಾತ್ರವಿಶೇಷಾಂಶ್ಚ ಭಿತ್ವ ಭಿತ್ವಾ ಚ ಸರ್ವಶಃ ।**
**ತಸ್ಮಿನ್ ದೇಶೇ ಮಹಾರಾಜ ವ್ಯಾಧೈಃ ಮಾಂಸಾನ್ ಅದೀದಹನ್ ॥ 2**

ರಾಜನೇ! ಕಾಲಚೋದಿತರಾದ ಹಂಸಡಿಭಕರು ಕ್ರೋಧವಶರಾಗಿ ಅಲ್ಲಿದ್ದ ಯತಿವರ್ಯರ ದಂಡಕಮಂಡಲು ಹಗ್ಗದಶಿಕ್ಯದಾರುಮಯ ಭೋಜನ ಪಾತ್ರೆಗಳನ್ನು ಸಾಲಿಗ್ರಾಮ ಸಂಪುಟಗಳನ್ನೂ ಮುರಿದು ಪುಡಿ ಮಾಡಿದರು. ವ್ಯಾಧರು ಮೃಗ ಭೇಟೆಯಲ್ಲಿ ತಂದಿದ್ದ ಪ್ರಾಣಿಮಾಂಸಗಳನ್ನು ಆ ಹೋಮಕುಂಡದಲ್ಲಿಯೆ ಬೇಯಿಸಿ ತಿಂದು ಅಲ್ಲಿಂದ ತಮ್ಮ ಪುರಗಳಿಗೆ ತಲುಪಿದರು.

ದುರ್ವಾಸರು ತಮ್ಮ ಶಿಷ್ಯರಿಗೆಲ್ಲ ಹೀಗೆಂದರು, ನಾವೆಲ್ಲರೂ ದ್ವಾರಕೆಗೆ ಹೋಗಿ ಇವರಿಬ್ಬರ ದುಷ್ಕೃತ್ಯ ಹೇಳೋಣ. ಶ್ರೀಕೃಷ್ಣನು ಧರ್ಮರಕ್ಷಣೆಗೆ ಕಟಿಬದ್ಧನಾಗಿರುವರನು. ವಿಳಂಬ ಮಾಡದೆ ನಡೆಯಿರಿ.

ನೀವೆಲ್ಲರೂ ಒಡೆದು ಚೂರು ಮಾಡಿದ ಪಾತ್ರೆ, ದಂಡ, ಹರಿದ ಕೌಪೀನ ಮೊದಲಾದವುಗಳನ್ನು ಹಿಡಿದುಕೊಳ್ಳಿರಿ ಅವನಿಗೆ ತೋರಿಸೋಣ ಎಂದಾಗ ಎಲ್ಲರೂ ಹಾಗೆ ಮಾಡಿ ಸುಮಾರು ಐದು ಸಾವಿರ ಯತಿಗಳು ಶ್ರೀಕೃಷ್ಣನಿರುವ

ದ್ವಾರಕೆಗೆ ಬಂದು ತಮ್ಮ ಮೇಲೆ ವಿನಾ ಆಕ್ರಮಣ ಮಾಡಿದ ದುರ್ವೃತ್ತಾಂತವನ್ನು ತಿಳಿಸಿದರು.

**ಯತಯೋ ದೀರ್ಘತಪಸಃ ಪುರಸ್ಕೃತ್ಯ ತಪೋಧನಂ ।**
**ದುರ್ವಾಸಸಂ ಸುಮನಸಃ ದದೃಶುಃ ಯಾದವೇಶ್ವರಮ್ ॥ 3 ॥**

**ತಸ್ಮಾತ್ ತ್ವಂ ಜಹಿ ತೌ ವೀರೌ ರಕ್ಷಲೋಕಾನಿಮಾನ್ ಪ್ರಭೋ ॥ 4 ॥**

ಶ್ರೀಕೃಷ್ಣನು ಪಗಡೆಯಾಟದಲ್ಲಿ ನಿರತನಾಗಿದ್ದ ಇಷ್ಟರಲ್ಲಿಯೇ ಯತಿಗಳು ಬಂದು ಶ್ರೀಕೃಷ್ಣನ ಮುಂದೆ ತಮ್ಮ ದುಃಖ ತೋಡಿಕೊಂಡರು. ಆದ್ದರಿಂದ ಅವಧ್ಯರೂ ಅಜೇಯರೂ ಆದ ಹಂಸಡಿಭಿಕರನ್ನು ಕೊಂದು ಹಾಕು. ಧರ್ಮವನ್ನು ಉಳಿಸು ಎಂದರು.

## ಬ್ರಹ್ಮದತ್ತನ ರಾಜಸೂಯ ಯಾಗ

**ಕ್ಷಂತವ್ಯಂ ಭವತಾ ಸರ್ವಂ ದೋಷ ಏಷ ಮಮೈವ ಹಿ ।**
**ರಕ್ಷಾಂ ವೋऽಹಂ ಕರಿಷ್ಯಾಮಿ ಹತ್ವಾ ತೌ ಚ ನೃಪಾಧಮೌ ॥ 5 ॥**

ದೂರ್ವಾಸರೇ, ಶಾಂತರಾಗಿ, ಈ ದೋಷ ನನ್ನದೆ ಆಗಿದೆ. ನಿಮ್ಮನ್ನು ರಕ್ಷಿಸುವ ಭಾರ ನನ್ನದೆ. ಹಂಸಡಿಭಕರನ್ನು ಕೊಂದು ಹಾಕುತ್ತೇನೆ.

**ಪ್ರಾಣಾನಪಿ ತಯೋಃ ರಾಜಾ ದಾಸ್ಯತ್ಯೇವ ನ ಸಂಶಯಃ ।**
**ಜರಾಸಂಧೋ ನ ಭೂಪಾಲೋ ವಿನಾ ತೌ ಜಯತೇ ಮಹೀಂ ॥ 6 ॥**

ಇವರಿಬ್ಬರೂ ಜರಾಸಂಧನ ಶಿಷ್ಯರು. ರುದ್ರದೇವನ ವರದಿಂದ ದರ್ಪಿಷ್ಠರೂ ಆಗಿದ್ದಾರೆ. ಇವರಿಗಾಗಿ ಜರಾಸಂಧ ಪ್ರಾಣವನ್ನೂ ಕೊಡಲು ಸಿದ್ಧನಿರುವನು.

ಜರಾಸಂಧನೂ ಸಹ ಇವರಿಬ್ಬರನ್ನು ಹೊರತುಪಡಿಸಿ ವಿಶ್ವವನ್ನೇ ಗೆಲ್ಲಬಲ್ಲ ಎಂದಾಗ

**ಭೋಕ್ತವ್ಯಾ ಯತಯೋ ವಿಪ್ರಾಃ ಭಿಕ್ಷುಕಾಃ ಸರ್ವ ಏವ ಹಿ ।**
**ಭೋಜಯಾಮಾಸ ತಾನ್ ಸರ್ವಾನ್ ಯತೀನ್ ಯತಿವರಾರ್ಚಿತಃ ॥ 7॥**

ಕೃಷ್ಣನೆ! ನಿನಗೆ ಅಸಾಧ್ಯವಾದದ್ದು ಯಾವುದಿದೆ? ನಿನಗೆ ಮಂಗಳವಾಗಲಿ ಎಂದು ಹೊರಟಾಗ ಶ್ರೀಕೃಷ್ಣನು ಅವರಿಗೆಲ್ಲ ಚತುರ್ವಿಧ ಭಕ್ಷ್ಯ ಭೋಕ್ಷ್ಯಗಳಿಂದ ತೃಪ್ತಿಪಡಿಸಿದನು.

**ಭಿತ್ವಾ ಭಿತ್ವಾ ಚ ದೇವೇಶಃ ದುಕೂಲಾನಿ ಮೃದೂನಿ ಸಃ ।**
**ದದೌ ತೇಭ್ಯಸ್ತದಾ ವಿಷ್ಣುಃ ಸರ್ವೇಭ್ಯಃ ಜನಮೇಜಯಃ ॥ 8 ॥**

ಹಾಗೂ ರೇಶಿಮೆಯ ವಸ್ತ್ರಗಳನ್ನು ತರಿಸಿ ಯೋಗ್ಯ ರೀತಿಯಲ್ಲಿ ತುಂಡರಿಸಿ ಅವುಗಳನ್ನು ದುರ್ವಾಸಾದಿಗಳಿಗೆ ನೀಡಿ ಸಂತೋಷಪಡಿಸಿದನು. ಅವರೆಲ್ಲರೂ ಹರಿಸಿ ಹೊರಟು ಹೋದರು.

## ಜನಾರ್ದನನ ದೌತ್ಯ

ಈ ಮಧ್ಯ ಬ್ರಹ್ಮದತ್ತನಿಗೆ ಹಂಸಡಿಭಿಕರು ತಂದೆಯೇ! ನೀನು ಈ ತಿಂಗಳಲ್ಲಿಯೇ ರಾಜಸೂಯಯಾಗ ಮಾಡು. ನಾವಿಬ್ಬರೂ ಎಲ್ಲಾ ರಾಜರನ್ನೂ ಗೆದ್ದು ಕಾಣಿಕೆ ತಂದು ಹಾಕುತ್ತೇವೆ.

ಆಗ ಜನಾರ್ದನನು ಹಿತೈಷಿಯಾಗಿ ಮಿತ್ರಮನೇ! ವೃದ್ಧಪಿತಾಮಹ ಭೀಷ್ಮ, ಬಾಹ್ಲೀಕ ಜರಾಸಂಧ ಯಾದವರು ಶ್ರೀಕೃಷ್ಣ ಇವರನ್ನೆಲ್ಲ ಗೆಲ್ಲುವುದು, ರಣಕೋವಿದ ಬಲರಾಮನಿರುವಾಗ ಅವರನ್ನು ಗೆಲ್ಲಲು ಅಸಾಧ್ಯ. ಈ ಮಧ್ಯೆ ದೂರ್ವಾಸಾದಿಗಳಿಗೆ ಅವಮಾನ ಮಾಡಿರುವಿರಿ. ಅವರೆಲ್ಲರೂ ದ್ವಾರಕೆಗೆ ಹೋಗಿರುವರೆಂದು ಭೋಜನಕ್ಕಾಗಿ ಬಂದ ಬ್ರಾಹ್ಮಣನ ಮೂಲಕ ತಿಳಿಯಿತು. ಆದ್ದರಿಂದ ವಿಚಾರ ಮಾಡಿ ರಾಜಸೂಯಯಾಗ ಮಾಡಬಹುದು ಎಂದಾಗ,

**ಕೋ ನಾಮ ಭೀಷ್ಮೋ ಮಂದಾತ್ಮಾ ವೃದ್ಧೀ ಹೀನಬಲಃ ಸದಾ**
**ಕಶ್ಚ ಕೃಷ್ಣಃ ಪುರಃ ಸ್ಥಾತುಂ ಸಕ್ತಃ ಬಲದೇವಶ್ಚ ಮತ್ತಕಃ ॥ 9 ॥**
**ಜರಾಸಂಧಸ್ತು ಧರ್ಮಾತ್ಮಾ ಬಂಧುರೇವ ಸದಾ ಮಮ ॥ 10 ॥**
**ದೀಯತಾಂ ಕರಸರ್ವಸ್ವಂ ಯಜ್ಞಾರ್ಥಂ ಸುಂದರಂ ಬಹು ।**
**ಲವಣಾನಿ ಬಹೂನ್ಯದ್ಯ ಗೃಹ್ಯ ಕೇಶವ ಮಾ ಚಿರಮ್ ॥ 11 ॥**

ಆ ವೃದ್ಧನಾದ ಭೀಷ್ಮ ಬಲಹೀನನಾಗಿರುವನು. ಆ ಕೃಷ್ಣ ಇನ್ನೂ ಬಾಲಕ ಅವನೇನು ಮಾಡಿಯಾನು. ಇನ್ನೂ ಮದ್ಯಪಾನ ಮತ್ತ ಬಲರಾಮ ನಮಗೇನು ಮಾಡಿಯಾನು. ಜರಾಸಂಧನು ನಮಗೆ ಗುರುವು ಬಂಧುವು ಆಗಿರುವನು ಎಂದು ಹೇಳಿ ಜನಾರ್ದನನಿಗೆ ಶ್ರೀಕೃಷ್ಣನ ಬಳಿ ಹೋಗಿ ಸಮುದ್ರವಾಸಿಯಾದ ನೀನು ನಮಗೆ ಉಪ್ಪಿನ ಮೂಟೆಗಳನ್ನು ಕಾಣಿಕೆಯನ್ನು ಕಳಸು ಎಂದು ಹೇಳಿ ಕಳುಹಿಸಿದನು.

ಜನಾರ್ದನನಿಗೆ ಶ್ರೀಕೃಷ್ಣನನ್ನು ನೋಡುವ ಭಾಗ್ಯ ಲಭಿಸಿದೆಯೆಂದು ಕಂಸನ ಮಂತ್ರಿ ಅಕ್ರೂರನಂತೆ ದ್ವಾರಕೆಗೆ ಹೊರಟು ಶ್ರೀಕೃಷ್ಣನಿಗೆ ಅವರ ಔದ್ಧತ್ಯವನ್ನೆಲ್ಲ ತಿಳಿಸಿದ.

ಯುದ್ಧದಲ್ಲಿ ಶಾರ್ಙ್ಗಬಿಲ್ಲಿನಿಂದ ಹೊರಟ ನಾರಾಚಗಳಿಂದ ಕಾಣಿಕೆ ಕೊಡುತ್ತೇನೆಂದು ಹೇಳು ಅಥವಾ ಚಕ್ರದಿಂದ ನಿಮ್ಮಿಬ್ಬರ ತಲೆದಂಡ ನೀಡುವೆ ಎಂದು ಹೇಳಿ ಕಳುಹಿಸಿದನು.

## ಸಾತ್ಯಕಿಯ ದೌತ್ಯ

ಶ್ರೀಕೃಷ್ಣನು ವೀರನಾದ ಸಾತ್ಯಕಿಯನ್ನು ದೌತ್ಯಕ್ಕಾಗಿ ಕಳುಹಿಸಿದ ನಿಮಗೆ ಒಳ್ಳೆ ಆಯುಧಗಳಿಂದ ಕಪ್ಪ-ಕಾಣಿಕೆ ಕೊಡುವೆನೆಂದು ಹೇಳು. ಹಾಗೂ ಯುದ್ಧಾರ್ಥಿಗಳಾಗಿ ಪುಷ್ಕರಕ್ಕೆ ಬನ್ನಿ ಎಂದು ಹೇಳು ಎಂದಾಗ ಹಾಗೆ ಮಾಡಿದನು.

ಜರಾಸಂಧನಾದರೂ ಮಹಾಶಿವಭಕ್ತನಾಗಿದ್ದು ಶಿವಾವತಾರಿ ದೂರ್ವಾಸರಿಗೆ ಅವಮಾನ ಮಾಡಿದ್ದುದರಿಂದ ಅವರನ್ನು ತ್ಯಜಿಸಿದ್ದ. ಹಂಸಡಿಭಿಕರು ಪುಷ್ಕರಕ್ಕೆ ಬಂದರು. ಬ್ರಹ್ಮದತ್ತರು ಎರಡು ಭೂತಗಳೂ ಬಂದವು.

ವಿಚಕ್ರನೆಂಬ ಒಬ್ಬ ದೈತ್ಯ ಹಂಸಡಿಭಿಕರ ಮಿತ್ರನಾಗಿದ್ದ ಅವನು ಹಾಗೂ ಹಿಡಿಂಬ ರಾಕ್ಷಸನೂ ಬಂದರು.

ಹಂಸಡಿಭಿಕರದು ಹತ್ತು ಅಕ್ಷೌಹಿಣೀ ಸೈನ್ಯ, ವಿಚಕ್ರನದು ಆರು, ಹಿಡಿಂಬನದು ಒಂದು ಅಕ್ಷೌಹಿಣೀ ಸೈನ್ಯದಿಂದ ಕೂಡಿ ಕೃಷ್ಣನ ಮೇಲೆ ಯುದ್ಧಕ್ಕೆ ಬಂದರು.

## ವಿಚಕ್ರಮರಣ

ನಂತರ ಮಹಾಭಯಂಕರವಾದ ದ್ವಂಧ್ವ ಯುದ್ಧ ನಡೆಯಿತು. ಶ್ರೀಕೃಷ್ಣ-ವಿಚಕ್ರ, ಬಲರಾಮ-ಹಂಸ, ಡಿಭಿಕ-ಸಾತ್ಯಕಿ, ಕೃಷ್ಣನ ತಮ್ಮ ಗದ-ಬ್ರಹ್ಮದತ್ತನನ್ನು ಎದುರಿಸಿದರು.

ಯಾದವರ ಸೈನ್ಯದಲ್ಲಿ ಮೂರು ಅಕ್ಷೌಹಿಣಿ ಸೈನ್ಯವಿತ್ತು. ಶ್ರೀಕೃಷ್ಣನು ಬಾಣಗಳ ಮಳೆಗರೆದು ವಿಚಕ್ರನನ್ನು ನಿರಾಯುಧನನ್ನಾಗಿ ಮಾಡಿದ. ಮುಂದೆ ಅವನನ್ನು ಚಕ್ರದಿಂದ ತಲೆ ತರಿದ.

ಶ್ರೀಕೃಷ್ಣನು ಯಾದವರನ್ನೇ ಭಕ್ಷಿಸುತ್ತಿದ್ದ ಭೂತಗಳನ್ನೆದುರಿಸಿದ. ಈ

ಭೂತಗಳಾದರೂ ಶ್ರೀಕೃಷ್ಣನ ಬಳಿ ಓಡಿ ಬಂದು ಅವನ ಹೆಗಲೇರಿ ಅವನ ಕಿವಿಯನ್ನು ಕಚ್ಚಿದವು.

ಮಹಾಬಲಿಷ್ಠ ಶ್ರೀಕೃಷ್ಣನು ಜೋರಾಗಿ ಝಾಡಿಸಿದಾಗ ಭೂತಗಳು ಕೈಲಾಸದಲ್ಲಿ ಹೋಗಿ ಬಿದ್ದವು. ಕೈಲಾಸದಲ್ಲಿ ಬಿದ್ದ ಭೂತಗಳು ಕೃಷ್ಣನ ಈ ಲೀಲೆಗೆ ಆಶ್ಚರ್ಯಪಟ್ಟವು.

ಬಲರಾಮನು ಹಿಡಿಂಬಾಸುರನನ್ನು ಎದುರಿಸಿದನು. ಮುಷ್ಟಿಕಾಳಗ ನಡೆಯಿತು. ಬಹಳ ಕಾಲ ಯುದ್ಧ ಮಾಡಿ ಹಿಡಿಂಬನ ಕಾಲುಗಳನ್ನು ಹಿಡಿದು ಎತ್ತಿ ಬಿಸಾಕಿದ. ಕಾಲು ಯೋಜನ ದೂರ ಹೋಗಿ ಬಿದ್ದವನು ಪುನಃ ಯುದ್ಧಕ್ಕೆ ಬರಲಿಲ್ಲ.

ಸಾತ್ಯಕಿಯು ಡಿಭಿಕನೊಂದಿಗೆ ಬಹಳ ಕಾಲ ಹೋರಾಡಿ ಅವನ ಐನೂರು ಸೈನಿಕರನ್ನು ಕೊಂದು ಹಾಕಿದ.

## ಹಂಸಡಿಭಿಕ – ಶ್ರೀಕೃಷ್ಣ ಯುದ್ಧ

ಶ್ರೀಕೃಷ್ಣನೊಂದಿಗೆ ಹಂಸ ಡಿಭಿಕರು ಯುದ್ಧಕ್ಕೆ ಬಂದರು. ಅವರನ್ನು ಕೃಷ್ಣನು ಕ್ಷಣದಲ್ಲಿ ನಿರಾಯುಧರನ್ನಾಗಿ ಮಾಡಿದನು. ಕೃಷ್ಣನೊಬ್ಬನೆ ಕಾಲುಭಾಗ ಸೈನ್ಯ ನಾಶ ಮಾಡಿದ್ದ.

ರಾತ್ರಿಯಾದಾಗ ಹಂಸ ಡಿಭಿಕರು ಪಲಾಯನ ಮಾಡಿದ್ದರು. ಮಾರನೇ ದಿನ ಶ್ರೀಕೃಷ್ಣನು ಯಮುನಾ ತೀರದಲ್ಲಿ ಕಂಡು ಹಿಂಬಾಲಿಸಿದ. ಈಗಾಗಲೇ ಅತೀವ ಭಯಗೊಂಡಿದ್ದ ಹಂಸನನ್ನು ಶ್ರೀಕೃಷ್ಣನು ಉಗ್ರವಾದ ಬಾಣಗಳಿಂದ ಹೊಡೆದು ಗಾಯಗೊಳಿಸಿದ. ಶಿವನು ನೀಡಿದ್ದ ಎಲ್ಲಾ ಅಸ್ತ್ರಗಳನ್ನೂ ತಡೆದು ವೈಷ್ಣವಾಸ್ತ್ರ ತೆಗೆದುಕೊಂಡ ಕೂಡಲೇ ತಾನು ಸಾಯುವುದು ಖಚಿತವೆಂದಾಯಿತು. ಪ್ರಾಣಕ್ಕಾಗಿ ಹಂಸನು ರಥದಿಂದ ಹಾರಿ ಯಮುನೆಯ ನೀರಿಗೆ ಹಾರಿದ. ಅದು ಕಾಳಿಯನ ಮಡುವಾಗಿತ್ತು.

## ಹಂಸ ವಧೆ

**ಉತ್ಪ್ಲುತ್ಯ ಸ ರಥಾತ್ ತಸ್ಮಾದ್ ಯಮುನಾಮಭ್ಯಧಾವತ ।**
**ಯತ್ರ ಕೃಷ್ಣೋ ಹೃಷಿಕೇಶಃ ಕಾಲಿಯಾಹಿಂ ಮಮರ್ದಹ ॥ 12 ॥**

ಅವನು ಬಿದ್ದ ಮಡುವಿನಲ್ಲಿಯೇ ಶ್ರೀಕೃಷ್ಣನು ಕಾಲಿಯ ನಾಗನನ್ನು ಬಾಲ್ಯದಲ್ಲಿ

ಮರ್ದನ ಮಾಡಿದ್ದನ್ನು. ಕಾಡಿಗೆಯಂತೆ ಕಪ್ಪಾದ ಹ್ರದಕ್ಕೆ ಹಾರಿದಾಗ ಭಯಂಕರವಾದ ಶಬ್ದವುವೇರ್ಪಟ್ಟಿತು.

ಶ್ರೀಕೃಷ್ಣನು ಸಹ ನೀರಿಗೆ ಹಾರಿ ಆತನ ಮೇಲೆ ತನ್ನ ಪಾದಗಳಿಂದ ಚೆನ್ನಾಗಿ ತುಳಿದು ಮರ್ದಿಸಿ ಕೊಂದು ಹಾಕಿದ.

ಆದರೆ ಇದುವರೆಗೂ ಅವನ ಶವವೂ ಸಹ ಮೇಲೆ ಬಂದಿದ್ದನ್ನು ಯಾರೂ ನೋಡಲಿಲ್ಲ. ಕೆಲವರು ಕೃಷ್ಣನ ಪದಾಘಾತದಿಂದಲೇ ಪಾತಾಳ ಸೇರಿ ಭಯಂಕರ ಸರ್ಪವಾದ ಧೃತರಾಷ್ಟ್ರವೆಂಬ ಸರ್ಪಕ್ಕೆ ತುತ್ತಾದನೆಂದು ಹೇಳುವರು.

## ಡಿಭಿಕನ ಜಲಗಂಡ

**ಶ್ರುತ್ವಾ ನಿಹತಮತ್ಯುಗ್ರಂ ಭ್ರಾತರಂ ವೀರ್ಯಶಾಲಿನಮ್**
**ಡಿಂಭಕೋ ವೀರ್ಯಸಂಪನ್ನೋ ಯಮುನಾಮನುಜಗ್ನಿವಾನ್ ॥ 13 ॥**

ಅದೇ ಸಮಯದಲ್ಲಿ ಬಲರಾಮನೊಂದಿಗೆ ಯುದ್ಧ ಮಾಡುತ್ತಿದ್ದ ಡಿಭಿಕನು ಯುದ್ಧವನ್ನು ಬಿಟ್ಟು ಹಂಸನನ್ನು ಹುಡುಕಲು ಯಮುನೆಯ ನೀರಿಗೆ ಹಾರಿದ. ಪ್ರವಾಹದ ನೀರನ್ನೆಲ್ಲ ಮತ್ತಗಜದಂತೆ ಅನೇಕ ಬಾರಿ ಅಲ್ಲೋಲ ಕಲ್ಲೋಲ ಮಾಡಿದ. ಪುನಃ ಮುಳುಗಿ ಹುಡುಕಾಡಿದ. ಎಷ್ಟು ಹುಡುಕಾಡಿದರೂ ಸಿಗದೆ ನಿರಾಶನಾದನು.

**ಹಸ್ತೇನ ಜಿಹ್ವಾ ಮಾಕೃಷ್ಯ ಭೂಯೋ ಭೂಯೋ ವಿಲಸ್ಯ ಚ ।**
**ಮಮಾರಾಂತರ್ಜಲೇ ರಾಜನ್ ಡಿಂಭಕೋ ನರಕಾಯ ವೈ ॥ 14 ॥**

ಇದರಿಂದಾಗಿ ಡಿಭಿಕನಿಗೆ ಜೀವನವೆ ನಿರಾಶೆಯಾಯಿತು. ಜೀವಿತಾಶೆ ಬಿಟ್ಟು ತನ್ನ ಕೈಯಿಂದಲೇ ತನ್ನ ನಾಲಿಗೆಯನ್ನು ಬಲವಾಗಿ ಹಿಡಿದು ಬುಡಸಹಿತವಾಗಿ ಕಿತ್ತು ನೀರಿನೊಳಗೆ ಬಿದ್ದು ಮೃತನಾದ. ಮುಂದೆ ಇಬ್ಬರೂ ಅಂಧಂ ತಮಸ್ಸಿಗೆ ಹೋದರು.

ಬ್ರಾಹ್ಮಣರನ್ನು ಅವಮಾನಿಸಿದವರಿಗೆ, ಅವರ ಆಸ್ತಿಪಾಸ್ತಿ ಹಾಳುಗೆಡಹುವವರಿಗೆ, ಶಾಸ್ತ್ರದ ಸಿದ್ಧಾಂತವನ್ನು ದೂಷಿಸುವವರಿಗೆ ಹಂಸಡಿಭಿಕರಿಗೆ ಆದ ಗತಿಯೇ ಲಭಿಸುತ್ತದೆ.

ಹಂಸನು ದೂರ್ವಾಸಾದಿಗಳನ್ನು ನಿಂದಿಸಿ ಕೌಪೀನ ನಾಶ ಮಾಡಿ ನಾನಾ

ವಿಧ ಅವಾಚ್ಯ ಶಬ್ದಗಳನ್ನಾಡಿದ ಪಾಪಕ್ಕಾಗಿ ಶಿವನ ಎಂತಹ ವರವೆ ಇವರನ್ನು ಕಾಪಾಡಲಿಲ್ಲ.

ಒಬ್ಬನು ಬ್ರಾಹ್ಮಣರ ಅವಮಾನದಿಂದಾಗಿ ಸರ್ಪದ ಬಾಯಿ ಸೇರಿದ, ಮತ್ತೊಬ್ಬನು ಅವಾಚ್ಯ ಶಬ್ದಗಳಿಂದಾಗಿ ನಾಲಿಗೆಯನ್ನು ತಾನೆ ಮೃತನಾದ. ಇಬ್ಬರಿಗೂ ಜಲಗಂಡ ತಪ್ಪಲಿಲ್ಲ. ಇದು ಮುಂದಿನ ೭ ಮಹಾಪಾಠ.

ಇತಿ ಹರಿವಂಶ ಭವಿಷ್ಯಪರ್ವದ ಖಿಲಭಾಗದಲ್ಲಿ
ಶ್ರೀಕೃಷ್ಣನಿಂದ ಹಂಸ-ಡಿಭಿಕರ ವಧೆ ಎಂಬಲ್ಲಿ
ನಲವತ್ತೆಂಟನೆಯ ಅಧ್ಯಾಯವು ಸಮಾಪ್ತಿ

## ಇಲ್ಲಿಗೆ ಶ್ರೀಹರಿವಂಶ ಖಿಲಭಾಗದ ಭವಿಷ್ಯಪರ್ವ ಮುಕ್ತಾಯ.

## ಇಲ್ಲಿಗೆ ಹರಿವಂಶವು ಮುಕ್ತಾಯವಾಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥



# ಚತುರ್ವೇದಿ ಸೇವಾ ಟ್ರಸ್ಟ್ (ರಿ)

## ಪ್ರಕಾಶನಗಳು

| | |
|---|---|
| 1. ಭಾಗವತ ಸಂಪೂರ್ಣ 5 ಭಾಗಗಳು | 5500/- |
| 2. ಗರುಡಪುರಾಣ | 600/- |
| 3. ಬ್ರಹ್ಮಕಾಂಡ | 500/- |
| 4. ಬೃಹತೀಸಹಸ್ರ | 350/- |
| 5. ಪವಮಾನವ್ಯಾಖ್ಯಾನ | 350/- |
| 6. ಶ್ರೀನಿವಾಸಕಲ್ಯಾಣ | 600/- |
| 7. ಚೈತ್ರಾದಿ ಮಾಸಕರ್ತವ್ಯ | 500/- |
| 8. ವ್ರತಾನುಷ್ಠಾನಪದ್ಧತಿ | 600/- |
| 9. ಭೋಜನಪದ್ಧತಿ | 130/- |
| 10. ದೀಪ-ನಂದಾದೀಪ | 130/- |
| 11. ಆಹ್ನಿಕಪದ್ಧತಿ | 200/- |
| 12. ನಮಸ್ಕಾರ | 130/- |
| 13. ಹರಿವಂಶ 1 - 2 | 1000/- |
| 14. ದೇವಪೂಜಾತತ್ವ | 500/- |
| 15. ಸ್ತ್ರೀ ಧರ್ಮ | 500/- |